# ಔದಾರ್ಯದ ಉರುಳಲ್ಲಿ

ಶಿವರಾಮ ಕಾರಂತ

1947

(ಬೆಲೆ - 6/ರೂ; ರೆಕ್ಸಿನ್ 6/8/; ಚರ್ಮದ ಬೈಂಡಿಂಗ್ 7/8/)

ಹರ್ಷ ಮುದ್ರಣ, ಪ್ರಕಟಣಾಲಯ. ಪುತ್ತೂರು.

# ಮುನ್ನುಡಿ.

ಈ ಬರಹವನ್ನು ಬರೆದು ಮುಗಿಸಿಯೇ ಎರಡು ವರ್ಷಗಳಾಗುತ್ತ ಬಂದಿವೆ. ಹಲವು ಕಾರಣಗಳಿಂದ ಅದು ಮುದ್ರಣಗೊಂಡು ಹೊರ ಬೀಳಲು ತಡವಾಯಿತು. ಪುಸ್ತಕ ದೊಡ್ಡದಾದುದೂ ಒಂದು ಕಾರಣ. ಈ ಅವಧಿಯೊಳಗಾಗಿ--ನನ್ನಂತೆಯೇ ಕನ್ನಡದಲ್ಲಿ, ನಮ್ಮ ಸ್ವಾತಂತ್ರ್ಯ ಸಂಗ್ರಾಮವನ್ನು ಚಿತ್ರಿಸಲು ಪ್ರಯತ್ನಿಸಿ, ಪ್ರಕಟಿಸಿದವರೂ ಉಂಟು. ಒಬ್ಬೊಬ್ಬನ ಅನುಭವ ಒಂದೊಂದು ತೆರನಾದುದರಿಂದ ಅನೇಕ ಅಂಥ ಬರಹಗಳಿಗೆ ಅವಕಾಶವಿದೆ. ಆದರೂ-ಇದು ತಡವಾಗಿ ಬಂದುದರಿಂದ ಚರ್ವಿತಚರ್ವಣವೆನಿಸಲೂ ಬಹುದು. ಆದರೆ ಈ ಕಾದಂಬರಿಯಲ್ಲಿ ಸ್ವಾತಂತ್ರ್ಯಸಂಗ್ರಾಮವು ಒಂದು ಅಂಶವಾಗಿ ಬಂದಿದೆಯಾದರೂ- ವ್ಯಕ್ತಿ, ಸಮಾಜಗಳೊಳಗಣ ಹೋರಾಟದ ವಿವಿಧ ರೂಪಗಳೇ ಮುಖ್ಯ ವಸ್ತು ವಾದುದರಿಂದ—ಒಂದು ದೃಷ್ಟಿಯಿಂದ ಇದು ಕಾಲದ ಮಿತಿಯನ್ನು ಮೀರುತ್ತದೆ; ನಿತ್ಯ ಪ್ರಶ್ನೆಯಾಗಿ ಉಳಿಯುತ್ತದೆ. ನಾಡಿನ ಸ್ವಾತಂತ್ರ್ಯ ಸಂಗ್ರಾಮ ಯುಗಕ್ಕೊಂದು ಬಾರಿ ಬರುವ ಯೋಗ. ಆದರೆ ದೈನಂದಿನದ ರಕ್ತಪಾತವಿಲ್ಲದ ಮಾನವೀ ಸ್ವಾರ್ಥ ಪರಾರ್ಥಗಳೊಳಗಿನ ಹೋರಾಟ ಮಾನವ ಕುಲದ ಯಾವತ್ತು ಕಾಲವೂ ತುಂಬಿರುವ ಪ್ರಶ್ನೆ.

ಈ ಕಥಾನಕದಲ್ಲಿ ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಮೂರು ಪರ್ವಕಾಲಗಳು ಅಡಕವಾಗಿವೆ. ಮೊದಲಿನ ಪರ್ವದಲ್ಲಿ ಅಸಹಕಾರಕ್ಕೆ ಧುಮುಕಿದವನು ನಾನು. ಎರಡನೆಯ ಪರ್ವದಲ್ಲಿ ನಾನು ಸಮೀಪದ ಪ್ರೇಕ್ಷಕ. ಮೂರನೆಯದರಲ್ಲಿಯೂ ಬಹುವಿಧದಿಂದ ಹಾಗೇನೆ; ಏನೂ ಮಾಡಿಲ್ಲವೆಂದಲ್ಲ; ಆದರೆ ಬಡಬಡಿಸಬಹುದಾದ ಸಾಹಸ ನನ್ನಿಂದಾಗಿಲ್ಲ. ಆದರೆ ಕಥಾನಕದ ಮುಖ್ಯವ್ಯಕ್ತಿ ರಾಧಾಕೃಷ್ಣ ಬಹುವಾಗಿ ನನ್ನ ಕಣ್ಣಿಂದ ನೋಡುವವನೆಂದಿಷ್ಟೇ ಹೇಳುತ್ತೇನೆ. 'ಆತನ ಜೀವನದ ಹಿನ್ನೆಲೆಯು ನನ್ನ ಜಿಲ್ಲೆಯಲ್ಲಿನ ಸಾಮಾಜಿಕ, ರಾಜಕೀಯ ಕ್ಷೇತ್ರಗಳ ಹಿನ್ನೆಲೆ. ಅವನ ಜೀವನವನ್ನು ಪರಿಶೀಲಿಸಿದವರಿಗೆ- ಇದು ನಮ್ಮ ಒಟ್ಟು ಹಿನ್ನೆಲೆಯಾಗಿ ಕಾಣಿಸದಿರಲಾರದು.

ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಪರಾರ್ಥಕ್ಕಾಗಿ ಶ್ರಮಿಸುವ ವ್ಯಕ್ತಿಗೆ ಹೇಗೆ ಆ ಸಮಾಜವೇ ವೈರಿಯಾಗಿ ನಿಲ್ಲುತ್ತದೆ–ಎಂದು ನನ್ನ ಮಿತ ಜೀವನದ ಅನುಭವಗಳಿಂದ, ಘಟನೆಗಳಿಂದ, ಪರಿಶೀಲನೆಯಿಂದ ಇಲ್ಲಿ ಚಿತ್ರಿಸಲೆತ್ನಿಸಿದ್ದೇನೆ.

ಇಲ್ಲಿನ ವ್ಯಕ್ತಿಯ ಹಿರಿಮೆ ಅವನ ಗೆಲುವಿನಿಂದಲ್ಲ; ಅವನ ಕೆಲಸಗಳಿಂದ, ಸೋಲಿನಿಂದ. ತತ್ಪರಿಣಾಮವಾದ ಸತ್ಯಾನುಭವದಿಂದ. ಇದು ತೀರ ಕಹಿಯಾದ ಸತ್ಯ. ಎಂಥ ಎದೆಗಾರನನ್ನೂ ಕುಗ್ಗಿಸಬಲ್ಲ ದುಃಖಪೂರಿತ ಸತ್ಯ. ಈ ದಾರುಣವಾದ ಸತ್ಯದ ಅರಿವಿಲ್ಲದೆ ಯಾವ ಕೆಲಸ ಮಾಡಹೋದರೂ ಸಮಾಜದ ಉನ್ನತಿಯಾಗಲಾರದು.

ಸಮಾಜದಲ್ಲಿ ಇಂದು--ಶಕ್ತಿ ಸಂಪತ್ತುಗಳಿಗಾಗಿ ಬಾಯಾರಿರುವ ಸೋಗಿಗರೇ ಹೆಚ್ಚಾಗಿ ಮುಂದೆ ಬರುವುದನ್ನು ಕಾಣುತ್ತೇವೆ. ಒಟ್ಟು ಜನಜೀವನದ ಅಜ್ಞಾನವೇ ಅದಕ್ಕೆ ಕಾರಣ. ಹಣದ ಆರಾಧನೆಯೋ, ಯಶಸ್ಸಿನ ಬೇಟೆಯೋ ನಮ್ಮ ಅವನತಿಗೆ ಕಾರಣ. ಆ ದೋಷಗಳು ತುಂಬಿರುವ ಸಮಾಜದಲ್ಲಿ—ತಿರುಳು ಕಂತುತ್ತದೆ; ಜಳ್ಳು ತೇಲುತ್ತದೆ. ನೊರೆಯಂತೆ ತೇಲಿಕೊಂಡು, ಬಹಿರಂಗ ಜೀವನದಲ್ಲಿ ಅದು ಉನ್ನತಿಯನ್ನೇರುತ್ತದೆ. ಶಕ್ತಿ ಸಂಪತ್ತುಗಳನ್ನು ಆರಾಧಿಸುವ ಜಗತ್ತಿಗೆ, ಇಂತಹ ಮಾನವೀ ಬುರುಗುಗಳೇ ಆರಾಧ್ಯ ದೇವತೆಗಳಾಗುವಲ್ಲಿ ಸೋಜಿಗವೇನು!

ಜನಕ್ಕೆ ತಕ್ಕ ಮುಂದಾಳುಗಳು ಮೆರೆಯುತ್ತಾರೆ. ಜನರನ್ನು ರೂಪಿಸಬಲ್ಲ, ಎತ್ತಬಲ್ಲ ನಾಯಕರು ಸೋಲಿಗೀಡಾಗಬಹುದು; ಜನರಿಂದ ಬರಿಯ ಮಾತಿನ ಬೆಂಬಲವನ್ನು ಪಡೆಯಬಹುದು. ಅವರ ಶ್ರಮದಲ್ಲಿ ಬಹು ಭಾಗ--ಮಂಗನ ಮುಂದೆ ಚೆಲ್ಲಿದ ಮಾಣಿಕ್ಯದಂತೆ.

ಈ ಕಾದಂಬರಿಯ ಒಂದೇ ಒಂದು ವ್ಯಕ್ತಿ—ನಿಜವಾದ ವ್ಯಕ್ತಿಯ ಪ್ರತೀಕ. ಅದು ದಯಾನಂದ ರಾಯರದ್ದು. ಅವರಾರೆಂದು ನಮ್ಮೂರನ್ನು ಬಲ್ಲವರು ತೀರಬಲ್ಲರು. ಉಳಿದ ವ್ಯಕ್ತಿಗಳೆಲ್ಲ ಸೃಷ್ಟಿ. ತಾದ್ರೂಪಿಕತೆಯ ಸಲುವಾಗಿ—ಕಾಂಗ್ರೆಸ್, ಕಮ್ಯುನಿಸ್ಟು ಪಂಗಡ—ಎಂದು ಸ್ಥಳಿಕ ಸಂಘಗಳ ಕಲ್ಪನೆ ಬರುವಂತೆ ಚಿತ್ರಿಸಿದರೂ, ಯಾವೊಂದು ಕಾಲದ, ಆ ಸಂಘಗಳ ವ್ಯಕ್ತಿಗಳು ನಿಜ ವ್ಯಕ್ತಿಗಳಲ್ಲ. ಸಮಾಜದ ದೌರ್ಬ

ಲ್ಯದ ಮೂರ್ತಿಮಂತ ಜೀವಗಳಷ್ಟೇ. 'ಮುಗಿದ ಯುದ್ಧ'ದ ಬಳಿಕ ಇದೇ ನನ್ನ ದೊಡ್ಡ ಪ್ರಮಾಣದ ಬರವಣಿಗೆ. ಇದರಲ್ಲಿ ಚಿತ್ರಿಸಿದ ನನ್ನ ಪಾಲಿನ ಸತ್ಯವು ಅನೇಕರಿಗೆ ಕಹಿಯಾಗಿ ಕಂಡರೂ, ನಾನು ಅದನ್ನು ಮರೆಯಾಗಿರಿಸಲಾರೆ.

'ಕರ್ನಾಟಕ ಹಿರಿದಾಗಲಿ' ಎಂದು ಹವಣಿಸುವ ನನ್ನ ಮನಸ್ಸು, ಹಿರಿಯ ವ್ಯಕ್ತಿಗಳನ್ನು ನಾಡಿನಲ್ಲಿ ಕಾಣಲಾರದೆ ನೊಂದಿದೆ. ಬಹುಮಟ್ಟಿಗೆ ನಮ್ಮೆಲ್ಲ ಜೀವನ ಕ್ಷೇತ್ರಗಳು ಹೀಗೆ ಬರಡಾಗಿವೆಯಲ್ಲ, ನಾರುತ್ತಿವೆಯಲ್ಲ-ಎಂಬ ವ್ಯಥೆ ಅಡಿಗಡಿಗೆ ನನ್ನನ್ನು ಕೊರೆಯುತ್ತಿದೆ. ಅದನ್ನು ಹಲವರು ಒಪ್ಪಲಾರರು. ಇದ್ದ ಮರದ ಕೊರಡುಗಳಿಗೇನೆ ಪ್ರಾಣ ಪ್ರತಿಷ್ಠೆಯನ್ನು ಮಾಡೋಣ-ಎನ್ನುವವರಿದ್ದಾರೆ! ಆಗ-ಪ್ರಾಣವೆಲ್ಲಿಂದ ಬಂದೀತು! ಅದು ತುಂಬುವ ವಸ್ತುವಲ್ಲ; ಎಂದೂ ತುಂಬಲಾರವು. ತನ್ನ ಆವರಣದಿಂದ ಅಂತಹ ವ್ಯಕ್ತಿಗಳ ಬೆಳವಣಿಗೆಯನ್ನು ನಾಡು, ಸಾಧ್ಯವಾಗಿ ಮಾಡಬೇಕು. ಅದಿಲ್ಲದೆ ಹೋದರೆ--ಗತವೈಭವದ ಸ್ಮರಣೆಯೇ ನಮ್ಮ ಗತಿ.

1-11-47
ಪುತ್ತೂರು ದ. ಕ.

ಇತಿ
ಶಿವರಾಮ ಕಾರಂತ

Printed at the Harsha Printery & Publications, Puttur, S. K. 51
November 1947. Copies-2,000.

# ಔದಾರ್ಯದ ಉರುಳಲ್ಲಿ

## ಮೊದಲನೆಯ ಅಧ್ಯಾಯ

ಅವರು ಸಂಚರಿಸುತ್ತಿದ್ದ ನಾಡು, ಸಂಚರಿಸುತ್ತಿದ್ದ ಸಮಯವಾದ ಬೇಸಗೆಯಷ್ಟೇ ದಯಾಶೂನ್ಯವಾಗಿತ್ತು. ಹಗಲು ನೆಲದ ಮೇಲೆ ಕಾಲು ಇರಿಸುವುದಕ್ಕಿಲ್ಲ. ತುಂಬ ಉರಿಬಿಸಿಲು. ಮೇಲೆ, ಬಾನಲ್ಲಿ ತೂಗುಯ್ಯಾಲೆಗಳಂತೆ ತೂರಾಡುವ ಬೆಳ್ಮುಗಿಲುಗಳು. ದಿನವೆಲ್ಲಾ ಬೆವರಿನಲ್ಲಿ ಸ್ನಾನ. ರಾತ್ರಿಯೋ! ಅದೂ ಹಗಲಿನಂತೆಯೆ—ಬಿಸಿಲ ಜಳವಿಲ್ಲದಿದ್ದರೂ ಗಾಳಿಯ ಸುಳಿದಾಟವಿಲ್ಲದೆ ಸೆಕೆ, ಸೆಕೆ, ಸೆಕೆ ಎಂಬ ಒಂದೇ ರಾಗ. ಯಾವತ್ತು ಜೀವಿಗಳು ಹವೆಯ ತಾಪದಿಂದ ಬೆಂದಿದ್ದುವು. ನೀರಡಿಕೆಯಿಂದ, ದಣಿವಿನಿಂದ—'ಎಂದು ಮಳೆಯು ಬಂದೀತು, ಈ ನೆಲವು ಎಂದು ಹಸುರನ್ನು ಕಂಡೀತು' ಎಂಬ ಹಾತೊರೆಯುವಿಕೆಯೇ. ಹೊಲದಲ್ಲಿ ಬಿತ್ತಿದ ಬತ್ತದ ಬೀಜಗಳು, ಹಾಯೆಂದು ದಣಿದು, ನೀರಡಿಸಿ ಬಿದ್ದಿದ್ದುವು. ಈಗಾಗಲೇ ಮೊಳೆತ ಕೆಲವೊಂದು ಅಗೆಗಳ ಹಸುರು ಕಂದಿ ಹೋಗಿತ್ತು. ಈ ಬೇಸಗೆಯಲ್ಲಿ ಗಿಡಗಳಿಗೂ ದಣಿವು; ಅವುಗಳ ಆಸರೆ ಹೊಂದಿದ ಹಸು ಹಕ್ಕಿಗಳಿಗೂ ದಣಿವೇ! ಹಗಲಿನ ಜೇಗೆಗೆ ಮರದ ಆ ದೂರದಿಂದ, ಈ ದೂರದಿಂದ, ಕೋಗಿಲೆಗಳ ನಿರಾಶೆಯ ಕುಹೂರವ. ಕಾಡುಪಾರಿವಾಳವು ತನ್ನ ಬಾರದ ಇನಿಯನಿಗಾಗಿ ದಿನವೆಲ್ಲಾ ಕುಟುರುಕೂಗುತ್ತಿದೆ. ಪಕ್ಷಿ ರಾಜ್ಯದ ಸವಿ ಗಾನದ ಸೊಲ್ಲು ಅಡಗಿದೆ. ಈಗಷ್ಟೆ ವಸಂತ ಋತು ಮುಗಿದಿದೆ. ಆದರೆ ಕವಿಗಳು ಹಾಡಿದ ಜೀವನದ ತುಂಬು ಚೇತನ ಕಾಣಿಸುತ್ತಲಿಲ್ಲ. ದಣಿದ ಹಕ್ಕಿಗಳ ಸೊಲ್ಲಿನಿಂದ ಬನದ ಯೌವ್ವನವನ್ನು ಊಹಿಸಬೇಕಷ್ಟೆ.

ಇಷ್ಟೆಲ್ಲಾ ನಿರಾಶೆಯ ಬೇಗುದಿ. ಆದರೆ ನಾಡಿನ ಜನ-ತಮ್ಮ ಹಳ್ಳಿಗಳಲ್ಲಿ, ಕಾಡು ಹಾದಿಗಳಲ್ಲಿ, ಸುಡುತ್ತಿರುವ ಬೀದಿಗಳಲ್ಲಿ, ಮದುವೆ ದಿಬ್ಬಣಗಳನ್ನು ಹೊರಡಿಸಿ, ಕಾಲವನ್ನು ಮೂದಲಿಸುತ್ತಿದ್ದಾರೆ. ಜನ, ದಾರಿಯುದ್ದಕ್ಕೂ ಅರವಟ್ಟಿಗೆಯ ನೀರಿಂವತಣಿದು, ಯಾರದೋ ಮದುವೆಯ

ಸಲುವಾಗಿ ತಾವು ಪೆಂಪುಗೊಂಡು, ಸಾಗುತ್ತಿದ್ದಾರೆ. ಗೀತಬಾಹಿರವಾದ ಹಳ್ಳಿಗರ ವಾದ್ಯ ಅವರನ್ನು ಹಿಂಬಾಲಿಸುತ್ತಿದೆ. ಏಕೆ ಈ ಅವಸರ? ನಾಳಿನ ಮಳೆಗಾಲದ ಭೀತಿಯಿಂದ. ಬೇಸಾಯದ ಕೆಲಸವಿದೆ. ಹಾಗೆಂದು ಆ ಸಮಯದ ಈ ಉರಿ ಬಿಸಿಲಿನಲ್ಲಿ, ನಾಳಿನ ಕಾಮದ ಕರೆಗೆ ಇಂದೇ ಹೊರಟಿದ್ದಾರೆ—ಮದುವಣಿಗರಾಗಿ! ಮದುವಣಿಗ ಮದುವಣಿಗಿತ್ತಿಯರ ಸಡಗರಕ್ಕೆ ಕಡಿಮೆ ಇಲ್ಲದಂತೆ, ತಮ್ಮ ಒನಪು ವಯ್ಯಾರಗಳನ್ನು ಮೆರೆಯಿಸಲು ಹೊರಟ ಅಣ್ಣತಮ್ಮಂದಿರು, ಅತ್ತಿಗೆ ನಾದಿನಿಯರು. ಅತ್ತೆ ಸೊಸೆಯರು, ನಂಟರಿಷ್ಟರು—ಇವರ ಸಂಖ್ಯೆಯೂ ಧಾರಾಳವಾಗಿದೆ. ಅಂಥ ನೂರಾರು ಸಂಭ್ರಮಗಳಲ್ಲಿ ನಾವು ಪರಿಚಯು ಮಾಡಿಕೊಳ್ಳಬೇಕಾದುದು ಕುಂದಾಪುರದಿಂದ ಹೊರಟ ಒಂದು ದಿಬ್ಬಣವನ್ನು. ಪಯಣ ಐದು ಹೆರದಾರಿಯ ಹಾಲಾಡಿ ಎಂಬ ಗ್ರಾಮಕ್ಕೆ; ಹೆಣ್ಣಿನ ಮನೆ ಇರುವುದು ಅಲ್ಲಿ. ಹಾಲಾಡಿಯ ಸಂಕಪ್ಪಯ್ಯನವರ ಹಿರಿಯ ಮಗಳಾದ ಕಮಲಾಕ್ಷಿಯನ್ನು ಕುಂದಾಪುರದ ರಾಮಪ್ಪಯ್ಯನವರ ಎರಡನೆಯ ಮಗ, ಅಲ್ಲ, ದ್ವಿತೀಯ ಪುತ್ರ, ಅನಂತರಾಮನಿಗೆ ತರುವುದೆಂದು ನಿಶ್ಚಯವಾಗಿದೆ. ಸರಿ, ಲಗ್ನ ಪತ್ರಿಕೆಯಲ್ಲಿ ಅಚ್ಚು ಹಾಕಿದಂತೆ "ದೇವತಾನುಗ್ರಹದಿಂದ." ಆ ಲಗ್ನ ಇಂದು ಸಂಜೆ ಗೋಧೂಳಿಯಲ್ಲಿ ಸಮಾವೇಶವಾಗಬೇಕು. ಹೆಣ್ಣಿನ ಕಡೆಯವರಿಗೇನೋ ಕುಳಿತಲ್ಲಿಂದ ದರ್ಬಾರು ನಡೆಯಿಸಿದರಾಯಿತು. ಗಂಡಿನ ಮನೆಯವರು ಹಾಗೆ ಮಾಡ ಬಂದೀತೇ? ದೇವತಾನುಗ್ರಹದಿಂದ ನಿಶ್ಚಯವಾದ ಆ ಲಗ್ನಕ್ಕೆ, ಸಂಜೆಗೆ ಮುಂಚಿತವಾಗಿ ಸೇರಲು, ಹೊತ್ತು ನೆತ್ತಿಗೇರುವ ತುಸು ಮೊದಲೇ, ಅವರು ಸಕುಟುಂಬ ಸಪರಿವಾರ ಸಮೇತರಾಗಿ ಹೊರಟರು. ಮನೆಯಲ್ಲಿ ಸಮಾವರ್ತನೆ ಮುಗಿಸಿ, ಎಲ್ಲರಿಗೂ ಔತಣ ಬಡಿಸಿ, ದೊರೆತ ನಾಲ್ಕು ಬಂಡಿಗಳಲ್ಲಿ ಮದುವಣಿಗನನ್ನು, ಎಳೆಯರನ್ನು ತುಂಬಿಸಿ, ಉಳಿದವರನ್ನು ಅವರವರ ಕಾಲ ಮೇಲೆ ಹೊರಳಿಸಿ, ಹೊರಟಿದ್ದಾರೆ. ಮದುವೆಯನ್ನು ಪ್ರೇರಿಸಿದ ಆ ದೇವರೇ ಉರಿಬಿಸಿಲನ್ನು ಅನುಗ್ರಹಿಸಿದ್ದಾನೆ. ಆರು, ಮೂರು—ಒಂಬತ್ತು ಮೈಲು ಸಾಗಿ, ದಿಬ್ಬಣದ ಯಜಮಾನರು ತಮ್ಮ ಕಾಲ್ಬಲವನ್ನು ನಡೆಯಿಸಿಕೊಂಡು, ಹುಣಿಸೆಮಕ್ಕಿಯ ಸಾಲುಮರಗಳ ನೆರಳಿಗೆ ಬಂದು ಕುಳಿತಾಗ, ಮೂರು ತಾಸು ಸರಿದಿತ್ತು. ಕಾಲಿಗೆ ಜೋಡುಳ್ಳವರ ಗತಿಯೇನೋ ಸರಿಯೆ; ಅದಿಲ್ಲದವರ

ಹಿಮ್ಮಡಿಗಳು ಕಾದ ರೊಟ್ಟಿಯಂತೆ ಉಬ್ಬಿವೆ. ಅಲ್ಲಿ, ಅಲ್ಲಿ, ನೆರಳಿಂದ ನೆರಳಿಗೆ, ದೂಳು ಇಲ್ಲದ ಗಟ್ಟಿ ನೆಲಕ್ಕೆ, ಜಿಗಿಜಿಗಿದೇ ಪಯಣ ಬಂದಿದ್ದರು. ಎಷ್ಟು, ಬಿಸಿಲನ್ನು ಉಲ್ಲಂಘಿಸಿ ನಡೆದರೂ, ಮೇಲಿನ ಉರಿಗೆ, ಕೊಡೆಗಳು ಸಹಾಯವಾಗಲಿಲ್ಲ.

ಸಾಲು ಮರದ ಕೆಳಗೆ ರಾಮಪ್ಪಯ್ಯ, ಅವರ ಭಾವ, ಅಂದರೆ ಮದುವಣಿಗನ ಸೋದರಮಾವ, ಇನ್ನಿತರ ಗೆಳೆಯರು ತಂಗಿದರು. ಸಮೀಪದ್ದೊಂದು ಮನೆಯಿಂದ ನೀರು ತಂದು ಕಾಲು ತೊಳೆದು, ಬಾಯಿ ಮುಕ್ಕಳಿಸಿ, ಬೆಲ್ಲ ತಿಂದು ನೀರು ಕುಡಿದರು. ಆ ಮೇಲೆಯೂ ಉಸ್ಸೆಂದು ಕುಳಿತ ಆ ನೋಟ ನೋಡುವಂತಿತ್ತು. ಹೊರಡುವಾಗ ರಾಮಪ್ಪಯ್ಯನಿಗಿದ್ದ ಆಟೋಪ ಅಬ್ಬರಗಳು ಎಷ್ಟು! ಈಗ ಸಂಸಾರ ಶರಧಿಯಲ್ಲಿ ಈಜಲಾರದೆ ಸೋತವರಂತೆ—ದಣಿದು ಕುಳಿತ ಅವರ ಚಿತ್ರ ಎಂತಹದು! ಯಜಮಾನಿಕೆಯ ಠೀವಿ ಕಾಯುವುದಕ್ಕೇನೇ ಅವರು ಮಾತಾಡುವಂತೆ ಕಾಣುತ್ತಿತ್ತು. ಅವರ ಉಳಿದ ಪರಿವಾರವೆಲ್ಲಾ 'ಇನ್ನೆಷ್ಟು ದೂರವಪ್ಪಾ-ಗೋಧೂಳಿ ಲಗ್ನವಲ್ಲದೆ ಹೋದರೆ ರಾತ್ರಿಯ ಮೇಲೆ ಪಯಣ ಮುಂದುವರಿಸಬಹುದಿತ್ತು—ಗಾಡಿಗಳಿನ್ನೂ ಬರಲಿಲ್ಲವೇ?—ಮದುವೆಯ ಮನೆಯಲ್ಲಿ ಕೊಡೆ ಕಳೆದು ಹೋದೀತೆಂದು ಹೆದರಿ ಬಿಟ್ಟು ಬಂದು ಎಂಥಾ ಹೆಡ್ಡು ಕೆಲಸ ಮಾಡಿದೆವು'-ಎಂಬೀ ಬಗೆಯ ಆತ್ಮಗತಗಳಲ್ಲಿ ತಲ್ಲೀನರಾಗಿದ್ದರು. ಅವರೆಲ್ಲರಿಗಿಂತ ರಾಮಪ್ಪಯ್ಯನವರೇ ವಾಸಿ. ಅವರ ಭಾವ ಇನ್ನಷ್ಟು ವಾಸಿ. ಎರಡೆರಡು ಪಂಚೆಗಳನ್ನು ನೀರಲ್ಲಿ ಮುಳುಗಿಸಿ, ಹಿಂಡಿ, ಮೈ ಉಜ್ಜಿಕೊಂಡು ಅವನ್ನೇ ನಾರು ಮಡಿಯಂತೆ ಉಟ್ಟುಕೊಂಡರು. ಬೆವರುಂಡ ಬಟ್ಟೆಗಳನ್ನು ಬಿಸಿಲಿಗೆ ಹರವಿದರು. ಅನಂತರ ವಿರಾಮವಾಗಿ ಕಾಲು ಚಾಚಿ, ಮರದ ದಿಂಬೊಂದಕ್ಕೆ ಒರಗಿಕೊಂಡು ವೀಳೆಯದ ಸಂಚಿಯನ್ನು ಬಿಡಿಸಿದರು.

"ಭಾವ, ಗಾಡಿಗಳು ನಮಗಿಂತಲೂ ಮೋಸ! ಈ ಬಿಸಿಲಿಗೆ ಎಂಥ ಎತ್ತಾದರೇನು? ಸೋತು ಕಂಗಾಲೇ. ಏನೋ, ಕಾಳಾವರಲ್ಲಿದ್ದಾವೆಯೇ, ಕೋಟೀಶ್ವರವೋ! ಸಮಯಕ್ಕೆ ಸಮನಾಗಿ ಅವು ಹಾಲಾಡಿಯನ್ನು ಸೇರುವ ಧೈರ್ಯ ನನಗಿಲ್ಲ." ಎಂದರು. ರಾಮಪ್ಪಯ್ಯ—"ಕಳೆದ ವರ್ಷ ನಮ್ಮ ಗಾಣಿಗ ಸುಬ್ಬ 300 ರೂಪಾಯಿಗೆ ಕೊಂಡ ಎತ್ತಿನ ಜತೆ ಒಂದು.

—ಮಾಣಿ ಕುಳಿತುಕೊಂಡ ಗಾಡಿ ಅದು. ಉಳಿದ ಮೂರು ಗಾಡಿಗಳು, ಆ ಹದಕ್ಕೆ ಬಾರದೆ ಹೋದರೂ, ಬಿಸಿಲಿಗೆ ಹೆದರುವವಲ್ಲ. ನಿತ್ಯ, ಆಣೆ ಗುಡ್ಡೆಯಿಂದ ಇಪ್ಪತ್ತೈದು, ಇಪ್ಪತ್ತೈದು ಕಲ್ಲು ಹೇರಿಕೊಂಡು, ಬಿಸಿಲಲ್ಲೇ ಕುಂದಾಪುರ ಪೇಟೆಗೆ ತಂದು ಹಾಕುವವು ಅವು. ಬಂದಾವು, ಇನ್ನರ್ಧ ಗಳಿಗೆಯಲ್ಲಿ ಬಂದಾವು" ಎಂದರು. ದಿಬ್ಬಣದ ಯಜಮಾನರಿಗೆ ಅಂಥ ಆತ್ಮವಿಶ್ವಾಸ, ಭರವಸೆ ಇಲ್ಲದೆ ಹೋದರೆ ಇನ್ಯಾರಿಗೆ ಇರಬೇಕು?

ಆದರೆ ಅವರ ಭಾವ ನಾಗಪ್ಪಯ್ಯ, ಮದುವೆಗಾಗಿಯೇ 'ಮರವಂತಿಗೆ'ಯಿಂದ ಬಂದವರು, ಸುಮ್ಮನೆ ಬಿಟ್ಟಾರೆಯೇ? ಮಾತು ತೆಗೆದು: "ಭಾವ, ಸಮಾವರ್ತನೆಯಲ್ಲಿ ನಿಮ್ಮ ಹಿರಿಯ ಮಾಣಿಯ ಮುಖ ನೋಡಲೇ ಇಲ್ಲವಲ್ಲ. ಯಾಕೆ? ಅವನಿಗೆ ಈ ಹುಡುಗಿಯು ಪಸಂದ್ ಕಾಣಲಿಲ್ಲವೇ, ಹ್ಯಾಗೆ? ಆದರೂ ಮನೆಯ ಮದುವೆಯೆಂದಮೇಲೆ?" ಅವರ ಈ ಪ್ರಶ್ನೆಗೆ ರಾಮಪ್ಪಯ್ಯನವರು ಹುಮ್ಮಸದ ಉತ್ತರ ಕೊಡುವಂತಿರಲಿಲ್ಲ. ಅದರ ಬದಲು ನಿರುತ್ಸಾಹ ಅವರಿಗೆ.

ಅವರಿಗೆ ಮೂವರು ಗಂಡು ಮಕ್ಕಳು. ಒಂದು ಹೆಣ್ಣು. ಆ ಹೆಣ್ಣು ಬಯಸಿ ಬೇಡಿದ ಭಾಗೀರಥಿ. ಶೀರ ಕೊನೆಯವನಿಗೆ, ಇನ್ನೂ ಐದು, ವಯಸ್ಸು. ಅವನ ಮೇಲಿನವನು, ಎಂಟು ವರ್ಷದ ಮಾದಪ್ಪಯ್ಯ. ಅಲ್ಲಿಂದ ಅವನಿಗೆ ಎಂಟು ವರ್ಷದ ಅನಂತರಾಮ. ಅವನಿಗೂ ನಾಲ್ಕು ವರ್ಷಕ್ಕೆ ಹಿರಿಯ ರಾಧಾಕೃಷ್ಣ. ನ್ಯಾಯವಾಗಿ, ಜಾತಕ ತರಿಸಿಕೊಂಡು ಜತೆಗೂಡಿಸಿ, ಸಂಧಾನ ನಡೆಯಿಸಿದ ಲಗ್ನ ಇಂದಿನದು. ರಾಮಪ್ಪಯ್ಯ ತಾವೇ ತಾವಾಗಿ, ದೊಡ್ಡವರ ನಂಟುತನ ಬೆಳೆಯಿಸುವೆನೆಂಬ ಹುಮ್ಮಸದಿಂದ "ನಾನು ಮಾಡಿದ ನಿಶ್ಚಯಕ್ಕೆ ಮಗ ಒಪ್ಪಿಯೇ ತೀರಬೇಕು." ಎಂದು ಗೊತ್ತುಮಾಡಿದ ಮದುವೆ ಇದು. ಆದರೆ ವಿಧಿ ಬರೆದ ಗೆರೆಯು ಬೇರೆಯೇ ಇತ್ತೆಂದು ಕಾಣುತ್ತದೆ.

ಈ ಮದುವೆಗೆ ಮೂರು, ನಾಲ್ಕು ತಿಂಗಳಿಗಿಂತ ಮುಂಚೆ, ಅವರ ಹಿರಿಯ ಮಗ ರಾಧಾಕೃಷ್ಣ, ತಂದೆಯ ಆಸೆಯನ್ನು ಅಟ್ಟದಿಂದ ಅಂಗಳಕ್ಕೆ ಮೊದಲ ಬಾರಿಗೆ ಜಗ್ಗಿದ. ಅಲ್ಲಿಯ ತನಕ 'ನೋಡಿ ಭಾವ, ನಮ್ಮ ರಾಧಾಕೃಷ್ಣ ನನ್ನ ಒಂದೇ ಒಂದು ಗೆರೆ ಮೀರುವವನಲ್ಲ, ಮೀರಿದವನೂ ಅಲ್ಲ. ಇಷ್ಟು ಹೊತ್ತಿಗೆ ಅವನ ಬಿ. ಎ. ಮುಗಿಯುತ್ತಿತ್ತು. ಇನ್ನು ಎರಡು

ವರ್ಷಗಳಲ್ಲಿ ಬಿ. ಯಲ್ ಮಾಡಿಬಿಟ್ಟು ಊರಲ್ಲಿ ವಕೀಲನಾಗಿ ಮೆರೆಯು ಬಹುದಿತ್ತು. ಅದರ ಬದಲು ಹೀಗೆ ತಲೆಕೆಡಿಸಿಕೊಂಡು ಶಾಲೆ ಬಿಡ ಬೇಕೇ? ಈ ಗಾಂಧೀ ಮಂದಿಯ ಫಿತೂರಿ ಕೇಳಿ, ಬೆಪ್ಪಾಗಿ ಕಾಲೇಜು ಬಿಟ್ಟು, ಸ್ವರಾಜ್ಯ ತರುತ್ತಾನಂತೆ—ಇವೆಲ್ಲಾ ಸೇರಿಕೊಂಡು' ಎಂದರು.

"ಆ ಕತೆ ಹೇಳಿ ಫಲವೇನು? ಮುಂದಿನ ವರ್ಷವಾದರೂ ಬಿಟ್ಟ ಲ್ಲಿಂದ ಅವನು ಮುಂಬುವರಿಸುತ್ತಿದ್ದರೂ ಆಗುತ್ತಿತ್ತು." ಎಂದರು ಭಾವ ನಾಗಪ್ಪಯ್ಯ.

"ಇವನ ತಲೆಯ ಮೇಲೆ ಹೇಗಾದರೂ ಮಾಡಿ, ಜವಾಬ್ದಾರಿ ಹೊರಿ ಸಿದರೆ, ತಲೆಗೆ ಹಿಡಿದ ಈ ಸ್ವರಾಜ್ಯದ ಪಿತ್ಥ ಇಳಿದೀತು—ಎಂದು ನಾನು ಸುಮ್ಮನಿದ್ದೆ. ನನ್ನ ವ್ಯಥೆ ಅವನ ಮುಂದೆ ತೋರಿಸಲಿಲ್ಲ. ನಾಲ್ಕು ದಿವ ಸಗಳಲ್ಲಿ ತನ್ನಂತೆಯೇ ಬುದ್ಧಿ ಬರುತ್ತದೆ—ಎಂದು ತಿಳಿದೆ. ಹಾಗಿರುವಾ ಗಲೇ ಒಂದು ದಿವಸ, ನಮ್ಮ ಮನೆಗೆ ಹಾಲಾಡಿ ಸಂಕಪ್ಪಯ್ಯನವರು ಬಂದರು. ಲಗ್ನದ ಪ್ರಸ್ತಾಪವೂ ಬಂತು. ಅವನೂ ಮನೆಯಲ್ಲಿಯೇ ಆ ದಿವಸವಿದ್ದ. ಅವರಿಗೂ ಹುಡುಗನನ್ನು ನೋಡಿ ಖಾಯಿಸು ಆಯಿತು. ಅವರು ಊರಿಗೆ ಹೋದವರು 'ನಿಮ್ಮ ಹುಡುಗ ಶಾಲೆಣ ಬಿಟ್ಟಿದ್ದಾನೆ. ಅವನು ಮುಂದೆ ವಿದ್ಯೆ ಮುಂದರಿಸುವುದಾದರೆ ಹೆಣ್ಣು ಕೊಟ್ಟದ್ದೊಂದು ಸಾರ್ಥಕ. ಬದಲು ಇವನು, ಉಂಡಾಡಿಯಂತೆ ಗಾಂಧೀ ಲೆಕ್ಚರು ಕೊಟ್ಟು ಜೈಲಿಗೆ ಹೋಗುವ ಗತಿ ಬಂದರೆ...."ಎಂದು ತಿಳಿಸಿದರು. ನನಗೂ ಅದೇ ಹೆಚ್ಚಿನ ಭಯವಾಗಿತ್ತು. ಈ ವರೆಗೆ ನಮ್ಮ ಮನೆತನದಲ್ಲಿ ಜೈಲಿಗೆ ಹೋ ದವರಿಲ್ಲ. ಇವನೆಲ್ಲಿ ನಮ್ಮ ಕುಲಕ್ಕೆ ಕಳಂಕ ತರುತ್ತಾನೆಯೋ ಎಂದು ಯೋಚನೆಗೆ ಪ್ರಾರಂಭವಾಯಿತು. ನಿಮ್ಮ ತಂಗಿ, ಅವನ ಮುಂದೆ ಕರೆದ ಕಣ್ಣೀರು "ಹಾಡ"ಗಟ್ಟಲೆ ಆದೀತು. ಯಾವುದಕ್ಕೂ ಇವನು ಬಗ್ಗಲಿಲ್ಲ. ಮನೆಗೆ ಬಂದರೆ ಅಲ್ಲವೆ ಮಾತು! ಯಾವಾಗ ನೋಡಿದರೂ ಸರ್ಕೀಟೇ! ಮನೆಯಲ್ಲಿ ತುಂಬಾ ತಿನ್ನಲಿಕ್ಕಿದ್ದ ಇನ್ನೂ ಒಬ್ಬಿಬ್ಬರ ಮಕ್ಕಳನ್ನು ಕಟ್ಟಿ ಕೊಂಡು ಊರೂರು ತಿರುಗುತ್ತಾ ಇದ್ದಾನೆ. ಫಂಡು ಕೂಡಿಸುವುದಂತೆ- ನೂಲು ಮಾಡಲಿಕ್ಕೆ ಹೇಳುವುದಂತೆ,—ಮೆಂಬರಿ ಮಾಡುವಂತೆ—ಆಗಿ, ಹೋಗುವ ಪಂಚಾಯತಿ ಯಾವುದೂ ಅಲ್ಲ. ತಿರುಗುತ್ತಲೇ ಇದ್ದಾನೆ.

"ನಾನೇನು ತಿಳಿದೆ!—ನಮ್ಮ ಯಾಕೂ ಬೇಡದ ಕುಂದಾಪುರ

ತಾಲೂಕನ್ನು ಸುತ್ತಿದ್ದರೆ, ಬುದ್ಧಿ ಬರುತ್ತದೆ. ಇಲ್ಲಿ ಕಾಸು ಅಂದರೆ ಪ್ರಾಣ ಬಿಡುವವರೇ ಎಲ್ಲ. ಗಾಂಧಿ ಬಂದು, ಇವರಿಗೆ ಆಣೆ ರೂಪಾಯಿ ಕೊಟ್ಟರೆ ಕೈ ನೀಡುವ ಜನ. ತಮ್ಮ ಮುಷ್ಟಿ ಬಿಚ್ಚುವ ಮಕ್ಕಳಲ್ಲ. ತನ್ನಷ್ಟಕ್ಕೆ ಬುದ್ಧಿ ಬರುತ್ತದೆ. 'ಗುದ್ದಿ ಮಾಡಿದ ಹಣ್ಣು ತಿನ್ನಲಿಕ್ಕೆ ಬಂದೀತೇ— ಎಂದು ಸುಮ್ಮನಾದೆ.

"ಇತ್ತಲಾಗಿ ಸಂಕಪ್ಪಯ್ಯನವರ ಖಾಯಿಸು ಅನಂತರಾಮನ ಮೇಲೆ ಹರಿಯಿತು. ಅವರ ಮಗಳಿಗೆ ಪ್ರಾಯವಾಯಿತೆಂದು, ಹಿರೀ ಹುಡುಗನನ್ನು ಬಿಟ್ಟು, ಮದುವೆ ಆದೀತೇ ಎಂದು ಪ್ರಸ್ತಾಪ ಬಿಟ್ಟು ಕುಳಿತೆನು ನಾನು. ಆ ಮೇಲಿನ ಕತೆ ಗೊತ್ತಲ್ಲವೇ ನಿನಗೆ. ನಾನು ಲಗ್ನಕ್ಕೆ ನಿಶ್ಚಯ ಮಾಡಿದ್ದು. ಇವನು ಪರಭಾರೆಯಿಂದ ತಾನು ಲಗ್ನ [redacted]ವಾಗುವುದಿಲ್ಲ' ಎಂದು ಹೇಳಿ ಕಳುಹಿಸಿದ್ದು. ಕೊನೆಗೆ ಮರ್ಯಾದೆ ಉಳಿಸಿಕೊಳ್ಳಲಿಕ್ಕೆ ಅನಂತರಾಮನ ಮುಂದೆ ಕುಳಿತು ಕಣ್ಣೀರು ಕರೆದು, 'ನೀನಾದರೂ ಮರ್ಯಾದೆ ಉಳಿಸು; ಮಾತು ಕೊಟ್ಟಾಯಿತು-ನಾನು ಅವರಿಗೆ. ದಿನ ನಿಶ್ಚಯವಾಯಿತು, ಅವರು ಚಿನ್ನ ಮಾಡಿಸಲಿಕ್ಕೆ ಹಾಕಿ ಆಯಿತು, ನಾನು ನೆಂಟರಿಷ್ಟರಿಗೆ ಹೇಳಿ ಆಯಿತು'—ಎಂದರು." ಕಣ್ಣೀರೂ ಬಂದಿತು.

"ಸರಿ, ಅದೆಲ್ಲಾ ಕೇಳಿದ ಕತೆಯಲ್ಲವೇ. ನಾನು ಕೇಳಿದ್ದು-ಅವನು ಲಗ್ನವಾಗಲಿ, ಬಿಡಲಿ. ಬೇಡ, ಬೇಡವೆಂದ ನಾಯಿ ಜೇಡಿ ತಿಂದೀತು ಎಂಬ ಗಾದೆಯಿದೆ. ಆದರೆ ತಮ್ಮನ ಲಗ್ನಕ್ಕೆ ಬರಬಹುದಿತ್ತಲ್ಲಾ" ಎಂದರು ನಾಗಪ್ಪಯ್ಯ.

"ಕಲಿಯುಗದ ಮಕ್ಕಳು! ಯಾರು ನಮ್ಮನ್ನು ಕೇಳುತ್ತಾರೆ ಭಾವಾ! ನಾವೇನೋ ನಮ್ಮ ಕರುಳುಬಳ್ಳಿಯವು ಎಂದು ಮರುಗಬೇಕೇ ಹೊರತು, ಅವಕ್ಕೆ ಮೀಸೆ ಬರುವಾಗ ದೇಶ ಕಾಣುತ್ತದೆಯೇ? ಲಗ್ನ ನಿಶ್ಚಯವಾದ ದಿವಸದಿಂದ ಅವನ ಮುಖವನ್ನು ನಾನು ನೋಡಲಿಲ್ಲ. ಒಂದೆರಡು ಬಾರಿ, ಮನೆಗೆ ಬಂದು, ಅಬ್ಬೆಯ ಹತ್ತಿರ ರಾಗಮಾಡಿ ನಾಲ್ಕೆಂಟು ರೂಪಾಯಿ ಎಬ್ಬಿಸಿಕೊಂಡು ಹೋದನಂತೆ. ಮದುವೆಗೆ ಬಾ ಎಂದು ತಿಳಿಸಲು, ಅವನು ಎಲ್ಲಿದ್ದಾನೆಂದು ತಿಳಿಯ ಬೇಡವೇ?'

"ನೀನು ನೋಡು ಭಾವಾ, ಅವನ ಖರ್ಚಿಗೆ ಪಾವಾಣೆ ಸಿಗದ ಹಾಗೆ ಮಾಡಿದರೆ, ತನ್ನಂತೆಯೇ ಮನೆಗೆ ಬಂದು ಬೀಳುತ್ತಾನೆ. ಇವನು

ಗಾಂಧೀ ಕೆಲಸ ಮಾಡುವುದಾದರೆ ಅದೇ ಗಾಂಧಿ ಇವನಿಗೆ ಸಂಬಳ ಕೊಡ ಬಹುದಲ್ಲ."

"ಹಾ! ಗಾಂಧಿ ಸಂಬಳ ಕೊಡುವವನೇ? ಇವರಿಂದಲೇ ಫಂಡು ಕೂಡಿಸಿ ಅವನು ತರಿಸಿಕೊಳ್ಳುವಾಗ! ನನಗೆ ಯಾವುದೂ ತಿಳಿಯುವುದಿಲ್ಲ. ಇವರ ಸ್ವರಾಜ್ಯವೂ ಆಯಿತು, ಇವನೂ ಆಯಿತು. ನಮ್ಮ ಕಾಲ ಹೀಗೆ ಹೋದರೆ ಸಾಕು. ಆ ಸ್ವರಾಜ್ಯವೊಂದು ಇಲ್ಲದೆ ನಮಗೇನು ಕಡಿಮೆಯಾಗಿದೆಯೆಂದು ಬೇಡವೆ?. ಇಷ್ಟೆಲ್ಲಾ ಸರ್ಕಾರದ ಬಿಗು ಇರುವಾಗಲೇ ಒಬ್ಬರಿಗೆ ಇನ್ನೊಬ್ಬರನ್ನು ನೋಡಿದರೆ ಆಗುವುದಿಲ್ಲ. ಇನ್ನು ಸ್ವರಾಜ್ಯ ಬಂದರೆ, ಒಬ್ಬರು ಇನ್ನೊಬ್ಬರನ್ನು ಹಿಡಿದು ನುಂಗಿಯೇ ಬಿಡುತ್ತಾರೆ."

"ಈ ಅಣ್ಣಾಪ್ಪ ಕಮ್ತಿಯರು, ಅನಂತರಾಯರು, ನಾರಾಯಣಯ್ಯ--ಇವರೆಲ್ಲಾ ಈ ಮಕ್ಕಳಿಗೆ ಗಾಳಿಹಾಕಿ, ತಿಲಕ ಫಂಡು (ತಿಲಕ ಸ್ವರಾಜ್ಯ ನಿಧಿ) ಕೂಡಿಸುತ್ತಿದ್ದಾರಲ್ಲಾ. ಈ ಹಣ ಆ ತಿಲಕನ ವರೆಗೆ ಮುಟ್ಟುವುದುಂಟೇ? ಪೆಬ್ಬಾವಿನ ಜಾತಿಯವು ಇವು" ಎಂದು ಇನ್ನೂ ಮುಂದುವರಿಯ ಬಹುದಾಗಿದ್ದ ಅವರ ಅಂತರಾತ್ಮನ ವಿಲಾಪಗಳನ್ನು ಗಾಡಿಗಳ ದರ್ಶನದಿಂದ ನಿಲ್ಲಿಸಿದರು.

ನಾಗಪ್ಪಯ್ಯ ನೆಗೆದು ಕುಳಿತರು. ಗಾಡಿಗಳು.ಬಂದುವು; ಮರದ ತಂಪಿನಲ್ಲಿ ನೊಗ ಬಿಚ್ಚಿದುವು. ಇನ್ನು—ಎತ್ತುಗಳಿಗೂ, ಪಶುವಾಹನರಾಗಿ ಬಂದವರಿಗೂ ಸೀರಡಿಕೆಯಾಗಬೇಕು. ಆ ಮೇಲೆ ಆರು ಮೈಲು ದೂರ ಸಾಗಿ, ಗೋಧೂಳಿ ಲಗ್ನ ನಡೆಯಬೇಕು. ಎಲ್ಲರಿಗೂ ಆತುರವೇ! 'ಹೊಂ ಬೇಗ ಬೇಗ ಸುಬ್ಬಾ, ಕತ್ತಲಾಗಿ ಹೋದರೆ ಮರ್ಯಾದೆ ಉಳಿಯಲಿಕ್ಕಿಲ್ಲ' ಎಂದರು ರಾಮಪ್ಪಯ್ಯ!

"ಮರ್ಯಾದೆಗೆ ಬೆಂಕಿ ಬೀಳಲಿ. ಮದುವೆಯ ಮೂಹೂರ್ತ ಕಾಯಬೇಕಲ್ಲ" ಎಂದರು ಭಾವನವರು.

"ಬಿಸಿಲು ಇಳಿಯಿತು. ನಿಮಗೇನೂ ಯೋಚನೆ ಬೇಡ. ಮದುಮಗನನ್ನು ಕುದ್ರಿಸಿಕೊಂಡು ರೈಲಿನ ಹಾಗೆ ಹೋದರಾಯಿತಲ್ಲಾ ನಾನು. ನಿಮಗಷ್ಟು ಅನುಮಾನ ಬಂದರೆ, ನೀವು ಗಂಡಹೆಂಡಿರು, ಏನು ಜನವೆಲ್ಲಾ ನನ್ನ ಗಾಡಿಯಲ್ಲಿ ಕೂತುಕೊಳ್ಳಿರಿ. ಫೇರಿ ಬಿಟ್ಟನೆಂದರೆ ಸುಬ್ಬಯ್ಯ ಶೆಟ್ಟರ

ಜಟ್ಕ ಸುಳ್ಳು. ಬಾಕಿ ಗಾಡಿ ಹಿಂದಿನಿಂದ ಬರುತ್ತವೆ; ಬರಲಿ" ಎಂದನು, ಹೊಸ ಎತ್ತುಗಳ ಅಧಿಪತಿಯಾದ ಸುಬ್ಬ.

ಅದರಂತೆ ಗಾಡಿಯ ಪೆಸಂಜರುಗಳು ಬದಲಾವಣೆಗೆ ಹುಕುಂ ಹೊರಟಿತು. ಸುಬ್ಬ "ಅಯ್ಯಾ ಒಂದು ಎಲೆ, ಅಡಿಕೆ ತಿನ್ನದೆ ಬಾಯಿ ಇಾಮ ಇಾಮ ಆಗುತ್ತಿದೆ"ಎಂದ. "ಹೊಂ, ನಿನ್ನ ಎಲೆಯಡಿಕೆ, ಎತ್ತಿಗೆ ನೀರು—ಎಂದು ಇಲ್ಲೇನೆ ಬೈಗು ಮಾಡಿ ಮರ್ಯಾದೆ ಕಳೆಯಬೇಡ ನಮ್ಮ ಬೀಗರ ಮುಂದೆ" ಎಂದರು ನಾಗಪ್ಪಯ್ಯ.

ತಿರುಗಿ ಮಜಲು ಹೊರಟರು. ಹಾಗೂ ದಿಬ್ಬಣಿಗರಿಗೆ ಅಷ್ಟರಲ್ಲೆ ಒಂದು ಗಾಢವಾದನಿದ್ರೆಯಾಗಿತ್ತು. ಆದರೆ ಬಿಸಿಲಿನ ರಣ ಬಡಿತ ಕಡಿಮೆ ಯಾಗಿದೆ. ಬೇಗೆ ಏನೋ ಮೊದಲಿನಂತಿದೆ. ಈಗ ವಿಶ್ರಾಂತಿಗೊಂಡು ಚೇತರಿಸಿದ ಅವರು "ಒಂದೇ ಓಟಕ್ಕೆ ಹಾಲಾಡಿ ಸಂಕಪ್ಪಯ್ಯನವರ ಮನೆ ಸೇರುತ್ತೇವೆ" ಎಂದುಕೊಂಡರು. ಒಡನೆ ಬೀಸುಗಾಲಿನಿಂದ ನಡೆಯ ತೊಡಗಿದರು. ಸೊಲ್ಲಡಗಿದ್ದ, ಉಸಿರಾರಿದ ಓಲಗದವರು, ಒಮ್ಮೆಗೆ 'ಪೇ-ಪೇ' ಎಂದು ರಾಗ ಮಾಡಿ, ತಮ್ಮ ಸನಾಯಿ ಮೋರಿಗಳನ್ನು ಚೀಲಕ್ಕೆ ತುರುಕಿಸಿ ಹೊರಟರು. ಗಾಡಿ ಸುಬ್ಬನ ಕೊರಳು, ವಾದ್ಯದವರನ್ನು ನಾಚಿಸುವ ಉಬ್ಬರದಿಂದ,ನಾಲ್ಕು ಸುತ್ತಿನ ಗುಡ್ಡಗಳ ಕಡೆಗೆ ತನ್ನ ಧ್ವನಿಯನ್ನು ಒಡ್ಡಿತು. ಎತ್ತುಗಳಿಗೂ—ಲಗ್ನದ ಸಮಯ ತಪ್ಪಬಾರದು—ಎಂಬ ತಿಳಿವಿದ್ದಂತೆ ಭರದಿಂದ ಹೆಜ್ಜೆ ಹಾಕಿದುವು.

ಇದೇ ಸುಸಮಯವೆನ್ನಿ, ಇಲ್ಲವೆ ಬಿಸಿಲಿನ ಬೇಗುದಿಯ ದುಸ್ಸಮಯವೆನ್ನಿ—ಅಂದು ಮದುವಣಿಗನಾಗಬೇಕಿದ್ದ, ಮೆರೆಯ ಬಹುದಾಗಿದ್ದ, ರಾಧಾಕೃಷ್ಣನು ತನ್ನ ಇಬ್ಬರು ಗೆಳೆಯರೊಂದಿಗೆ ವಂಡಸೆ ಎಂಬ ಊರಲ್ಲಿ ಬಳಲುತ್ತಿದ್ದಾನೆ. ಆತ, ಗೆಳೆಯ ಸಖಾರಾಮ, ಸದಾನಂದ ಇವರೊಂದಿಗೆ ಯಾವುದೋ ಒಂದು ಅಂಗಡಿ ಜಗುಲಿಯಲ್ಲಿ ಕುಳಿತುಕೊಂಡು, ತಮ್ಮ ನವೀನ ಪರಿಚಯವನ್ನು ಬೆಳೆಯಿಸುತ್ತಿದ್ದಾನೆ. ಬೆಳಗ್ಗೆ ಕೊಲ್ಲೂರಿನಲ್ಲಿ ಉಪಾಹಾರ ಮುಗಿಸಿಕೊಂಡು, ಅರಣ್ಯಮಾರ್ಗವಾಗಿ, ಗೇಣು ದಪ್ಪದ ಧೂಳಿನಲ್ಲಿ ಪಾದಗಳನ್ನು ಅದ್ದಿ ತೆಗೆಯುತ್ತ, ಅವರು ಅಲ್ಲಿಗೆ ಬಂದಿದ್ದರು. ಮೂವರೂ ಎಳೆಯರು. ಸುಮಾರು ಸಮವಯಸ್ಸು. ಒಂದೇ ಬಗೆಯ ರಾಷ್ಟ್ರಭಕ್ತಿ ಪ್ರೇರಿತರಾದವರು. ಜನಜಾಗ್ರತಿಗಾಗಿ ಬದ್ಧ ಕಂಕಣರಾಗಿ

ಹೊರಟಿರುವ ಅವರು, ಒಂದುಗೂಡಿ, ಬರಿಯ ಮೂರು ತಿಂಗಳಷ್ಟೇ ಕಳೆದಿದೆ. ಆದರೂ ಅನಾದಿಕಾಲದಿಂದ ಬೆಳೆದು ಬಂದ ಬಾಂಧವ್ಯ ಎಂಬ ವಿಶ್ವಾಸವು ಮನಸ್ಸಿನಲ್ಲಿ.

ಏನಿದ್ದರೇನು? ಉತ್ಸಾಹ ತುಂಬಿದೆ! ನಿರ್ದಯೆಯ ಬಿಸಿಲಿನ ಬೇಗೆಗೆ ಅವರ ಉಸಿರು ಮಾತ್ರ ಅಡಗಿ ಹೋಗಿದೆ. ಸಖಾರಾಮ, ಸದಾನಂದರಿಗೆ ಕಾಲಿಗೆ ರಕ್ಷಣೆಯಿದೆ. ರಾಧಾಕೃಷ್ಣ ಬರಿಗಾಲಿನವ. ಮೂವರೂ ಖಾದಿಯ ಬಿಳುಪಿಗೆ, ಧೂಳಿನ ಕಾವಿಯನ್ನು ತೊಡಿಸಿ ಸನ್ಯಾಸಿ ವೇಷತಾಳಿದ್ದಾರೆ. ಮಧ್ಯಾಹ್ನದ ತನಕ ನಡೆದು, ದಣಿದು ಹಾದಿಯ ಹಳ್ಳವೊಂದರಲ್ಲಿ ಮಿಂದು, ಮಲಗೀಕೆಸರು ಮೆತ್ತಿಸಿಕೊಂಡು ಬಂದಿದ್ದರು. ಹಸಿವಿಗೆ ಒಂದಿಷ್ಟು ಚರುಮುರಿ ಅಲ್ಲದೆ ಬೇರೇನೂ ದೊರೆಯಲಿಲ್ಲ. ದಾರಿಯಲ್ಲಿ ಕಪಿಗಳ ಕೃಪೆಯಿಂದ ಬೀಳಿಸಲ್ಪಟ್ಟ ಹುಳಿ ಮಾವಿನ ಹಣ್ಣುಗಳು ನೀರಡಿಕೆಗೆ ನೆರವಾದುವು. ಅಷ್ಟನ್ನೇ ತಿಂದು ಅಲ್ಲಲ್ಲಿ ನಿಂತು, ನಡೆದು, ಮಧ್ಯಾಹ್ನ ಮೂರು ಘಂಟೆಯ ಹೊತ್ತಿಗೆ ಆರು ಹರದಾರಿ ದೂರದ ವಂಡಸೆ ಸೇರಿದರು. ಅಲ್ಲಿ ಕುಳಿತು, ಮುಂದಿನ ಪ್ರಯಣದ ಕನಸನ್ನು ಕಾಣುತ್ತಿದ್ದಾರೆ. ಇತ್ತ ಹೊಟ್ಟೆಯು ಹಸಿವಿನಿಂದ ಕಡಿಯುತ್ತಿದೆ! 'ಸ್ವರಾಜ್ಯಕ್ಕಿಂತ ಹೆಚ್ಚಿನ ಸತ್ಯ ನಾನು' ಎಂಬ ಹೆಚ್ಚಿನ ನೆನಪು ಹುಟ್ಟಿಸುತ್ತಿದೆ. ಊಟ ಮಾಡಬೇಕು. ಅದಕ್ಕೆ, ಯಾರಿಂದಾದರೂ ಪಾತ್ರವನ್ನು ಎರವಲು ತಂದು ಅಕ್ಕಿಯನ್ನು ಕೊಂಡು, ಒಂದಿಷ್ಟು ಗಂಜಿ ಬೇಯಿಸಬೇಕು. ರಾಧಾಕೃಷ್ಣನೆನ್ನುತ್ತಾನೆ! "ಯಾರು ಬೇಯಿಸುವವರು? ಇಲ್ಲಿ ಅವಲಕ್ಕಿ ಬೆಲ್ಲ ಸಿಕ್ಕೀತು. ಬಾಳೆಯ ಹಣ್ಣು ಒಂದು ಅಂಗಡಿಯಲ್ಲಿದೆ. ತಿಂದುಕೊಂಡು ಸುಮ್ಮನೆ ಮಲಗಿಬಿಡುವ" ಎಂದು. ಅದಕ್ಕೆ ಸದಾನಂದ–"ನೀನೊಬ್ಬ ಒಳ್ಳೆಯ ಜನ. ನಿನ್ನೆಯೂ ಸಮನಾಗಿ ಊಟವಾಗಲಿಲ್ಲ. ಆ ಭಟ್ಟರ ಮನೆಯ ಹುಳಿಯನ್ನು ಉಂಡು, ಹೊಟ್ಟೆ ಮಗಚುವ ಹಾಗಾಯ್ತು. ಈ ಹೊತ್ತು, ಗಂಜಿ ಊಟವೂ ಇಲ್ಲ. ಕೊಲ್ಲೂರಿನಲ್ಲಿ ದರಿದ್ರ ಒಂದು ಕಾಫಿ ಹೊಟೇಲಿಗೂ ಗತಿ ಇಲ್ಲದೆ ಹೋಯಿತೇ? ನೀನು ರಾತ್ರಿಗೂ ಊಟ ಬೇಡವೆನ್ನುತ್ತಿದ್ದೀಯಲ್ಲಾ. ದೇಶಸೇವೆಯೆಂದರೆ ಹಾದಿಯಲ್ಲಿ ಬಿದ್ದು ಸಾಯುವುದು ಎಂದು ಗಾಂಧೀಯವರು ಹೇಳಿದ್ದಾರೆಯೇ?' ಎಂದ.

ಸಖಾರಾಮ—"ಏನಿಲ್ಲ, ಬಿಸಿಲು ತಣಿಯುತ್ತಲೇ ನದಿಯಲ್ಲಿ ಇನ್ನೊಮ್ಮೆ ಮೀಯುವ. ಅಲ್ಲೇನೆ ಮರದ ತಂಪಿಗೆ ಕುಳಿತು ಒಂದು ಅಡಿಗೆ ಮಾಡುವ. ನನಗೆ ಮಾವಿನ ಹಣ್ಣಿನ ಅಂಬಟು ಮಾಡಲಿಕ್ಕೆ ಬರುತ್ತದೆ" ಎಂದ. "ನಾನು ಒಂದು ತೊವ್ವೆ ಮಾಡಿ ಬಿಡುತ್ತೇನೆ" ಎಂದನು ಸದಾನಂದ. "ನನಗೆ ಬರಿಯ ಇಷ್ಟು ಉಪ್ಪಿನಕಾಯಿ, ಮಜ್ಜಿಗೆ ನೀರು ಇದ್ದರೆ ಪಧಾರ್ಥವಿಲ್ಲದೆ ಊಟ ಮಾಡಬಲ್ಲೆ" ಎಂದನು ರಾಧಾಕೃಷ್ಣ. ಕೊನೆಗೆ ಅಡುಗೆ ಅಟ್ಟುವ ತೀರ್ಮಾನವೇ ಆಯಿತು. ಒಬ್ಬೊಬ್ಬರು ಒಂದೊಂದು ಕೆಲಸ ವಹಿಸಿಕೊಂಡರು. ರಾಧಾಕೃಷ್ಣ ಅನ್ನದಾತನಾದನು! ಉಳಿದ ಇಬ್ಬರು ತೊವ್ವೆ ಅಂಬಟುಗಳ ಗುತ್ತಿಗೆ ಹಿಡಿದರು. ಹೆಚ್ಚುಕಡಿಮೆ, ಯಾರಿಗೂ—ಯಾವುದಕ್ಕೆ ಏನೇನು ಸಾಮಾನುಗಳು ಬೇಕು—ಎಂಬುದು ತಿಳಿದಿರಲಿಲ್ಲ. ಅವರ ಅಡುಗೆಯ ಮಾತುಕತೆಗಳಂತೂ ನಡಿಗೆಯ ದಣಿವಿನಿಂದ ಅರ್ಧಮರ್ಧವಾಗಿದ್ದವು. ಅದರಿಂದಾಗಿ ನಿಮಿಷ ನಿಮಿಷಕ್ಕೂ ತೂಕಡಿಕೆ ಆವರಿಸಿತ್ತು. ಮೊದಲಿಗೆ ಒಂದಿಷ್ಟು ನಿದ್ರೆಮಾಡಿ, ಅನಂತರ ಬೇರೆ ವಿಚಾರ—ಎಂದುಕೊಂಡು ಒಬ್ಬೊಬ್ಬರೇ ಮಲಗಿಕೊಂಡರು. ನಿದ್ರೆ ತೀವ್ರವೇ ಅವರನ್ನು ಸೆಳೆದೊಯ್ಯಿತು. ಅವರ ಮೂಗಿನ ಉಸಿರುಗಳು "ನಾವು ನಿದ್ರಿತರು" ಎಂದು ದಾರಿಗರನ್ನು ಕರಕರೆದು ಹೇಳುವಂತಿತ್ತು.

ಸಂಜೆಯಾಯಿತು. ಪಡುವಣ ಬಾನು ಬೆಂಕಿ ಹೊತ್ತಿದಷ್ಟು ಘೋರಾಕಾರದಲ್ಲಿ ಕಿತ್ತಳೆ ಬಣ್ಣವನ್ನು ಅಡರಿಸಿಕೊಂಡು ಮೆರೆಯಿತು. ಬಿಸಿಲೇನೋ ಮಾಯವಾಯಿತು; ಬೇಗೆ ತುಸುವೂ ಕಡಮೆಯಾಗಲಿಲ್ಲ. ಮಲಗಿ ನಿದ್ರೆಹೋದ ಗೆಳೆಯರು ಬೆವರನ್ನು ಒರಸಿಕೊಳ್ಳುತ್ತ, ಜಗುಲಿಯಿಂದಿಳಿದರು. ಬಾನಿನ ಬಣ್ಣವನ್ನು ನೋಡಿ—ಇದು ಬೆಳಗೋ ಮುಸ್ಸಂಜೆಯೋ ಎಂಬ ಅನುಮಾನ ತಾಳಿದರು. ರಾಧಾಕೃಷ್ಣ "ಹೋ! ಸಂಜೆಯಾಯಿತೆಂದು ಕಾಣುತ್ತದೆ. ರಾತ್ರಿ ಊಟಮಾಡುವುದು ನಿಜವಾದರೆ ಈಗಲೇ ಹೊಳೆಯ ಬುಡಕ್ಕೆ ಹೋಗಿ, ಒಲೆಗೆ ಕಲ್ಲನ್ನು ಹೊಡಬೇಕು. ಅಕ್ಕಿ ಬೇಳೆಗಳನ್ನು ಕೊಂಡು,ಯಾರಿಂದಾದರೂ ಪಾತ್ರ ಪರಡಿ ತರಬೇಕು" ಎಂದುದರಿಂದ, ಉಳಿದಿಬ್ಬರೂ ಆಕಳಿಸಿ ಮೈ ನಿಡಿದುಕೊಂಡು ಎದ್ದರು. "ಊಟಮಾಡದೆ ಕಳೆಯದೇ ಕಳೆಯುದು. ಆದರೆ ಅಡುಗೆ ಮಾಡುವುದು ಯಾವ ಭೂತವಪ್ಪಾ. ನನಗಂತೂ ದಣಿವಿನಿಂದ ಕಾಲು ಕೀಳಲು ಬರು

ವುದಿಲ್ಲ." ಎಂದನು ಸದಾನಂದ. "ನನಗೆ ನಿದ್ರೆಯು ಅಮಲು ಇನ್ನೂ ಹೋಗಿಲ್ಲ"....ಎಂದನು ಸಖಾರಾಮ. ಹೋಗ್ಗಲಿ, ಬಿಡಲಿ, ಒಬ್ಬೊಬ್ಬರು ಒಂದೊಂದು ಕೆಲಸವನ್ನು ಹಂಚಿಕೊಳ್ಳಬೇಕಾಯಿತು. ರಾಧಾಕೃಷ್ಣ ನೇರಾಗಿ ನದಿಯ ದಂಡೆಗೆ ಓಡಿದ. ಅಲ್ಲಿ ಕಲ್ಲುಗಳಿಗೊಂದು ಬರಗಾಲವೇ! ಮೂರು ದೊಡ್ಡ ಕಲ್ಲುಗಳನ್ನು ತಂದು ಮುಮ್ಮೂಲೆಯಾಗಿ ಇರಿಸಿ ಒಲೆಯನ್ನು ನಿರ್ಮಿಸಿದ. ಕತ್ತಲು ಕವಿಯುವ ಮೊದಲೇ ಉರುವಲನ್ನು ಸೇರಿಸಬೇಕಷ್ಟೆ. ಪಾತ್ರೆ, ಅಕ್ಕಿಗಳು ಬರುವ ತನಕ ಆ ಕೆಲಸಕ್ಕಾಗಿ ಅಲೆದಾಡಿದ. ಅದು ನಿಮಿಷ ಮಾತ್ರದ ಕೆಲಸ. ಪಂಡಸೆ ಊರಿನಲ್ಲಿ ಕಟ್ಟಿಗೆಗೆ ಬರಗಾಲವೇ? ಕಟ್ಟಿಗೆ ತಂದು, ಒಲೆಯೊಳಗೆ ತುರುಕಿ, ನದಿಯನ್ನು ಇಳಿದ. ನಡು ಮಾತ್ರದ ನೀರಿನಲ್ಲಿ ನಿಂತು, ಮೈ ಮೇಲೆ ಬೊಗಸೆಯಿಂದ ನೀರೆರೆದುಕೊಂಡ. ಅವನ ಎದುರಿಗೆ ತುಸು ದೂರದಲ್ಲಿ ಒಂದು ದೋಣಿ ಬಿಗಿದಿತ್ತು. ಅದನ್ನು ಕಂಡರೆ ಆ ರಾತ್ರಿಯೇ ಕುಂದಾಪುರಕ್ಕೆ ಹೊರಡುವ ದೋಣಿಯು ಹಾಗೆ ಕಾಣಿಸಿತು "ಹೋದರೆ ರಾತ್ರಿ ಊರಿಗೆ ಹೋಗಲೂ ಬಹುದು" ಎಂದು ತೋರಿತು ಮನಸ್ಸಿಗೆ. ಅಲ್ಲಿಂದ ಮನಸ್ಸು ಮನೆಯ ಮುಖವಾಯಿತು. ತಮ್ಮನ ಮದುವೆಯ ಕಡೆಗೆ ಹರಿಯಿತು. "ಇನ್ನೊಂದೆರಡು ದಿನಗಳಲ್ಲಿ ತಮ್ಮನಿಗೆ ಲಗ್ನ; ಹೋದರೆ ಹೋಗ ಬಹುದಿತ್ತು. ತಂದೆಗೆ ತುಸುವಾದರೂ ಸಂತೋಷವಾಗುತ್ತಿತ್ತು." ಎಂದು ಯೋಚಿಸಿದ. ಆದರೆ ಅವನೂ ಅವನ ಗೆಳೆಯರೂ ದೇಶ ಸೇವೆಯ ನಿರ್ಧಾರವನ್ನು ಮಾಡಿಯಾಗಿದೆ. ಮೇ ತಿಂಗಳೆಲ್ಲವನ್ನು ಆ ತಾಲೂಕಿನ ಸಂಚಾರಕ್ಕೆ ಒಪ್ಪಿಸಿದ್ದಾರೆ. ತಿಲಕ ಸ್ವರಾಜ್ಯನಿಧಿಗೆ ವಂತಿಗೆ ಕೂಡಿಸುವ ಮಹಾ ಕೆಲಸವಿದೆ. ಅದರಿಂದ ಪರಾವೃತ್ತನಾಗಲು ಮನಸ್ಸು ಒಡಂಬಡಲಿಲ್ಲ. "ಹೊಂ, ಆದಾದ್ದಾಗುತ್ತದೆ. ಅದು ಮನೆಯ ಕೆಲಸ; ಇದು ದೇಶದ್ದು" ಎಂದು ಉಸಿರುಗರೆದು, ಸ್ನಾನವನ್ನು ಮುಗಿಸಿ, ಮೇಲಕ್ಕೆ ಬಂದನು. ಮೈ ಉಜ್ಜಿಕೊಳ್ಳುವ ವೇಳೆಗೆ ಸಮನಾಗಿ ಪಡುವಣದಲ್ಲಿ, ಕಾಡಿನ ಸಂದಿನಿಂದ ಸೂರ್ಯ "ಮಂಕೇ, ಮದುವೆಯ ಮನೆಯಲ್ಲಿರ ಬೇಕಾಗಿದ್ದ ನೀನು ಇಲ್ಲಿದ್ದೀಯ" ಎಂದು ನಗುತ್ತಲಿದ್ದ. ಆ ನಗುವಿನ ಪ್ರತಿ ಬಿಂಬವೆಲ್ಲ ನದಿಯ ನೀರಲ್ಲಿ ಕಿಲಕಿಲವೆಬ್ಬಿಸುತಿತ್ತು. ಯಾಕೋ ಏನೋ, ಅದನ್ನೆಲ್ಲ ಕಂಡು ರಾಧಾಕೃಷ್ಣನ ತುಟಿಗಳಿಂದಲೂ ನಗು ಹೊಮ್ಮಿತು.

ಅವನ ನಗುವಿಗೆ ಮರುನಗೆಯನ್ನೊಡ್ಡುವ ಗೆಳೆಯರು ಬಂದರು. ಬಂದು, ಒಂದೊಂದಾಗಿ ಪಾತ್ರೆ, ಅಕ್ಕಿ, ಉಪ್ಪು, ಮೆಣಸು, ಬೇಳೆ, ಕಾಯಿ ಇವನ್ನು ಇರಿಸಿದರು. "ನಿನ್ನ ಒಲೆ ಸಿದ್ಧವಾಗಿದೆ. ತೆಗೆದುಕೋ ಬೆಂಕಿ ಪೆಟ್ಟಿಗೆ. ನಾವಿಬ್ಬರೂ ಸೋತು ಕಂಗಾಲಾಗಿದ್ದೇವೆ. ಒಂದು ಅಡಿಗೆ ಮಾಡಿ ಉಣ್ಣಿಸಿ ಬಿಡು ಮಹಾರಾಯ. ಬಾಯಿಗೆ ಹಾಕಿದರಂತೂ ಇಮ್ಮಡಿ ಥೇಂಕ್ಸ್" ಎಂದರು.

"ಹಾಗಾದರೆ ನಿಮ್ಮ ಅಂಬಟು, ಬೇಳೆ ತೊವ್ವೆಗಳ ಗತಿ! ತೊವ್ವೆಯನ್ನಾದರೂ ಮಾಡಿಯೇನು. ಹಸಿಮೆಣಸು ಇದೆಯಲ್ಲವೇ? ನಮ್ಮವರ ತೊವ್ವೆಗೆ ಇನ್ನಷ್ಟು ನೀರು ಸುರಿದು, ಮೆಣಸಿನ ಕಾಯಿ ಜಾಸ್ತಿ ನುರಿದರೆ ನಿಮ್ಮವರ ತೊವ್ವೆಯಾಗುತ್ತದೆ. ಆದರೆ ಈ ಕಾಟು ಮಾಪನ್ನು ಬೇಯಿಸಿ, ಅಂಬಟು ಮಾಡಲು ನನಗೆ ಗೊತ್ತಿಲ್ಲ" ಎಂದು ಅನುಮಾನಿಸಿದನು. "ಮಹಾರಾಯ, ನೀನು ಬಡಿಸಿದ್ದನ್ನು ಉಣ್ಣುತ್ತೇವೆ. ನಮಗೆ ಮಾತ್ರ ರಜೆ ಕೊಡು" ಎಂದರು ಉಳಿದಿಬ್ಬರು. ರಾಧಾಕೃಷ್ಣಗೆ ಒಪ್ಪದೆ ಮಾರ್ಗವಿಲ್ಲ. ತನ್ನಿಬ್ಬರ ಗೆಳೆಯರು—ಕಷ್ಟದಲ್ಲಿ ತನಗಿಂತ ಕಡಿಮೆ—ಎಂಬುದನ್ನು ಆವನು ಬಲ್ಲ. ಅವರಿಂದ ಊರೂರು ಸುತ್ತುವುದು ಆಗದು. ತನ್ನಂತೆ ಊಟಬಿಟ್ಟು ಸಂಚಾರವೂ ಆಗದು. ಅವರಿಗಿಂತ ತಾನೇ ಶ್ರೇಷ್ಠ ಎಂದು ತಿಳಿದಿತ್ತು. ಈಗ ಅವನನ್ನು ಹಸಿವು ಚುಚ್ಚುತ್ತಿದೆ. ತುಸು ಹೊತ್ತಿಗೆ ಮೊದಲು ಅವನು ಉದರ ವೈರಾಗ್ಯವನ್ನು ಪ್ರಕಟಿಸಿದ್ದ. 'ಅವಲಕ್ಕಿಯಾದರೂ ಸಾಕು ಬಾಳೆ ಹಣ್ಣಾದರೂ ಸರಿಯೆ' ಎಂದಿದ್ದ. ಈಗ ಅವನ ಹೊಟ್ಟೆಯೂ—'ಅನ್ನದೇವರಿಗಿಂತ ಇನ್ನು ದೇವರು ಇಲ್ಲ'—ಎನ್ನುತ್ತಿದೆ.

ಸರಿ, ಕಾರ್ಯಕ್ಕೆ ಅಣಿಯಾದನು. ಬೆಂಕಿಯ ಕಡ್ಡಿಯನ್ನು ಗೀರುತ್ತಲೇ, ತೀರ ಒಣಗಿದ ಗೆಲ್ಲು ಅಡರುಗಳು ಭಗಭಗನೆ ಹೊತ್ತಿ ಉರಿದುವು. ಒಲೆಗೆ ಎಸರೇರಿತು. ಇನ್ನೊಂದು ಒಲೆಯನ್ನು ಹೂಡಿ ಅದರಲ್ಲಿ ಬೇಳೆ ಬೇಯಲು ಇರಿಸಿದ. ಅವು ಬೇಯುತ್ತಿರಲು ಎರಡು ಗುಂಡು ಕಲ್ಲುಗಳನ್ನು ಆರಿಸಿ ಮೆಣಸು, ಕೊತ್ತಂಬರಿ, ಕಾಯಿಗಳ ಸಂಧಾನ ನಡೆಸಿದನು. ಬಾಯಲ್ಲಿ—ತನಗೆ ಗೊತ್ತಿದ್ದ ಒಂದೆರಡು ರಾಷ್ಟ್ರಗೀತೆಗಳನ್ನು ಅಪಸ್ವರದಿಂದ ಹಾಡುತ್ತ, ಒಲೆಯ ಮುಂದೆ ಕುಳಿತು ಕನಸುಗಳಲ್ಲಿ ಲೀನನಾದನು. ಅನ್ನ ಬೇಗನೆ ಬೆಂದಿತು. ಬೇಳೆಯು ಕಲ್ಲಿನಂತೆ ಇನ್ನೂ ಗಟ್ಟಿಯಾಗಿದೆ.

ಅದನ್ನು ತೆಗೆದು ನೋಡಿ ಬೇಸತ್ತನು. "ಈ ಬೇಳೆಯನ್ನು ಕೊಟ್ಟ ಬುದ್ಧಿವಂತನಾರು? ತಂದ ಕುಂಬಾರನಾರು?" ಎಂದು ನಗು ನಂಜುಗಳನ್ನು ಸೇರಿಸಿ ಗೊಣಗುಟ್ಟುತ್ತಿದ್ದ. ಅವನ ಇಬ್ಬರು ಮಿತ್ರರು ಹೊಳೆಯಲ್ಲಿ ಕುಳಿತು, ನೀರಿನ ಮಟ್ಟಕ್ಕೆ ಕುತ್ತಿಗೆಯನ್ನಿರಿಸಿಕೊಂಡು, ತಪಸ್ಸು ಮಾಡುತ್ತಿದ್ದರು. ತಂತಮ್ಮಲ್ಲಿ—ಅಂತರಂಗದ ವಿಚಾರ ವಿನಿಮಯ ಮಾಡುತ್ತಿದ್ದರು. ತಮಗೆ ಹೊಂದಿಕೆಯಾಗದ ರಾಧಾಕೃಷ್ಣನು ದೂರದಲ್ಲಿದ್ದಾನೆ. ಅವರ ಸಂಭಾಷಣೆಯನ್ನು ಕೇಳಬಹುದು—ಎಂಬ ಭೀತಿಯಿಲ್ಲ.

ರಾಧಾಕೃಷ್ಣನು ತೀರ ನಿರಾಶೆಯಿಂದ, ಬೇಯದ ಬೇಳೆಗೆ ಮಸಾಲೆ ನೀರುಳ್ಳಿಗಳನ್ನು, ಯಾಗದಲ್ಲೆಸೆಯುವ ಹವಿಸ್ಸಿನಂತೆ ಸುರುವಿದ. "ಬೆಂದರೆ ಬೇಯಲಿ, ಬಿಟ್ಟರೆ ಬಿಡಲಿ. ಜೈಲಿನಲ್ಲಿ ಇಷ್ಟೂ ಸಿಗದು. ಮುಂದಿನ ಕಾದಾಟಕ್ಕೆ ಇದೂ ಒಂದು ತಯಾರಿಯೆ" ಎಂದುಕೊಂಡನು. ದೂರದಲ್ಲಿ, ನದಿಯಲ್ಲಿ ಕುಳಿತು ಜಲಸ್ತಂಭನ ಮಾಡುತ್ತ ಇದ್ದ ಗೆಳೆಯರನ್ನು ದಿಟ್ಟಿಸಿದನು. ಮೂಡಣ ಬಾನಲ್ಲಿ ತಿಂಗಳು ಮೂಡಿತು. ಬಟ್ಟಲೊಂದನ್ನು ಕೋಲಿನ ತುದಿಯಲ್ಲಿರಿಸಿ ತಿರುಗಿಸುವ ಚೀನಿ ಡೊಂಬನ ಕೌಶಲ್ಯದಂತೆ ಬಾನಿನ ಅಂಚಿನಲ್ಲಿ ಚಂದ್ರ ತಿರುತಿರುಗುತ್ತ ತಲೆ ತೋರಿಸಿದನು. ರಾಧಾಕೃಷ್ಣನ ಕತ್ತೂ ತಿರುಗಿತು. ಆ ವಿಸ್ಮಯಕರ ನೋಟವನ್ನು ನೋಡಿತು. ಒಮ್ಮೆಗೆ ಸ್ಮೃತಿಯು ಕದಲಿತು. "ಛೇ, ಈ ಹೊತ್ತು ಪೂರ್ಣಿಮೆಯಲ್ಲವೇ-ಹಾಗಿದ್ದರೆ ಇಂದೇ ತಮ್ಮನ ಲಗ್ನ" ಎಂಬ ನೆನೆಪು ಆಯಿತು. ಆ ನೆನಪಿನಿಂದ ಮನಸ್ಸಿನಲ್ಲೇ ಮದುವೆಯ ಚಿತ್ರವನ್ನು ಬರೆಯಲು ಪ್ರಯತ್ನಿಸಿದನು.

ನಿಜ—ಅವನು ನದಿಯ ಬುಡದಲ್ಲಿ ಒಲೆಯನ್ನು ಉರಿಸುತ್ತಿರುವ ಕಾಲದಲ್ಲಿಯೇ, ಸಂಕಪ್ಪಯ್ಯನವರ ಮನೆಯ ಲಗ್ನ ವೇದಿಕೆಯಲ್ಲಿ ಅಗ್ನಿ ಪ್ರತಿಷ್ಠಿತವಾಗಿತ್ತು. ಅಷ್ಟೊಂದು ವೇಳೆಯಾಗಲು-ದಣಿದ ದಿಬ್ಬಣಿಗರು, ಮದುವೆ ಮನೆಯನ್ನು ಗೋಧೂಳಿಗೆ ಮೊದಲು ಹೊಗ್ಗದುದೇ ಕಾರಣ. ದಿಬ್ಬಣದ ಒಂದು ಗಾಡಿಯಂತೂ ಸಮ ಕತ್ತಲಾದ ಮೇಲೆಯೇ ಸೇರಿತು. ಆದರೆ ಮದುವಣಿಗ, ಮುಖ್ಯ ದಿಬ್ಬಣಿಗರು ಚಪ್ಪರವನ್ನು ಆದಷ್ಟು ಬೇಗನೆ ಸೇರಿಕೊಂಡರು. ಗಂಡಿನ ಕಡೆಯ ಪುರೋಹಿತರು ಬಿಸಿಲಿನಲ್ಲಿ ತೆಗೆದ ಇಗ್ಗಾಲೋಟಕ್ಕಿಂತ ಬಿರುಸಾಗಿ, ಮಂತ್ರದ ಓಟ ಹಾಯಿಸಿದರು. ಅಲ್ಲಿ ಅನಂತರಾಮನು ಮದುವಣಿಗಿತ್ತಿಯ ಕೈ ಹಿಡಿದು, ಸಪ್ತಪದಿ ಬರು

ತ್ತಿರುವ ವೇಳೆಗೇ, ಸ್ವರಾಜ್ಯ ಸ್ವಯಂವರ ಸಿದ್ಧನಾದ ರಾಧಾಕೃಷ್ಣ, ವಂಡಸೆ ನದಿಯ ದಂಡೆಯಲ್ಲಿ ಅಗ್ನಿ ಪ್ರತಿಷ್ಠೆ ಮಾಡಿ ಕುಳಿತ್ತಿದ್ದ. ಹಾಲಾಡಿಯಲ್ಲಿ ರಾಮಪ್ಪಯ್ಯ ಮೊದಲಾದವರು ಬೀಗರಿಂದ ಗಾಳಿ ಹಾಕಿಸಿಕೊಂಡು, ಗಂಧಲೇಪನಗೊಂಡು, ತಾಂಬೂಲ ಅಗೆದು ಮೆಲ್ಲುತ್ತಿರುವ ಗಳಿಗೆಯಲ್ಲಿ, ಆ ದಿನದ ಲಗ್ನದ ಮುಖ್ಯ ವ್ಯಕ್ತಿಯಾಗಬೇಕಿದ್ದ ರಾಧಾಕೃಷ್ಣನು—"ತನ್ನ ಬೇಳೆ ಬೇಯುದಲ್ಲಾ" ಎಂದು ಅದರ ಅಗುಳನ್ನು ಶಪಿಸುತ್ತಿದ್ದ.

ಮದುವೆಯ ಚಪ್ಪರದಲ್ಲಿ ನೆರೆದ ಕಿರಿಯರು "ಇನ್ನೊಮ್ಮೆ ಸಕ್ಕರೆ ಪಾನಕ ಬರುತ್ತದೆಯೋ ಇಲ್ಲವೊ! ಒಂದರಲ್ಲೇ ಮುಗಿಸಿಬಿಡುತ್ತಾರೆಯೋ" ಎಂದು ಅನುಮಾನಿಸುತ್ತಿದ್ದಾಗ ರಾಧಾಕೃಷ್ಣನ ಗೆಳೆಯರು ನಡುನೀರಲ್ಲಿ ಕುಳಿತು "ಈ ಮಹಾತ್ಮ, ಪಧಾರ್ಥಕ್ಕೆ ತಂಬಾ ಹುಣಿಸೆ ಹಣ್ಣನ್ನು ಹಾಕಿ 'ಅಂಶಿ' * ಎಂಬ ನಾಮವನ್ನು ಸಾರ್ಥಕಗೊಳಿಸುತ್ತಾನೆಯೋ ಏನೋ" ಎಂದು ಅನುಮಾನಿಸುತ್ತಿದ್ದರು. ಅವರು ತಂದಿರಿಸಿದ ಮಾವಿನ ಹಣ್ಣುಗಳೇ ಅಹಂಕಾರ ಭರಿತವಾಗಿರುವಾಗ, ಈತ ಹುಣಿಸೆ ಹಣ್ಣಿಂದ ಉಪಚರಿಸುವ ಕಾರಣವಿರಲಿಲ್ಲ.

ಒಲೆಯ ಮುಂದೆ ಕುಳಿತ ರಾಧಾಕೃಷ್ಣನಿಗೆ, ತಿರು ತಿರುಗಿ ಮದುವೆಯ ಕಡೆಗೆ ಮನಸ್ಸು ಓಡಿತು. ತಮ್ಮನ ಮದುವೆಯನ್ನು ನೆನಪಿನ ತೆರೆಯಲ್ಲಿ ಕೆಡೆದಾಗ, ಅವನ ತ್ತಾಯಿಯ ಬಿಂಬವು ಮೂಡಿತು. ಅಂತೆಯೇ ಅವನ ಕಣ್ಣುಗಳಿಂದ ನಾಲ್ಕು ಹನಿಗಳು ಉದುರಿದುವು. ತಾನು ತಾಯ ಇಷ್ಟವನ್ನು ಪೂರ್ತಿಮಾಡಲಿಲ್ಲವೆಂದು ಕಾಣಿಸಿತು. ಅದೇ ವೇಳೆಗೆ ಅವನ ತಾಯಿ, ಪುಟ್ಟಮ್ಮ ಮಗನನ್ನು ನೆನೆಯದೆ ಇರಲಿಲ್ಲ. ಅವಳಿಗೆ ಈ ಆತುರದ ಲಗ್ನವು ಇಷ್ಟಿಷ್ಟೂ ಮನಸ್ಸಿಗೆ ಬಂದಿರಲಿಲ್ಲ. ಹಿರಿಯ ಮಗನನ್ನು ಬಿಟ್ಟು, ಎರಡೆಯವನಿಗೆ ಲಗ್ನಮಾಡುವ ಗಂಡನ ಧೋರಣೆಯು ಒಪ್ಪದು. ಹುಡುಗಿಯ ವಯಸ್ಸು ಹದಿನಾಲ್ಕಂತೆ! ಹದಿನಾರು ಎಂಬ ಅನುಮಾನ. ಹೆಚ್ಚು ಕಡಿಮೆ ಸಮ ವಯಸ್ಸಿನ ಅವರೊಳಗಣ ದಾಂಪತ್ಯ ಅವಳಿಗೆ ರುಚಿಸಲಿಲ್ಲ. ಮೇಲಾಗಿ, ತನ್ನ ಹಿರಿಯ ಮಗನಲ್ಲಿ ಅವಳಿಗೆ ಅಖಂಡ ಪ್ರೀತಿ. ತಂದೆ ದೂರಿದರೂ, ರೇಗಿದರೂ, ತನ್ನ ಮಗ ತಪ್ಪು ಹಾದಿ ಹಿಡಿಯುವವನಲ್ಲ–ಎಂಬ ಒಂದು ಅಂತರ್ಯದ ವಿಶ್ವಾಸ. ಅವನು ಮದುವೆಗೆ ಬಂದಿರ

* ಬ್ರಾಹ್ಮಣರ ಒಂದು ಪಂಗಡಕ್ಕೆ ವ್ಯಂಗ್ಯನಾಮ.

ಲಿಲ್ಲವೆಂದು ಬೇಸರವಿಲ್ಲ. "ಹೇಗೆ ಬಂದಾನು? ಹಿರಿಯನನ್ನು ಬಿಟ್ಟು ಕಿರಿಯನಿಗೆ ಲಗ್ನ ಮಾಡುವಾಗ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದಾಳೆ. ತಾಯಿ ಪುಟ್ಟಮ್ಮ ಮನಸ್ಸಿನಲ್ಲಿ ತನ್ನ ಹಿರಿಯ ಮಗುವಿಗೆ ಲಗ್ನವಾದುದನ್ನು ಕಾಣುವ ತನಕ, ದೇವರು ಆಯುಷ್ಯ ಕೊಟ್ಟರೆ ಸಾಕಿತ್ತು— ಎಂದು ಮನವಾರೆ ಬೇಡುತ್ತಿದ್ದಾಳೆ.

ಇತ್ತ ರಾಧಾಕೃಷ್ಣನ ಚಿತ್ತಪಥದಲ್ಲಿ-ತಾಯಿ ನೆನಹು, ಲಗ್ನದ ನೆನಹು, ಅವನ್ನು ಮೀರುವ ರೀತಿಯಲ್ಲಿ, ತನ್ನ ಅನುಭವಗಳ ನಿರಾಶೆಯ ನೆನಹು— ಒಂದೊಂದಾಗಿ ಬಂದು ಉರುಳುತ್ತಿವೆ. ಅವರು ಈ ಕೆಲಸಕ್ಕೆ ಧುಮುಕಿ ಮೂರು ತಿಂಗಳಾಯಿತು. ಆ ಮೂರು ತಿಂಗಳ ಇತಿಹಾಸ ಅಪಾರ ನಿರುತ್ಸಾಹದ ಕತೆಯೆನಿಸಿದೆ. ದಿನಕ್ಕೆ ಹತ್ತೆಂಟು ಮೈಲು ಸಂಚರಿಸದ ದಿನವಿಲ್ಲ. ನಾಲ್ಕೆಂಟು ಗುಡ್ಡಗಳನ್ನು ತುಳಿಯದ ದಿನವಿಲ್ಲ. ಹತ್ತೆಂಟು ಮನೆಯವರನ್ನು ಭೇಟಿಯಾಗದ ದಿನವಿಲ್ಲ. ಕೇಳದ ಜನರ ಕಿವಿಗಳಿಗೆ—ಸ್ವದೇಶಿ, ಸ್ವರಾಜ್ಯಗಳ, ಮಂತ್ರೋಪದೇಶವನ್ನು ಮಾಡದ ಕಾಲವಿಲ್ಲ. ಆದರೂ-ಜನಕ್ಕೆ ಸ್ವದೇಶಿ ಬೇಕಿರಲಿಲ್ಲ, ಸ್ವರಾಜ್ಯದಲ್ಲಿ ವಿಶ್ವಾಸ ಬರಲಿಲ್ಲ. "ನೀವು ಹೀಗೆ ಕಾಸಿನ ಫಾಯಿದೆ ಇಲ್ಲದೆ, ಹೊತ್ತು ಹೊತ್ತಿಗೆ ಅನ್ನ ನೀರಿಲ್ಲದೆ, ತಿರುಗಾಡಿದರೆ ಏನು ಬಂತು? ಆ ಇಂಗ್ಲಿಷಿನವನು ನಿಮಗೆ ಸ್ವರಾಜ್ಯ ಕೊಡುತ್ತಾನೆಯೇ? ಕೊಟ್ಟರೂ, ಯಾರಾದರೂ ನಾಲ್ಕೇಟು ಕೊಟ್ಟು ಕಿತ್ತುಕೊಳ್ಳಲಾರರೇ" ಎಂದು ವಾದಿಸುತ್ತಿದ್ದಾರೆ ಅವರ ಜನ. ಸ್ವರಾಜ್ಯದ ಧಾರೆಯನ್ನು ರಾಧಾಕೃಷ್ಣನ ಕೈಗೇನೆ ಎರೆಯುತ್ತಾರೆ—ಎಂದು ತಿಳಿದಿರಬೇಕು ಆ ಜನ. ಆದರೂ "ಜನರಿಗೆ ತಿಳಿವಿಲ್ಲ ನಿಜ, ಎಚ್ಚರಗೊಂಡ ನಾವು ಈ ಜಡ ಜಗತ್ತನ್ನು ಚೇತರಿಸಬೇಡವೇ?" ಎಂದು ಹೆಮ್ಮೆಯಿಂದ ನುಡಿಯುತ್ತಿದೆ ಅವನ ಹೃದಯ.

ಇನ್ನೊಮ್ಮೆ ಅಳತೆಮಾಡುತ್ತಾನೆ!-ಕಾಸಿನ ಅಳತೆಯನ್ನು. ಎಷ್ಟೊಂದು ಲಗ್ನದ ಮನೆಗಳನ್ನು ಅವರು ನುಗ್ಗಿ ಕಾಣಿಕೆ ಬೇಡಿಲ್ಲ. ಯಾವ್ಯಾವ ಶ್ರೀಮಂತರ ಮನೆಗೆ ಅವರ ಭೂಕಂದಾಯದ ಮೌಲ್ಯವನ್ನು ನಂಬಿ ಹೋಗಿಲ್ಲ. ಆದರೂ ಆ ಮೂರು ತಿಂಗಳ ತಿರುಪೆಯಲ್ಲಿ ಅವರ ಚೀಲಕ್ಕೆ ಬಿದ್ದ ಕಾಸೆಷ್ಟು? ಎಣಿಸಿದರೆ-ಇನ್ನೂ ನೂರು ರೂಪಾಯಿ ಆಗಲೊಲ್ಲದು. ಕೋಟಿ ರೂಪಾಯಿಗಳ ಸಂಕಲ್ಪ ಗಾಂಧಿಯವರದು. ತಾವು ಮೂವರು ದುಡಿದು

ಗಳಿಸಿದ ಹಣ, ಬರಿಯ ಎಪ್ಪತ್ತೇಳು. ಈ ಮೂರು ತಿಂಗಳಲ್ಲಿ ತಾವು ತಿಂದು ತೇಗಿದುದು ಇಷ್ಟಕ್ಕೆ ಸಮನಾದೀತು. ತಮ್ಮನ್ನು ಅತಿಥಿಗಳಾಗಿ ಆದರಿಸಿದವರು, ಇದಕ್ಕೂ ಕಡಿಮೆಯಾಗಿ ವ್ಯಯಿಸಿರಲಾರರು. ಆದರೆ ನಗದಿಯಿಂದ ದಾನ ಮಾಡಬಹುದೆಂದರೆ ಜನಕ್ಕೆ ವಿಶ್ವಾಸವಿಲ್ಲ; ಮನಸ್ಸಿಲ್ಲ. "ಯಾರ್‍ಯಾರು ತಿಂದು ಹಾಕಲಿಕ್ಕೆ! ನೀವು ಕೂಡಿಸಿದ್ದನ್ನು ಕರಗಿಸಲು ನಿಮ್ಮೂರ ಕಾಂಗ್ರೇಸಿನವರೇ ಸಾಕು" ಎಂಬ ಅಪನಂಬಿಕೆಯ ನುಡಿ ಬೇರೆ. ಯಾರ ಹೆಸರಿನಲ್ಲೂ ಊರ ಜನಕ್ಕೆ ವಿಶ್ವಾಸವಿಲ್ಲ.

ನಿಧಿ ಕೂಡಿಸುವ ವಿಚಾರ ಹಾಗಾಗಿದೆ; ಇತ್ತ ಕಾಂಗ್ರೆಸ್ಸ್ ಮೆಂಬರಿಕೆಯು ವಿಚಾರವೋ? ವರ್ಷಕ್ಕೆ ನಾಲ್ಕಾಣೆ ವಂತಿಗೆ ತೆರುವ ನೂರು ಮಂದಿ ಕಲೆತಿಲ್ಲ. ಒತ್ತಾಯ ಮಾಡಿದರೆ ಅನ್ನುತ್ತಾರೆ "ನಾಲ್ಕಾಣೆಯನ್ನಾದರೂ ಕೊಡುತ್ತೇವೆ. ಆದರೆ ನಮ್ಮ ಹೆಸರನ್ನು ಪಟ್ಟಿಯಲ್ಲಿ ಬರೆದು ನಾವು ಜೈಲಿಗೆ ಹೋಗುವ ಹಾಗೆ ಮಾಡಬೇಡಿ. ನಾವು ಸಂಸಾರಿಗರು, ಹೆಂಡತಿ ಮಕ್ಕಳು ಇದ್ದವರು. ನೀವೆಲ್ಲ ಒಬ್ಬಂಟಿಗರು. ಏನು ಮಾಡಿದರೂ ಚಂದವೇ."ಎಂದು

ಇವನ್ನೆಲ್ಲಾ ನೆನೆಯುತ್ತಿರುವ ರಾಧಾಕೃಷ್ಣನಿಗೆ, ಎದುರು ಹಾಲು ಬೆಳಕನ್ನು ಚೆಲ್ಲುತ್ತಿದ್ದ ಚಂದ್ರನು, ರಾಹುಗ್ರಸ್ತನಾಗಿ ಕಾಣಿಸುತ್ತಿದ್ದಾನೆ. ಅವನ ಮನಸ್ಸು ಮಂಕಾಗುತ್ತಾ ಬಂದಿದೆ. ತನ್ನೊಳಗೆ ತಾನು ಹುದುಗಿಕೊಂಡು, ಈ ನಿರಾಶೆಯ ಕಗ್ಗವಿಯಿಂದ ಪಾರಾಗುವ ಬಗೆ ಉಂಟೇ? ಹಿರಿಯರಿಂದ ನಿಷ್ಠುರ ಕೇಳಿದರೂ, ಹೆಮ್ಮೆಯಿಂದ ಅಲೆಯ ಬಲ್ಲ ದಿನ ಬಂದೀತೇ"—ಎಂದು ಚಿಂತಿಸುತ್ತಿದ್ದಾನೆ.

ಅವನ ಗೆಳೆಯರೋ—ಜಲಸ್ತಂಭನ ನಿರತರಾದ ಸದಾನಂದ, ಸಖಾರಾಮರು—ಅವರ ಸುಪ್ತವಿಚಾರಗಳು ಎದುರಿಗೆ ನಿಂತ ದೋಣಿಯನ್ನು ಕಂಡು ಜಾಗ್ರತವಾಗಿವೆ. ಆ ರಾತ್ರಿಯೇ ಕುಂದಾಪುರಕ್ಕೆ ಹೊರಡುವ ದೋಣಿ ಅದು. ರಾತ್ರಿ ಕುಳಿತರೆ ಬೆಳಗಾಗುವುದರೊಳಗೆ ಕುಂದಾಪುರಕ್ಕೆ! ಸ್ವಂತ ಮನೆಗೆ! ಮುಂದೆ ಈ ಭ್ರಾಂತಿಯಿಂದ ಬಿಡುಗಡೆ! ದೇಶಸೇವೆಯ ಭ್ರಮಣೆಗೆ ಮುಕ್ತಿ! ಅವರು ರಾಧಾಕೃಷ್ಣನ ಜತೆಗೆ ಮೂರು ತಿಂಗಳ ಹಿಂದೆ ಸೇರಿಕೊಂಡರು. ಒಂದು ಮಾನದವರಲ್ಲ. ಒಂದು ಊರಿನವರು; ಒಂದೇ ಉದ್ದೇಶಕ್ಕಾಗಿ ಕೂಡಿದವರು. ಬರಿಯ ಒಂದು ವರ್ಷದೊಳಗೆ ತಮ್ಮ ಊರನ್ನು ಜಾಗ್ರತಗೊಳಿಸಿ, ಜನತೆಯನ್ನು ಕ್ರಾಂತಿಮಾರ್ಗದಲ್ಲಿ

ಕಾಲಿರಿಸಲು ಸಿದ್ಧಮಾಡಲು ಪಣ ತೊಟ್ಟವರು. 'ವಿದ್ಯಾರ್ಥಿಗಳೇ, ಹಳ್ಳಿಗಳಿಗೆ ಹೋಗಿ' ಎಂಬ ಗಾಂಧಿಜಿಯ ಕರೆಗೆ ಕಿವಿಯೊಡ್ಡಿ, ತಮ್ಮ ಊರನ್ನು ಸೇರಿದವರು.

ಸಖಾರಾಮನು ಬಿ. ಏ. ಮುಗಿಸಿ ಶಾಲೆಯೊಂದರಲ್ಲಿ ದುಡಿಯುತ್ತಿದ್ದ-ಉಪಾಧ್ಯಾಯನಾಗಿ. ಮಂಗಳೂರಿಗೆ ಗಾಂಧಿಯವರು ಬಂದಾಗ, ಪರ ಸರಕಾರದ ದಾಸ್ಯಕ್ಕಿಂತ ಮಹಾಪರಾಧವಿಲ್ಲ—ಎಂದು ಮನಗಂಡು, ಕೆಲಸವನ್ನು ಬಿಟ್ಟನು. ಆಗ ತಿಂಗಳಿಗೆ ಯೋಚನೆಯಿಲ್ಲದೆ ಬರುತ್ತಿದ್ದ ಐವತ್ತು ರೂಪಾಯಿಗಳ ಗಳಿಮೆಗೆ ಎಳ್ಳು ನೀರಾಯಿತು. ಅಲ್ಲಿಂದ ಸ್ವದೇಶ ಅಲ್ಲವೆ ಸ್ವಗ್ರಾಮ ಸೇವೆಗಾಗಿ ಕಾಲಿಟ್ಟುದಾಯಿತು. ಅವನ ಗೆಳೆಯ ಸದಾನಂದ ಕಂಮ್ತಿಯು ಕುಂದಾಪುರದ ಶ್ರೀಮಂತ ಕುಟುಂಬಕ್ಕೆ ಸೇರಿದವನು. ಆತ ಮುಂಬಯಿಯಲ್ಲಿ ವೈದ್ಯಕೀಯ ವಿದ್ಯೆ ಓದುತ್ತಿದ್ದ. ಇನ್ನು ಬರಿಯ ಒಂದು ವರ್ಷದೊಳಗಾಗಿ ಎಂಥವರಿಗೂ ಸೂಜಿ ಚುಚ್ಚುವ ಅಧಿಕಾರ ಬರುತ್ತಿತ್ತು. ಆತ ತಂದೆಗೆ ತಿಳಿಸದೆ, ಶಾಲೆ ಬಿಟ್ಟು, ಮುಂಬಯಿಂದ ಮನೆಗೆ ಬಂದನು. ಊರಲ್ಲಿನ ಕಾಂಗ್ರೆಸು ಹುಲಿಯಾದ ತಂದೆಯ ಎದುರಿಗೆ ನಿಂತು, ಅವರ ಬೈಗಳು ಕೇಳಿ, ಅವರ ರೇಗಾಟಕ್ಕೆ ಅಹುತಿಯಾದನು. ಹೀಗೆ ಮೂವರು ಗೆಳೆಯರು ಕಲೆತರು. ನಿತ್ಯವೂ ಸಂಜೆ, ಕುಂದಾಪುರ ಮೈದಾನಿನಲ್ಲಿ ನಿಂತು ಸ್ವರಾಜ್ಯ ಸ್ವದೇಶಿಗಳ ಮೇಲೆ ಉಪನ್ಯಾಸ ಹೊಡೆದರು. ಊರ ಜನ ಮೂರನೆಯ ಬಾರಿಗೂ ಅದನ್ನೇ ಅದನ್ನೇ ಕೇಳಲು ತವಕಿಸಿ ಬಂದರು. ಈ ಮೂವರೂ-ಪೋಲಿಸು ತೋಳಗಳ ಬಾಯಿಗೆ ಎದುರಾದ ಕುರಿಗಳಂತೆ ಕಾಣಿಸಿತು—ಜನಕ್ಕೆ. ಎಲ್ಲರೂ ಅವರನ್ನು ಕನಿಕರಿಸುವವರೇ! "ಹೋಗಲಿ! ಹಿಂದುಸ್ಥಾನಕ್ಕೆ ಒಬ್ಬ ಗಾಂಧಿಯಾದರೆ ನಮ್ಮ ಕುಂದಾಪುರಕ್ಕೆ ಮೂವರು" ಎಂಬ ಹೆಮ್ಮೆ ತಾಳಿದರು. ಅವರ ಉಪನ್ಯಾಸಗಳನ್ನು ಮೆಚ್ಚಿ ಹೊಗಳಿದರು. ಹೀಗೆ ಅವರು ಒಂದು ತಿಂಗಳ ಕಾಲ ಉಪನ್ಯಾಸ ಮಾಡಿದರೂ, ಸರಕಾರ ಅವರನ್ನು ಬಂಧಿಸಲೇ ಇಲ್ಲ. ಹೀಗಾಗಿ ಅವರ ಕೀರ್ತಿಯು ಕೈನೀರಿಲ್ಲದೆ ಬಾಡುವ ಗತಿ ಬಂದಿತು.

ರಾಧಾಕೃಷ್ಣನು ಒಂದು ದಿನ—"ಹೇಗೂ ಇರಲಿ, ಈ ಪೇಟೆಯ ಜನರನ್ನು ನಂಬಿ ಯಾವ ಕೆಲಸವೂ ಆಗುವ ಹಾಗಿಲ್ಲ. ನಾವು ಗ್ರಾಮ ಸಂಚಾರ ಮಾಡಿ ಜನರನ್ನು ತಯಾರಿಸಬೇಕು. ನಾಳೆ ಸಾತಂತ್ರ್ಯ ಸಮ

ರಕ್ಕೆ ಜನರು ತಯಾರಾಗಬೇಕು. ಕಾಯಿದೆ ಭಂಗ, ಕಂದಾಯ ನಿರಾಕರಣೆ ಇವಕ್ಕೆಲ್ಲ" ಎಂದು ತೀರ್ಮಾನಿಸುತ್ತಲೇ, ಉಳಿದವರು 'ಹೊಂ' ಎಂದರು. ಗಾಂಧೀಜಿಯುವರು ಹಾಕಿಕೊಟ್ಟ ರಚನಾಕ್ರಮವಿತ್ತು. ಅದನ್ನು ಕುರಿತು ಉಪನ್ಯಾಸಿಸುವ ವಾಕ್ ಸಾಮರ್ಥ್ಯ ಮೂವರಿಗೂ ಇತ್ತು. ಉಳಿದ ಜನಕ್ಕಿಂತ ತಾವು ಹೆಚ್ಚಿನ ವಿದ್ಯಾವಂತರು ಎಂಬ ಹೆಮ್ಮೆ ಬೇರೆ ಸೇರಿತ್ತು. "ಅಜ್ಞಾನಿ ಗ್ರಾಮೀಣರನ್ನು ಚೇತರಿಸಿ ಬರುತ್ತೇವೆ" ಎಂದು ಹೊರಟರು. ಅವರ ಅಲೆದಾಟ ತೊಡಗಿ ಎರಡು ತಿಂಗಳಾದುವು. ಅದರ ಪರಿಣಾಮವೆಂದರೆ ಸಖಾರಾಮನಿಗೆ 'ತಾನು ಮಾಸ್ತರಿಕೆ ಬಿಟ್ಟು ಈ ಕೆಲಸಕ್ಕೆ ಮುಡುಕ್ಕಿದ್ದು ಮರುಳು' ಎಂದು ತೋರಿದುದು. ಸದಾನಂದ 'ಊರಿಗೆ ಏನು ಉಪಕಾರ ಮಾಡುವುದೇ ಇರಲಿ, ವ್ಯಾಸಂಗ ಮುಗಿದ ಬಳಿಕ ಮಾಡಿದರೇನೇ ಚನ್ನ. ಅನಂತರ ತಾನು ಹಳ್ಳಿಯಲ್ಲೊಂದು ಧರ್ಮಾಸ್ಪತ್ರೆಯನ್ನೇ ಇರಿಸ ಬಹುದಿತ್ತು' ಎಂದುಕೊಂಡುದು. ಅದಕ್ಕೆ ಸಖಾರಾಮ—"ಹಾಗಿದ್ದರೆ, ನಿನ್ನ ಓದು ಮುಗಿದ ಮೇಲೆ ಕುಂದಾಪುರದಲ್ಲಿ ನೀನು ಒಂದು ಡಿಸ್‌ಪೆನ್‌ಸರಿ ಇರಿಸು. ನಾನು ಒಂದು ರಾಷ್ಟ್ರೀಯ ಶಾಲೆಯನ್ನು ತೆರೆಯುತ್ತೇನೆ' ಎಂದನು. ಈ ಮಾತು ರಾಧಾಕೃಷ್ಣನ ತನಕ ಹೋಗಲಿಲ್ಲ. ಈ ಮಾತಿನ ಮೂಲ-ಅವರ ನಿರಾಶೆ, ದಣಿವುಗಳ ಫಲಗಳೆಂದು ಅವರಿಗೂ ತಿಳಿದಿದೆ.

"ನಿಜ, ಎಷ್ಟು ದಿವಸವೆಂದು ಊರ ಜನಗಳ ಅನ್ನಕ್ಕೆ ಬಿದ್ದಿರಬೇಕು. ಸಿಕ್ಕಿದಲ್ಲಿ ಊಟ ಮಾಡಿ, ಹೊಟ್ಟೆಯಂತು ತೀರಾ ಕೆಟ್ಟು ಹೋಗಿದೆ. ಆಹಾರ ಕಾಲಕ್ಕೆ ಇದ್ದರೆ ಉಂಟು, ಇಲ್ಲವಾದರೆ ಇಲ್ಲ. ಕಾಲುನಡೆಯಿಂದ ಸಾಗಿ ಸಾಗಿ ಜೀವ ಒಣಗಿ ಹೋಗಿದೆ. ಇವೆಲ್ಲಾ ಯಾವ ಪುರುಷಾರ್ಥಕ್ಕೆ? ನಮ್ಮ ಖರ್ಚಿಗೆ ಹಣ ಮನೆಯಿಂದಲೇ ಬರಬೇಕು. ಇತ್ತ ಇಷ್ಟು ಮಾಡಿ ಯಾವುದೇ ಹಳ್ಳಿಯಲ್ಲಿ ಸಭೆ ಕರೆದರೆ, ಜನರೂ ಬರವುದಿಲ್ಲ. ಹಣವೂ ಕೊಡುವುದಿಲ್ಲ. ಸ್ವದಸ್ಯತನವೂ ಹೆಚ್ಚುತ್ತಲಿಲ್ಲ. ಪ್ರತಿಯೊಬ್ಬರೂ "ನಿಮಗೇನು ಈ ಗ್ರಹಚಾರ" ಅನ್ನುವವರೇ! ಎಂದು ಒಂದೊಂದೇ ಅನುಭವವನ್ನು ನೆನೆಯುತ್ತಿದ್ದಾರೆ. ಆ ಇಬ್ಬರ ಮನಸ್ಸೂ ದೋಣಿಯ ಬೆನ್ನೇರಿ ಹೋಗುವುದರಲ್ಲಿತ್ತು. ಆ ಸಮಯಕ್ಕೆ ದೋಣಿಕಾರನೂ ಅಲ್ಲಿಗೆ ಬಂದನು.

"ಯಾರ ದೋಣಿ ಇದು? ಎಲ್ಲಿಗೆ ಹೋಗುವುದು?"

"ನಾನೇ, ನಿನ್ನೆ ಕುಂದಾಪುರದಿಂದ ಸವಾರಿ ತಂದಿದ್ದೆ. ಇವತ್ತು ಈಗ ಹೊರಟದ್ದು"

"ಈಗಲೇ?"

"ಈಗಂದರೆ ಈಗಲಲ್ಲ. ಬರತದ ನೀರು ಬಂದು ಇಳಿತ ತೊಡಗುವಾಗ; ಆಗ ಹೊರಟರೆ ಹೊತ್ತು ಮೂಡುವಾಗ ಕುಂದಾಪುರ. ನೀವು ಬರುವವರೇ?"

ಉತ್ತರವನ್ನು ಕೊಡಲು ಸಖಾರಾಮ ಅನುಮಾನಿಸಿದ. ಆದರೆ ಸದಾನಂದ 'ಮೂವರಿದ್ದೇವೆ ಬರುತ್ತೇವೆ' ಎಂದೇ ಬಿಟ್ಟನು. ಅವನ ಮನಸ್ಸು ತೀರ್ಮಾನಕ್ಕೆ ಬಂದಿತ್ತು. ಈ ಗ್ರಾಮೋದ್ಧಾರದ ಪೇಚಾಟ ಸಾಕೆಂದು ಅವನಿಗೆ ಅನಿಸಿತ್ತು. ಸಖಾರಾಮ ಮಾತ್ರ ಅನುಮಾನಿಸಿದ. 'ರಾಧಾಕೃಷ್ಣ ಏನು ತಿಳಿದಾನು?' ನಾಳೆಯ ದಿವಸ ಬೈಂದೂರಿಗೆ ಬರುತ್ತೇವೆಂದು ಕಾಗದ ಬರೆದಿದ್ದೇವೆ. ವರ್ತಮಾನ ಪತ್ರಗಳಲ್ಲಿ ಇನ್ನೂ ಕೆಲವು ದಿವಸಗಳ ಕಾರ್ಯಕ್ರಮ ಪ್ರಕಟವಾಗಿದೆ. ಈಗ ಹಿಂದೇಟು ಹಾಕುವುದೇ' ಎಂದನು.

ಸದಾನಂದ—'ನೀನು ಉಳಿದುಕೋ. ಅವನೊಡನೆ ಇರು. ನನಗೆ ನಾಕಾಯಿತು. ಹತ್ತು ತೆರನ ಊಟ ಉಂಡು ಆರೋಗ್ಯ ಕೆಟ್ಟಿದೆ. ಬಿಸಿಲಿನಲ್ಲಿ ನಡೆದು ನಡೆದು ಕಾಲುಚರ್ಮ ಸವೆದಿದೆ. ನನಗೆ ಈ ಕೆಲಸ ಬೇಡ. ನಾಳೆ ನಾನು ನನ್ನದೇ ಆದ ದಾರಿಯಲ್ಲಿ, ಬಡವರಿಗೆ ಸಹಾಯ ಮಾಡಿಯೇನು' ಎಂದು ಬಿಟ್ಟ.

ಅಷ್ಟರಲ್ಲಿ ರಾಧಾಕೃಷ್ಣ ಅಡುಗೆಯ ಪಾತ್ರೆಗಳನ್ನು ಕೆಳಕ್ಕಿಳಿಸಿ, ಎಲೆ ಹರವಿ 'ಮಹಾರಾಯರೇ, ನಿಮಗೆ ಊಟದ ಆಲೋಚನೆ ಇದ್ದ ಹಾಗೆಯೇ ಕಾಣುವುದಿಲ್ಲ. ಈ ಹೊತ್ತು ಒಳ್ಳೆಯ ಬೆಳುದಿಂಗಳಿದೆ. ಬೈಂದೂರಿಗೆ ಅರ್ಧ ಹಾದಿಯನ್ನು ರಾತ್ರಿಯೇ ನಡೆದು ಹೋಗಬಹುದು' ಎಂದನು. ಅವರಿಬ್ಬರು ಥಟ್ಟನೆ ಕೈ ಉಜ್ಜಿಕೊಂಡು ಹೊರಟರು. ನದಿಯ ದಂಡೆಯಲ್ಲಿ ಭೋಜನವಾಯಿತು. ತೊವ್ವೆಯೂ, ಅಂಬಟೊ, ಹುಳಿಯೂ—ಯಾವುದೂ ಅಲ್ಲದ ಎಲ್ಲವೂ ಆಹುದಾದ ಒಂದು ಓಗರವನ್ನು ಅನ್ನಕ್ಕೆ ಬಡಿಸಿಕೊಂಡು ಉಂಡರು. ಅಡುಗೆಯು ರುಚಿಯಾಗಿತ್ತು. ಮಿಗಿಲಾಗಿ ಹಸಿವು ಹೆದ

ಕ್ಕೆ ಏರಿತ್ತು. ಮೂವರೂ ತೃಪ್ತಿಯಿಂದ ಊಟ ಮಾಡಿದರು. ತನ್ನ ಗೆಳೆಯರಿಬ್ಬರೂ ದಣಿದವರೆಂದು ತಿಳಿದ ರಾಧಾಕೃಷ್ಣ, ನದಿ ನೀರಲ್ಲಿ ಪಾತ್ರೆಗಳನ್ನು ತೊಳೆದುಕೊಂಡು ಬಂದ. ಅವುಗಳನ್ನು ಅವರ ಮುಂದಿರಿಸಿ 'ಯಾರಿಂದ ತಂದಿರೋ ಅವರಿಗೆ ಕೊಟ್ಟು ಬನ್ನಿ' ಎಂದನು. ಅನಂತರ 'ಹೇಗೆ ಮುಂದಿನ ಪ್ರಯಾಣ? ನಿದ್ರೆಯೆಲ್ಲಿ? ಇಲ್ಲಿ ಮರಳಿನಲ್ಲೇ? ಅಥವಾ ಅಂಗಡಿ ಜಗುಲಿಯಲ್ಲೇ' ಎಂದು ಕೇಳಿದನು. 'ಮೊದಲು ಇಲ್ಲಿಂದ ಹೊರಡುವ' ಎಂದರು ಅವರು. ಮೂವರೂ ಹೊರಟು, ಪಾತ್ರೆಗಳನ್ನು ಒಡೆಯರಿಗೆ ಸಲ್ಲಿಸಿ, ಯಾವುದೋ ಒಂದು ಅಂಗಡಿಯ ಜಗುಲಿಯನ್ನೇರಿದರು. 'ಇವತ್ತು ಇನ್ನು ನಡೆಯುವ ಮಾತಿಲ್ಲ. ಏನಿದ್ದರೂ ನಾಳೆ ನೋಡುವ' ಎಂದನು ಸದಾನಂದ.

"ಹಾಗಿದ್ದರೆ ಮಲಗಿ ಬಿಡುವ" ಎಂದನು ಒಬ್ಬ ಗೆಳೆಯ. ಒರಿದು ಪಂಚೆಯಿಂದ ನೆಲದ ಧೂಳನ್ನು ಜಾಡಿಸಿ, ಪಂಚೆಯನ್ನು ಹಾಸಿದರು. ಉಳಿದ ಅರಿವೆಗಳಿಂದ ದಿಂಬನ್ನು ಮಾಡಿಕೊಂಡು ಮಲಗಿಕೊಂಡರು. ಹಿಂದಿನ ಯಾವತ್ತು ದಿವಸಗಳ ದಣಿವಿಗೆ ಆ ದಿನದ ಹದಿನೆಂಟು ಮೈಲಿಯ ಪ್ರಯಾಣ ತನ್ನ ದಣಿವನ್ನೂ ಸೇರಿಸಿತು. ಮಲಗಿದವರಿಗೆ ನಿದ್ರೆ ಬಂದಿತು, ಬಂದಿರಬೇಕು. ರಾಧಾಕೃಷ್ಣನಿಗೂ ಮುಂಚಿತವಾಗಿ ಸಖಾರಾಮ, ಸದಾನಂದರು ಗೊರಕೆ ಹೊರಡಿಸಿದರು. ಅವರನ್ನು ಮಾತಾಡಿಸಬಾರದೆಂದು ಆತ ಮೌನವಾಗಿದ್ದ. ಅವನ ಮನಸ್ಸು ಸ್ವಲ್ಪ ಸಮಯ ನಾಳಿನ ಕಾರ್ಯವನ್ನು ನೆನೆಯುತ್ತಿತ್ತು—ಬೈಂದೂರಿಗೆ ಹೋಗಬೇಕು. ಸಮನಾದ ದಾರಿ ಇದೆಯೋ? ಬಳಸಿ ಬಳಸಿ ಹೋಗುವ ಹಳ್ಳಿಯ ಹಾದಿ, ಐದು ಹೆರದಾರಿ ದೂರವೆನ್ನುತ್ತಾರೆ. ಐದೋ, ಆರೋ, ಎಂಟೋ ನಡೆದೇನೇ ತಿಳಿಯಬೇಕು. ನಾಳಿನ ಸಂಜೆ ಅಲ್ಲಿ ಸಾರ್ವಜನಿಕ ಸಭೆ. ತಾವೇ ಉಪನ್ಯಾಸಕರು. ಜನ ಸೇರಿಯೇ ಸೇರುತ್ತಾರೆ. ತಾವು ಹೋಗದೆ ವಿಧಿಯುಂಟೇ? ಆದರಿಂದ, ಅರ್ಧ ಹಾದಿಯನ್ನು ರಾತ್ರಿಯೇ ಕಳೆದಿದ್ದರೆ ತುಂಬಾ ಅನುಕೂಲವಿತ್ತು. ಬೆಳಗ್ಗೆ ಎದ್ದು ಹಗಲೆಲ್ಲ ಬಿಸಿಲಿನಲ್ಲಿ ನಡೆಯುವ ಪಾಡು ಯಾರಿಗೆ ಬೇಕು?—ಇವೇ ಯೋಚನೆಗಳು ಅವನಿಗೆ. ಆದರೆ ದಣಿವು ಅವನಿಗೂ ನಿದ್ರೆಯನ್ನು ತರಿಸಿಬಿಟ್ಟಿತು.

ರಾಧಾಕೃಷ್ಣಗೆ ನಿದ್ರೆಯಿಂದ ಎಚ್ಚರವಾಗುವಾಗ ಬೆಳಗಿನ ಜಾವ ಕಳೆದಿತ್ತು. ಹಕ್ಕಿಗಳ ಚಿಲಿಪಿಲಿ ಕೇಳಿಸುತ್ತಿತ್ತು. 'ಹಾ, ಕೂಡಲೇ ಕಾಲು ಕೀಳಬೇಕು' ಎಂದು ಯೋಚಿಸಿದ. ಹಿಂದಿನ ದಿವಸ ಊರವರಿಂದ ತಮ್ಮ ಪಯಣದ ದಾರಿಯನ್ನು ಆತ ತಿಳಿದುಕೊಂಡಿದ್ದ. ಹೀಗೆಂದು, ಎಚ್ಚರಗೊಂಡು ಆಚೀಚೆ ನೋಡಿದರೆ, ಅವನ ಗೆಳೆಯರು ಅದೃಶ್ಯರಾಗಿದ್ದಾರೆ. 'ನನಗಿಂತ ಮುಂಚಿತವಾಗಿ ಎದ್ದು ನದಿಗೆ ಹೋಗಿರಬೇಕು' ಎಂದು ಎಣಿಸಿ ಅಲ್ಲಿಗೆ ಹೋದನು. ಅರಸಿದನು; 'ಸದಾ' 'ಸಖಾ' ಎಂದು ಕೂಗಿ ಕೂಗಿ ಕರೆದನು. ಆದರೆ ಅವರೆಲ್ಲಿ? ಅಲ್ಲಿಂದ ತಿರುಗಿ ಮಲಗಿದ ತಾವಿಗೇನೇ ಬಂದನು. ಇನ್ನೊಮ್ಮೆ ನದಿಗೆ ಓಡಿದನು. ಬೆಳಗಾಗುವ ಹೊತ್ತಿಗೆ —ಆ ಗೆಳೆಯರು ತನ್ನನ್ನು ಬಿಟ್ಟು ರಾತ್ರಿ ದೋಣಿಯಲ್ಲಿ ಕುಳಿತು ಹೊರಟೇ ಹೋಗಿರಬೇಕೆಂಬ ಅನುಮಾನ ಖಚಿತವಾಯಿತು. ದೋಣಿಯವನೊಡನೆ ಅವರು ಮಾತನಾಡುತ್ತಿದ್ದುದು ಅವನಿಗೆ ಕಾಣಿಸುತ್ತಿತ್ತು. ಆದರೆ ಅಷ್ಟೊಂದು ಸ್ನೇಹಿತರಾದವರು, ಸುದ್ದಿ ತಿಳಿಸದೆ ಓಡುವುದುಂಟೇ-ಎಂದು ವಿಸ್ಮಯವನ್ನು ತಾಳಿದನು. ವಿಸ್ಮಯದಿಂದ ಅವರನ್ನು ಕುರಿತಾದ ತಿರಸ್ಕಾರವು ಪ್ರಾಪ್ತವಾಯಿತು.

ಈ ತಿರಸ್ಕಾರದಿಂದ ಫಲವೇನು? ಅವನ ಕೆಲಸವನ್ನು ಮಾಡುವವರಾರು? ತಾನು ಒಬ್ಬನಾದರೂ ಸಂಜೆಯೊಳಗೆ ಬೈಂದೂರನ್ನು ಸೇರಬೇಡವೇ? ಆ ಯೋಚನೆ ಬರುತ್ತಲೆ ಮೋರೆ ತಗ್ಗಿಸಿಕೊಂಡು, ರೈಲು ತಪ್ಪಿತೆಂದು ಓಡುವ ಪಯಣಿಗನಂತೆ, ತಾನೂ ಓಡತೊಡಗಿದನು. ಅವನ ಮನಸ್ಸಂತೂ ಎಲ್ಲೆಲ್ಲಿಗೋ ಓಡುತ್ತಿತ್ತು.



# ಎರಡನೆಯ ಅಧ್ಯಾಯ.

ಆ ದಿನ ಉದಯಿಸುವ ಸೂರ್ಯ ಉಲ್ಲಾಸದಿಂದಲೇ ಉದಯಿಸಿದನು. ಆದರೆ ಅವನ ಉತ್ಸಾಹ ರಾಧಾಕೃಷ್ಣನಿಗೆ ಬರುವಂತಿತ್ತೇ? ಈ ಮೂರು ತಿಂಗಳ ಕಾಲದ ಅವನ ಗ್ರಾಮ ಪರಿಭ್ರಮಣೆಯ ಜೀವನದಲ್ಲಿ- ಈ ದಿನ ಕವಿದ ನಿರಾಶೆ, ನೋವುಗಳು ಎಂದೂ ಬಂದಿರಲಿಲ್ಲ. ಮೂವರೂ ಸೇರಿ ಉಚ್ಚ ಧ್ಯೇಯದಿಂದ ಪ್ರೇರಿತರಾಗಿ, ತಮ್ಮ ಜನರ ಉದ್ಧಾರಕ್ಕೋ, ಸೇವೆಗೋ, ಹೊರಡುತ್ತಿದ್ದೇವೆ—ಎಂಬ ಮನೋಭಾವವೆತ್ತ? ಈಗಿನ ದುಃಸ್ಥಿತಿಯೆತ್ತ? ಸದಾನಂದ ಸಖಾರಾಮರು ತನಗಿಂತ ಕಡಿಮೆ ತಿಳಿದವರೇನು? ಸಖಾರಾಮ ತನ್ನ ಮಾಸ್ತರಿಕೆಯನ್ನು ಬಿಟ್ಟು ಬಂದುದು ಸುಳ್ಳೇ? ಅವನ ತ್ಯಾಗಕ್ಕೆ ಬೆಲೆಯಿಲ್ಲವೇ? ಇನ್ನು ಗೆಳೆಯ ಸದಾನಂದನ ವಿಚಾರ. ಆತ ಈ ಉದ್ಯಮಕ್ಕೆ ಕೈ ಹಾಕುವ ಆವಶ್ಯಕತೆ ಇರಲಿಲ್ಲ. ಮನೆಯವರು ತುಂಬಾ ಅನುಕೂಲವಂತರು. ಶ್ರೀಮಂತರ ಹುಡುಗನಾದುದರಿಂದ ಅದರ ವರ್ಚಸ್ಸು ಸಮಾಜದಲ್ಲಿ ಇದ್ದೇ ಇದೆ. ಓದಿನಲ್ಲೂ, ತಿಳಿವಿನಲ್ಲೂ, ಕಡಿಮೆಯವನಲ್ಲ. ತಾನು ಬರಿಯ ಪತ್ರಿಕೆಗಳ ಓದಿನಿಂದ ಆಯುಷ್ಯ ಕಳೆದವನು. ಆತ ಹಾಗೇನು? ಮುಂಬಯಿಯಲ್ಲಿದ್ದು, ಅನೇಕ ಮುಖಂಡರ ದರ್ಶನ ಲಾಭ ಪಡೆದವನು. ಗಾಂಧೀ, ಮೋತಿಲಾಲ್, ಲಜಪತ ರ್‍ಾಯ, ವಲ್ಲಭ ಬ್ಯಾ, ಸಿ ಆರ್. ದಾಸ್ ಇವರಂತಹ ಗಣ್ಯವ್ಯಕ್ತಿಗಳನ್ನು ಕಂಡವನು, ಕೇಳಿದವನು. ತನ್ನ ಎದೆಯನ್ನು ಅವರ ಪ್ರೇರಣೆಗಳಿಗೆ ತೆರೆದವನು. ಅದರ ಫಲಿತಾಂಶವಾಗಿ, ಇನ್ನೊಂದು ವರ್ಷ ಓದಿರುವಾಗಲೇ ಓದನ್ನು ನಿಲ್ಲಿಸಿ ಜನತೆಯ ಸೇವೆಗೆ ಬಂದಿದ್ದಾನೆ.

ಸದಾನಂದನ ಅಲ್ಪ ಪರಿಚಯ ರಾಧಾಕೃಷ್ಣನಿಗೆ ಆದರೂ, ಅವರೊಳಗೆ ಅಪಾರ ಸ್ನೇಹ ಬೆಳೆದಿದೆ. ಆತ ಮಾತಿನಲ್ಲಿ ಕಪಟವಿಲ್ಲದವನು -ಎಂದು ತಿಳಿದುಕೊಂಡಿದ್ದಾನೆ. ಅವನ ಉತ್ಸಾಹ ಅಪರಿಮಿತವಾದುದು 'ಮುಂದೆ ತಾನು ಜನರ ಸಲುವಾಗಿ ಶಾಲೆಯನ್ನು ತೆರೆಯಬೇಕು, ಆಸ್ಪತ್ರೆಯನ್ನು ತೆರೆಯಬೇಕು, ಪಂಚಮರ ಉನ್ನತಿಗಾಗಿ ಒಂದು ಆಶ್ರಮವನ್ನು ತೆರೆಯಬೇಕು' ಎಂಬಿವೇ ಸವಿಗನಸುಗಳನ್ನು ರಾಧಾಕೃಷ್ಣನ ಮುಂದೆ

ಹಂಚಿ ಉಂಡಿದ್ದ. ಅಂಥ ಗೆಳೆಯನು—ಇಂದು, ಹೀಗೆ, ಸುದ್ದಿಯಿಲ್ಲದೆ ತನ್ನನ್ನು ಬಿಟ್ಟು ಓಡಿದ್ದಾನೆ—ಎಂಬ ಯೋಚನೆಯು ಅವನ ಮನಸ್ಸಿಗೆ ತುಂಬ ಭಾರವಾಗಿ ಕಾಣಿಸುತ್ತಿದೆ. 'ಇಲ್ಲ, ಅವರು ಬಯಲಿಗೋ, ನದಿಗೋ, ಅಲೆದಾಡಲು ಹೋಗಿರಬೇಕು. ಏನೋ ಮನಸ್ಸಿನ ಸೆಳೆತಕ್ಕೆ ಗುರಿಯಾಗಿ, ದೂರ ಸರಿದು ದಾರಿ ತಪ್ಪಿತೋ ಏನೋ. ತಾನು ಅವರನ್ನು ಬಿಟ್ಟು ಈ ನಾಲ್ಕು ಮೈಲು ದೂರ ಬಂದುದೇ ತಪ್ಪಾಯಿತು. ಅವರು ಮರಳಿ ಬಂದು ತನ್ನನ್ನು ಹುಡುಕಲಾರರೆ? ಹುಡುಕಿದರೆ ಏನು ಗತಿ? ತಾನು ತಾಳ್ಮೆಗೆಟ್ಟು ಅಷ್ಟು ಬೇಗನೆ ಹೊರಡಬಾರದಿತ್ತು. ಹೊತ್ತು ಮೂಡುವ ತನಕವಾದರೂ ಕಾದಿದ್ದು-ಅವರು ಇಲ್ಲ-ಎಂಬುದನ್ನು ಖಂಡಿತ ಮಾಡಿಕೊಳ್ಳಬೇಕಿತ್ತು.' ಈ ಯೋಚನೆಯಿಂದ ಅವನ ಹೆಜ್ಜೆಗಳು ತಡೆದವು; ಹಿಂದಿರುಗಿದವು ಇನ್ನೊಮ್ಮೆ ವಂಡಸೆಯ ತನಕ ದಾರಿ ತುಳಿಯುವ ನಿಶ್ಚಯ ಮಾಡಿದುವು. ಅವರಿಂದಲೂ ಸಮಾಧಾನವಿಲ್ಲ. ಏಕೆ ಮರಳಬೇಕು? ತನ್ನ ಕರ್ತವ್ಯ ತಾನು ಮಾಡುತ್ತಿದ್ದೇನೆ? ತನ್ನೊಬ್ಬನನ್ನು ಅವರು ಬಿಟ್ಟು ಹೋದುದು ಸಮನೇ--ಎಂದು ತೋರುತ್ತಿದೆ. ಅಲ್ಲದೆ ಆತ ತುಳಿದ ದಾರಿ ನಾಲ್ಕು ಮೈಲು ದೂರ ತನ್ನ ಹುಚ್ಚಾಟದಿಂದ ಇನ್ನೀದ ಹಾದಿಯನ್ನು ಎಂಟು ಮೈಲಿನಷ್ಟು ಹೆಚ್ಚಿಸಿಕೊಳ್ಳಬಾರದು-ಎಂದೂ ತೋರಿತು. ಅವನ ಕಾಲುಗಳು ತಿರುಗಿದುವು ಬೈಂದೂರನ್ನೇ ಕಾಣುವೆವು ಎಂದು ಪಟತೊಟ್ಟು ಹೊರಟುವು.

ಹೋಗಹೋಗುತ್ತ ಆತನ ಮನಸ್ಸಿನಲ್ಲಿ ಇನ್ನೊಂದು ರೋಷದ ಸಂಗತಿಯು ಮೊಳೆಯಿತು. 'ಇಲ್ಲ, ಅವರಿಬ್ಬರೂ ತೋರುವಷ್ಟು ನಿಷ್ಕಪಟಿಗಳು ಅಲ್ಲ. ಅವರ ಮಾತಿಗೆ, ಎಚ್ಚರ ತಪ್ಪಿ ಮೋಸಹೋದ ಮರುಳನು ನಾನು. ಅಲ್ಲದೆ ಹೋದರೆ—ಕೊಲ್ಲೂರಿನಿಂದ ಬೈಂದೂರಿಗೆ ಹೋಗಲು ವಂಡಸೆಗೆ ಬರಬೇಕಿತ್ತೇ? ನೆಟ್ಟಗಿನ ಹಾದಿ ಇರಲಿಲ್ಲವೇ? ಆ ದಾರಿ ಆರೇ ಆರು ಹರದಾರಿ ದೂರ. ತಾವು ಅಷ್ಟು ನಡೆದು, ಇನ್ನೂ ಅಷ್ಟೇ ಹಾದಿ ತುಳಿಯುವಂತೆ ವಂಡಸೆಗೆ ಬರಬೇಕೆ? ಈ ಹಾದಿಯ ಸೂಚನೆ ಮಾಡಿದವನು ಸದಾನಂದನಲ್ಲವೆ! ಆತನೇ 'ವಂಡಸೆಗೆ ಬರಿ ಆರು ಮೈಲು. ಅಲ್ಲಿಂದ ಮುಂದೆ ಎತ್ತಿನ ಬಂಡಿಗಳು ಸಿಗುತ್ತವೆ.' ಎಂಬ ಆಸೆ ತೋರಿಸಿದವ. ಆರು ಮೈಲು ಹದಿನಾರಾಗಲು ಯಾರನ್ನೋ ಶಪಿಸಿದ. ವಂಡಸೆಯಿಂದ ಬೈಂದೂ

ರಿಗೆ ಗ[illegible]ಗಳೇ! ಈ ಮಾತು ಕೇಳಿ ಊರವರು ನಕ್ಕಾಗ, ಆತ ಸುಮ್ಮನಿದ್ದ. ತಮ್ಮ ನಿಶ್ಚಿತ ಪ್ರವಾಸವನ್ನು ಕತ್ತರಿಸಿ ಸ್ವನಗರವಾದ ಕುಂದಾಪುರವನ್ನು ಸೇರಲು ಮಾಡಿದ ಒಳಸಂಚಲ್ಲವೆ ಇದು.' ಆತನ ಮನಸ್ಸು ಮತ್ತಷ್ಟು ನೊಂದಿತು. ತನ್ನ ಮೂರ್ಖತನಕ್ಕೆ, ನಂಬುಗಗೆ ತಾನೇ ದೂರಿಕೊಳ್ಳು ವಂತಾಯಿತು.

ಯೋಚನೆಗಳು ಕುಣಿಯುತ್ತಿರುವಷ್ಟು ವೇಗದಿಂದ ಅವನ ಕಾಲು ಗಳು ಚಲಿಸಲಿಲ್ಲ. ಹೋಗುವ ದಾರಿ ಯಾವುದೆಂದು ಅವನಿಗೂ ತಿಳಿವಿನ ದಲ್ಲ. ಈಗ ತುಂಬ ಸವೆದ ದಾರಿಯೇ ಅವನ ದಾರಿ. ತಾನು ಪಡು, ಬಡ ಗಿನ ನಡುವೆ ನಡೆದರೆ ಕಂಭದಕೋಣೆಯನ್ನೋ, ಕಾಲ್ತೋಡನ್ನೋ ಸೇರ ಬಹುದು. ಅಲ್ಲಿಂದ ಬೈಂದೂರು ಸಮೀಪ-ಎಂಬ ಕಲ್ಪನೆಯಿಂದ ನಡೆಯು ತ್ತಿದ್ದಾನೆ. ಗುಡ್ಡ, ಕಾಡು, ಬಯಲಿನ ಸೆರಗುಗಳನ್ನು ತುಳಿಯುತ್ತ, ಅಲ್ಲೊಮ್ಮೆ ಇಲ್ಲೊಮ್ಮೆ ದೊರೆಯುವ ಮನುಷ್ಯರೊಡನೆ ಕೇಳಿಕೊಂಡು, ಮುಂದಣ ಗುರಿಯನ್ನು ಹುಡುಕುತ್ತಿದ್ದಾನೆ. ಪರಿಚಯವಿಲ್ಲದೆ, ಕಾಲು ದಾರಿಗಳನ್ನು ನಂಬಿ, ಎಡವಿ, ನಡೆದು ಶರೀರದ ಶ್ರಮ ಅಧಿಕವಾಯಿತು. ಅವನ ಮುಖ, ಮೈಗಳು ಬೆವರಿಂದ ತೊಯ್ದುವು. ದಣಿವಾರಿಸುವೆನೆಂದು ಹಾದಿಯ ಬಳಿಯ ಒಂದು ಮರದ ಬಳಿ ಕುಳಿತನು. ಹೆಗಲಿಗೆ ಜೋತಿದ್ದ ಚೀಲವನ್ನು ತೆಗೆದು, ಒಂದು ಪಂಚೆಯನ್ನು ಹೊರಕ್ಕೆ ತೆಗೆದನು. ಅದರಿಂದ ಮುಖ ಮೈಗಳನ್ನು ಉಜ್ಜಿಕೊಂಡನು. ಹೇಳಲಾರದ ಬಾಯಾರಿಕೆ ಬಾಧಿ ಸುತ್ತಿತ್ತು. ಅವನು ಕುಳಿತುದು ಒಂದು ಕುರುಚಲು ಕಾಡು. ಅವನ ಎದುರಿಗೆ ಒಂದು ದೊಡ್ಡ ಮಾವಿನ ಮರ. ಮನುಷ್ಯರ ಭೀತಿಯಿಲ್ಲದೆ ಅದರ ಮೇಲೆ ಕುಳಿತು ಮಾವಿನ ಹಣ್ಣುಗಳನ್ನು ತಿನ್ನುತ್ತಿದ್ದ ಮುಸುವಗಳನ್ನು ನೋಡುತ್ತಾ ಕುಳಿತುಕೊಂಡನು. ಅಲ್ಲಿಂದ ದೃಷ್ಟಿ ಸರಿಯಿತು. ಆಗ ಕಾಣಿ ಸಿದ್ದೊಂದು ನೆಲ್ಲಿಯ ಮರ. ಹೋಗಿ, ಕಲ್ಲೆಸೆದು, ಹತ್ತೆಂಟು ಕಾಯಿಗಳನ್ನು ಉದುರಿಸಿದನು. ಕವುಳಿಗೆ ಒಂದನ್ನು ತುರುಕಿಸಿಕೊಂಡು ಮೊದಲ ಸ್ಥಾನ ವನ್ನು ಸೇರಿದನು. ಕುಳಿತಲ್ಲಿಂದಲೇ ಮೇಲೆ ನೋಡಿದನು. ಇನ್ನೆರಡು ಗಳಿಗೆಯಲ್ಲಿ ಸೂರ್ಯನು ನೆತ್ತಿಗೆ ಬರುತ್ತಾನೆ. ತಾನು ಕುಳಿತ ನೆಲ, ಸವೆದ ಹಾದಿಯ ಬಳಿಯದು. ಕುಳಿತು ಅರೆ ತಾಸಾದರೂ ಜನರಾರೂ ದೃಷ್ಟಿಗೆ ಬೀಳಲಿಲ್ಲ. ಸಮೀಪದಲ್ಲಿ ಹೊಲ, ಹೆಕ್ಕಲುಗಳು ಕಾಣಿಸಲಿಲ್ಲ. ಅಷ್ಟು

ದೂರಕ್ಕೂ ಒಂದೇ ಒಂದು ಅಂಗಡಿ ಇದ್ದಿರಲಿಲ್ಲ. ಹಾಗಿರಲು ಮಧ್ಯಾಹ್ನದ ಗ್ರಾಸ? ನೆಲ್ಲಿಯ ಕಾಯಿ. ಸಂಜೆಯೊಳಗೆ ತಾನು ಬೈಂದೂರನ್ನು ಸೇರುವ ಸಂಭವವಿದೆಯೇ-ಎಂಬ ಅನುಮಾನವಾಯಿತು. ಚೀಲವನ್ನು ಕೆದಕಿದನು. ಒಳಗಿನ ಒಡವೆಗಳನ್ನೂ ನೆಲಕ್ಕೆ ಸುರುವಿದನು. ಒಂದೆರಡು ಅರಿವೆ, ಸಾಬೂನು, ಕಾಗದ, ಪೆನ್ಸಿಲು, ತಕಲಿ, ಹತ್ತಿ-ಇಷ್ಟು ಇದ್ದುವು. ಒಳಗಿರಿಸಿದ ನೋಟು ಬೂಕಿನ ನೆನಪಾಯಿತು. ಅದರಲ್ಲಿ ತಮ್ಮ ಕಾರ್ಯಕ್ರಮದ ವಿವರ, ಪ್ರವಾಸದ ವಿವರ ಬರೆದಿತ್ತು. ಈಗ ಅದೇನೆ ಕಾಣಿಸುತ್ತಲಿಲ್ಲ. ಅದು ಸದಾನಂದ ಕೈಯಲ್ಲೋ, ಸಖಾರಾಮನ ಕೈಯಲ್ಲೋ ಉಳಿದಿರಬೇಕು. ಪುಸ್ತಕ ಮರೆಯಾದುದರ ಜತೆಗೆ, ಇತರ ನೆನಪುಗಳೂ ಬಂದುವು. ರಶೀದಿ ಪುಸ್ತಕ, ವಂತಿಗೆ ಪಟ್ಟಿ, ಕೂಡಿಸಿದ ಹಣ-ಎಲ್ಲವೂ ಗೆಳೆಯರಲ್ಲಿ ಉಳಿದಿದ್ದುವು. ಅವನಿಗೀಗ ಬರಿಗೈ! ವಿಷಕೊಳ್ಳುವೆನೆಂದರೆ ಮೂರು ಕಾಸಿಲ್ಲ. ತುಟಿ ನಡುಗಿತು; ಕಣ್ಣು ಅರಳಿತು; ಎದೆ ಬಡಿಯಿತು. ಬಟ್ಟೆ ಜಾಡಿಸಿದನು. ಹತ್ತಿ ಹಿಂಜಿ, ತಕಲಿಗಳು ಬಿದ್ದುವು. 'ಇದಾದರೂ ಉಂಟಲ್ಲ.' ಜಪಸರ ಹಿಡಿದು, ದಿನದ ನೂರೆಂಟು ನಮಃಶಿವಾಯ ಮುಗಿಸುವ ಮುದುಕಿಯರ ಲೆಕ್ಕದಂತೆ, ಈತ ದಿನದ ನೂರು ಗಜ ನೂಲು ಮಾಡಲು ಕುಳಿತುಕೊಂಡನು.

ಕಣ್ಣು ಬಾಡಿ ತಕಲಿ ನಿಂತು, ನೂಲು ಕಡಿಯಿತು. ಕರ್ತವ್ಯ ಭಂಗವಾಯಿತು. ಮೈ ಎಚ್ಚರ ಹೊರಟು ಹೋಗಿತ್ತು. ಅವನಿರುವಲ್ಲಿಗೆ ಕುತೂಹಲ ಭರಿತವಾದ ಕಪಿಯೊಂದು ಬಂದು, ಮಗ್ಗುಲಲ್ಲಿ ರಾಶಿ ಹಾಕಿದ ನೆಲ್ಲಿಕಾಯಿಯ ವಿಷಯವಾಗಿ ದೀರ್ಘಾಲೋಚನೆ ಮಾಡುತಿತ್ತು. ಪರೀಕ್ಷೆಗೋ ಏನೋ—ಅದು 'ಕುಟುರು' ಎಂದು ಕಿರುಚಿತು. ರಾಧಾಕೃಷ್ಣ ಎಚ್ಚೆತ್ತ. ಯಾರ ಕರೆಗೋ ಎದ್ದವರಂತೆ 'ಆ' ಎಂದು ಕಣ್ಣು ತೆರೆದನು. ಕಪಿ ಅಲ್ಲಿಂದ ಓಡಿ ಬಿಟ್ಟಿತು. "ಹುಂ, ನನ್ನನ್ನು ಎಚ್ಚರಿಸಲು ದೇವರೇ ಈ ಕಪಿಯನ್ನು ಕಳುಹಿಸಿರಬೇಕೆ"ಂದು ಆತನಿಗೆ ತೋರಿತು. ಮುಂದಣ ಹಾದಿ ತುಳಿಯಬೇಡವೇ? ಅಲ್ಲಿಯೇ ಎಷ್ಟೆಂದು ಕುಳಿತಿರಲಿ. ಇರುವ ಬಟ್ಟೆಗಳನ್ನು ತಲೆಗೆ ಸುತ್ತಿಕೊಂಡು, ಬಿಸಿಲಿಗೆ ರಕ್ಷಣೆ ಮಾಡಿಕೊಂಡು, ಚೀಲಕ್ಕೆ ನೆಲ್ಲಿಕಾಯಿ, ತಕಲಿ, ಹತ್ತಿಗಳನ್ನು ತುಂಬಿಸಿಕೊಂಡು ಎದ್ದು ಹೊರಟನು. ನಾಲ್ಕು ಹೆಜ್ಜೆ ಹೋಗುವಷ್ಟರಲ್ಲಿ ಮೊಲದ ಶಿಕಾರಿಗೆ ಹೊರಟ ಹಳ್ಳಿಯ ಕುಡುಬಿಯೊ

ಬ್ಬನ ಭೇಟಿಯಾಯಿತು ಅವನಿಗೆ. ಬಲಿಯಾದ ಮೊಲ ಒಂದರ ಕಿವಿಯನ್ನು ಹಿಡಿದು ಹಿಂದಿರುಗುತ್ತಿದ್ದ. ಆತನೊಡನೆ ರಾಧಾಕೃಷ್ಣ "ಕಾಲ್ರೋಡು ಎಲ್ಲಿ? ಇನ್ನು ಕಂಭದಕೋಣೆಗೆ ಎಷ್ಟು ದೂರ? ಬೈಂದೂರಿಗೆ ಸಮೀಪ ಹಾದಿ ಇದೆಯೇ" ಎಂದು ವಿಚಾರಿಸಿದನು. ಆತನು ಬಿಸಿಲಿಗೆ ಹಣ್ಣಾದ ಈ ವ್ಯಕ್ತಿಯನ್ನು ಕನಿಕರಿಸಿದನೋ ಏನೋ. "ಬನ್ನಿ, ನನಗೆ ದೂರಗೀರ ಗೊತ್ತಿಲ್ಲ. ಧನಿಗಳ ಮನೆಗೆ ಹೋಗುವ. ಅವರು ಎಲ್ಲವನ್ನು ಹೇಳಿಯಾರು. ಜನವನ್ನು ಕೊಟ್ಟಾರು" ಎಂದು ಈತನನ್ನು ಕರೆದುಕೊಂಡು ಹೋದ. ಅವನನ್ನು ಮುಂದಿರಿಸಿಕೊಂಡು ಹೋಗೋಣವೆಂದರೆ, ಅವನು ಮುಂದಾಗಲಾರ. ಇವನೇ ಮುಂದಾಗಿ, ಆಗಾಗ ಕತ್ತು ಬಳುಕಿಸಿ—"ಇದು ಯಾವ ಊರು? ನಿನ್ನ ಧನಿಗಳ ಹೆಸರೇನು? ಅವರ ಮನೆಗೆ ಎಷ್ಟುದೂರ?" ಎಂದು ಕೇಳುತ್ತಿದ್ದ. ಆತ ಪ್ರತಿಯಾಗಿ ನೀವು ಯಾರು? ಎಂದ.

"ಮಣಿಗಾರರೇ, ಸರಕಾರದ ಜನವೇ, ಖಾಸಗಿಯೆ" ಎಂದು ಕೇಳಿದ. ರಾಧಾಕೃಷ್ಣನೆಂದುದು ಒಂದೂ ಆತನಿಗೆ ತಿಳಿಯುವಂತಿರಲಿಲ್ಲ. "ಈಗ ಗಾಂಧೀ ಅಂತಾರಲ್ಲಾ, ನೀವು ಅವರ ಕಡೆಯವರೇ? ಅವರ ಕಡೆಗೆ ಸೇರಿದರೆ ಸರಕಾರಕ್ಕಿಂತ ಹೆಚ್ಚಿಗೆ ಸಂಬಳ ಕೊಡುತ್ತಾರೆಯೇ? ನಾವೂ ಗಾಂಧಿ ಪಂಗಡ ಸೇರಲುಬಂದೀತೇ" ಎಂದು ಪ್ರಶ್ನೆ ಮಾಡುತ್ತಿರುವ ತನ್ನ ಸ್ವದೇಶ ಬಾಂಧವನ ವಿದ್ವತ್ತಿಗೆ ರಾಧಾಕೃಷ್ಣ ನಗುತ್ತಿದ್ದಾನೆ. ಅಂಥವನಿಗೆ ಏನು ತಿಳಿದೀತು-ಸ್ವರಾಜ್ಯದ ಹೋರಾಟದ ವಿಚಾರ! 'ಜನರನ್ನು ಅಜ್ಞಾನದಲ್ಲಿ ಇರಿಸಿದ ಇಂಗ್ಲಿಷರು ಹೋಗದೆ ನಮಗೆ ಸುಖವಿಲ್ಲ' ಎಂದು ಈತನೆಂದರೆ—'ಯಾರು ಇಂಗ್ಲಿಷರು? ಎಂದು ಕೇಳುತ್ತಾನೆ ಕುಡುಬಿ. "ಸರಕಾರದವರು" ಎಂದರೆ—"ಯಾರ್‍ಯಾರು ಬಂದು ತಿನ್ನಲಿಕ್ಕಿಲ್ಲವೇ ನಮ್ಮನ್ನು" ಎನ್ನುತ್ತಾನೆ ಆತ. "ಇಲ್ಲ, ನಿನಗೆ ತಿಳಿಯದು. ಉಪ್ಪಿಗೆ ಸುಂಕ ಹಾಕಿದ್ದಾರೆ, ಹೆಂಡ ಲಿಲಾವು ಮಾಡುತ್ತಿದ್ದಾರೆ. ನಮ್ಮ ದುಡ್ಡನ್ನು ತಮ್ಮ ದೇಶಕ್ಕೆ ಒಯ್ಯುತ್ತಿದ್ದಾರೆ," ಎಂದರೆ, ಅವನಿಗೆ ಒಂದೂ ಅರ್ಥವಾಗುವಂತಿರಲಿಲ್ಲ. ಉಪ್ಪಿಗೆ ಸುಂಕ ಹಾಕಬಾರದಿತ್ತು. ಅದು ಧರ್ಮಕ್ಕೇನೇ ಸಿಗಬೇಕು—ಎಂಬುದಕ್ಕೆ ಒಪ್ಪಿಗೆ. ಹೆಂಡಕುಡಿಯದೆ ಹೋದರೆ ಮನುಷ್ಯ ಬದುಕಲಾರ ಎಂಬ ತೀರ್ಮಾನ ಅವನದು. ಇನ್ನು ಪರದೇಶಿ ವಸ್ತ್ರದ ಬಹಿಷ್ಕಾರ-ಹೇಗೆ ಸಾಧ್ಯ?

ಕೈಯಿಂದ ನೂಲುಮಾಡಿ ಪೂರೈಸಿತೇ-ಎಂಬ ಅನುಮಾನ. ವಿದೇಶದ ಸಕ್ಕರೆಯ ಬಹಿಷ್ಕಾರ, ಓಲೆ ಬೆಲ್ಲ ತಿನ್ನುವ ಅವನಿಗೆ ಬೇಕಿರಲಿಲ್ಲ.

ಹೀಗೆ ಹಾದಿಯಲ್ಲೇ ರಾಧಾಕೃಷ್ಣ ರಾಷ್ಟ್ರೀಯ ಶಿಕ್ಷಣ ಪ್ರಾರಂಭಿಸಿದ. "ನೋಡು, ಹೀಗೆ ನಾವೇ ನೂಲು ಮಾಡಿ, ನಾವೇ ಬಟ್ಟೆ ನೆಯ್ದು, ನಾವೇ ಉಟ್ಕೊಂಡರೆ ಸ್ವರಾಜ್ಯ ಖಂಡಿತ" ಎನ್ನುತ್ತ ಅವನ ಮುಂದೆ ಮಾರ್ಗದರ್ಶಕನಾಗಿ ಸಾಗಿದನು ಅವನು. ಕುಡುಬಿಯು ಯೋಚಿಸುತ್ತ "ನಮ್ಮ ಒಡೆಯರು ಜನಿವಾರ ಮಾಡಲು ದಿನವೆಲ್ಲವೂ ನೂಲುತ್ತಾರೆ. ನಾವು ಬಲೆಗೆ ಸಣಬು ನೂಲು ಮಾಡುತ್ತೇವೆ ಇದೊಂದೇನು ಹೆಚ್ಚು ಇದನ್ನು ಕಂಡು ಇಂಗ್ಲಿಷರು ಹೆದರುತ್ತಾರೆಯೇ" ಎನ್ನುತ್ತಾನೆ ಕುಡುಬಿ. ಆದರೂ ರಾಧಾಕೃಷ್ಣ ಅವನಿಗೆ ಉಪದೇಶ ಮಾಡುತ್ತಿದ್ದಾನೆ. "ಏನು ಸ್ವಾಮಿ, ಪರದೇಶಿ ಬಟ್ಟೆ ಸುಡಬೇಕು ಅನ್ನುತ್ತೀರಿ ನೀವು. ನಾಳೆಗೆ ಹೊಸ ಬಟ್ಟೆ ಬರುತ್ತದೆಯೆಂದು ಇಂದು ಉಟ್ಟ ಅರಿವೆಯನ್ನು ಸುಟ್ಟು ಹಾಕುವ ಸೊಸೆಯ ಕತೆ ನಿಮ್ಮದು"ಎಂದು ಕುಡುಬಿ ತೀರ್ಪು ಕೊಟ್ಟೂ ಆಯಿತು. ಪುಣ್ಯಕ್ಕೆ ಅಷ್ಟರಲ್ಲಿ ಕಾಡಿನ ದಾರಿ ಮುಗಿಯಿತು. ದಾರಿ ಒಂದು ಬಯಲಿಗೆ ಬಂದು ಕೂಡಿತು. ಕುಡುಬಿ ಬಯಲಿನ ತುದಿಯನ್ನು ತೋರಿಸುತ್ತ, "ಅದೇ ಅಲೆಮನೆ. ನಮ್ಮ ಒಡೆಯರು ಅಲ್ಲಿಯೇ ಇದ್ದಾರು" ಎಂದು ತೋರಿಸಿದನು. ದೂರದಲ್ಲಿ ಒಂದು ಚಪ್ಪರವಿದ್ದಂತೆ ಕಾಣಿಸುತಿತ್ತು. ಅಲ್ಲಿಗೆ ಹೋಗಬೇಕು. ಆ ಬಿಸಿಲಿಗೆ ಗದ್ದೆ ಅಂಚುಗಳೂ ಕಾದಿದ್ದುವು. ಆದರೂ ಒಂದು ನಿಲ್ದಾಣ ಬಂದಿತಲ್ಲಾ ಎಂದು ರಾಧಾಕೃಷ್ಣ ನಡೆದ. ತನ್ನ ಮಾರ್ಗದರ್ಶಕ ಕುಡುಬಿಯ ಹತ್ತಿರ, "ನಿನ್ನ ಹತ್ತಿರ ಇಷ್ಟೆಲ್ಲಾ ಮಾತಾಡಿ ನಿನ್ನ ಹೆಸರನ್ನೇ ಕೇಳಲಿಲ್ಲವಲ್ಲ" ಎಂದನು. 'ನನ್ನ ಹೆಸರೇ!' ಎಂದು ನಿಧಾನಿಸಿ ನುಡಿದನು ಕುಡುಬಿ. ಇವರು ಸರಕಾರದವರೇ ಇರಬೇಕು ಎಂಬ ಅವನ ಅನುಮಾನ ಬಲವಾಯಿತು. "ಬಡವರ ಹೆಸರು ತಕ್ಕೊಂಡು ಏನು ಮಾಡುತ್ತೀರಿ ಸ್ವಾಮಿ" ಎಂದು ಸುಮ್ಮನಾದ. ಅವನಿಗೆ ಸಂಶಯ. ಇವರು ವೇಷ ಮರೆಯಿಸಿ ತಿರುಗುತ್ತಿರುವ ಅಬಕಾರಿ ಆಫೀಸರರೆಂದು. ಜನ ಕಳ್ಳತನದಿಂದ ಗೋವೆ ಹಣ್ಣಿನ ಶರಾಬು ಬಟ್ಟಿ ಇಳಿಸುವುದನ್ನು ಶೋಧಿಸಲು ಹೊರಟಿರಬೇಕು-ಎಂದು ಖಾತ್ರಿಯಾಗಿದೆ. 'ಸೇಂದಿ, ಸರಕಾರದ' ಹೆಸರನ್ನು ಹೇಳಿದಾಗಲೇ ಅವನಿಗೆ ಅನುಮಾನ. ತಾನು ಮಾತಿನ ಓಟದಲ್ಲಿ "ಸೇಂದಿ,

ಶರಾಬು ನಮ್ಮೂರಲ್ಲಿ ಆಗುವಂಥದು. ಇದಕ್ಕೆ ಸರಕಾರದ್ದು ಸುಂಕ ಸುಡುಗಾಡು ಯಾಕೆ "ಹೊಳೆಯ ನೀರಿಗೆ ಡೊಣ್ಣೆಯಪ್ಪ ನಾಯಕನ ಅಂಕೆಯೇ" ಎಂದುದು ನೆನಪಾಯ್ತು. ಆತನ ಕಾಲು ತಡವರಿಸಿತು. ಹಣೆ ಬೆವರಿತು. "ಅಯ್ಯಾ, ಓ ಅದು ಚಪ್ಪರ! ಅಲ್ಲಿ ಮಂಜಯ್ಯ ಧನಿಗಳು ಕಾಣಿಸುತ್ತಿದ್ದಾರೆ. ಬ್ರಾಹ್ಮಣರು, ಊಟಹಾಕಿಯಾರು" ಎಂದು ಸುಮ್ಮಗಾದ. ರಾಧಾಕೃಷ್ಣ ಹತ್ತುಮಾರು ಮುಂದಕ್ಕೆ ಹೋಗಿನೋಡುತ್ತಾನೆ—ಹಿಂದೆ ಬರುತ್ತಿದ್ದ ಕುಡುಬಿ ಕಣ್ಮರೆಯಾಗಿದ್ದಾನೆ! ಆಚೀಚೆ ತಿರುಗಿ ನೋಡಿದರೂ ಅವನಿಲ್ಲ.

ಕಡುಬಿಯ ಎದೆಯಲ್ಲಾದ ತಳಮಳ ಅವನಿಗೇನು ಗೊತ್ತು? ಹಿಂದಿನ ದಿನವೇ ಆತ ತನ್ನ ಕೆಲವರು ಗೆಳೆಯರನ್ನು ಕೂಡಿಕೊಂಡು ಗೋವೆ ಹಣ್ಣಿನ ಸಾರಾಯಿಯನ್ನು ಬಟ್ಟಿ ಇಳಿಸಿದ್ದುದಕ್ಕೂ, ಹೀಗೆ ವೇಷ ಮರೆಯಿಸಿಕೊಂಡ ಆಫೀಸರರೂ ಊರಿಗೆ ಬಂದುದಕ್ಕೂ— ಸಮನಾಯಿತು. ಮೊದಲು ಅವರ ಕೈಯಿಂದ ಪಾರಾಗಿ ಮನೆಯಲ್ಲಿ ಬಹಿರಂಗವಾಗಿ ಇರಿಸಿದ ಸಾರಾಯಿಯನ್ನು ಗೊಬ್ಬರದ ಹೊಂಡದಲ್ಲಿ ಹೂತಿಟ್ಟು ಬರುವ ತನಕ, ಅವನ ತವಕ ತಡೆಯದು. ಈ ರಹಸ್ಯ ತೀರ ಹೊಸಬನಾದ ರಾಧಾಕೃಷ್ಣನಿಗೆ ಹೇಗೆ ಗೊತ್ತಾಗಬೇಕು?

ಅವನ ಮನಸ್ಸಿಗೆ ತೋಚಿದ ಸಂಗತಿ ಎಂದರೆ—ಎಲ್ಲರೂ ತನ್ನನ್ನು ವಂಚನೆಯ ತುತ್ತಾಗಿ ಕಾಣುತ್ತಿದ್ದರಲ್ಲಾ—ಎಂದು. ತನ್ನ ಆಪ್ತರಾದ ಸಖಾರಾಮ, ಸದಾನಂದರೇ, ಸುದ್ದಿ ಹೇಳದೆ ಪರಾರಿಯಾಗಿರುವಾಗ, ಈತ, ಯಾವುದೋ ಅಳುಕಿನಿಂದ ಓಡಿ ಹೋದುದು ಆಶ್ಚರ್ಯವಲ್ಲ-ಎನಿಸಿತು. ಕೊನೆಗೆ ಜನರಿರುವ ಸ್ಥಾನಕ್ಕಾದರೂ ತಂದು ಬಿಟ್ಟನಲ್ಲಾ ಎಂದು ತಾಳ್ಮೆಗೊಂಡನು. ನೂರು ಗಜ ದೂರದಲ್ಲಿ ಚಪ್ಪರ ಕಾಣಿಸುತ್ತಿತ್ತು. ಕಬ್ಬಿನ ಆಲೆಯ ಓ, ಓ ರಾಗ, ಗಂಡು ಧ್ವನಿಗಳೊಡನೆ ಮೇಳವಿಸಿ ಗಾಳಿಯೊಂದಿಗೆ ಬೀಸುತ್ತಿತ್ತು. ಏನೇ ಆಗಲಿ, ಅಲ್ಲಿಗೆ ಹೋಗುವೆನೆಂದು ಸರಿದನು. ನಡು ನೆತ್ತಿಯ ಮೇಲೆ ಸೂರ್ಯ ಕುಣಿಯುತ್ತಿರುವಾಗ ಈತ ಆಲೆಮನೆಯನ್ನು ಸೇರಿದನು. ಸೇರುವ ಮೊದಲು, ಕಳಚಿದ ಅಂಗಿಯನ್ನು ತೊಟ್ಟು, ತಲೆಗೆ ಗಾಂಧೀ ಟೋಪಿ ಇರಿಸಿಕೊಂಡು, ಮುಖವನ್ನು ಟವಲಿನಿಂದ ಉಜ್ಜಿಕೊಂಡು ಆದಷ್ಟು ನಾಜೂಕಿನಿಂದಲೇ ಪ್ರವೇಶಿಸಿದನು.

ಆ ಅಲೆಮನೆಯಲ್ಲಿ ಒಂದು ಕಡೆ ಭೂತಾಕಾರದ ಕೊಪ್ಪರಿಗೆಯ ಕೆಳಗೆ ಬೆಂಕಿಯು ಉರಿಯುತ್ತಿತ್ತು. ಅಲ್ಲಿ ಕಬ್ಬಿನ ರಸ ಪಾಕಗೊಳ್ಳುತ್ತಿತ್ತು. ಇನ್ನೊಂದು ಕಡೆ ಕಬ್ಬು ರಾಶಿರಾಶಿಯಾಗಿ ಬಿದ್ದಿತ್ತು. ಇನ್ನೊಂದು ಕಡೆ—ಎರಡು ದೊಡ್ಡ ಎತ್ತುಗಳು ಗಾಣವೊಂದನ್ನು ತಿರುಗಿಸುತ್ತ, ಕಬ್ಬಿನ ಜಲ್ಲೆಗಳನ್ನು ಚಿರಚಿರನೆ ಅದುಮಿ ಹಿಂಡುತ್ತಿದ್ದುವು. ಬೇರೊಂದು ಬದಿಯಲ್ಲಿ—ಪಾಕಗೊಂಡ ಬೆಲ್ಲವನ್ನು ದೋಣಿಯಕಾರದ ಮರದ ಮರಿಗೆಯಲ್ಲಿ ಸುರುವಿದ್ದರು. ಅಲ್ಲೇ ಸಮೀಪವಾಗಿ ಒಂದು ಹೊಡೆಮಂಚದ ಮೇಲೆ ಈಚಲ ಚಾಪೆಯನ್ನು ಹಾಸಿ, ಎದುರಿಗೆ ತಾಂಬೂಲದ ಹರಿವಾಣಕ್ಕೆ ಕೈ ಇಕ್ಕುತ್ತ, ಹೊಗೆಸೊಪ್ಪು ಜಗಿಯುತ್ತ, ಮಂಜಯ್ಯನವರು ಕುಳಿತ್ತಿದ್ದರು. ಕುಳ್ಳಾದ ಶರೀರ, ದುಂಡಾದ ಆಕೃತಿ, ಎಣ್ಣೆಗಪ್ಪು ಬಣ್ಣ, ಬಾಯಿ ತುಂಬಾ ಹಲ್ಲುಗಳೇ! ಅವಕ್ಕೆ ಸದಾ ತಾಂಬೂಲ ಚರ್ವಣದಿಂದ ಬಂದ ಹವಳದ ಮಿರುಗು ಅಲ್ಲವಾದರೆ, ನೋಟಕ್ಕೆ ದಂತ ಪಂಕ್ತಿಗಳು ಲಕ್ಷಣವಾಗಿಯೇ ಕಾಣುತ್ತಿದ್ದುವು. ಕಿವಿಯಲ್ಲಿ ಹೊಳೆಯುವ ವಜ್ರದ ವಂಟಿಗಳು. ಉಟ್ಟುದು ಮಾತ್ರ, ತೀರ ಅಗಲ ಕಿರಿದಾದ ಒಂದು ಪಂಚೆ. ಅದರ ಮೇಲೆ ಕಿರಿಯ ಚಿನ್ನದ ಉಡಿದಾರ. ಬೆರಳಿಗೆ ಹಸುರು ನೀಲ ಹರಳುಗಳ ಎರಡೆರಡು ಉಂಗುರಗಳು ಅವರದು ತುಂಬ ಮಾತನಾಡುವ ಸ್ವಭಾವ. ಮಾತಿನಲ್ಲಿ ಅಪಾರ ಆತ್ಮವಿಶ್ವಾಸ. ಊರಿಗೊಬ್ಬ ಪುಡಾರಿ ತಾನು-ಎಂಬ ಠೀವಿ, ಅಭಿನಯಗಳ ಧೋರಣೆಯಲ್ಲಿ ಸೇರಿತ್ತು. ಅವರು ಬಾಯಿ ತುಂಬಿದ್ದ ತಂಬುಲವನ್ನು, ಒತ್ತಿದ ಬೆರಳುಗಳ ಎಡೆಯಿಂದ ಚಿರ್ರನೆ ಚಿಮ್ಮಿಸಲು ಚಪ್ಪರದ ಮುಂಗಡೆಯ ತೋಡಿಗೆ ಸಮೀಪಿಸಿದಾಗಲೇ, ರಾಧಾಕೃಷ್ಣನ ಗೋಚರವಾಯಿತು. ಧಾರಾಕಾರವಾಗಿ ತಂಬುಲವನ್ನು ಉಗಿದು—ಆಲೆಮನೆಗೆ ಬಂದವರು ಯಾರೇ ಇರಲಿ, ತಮ್ಮನ್ನು ಕಾಣದೆ ಹೋಗಲಾರರೆಂಬ ವಿಶ್ವಾಸದಿಂದ, ತಿರುಗಿ ತಮ್ಮ ಮಂಚಕ್ಕೆ ಬಂದು ಕುಳಿತರು. ಅದೊಂದು ಹೆಮ್ಮೆಯ ನಡತೆಯಲ್ಲ; ಸ್ವಭಾವ; ಅವರ ಆತ್ಮವಿಶ್ವಾಸ. ಅಲ್ಲಿಂದಲೇ, "ಪಮ್ಮಾ, ಮನೆಗೆ ಥಟ್ಟನೆ ಓಡು, ಯಾರೋ ಬ್ರಾಹ್ಮಣರು ದೂರದವರು, ಊಟಕ್ಕೆ ಬಂದಾರು. ಬೆಳ್ತಿಗೆ ಅನ್ನಕ್ಕೆ ಎಸರಿಡಲಿಕ್ಕೆ ಹೇಳು" ಎಂದರು. ಅವರ ಆಳು, ಪಮ್ಮ, ಹಿಂದು ಮುಂದು ನೋಡದೆ, ಆಜ್ಞೆಯನ್ನು ಶಿರಸಾವಹಿಸಿದನು. ಇವರು ತಮ್ಮ ಇನ್ನೊಬ್ಬ ಆಳನ್ನು ಕರೆದರು. "ಕಾಳ, ನೋಗ

ಬಿಡಿಸು; ಹೊತ್ತು ಆಯಿತು. ನೋಡು, ಆ ಅಗೇಡಿ ಗದ್ದೆಯ ತೆಂಗಿನ ಮರದಿಂದ ಎರಡು ಸೀಯಾಳ ತೆಗೆದುಕೊಂಡು ಬಾ" ಎಂದರು. ಆಳು ನೊಗ ಬಿಡಿಸಿ ಎತ್ತುಗಳನ್ನು ತಂಪಿಗೆ ಕಟ್ಟುವಾಗ ರಾಧಾಕೃಷ್ಣ ಬಂದನು. ಅವನೊಡನೆ, "ಇಲ್ಲಿ ಯಾರದ್ದಾದರೂ ಮನೆ ಸಮೀಪವಿದೆಯೇ? ಇಲ್ಲಿಂದ ಬೈಂದೂರಿಗೆ ಯಾವ ದಾರಿ?"ಎಂದು ವಿಚಾರಿಸಿದನು.

ಕಾಳ--"ಯಾವ ಊರಾಯ್ತು ನಿಮಗೆ? ಮಂಜಯ್ಯ ಧನಿಗಳ ಮನೆ ಇಲ್ಲೇ ಸಮೀಪ. ಗೊತ್ತಿಲ್ಲವೇ ನಿಮಗೆ ಅವರ ಹೆಸರು? ಒಳಗೇನೇ ಇದ್ದಾರೆ. ಅವರನ್ನು ಮಾತನಾಡಿಸಿ. ಅಲ್ಲ, ನಿಮ್ಮ ಗುರುತು ಪರಿಚಯದವರು ಬೇರೆ ಯಾರಾದರೂ ಇದ್ದಾರೆಯೇ ಈ ಊರಲ್ಲಿ?" ಎಂದ. "ಏನು, ಇದು ಮಂಜಯ್ಯನವರ ಮನೆಯೇ" ಎಂದು ಆತ ವಿಸ್ಮಿತನಾದ. ರಾಧಾಕೃಷ್ಣ ಆ ತಾಲೂಕಿನವನು. ಊರಿನ ಹೆಸರಾದ ಮನೆತನಗಳ ಪರಿಚಯ ಉಳ್ಳವ. ಅಲ್ಲದೆ ಮಂಜ್ಯಯನವರ ಹೆಸರು ಕುಂದಾಪುರಕ್ಕೆ ಮುಟ್ಟುವಷ್ಟು ಕೀರ್ತಿವಂತರು. ವರ್ತಮಾನ ಪತ್ರಿಕೆಗಳಲ್ಲಿ ಒಂದೆರಡು ಬಾರಿ ಬೇಸಾಯಗಾರರ ಮುಖಂಡರಂತೆ ಅವರು ಬಾತಮಿಯನ್ನು ಬರೆದುದೂ ಉಂಟು. ಅವನೂ ಓದಿಬಲ್ಲ. ದಾರಿತಪ್ಪಿದರೂ ಒಳ್ಳೆಯ ಸ್ಥಳಕ್ಕೇನೆ ಬಂದೆನಲ್ಲ ಎಂದು ತೋರಿತು. ಚಪ್ಪರದೊಳಕ್ಕೆ ಕಾಲಿರಿಸಿದನು. ಅಲ್ಲಿ ದಿವ್ಯ ಸಾಲಿಗ್ರಾಮ ಮೂರ್ತಿಯು ಮಂಚದ ಮೇಲೆ ಕುಳಿತು, ಸಮಯ ವ್ಯರ್ಥವಾಗಬಾರದೆಂದು ತಾಂಬೂಲ ಸಂಹಾರ ಮಾಡುತ್ತಲೇ ಇತ್ತು. "ತಾವೇ ಮಂಜಯ್ಯನವರು? ನಾನು ಬೈಂದೂರಿಗೆ ಹೋಗುವವ. ಮಂಡಸೆಯಿಂದ ಬಂದೆ. ದಾರಿ ತಿಳಿಯದೆ ತಪ್ಪಿರಬೇಕು" ಎಂದು ಕ್ಷಮೆಯಾಚಿಸುವಂತೆ ಮಾತನಾಡಿದನು. ಅವರು "ಬನ್ನಿ, ಬನ್ನಿ, ಬಂದದ್ದು ಒಳ್ಳೆಯದೇ ಆಯಿತು. ಬೈಂದೂರು ನಮ್ಮ ಆಲೆಮನೆಗೆ ಸಮೀಪವೇ. ಸರಿಯಾದ ಹಾದಿಯಲ್ಲೇ ಬಂದಿರಿ. ನೇರಾದ ಹಾದಿಯಲ್ಲಿ ಹೋಗಿದ್ದರೆ ಈ ಬಯಲು ಸಿಗುವುದಿಲ್ಲ. ಮುಂದೆ ಒಂದು ರೋಟು ಸಿಗುತ್ತದೆ. ಅದನ್ನು ಹಿಡಿದರೆ ನಮ್ಮ ಮನೆಗೇನೆ ಬರುತ್ತಿದ್ದಿರಿ. ತಾವು ಗಾಂಧೀ ಪಾರ್ಟಿಯವರೆಂದು ಕಾಣುತ್ತದೆ. ಅಲ್ಲವೇ?"

"ಹೂಂ"

"ಇನ್ನಿಬ್ಬರು ಎಲ್ಲಿ? ನೀವು ಮೂವರು ಬಂದಿರ ಬೇಕಲ್ಲವೇ? ನೀವು ರಾಮಪ್ಪಯ್ಯನವರ ಮಕ್ಕಳಲ್ಲವೇ? ಜತೆಗೆ ಇನ್ನಾರೋ ಮಾಸ್ತರಿಕೆ ಬಿಟ್ಟ

ವರೂ. ನಮ್ಮ ಅಣ್ಣಪ್ಪ ಕಮ್ತಿಯರ ಮಗ, ಡಾಕ್ಟರಿಕೆ ಬಿಟ್ಟವರೂ ಇದ್ದಾರಂತಲ್ಲಾ"

"ತಮಗೆ ಹೇಗೆ ಗೊತ್ತು?"

ಅನ್ನುತ್ತಲೇ, ಅವರು ಎದುರಿಗಿದ್ದ ಕನಾಡಾ ಧುರೀಣ ಪತ್ರಿಕೆಯನ್ನು ತೆಗೆದು—"ನೋಡಿ, ಕುಂದಾಪುರದ ಪತ್ರ. ನಮ್ಮ ಊರಿನ ಸುದ್ದಿ ಕುಮಟೆಯ ಈ ಪೇಪರಿನಲ್ಲಿ ಒಂದಷ್ಟು ವಿವರವಾಗಿ ಜಿಲ್ಲೆಯ ಪೇಪರುಗಳಲ್ಲೇ ಬರುತ್ತಿಲ್ಲ. ಇವೆಲ್ಲವೂ ಹೆದರಿ ಸಾಯುತ್ತಿವೆ. ದೇಶಕ್ಕೆ ದೇಶ ಎಂದರೆ ಉತ್ತರ ಕನ್ನಡ. ನೋಡಿ, ನಮ್ಮ ಜಿಲ್ಲೆ ಒಂದು ಜಿಲ್ಲೆಯೇ? ಮುಂದಿನ ತಿಂಗಳು ಅಲ್ಲಿನವರು ಕಾಯಿದೆಭಂಗ ಹೂಡುತ್ತಾರಂತೆ. ನಾಲ್ಕೇ ನಾಲ್ಕು ದಿನಗಳಲ್ಲಿ ಸರಕಾರವು ಗಡಗುಟ್ಟಲಿಕ್ಕುಂಟು. ನೀವು ನಮ್ಮ ದರಿದ್ರ ಊರಲ್ಲಿ ತಿರುಗಾಡುವ ಬದಲು, ಭಟ್ಕಳಕ್ಕೋ, ಕುಮುಟೆಗೋ ಹೋದರೆ ಸಾರ್ಥಕ" ಎಂದು ಉಪನ್ಯಾಸ ತೊಡಗಿದರು. ಮಾತಿನ ನಡುವೆ ಎದ್ದು ಬಂದು, ಅವನನ್ನು ಕರೆದೊಯ್ದು, ಮಂಚದಲ್ಲಿ ಕುಳ್ಳಿರಿಸಿಕೊಂಡರು. ಎಳನೀರು ಬರುವ ತನಕ, ತಾವೇ ಮಾತಿನ ಸುರಿಮಳೆಯನ್ನು ಸೂಸಿದರು. ಒಂದಲ್ಲ, ಎರಡು ಎಳನೀರುಗಳನ್ನು ಕುಡಿಸಿದರು. ತಿರುಗಿ ಮಾತನಾಡಿದರು "ಅವರಿಬ್ಬರು ಎಲ್ಲಿ? ನೀವು ಮೂವರು ಈ ಕಡೆ ಸಂಚಾರಕ್ಕೆ ಬರುತ್ತೀರಿ, ಎಂಬುದನ್ನು ಪೇಪರಿನಲ್ಲಿ ಓದಿದ್ದೆ. ಇವತ್ತು ಬೈಂದೂರಿನಲ್ಲಿ 'ಲೆಕ್ಚರ್' ಅಲ್ಲವೇ? ನಾನೂ ಹೋಗಬೇಕೆಂದಿದ್ದೆ. ಆದರೆ ನೋಡಿ, ಈ ಸ್ವದೇಶಿ ಸಕ್ಕರೆ ತಯಾರಿಗಾಗಿ ನಿಂತಿದ್ದೇನೆ" ಎಂದರು.

ರಾಧಾಕೃಷ್ಣಗೆ ತನ್ನ ಗೆಳೆಯರ ವಿಚಾರವಾಗಿ ಏನು ಆಡುವುದಕ್ಕೂ ತೋರಲಿಲ್ಲ. "ಅವರಿಬ್ಬರಿಗೂ ಮೈ ಚೆನ್ನಾಗಿಲ್ಲ. ಹಾಗಾಗಿ ನಿನ್ನೆ ಮಂಡಸೆಯಿಂದಲೇ ಕುಂದಾಪುರಕ್ಕೆ ಹೋದರು. ನಾನು ಒಬ್ಬನೇ ಬರಬೇಕಾಯಿತು" ಎಂದನು. "ಹೋಗುವ ಮನೆಗೆ, ಮನೆಯಲ್ಲಿ ತೋರಿಸುತ್ತೇನೆ-ನಾನು ತಯಾರಿಸಿದ ಸ್ವದೇಶಿ ಸಕ್ಕರೆಯನ್ನು. ಬಣ್ಣದಲ್ಲಿ ಚೀನೀ ಸಕ್ಕರೆಗೆ ತುಸಾ ಬಿಡುತ್ತದೆ" ಎಂದು ಹೇಳಿ, ಅವನನ್ನು ಜತೆಯಲ್ಲಿ ಮನೆಗೆ ಕರೆದೊಯ್ದರು.

ಮಂಜಯ್ಯನವರ ಮನೆಯ ಮುಂದಿನ ಚಪ್ಪರ, ತಿರಿ, ಹುಲ್ಲು ಕುತ್ತರಿಗಳೇ ಅವರ ವತನವನ್ನು ಸಾರಲು ಸಾಕಾಗುತಿತ್ತು. ಒಂದು ಕಡೆ

ಚಪ್ಪರದ ಹುಂಡು ಬಿಸಿಲಿನಲ್ಲಿ ಹೆಲವಾರು ಹೆಣ್ಣಾಳುಗಳು ತ್ರಿಪದಿಗಳನ್ನು ಹಾಡುತ್ತಾ ಬತ್ತ ಕುಟ್ಟುತ್ತಿದ್ದರು. ಆ ಚಪ್ಪರವನ್ನು ದಾಟಿ, ಮುಂದುವರಿದರೆ ಎದುರಿಗಿರುವುದು, ವಿಶಾಲ ಕೆಲಬಲವುಳ್ಳ ಹೆಬ್ಬಾಗಿಲ ಚಾವಡಿಯು. ಚಾವಡಿಯ ನೆಲವೇ ಎದೆಯಷ್ಟು ಎತ್ತರವಾಗಿತ್ತು. ಹೆಬ್ಬಾಗಿಲು ಹಳೆಯ ಕಾಲದ ಕೋಟೆಯ ಬಾಗಿಲಷ್ಟು ದೊಡ್ಡದು. ಅಲ್ಲಿಂದ ಒಳಗಡೆ ತಿರುಗಿ ಚಪ್ಪರ. ನಾಲ್ಕು ಸುತ್ತಲೂ ಚಾವಡಿಗಳು. ಅವರದು ಹಳೆಯಕಾಲದ, ಓಡನ್ನು ಹೊದೆಯಿಸಿದ ತುಂಬ ದೊಡ್ಡ ಮನೆ. ಒಳಗಿನ ಅಂಗಣದ ಒಂದು ಮಗ್ಗುಲಲ್ಲಿ ಅಕ್ಕಿ ತಂಬಿಸುವ ಮೆರ್ಷಿತ್ತು. ಇನ್ನೊಂದೆಡೆ ಮನೆಗಿಂತ ಗಿಡ್ಡವಲ್ಲದ ಪಶು ಶಾಲೆಯಿತ್ತು.

ಮಂಜಯ್ಯನವರು ರಾಧಾಕೃಷ್ಣನನ್ನು ಕರೆದುಕೊಂಡು, ಮನೆಯ ಅಂಬಲವನ್ನು ಸೇರಿದರು. ಅತಿಥಿಗೆ ಬಣ್ಣದ ಚಾಪೆಯನ್ನು ಹರವಿದರು. "ಬಾಯಾರಿಕೆಗೆ ಏನು ತರಲಿ" ಎಂದು ಕೇಳಿದರು. "ಸೀಯಾಳ ಕುಡಿದಾಯಿತಲ್ಲ" ಎಂದರೆ ಅವರು ಕೇಳರು. ಕ್ಷಣದಲ್ಲಿ, 'ಮಾಣೀ' ಎಂದು ಕೂಗಿದರು. ಆತ ಒಂದು ಕಂಚಿನ ಗಿಂಡಿಯಲ್ಲಿ ಕಷಾಯ ತಂದಿರಿಸಿದನು. "ನೋಡಿ, ನಮ್ಮಲ್ಲಿಯೂ ಗಾಂಧಿ ಕಾಫಿ ಮಾಡುತಿದ್ದೇವೆ. ನವಜೀವನ ಪೇಪರಿನಲ್ಲಿ ಬರೆದಿದ್ದಾರಲ್ಲಾ—ಆ ಕಾಫಿ ನಮ್ಮದು. ಗೋಧಿ ಹುರಿದು ಮಾಡಿದ್ದು" ಎಂದರು. ಕಾಫಿ ಕುಡಿಯುವುದನ್ನು ಬಿಟ್ಟ ರಾಧಾಕೃಷ್ಣ, ಈ ಗಾಂಧಿ ಕಾಫಿ ಕುಡಿಯಲು ಆತಂಕವಿರಲಿಲ್ಲ. ಅಲ್ಲಿಂದ ಆತನನ್ನು ಬಚ್ಚಲ ಮನೆಗೆ ಕರಕೊಂಡು ಹೋದರು. ಆತ ಸ್ನಾನಕ್ಕೆ, ಬಿಸಿನೀರು ಬೇಡವೆಂದರೂ "ಪರ ಊರಿನಲ್ಲಿ ನಿಮ್ಮ ಹುಚ್ಚಾಟ ಪ್ರಯೋಜನವಿಲ್ಲ. ಹೇಳಿದ್ದನ್ನು ಕೇಳಿ. ಮೂಡಿನ ಊರಿನಲ್ಲಿ ತಣ್ಣೀರು ಮೀಯುವುದು ಒಳ್ಳೆಯದಲ್ಲ. ನಿಮ್ಮ ಕರಾವಳಿಯ ಮಾತು ಬೇರೆ" ಎಂದರು. ಉಪಾಯವಿಲ್ಲದೆ ರಾಧಾಕೃಷ್ಣ ಬಿಸಿನೀರನ್ನು ಸುರುವಿಕೊಂಡು ಕೆಂಪಾಗಿ, ಮತ್ತಷ್ಟು ಬೆವರ ತೊಡಗಿದ.

ಸರಿ, ಬಚ್ಚಲು ಮನೆಯಿಂದ ನೆಟ್ಟಗೆ ಊಟದ ಮನೆಗೆ. ಊಟದ ಮನೆಯನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಸಾಲು ಸಾಲು ಬಟ್ಟಲುಗಳು, ಎಲೆಗಳು! ಅದೊಂದು ನಿತ್ಯ ಛತ್ರವಿದ್ದಂತೆ ಕಾಣಿಸಿತು. ಎಲೆಗಳ ಮುಂದೆ ಮನೆಯ ಮಂದಿ ಸ್ತಬ್ಧರಾಗಿ ಕುಳಿತಿದ್ದರು. ರಾಧಾಕೃಷ್ಣ

ನನ್ನು ಮಗ್ಗುಲಿಗೆ ಕುಳ್ಳಿರಿಸಿಕೊಂಡು ಮಂಜಯ್ಯನವರೂ ಕುಳಿತರು. ಅವನಿಗೆ ಗಂಧ ಅಕ್ಷತೆಗಳನ್ನು ಕೊಟ್ಟರು. ತಾವೂ ತೊಟ್ಟರು. ಯಜಮಾನರ ಬಳಿಯಲ್ಲಿ ಕುಳಿತ ರಾಧಾಕೃಷ್ಣನನ್ನು ತವಕಿಸಿ ನೋಡುವುದರಲ್ಲಿ, ಉಳಿದವರು ನಿರತರಾಗಿದ್ದರು.

ಊಟದ ಕಾಲದಲ್ಲಿ ರಾಧಾಕೃಷ್ಣಗೆ ಆಚೀಚೆ ನೋಡುವ ಕೆಲಸ. ಮಂಜಯ್ಯನವರಂತಹ ಹತ್ತು ಮಂದಿ ಪ್ರಭಾವಶಾಲಿಗಳು ತನ್ನ ಈ ಕೆಲಸಕ್ಕೆ ನೆರವಾಗುತ್ತಿದ್ದರೆ ಎಷ್ಟು ಚೆನ್ನ—ಎಂದೆನ್ನುತ್ತಿತ್ತು ಅವನ ಮನಸ್ಸು. ಅವನ ಕಣ್ಣೆದುರಿಗೆ ಆ ಚಪ್ಪರ, ಆಳುಗಳು, ಮನೆ, ಹಟ್ಟಿ, ಭೋಜನಶಾಲೆ-ಎಲ್ಲವೂ ನಲಿಯುತ್ತಿದ್ದುವು. ಎಲ್ಲವೂ ಅಚ್ಚುಕಟ್ಟು, ಔದಾರ್ಯ, ಸಂಪತ್ತುಗಳನ್ನು ಸೂಚಿಸುತ್ತಿದ್ದುವು. ಊಟದ ವೇಳೆಯಲ್ಲಿ ಮಂಜಯ್ಯನವರ ಬಾಯಿ-ಆಹಾರ ಧ್ವಂಸಮಾಡುತ್ತಿದ್ದಂತೆಯೇ, ರಾಜಕೀಯವಾದ ಕಣೆ, ಕೂರಂಬುಗಳನ್ನು ಹಾರಿಸುತ್ತಲೇ ಇತ್ತು. ರಾಧಾಕೃಷ್ಣನ ಕಿವಿ ಅವಕ್ಕೆ ಕಿವುಡಾಗಿ ಇರಲಿಲ್ಲವಾದರೂ, ಅವನ ಗಮನ ಮಂಜಯ್ಯನವರ ಅಂತಸ್ತನ್ನು ಅಳೆಯುವುದರಲ್ಲಿ ನಿರತವಾಗಿತ್ತು. ಊಟ ಮುಗಿಯಿತು. ಮೊದಲು ಅವರಿಬ್ಬರು ಎದ್ದು ಹೊರಕ್ಕೆ ಬಂದರು. ಹೊರ ಜಗುಲಿಯಲ್ಲಿ ಬಿಸಿನೀರಿನ ಬಿಂದಿಗೆಗಳು ಕಾದಿದ್ದುವು. ಅವರು ಅಲ್ಲಿಯೇ ಕೈತೊಳೆದುಕೊಂಡರು. ಉಳಿದವರು ಬಾವಿಯ ಕಟ್ಟೆಗೆ ಹೋಗಿರಬೇಕು.

ಊಟವಾಗಿ—ತಿರುಗಿ ಚಾವಡಿಗೆ ಬಂದರು. ಮಂಜಯ್ಯನವರು "ತಮಗೆ ಈ ಅಭ್ಯಾಸ ಇಲ್ಲವೇ" ಎಂದು ವೀಳೆಯ ತಿನ್ನತೊಡಗಿದರು. ಮನೆಯ ನಾಲ್ಕಂದಿ ಹಿರಿಯರು ಅವರ ಸಮೀಪಕ್ಕೆ ಕುಳಿತರು. ಅವರೂ ಎಲೆಯ ತಾಂಬಾಣಕ್ಕೆ ಕೈ ಇಕ್ಕಿದರು. ಮಂಜಯ್ಯನವರು ತುಂಬ ಹಿಗ್ಗಿನಿಂದ "ಯಾರೆಂದು ಗೊತ್ತೇ ಇವರು? ಕುಂದಾಪುರದ ರಾಮಪ್ಪಯ್ಯನವರ ಮಗ. ಬಿ. ಎ. ಓದುತ್ತಿದ್ದುದನ್ನು ಬಿಟ್ಟು ಗಾಂಧೀ ಪಾರ್ಟಿಗೆ ಸೇರಿ, ಬಂದಿದ್ದಾರೆ. ಬೊಂಬಾಯಿ ಮದರಾಸು ಊರುಗಳಲ್ಲಿ ಎಂಥೆಂಥವರೆಲ್ಲ ಗಾಂಧೀ ಪಾರ್ಟಿ ಸೇರಿದ್ದಾರೆ ಗೊತ್ತೇ!" ಎಂದು ವಿವರಿಸಲು ಕುಳಿತರು. ಕೊನೆಯ ತೀರ್ಮಾನವಾಗಿ "ಹೌದೋ ಚನ್ನಾ, ಇವತ್ತು ರಾತ್ರಿ ಊರವರನ್ನೆಲ್ಲಾ ಬರಲಿಕ್ಕೆ ಹೇಳು. ನಮ್ಮಲ್ಲಿ ಇವತ್ತು ಗಾಂಧೀ 'ಲೆಕ್ಚರ್' ಉಂಟೆಂದು ತಿಳಿಸು" ಎಂದು ಅಪ್ಪಣೆ ಕೊಡಿಸಿದರು.

ಆಗ ರಾಧಾಕೃಷ್ಣನ ಎದೆ ಧಸಲ್ ಎಂದಿತು. "ರಾತ್ರಿಯೇ! ಇವತ್ತು ನಾನು ಬೈಂದೂರಿಗೆ ಹೊರಡಬೇಕು, ಈಗಲೇ; ಇಲ್ಲದಿದ್ದರೆ ಮೋಸ" ಎಂದನು. "ಬೈಂದೂರಿನಲ್ಲಿ ಏನು ಉಂಟು ಎಂದು ತಿಳಿದಿದ್ದೀರಿ? ಏನಿದ್ದರೂ ನಮ್ಮ ಒಂದೆರಡು ಗ್ರಾಮಗಳೇ ಬೇಕು, ಆ ಊರಲ್ಲಿ ನಿಮ್ಮ ಲೆಕ್ಚರು ಗಿಕ್ಚರು ಯಾವುದೂ ನಡೆಯುವಂತಿಲ್ಲ. ಜನ ಬಂದರಲ್ಲವೇ ಮುಂದಿನ ಮಾತು?"

"ಇರಲಿ; ಬರಲಿ ಬಾರದೆ ಇರಲಿ. ನಮ್ಮ ಕೆಲಸ ನಾವು ಮಾಡಬೇಡವೇ?" ಎಂದು ರಾಧಾಕೃಷ್ಣ ಆತ್ಮಸಾಕ್ಷಿಯು ನೊಂದವನಂತೆ ನುಡಿಯಲು ಅವರೂ ಸಡಿಲು ಬರಬೇಕಾಯಿತು. ಆತ ಬೈಂದೂರಿಗೆ ಹೋಗಿಯೇ ಹೋಗುವುದು-ಎಂದು ತೀರ್ಮಾನವಾಯಿತು. ಮುಂದೆ ಒಂದೆರಡು ದಿನಗಳಲ್ಲಿ ಆಲೆಮನೆಗೆ ಬರಲೇಬೇಕೆಂಬ ಬಲವಂತವಾಯಿತು. ತಿರುಗಿ ಆ ಬಗೆಯ ಉತ್ಸಾಹ, ಬಲವಂತ, ಆತ್ಮವಿಶ್ವಾಸಗಳನ್ನು ತಾನು ಸಂಚರಿಸಿದ ಉಳಿದ ಎಡೆಗಳಲ್ಲಿ ರಾಧಾಕೃಷ್ಣನು ಕಂಡಿರಲಿಲ್ಲ. ಅದಕ್ಕೆ ಸಂತೋಷಗೊಂಡು ಒಪ್ಪಿಕೊಂಡನು.

"ಹಾಗಾದರೆ ಈಗ ಹೊರಡುತ್ತೇನೆ. ದಾರಿ ತೋರಿಸಲು ಒಂದು ಜನ ಕೊಟ್ಟಿದ್ದರೆ...." ಎಂದು ಕೇಳಲು, "ಜನವಿಲ್ಲದೆ ನೀವು ಎಲ್ಲಿಗಾದರೂ ಹೋದೀರಿ. ಇಲ್ಲಿ ಏನು ತಾಲೂಕು ಬೋರ್ಡು ರಸ್ತೆ ಇದೆಯೇ?" ಎಂದು ಅವರು ನಕ್ಕರು. "ಚಂಗಾ, ಬೇಗನೆ ಒಂದಿಷ್ಟು ಉಂಡು ಬಾ" ಎಂದು ಒಬ್ಬ ಆಳನ್ನು ಕೂಗಿ ಹೇಳಿದರು. ಚಂಗ ಊಟವನ್ನು ಮುಗಿಸಿ ಬರಲು ಅರ್ಧಗಳಿಗೆ ಹೋಯಿತು. ಮಂಜಯ್ಯನವರು-"ನಮ್ಮ ಚಂಗ, ನಿಮ್ಮನ್ನು ಒಳದಾರಿಯಿಂದಲೇ ಬೈಂದೂರಿನ ಹೊಳೆಯ ಸಂದಿನ ತನಕ ಮುಟ್ಟಿಸಿ ಬರುತ್ತಾನೆ. ಗಾಡಿ ದಾರಿ ಆದರೆ ನಾಲ್ಕು ಹರದಾರಿ ಆಗುತ್ತದೆ ಇಲ್ಲಿಂದ. ಒಳದಾರಿಯಲ್ಲಿ ನಾಲ್ಕೆಂಟು ಮೈಲು ಮಾತ್ರ. ಹೊಳೆಯ ಆಚೇಗೆ ಇರುವುದು ಒಂದು ಮೈಲು ಮಾತ್ರ" ಎಂದರು.

ತಿರುಗಿ 'ಚಂಗಾ' ಎಂದು ಕರೆಯಲು ಒಬ್ಬ ಆಸಾಮಿ ಅವರ ಸಮ್ಮುಖದಲ್ಲಿ ನಿಂತು ನಗುತ್ತಿದ್ದನು. ರಾಧಾಕೃಷ್ಣ ಅವನನ್ನು ನಿಂತು ನೋಡುತ್ತಾನೆ-ನಡುದಾರಿಯಲ್ಲಿ ಓಡಿ ಮರೆಯಾದ ಕುಡುಬಿಯೇ ಚಂಗ. ಅನುಮಾನವಾಯಿತು. ಒಳದಾರಿಯಲ್ಲಿ, ಇನ್ನೊಮ್ಮೆ ಆತ ಓಡಿ ಹೋದರೆ—ಎಂಬ

ಸಂಶಯವಾಯಿತು. ಚಂಗ ತನ್ನ ಧನಿಗಳಿಂದ ಎಲೆಯಡಿಕೆಯನ್ನು ಇಸು ಕೊಂಡು "ಹೊರಡುವ ಅಯ್ಯ" ಎಂದನು. ಚಂಗನ ಮಾತಿನಲ್ಲಿ ಈಗ ನಗು ಕಾಣಿಸುತ್ತಿದೆ. ತನ್ನ ಒಡೆಯರ ಆದರಕ್ಕೆ ಪಾತ್ರನಾದ ವ್ಯಕ್ತಿ ಎಂಬು ದರಿಂದ ಅವನ ಸಂಶಯಗಳೂ ಮಾಯವಾಗಿದ್ದುವು. ತಾಸಿಗೆ ಮುಂಚೆ ಹುಂಬನಂತೆ ಓಡಿ ಹೋದುದಕ್ಕಾಗಿ ಆತ ಒಳಗಿಂದೊಳಗೇ ನಗುತ್ತಿದ್ದ.

"ಅಯ್ಯ, ಬೇಸನೆ ಹೋದರೆ ಹೊತ್ತುಕಂತಲು ಎರಡು ಗಳಿಗೆ ಇರು ವಾಗಲೇ ಬೈಂದೂರು ಸೇರಬಹುದು" ಎಂದನು. "ನೀನು ಮುಂದಿನಿಂದ ಹೋಗು"ಎಂದು ಮಂಜಯ್ಯ ಅಪ್ಪಣೆ ಕೊಡಿಸಿದರು. ಅವನು ಮುಂದಾದ. ಈಗ ಅವನ ನಡಿಗೆಯ ಗತ್ತೇ ಬೇರೆ. ಮಗ್ಗುಲಿಗೆ ಕಟ್ಟಿಕೊಂಡ ಕತ್ತಿಯು ತೊಡೆಗೆ ಪಟ ಪಟ ಬಡಿಯುತ್ತಿದ್ದಂತೆ, ಅವನ ಕಾಲುಗಳು ನೆಲದ ಮೇಲೆ ದಡ ದಡನೆ ಹೆಜ್ಜೆ ಹಾಕುತ್ತಿದ್ದುವು.

ಅವನ ಕಾಲಿಗೆ ಏನೂ ರಕ್ಷೆ ಇರಲಿಲ್ಲ. "ಅಯ್ಯಾ, ನಮಗೆಲ್ಲ ಬರಿ ಗಾಲಲ್ಲಿ ನಡೆದು ಅಭ್ಯಾಸ. ತಾವೂ ಹಾಗೆಯೇ ಬಂದಿರಾ? ನೆಲ ಕಾದಿದೆ; ಬರಿಯ ಮುಳ್ಳು ಕಲ್ಲಿನ ಹಾದಿ"ಎಂದು ಉಪಚರಿಸಿದನು. ಮಾತಿಗೆ ಮಾತು ಆಡುತ್ತ ಚಂಗನ ಉತ್ಸಾಹವನ್ನು ಕೆಡಿಸದೆ ರಾಧಾಕೃಷ್ಣ ಹಿಂಬಾಲಿಸಿದನು. ನಡಿಗೆಯಲ್ಲಿ ಸದಾನಂದ ಸಖಾರಾಮರಿಗಿಂತ ತಾನು ಚುರುಕು ಎಂದು ತಿಳಿದ ಅವನಿಗೆ, ಚಂಗನ ನಡಿಗೆ ಅನುಸರಿಸುವುದು ಕಷ್ಟವಾಯಿತು. ಅವ ನಂತೆ ನಡೆದರೆ, ಅಲ್ಲ ಓಡಿದರೆ, ತಾಸಿಗೆ ಆರು ಮೈಲು ಹೋಗಬಹುದು ಎಂದೂ ತೋರಿತು. ಅವನಿಗೂ ಅದೇನೆ ಬೇಕಿತ್ತು. ಹೊಲದಿಂದ ಹೊಲಕ್ಕೆ ಜಿಗಿಯುತ್ತಿದ್ದ ಅವನನ್ನು ಕಂಡು ರಾಧಾಕೃಷ್ಣ—"ಚಂಗಾ, ನಿನ್ನ ಹಾಗೆ ನಾನೂ ಮೊಲ ತಿಂದರೆ ನಡಿಗೆಯಲ್ಲಿ ಚುರುಕಾದೆನೋ ಏನೋ" ಎಂದನು.

ಚಂಗನು ನಕ್ಕ. "ಮೊಲ ರಾತ್ರಿಗೆ ಮನೆಗೆ ಹೋಗಿ ಆಗಬೇಕು. ಬರುವಾಗ ಉಪ್ಪುಂದದ ಪೇಟೆಯಿಂದ ಮಸಾಲೆ ತರಬೇಕು" ಎಂದನು. ಅವನ ಲೆಕ್ಕಾಚಾರದಲ್ಲಿ ಊರುಗಳ ದೂರ ಗಣನೆಗೇ ಬರುವಂತಿರಲಿಲ್ಲ. ಕಾಲಿಗೆ ಗಾಲಿ ತಗಲಿಸಿ ಕೊಂಡವನಂತೆ ಅವನ ಮಾತಿತ್ತು.

ಈಗ ಅವರು ಏರಿ ಸಾಗುತ್ತಿರುವದು ಒಂದು ಬೋಳಾದ ಗುಡ್ಡ ವನ್ನು. ಅದನ್ನು ಏರಿ ಇಳಿದು, ನಾಲ್ಕು ಗದ್ದೆಗಳನ್ನು ತುಳಿದೊಡನೆಯೇ ತೆಂಗಿನ ಮರಗಳ ದಟ್ಟವಾದ ತೋಪು ಕಾಣಿಸಿತು. "ಇದೇ ಬೈಂದೂರು

ಹೊಳೆ. ದಾಟಿ ಬಿಡುವ. ಕಡವಿನ ದಾರಿ ಇರುವುದು ಕೆಳಕ್ಕೆ. 'ನೀರೇನು ಹೆಚ್ಚಿಗೆ ಇಲ್ಲ" ಎಂದು ಆತ ಇಳಿದಾಯಿತು. ಆತ ನದಿಯನ್ನು ಇಳಿದು, ನಡುವಿನ ತನಕ ನೀರಿದೆಯೆಂದು ತೋರಿಸಿದಲ್ಲಿಯ ತನಕ ಇವನೂ ಇಳಿದನು. ದಣಿದು ಬಾಯಾರಿದುದರಿಂದ ನೀರನ್ನು ಬಾಯಿಗಿರಿಸಿಕೊಂಡ. "ಥೂ" ಎಂದು ಉಗುಳುವಂತಾಯಿತು. ಅದು ಉಪ್ಪು ನೀರಷ್ಟೆ.

ಹೊಳೆ ದಾಟಿಯಾಯಿತು. ಎದುರಿನ ಬಯಲನ್ನು ಕತ್ತರಿಸಿ ಹೋಗುವ ಒಂದು ಕಾಲು ದಾರಿಯನ್ನು ತೋರಿಸಿಬಿಟ್ಟು ಚಂಗ ನಿಂತನು. "ಅಯ್ಯಾ, ಇನ್ನು ನಾನು ಹೊರಡುತ್ತೇನೆ. ನೀವು ಇದೇ ದಾರಿಯನ್ನು ಹಿಡಿದುಕೊಂಡು ಹೋಗಿ. ಒಂದು ಗಳಿಗೆಯಲ್ಲಿ ಪೇಟೆಯನ್ನು ಹೊಗಿ ಸೇರುತ್ತೀರಿ." ಎಂದನು. ಚಂಗ ಹಿಂದಿರುಗಿಯೂ ಆಯಿತು. ರಾಧಾಕೃಷ್ಣನ ಕೈ ಕಿಸೆಗೆ ಹೋಯಿತು. "ಅಯ್ಯೋ, ಅವನಿಗೆ ಕೊಡಲು ಒಂದಾಣೆಯ ಕಾಸು ಇಲ್ಲದೆ ಹೋಯಿತಲ್ಲಾ" ಎಂದು ತೋರಿ, ನಾಚಿಕೆಯಾಯಿತು. ಆದರೂ ಮಾತಿಗೆ ಹಿಂದಾಗದೆ 'ತುಂಬಾ ಉಪಕಾರವಾಯಿತು ಚಂಗಾ, ನಾಳೆ ನಾಡಿದ್ದು ನಿಮ್ಮ ಊರಿಗೆ ಬರುತ್ತೇನೆ" ಎಂದು ಕೂಗಿದ. ಚಂಗ ಅಲ್ಲಿ ಇದ್ದರಲ್ಲವೇ ಕೇಳಿಸಬೇಕು?

ನದಿ ದಾಟಿ, ಬಯಲನ್ನು ಸೇರಿ, ಹೊಲದ ಧೂಳನ್ನು ತುಳಿಯುತ್ತ ಬೈಂದೂರನ್ನು ನೆನದುಕೊಂಡು ಹೊರಟ ರಾಧಾಕೃಷ್ಣನಿಗೆ "ಬೈಂದೂರೇನೋ ಬರುತ್ತದೆ. ಅಲ್ಲಿ ಯಾರಲ್ಲಿಗೆ ಹೋಗಬೇಕು?" ಎಂಬುದು ಮಾತ್ರ ತೋರಲಿಲ್ಲ. ಕೇಳಿದ ಒಂದೆರಡು ಹೆಸರುಗಳೂ ಮರವೆಯಾಗಿದ್ದುವು. ಬರೆದು ಇರಿಸಿದ ಪುಸ್ತಕ ಹೋಗಿದೆ- ಪರಿಚಿತರಿಲ್ಲ; ಕಿಸೆಯಲ್ಲಿ ಕಾಸಿರಲಿಲ್ಲ. ರಾತ್ರಿಯ ಬಗೆ ಏನೆಂದು ತಿಳಿದಿರಲಿಲ್ಲ. ಆದರೂ ಅಂಥ ವಿಶ್ವಾಸದಿಂದ ಹಾದಿಯನ್ನು ತುಳಿದು ಪೇಟೆಯನ್ನು ಸೇರಿದ. ದಾರಿಯಲ್ಲಿ ಸಂಧಿಸಿದ ಒಬ್ಬಿಬ್ಬರು ಇವನ ಗಾಂಧಿ ಟೊಪ್ಪಿಯನ್ನು ಕಂಡು, ಕುತೂಹಲಿಗಳಾಗಿ "ನೀವು ಯಾರು? ಭಟ್ಕಳಕ್ಕೆ ಹೋಗುವವರೇ? ಎಲ್ಲಿಂದ ಬಂದಿರಿ?" ಎಂದು ವಿಚಾರಿಸಿದರು. ತನ್ನ ಉದ್ದೇಶವನ್ನು ಹೇಳುವುದರಲ್ಲಿ ಸಮಯವೇನೋ ಹೋಯಿತು. ಆದರೆ "ಇಂಥಲ್ಲಿಗೆ ಹೋಗಿ" ಎಂದು ಮಾರ್ಗದರ್ಶಕರಾಗುವ ಯಾರೂ ಸಿಗಲಿಲ್ಲ. ತಾನು ಮಂಜಯ್ಯನವರನ್ನು ವಿಚಾರಿಸಿಕೊಂಡು ಬಂದಿದ್ದರೂ ಹೆಚ್ಚಿನ ಪ್ರಯೋಜನವಿತ್ತು—ಎಂದು ತೋರಿತು. ಆದರೆ

ಅವರು ಬೈಂದೂರಿಗೆ ಹೋಗಿಯೇ ಉಪಯೋಗವಿಲ್ಲವೆಂದು ಮೊದಲೇ ಹೇಳಿದ್ದರಲ್ಲ?

ಆದರೂ ನಿರಾಶನಾಗಲಾರ. ಹತ್ತು ಮಂದಿಯನ್ನು ಸಮೀಪಿಸಿದಲ್ಲಿ ಒಬ್ಬನಾದರೂ ಒಲಿದಾನು. ಪೇಟೆಯನ್ನು ಸೇರಿ ಒಬ್ಬಿಬ್ಬರು ವ್ಯಾಪಾರಿಗಳನ್ನು ಕಂಡು—"ಇಲ್ಲಿ ಈ ಹೊತ್ತು ಕಾಂಗ್ರೆಸ್ಸ್ ಸಭೆ ಆಗುವುದುಂಟು. ಅಲ್ಲವೇ? ಎಲ್ಲಿ, ಏನು" ಎಂದು ವಿಚಾರಿಸಿದರೆ, ಅವರು "ಯಾರಿಗೆ ಗೊತ್ತು? ಪೇಪರಿನಲ್ಲಿ ಬಂದಿತ್ತಂತೆ. "ಆದರೆ ಈ ವರೆಗೆ ಯಾರೂ ಬಂದಿರಲಿಲ್ಲವಂತೆ. ಈಗ ನೀವು ಒಬ್ಬರೇ ಬಂದು ಕೇಳಿದವರು. ಸಂಗತಿ ತಿಳಿದಿರುವುದಾದರೆ ನಮ್ಮ ಅಪ್ಪಣ್ಣ ಭಟ್ರಿಗೆ ತಿಳಿದಿರಬೇಕು" ಎಂದರು. ಸರಿ, ಅಪ್ಪಣ್ಣ ಭಟ್ಟರಾರೆಂದು ವಿಚಾರಿಸಿದ್ದಾಯಿತು. ನಾಲ್ಕು ನಾಲ್ಕು ಬಾರಿ ಪೇಟೆಯನ್ನು ಸುತ್ತಿ, ಹಣ್ಣಾಗಿ, ಕೊನೆಗೆ ಯಾವುದೋ ಅಂಗಡಿ ಜಗುಲಿಯಲ್ಲಿ ಇಸ್ಪೀಟು ಪಿಡಿ ಹಿಡಿದು ಆಟದಲ್ಲಿ ತಲ್ಲೀನರಾಗಿದ್ದ ಅವರ ದರ್ಶನವಾಯಿತು. ಆ ಹೊತ್ತಿಗೆ, ಆಟದ ಕಳಕ್ಕೆ ದೀಪ ಬಂದು ಸ್ಥಾಪನೆಯಾಗಿತ್ತು.

ಆಟದಲ್ಲಿ ಮುಳುಗಿದ್ದ ಅವರು, ರಾಧಾಕೃಷ್ಣನನ್ನು ಮಾತನಾಡಿಸಲು ಸ್ವಲ್ಪ ಸಮಯ ಹೋಯಿತು. ಕೊನೆಗೆ "ಹಾಗಾದರೆ ನೀವೇನೆ ಬರುತ್ತೇನೆಂದವರು? ಮೂವರು ಬಂದಿದ್ದೀರಾ? ಬೆಳಗ್ಗೆ ಬಂದಿದ್ದರೆ ಸಭೆ ಏರ್ಪಾಡು ಮಾಡಬಹುದಿತ್ತು. ಈಗ ಬಂದಿರಿ. ಜನ ಬಂದು, ಕಾದು ನಿರಾಶರಾಗಿ ಹೋದರು" ಎಂದರು. ಉಳಿದ ಇಬ್ಬರು ಬಾರದ ಸಂಗತಿಯನ್ನು ಕೇಳಿ ಅವರ ಉತ್ಸಾಹ ತಗ್ಗಿತು. ಅವರು ಸದಾನಂದನ ದೂರದ ಸಂಬಂಧಿಕರಂತೆ. ಆತ ಬರುವನೆಂದು ಉತ್ಸಾಹ ತಾಳಿದ್ದರು. ಈಗ ಬಂದವನು ಹೆರವನೊಬ್ಬ; ಹೆಸರಾದ ದೇಶಭಕ್ತನೇನೂ ಅಲ್ಲ—ಎಂದು ತೀರ ನಿರಾಶರಾದರು. ಇನ್ನೊಬ್ಬರ ಗುರುತಿಲ್ಲದ ರಾಧಾಕೃಷ್ಣನು ಅಲ್ಲಿಯೆ ಧರಣ ಹೂಡಿದನು. ಆಟಕ್ಕೆ ಕುಳಿತ ಉಳಿದ ಜನರು ಅವನ ಒಲವಿಗೆ ಬಂದರು." ನೀವು ಯಾರು? ಫಂಡು ಕೂಡಿಸಲು ಬಂದವರೇ? ಮೆಂಬರಿಕೆ ಮಾಡುತ್ತೀರಾ? ನೀವು ಬಂದದ್ದೇನೋ ಸಮನೆ. ಎಲ್ಲರೂ ಸೇರಬೇಕಾಗಿದ್ದ ಕೆಲಸವೇ. ಆದರೆ ನೋಡಿ, ನಿಮಗೆ ನಮ್ಮ ಊರಿನ ಹಣೆಬರಹ ತಿಳಿದಿಲ್ಲ. ಇಲ್ಲಿ ಮಾತಿಗೆ ಮುಂದಾಗುವ ಜನರು ಬಹಳ; ಕೆಲಸಕ್ಕೆ ಮಾತ್ರ ವಿರಳ" ಎಂದರು. "ಆಗಲಿ, ನನ್ನಿಂದ ಆಗುವ ಕೆಲಸ ಮಾಡುತ್ತೇನೆ. ನಾನು

ಯಾರ್ಯಾರನ್ನು ಕಾಣಬೇಕು? ಈ ಊರಿನ ಗಣ್ಯ ವ್ಯಕ್ತಿಗಳನ್ನು ಕಂಡು ಮಾತನಾಡಿಯಾದರೂ ಹೋಗಬಹುದಲ್ಲಾ" ಎಂದನು. ಅಂಥ ಗಣ್ಯ ವ್ಯಕ್ತಿಗಳ ಹೆಸರನ್ನು ಕೇಳಿದನು. ಒಂದೆರಡು ಹೆಸರುಗಳು ಬರುತ್ತಲೇ "ಅವರನ್ನು ಕಾಣುವ ಬದಲು, ನಮ್ಮೂರಿನ ಬೊಬ್ಬರ್ಯನನ್ನು ಕಂಡು ಬರಬಹುದು. ಹೌದಯ್ಯ, ದುಡ್ಡಿನ ಥೈಲಿ ಅವರಲ್ಲಿದೆ ಎಂದು ಕಾಣುವುದೇ? ಮೊದಲು ಅವರಿಗೆ ಸರಕಾರದ ಚಳಿ ಎಷ್ಟಿದೆ-ಎಂಬುದನ್ನು ನೀವು ತಿಳಿದುಕೊಳ್ಳಿ. ಅವರ ಮನೆಗೆ ಹೋದರೆ-ತಾವೇ ಗಾಂಧಿಯೆಂಬಷ್ಟು ಚನ್ನ ಮಾತಾಡುತ್ತಾರೆ. ಬಹಿರಂಗದಲ್ಲಿ ಒಂದು ತುಂಡು ಖಾದಿ ಉಡಲು ಹೆದರಿಕೆ" ಎಂಬ ವಿಮರ್ಶೆ ಬಂದಿತು. ಹಾಗೆ ನುಡಿದವರ ಮುಖವನ್ನು ನೋಡುತ್ತಾನೆ ರಾಧಾಕೃಷ್ಣ! "ಅವರಾದರೂ ಖಾದಿ ಧರಿಸಿದ್ದಾರೆಯೇ" ಎಂದು. ಎಲ್ಲರೂ ಒಂದೇ ತೆರನಾದವರು.

ಇಸ್ಪೀಟಿನ ಆಟವು ಮುಂದೆ ಸಾಗದಾಯಿತು. ಅಪ್ಪಣ ಭಟ್ಟರು "ಹಾಗಾದರೆ ನಾಲ್ಕಾರು ದಿವಸ ಇಲ್ಲಿ ಇರುತ್ತೀರಲ್ಲಾ. ನಾಳೆ ನೋಡುವ-ಮನೆಗೆ ಬನ್ನಿ. ನಾನು ಯಾವುದಕ್ಕೂ ರೆಡಿಯೆ. ಕಾಯಿದೆ ಭಂಗಕ್ಕೂ ಸಿದ್ಧ"ಎಂದರು. ಅವರು ಅಲ್ಲಿಂದ ಹೊರಡಲು ಎದ್ದರು. ಉಳಿದವರೂ ಜತೆಯಲ್ಲಿ ಹೊರಟರು. ರಾಧಾಕೃಷ್ಣಗೆ ರಾತ್ರಿಯನ್ನು ಎಲ್ಲಿ ಕಳೆಯುವುದೆಂದು ತೋರಲ್ಲಿಲ್ಲ. ಊಟಉಪಚಾರಗಳಿಗೆ ಅವಕಾಶವಿಲ್ಲ. ಹಣವಿದ್ದ ಕಲ್ಲವೇ ಆ ಮಾತು? ಹಳ್ಳಿಗಾಡಿನಲ್ಲಿ ಉಳಿದ ಯಾವುದಕ್ಕೆ ಕೊರತೆ ಬಂದರೂ ಅತಿಥಿ ಸತ್ಕಾರಕ್ಕೆ ಕೊರತೆ ಕಾಣಿಸಿರಲಿಲ್ಲ. ಇಲ್ಲಿ ಅದೂ ಶೂನ್ಯವೆಂದು ತೋರಿತು. ಉಪಾಯವಿಲ್ಲದೆ ಆತ, ಆ ಅಂಗಡಿಯವನನ್ನೇ "ಸ್ವಾಮಿ, ಒಂದಿಷ್ಟು ನೀರನ್ನು ಕೊಡುತ್ತೀರಾ? ಇಲ್ಲಿಯೇ ಮಲಗುತ್ತೇನೆ. ಒಂದು ಚಾಪೆ ಕೊಡಬಹುದೇ" ಎಂದೂ ಕೇಳಿದ. ಅಷ್ಟು ಅಂದುದಕ್ಕೆ ಒಂದು ಬಿಂದಿಗೆ ನೀರು ಅನುಗ್ರಹವಾಯಿತು. ಮುಖ ತೊಳೆದು, ಕಾಲು ತೊಳೆದು ನೀರು ಕುಡಿದನು. ಅಂಗಡಿಯವನು "ಈ ಧೂಳಿನಲ್ಲಿ ಏನು ಮಲಗುತ್ತೀರಿ ನೀವು? ಮನೆ ಒಳಗೂ ಜಾಗ ಸಾಲದು. ನಾನೆನ್ನುವುದಾದರೆ, ಇಲ್ಲೇ ನಾಲ್ಕು ಮಾರಿಗೆ ಸರಕಾರಿ ಆಸ್ಪತ್ರೆ ಇದೆ; ಸಿಮೆಂಟಿನ ಜಗುಲಿಯಿದೆ; ಒಳ್ಳೆ ಗಾಳಿ ಬರುವ ಸ್ಥಳ. ಹೇಗೂ ಬೆಳುದಿಂಗಳ ರಾತ್ರಿ—ಯಾವ ಹೆದರಿಕೆಯೂ ಇಲ್ಲ" ಎಂದನು. ಆಹೇ ಪಾಸಿ—ಯೆಂದು ಆತ ರಸ್ತೆಗೆ ಕಾಲು ಇರಿಸಿದ

ಅವನಿಗೆ ಯಾರನ್ನೂ, ಏತಕ್ಕೂ ಕೇಳುವ ಮನಸ್ಸಾಗಲಿಲ್ಲ. ಹೆಜ್ಜೆ ಇಡುತ್ತ ನೂರು ಗಜ ದೂರ ಬರುವುದರಲ್ಲಿ ಆಗಲೇ ಕಾಣಿಸುತ್ತಿದ್ದ ಬೆಳದಿಂಗಳಿನಲ್ಲಿ ಒಂದು ಕಟ್ಟಡ ಕಾಣಿಸಿತು. ಅದೇ ಆಸ್ಪತ್ರೆ ಇರಬೇಕೆಂದು ಊಹಿಸಿದನು. ಅಲ್ಲಿಗೆ ಹೋದನು. ಜಗುಲಿಯನ್ನು ಕಂಡನು. ಅದು ದಾರಿಹೋಕರ ನಿದ್ರೆಗೆ ಪ್ರಶಸ್ತ ಸ್ಥಳವಾಗಿ ಕಾಣಿಸಿತು. ಕಡಲ ಗಾಳಿಯು ರುಮು ರುಮು ಬೀಸುತ್ತಿತ್ತು. ತಂಪಾದ ಬರಿಯ ನೆಲದ ಮೇಲೆ—ಬಂದ ದಣಿಪಿಗೆ, ಕಾಲು ನೀಡಿ ಮಲಗಿಕೊಂಡನು.

ಇನ್ನಷ್ಟು ನಿರಾಶೆಯ ಕನಸುಗಳು ಅವನ ಮುಂದೆ ಕವಿದುವು. ನಾಳೆ ಒಂದು ದಿನ ಇದ್ದು ಏನು ಮಾಡಲಿ? ಯಾರನ್ನು ನಂಬಿ ಕಳೆಯಲಿ? ವಾಕ್ಪಟುಗಳಲ್ಲಿ ವೀರರಾದ ಅಪ್ಪಣ್ಣ ಭಟ್ಟರನ್ನು ಕುರಿತು ಅವನು ಸದಾನಂದನಿಂದಕೇಳಿದ್ದಾನೆ. ಸದಾನಂದನ ಪ್ರಶಸ್ತಿ ಪತ್ರಕ್ಕೂ ಆ ಸಂಜೆಯಾದ ಪ್ರತ್ಯಕ್ಷ ಭೇಟಿಗೂ ಸಂಬಂಧವಿಲ್ಲದಾಯಿತು. ಆತನ ಮನಸ್ಸಿನ ಪಾಡು ಎಂತಿದ್ದರೂ ಶರೀರ ದಣಿದಿದ್ದುದರಿಂದ ತೂಕಡಿಕೆ ಬಂದಿತು. ತನ್ನ ಚೀಲವನ್ನು ದಿಂಬಾಗಿರಿಸಿಕೊಂಡು ನಿದ್ರೆ ಹೋದನು.

ನಡುರಾತ್ರಿಯಲ್ಲಿ ಅವನನ್ನು ಯಾರೋ ಬಂದು ಎಚ್ಚರಿಸಬೇಕೇ! "ಯಾರದು? ಇಲ್ಲಿ ಮಲಗಿದ್ದು?" ಎಂದು ಕೇಳಿದರು. ಬೆಳುದಿಂಗಳು ಹೊರಗೆ ಚೆಲ್ಲಿತ್ತು. ಆದರೆ ಮಾಡಿನ ನೆರಳು ಅವನ ಮತ್ತು ಮಾತನಾಡಿಸಿದ ವ್ಯಕ್ತಿಯ ಮೇಲೆ ಕವಿದಿತ್ತು. ಮೊದಲ ಕ್ಷಣಕ್ಕೆ—ಯಾರೋ ಪೋಲೀಸರು ತನ್ನನ್ನು, ಬೆನ್ನಟ್ಟಿ ಬಂದಿರಬೇಕೆಂದು ಗಾಬರಿಯಾಗಿದ್ದ. ಕೊನೆಗೆ–'ಯಾರಾದರೇನು, ತಾನು ಏನು ಮಾಡಿದ್ದೇನೆ' ಎಂದು ಎದ್ದು ಕುಳಿತನು. ಮಾತನಾಡಿಸಿದವರು ಅವನ ಮುಖಕ್ಕೆ ಟಾರ್ಚು ದೀಪವನ್ನು ಹಿಡಿದುದರಿಂದ—ಅವರನ್ನು ನೋಡುವುದೇ ಅಸಾಧ್ಯವಾಯಿತು. ಕಣ್ಣು ಸಣ್ಣದಾಯಿತು. ಬಂದ ವ್ಯಕ್ತಿ 'ಯಾರು' ರಾಧನೇ?" ಎಂದು ಕೇಳುತ್ತಲೇ, 'ಅಹುದು' ಎಂದನು ಆತ. ಇಬ್ಬರದೂ ಪರಸ್ಪರ ಪರಿಚಿತ ಸ್ವರಗಳಾಗಿ ಕಾಣಿಸಿದುವು. ನಿದ್ರೆಯ ಅಮಲು ಹೋಗದ, ರಾಧಾಕೃಷ್ಣನು ಇನ್ನೂ ಕುಳಿತೇ ಇದ್ದಾನೆ. ಬಂದವರು "ಇಲ್ಲಿ ಬಂದು ಮಲಗಬೇಕೇ? ನಾನು ಇರಲಿಲ್ಲವೇ ಊರಲ್ಲಿ? ದೂರದ ವಿಸಿಟು ಒಂದು ಇತ್ತು. ಹೋಗಿ ಈಗ ಬಂದೆನಷ್ಟೆ. ಅಕಸ್ಮಾತು ಆಸ್ಪತ್ರೆಗೆ ಬಂದುದಕ್ಕಾಯಿತು. ಇಲ್ಲವಾದರೆ" ಎಂದು ಅವನ ಬೆನ್ನನ್ನು

ಚಪ್ಪರಿಸಿದರು. ರಾಧಾಕೃಷ್ಣನ ವಿಸ್ಮಯ ಅಷ್ಟಿಷ್ಟಲ್ಲ. ಯಾರು ಈ ತೆರನು ಪರಿಚಯದಿಂದ ಮಾತನಾಡುವವರು—ಎಂದು ಆತ ಯೋಚಿಸುತ್ತಲೇ ಇದ್ದಾನೆ.

ಅವರೇ ಅಂದರು: "ಏನಯ್ಯಾ, ಸ್ವರದ ಗುರುತೂ ಸಿಗುವುದಿಲ್ಲವೇ? ನಾನಲ್ಲವೇ? ಏ ಮರುಳು? ಕೃಷ್ಣಪ್ಪನಲ್ಲವೇ" ಎಂದರು. "ಯಾರು-ಡಾಕ್ಟರರೇ" ಎಂದನು ಆತ. ಆತನ ನೆನಪು ಈಗ ಕೆರಳಿತು. ಡಾಕ್ಟರು ಕೃಷ್ಣಪ್ಪನವರು ಆತನಿಗೆ ದೂರದವರಲ್ಲ. ತುಂಬ, ಹೆಚ್ಚಿನ ಸಂಬಂಧ. ಇವನ ಅಜ್ಜಿಯೂ ಅವರ ಅಜ್ಜನೂ ಒಂದೇ ತಾಯಿ ಮಕ್ಕಳು. ಇವನ ಕುಟುಂಬ ಬೆಳೆದುದು ಕುಂದಾಪುರದಲ್ಲಿ, ಅವರದು ಬೆಳೆದುದು ಮಂಗಳೂರಲ್ಲಿ. ಅವರು ಈ ಮೊದಲು ಮಂಜೇಶ್ವರದಲ್ಲಿ ಬೋರ್ಡು ನೌಕರಿಯಲ್ಲಿ ಇದ್ದರು. ಈಚೆ ಬೈಂದೂರಿಗೆ ವರ್ಗವಾಗಿ ಬಂದಿದ್ದಾರೆ. ಅದು ರಾಧಾಕೃಷ್ಣನಿಗೆ ಮಾತ್ರ ತಿಳಿದಿರಲಿಲ್ಲ. ಆತ ಮಂಗಳೂರಿನಲ್ಲಿ ಓದುತ್ತಿರುವಾಗ, ಆಗಾಗ ಹೋಗಿ ಬಂದಿದ್ದಾನೆ. ಈಗ ಒಂದೊಂದೇ ನೆನಪಾಯಿತು. ಕರ್ಮಧರ್ಮಸಂಯೋಗದಿಂದ ಆದ ಆ ಭೇಟಿಗಾಗಿ ಸಂತೋಷವಾಯಿತು.

ಮರುಗಳಿಗೆಯಲ್ಲಿ ಆತನ ಮುಖದಲ್ಲಿ ಖೇದಮಿಶ್ರಿತವಾದ ನಗು ಉದಯಿಸಿತು. ಕೃಷ್ಣಪ್ಪನವರು "ಯಾವಾಗ ಬಂದೆ? ಏನು? ಶಾಲೆ ಬಿಟ್ಟಿಯಂತೆ ಅಲ್ಲವೆ? ಏನು ಸಂಗತಿ?" ಎಂದು ಕೇಳುತ್ತಿದ್ದ ಪ್ರಶ್ನೆಗಳಿಗೆ ಅವನೇನು ಉತ್ತರವಿತ್ತಾನು? ಅವರು "ಈಗ ಬರುತ್ತೇನೆ" ಎಂದು ಜತೆಗೆ ಬಂದ ಆಳಿನಿಂದ ಬಾಗಿಲು ತೆಗೆಯಿಸಿ, ತಮ್ಮ ಬೆನ್ನಿಗೆ ಬಂದ ಒಬ್ಬನಿಗೆ ಮದ್ದನ್ನು ಬೆರೆಸಿ ಕೊಟ್ಟು, ಬೀಗವಿಕ್ಕಿ ಹೊರಕ್ಕೆ ಬಂದರು. "ಅಯ್ಯೋ ಮರುಳ—ನಾನು ಈ ಊರಲ್ಲಿದ್ದು ನೀನು ಇಲ್ಲಿ ಬಂದು ಮಲಗಿರಬೇಕೇ? ಹೂಂ—ಇಲ್ಲಿ ಮಲಗಿದ್ದೇ ಒಳ್ಳೆಯದಾಯ್ತು, ಬೇರೆ ಎಲ್ಲಿಯಾದರೂ ಮಲಗಿದ್ದರೆ ಕಾಣಲಿಕ್ಕೆ ಸಿಗುತ್ತಿರಲಿಲ್ಲ" ಎಂದರು. ಅವನ ಕೈ ಚೀಲವನ್ನು ಕಿತ್ತು ಆಳಿನ ಕೈಗೆ ಕೊಟ್ಟರು. ಅವನನ್ನು ಕರೆದುಕೊಂಡು ಹೊರಟರು. ದಾರಿಯಲ್ಲಿ "ಊಟವಾಗಿದೆಯೇ" ಎಂದು ವಿಚಾರಿಸಿದರು.

"ಹೂಂ"

"ಎಲ್ಲಿ ಹೋಟೆಲಲ್ಲೇ?"

"ಅಲ್ಲ ಆಲೆಮನೆಯಿಂದ ಊಟಮಾಡಿ ಹೊರಟೆ"

"ಆಲಿ ಮನೆಯಿಂದ. ರಾತ್ರಿ ಊಟಮಾಡಿ"—

"ಅಲ್ಲ ಮಧ್ಯಾಹ್ನ"

"ಹುಂ, ಮಹಾರಾಯರು ನೀವು. ಈಗ ಗಾಂಧಿಯ ದರ್ಬಾರಲ್ಲವೇ ದೇವರು ಕೊಟ್ಟದ್ದನ್ನೂ ಉಣ್ಣಬಾರದೆಂದು ವಿಧಿ ಬರೆದ ಹಾಗೆ ಕಾಣುತ್ತದೆ." ಎಂದು ಪರಿಹಾಸ್ಯಮಾಡಿ ಅವನ ಹೆಗಲಿನ ಮೇಲೆ ಕೈಯಿರಿಸಿಕೊಂಡು ಮನೆಗೆ ಬಂದರು. ಮನೆಯವರಂತು ಡಾಕ್ಟರರ ಹಾದಿ ಕಾದಿದ್ದರು. "ಶಾಂತಾ, ನಮ್ಮ ಮರಿ ಗಾಂಧಿ ಬಂದಿದ್ದಾನೆ; ಅನ್ನವುಂಟೇ? ಮಾಡಿಯಾಗಬೇಕೆ? ಇಲ್ಲ. ಇದ್ದುದ್ದನ್ನು ಇಬ್ಬರೂ ಸೇರಿ ಉಂಡರಾಯಿತು" ಎಂದರು. ಅವರ ಹೆಂಡತಿ ಶಾಂತಾಬಾಯಿ ನಿದ್ರೆಕೂರುತಿದ್ದವರು, ಕಣ್ಣು ಉಜ್ಜಿಕೊಂಡು ದೀಪವನ್ನು ದೊಡ್ಡದುಮಾಡಿ ನೋಡುತ್ತಾಳೆ,- ರಾಧಾಕೃಷ್ಣ ನಿಂತಿದ್ದಾನೆ! ಗಂಡನ ಜತೆಯಲ್ಲಿ.

ರಾಧಾಕೃಷ್ಣನಿಗೆ ಬಳಲಿಕೆ, ಹಸಿವು, ನಿದ್ರೆಗಳ ಸಮ್ಮಿಶ್ರಿತ ಮಬ್ಬು ಇನ್ನೂ ಹೋಗಿಲ್ಲ. ಅವಳು ತಂದು ಇರಿಸಿದ ನೀರಿಂದ ಮುಖತೊಳೆದು ಕೃಷ್ಣಪ್ಪನ ಜತೆಯಲ್ಲಿ ಊಟಕ್ಕೆ ಕುಳಿತುಕೊಂಡನು. ಎತ್ತೆತ್ತಲೋ ಚಿತ್ತವಿರಿಸಿ ಊಟಮಾಡಿದನು. ಕೃಷ್ಣಪ್ಪನವರು, "ಅಸಾಮಿ ತುಂಬ ದಣಿದಿದೆ. ನಾವು ಈ ಊರಿಗೆ ಬಂದ ಸಂಗತಿಯೇ ಅವನಿಗೆ ತಿಳಿದಿಲ್ಲವಂತೆ!" ಎಂದು ನುಡಿದು ಹಾಸುಗೆ ಹಾಕಲು ಹೇಳಿದರು. ಆಕೆ ಅಷ್ಟನ್ನು ಮಾಡಿ, "ಹಾಕಿ ಆಯಿತು" ಎಂದಳು. ಆಕೆಗೆ ರಾಧಾಕೃಷ್ಣನ ತಮ್ಮನ ಲಗ್ನದ ವಿಚಾರ ತಿಳಿದೂ ಇತ್ತು. ಅದಕ್ಕೆ ಆಮಂತ್ರಣವೂ ಬಂದಿತ್ತು. ಅದರ ನೆನಪಾಗಿ "ಇವರ ತಮ್ಮನಿಗೆ ನಿನ್ನೆ ಅಲ್ಲವೆ ಲಗ್ನ?" ಎಂದು ಕೇಳಿದಳು.

ಕೃಷ್ಣಪ್ಪನಿಗೂ ನೆನಪಾಯಿತು, "ಏ ಮರುಳೇ, ನೀನು ಮದುವೆ ಮನೆಯ ಪಾಯಿಸ ತಿನ್ನುವುದನ್ನು ಬಿಟ್ಟು ಹೀಗೆ ಊರೂರು ಸುತ್ತುತ್ತಿದ್ದೀಯಾ? ಅನಂತಕೃಷ್ಣನಿಗೆ ಮದುವೆ ನಿನ್ನೆ ಅಂತ ಗೊತ್ತಿಲ್ಲವೇ" ಎಂದರು.

"ನಿನ್ನೆ ಇರಬೇಕು. ನಿನ್ನೆ ಹುಣ್ಣಿಮೆ ಅಲ್ಲವೇ? ನಾನು ಮನೆಗೆ ಹೋಗದೆ ತಿಂಗಳ ಮೇಲಾಯಿತು; ಸಂಚಾರದಲ್ಲಿದ್ದೇನೆ"

ಡಾಕ್ಟರರು ಅವನನ್ನು ಮಾತನಾಡಿಸುತ್ತ ಕುಳಿತರಲು ಬೆಳಗಿನವರೆಗೂ ಸಿದ್ಧರೇ. ಆಪ್ತರೆಂದರೆ ಅವರಿಗೆ ಜೀವ. ಅದರಲ್ಲೂ ರಾಧಾಕೃಷ್ಣನಲ್ಲಿ ತುಂಬ ಅಭಿಮಾನ. ಆತ ಶಾಲೆ ಬಿಟ್ಟುದನ್ನು ಕೇಳಿ ತುಂಬ

ನೊಂದಿದ್ದಾರೆ. ಅವರ ಹೆಂಡತಿ ಶಾಂತಿ, ರಾಧಾಕೃಷ್ಣನನ್ನು "ಮರುಳೇ, ಮರುಳೇ" ಎಂದಾಗ ಮಾತ್ರ, 'ಮರುಳು ನಮಗೆ; ಎಲ್ಲರೂ ತಮ್ಮ ಮನೆ ತುಂಬಿಸಲು ಹೊರಟರೆ, ದೇಶದ ಕೆಲಸ ಮಾಡುವವರು ಯಾರು? ಅವನಿಗೆ ಒಬ್ಬನಿಗಾದರೂ ದೊಡ್ಡ ಬುದ್ಧಿ ಬಂದುದು ಸಂತೋಷ. ಅವನು ಮಾಡಿದ ಕೆಲಸ ಸರಿಯಾದುದೇ' ಎಂದು ವಾದಿಸಲು, ಅವರೂ ಒಪ್ಪಬೇಕಾಯಿತು. ಆದರೂ ಅವರಿಗೆ ಒಮ್ಮೊಮ್ಮೆ "ಈ ಹುಡುಗ ಓದು ಮುಗಿಸಿ ಉದ್ಯೋಗ ದೊರಕಿಸಿಕೊಂಡು, ತನ್ನ ಅನ್ನವನ್ನು ತಾನು ಗಳಿಸಲು ಕಲಿತ ಮೇಲೆ, ಹೀಗೆಲ್ಲ ಮಾಡಿದ್ದರೆ ಚೆನ್ನಾಗಿರುತ್ತಿತ್ತು "ಎಂದು ತೋರುತ್ತಿತ್ತು.

ದಣಿದ ಗೆಳೆಯರನ್ನು ಮಾತಾಡಿಸಲು ಅವರಿಗೆ ಮನಸ್ಸಾಗಲಿಲ್ಲ. ಅವನ ಮಗ್ಗುಲ ಬಳಿ ತಾವು ಹಾಸಿಗೆ ಹಾಸಿ ಮಲಗಿಕೊಂಡರು. ರಾಧಾಕೃಷ್ಣನಿಗೆ ಗೊರಕೆ ಪ್ರಾರಂಭವಾಯಿತು. ಅದರಿಂದ ಅವರ ನಿದ್ರೆ ದೂರವಾಯಿತು. "ಪಾಪದ ಪ್ರಾಣಿ, ಎಷ್ಟೆಲ್ಲಾ ತಿರುಗಾಗಿ ದಣಿದಿದೆಯೋ, ನಾನು ಕಾಣದೆ ಹೋಗಿದ್ದರೆ ಲಂಘನವೇ ಗತಿ"ಎಂದು, ತಿರುಗಿ ಅವನನ್ನು ಕುರಿತಾದ ಹತ್ತೆಂಟು ಕತೆ, ಉಪ ಕಥೆ, ಪ್ರಶಂಸೆಗಳ ನೆನವರಿಕೆ ಮಾಡಿದರು. ಅವುಗಳ ಜತೆಗೆ ರಾಮಪ್ಪಯ್ಯನವರು, ತಮ್ಮನ್ನು ಸಂಧಿಸಿದಾಗ ಮಗನನ್ನು ಕುರಿತು ತೋರಿಕೊಂಡ ಹೊಟ್ಟೆಯುರಿ ಮಾತುಗಳೂ ನೆನಪಿಗೆ ಬಂದುವು. ಅವರಿಗೆ ನಗುವು ಬಂದಿತು "ಒಬ್ಬೊಬ್ಬರದು ಒಂದೊಂದು ರೀತಿ. ತಂದೆಯ ತರಹ ಬೇರೆಯೇ. ಇವನ ದಾರಿಯೇ ಬೇರೆ. ಅವರದೆಷ್ಟು ಸಂಕುಚಿತ ದೃಷ್ಟಿಯೋ ಅಷ್ಟೇ ವಿಶಾಲವಾದುದು ಇವನದು ಎಂದು ತೋರಿತು.



# ಮೂರನೆಯ ಅಧ್ಯಾಯ

ಬೆಳಗಿನ ಸೂರ್ಯ ಉದಯಿಸುವಾಗ ರಾಧಾಕೃಷ್ಣ ಇನ್ನೂ ಎದ್ದಿರಲಿಲ್ಲ. ಡಾಕ್ಟರ್ ಕೃಷ್ಣಪ್ಪನವರ ಮನೆಯಲ್ಲಿ ಆಗಲೇ ಗದ್ದಲ ತೊಡಗಿದೆ. ಮಾವ ಬಂದನೆಂದು ಅವರ ಮಕ್ಕಳು ಕೋಲಾಹಲ ಎಬ್ಬಿಸುತ್ತಿದ್ದರು. ಅವರಿಗೆ ಮೂವರು ಮಂದಿ ಹೆಣ್ಣು ಮಕ್ಕಳು. ಮೂರು, ಐದು, ಏಳು ವಯಸ್ಸಿನ ಬಾಲಕಿಯರು. ಮೂವರೂ ಮಾವನ ಮುಖವನ್ನು ನೋಡಿ, ನೋಡಿ ಹೋಗುತ್ತಿದ್ದಾರೆ. "ಮಾವ ಏಳುವುದೇ ಇಲ್ಲ. ನಮಗೆ ಇಲ್ಲಿ ಹಸಿವಾಗುತ್ತಿದೆ" ಎಂದು ತಾಯೊಡನೆ ದೂರು ಕೊಡುತ್ತಿದ್ದಾರೆ. ರಾಧಾಕೃಷ್ಣನಿಗೆ ಎಚ್ಚರವಾಯಿತು. ಮಾತು ಕೇಳಿಸಿತು. "ಏನು, ಎಂಥದೆಂದು" ಯೋಚಿಸಿ ತಿಳಿಯಬೇಕಾಯಿತು. ಅವನಿಗೆ ತುಸು ಸಮೀಪದಲ್ಲಿ ಆರಾಮು ಕುರ್ಚಿಯಲ್ಲಿ ಕುಳಿತಿದ್ದ ಕೃಷ್ಣಪ್ಪನವರು, "ಎಚ್ಚರವಾಯಿತೆ ರಾಯರಿಗೆ!" ಎನ್ನುತ್ತಲೆ, ತನ್ನ ಹೊಸ ಸಿಲ್ದಾಣದ ಪರಿಚಯ ಸ್ಪಷ್ಟವಾಯಿತು. ಹಾಸುಗೆಯಿಂದ ಎದ್ದು ಕುಳಿತನು. ಹೊರಕ್ಕೆ ಹೋಗಿ ಬಂದನು. ಆತ ಮರಳಿ ಬರುವಾಗ, ಊಟದ ಕೋಣೆಯಲ್ಲಿ ಮಕ್ಕಳು ತಟ್ಟೆಗಳನ್ನು ಇರಿಸಿಕೊಂಡು ಉಪಾಹಾರಕ್ಕೆ ಕಾದಿದ್ದುವು. "ಅವರಿಗೆ ಬಡಿಸ ಬಾರದಿತ್ತೇ" ಎಂದನು ರಾಧಾಕೃಷ್ಣ. "ಏನು-ಎರಡು ನಿಮಿಷ ಕಾದು ಕುಳಿತರೆ?" ಎಂದಳು ಶಾಂತ. ಸವಿ ತಿನಸು, ಸವಿಮಾತುಗಳಲ್ಲಿ ಸಮಯವು ಸರಿಯಿತು. ರಾಧಾಕೃಷ ಹಿಂದಣ ದಿನದ ಆಯಾಸ ನಿರಾಶೆಗಳೆಲ್ಲ, ಮಕ್ಕಳ ಮೋರೆಯನ್ನು ನೋಡುತ್ತಲೂ ಶಾಂತಿಯ ಉಪಚಾರದಿಂದಲೂ ಮಾಯವಾದುವು. ಡಾಕ್ಟರರು ಆಸ್ಪತ್ರೆಗೆ ಹೊರಡುವಾಗ ಅವನೂ ಜತೆಗೆ ಹೊರಟನು. "ನಾನು ಬಂದ ಕೆಲಸಕ್ಕೆ ಯಾರನ್ನು ಕಂಡರಾಗಬಹುದು" ಎಂದು ಕೇಳಿದನು. "ಏಕೆ, ಈ ಊರಿನ ಜನರನ್ನು ಕಾಣುವ ಬದಲು ಅಶ್ವತ್ಥದ ಮರಕ್ಕೆ ಸುತ್ತು ಬಂದರೆ ಹೆಚ್ಚಿನ ಪುಣ್ಯ." "ಅಪ್ಪಣ್ಣ ಭಟ್ಟರು ಸಿಗುತ್ತೇನೆ. ಎಂದು ಹೇಳಿದ್ದಾರೆ" ಎಂದನು ಈತ. "ಅಪ್ಪಣ್ಣ ಭಟ್ಟರೇ, ಇಸ್ಪೀಟು, ಜುಗಾರಿ, ಬಿಟ್ಟು ಏಳುವವರೇ". ಅವನಿಗೂ ನಗು ಬಂದಿತು—"ಬಂದಿದ್ದೇನೆ. ನಾಲ್ಕು ಮಂದಿಯನ್ನು ಕಂಡು

ಮಾತನಾಡಿ ಹೋಗಬೇಡವೇ? ಬಂದ ಕೆಲಸ ಆಗಲಿ, ಆಗದೆ ಹೋಗಲಿ. ಊದುವ ಶಂಖ ಊದಿಯೆ ಬಿಡುತ್ತೇನೆ" ಎನ್ನಲು "ನೀನೀಗ ನನ್ನ ಜೊತೆಯಲ್ಲಿ ಆಸ್ಪತ್ರೆಗೆ ಬಾ. ಅಲ್ಲಿ ಹೋಗಿ ಕುಳಿತು ಹರಟೆ ಹೊಡಿಯುವ. ಕಾಣುವವರಿದ್ದರೆ ಮಧ್ಯಾಹ್ನ ಕಂಡರಾಯಿತು" ಎಂದರು ಅವರು.

ಅವರ ಮಾತಿಗೆ ಎದುರಾಡಲಾರದೆ ದಾಕ್ಷಿಣ್ಯ ಮೂರ್ತಿಯಾಗಿ ಒಪ್ಪಿಕೊಂಡ. ಜತೆಯಲ್ಲಿ ಆಸ್ಪತ್ರೆಗೂ ಹೋದನು. ಅವರ ಮುಂದೆ ಕುರ್ಚಿ ಹಾಕಿ ಕುಳಿತುಕೊಂಡು ಮಾತನಾಡುತ್ತಿದ್ದ. ತಮ್ಮ ಎದುರಿಗೆ ಹಾಯುತ್ತಿದ್ದ ಒಂದು ದಿನದ ನರಕದ ಚಿತ್ರದ ಅನುಭವವಾಯಿತು. ಕೈಯಲ್ಲಿ ಕಾಸಿಲ್ಲದೆ, ಬೇನೆಗಳಿಗೆ ಬರಗಾಲವಿಲ್ಲದೆ, ಹೊಟ್ಟೆಗೆ ಅನ್ನವಿಲ್ಲದೆ, ಕಂಗೆಟ್ಟಿರುವ ರೋಗಿಗಳ ಪಂಗಡವನ್ನು ಕಾಣುವ ಸುಯೋಗ ದೊರೆಯಿತು. ಕೃಷ್ಣಪ್ಪನವರು ರೋಗಿಗಳನ್ನು ಕಂಡು ವಿಚಾರಿಸುವರು; ಒಮ್ಮೊಮ್ಮೆ ಪರಿಹಾಸ್ಯಮಾಡುವರು; ಇನ್ನೊಮ್ಮೆ ಕನಿಕರ ತೋರುವರು. ಮತ್ತೊಮ್ಮೆ ಅವರ ಕೈಲಾಗದ ಬಡತನವನ್ನು ಕಂಡು ನಿರಾಶರಾಗುವರು. "ನೋಡು ರಾಧಾ, ಅವನಿಗೆ ತ್ರಾಣ ಬರಲು ಟೋನಿಕ್ ಬೇಕು. ತುಂಬ ಹಾಲು ಬೇಕು; ಹಣ್ಣು ಬೇಕು; ಊಟಕ್ಕಿದ್ದರಲ್ಲವೇ ಅಷ್ಟೆಲ್ಲ ಮಾಡುವದು? ಇಲ್ಲಿ ಸಮನಾಗಿ ಮದ್ದು ಕೊಡುತ್ತ ಹೋದರೆ ವರ್ಷದ ಸ್ಟೋಕು ತಿಂಗಳಲ್ಲಿಯೇ ಖರ್ಚಾದೀತು. ಇದನ್ನೆಲ್ಲಾ ಕಂಡು ಬೇಸರವಾಗುತ್ತದೆ" ಎನ್ನುತ್ತಾರೆ.

ಇನ್ನೊಮ್ಮೆ "ರಾಧಾಕೃಷ್ಣ, ಈ ಬಡವರನ್ನು ಕಂಡು ಇಷ್ಟು ಬೇಸರವಾಗುತ್ತದೆಯಲ್ಲಾ, ಇಲ್ಲಿನ ಶ್ರೀಮಂತರನ್ನು ಕಂಡು ಅಷ್ಟೇ ಸಿಟ್ಟು ಬರುತ್ತದೆ. ನಿನ್ನೆ ರಾತ್ರಿ ಅಷ್ಟು ತಡವಾಗಿ ಬಂದನಲ್ಲಾ—ಹೋದದ್ದು ಒಬ್ಬ ಶ್ರೀಮಂತನ ಮನೆಗೆ. ಯಾವಾಗಿನಿಂದ 'ನಿಮ್ಮ ಹುಡುಗನ ವಿಷಯ ಜಾಗ್ರತೆ ಇರಬೇಕು. ಅದು ವಿಷಮ ಜ್ವರ. ಪಥ್ಯ ಚೆನ್ನಾಗಿರಬೇಕು' ಎಂದರೆ; ಹಣ್ಣಿಗೆ ಹಣ ಖರ್ಚಾಗುತ್ತದೆ ಎಂದು, ಜ್ವರ ಬಿಟ್ಟ ಮೂರು ದಿವಸಗಳಲ್ಲಿ ಗಂಜಿಯನ್ನು ತಿನಿಸಿ ಬಿಟ್ಟಿದ್ದಾರೆ. ಈಗ ರಿಲೇಪ್ಸು; ಹೇಮರೇಜ್. ಎಲ್ಲವನ್ನೂ ಕೆಡಿಸಿ ಕರೆಯುತ್ತಾರೆ. ರಾತ್ರಿ ಹೋಗಿ ಇಂಜೆಕ್ಷನ್ ಕೊಟ್ಟು ಬಂದಿದ್ದೇನೆ. ಬದುಕುವುದು ಕಷ್ಟ. ಒಮ್ಮೆ ಗುಣವಾದರೂ, ಇಷ್ಟೆಲ್ಲಾ ಮೆಹನತ್ತನ್ನು ಮರೆತು ಇನ್ನೊಂದು ಆಪತ್ತು ಬರುವ ತನಕ ನನ್ನ ಮುಖ ಕಾಣುವವರಲ್ಲ. ಒಂದೇ ಒಂದು ಬಿಡುಕಾಸನ್ನು ಕೊಡುವ ಶೀಲವಲ್ಲ. ದೇವರ

ದಯೆಯಿಂದ ಹುಡುಗನಿಗೆ ಗುಣವಾದರೆ, ಅದೂ ಆಸ್ಪತ್ರೆಯ ಧರ್ಮದ ಮದ್ದಿನಿಂದಲೇ ಗುಣವಾದರೆ, ಮಳೆಗಾಲದಲ್ಲಿ ಎರಡು ಹಲಸಿನ ಹಣ್ಣುಗಳನ್ನು ಕಳುಹಿಸಿಬಿಡುತ್ತಾರೆ. ಇಡೀ ವರ್ಷದ ಫೀಸೆಂದರೆ ಅದು" ಎಂದರು. ರಾಧಾಕೃಷ್ಣ ಅವರ ಮಾತುಗಳನ್ನು ಕೇಳುತ್ತಲೇ ಇದ್ದಾನೆ. ಆ ಆವರಣದಲ್ಲಿ ಅವನ ಮನಸ್ಸು ರಾಷ್ಟ್ರೀಯ ವಿಚಾರಗಳಿಂದ, ರೋಗ ಪ್ರಪಂಚಕ್ಕೆ ಹರಿದಿದೆ. ಅಲ್ಲಿಗೆ ಬರುತ್ತಿದ್ದ ಒಂದೊಂದು ಪ್ರಾಣಿಯನ್ನು ಕಂಡೂ ಅವನ ಮನಸ್ಸು ಕರಗುತ್ತಿದೆ. ಅದು ಕಡಲ ಕರೆಯ ಊರು. ಆದರೂ ಮಲೇರಿಯ ಪೀಡಿತರುಗಳ ಸಂಖ್ಯೆಯು ಬಹಳ! ಕೆಲವರು ಕ್ಷಯರೋಗಿಗಳು, ಹಲವರು ಪೌಷ್ಟಿಕ ಆಹಾರದ ಅಭಾವದಿಂದ ಜರ್ಜರಿತರಾದ ಶಿಶುಗಳು. ನಿತ್ಯವೂ ಅಂತಹ ಚಿತ್ರಗಳನ್ನು ಕಂಡು ನಿಸ್ಸಾಹಾಯನಾಗಿ ದುಡಿಯುತ್ತಿದ್ದಾನೆ ತನ್ನ ವೈದ್ಯ ಗೆಳೆಯ. ಅವನ ಮನಸ್ಸು "ಬರಿಯ ಬಾಯಿಮಾತಿಗಿಂತ, ಇಂಥದೇನಾದರೂ ಕೆಲಸಮಾಡಿದರಾಗದೇ" ಎನ್ನುತ್ತಿದೆ. ನಿಜ, ಸದಾನಂದ ವೈದ್ಯಕೀಯ ಪರೀಕ್ಷೆ ಮುಗಿಸಿ ಬಂದರೆ ಯಾವುದಾದರೊಂದು ಹಳ್ಳಿಯ ಮೂಲೆಯಲ್ಲಿ ಒಂದು ಧರ್ಮಾಸ್ಪತ್ರೆಯನ್ನು ತೆರೆದರೆ, ತನ್ನಂತಹನು ಒಂದು ಶಾಲೆಯನ್ನೋ, ಕರ್ಮ ಶಾಲೆಯನ್ನೋ ತೆರೆದರೆ—ದೊಡ್ಡದೇನಾಗದಿದ್ದರೂ ಒಂದು ಹಳ್ಳಿಯನ್ನಾದರೂ ಸುಧಾರಿಸ ಬಹುದು, ಎಂಬ ಕನಸು ಅವನಿಗೆ ಕಾಣುತ್ತಿದೆ. ಜತೆಗೆ—ಅದಕ್ಕೂ ಜನ, ಧನ, ಬೇಡವೇ—ಎಂದು ನಿಟ್ಟುಸಿರು ಮೂಡುತ್ತದೆ.

ಆಸ್ಪತ್ರೆಯ ಬೆಳಗಿನ ಸರದಿ ಮುಗಿಯಲು ಅವರು ಮನೆಗೆ ಬಂದರು. ಮಧ್ಯಾಹ್ನ ಊಟವಾಗುತ್ತಲೆ ರಾಧಾಕೃಷ್ಣ ತನ್ನ ದಿನದ ಜಪತೊಡಗಿದನು. ತಕಲಿಯಿಂದ ನೂಲು ಮಾಡಲು ಕುಳಿತನು. ಡಾಕ್ಟರರ ಮಕ್ಕಳು 'ಆ ಗಿರಿಕಿಟಿ, ತನಗೆ, ತನಗೇ'ಎಂದು ಹಟಹಿಡಿದುವು. ಅವನ ತಕಲಿಯು ಗಿರಿಗಿಟಿಯಾಗಿ ಮಕ್ಕಳ ಕೈಯಲ್ಲಿ ಕುಣಿಯಬೇಕಾಯಿತು. "ಸುಮ್ಮನೆ ಕುಳಿತಿರುವ ಬದಲು ಕೆಲವು ಪ್ರಮುಖರನ್ನಾದರೂ ಕಾಣುವ" ಎಂದನು ಆತ. ಅದಕ್ಕೆ ಡಾಕ್ಟರರು "ನೀನೀಗ ಮಲಗಿಕೊ, ಸಂಜೆ ಬರಿಯ ಎರಡು ಘಂಟೆ ಕೆಲಸ ನನಗೆ; ಆ ಮೇಲೆ ಊರು ಸುತ್ತುವುದು ಇದೆ. ಹೆಸರಿಗೆ ಒಂದು ಕ್ಲಬ್ಬೂ ಇದೆ. ನಮ್ಮ ಊರಿನ ತಟ್ಟೆರಾಯರೆಲ್ಲರು ಅಲ್ಲಿಗೆ ಬರುತ್ತಾರೆ. ಏನು ಮಾಡುತ್ತೀಯೋ ನೋಡುವ" ಎಂದರು.

ಮಧ್ಯಾಹ್ನ ನಿದ್ರೆಗೆ ಮನಸ್ಸಾಗದೆ ಅವರ ಜತೆಯಲ್ಲಿಯೆ ಆಸ್ಪತ್ರೆಗೆ ಹೊರಟನು. ಸೀಸೆಗೂ ಗತಿ ಇಲ್ಲದೆ ಮದ್ದಿಗಾಗಿ ಬಂದಿರುವ ಒಬ್ಬ ಹೊಲೆಯನ ದರ್ಶನವಾಯಿತು. ಆತನೆನ್ನುತ್ತಾನೆ: "ಅದು ನಿಜಕ್ಕೂ ಉಂಬಲ್ತಿಯ ಸೋಂಕು. ಅಷ್ಟು ಜೋರುಜ್ವರ ಸುಮ್ಮನೆ ಬರಲಿಕ್ಕಿಲ್ಲ" ಎಂದು. "ಸೀಸೆ ತಂದಿದ್ದೀಯಾ" ಎಂದು ಡಾಕ್ಟರರು ಕೇಳಿದರೆ "ಎಲ್ಲಿನ ದುಡ್ಡು ಒಡೆಯ? ಏನಾದರೂ ಹುಡಿ ಮದ್ದುಕೊಡಿ. ಅದು ಹೇಗೂ ಬದುಕುವ ಬಾಬಲ್ಲ" ಎಂದು ಮದ್ದು ಕೊಳ್ಳುವ ಮೊದಲೇ ತೀರ್ಮಾನವನ್ನು ಹೇಳಿದನು. ಡಾಕ್ಟರರು ನಕ್ಕರು. "ಹಾಗಾದರೆ ಬದುಕಿ ಉಳಿಯುವ ನೀನು ಆ ಮದ್ದನ್ನು ಕುಡಿ. ಮದ್ದು ಖರ್ಚಾದ ಮೇಲೆ ಸೀಸೆ ತಂದುಕೊಡು. ನಿತ್ಯವೂ ಎಂಟು ದಿವಸ ಮದ್ದುಕೊಟ್ಟು ನೋಡು, ಉಂಬಲ್ತಿಯ ಸೋಂಕಿಗೂ ಇದರಲ್ಲಿ ಒಂದಿಷ್ಟು ಮಂತ್ರಿಸಿದ ಬೂದಿ ಹಾಕಿದ್ದೇನೆ" ಎಂದರು. "ಹೌದೇ ಒಡೆಯ?" ಎಂದು ತೀರ ಆಸಕ್ತಿಯಿಂದ ಅವನು ಕೇಳಿದನು. "ನಾವು ಬ್ರಾಂಬ್ರು ಅಲ್ಲವೇ, ಮಂತ್ರಕ್ಕೆ ಬರಗಾಲವೇ" ಎಂದು ಪರಿಹಾಸ್ಯಮಾಡಿ ಮದ್ದುಕೊಟ್ಟರು.

ಪಂಚಮರ ಉನ್ನತಿ ರಾಧಾಕೃಷ್ಣನ ಕನಸುಗಳಲ್ಲೊಂದಾಗಿತ್ತು. ಈ ನೋಟವನ್ನು ನೋಡಿದ ಆತನು—'ಇವರ ಕಾಯಿಲೆಗೆ ಮದ್ದೇ? ಅಜ್ಞಾನಕ್ಕೆ ಮದ್ದೇ? ಬಡತನಕ್ಕೆ ಮದ್ದೇ?' ಎಂಬ ವಿಚಾರತರಂಗಕ್ಕೆ ಗುರಿಯಾದನು. ತಾನು ಆ ಊರಿಗೆ ಬಂದುದಕ್ಕೆ, ನಾಲ್ಕು ಹೊಲೆಯರ ಗುಡಿಸಲುಗಳನ್ನು ಸಂದರ್ಶಿಸಿ, ಅವರಿಗೆ ಮಧ್ಯಪಾನ ಮಾಡಬೇಡಿ ಎಂದು ಬೋಧಿಸುವ ಮನಸ್ಸಾಯಿತು. ತಕ್ಷಣ ತಾನು ಬಂದ ಕೆಲಸದ ವಿಚಾರ ನೆನಪಾಯಿತು. ಅದರಿಂದ ಆಸ್ಪತ್ರೆ ಮುಗಿಯುವ ತನಕ ಆತುರವನ್ನು ತಡೆದು ಹಿಡಿಯುವುದೂ ಕಷ್ಟವಾಯಿತು. ಈಗ ಅದೂ ಮುಗಿಯಿತು. ಕೃಷ್ಣಪ್ಪನವರೊಡನೆ ಹೊರಟು, ಮನೆಯನ್ನು ಸೇರಿ ಉಪಾಹಾರ ಮುಗಿಸಿ, ಹೊರಬಿದ್ದನು. ಮೊದಲಿಗೆ ದಾರಿಯಲ್ಲಾದ ದರ್ಶನವೇ ಅಪ್ಪಣ್ಣ ಭಟ್ಟರದ್ದು. ಡಾಕ್ಟರರಾಗ "ಏನು—ಪಾರಾಯಣಕ್ಕೆ ಹೊರಟದ್ದೇ?" ಎಂದು ಕೇಳಿದರು.

"ಛೇ ಛೇ. ಇವರು ಬಂದಿದ್ದಾರಲ್ಲವೇ! ನಾವೇನಾದರೂ ಮಾಡಬೇಡವೇ? ನನಗೆ ಇವರು ನಿಮ್ಮಲ್ಲಿ ಉಳಿದುಕೊಂಡರೆಂಬುದು ಗೊತ್ತಿರಲಿಲ್ಲ. ನಿಮ್ಮಲ್ಲಿ ಇದ್ದಾರೆಂದು ತಿಳಿದಿದ್ದರೆ ಬೆಳಗ್ಗೆನೇ ಬರುತ್ತಿದ್ದೆ, ಎಂದು ಅವರ

ಹಿಂದೆಯೇ ಹೊರಟರು. ದಾರಿಯುದ್ದಕ್ಕೂ ಅವರ್ರೇನೇ ಮಾತುಗಾರರಾದರು. ನಡು ನಡುವೆ "ನಮ್ಮ ಕಮ್ತಿಯರ ಮಗ ಬಾರದೆ ಹೆಡ್ಡಾಯಿತು ಕೆಲಸ; ಮೂವರು ಸೇರಿ ಬಂದಿದ್ದರೆ ಒಂದು ದೊಡ್ಡ ಸಭೆಯನ್ನೇ ಮಾಡಬಹುದಿತ್ತು. ನಮ್ಮ ಊರಿನಲ್ಲಿ ಈ ವಿಷಯದಲ್ಲಿ ದೊಡ್ಡವರು ಮನಸ್ಸು ಮಾಡುವುದು ಹೇಗೋ" ಎನ್ನುತ್ತಲೇ ಡಾಕ್ಟರರು "ನಿಮ್ಮಂಥ ಹುಷಾರಿಗಳಿರುವಾಗ ದೊಡ್ಡವರನ್ನೇನು ಮಾಡುವದು--ಒಲೆಗೆ ಹಾಕಿ" ಎಂದರು. ಅಲ್ಲಿಂದ ಅವರು ಮುಂದುವರಿದುದೇ ಊರಿನ ಶ್ರೀಮಂತರಲ್ಲೊಬ್ಬರಾದ ನಾಗಪ್ಪಯ್ಯನವರಲ್ಲಿಗೆ ಡಾಕ್ಟರರು ಬಂದರೆಂದು ಕಾಫಿಗೆ ನೋಟೀಸು ಹೋಯಿತು. ಕೃಷ್ಣಪ್ಪನವರು "ನಾವು ಕಾಫಿಗೆ ಬಂದವರಲ್ಲ. ಇವರು ನಮ್ಮ ನೆಂಟರು. ಬಿ. ಎ. ಓದುವುದನ್ನು ಬಿಟ್ಟು ಗಾಂಧೀ ಕೆಲಸ ತೊಡಗಿದ್ದಾರೆ. ಅವರಿಗೇನು ಮಾಡುತ್ತೀರಿ ಹೇಳಿ? ಒಂದು ಸಭೆ ಕರೆಯಿಸಿ, ಒಂದು ಕಾಂಗ್ರೆಸ್ಸು ಕಮಿಟಿ ಮಾಡಿ, ಒಂದು ಚರಕಾ ಸಂಘ ಮಾಡಿಸಿ; ಹಿಂದಿನಿಂದ ನಾವು ಸಹಾಯಕ್ಕೆ ಇದ್ದೇವೆ. ಬೋರ್ಡಿನ ಹಣವನ್ನು ತಿನ್ನುತ್ತಿರುವಷ್ಟು ದಿವಸ ಎದುರಿಗೆ ನಮ್ಮ ಹೆಸರು ಕೊಡಲಿಕ್ಕೆ ಬರುವುದಿಲ್ಲ. ಇದು ಎಲ್ಲರೂಮಾಡುವ ಕೆಲಸವೇ" ಎಂದರು.

ನಾಗಪ್ಪಯ್ಯನವರು ಠೀವಿಯಿಂದ "ಗೋಕರ್ಣದಲ್ಲಿ ಹಾಗೆ. ಕುಮುಟೆಯಲ್ಲಿಹೀಗೆ. ಧಾರವಾಡದಲ್ಲಿ ಗೋಳಿಬಾರು ಆಯಿತು" ಎಂದು ಅರ್ಧತಾಸು ಲೆಕ್ಚರು ಕೊಟ್ಟರು. ತಿಳಿದವರಿಗೆ ತಿಳಿಸುವ ತಂಟೆ ಇರಲಿಲ್ಲ. "ಯಾವಾಗ ಸಭೆ ಕರೆಯುತ್ತೀರಿ" ಎಂದು ಕೇಳಿದ ರಾಧಾಕೃಷ್ಣ. "ಇಲ್ಲವಾದರೆ, ಮನೆ ಮನೆಗೆ ಹೋಗಿ ಮೆಂಬರರನ್ನು ಕೂಡಿಸಿ ಆಮೇಲೆ ಅವರ ಸಭೆಯನ್ನು ಕರೆಯುವ" ಎಂದನು. ಅಂತು ಅರ್ಧ ಗಂಟೆ ಸಮಯವನ್ನು ಕಳೆದು, ಅನುಮಾನಿಸಿ ಆ ಮೇಲೆ, "ಹೂಂ ನೋಡುವ, ಊರಿನಲ್ಲಿ ನಾವು ಒಬ್ಬರೇ ಅಲ್ಲವಲ್ಲ. ಸೆಟ್ರೂ ಇದ್ದಾರೆ. ಪ್ರಭುಗಳೂ ಇದ್ದಾರೆ, ಮುಸ್ಕರೇಜರು ಇದ್ದಾರೆ, ಖಾದ್ರಿಬ್ಯಾರಿಗಳಿದ್ದಾರೆ. ಖಿಲಾಫತ್ತೆಂದರೆ ನವಾಯಿತರೂ ಬಂದಾರು" ಎಂದು ಇತರರ ಕಡೆಗೆ ಬೆರಳು ತೋರಿಸಿಬಿಟ್ಟರು. ಹೊರಕ್ಕೆ ಬರುವಾಗ-ಅಪ್ಪಣ್ಣಭಟ್ಟರು 'ಛಿ, ಇದಕ್ಕೆಲ್ಲಾ ಡಾಕ್ಟರರೇ, ನಾಗಪ್ಪಯ್ಯನ ಹಾಗಿನವರು ಉಪಯೋಗವಿಲ್ಲ. ಖಿಲಾಫತ್ತೆಂದರೆ ಭಟ್ಕಳದ ಮುಹಮದ್ ಸಾಹೇಬರು ರೆಡೀ. ಏನಿಲ್ಲ—ನಾಳೆ ಸಾಯಂಕಾಲ ನಾವಿಬ್ಬರೂ ಸೇರಿ ಮೆರವಣಿಗೆ

ಹೊರಡುವ. ಒಬ್ಬರ ಕೈಯಲ್ಲಿ ಶೌಖತ್ ಆಲಿಯ ಚಿತ್ರ, ಇನ್ನೊಬ್ಬರ ಕೈಯಲ್ಲಿ ಗಾಂಧೀ ಚಿತ್ರ ಹಿಡಿದುಕೊಂಡು ಹೊರಟರೆ, ಪೇಟೆಯ ಆ ತುದಿಯಿಂದ ಈ ತುದಿಗೆ ಬರುವುದರೊಳಗೆ ಸಾವಿರ ಜನ ಸೇರುತ್ತಾರೆ. ಸಂತೆ ಕಟ್ಟೆಯಲ್ಲಿ ಸಭೆ ಸೇರಿಸಿ, ಒಂದು ಜೋರಿನ ಲೆಕ್ಚರು ಕೊಟ್ಟುಬಿಟ್ಟರೆ, ತನ್ನಂತೆಯೇ ಎಲ್ಲಾ ಕೆಲಸವಾಗುತ್ತದೆ. ನೀವು ಯಾವ ಯೋಚನೆಯನ್ನು ಮಾಡಬೇಕಿಲ್ಲ ಎಂದರು.

ಕೃಷ್ಣಪ್ಪನವರು ರಾಧಾಕೃಷ್ಣನ ಮುಖವನ್ನು ನೋಡಿ "ಅವರೆನ್ನುವ ಪೈಂಟಾದರೆ ಸರಿ. ಸಂತೆ ಕಟ್ಟೆ ಇರುವುದು ಪೋಲೀಸು ಸ್ಟೇಶನಿಗೆ ಹತ್ತಿರ. ಅದರ ಬದಲು, ಕೊಲ್ಲೂರು ರಸ್ತೆಯ ಬುಡದಲ್ಲಿ ಸಭೆ ಕೂಡಿಸಿದರೆ ಆಗ ಎಷ್ಟೂ ಜನ ಬಂದಾರು" ಎಂದರು.

"ಸಭೆಗಿಭೆ ಕುಂದಾಪುರದಲ್ಲಿ ಮಾಡಿ ಬೇಸರ ಬಂದಿದೆ. ಪೇಟೆಯಲ್ಲಿ ಒಂದು ಸಭೆ ಎಂದರೆ ದಶಾವತಾರ ಆಟಕ್ಕೆ ಬರುವಂಥ ಮಂದಿಯೆಲ್ಲರು ಬರುತ್ತಾರೆ" ಎಂದ ರಾಧಾಕೃಷ್ಣ.

"ಹಾಗಾದರೆ ಒಂದು ಉಪಾಯ ಮಾಡುವ. ರಾತ್ರಿ ದಾಸರ ಮಠಕ್ಕೆ ನಿತ್ಯವೂ ಭಜನೆಗೆ ಬರುವ ಜನಕ್ಕೇನೇ ಉಪನ್ಯಾಸ ಮಾಡಿದರಾಯಿತು. ಅವರೆಲ್ಲರು ತಕಲಿ ಹಿಡಿದು ನೂಲು ಮಾಡುವುದನ್ನು ಕಲಿಯಲಿ. ರಾಮ ರಾಮ ಸೀತಾರಾಮ--ಅನ್ನುವುದರ ಜತೆಗೆ, ರಾಟೆಯನ್ನು ತಿರುಗಿಸಲಿ" ಎಂದರು ಭಟ್ಟರು.

"ನೀವು ನೂಲು ಮಾಡುವುದಕ್ಕೆ ಕಲಿತಿದ್ದೀರೋ" ಎಂದು ಡಾಕ್ಟರರು ಕೇಳಿದರು. "ಅದೇನು ಮಹಾ ಕಷ್ಟವಂತೆ? ಹೆರಂಜಾಲಿನವರು ತನ್ನಂತೆಯೇ ನೂಲು ಬರುವ ರಾಟೆಯನ್ನು ಮಾಡಿದ್ದಾರಂತೆ. ಅದನ್ನು ತರಿಸಿ ನೋಡಬೇಕೆಂದಿದೆ ನನಗೆ. ಯಾಕೆ? ನಾಳೆ ನಾವು ಹೆರಂಜಾಲಿಗೆ ಹೋಗಬಾರದು? ಬರಿಯ ಎರಡು ಹರದಾರಿ ದೂರ ಅಥವಾ ಮೂರು ಆದೀತು. ಬೇಕಾದರೆ ನಾಳೆ ಬೆಳಿಗ್ಗೆ ಹೋಗಿ ಸಂಜೆಯೊಳಗೆ ಬರಬಹುದು" ಎಂದರು ಭಟ್ಟರು. ರಾಧಾಕೃಷ್ಣನಿಂದ ಉತ್ತರ ಬರುವ ಮೊದಲೇನೇ ಡಾಕ್ಟರರು "ತನ್ನಂತೆ ನೂಲು ಮಾಡುವುದೆಂದರೆ, ಹತ್ತಿ, ಗಿತ್ತಿ-ಜನಗಿನ ಯಾವುದೂ ಬೇಡವೆಂದು ಕಾಣುತ್ತೆ." ಎಂದು ಲೇವಡಿ ಮಾಡಿ ಆ ಸಂಭಾಷಣೆಯನ್ನು ಮುಗಿಸಿದರು.

ಆ ಬಳಿಕ ಅವರು ಇನ್ನೂ ಹತ್ತಾರು ಮನೆಗಳಿಗೆ ಹೋದರು. ಎಲ್ಲ ಕಡೆಗಳಲ್ಲಿಯೂ ಮಿತವಾದ ಉತ್ಸಾಹ ಕಾಣಿಸಿತು. ಒಬ್ಬಿಬ್ಬರು, ಕಾಂಗ್ರೆಸು ಸದಸ್ಯರಾಗಲು ಒಪ್ಪಿಕೊಂಡರು. ಇನ್ನೊಬ್ಬಿಬ್ಬರು "ನೀವು ಕೆಲವು ರಾಟೆಗಳನ್ನು ಕುಂದಾಪುರದಿಂದ ಮಾಡಿಸಿ ಕಳುಹಿಸಿದರೆ, ಪ್ರಚಾರ ಮಾಡುವ" ಎಂದರು. ಕ್ಲಬ್ಬಿನ ಜಗುಲಿಯಲ್ಲಿ ಕುಳಿತು, ಹಂಗಾಮಿ ಕಾಂಗ್ರೆಸ್ಸು ಕಮಿಟಿಯ ಯೋಚನೆ ಆಯಿತು. ಅದರ ಅಧ್ಯಕ್ಷತನಕ್ಕೆ ಯಾರನ್ನು ಆರಿಸುವುದೆಂದೂ ತೋಚಲಿಲ್ಲ. ಅಂದರೆ ಊರಿನ ನಾಲ್ವರು ಶ್ರೀಮಂತರಲ್ಲಿ— ಯಾರಿಗೆ ಆ ಪಟ್ಟ ಹೋದರೂ, ಉಳಿದವರಿಗೆ ಅಸಮಾಧಾನವಾಗುವುದು ಖಂಡಿತ. ಹೀಗೆ ಅವರ ಕೆಲಸವು ಅರ್ಧವಾಯಿತು. ಕ್ಲಬ್ಬಿನಲ್ಲಿ ರಾಧಾಕೃಷ್ಣ, ಸ್ವರಾಜ್ಯ ಫಂಡಿಗೆ ವಂತಿಗೆ ಕೇಳಲು ಅನುವಾದನು. ಅಲ್ಲಿದ್ದವರ ಕಿವಿ ಕಿವುಡು ಆಯಿತು. "ಆ ಸಂಗತಿಯು ಇಲ್ಲಿ ಪಬ್ಲಿಕಿನಲ್ಲಿ ಬೇಡ; ಮನೆಗೆ ಬಂದಾಗ ನೋಡುವ" ಎಂದರು.

ಮರುದಿವಸ ರಾಧಾಕೃಷ್ಣನು ಅನಿವಾರ್ಯವಾಗಿ ಅಪ್ಪಣ್ಣ ಭಟ್ಟರ ಸಾರಥಿತ್ವದಲ್ಲಿ ವಂತಿಗೆ ವಸೂಲಿಗೆ ಹೊರಟನು. ಮಧ್ಯಾಹ್ನದ ತನಕ ತಿರುಗಾಡಿ ಹತ್ತು ರೂಪಾಯಿಗಳನ್ನು ಹೊರಡಿಸಲು ಮೂಗಿಗೆ ಬಂದಿತು. ಅಪ್ಪಣ್ಣ ಭಟ್ಟರು 'ಅವರು ಸಾವಿರ ತೀರ್ವೆ ಕೊಡುವವರು. ಇವರು ಐನೂರರವರು; ಇವರು ಮುನ್ನೂರು ರೂಪಾಯಿಗಳ ಇನ್‌ಕಮ್‌ ಟೇಕ್ಸನ್ನು ಕೊಡುತ್ತಾರೆ.' ಎಂದು ಅವರವರ ಎದುರಿಗೆ ಬಾಯಬಣ್ಣನೆಗಳನ್ನು ಖರ್ಚು ಮಾಡಿದರೂ ವಂತಿಗೆ ಪಟ್ಟಿಯು ಬಡಕಲಾಗಿಯೇ ಉಳಿಯಿತು.

ಮಧ್ಯಾಹ್ನ ಊಟ ಮುಗಿಸಿದೊಡನೆ ಆತನು ಕೃಷ್ಣಪ್ಪನವರೊಡನೆ "ಏನೋ ಈ ಊರಲ್ಲಿ ಹೊತ್ತು ಕಳೆಯುವುದರಲ್ಲಿ ನನಗೆ ಅರ್ಥ ಕಾಣುವುದಿಲ್ಲ" ಎಂದು ಹೇಳುವಂತಾಯಿತು.

"ಅದನ್ನು ನಾನು ಮೊದಲೇ ಹೇಳಲಿಲ್ಲವೇ?"

"ನಾನು ಇವತ್ತು ಆಲೆಮನೆಗೆ ಹೋಗುತ್ತೇನೆ. ಮಂಜಯ್ಯನವರಲ್ಲಿಗೆ ಬರುತ್ತೇನೆ ಎಂದಿದ್ದೆ. ಅಲ್ಲಾದರೂ ಹೋಗಿ ಏನಾದರೂ ಮಾಡಬಹುದು."

ಅವನ ಮಾತುಗಳಲ್ಲಿ ನಿರಾಶೆಯ ಧ್ವನಿಯು ತುಂಬಿತ್ತು. ಅದನ್ನು ಗ್ರಹಿಸಿದ ಕೃಷ್ಣಪ್ಪನವರು, ಮೊದಲು, ರಾಧಾಕೃಷ್ಣನನ್ನು ತಮ್ಮಲ್ಲಿ ಇನ್ನೂ

ಎರಡು ದಿವಸ ಕಾಲ ಕುಳಿತಿರುವಂತೆ ಬಲವಂತ ಪಡಿಸಿದರು. ಅವನ ವಿಷಯದ ಸಹಾನುಭೂತಿಯನ್ನು ತಪ್ಪಿಸದೆ—ಅವನು ಮಾಡುತ್ತಿರುವ ಈ ಕೆಲಸ, ಕಡಲಿಗೆ ನೀರು ಹೊತ್ತಂತೆ—ಎಂದು ತಿಳಿಸಿದರು. "ನಮ್ಮ ಜನರು ಇದಕ್ಕೆಲ್ಲಾ ತಯಾರಾಗಿಲ್ಲ, ಇನ್ನೂ ಮುಂದೆ ಬಂದಿಲ್ಲ. ನೀನು ಒಬ್ಬನೇ ಏನೆಂದು ಶ್ರಮಿಸುತ್ತೀಯಾ? ನಿನ್ನ ಜತೆಯಲ್ಲಿ ಇದ್ದ ಉಳಿದ ಇಬ್ಬರಂತೆ ನೀನೂ ಹಿಂದೆ ಸರಿಯುವ ಪಾಡು ಬಂದೀತು"ಎಂದು ಉಪದೇಶ ಮಾಡಿದರು. "ನೀವೂ ಹೀಗೆನ್ನುತ್ತೀರಾ" ಎಂಬ ಉದ್ಗಾರವು ಅವನ ಬಾಯಿಂದ ಬರಲು "ನಾನೇನು ಹೆಚ್ಚು, ನಾನೇ ಈಗ ಸರಕಾರದ ಸಂಬಳಕ್ಕೆ ಬಿದ್ದಿದ್ದೇನೆ; ಗಾಂಧೀಜಿಯವರು—ಸರಕಾರಿ ನೌಕರಿಗಳನ್ನು ಬಿಟ್ಟುಬಿಡಿ ಎಂದರೂ, ಬಿಟ್ಟು ಬಿಡಲು ಮನಸ್ಸಿದೆಯೇ?" ಎಂದರು.

"ನಾನಾದರೆ ಬಿಟ್ಟು ಬರುತ್ತಿದ್ದೆ."

"ನಾನೂ ಬಿಡಬಹುದಿತ್ತು. ನಮ್ಮ ಶಾಂತಿಯನ್ನೂ, ಮಕ್ಕಳನ್ನೂ ಕಾಡಿಗೆ ಅಟ್ಟಿದ ಮೇಲೆ"

ಇವೆಲ್ಲ ನಿತ್ಯ ಕೇಳಿ ಬರುವ ಆಕ್ಷೇಪಗಳು; ಮನುಷ್ಯನನ್ನು ನಿತ್ಯ ಬೆನ್ನಟ್ಟಿ ಬರುತ್ತಿರುವ ಭೀತಿಯ ಬೇತಾಳಗಳು. ಅವು ತೀರ ನಿರಾಧಾರವಾದುವು ಎಂದೂ ರಾಧಾಕೃಷ್ಣನು ಹೇಳಲಾರ. ಇಂಥ ಮಾತುಗಳಿಂದ ಅವನೇನೋ ಧ್ಯೇಯಬಾಹಿರನಾಗುವಂತಿರಲಿಲ್ಲ. ಆದರೆ ಆ ಗುರಿಯನ್ನು ಸೇರಲು ಹಿಡಿಯಬೇಕು ಎಂದಿದ್ದ ಒಂದೊಂದು ಹಾದಿಯೂ ಅವನಿಂದ ಕಡಿದು ಬೀಳುವಂತೆ ಕಾಣುತ್ತಿದೆ. ಆತ—"ಇನ್ನೊಮ್ಮೆ ಬರುತ್ತೇನೆ, ಈಗ ಹೊರಟೆ" ಎಂದು ಹೊರಟೇ ಬಿಟ್ಟನು. ಆತ ಬೇಡವೆಂದರೂ ಕೃಷ್ಣಪ್ಪನವರು ಅವನ ಜತೆಗೆ ನದಿಯ ತನಕ ನಡೆದು ಬಂದರು. ನದಿಯನ್ನು ಇಳಿಯುವಾಗ, ತಮ್ಮ ಕಿಸೆಯಿಂದ ಇಪ್ಪತ್ತು ರೂಪಾಯಿಗಳನ್ನು ತೆಗೆದು, ಅವನ ಕೈ ಮೇಲಿರಿಸಿ "ಇದೋ, ನಿನ್ನ ಫಂಡಿಗೆ. ನನ್ನ ಹೆಸರು ಮಾತ್ರ ಬೇಡ. ನೀನು ಎಲ್ಲಾದರೂ ಕುಳಿತು ಏನಾದರೂ ಕೆಲಸ ಮಾಡುವಿಯಾವರೆ, ನಾಲ್ಕೋ ಐದೋ ರೂಪಾಯಿಗಳನ್ನು ಖರ್ಚಿಗೆ ಕೊಡುತ್ತಿರುತ್ತೇನೆ" ಎಂದರು. ಆ ರೀತಿ ತಾವಾಗಿ ಸಹಾಯಕ್ಕೆ ಮುಂದೆ ಬಂದು ನುಡಿದವರಲ್ಲಿ ಅವನ ಪಾಲಿಗೆ ಅವರೇನೆ ಮೊದಲಿಗರು. ಅವನು ಹರ್ಷಿತನಾದನು. ಅವರನ್ನು ಬೀಳ್ಕೊಟ್ಟು, ಎರಡು ದಿನಗಳ ಹಿಂದೆ ಚಂಗಪ್ಪ ತೋರಿಸಿದ

ಹಾದಿಯನ್ನು ತುಳಿಯುವಾಗಲ್ಲೆಲ್ಲ, ಕೃಷ್ಣಪ್ಪನವರ ಔದಾರ್ಯವೇ ಅವನಿಗೆ ನೆನಪಾಗುತ್ತಿತ್ತು. ಆತ ವಿಚಾರ ಮಾಡುತ್ತಾನೆ—"ಬಂಧುವಾದ ತಾನು ಆ ಕೆಲಸ ಮಾಡುತ್ತಿರುವೆನೆಂದು ಅವರು ಹಣ ಕೊಟ್ಟರೇ? ಅಥವಾ ಯಾರು ಬಂದಿದ್ದರೂ ಆ ಇಪ್ಪತ್ತು ರೂಪಾಯಿಗಳನ್ನು ತೆಗೆದೆಸೆಯುತ್ತಿದ್ದರೇ?" ಎಂಬುದನ್ನು. ಆದರೆ ಅದಕ್ಕೆ ಸಮನಾದ ಉತ್ತರ ತೋಚದಾಯಿತು.

ಅವನ ಮನಸ್ಸೀಗ ನೂರಾರು ಬಗೆಯ ಸೆಳೆತಗಳ ಸುಳಿವಿನಲ್ಲಿ ಸಿಕ್ಕಿಕೊಂಡಿದೆ. ಆಲೆಮನೆಯನ್ನು ಮುಗಿಸಿ, ಕುಂದಾಪುರಕ್ಕೆ ಹೋಗುತ್ತೇನೆ—ಅಲ್ಲಿ ಸ್ಥಳೀಯ ಉಪದೇಶಕರನ್ನು ಕಂಡು, ಅವರಿಗೆ ಈ ನಿಧಿ, ಸಂಚಾರಗಳ ವರದಿಯನ್ನು ಒಪ್ಪಿಸಿ, ಮುಂದೆ ಯಾವುದಾದರೂ ಒಂದು ಊರಿನಲ್ಲಿ ಕುಳಿತುಕೊಂಡು ಕೆಲಸವನ್ನು ನಡೆಯಿಸುತ್ತೇನೆ—ಎಂದುಕೊಳ್ಳುತ್ತಿದ್ದಾನೆ. ಯಾವ ಕೆಲಸ, ಯಾವ ಊರು-ಎಂಬುದು ಅಸ್ಪಷ್ಟವಾಗಿತ್ತು. ಮೇಲಿನವರೇನೋ-"ಪಂಚಮರ ಉದ್ಧಾರ;ಗ್ರಾಮ ಉದ್ಧಾರ, ಖಾದಿ ತಯಾರಿಕೆ" ಎಂದು ಹೇಳುತ್ತಲೇ ಇದ್ದಾರೆ. ತನ್ನ ಬುದ್ಧಿಗೆ ಮಾತ್ರ ಅದರ ಸಮನಾದ ಹಾದಿ ಹೊಳೆಯುವುದಿಲ್ಲ—ಎಂದು ಸ್ವಶಕ್ತಿಯ ಮೇಲೆ ಅವಿಶ್ವಾಸ ತೋರುತ್ತಿದ್ದಾನೆ. ಅವನು ಹೊರಟುದು ಮಧ್ಯಾಹ್ನ ಮೂರು ಘಂಟೆ ಸಮಯಕ್ಕೆ. ಯೋಚನಾಮಗ್ನನಾಗಿ ಆತ ಕಾಲುದಾರಿಯನ್ನು ತುಳಿಯುತ್ತಲೇ ಇದ್ದಾನೆ. ತಾನು ಹಿಂದಿನ ದಿನ ಬಂದ ದಾರಿ ಅದು ಅಹುದೇ ಇಲ್ಲವೇ ಎಂಬ ನೆನಪೂ ಅವನಿಗೆ ಉಂಟಾಗುತ್ತಿರಲಿಲ್ಲ. ಮನಸ್ಸೆಲ್ಲ ಜನತೆಯ ಸೇವೆಗಾಗಿ ಓಡುತ್ತಿದೆ. ಜನರ ಬಡತನ ಹೋಗಲಾಡಿಸಬೇಕು, ಅವಿದ್ಯೆ ನೀಗಿಸಬೇಕು; ರೋಗನಿವಾರಣೆಗೆ ಸಹಾಯ ಮಾಡಬೇಕು--ಎಂಬ ಕನಸುಗಳು ಕುಣಿಯುತ್ತಿದ್ದುವು. ತಾನೊಬ್ಬ ವೈದ್ಯನಾಗಿದ್ದರೆ ಎಷ್ಟು ಚೆನ್ನಾಗಿತ್ತು ಎಂದೂ ತೋರುತ್ತದೆ. ಉಪಾಧ್ಯಾಯನಾದರೂ ಆಗಬಹುದಲ್ಲಾ ಎಂದು ಇನ್ನೊಮ್ಮೆ ಕಾಣಿಸುತ್ತದೆ. ಇನ್ನೊಮ್ಮೆ ಅವೆಲ್ಲ ಯೋಚನೆಗಳು ಕರಗಿಬಿಟ್ಟು—ತಾನು ಸಾಮಾನ್ಯ ಅನುಕೂಲವಂತರ ಮಗ. ತಂದೆಯು ಇನ್ನೂರು ರೂಪಾಯಿ ಕಂದಾಯ ತೆರುತ್ತಾನೆ. ಇರುವವರು ಮೂವರು ಮಕ್ಕಳು. ತನ್ನ ಪಾಲಿಗೆ ಬರುವುದನ್ನು ಬಡಜನರ ಸಲುವಾಗಿ ತಾನು ವ್ಯಯಿಸಬಹುದಲ್ಲಾ-ಎಂದೂ ತೋರಿತು. ಮರುಕ್ಷಣ ತುಟಿ ಒಡೆದು ನಗುವು ಉಕ್ಕಿತು. 'ಅದು ಎಂದಿಗೆ ಸಾಧ್ಯ? ತಂದೆ ತೀರಿಕೊಂಡು, ತನ್ನ ಹಿಸೆ ತನಗೆ ಬಂದ ಮೇಲಲ್ಲವೇ? ಆಗ

ಬರಬಹುದಾದದ್ದು ಇನ್ನೂರು, ಮುನ್ನೂರು ರೂಪಾಯಿಗಳ ವಾರ್ಷಿಕ ವರಮಾನ. ತಾನು ಸಂಸಾರಿಯಾದಲ್ಲಿ ಊಟಕ್ಕೂ ಸಾಲದಾಗುವ ಉತ್ಪನ್ನ-ಈ ಸ್ವಲ್ಪ ಸಿರಿವಂತಿಕೆಯಿಂದ ಯಾರು ಯಾರಿಗೆ ಏನು ಮಾಡುವಂತಿದೆ. ಆಲೆಯಮನೆ ಮಂಜಯ್ಯನವರಷ್ಟು ಧನಿಕರಾಗಿರುತ್ತಿದ್ದರೆ ತಮ್ಮ ಸುತ್ತು ಮುತ್ತಲಿನ ಜನರಿಗೆ ಒಂದಲ್ಲ ಒಂದು ರಿಯಾಯತಿ ತೋರಿಸಲು ಬರುತ್ತಿತ್ತು. ಸಾಲಕೊಡುವಾಗ ಸಾಲಿಗನನ್ನು ಸೋಲಿಸಬೇಕೆಂಬ ಕೊಂಕು ಬುದ್ಧಿಯಿಲ್ಲದೆ ವರ್ತಿಸಿದರೂ ಸಾಕು. ತಮ್ಮ ಭೂಮಿಯಲ್ಲಿರುವ ನಾಲ್ಕೇ ನಾಲ್ಕು ಹೊಲೆಯರಿಗೆ ಅನ್ನ ಅರಿವೆಗಳಿಗೆ ದಾರಿಮಾಡಿಕೊಟ್ಟರೂ ಸಾಕು. ಅವರನ್ನು ಮನೆಯ ಅಂಗಣಕ್ಕೆ ಬರಲು ಬಿಟ್ಟರೂ ಸಾಕು—ಎಂದುಮೊದಲಾಗಿ ತೋಚಿತು. ಅವನು ಯಾವ ಕೋಲಿನಿಂದ ಅಳೆದು ನೋಡಿದರೂ, ನಾಡಿನ ಸ್ವಾತಂತ್ರ್ಯದ ದಾರಿಯು ಬಲು ದೀರ್ಘವಾಗಿ ಕಾಣಿಸಿತು. ಅವನ ವ್ಯಕ್ತಿತ್ವದ ಅಳತೆಯು ತೀರ ಸಣ್ಣದಾಗಿತ್ತು.

ಈ ಸ್ವಪ್ನ ಸಮಾಧಿಯಿಂದ ಒಮ್ಮೆಗೆ ಎಚ್ಚರವಾಯಿತು. ದಾರಿ ನೋಡುತ್ತಿದ್ದಾನೆ: ಅದು ಯಾವ ತಾವು, ಅದು ಯಾವ ಊರು— ಎಂಬುದೇ ತೋಚಲಿಲ್ಲ. ಹೊತ್ತನ್ನು ನೋಡುತ್ತಾನೆ, ಎಂದೇ ಆಲೆಮನೆಯನ್ನು ಸೇರಬೇಕಿತ್ತು. 'ಒಂದೂವರೆ ತಾಸು ನಡೆದು ಹೋಗಿದ್ದ ದಾರಿಯನ್ನು ಮೂರು ತಾಸು ತುಳಿದಾಗಿದೆ. ಎಂಥ ಮರುಳ ನಾನು! ಕನಸಿನಲ್ಲಿ ತೇಲುವ ನನ್ನ ಶೀಲಕ್ಕೆ ಸಹಜ ಬದುಕಿನ ಅಳತೆ ಸಿಗುವುದೆಂತೋ ಎಂದು ನಕ್ಕ. ಏನು ಮಾಡುವುದಕ್ಕೂ ತೋಚದೆ 'ಕೇ ಕೇ' ಹಾಕಿದನು. ಯಾರದೋ ಧ್ವನಿಯು ಉತ್ತರಿಸಿತು. ಆ ವ್ಯಕ್ತಿಯನ್ನು ಕುರಿತಾಗಿ-ಆಲೆಮನೆಗೆ ಎಷ್ಟು ದೂರ-ಎಂದು ಕೇಳಿದ. ಹಿಂದೆ ಕಳೆಯಿತು-ಎಂಬ ಉತ್ತರ ಬಂದಿತು. ಸ್ವಲ್ಪ ಹೊತ್ತಿನಲ್ಲಿ ಆತನು ಬಂದನು. ಅವನಿಂದ ಮಂಜಯ್ಯನವರ ಮನೆ ಹಾದಿಯನ್ನು ವಿಚಾರಿಸಿ ತಿಳಿದು, ಕತ್ತಲು ಕವಿಯುವುದರೊಳಗೆ ಹೋಗಿ ಸೇರುವೆನೆಂದು ಧಾವಿಸಿದ.

ಮುಸ್ಸಂಜೆಯ ಹೊತ್ತಿಗೆ, ಊರಿನ ಸೊಳ್ಳೆಗಳು ಹೆಬ್ಬಾಗಿಲಿನ ಎದುರು ರಾಗ ಮಾಡುತ್ತಿರುವಾಗ, ಈತ ಸ್ಥಳವನ್ನು ಸೇರಿದ. ಮಂಜಯ್ಯನವರ ಭೇಟಿಯಾಗಲು ತಾಸಾಯ್ತು. ಮನೆಯವರು ಸ್ವಾಗತಿಸಿ ಉಪಚರಿಸಿದರು. ಅವರ ಅನುಯಾಯಿಯೋ, ಶೈನಾತಿಯೋ, ಆದ ಕಾಳಿಂ

ಗಯ್ಯ ಅನೇಕ ಸಂಗತಿಗಳನ್ನು ಬಣ್ಣಿಸುತ್ತ ಕಾಲಯಾಪನೆಗೆ ನೆರವಾದನು.

"ನಮ್ಮ ಮಂಜಯ್ಯನವರು—ಆ ಬೇಳೂರಿನವರು, ಈ ಕಲ್ಲಾಡಿಯವರು, ಕಮಲಶಿಲೆಯವರು, ಸಿದ್ಧಾಪುರದವರು—ಅವರು ಇವರುಗಳ ಹಾಗಲ್ಲ. ಶ್ರೀಮಂತಿಕೆ ಇವರಲ್ಲಿ ಒಲಿದು ಬಂದು ಸೇರಿದೆ. ಅವರಿಗೆ ಇಂಗ್ಲೀಷು ಬರೋದಿಲ್ಲವೆಂಬು ತಿಳಿಯಬೇಡಿ. ಕುಂದಾಪುರದಲ್ಲಿ ಮೆಟ್ರಿಕ್ಕಿ ಮಾಡಿದ್ದಾರೆ. ಆವಾಗಲೇ ತಂದೆಯು ತೀರಿ ಕೊಂಡುದರಿಂದ, ತಂದೆಗೆ ಒಬ್ಬನೇ ಮಗನಾದುದರಿಂದ ಮನೆ ಆಡಳಿತವನ್ನು ವಹಿಸಿಕೊಂಡರು. ಅವರ ಪ್ರಾಯದಲ್ಲಿ ಬೇರೆಯವರಿಗೆ ಇಷ್ಟೆಲ್ಲಾ ಆಸ್ತಿ ಕೈ ಮೇಲೆ ಬಂದಿದ್ದರೆ, ಸಿಕ್ಕಾಬಟ್ಟೆಯಾಗಿ ಪೋಲುಮಾಡಿ, ಬಸರೂರಿನ ಸೂಳೆಯರಿಗೆ ಬಂಗಲೆ ಕಟ್ಟಿಸಿ ಕೊಡುತ್ತಿದ್ದರು. ಇವರೇ? ಒಂದೇ ಒಂದು ಬಿಡು ಕಾಸನ್ನು ಹಾಳು ಮಾಡಿದವರಲ್ಲ. ಹಾಗೆಂದು ನ್ಯಾಯವಾದ ಖರ್ಚಿಗೆ ಎಂದೂ ಕಡಿಮೆ ಮಾಡಿದವರಲ್ಲ. ಮನೆಯನ್ನು ಅವರ ತಂದೆಯವರ ಕಾಲದಂತೆ ಛತ್ರದಂತೆ ನಡೆಸಿಕೊಂಡು ಬಂದಿದ್ದಾರೆ. ಯಾರು ಎಷ್ಟು ಹೊತ್ತಿಗೇ ಬರಲಿ—ಕುಡಿಯಲು ಗಂಗಾಮೃತ, ಹಸಿವಿಗೆ ಊಟ, ಅಷ್ಟು ತಪ್ಪಿದ್ದಲ್ಲ. ಮೂರು ದಿವಸ ಕುಳಿತು ಉಂಡರೂ ಎಲ್ಲಿಗೆ ಹೋಗುವವರು—ಯಾಕೆ ಬಂದಿದ್ದೀರಿ ಎಂದು ಕೇಳಿದವರಲ್ಲ." ಎಂದು ಬಣ್ಣಿಸಿದರು.

"ಮಂಜಯ್ಯನವರಿಗೆ ಎಷ್ಟು ಪ್ರಾಯ"?

"ಪ್ರಾಯ—ನೀವೇ ಹೇಳಿ"

"ಐವತ್ತು ಇರಬೇಕು ಅಲ್ಲವೇ"

"ಛೀ ಛೀ........ ನಲ್ವತ್ತು ಪೂರಾ ಇಲ್ಲ. ಎಳೆತನದಲ್ಲೇನೆ ಮನೆ ವಾರ್ತೆಯ ಹೊರೆ ಹೊತ್ತುದರಿಂದ ವರ್ಷವಾದ ಹಾಗೆ ಕಾಣುತ್ತದೆ."

"ಅಣ್ಣ ತಮ್ಮಂದಿರು?"

"ಯಾರೂ ಇಲ್ಲ."

"ಎಷ್ಟು ಮಂದಿ ಮಕ್ಕಳು?"

"ಮಕ್ಕಳು ಸರಾಸರಿ ಇವೆ—ಏಳು ಮಂದಿ. ಹಿರಿಯದಕ್ಕೀಗ ಹದಿನಾರು ವರ್ಷ. ಹುಡುಗಿ; ಅದರ ಒತ್ತಿನದು ಮಾಣಿ; ತಿರುಗಿ ಹುಡುಗಿ, ಒಂದು ಹೆಣ್ಣು, ಒಂದು ಗಂಡು ಆಯ್ದು ಇರಿಸಿದ ಹಾಗೆ.

"ಮಕ್ಕಳಿಗೆಲ್ಲ ವಿದ್ಯೆಗಿದ್ಯೆ?"

"ವಿದ್ಯೆ ಇಲ್ಲದೆ ಉಂಟೇ? ಶಾಲೆ ಅಂದರೆ ಇಲ್ಲಿ ಸಮೀಪಕ್ಕೆ ಎಲಿಮೆಂಟರಿ ಶಾಲೆ ಇರುವುದು. ಅದಕ್ಕೂ ಎರಡು ಮೈಲು ದೂರ. ಇನ್ನು ಹೈಯರು ಗಿಯ್ಯರಿಗೆ ಎಂಟು ಹತ್ತು ಮೈಲು ದೂರ. ಅದರ ಬದಲು ಕುಂದಾಪುರಕ್ಕೆ ಹೋಗಬಹುದು. ಅದರಿಂದ ಒಬ್ಬರು ಮಾಸ್ತರರನ್ನೇ ಮನೆಯಲ್ಲಿ ಇರಿಸಿ ಕೊಂಡಿದ್ದೇವೆ. ಅವರಿಗೆ ಬೇರೆಯೇ ಬಿಡಾರ. ಸಂಸಾರ ಸಮೇತವಾಗಿ ಉಂಡು, ತಿಂದು ಸುಖವಾಗಿದ್ದಾರೆ. ಇಲ್ಲಿಯೇ ಅಂಬಲದಲ್ಲಿ ಕುಳಿತು ಎರಡೂ ಹೊತ್ತು ಪಾಠ ಹೇಳುವುದು; ಹೋಗುವುದು."

"ಅಷ್ಟು ಮಾಡಿದವರು ಒಂದು ಶಾಲೆಯನ್ನೇ ಕಟ್ಟಿಸಿದರೆ ಊರಿನ ಎಲ್ಲರ ಮಕ್ಕಳಿಗೂ ಆಗುತ್ತಿತ್ತು."

"ಕಟ್ಟಿಸಿದರೆ ಆಗಬಹುದು. ಆದರೆ ಈ ಊರಲ್ಲಿ ಬೇರೆ ಯಾರು ಶಾಲೆಗೆ ಹೋಗುವವರು? ಒಂದೆರಡು ಬ್ರಾಹ್ಮಣರ ಮನೆಗಳು ಮಾತ್ರ ಇವೆ. ಅಲ್ಲಿನ ಮಕ್ಕಳು ಇಲ್ಲಿಗೇನೇ ಬರುತ್ತವೆ. ಊರಿನ ಹೆಚ್ಚಿನವರು ಇವರ ಒಕ್ಕಲುಗಳು. ಅವುಗಳು ಬಂದು, ಒಡೆಯರ ಮನೆಯ ಮಕ್ಕಳೊಂದಿಗೆ ಕೂತು ಓದುವುದು ಚಂದವಲ್ಲ. ನಾಳೆ ಅವರ ಮುಂದೆ ಕೈಕಟ್ಟಿಕೊಂಡು ನಿಲ್ಲ ಬೇಕಾದ ಆಳುಗಳು...." ರಾಧಾಕೃಷ್ಣನ ಮನಸ್ಸಿಗೆ ಏಕೋ ಅಸಮಾಧಾನವಾಯಿತು. ಮಂಜಯ್ಯನವರ ಔದಾರ್ಯ ಅಷ್ಟು ಸ್ವಲ್ಪಕ್ಕೆ ಹಿಂಜರಿಯಬೇಕೇ ಇಲ್ಲವೇ? ಅವರ ಗೆಳೆಯನ ಕಲ್ಪನೆ ತಪ್ಪಿರ ಬಹುದೇ--ಎಂದು ಯೋಚನೆ ಮಾಡುವಂತಾಯಿತು. ಆಳು, ಒಕ್ಕಲು, ಧನಿ—ಇವರ ಸ್ಥಾನ ಮಾನಗಳು ಅವನಿಗೆ ಹೊಸ ಸಂಗತಿಗಳಾಗಿ ಅಲ್ಲ. ತಾನು ಚಿಕ್ಕವನಿದ್ದಾಗ ಒಕ್ಕಲು ಮಕ್ಕಳನ್ನು ಕೂಡಿ ಆಡುತ್ತಿದ್ದುದನ್ನು ಕಂಡರೆ, ತಂದೆ ಗದರಿಸುತ್ತಿದ್ದ ನೆನಪು ಬಂದಿತು. ಈ ಸಮಸ್ಯೆಯನ್ನು ನಿವಾರಿಸಲು ತರುಣರಾದ ತಾವು ಹೊಸ ಹಾದಿ ಹಾಕಬೇಕೆಂದು ತೋರಿತು. ಮಂಜಯ್ಯನವರ ರೂಪ, ಉಡುಗೆಗಳು ಹಳೆಯ ಕಾಲದ್ದಾಗಿ ಕಾಣಿಸಿದರೂ ಅವರ ಮಾತು, ವಿಚಾರಗಳು ಹೊಸಕಾಲದ್ದು ಆಗಿವೆಯಲ್ಲವೆ! ರಾಷ್ಟ್ರೀಯ ವಿಚಾರಗಳಲ್ಲಂತೂ—ಕುಂದಾಪುರ, ಬೈಂದೂರಿನವರಿಗಿಂತ ಒಂದು ಹೆಜ್ಜೆ ಮುಂದೆಯೇ ಇದ್ದಾರೆ. ಅವರಂಥವರು ಒಪ್ಪಿದರೆ ಇಲ್ಲವೇ ಕೆಲಸ ಮಾಡುವುದು ಸಾಧ್ಯವಾದರೆ, ಆಲೆಮನೆಯಂತಹ ಊರಿನಲ್ಲಿ ಏಕ ಛತ್ರಾಧಿಪತ್ಯವನ್ನು ನಡೆಯಿಸಬಹುದು—ಎಂದೂ ತೋರಿತು.

ಅವನ ಆಸೆ ಫಲಿಸುವ ಚಿಹ್ನೆಯೋ ಎಂಬಂತೆ ಆ ಗಳಿಗೆಗೆ ಅವರೂ ಬಂದರು. ಬಂದು "ನಾನು ಯೋಚನೆ ಮಾಡಿದೆ; ನೀವು ಬೈಂದೂರಿಗೆ ಹೋದವರು ಹಾಗಿಂದ ಹಾಗೇ ಹೋಗಿರಬೇಕೆಂದು" ಎಂದರು.

ಆತ ನಗುತ್ತ "ಯಾಕೆ ಅಷ್ಟು ಅನುಮಾನ ಬಂತು"?

"ಅಲ್ಲಯ್ಯ, ಹಳ್ಳಿ ಎಂದರೆ ಎಲ್ಲರಿಗೂ ಸಸಾರವೇ. ಈಗ ನಾನೇ ಎಂದು ತಿಳಿಯಿರಿ. ಅಪ್ಪ ಮಾಡಿದ ಮನೆ, ಆಸ್ತಿ, ಇಲ್ಲಿ ಕೊರಳಿಗೆ ಬೀಳದೆ ಇರುತ್ತಿದ್ದರೆ ಫೋರ್ತ್ ಫಾರ್ಮು ಮುಗಿಸಿ ಪೇಟೆಯಲ್ಲೇ ಬಿಡಾರ ಹೂಡುತ್ತಿದ್ದೆ."

"ಅದಕ್ಕೆ ಅಲ್ಲವೇ ಗಾಂಧಿಯವರು ಎನ್ನುವುದು—ನಮ್ಮ ದೇಶಕ್ಕೆ ಹಳ್ಳಿಗಳೇ ಜೀವಾಳ ಎಂದು."

"ಅವರೆನ್ನುವುದು ಒಂದು ಅರ್ಥದಲ್ಲಿ ಸಮ. ನಮ್ಮ ಜನರು ಹಳ್ಳಿ ಎಂಬುದನ್ನು ಸುಡುಗಾಡು ಎಂದು ತಿಳಿಯುವುದೂ ಸಮವೇ" ಎಂದು ಉತ್ತರಿಸಿದರು.

"ನೀವು ಈಗ ನಾಲ್ಕನೆಯ ತನಕ ಓದಿದ್ದೀ? ಅಲ್ಲ ಮೆಟ್ರಿಕ್ಕೇ?"

"ಒಂದು ಲೆಕ್ಕಕ್ಕೆ ಮೆಟ್ರಿಕ್ಕೇ. ಅಂದರೆ ಆಗಿನ ಕಾಲದ ೪ನೆಯ ಫಾರ್ಮು ಈಗಿನ ನಿಮ್ಮ ೬ನೆಯ ಫಾರ್ಮಿಗೆ ಸಮ."

ರಾಧಾಕೃಷ್ಣ ನಕ್ಕನು.

ಒಳಗೆ ಅಡುಗೆ ಮನೆಯ ಮಗ್ಗುಲಿನ ದೇವರ ಮನೆಯಲ್ಲಿ, ಶಂಖ, ಜಾಗಟೆ ಘಂಟಾನಾದಗಳು ಉದ್ಭವಿಸಿದುವು. "ಹೊಂ, ಏಳಿ ನೋಡುವಾ. ಮಾಣೀ, ಇವರಿಗೆ ಕಾಲಿಗೆ ನೀರನ್ನು ಕೊಡು. ನಾನು ಒಂದು ಸ್ನಾನಮಾಡಿ ಬರುತ್ತೇನೆ" ಎಂದು ನುಡಿದು, ಎಲೆ ಅಡಿಕೆಯ ಹರಿವಾಣಕ್ಕೆ ಕೈ ಇಕ್ಕಿದರು.

ಈತ "ತಣ್ಣೀರಿನ ಸ್ನಾನ ತನಗೂ ಆಗಬೇಕು, ತುಂಬ ಬೆವರಿದ್ದೇನೆ" ಎಂದುದರಿಂದ ಮಾಣಿ ಆವನನ್ನು ಸ್ನಾನದ ಮನೆಗೆ ಕರೆದೊಯ್ದನು.

ಇಬ್ಬರೂ ಸ್ನಾನವಾಗಿ ಬಂದರು; ಊಟದ ಮನೆಯನ್ನು ಸೇರಿದರು. ಎಲೆಗಳ ಬಳಿಯೇ ಆಹ್ನಿಕಕ್ಕೆ ಹರಿವಾಣ ಇರಿಸಿತ್ತು. ಈತ ಅದನ್ನು ಮರೆತು ಬಹುಕಾಲವಾಗಿದ್ದರೂ ಆಹ್ನಿಹದ ನಾಟಕ ನಡೆಯಿಸಿ ಹರಿವಾಣದಿಂದ ನೀರು ಚೆಲ್ಲಿ ಬಂದನು. ಮಂಜಯ್ಯನವರು, ಮಂತ್ರಕ್ಕೆ ಸಮತೂಕ

ಸಂಭಾಷಣೆಯನ್ನು ಸೇರಿಸಿ ಆಹ್ನಿಕವನ್ನು ಮುಗಿಸಿದರು. ಊಟ ಮಾಡುತ್ತ ಮಾಡುತ್ತ ರಾಧಾಕೃಷ್ಣ ಎದುರಿನ ಪಂಕ್ತಿಯನ್ನು ನೋಡುತ್ತಿದ್ದ. ಮಂಜಯ್ಯನವರ ಸಂತಾನ ಶ್ರೀಯು ಸಾಲಾಗಿ ಕುಳಿತ್ತಿತ್ತು. ಒಂದೇ ಅಚ್ಚಿನ ಎರಕದಂತೆ ಬೆಳ್ಳಗಿನ ಗೊಂಬೆಗಳು ಸಾಲಾಗಿ ಮಣಿದು ಉಣ್ಣುತ್ತಿದ್ದುವು. ಅವರವರ ಗಾತ್ರದಿಂದ ಪ್ರಾಯ ಹೇಳುವಷ್ಟು ಸುಲಭವಾಗಿತ್ತು.

ರಾಧಾಕೃಷ್ಣ "ಅದು—ಎರಡನೆ ಕುಳಿತದ್ದು ತಮ್ಮ ಹಿರಿಯ ಹುಡುಗನೇ? ಮನೆಯಲ್ಲೇ ಓದಿಸುತ್ತಿದ್ದರಂತೆ, ಮುಂದೆ ಹೈಸ್ಕೂಲಿಗೆ ಕಳುಹಿಸುವ ಯೋಚನೆ ಇಲ್ಲವೇ?" ಎಂದನು.

ಅವರು, "ಗಾಂಧಿಯವರು ಶಾಲೆಗೆ ಸೇರಿದವರನ್ನು ಬಿಡಿ ಎನ್ನುತ್ತಿದ್ದಾರೆ. ನೀವೀಗ ಕೋಲೇಜನ್ನು ಬಿಟ್ಟದ್ದು ಯಾಕೆ ಹೇಳಿ? ಅದಕ್ಕೇನೇ, ಮನೆಯಲ್ಲೇ ರಾಷ್ಟ್ರೀಯ ಪಾಠಶಾಲೆ ಸುರುಮಾಡಿದ್ದೇನೆ. ಮಾಸ್ತರರು ತತ್ಕಾಲ ಊರಿಗೆ ಹೋಗಿದ್ದಾರೆ. ಅವರು ಬಂದ ಮೇಲೆ ಅವರಿಗೆ ಚರಕ ಪಾಠಮಾಡಿಸಿ ಹೋಗಿ ನೀವು. ಕೂತಲ್ಲಿಯೇ ಒಂದು ನೇಶನಲ್ ಸ್ಕೂಲು ಆಯಿತಲ್ಲಾ" ಎಂದರು.

ರಾಧಾಕೃಷ್ಣ ನಕ್ಕನು. ಮಂಜಯ್ಯನವರು ಅವನ ಗಮನ ಸೆಳೆಯಲೆಂದೋ ಏನೋ—"ಅದು ನೋಡಿ ಮೊದಲು ಕುಳಿತದ್ದು, ನನ್ನ ಹಿರಿಯ ಮಗಳು ಸತ್ಯ. ಎರಡನೆಯವ ಸೀತಾರಾಮ, ಅನಂತರ ವಾಗ್ದೇವಿ, ಅನಂತ, ಲಕ್ಷ್ಮಿ, ಸಣ್ಣಪ್ಪ" ಎಂದು ಮಕ್ಕಳ ನಾಮ ಪಠನೆ ಮಾಡಿದರು. ಅಷ್ಟರಿಂದಲೇ ತೃಪ್ತರಾಗದೆ—ನಮ್ಮ ಸತ್ಯ ಹಾಗೆ, ಸೀತರಾಮ ಹೀಗೆ ಲಕ್ಷ್ಮಿ ಅಂದರೆ ಲಕ್ಷ್ಮಿಯೇ—ಎಂದು ಗುಣಗಾನ ಮಾಡಿದರು. ಸತ್ಯಳ ಬೆಂಗಡೆ ಕಾಲು ನೀಡಿಕೊಂಡು ಅವಲಕ್ಕಿ ಮೆಲ್ಲುತ್ತಿದ್ದ ಮಂಜಯ್ಯನವರ ತಾಯಿ "ನಿನಗೆ ಇನ್ನೂ ಬುದ್ಧಿಯಿಲ್ಲ ಮಂಜ! ಮಕ್ಕಳ ಎದುರಿಗೆ ಹಾಗೆಲ್ಲ ಶಿಫಾರಸಿ ಮಾಡುವುದೇ" ಎಂದರು. ಮಕ್ಕಳು ಕಿಸಕ್ಕನೆ ನಕ್ಕವು.

ಮಂಜಯ್ಯನವರು "ಅವರು, ನನ್ನ ಅಮ್ಮ" ಎಂದು ಪರಿಚಯ ಮಾಡಿಕೊಟ್ಟರು. ಈ ಪರಿಚಯಮಾಲೆ, ಊಟಕ್ಕೆ ಕುಳಿತ್ತಿದ್ದ ಇನ್ನೂ ಹತ್ತಾರು ಮಂದಿಯನ್ನು ಸೋಂಕಲಿಲ್ಲ. ಅವರಲ್ಲಿ ಒಬ್ಬರಾದ ಕಾಳಿಂಗಯ್ಯ ಮಾತ್ರ, ತಮ್ಮ ಪರಿಚಯವನ್ನು ತಾವಾಗಿಯೇ ಮಾಡಿಕೊಟ್ಟಿದ್ದರು.

ಸರಿ—ಊಟ ಮುಗಿದು, ಮಂಜಯ್ಯನವರು, ರಾಧಾಕೃಷ್ಣ ಎದ್ದು ಕೈ ತೊಳೆಯಲು ಬಂದರು. ಮಿಕ್ಕವರು ಊಟ ಮುಗಿದಂತೆ ಒಬ್ಬೊಬ್ಬರಾಗಿ ಏಳುತ್ತಿದ್ದರು. ಮಂಜಯ್ಯನವರು ಹೊರಕ್ಕೆ ಬಂದು, ಯಾರೋ ಆಳುಗಳೊಡನೆ ಕಬ್ಬು ಬೆಲ್ಲಗಳ ವಿಚಾರ ಮಾತನಾಡುತ್ತಿದ್ದರು. ರಾಧಾಕೃಷ್ಣ ಭೋಜನ ಶಾಲೆಯನ್ನು ದಾಟಿ, ದಿವಾನಖಾನೆಯಾದ ಹೆಬ್ಬಾಗಿಲಿಗೆ ಹೊರಟಿದ್ದ. ಅವನ ಬೆನ್ನಿಗೆ ಕಾಳಿಂಗಯ್ಯ ಹೊರಟರು. ಅವರು ಹೋಗುತ್ತಿದ್ದಾಗ, ಗಮನ ಸೆಳೆಯುವ ಯಾವುದೋ ಮಾತು ಕೇಳಿ ಬಂದುವು. ಮಂಜಯ್ಯನವರ ತಾಯಿ ಸೊಸೆಯೊಂದಿಗೆ "ಮಗು, ಹುಡುಗ ಸಾಪಾಗಿದ್ದಾನೆ. ಕುಂದಾಪುರದಿಂದ ಜಾತಕ ತರಿಸಿಕೊಂಡರೆ ಆಗುತ್ತಿತ್ತು" ಎಂದು ನುಡಿದುದು ಕೇಳಿಸಿತು. ರಾಧಾಕೃಷ್ಣನ ತುಟಿಯಲ್ಲಿ ಎಳೆ ನಗು ಮೂಡಿತು; ಆಶ್ಚರ್ಯವೂ ಆಯಿತು. "ಹೊಂ, ಅಳಿಯತನ ಪ್ರದರ್ಶಿಸಲು ಬಂದ ಹಾಗೆ ಆಯಿತು" ಎಂದು ನಗುತ್ತ ಮುಂದುವರಿದನು. ಅಲ್ಲಿಂದ ಮುಂದೆ ಅವನ ಮನಸ್ಸು—ಹೊಸತೇ ಶಾಲೆ ತೆರೆಯುವುದಕ್ಕಿಂತ ಇದ್ದುದನ್ನು ರಾಷ್ಟ್ರೀಯವಾಗಿ ಮಾರ್ಪಡಿಸುವುದು ಎಷ್ಟು ಸುಲಭ—ಎಂಬ ವಿಚಾರದ ಕಡೆಗೆ ಹರಿಯಿತು. ತಾನು ಆ ಊರಲ್ಲಿ ಹದಿನೈದು ದಿನ ಕಾಲ ನೆಲೆಸಿ, ಊರಿನ ಬಾಲಕರಿಗೆ ನೂಲುವಿಕೆಯ ಶಿಕ್ಷಣ ಕೊಡಬಹುದಲ್ಲಾ ಎಂದೂ ತೋರಿತು. ರಾಟೆಗಳೆಲ್ಲಿ? ಎಂಬ ಪ್ರಶ್ನೆಗೆ ಅದರ ಬದಲು ಸದ್ಯ—ತಕಲಿ ಪ್ರಾರಂಭ ಮಾಡುವುದೇ ಒಳಿತು. ಅದು ಸುಲಭದ ಕೆಲಸ. ಒಡೆದ ಸ್ಲೇಟಿನ ಚೂರುಗಳನ್ನೂ, ಬಳಪದ ಚೂರುಗಳನ್ನೂ, ಬಿಲ್ಲೆಯಾಗಿ ಮಾಡಿ ನಡುವೆ ಬಿದಿರಿನ ಸಲಿಕೆ ಸಿಕ್ಕಿಸಿ ತಯಾರಿಸಬಹುದು—ಎಂಬ ಸೂಚನೆ ತೋರಿತು.

ಅಷ್ಟಕ್ಕೆ ಮಂಜಯ್ಯನವರು ಮಾತು ಮುಗಿಸಿ ಹಿಂದಕ್ಕೆ ಬಂದರು. ನಾಳಿನ ದಿನ ರಾಧಾಕೃಷ್ಣನ ಒಂದು ಉಪನ್ಯಾಸ ಇರಿಸಬೇಕು ಎಂಬುದು ಅವರ ಉತ್ಸಾಹ. "ನಾನು ಇಷ್ಟರಲ್ಲೇ ವರ್ತಮಾನ ಹಬ್ಬಿಸಿದ್ದೇನೆ, ನಮ್ಮ ಮನೆಯಲ್ಲಿ ಗಾಂಧಿ ಲೆಕ್ಚರು ಆಗುತ್ತದೆ—ಎಂದು. ನಾಳೆಗೆ ಒಂದು ಸುದ್ದಿ ಕಳುಹಿಸಿದರೆ ಸರಾಸರಿ ಮುನ್ನೂರು, ನಾನ್ನೂರು ಜನರು ಜಮಾಯಿಸಬಹುದು" ಎಂದರು.

"ಈ ಊರಲ್ಲಿ ಇನ್ನೂರು ಮುನ್ನೂರು ಜನಸೇರಿಯಾರೇ?"

"ನಿಮಗೇಕೆ?"

"ಕುಂದಾಪುರದಲ್ಲಿ ಅಷ್ಟು ಮಂದಿ ಸೇರುವುದಿಲ್ಲ."

"ಆಲೆಮನೆ ಕುಂದಾಪುರವಲ್ಲ."

"ಆಗಲಿ" ಎಂದು ಈತನು ಒಡಂಬಟ್ಟ. ಅದರ ಜತೆಗೆ ನೂಲುವ ತರಗತಿ ತೆಗೆಯುವ ವಿಚಾರವನ್ನೂ ಅವರ ಮನೆಯ ಶಾಲೆಯನ್ನು ರಾಷ್ಟ್ರೀಯ ಶಾಲೆಯನ್ನಾಗಿ ಮಾಡುವ ವಿಚಾರವನ್ನೂ ಪ್ರಸ್ತಾಪಿಸಿದನು.

"ಹೋ, ಅದಕ್ಕೇನು ಮಹಾ" ಎಂದರು ಅವರು.

"ಶಾಲೆ ಎಂದ ಮೇಲೆ ಕಟ್ಟಡ ಆಗಬೇಡವೇ?"

"ಕಟ್ಟಡ ಯಾಕೆ? ನೂರು ಮಕ್ಕಳ ತನಕ ನಮ್ಮ ಮನೆಯ ಜಗುಲಿಯೇ ಸಾಕು. ಇಲ್ಲೇ ನಾಲ್ಕು ಮಂದಿ ಮಾಸ್ತರರಿಗೆ ಧರ್ಮದ ಅನ್ನ ಹಾಕಬಹುದು. ಮತ್ತೂ ಏನಾಗಬೇಕು ಅದಕ್ಕೆ?"

"ಅಂದರೆ ರಾಷ್ಟ್ರೀಯ ಶಾಲೆ ಎಂದು ಮಾಡಿದ ಮೇಲೆ, ಹೊಲೆಯರಿಗೂ ಬರಲಿಕ್ಕೆ ಅವಕಾಶ ಬೇಕು."

"ಪಂಚಮರ ಸಲುವಾಗಿ ಬೇರೆಯೆ ಕಟ್ಟಡವಾಗಬೇಕೇ? ನಿಮಗೆ ಮರುಳು. ನಾವು ಹಾಗೆ ಶಾಲೆ ತೆರೆದರೂ ಅವು ಬಂದಾವೇ? ವಂಡಸೆ ಊರಲ್ಲಿ ಒತ್ತಾಯದಿಂದ ಬೋರ್ಡು ಶಾಲೆಗೆ ಬಿಲ್ಲವರು ಬಂದ ಕತೆ ಕೇಳಲಿಲ್ಲವೇ ನೀವು? ಉಳಿದವರು—ಅವರು ಬರುತ್ತಾರೆಂದು ಬರಲಿಲ್ಲ. ಇವುಗಳು ಶಾಲೆ ಬೇಡಾಗಿ ಬರಲಿಲ್ಲ. ನೀವು ಹೊಲೆಯರ ಮಕ್ಕಳ ಕತೆಯನ್ನು ಹೇಳುತ್ತೀರಿ. ಶಾಲೆ, ಬರಹ, ಓದು, ಬೇಕೆಂದು ಅವಕ್ಕೆ ತಲೆಗೆ ಹೋಗಲು ಇನ್ನೂ ಒಂದು ಯುಗ ಬೇಕು. ಅವು ಓದಿ ಮಾಡುವುದಾದರೂ ಏನು?"

"ನಾವು ಅವರನ್ನು ಆ ಸ್ಥಿತಿಗೆ ತಂದಿದ್ದೇವೆ. ಅವರಿಗೆ ಉಳಲಿಕ್ಕೆ ಜಮೀನೇ? ಇರಲಿಕ್ಕೆ ಮನೆಯೇ?"

"ಜಮೀನು ಕೈಗೆ ಬಂದರೆ ಮೂರು ದಿವಸದಲ್ಲಿ ಮಾರಿ ಹೆಂಡ ಕುಡಿದು ಪಟ್ಟ ಮಾಡಿಯಾವು. ಸುಧಾರಣೆ ಆಗಬೇಕೆಂಬುದು ನಿಜ. ಅದಕ್ಕೆ ತಯಾರಾದ ಜನರು ಇದ್ದರೆ ಮಾತ್ರ. ಅದೂ ಆಗಬೇಕಾದ ಕೆಲಸವೇನೆ. ನಮ್ಮ ಊರಲ್ಲಿ ಮಲೆ ಕುಡುಬಿಯರ ಮಕ್ಕಳು ಶಾಲೆಗೆ ಹೋಗಲು ಒಪ್ಪುವುದಿಲ್ಲ."

"ರಾಟೆ, ನೂಲುಗಳ ವಿಚಾರ ಹಾಗಲ್ಲ ನೋಡಿ. ಲಾಭದ ಕೆಲಸ. ಎಲ್ಲರೂ ಮಾಡಿಯಾರು."

ರಾಧಾಕೃಷ್ಣ ಮಾತನ್ನು ಮುಂದುವರಿಸಲಿಲ್ಲ. ಅವನ ವಿಚಾರ ಸರಣಿಗೆ ಈಗ ತಡೆ ಬಂದಿತು. ಅವು ಅಸಹಜವಾದ ತಡೆಗಳೂ ಅಲ್ಲ. ತೀರ ನಿರಾಧಾರವಾದುವೂ ಅಲ್ಲ. ಮಂಜಯ್ಯನವರಂತಹ ಮುಂದಾಳುಗಳನ್ನು ಪಂಚಮರ ವಿರೋಧಿಗಳು ಎಂದು ಹೇಳುವುದೇ? "ಮಂಜಯ್ಯನವರೇ, ನೀವಾದರೂ ನಿಮ್ಮ ಮನೆಯ ಒಳಕ್ಕೆ ಹೊಲೆಯರು ಬರಲು ಅವಕಾಶ ಕೊಡಬಹುದಲ್ಲಾ" ಎಂದು ಕೇಳುವ ಮನಸ್ಸು ಅವನದು. ಆದರೂ ಒಮ್ಮೆಗೆ ಅಷ್ಟು ಸಾಹಸ ಉಂಟಾಗಲಿಲ್ಲ.

ಆ ರಾತ್ರಿ ಸರಿಯಿತು; ಮರುದಿನ ಬಂದಿತು; ಸುದ್ದಿ ಹೋಯಿತು. ಈಗ ರಾಧಾಕೃಷ್ಣನಿಗೆ ಆಲೆಮನೆಯ ಪ್ರಜಾ ಕೋಟಿಯನ್ನು ಕಾಣುವ ಸಂದರ್ಭ ಬಂದೊದಗಿದೆ. ರಾತ್ರಿ ಊಟ ಮುಗಿದ ನಂತರ ಊರ ಜನ, ಜೋಡಾಟ, ಎಂಬಷ್ಟು ಭ್ರಮೆಯಿಂದ ನೆರೆದರು. ಮಂಜಯ್ಯನವರ ಮನೆ ಚಪ್ಪರದಲ್ಲಿ ಎಲ್ಲ ಜಾತಿಯ ಜನರೂ ಸೇರಿದ್ದಾರೆ. ಊರಿನ ಹತ್ತೆಂಟು ಮಂದಿ ಬ್ರಾಹ್ಮಣರು ಹೆಬ್ಬಾಗಿಲ ಮೇಲೆ ಜಗುಲಿಯಲ್ಲಿ ಕುಳಿತಿದ್ದಾರೆ. ಕೆಳ ಜಗುಲಿಯಲ್ಲಿ ಎಲೆ ಅಡಿಕೆ ಸಾಮಾಗ್ರಿಗಳನ್ನು ಇರಿಸಿಕೊಂಡು ನಾಡವರು ಮೊದಲಾದವರು ಕುಳಿತಿದ್ದಾರೆ. ಉಳಿದ ಅಬ್ರಾಹ್ಮಣ ಕೋಟಿಯು ಚಪ್ಪರದಲ್ಲಿ ಕಲೆತಿದೆ. ಲೆಕ್ಚರು ಎಂದು ತಿಳಿದು ಬಂದವರು ಬರಿಯ ನಾಲ್ಕೆಂಟು ಮಂದಿ ಮಾತ್ರ. ಉಳಿದವರು—ಏನೋ ವಿಶೇಷ ಸಂಗತಿ ಇದೆ ಎಂದು ಬಂದಿರಬೇಕು. ಎಳೆಗೂಸುಗಳನ್ನೂ, ಹೆಂಗಸರನ್ನೂ ಕಟ್ಟಿಕೊಂಡು ಬಂದಿದ್ದರು ಎಲ್ಲ. ಊಟ ಮುಗಿಸಿ ರಾಧಾಕೃಷ್ಣ ಮಂಜಯ್ಯನವರೊಡನೆ ಹೊರಕ್ಕೆ ಬರುವಾಗ, ಮಹಾ ಸಭಾಸಮುದ್ರವನ್ನೇ ಕಂಡಂತಾಯಿತು. ಅವರನ್ನು ಕಾಣುತ್ತಲೆ, ಆತ ಒಳಕ್ಕೆ ಹೋಗಿ, ತನ್ನ ಕರ್ತವ್ಯ ಲಾಂಛನವಾದ ಟೊಪ್ಪಿಯನ್ನು ಇರಿಸಿಕೊಂಡು ಬಂದನು. ಮೇಲೆ ಜಗುಲಿಯಲ್ಲಿ ಬ್ರಹ್ಮಸಮುದಾಯದಲ್ಲಿ ಮಂಜಯ್ಯನವರು ಉಪನ್ಯಾಸಕರೊಡನೆ ಸ್ಥಾಪಿತರಾದರು. ತಾಂಬೂಲ ಸಂಧಾನವಾಯಿತು. ಮಂಜಯ್ಯನವರೇ ಖುದ್ದಾಗಿ ಎದ್ದು ನಿಂತು, ಇವರು ಇಂಥವರು, ಎಂದು ಒಂದೆರಡು ಮಾತುಗಳನ್ನು ಹೇಳಿ, ಗಾಂಧಿ ಲೆಕ್ಚರನ್ನು ಸಡಲಿಸಿ ಬಿಟ್ಟರು. ಅವೇ–ಗೋಕರ್ಣ,

ಕುಮುಟೆಯ ಜನರಲ್ಲಿನ ಜಾಗ್ರತಿ, ತಮ್ಮವರ ಹೆಡ್ಡುತನಗಳ--ಆರೋಪ ವಾಯಿತು. ಅಷ್ಟರಲ್ಲಿ ಎರಡನೆಯ ಜಗುಲಿಯ ಗುರಿಕಾರರೊಬ್ಬರು "ಮಂಜಯ್ಯನವರೇ, ಲೆಕ್ಚರನ್ನೆಲ್ಲಾ ನೀವೇ ಮುಗಿಯಿಸಿ ಬಿಟ್ಟರೆ ನಾವು ಅವರನ್ನು ಕೇಳುವುದು ಯಾವಾಗ?" ಎಂದರು.

ಮಂಜಯ್ಯನವರು ತುಸು ಅವಾಕ್ಕಾದರು. ಮಾತನ್ನು ನಿಲ್ಲಿಸಿ, ತಂಬುಲ ಉಗಿದು ಬರುವ ನೆಪದಿಂದ ಕೆಳಕ್ಕಿಳಿಯುತ್ತಾ, "ಅವರೀಗ ಮಾತನಾಡುತ್ತಾರೆ. ಊಟಮಾಡಿ ಬಂದವರಿಗೆ ತುಸು ವಿಶ್ರಾಂತಿ ಇರಲಿ ಎಂದು ನಾನು ಅಡ್ಡಮಾತನ್ನು ತೆಗೆದೆ" ಎಂದು ನುಡಿದರು. ಅವರು ಮೇಲಕ್ಕೆ ಬರುವ ತನಕ ಕಾದಿದ್ದು, ಆ ಮಹಾಸಭೆಯ ಮುಂದೆ ರಾಧಾ ಕೃಷ್ಣ ಎದ್ದು ನಿಂತು ಉಪನ್ಯಾಸ ತೊಡಗಿದನು. ವಿಷಯವು—ಜಲಿಯ ನ್‌ವಾಲಾ ಬಾಗಿನಿಂದ ತೊಡಗಿ, ಮದ್ಯಪಾನ ನಿಷೇಧ, ಖಾದಿ ಪ್ರಚಾರ, ಕರನಿರಾಕರಣೆ—ಇವುಗಳ ವಿಷಯವಾಗಿ ಹರಿಯಿತು. ಅವನ ಅಪಾರ ವಾದ ವಾಕ್ ಶಕ್ತಿಯನ್ನು ಎಲ್ಲರೂ ಮೆಚ್ಚಿದರು. ಕೆಲವರು ಅವನ್ನು ಕೇಳಿ "ಈ ಅಯ್ಯ, ತಾಳಮದ್ದಳೆ ಅರ್ಥ ಹೇಳಿದರೆ ಬಿರತಿಯವರನ್ನೂ, ಮುತ್ತು ಭಟ್ರನ್ನೂ ನಿಮಿಷದಲ್ಲಿ ಸೋಲಿಸಿಯಾರು" ಎಂದರು.

ಅವನ ಉಪನ್ಯಾಸ ಮುಗಿಯಿತು. ಸಭಿಕರಲ್ಲಿ ಒಬ್ಬಿಬ್ಬರು ಪ್ರಮು ಖರು ಮೆಚ್ಚಿ ಮುಂದೆ ಬಂದರು. "ನೀವು ಹೇಳುವುದು ಎಲ್ಲವೂ ಸಮವೇ. ಅದರಲ್ಲಿ ಒಂದೇ ಒಂದು ಮಾತು ತೆಗೆದು ಹಾಕುವುದಕ್ಕಿಲ್ಲ. ಈ ನಮ್ಮ ಪಟೇಲರುಗಳೂ, ಶ್ಯಾನುಭಾಗರುಗಳೂ, ಸಾಲಾಸಾಲು ರಾಜಿ ಕೊಟ್ಟರೆ ವಿಲಾಯತಿಯವರು ಬಂದು ಆ ಕೆಲಸವನ್ನು ಮಾಡುತ್ತಾರೆಯೇ? ನಮ್ಮ ಜನ ಸರಕಾರ ಹಣ ಕೊಡುವುದನ್ನು ನಿಲ್ಲಿಸಿದರೆ ಅಷ್ಟರ ಮಟ್ಟಿಗೆ ಅವರಿಗೂ ಲಾಭ. ಉಪ್ಪಿನ ಮೇಲಿನ ಷುಂಕ ಹೋದರೆ ಅದೂ ಒಂದು ಲಾಭವೇ. ಸುಂಕ, ಕಂದಾಯ, ಇವೆಲ್ಲಾ ಹೋಗದೆ ನಮ್ಮ ಹಳ್ಳಿಯವರಿಗೆ ಸುಖವಿಲ್ಲ." ಎಂದರು.

ಮಾತು ಮುಗಿಯಿತೆಂಬ ಗ್ರಹಿಕೆಯಿಂದ ಚಪ್ಪರದಲ್ಲಿ ಸೇರಿದವರೂ, ಚಪ್ಪರದ ತುದಿಯಿಂದ ಇಣುಕುತ್ತಿದ್ದ ಕುಡುಬಿಯರೂ ಹೊರಡಲು ಸಿದ್ಧ ರಾದರು. ಇನ್ನೂ ದೂರದಲ್ಲಿ-ಗದ್ದೆಯ ಅಂಚಿನಲ್ಲಿ ಕುಳಿತು, ಬೆಳುದಿಂಗಳಿ ನಲ್ಲಿ ಕಣ್ಣುಬಾಡಿಸುತ್ತಿದ್ದ ಕೆಲವು ಹೊಲೆಯರು "ಅವರೇನು ಅಂದದ್ದು"

ಎಂದು ಉಳಿದವರನ್ನು ವಿಚಾರಿಸಿದರು. ಅವರಷ್ಟೇ ತಿಳಿದುಕೊಂಡ, ಕೆಲವರು, ಪ್ರತಿಯಾಗಿ "ಏನೋ ಕರ್ನಾಟಕ ಮಾತಾಡಿದರು. ಸರಕಾರ ಅಂದರು; ಸುಂಕ ಅಂದರು. ನಮಗೊಂದೂ ತಿಳಿಯಲಿಲ್ಲ. ಆ ಬ್ರಾಹ್ಮಣರಿಗೂ, ಶೆಟ್ಟರಿಗೂ ತಿಳಿಯಿತೋ ಏನೋ" ಎಂದು ತಮ್ಮ ಅಮೋಘ ಅಜ್ಞಾನವನ್ನು ವ್ಯಕ್ತಪಡಿಸಿ ಹೊರಟುಹೋದರು.

ಚಾವಡಿಯಲ್ಲಿ ಕುಳಿತ ಮೇಲುಜಾತಿಯವರನ್ನು--ಕಾಂಗ್ರೆಸ್ ಸದಸ್ಯತನ, ತಿಲಕ ಸ್ವರಾಜ್ಯನಿಧಿ—ಇವುಗಳ ವಿಷಯದಲ್ಲಿ ಆಸಕ್ತಿ ಹುಟ್ಟಿಸಲು ರಾಧಾಕೃಷ್ಣ ಪ್ರಯತ್ನಿಸಿದನು. ಬರಿಯ ಮಾತಿಗೆ ಮುಂದಾಗುತ್ತಿದ್ದ ಆ ಜನರು ವಂತಿಗೆ ವರಾಡಗಳ ಸುದ್ದಿ ಬರುತ್ತಲೇ "ಇವೆಲ್ಲಾ ಈ ಊರಲ್ಲಿ ಆಗಿ ಹೋಗುವ ಬಾಬಲ್ಲ. ಇಲ್ಲಿ ಏನು ಮಾಡುವುದಾದರೂ ಮಂಜಯ್ಯನವರು ಒಬ್ಬರು ಮಾಡಬೇಕು. ಉಳಿದವರು ಮಾಡಿದರೂ ಅಷ್ಟೇ, ಮಾಡದಿದ್ದರೂ ಅಷ್ಟೇ" ಎಂಬುದರಲ್ಲಿ ಸಭೆ ಮುಕ್ತಾಯವಾಯಿತು. ಮಂಜಯ್ಯನವರಿಗೇನೋ ಅದರಿಂದ ತೃಪ್ತಿಯೇ. ತಾವು ಊರಿನ ಏಕಮಾತ್ರ ಗಣ್ಯ ವ್ಯಕ್ತಿ ಎನ್ನುವುದನ್ನು ತೋರಿಸಿಕೊಟ್ಟಂತಾಯಿತು. ಅದರಿಂದ ರಾಧಾಕೃಷ್ಣನಿಗೆ ಏನು ತೃಪ್ತಿ?

ಜನ ಚದರಿತು. ರಾತ್ರಿ ಕಳೆಯಿತು. ಬೆಳಗಾಗುವಾಗ ರಾಧಾಕೃಷ್ಣನ ಮನಸ್ಸಿನ ಕರಿ ಹಲಗೆ, ಬರಿದಾಗಿಯೇ ಇತ್ತು. ಉಪನ್ಯಾಸವೇನೋ ಯಶಸ್ವಿಯಾಗಿ ಜರಗಿತು. ಮಾಡಬಹುದಾದ ಕೆಲಸ ಹಾಗೆಯೇ ಉಳಿಯಿತು. ಕೊನೆಗೆ, ತಾನು ಹಿಂದಿನ ರಾತ್ರಿ ಇಷ್ಟನ್ನಾದರೂ ಮಾಡಬಹುದಿತ್ತು—ಶೂದ್ರವರ್ಗದ ಹಲವು ಜನ ಬಂದಿದ್ದರು. ಅವರಿಂದ ಮದ್ಯಪಾನ ಬಿಡುವ ಹಾಗೆ ಪ್ರತಿಜ್ಞೆ ಮಾಡಿಸಿಕೊಂಡಿದ್ದರೆ ಯಾವ ಹೆಚ್ಚಿನ ತ್ಯಾಗವೂ ಇಲ್ಲದೆ ದೇಶಕ್ಕೊಂದು ಸೇವೆ ಸಲ್ಲಿಸಿದಂತಾಗುತ್ತಿತ್ತು. ಅದನ್ನೂ ಮಾಡದೆ ಹೋದೆನೆ—ಎಂದು ಹಲುಬುವಂತಾಯಿತು.

ಅವನ ಮನಸ್ಸು ಚಂಚಲಗೊಂಡು ಮುಂದಣ ಬೆಳಕನ್ನು ಅರಸುತ್ತಿದೆ. ಇದೇ ಬಗೆಯಲ್ಲಿ ತಾನು ಊರೂರು ಅಲೆದು ಫಲ ಇಲ್ಲ. ಹಲವಾರು ಊರುಗಳಲ್ಲಿ ತನ್ನ ಮಾತನ್ನು ಕೇಳಲು ಜನರೇ ಸೇರೆಯಲಾರರು; ಸೇರಿದರೂ ಹೆಚ್ಚಿನ ಪುರುಷಾರ್ಥವಿಲ್ಲ. ತಾನು ಹೀಗೆ ಅಲೆದಾಡುವುದಕ್ಕಿಂತ, ಒಂದು ಕಡೆಯಲ್ಲಿ ನಿಂತು, ತನ್ನಿಂದ ಆದಷ್ಟು ಸೇವೆ ನಡೆಯಿಸುವುದೇ

ಸರಿಯಾದ ದಾರಿ—ಎಂದು ತೋರಿತು. ಆ ಸೇವೆಯ ದಾರಿಯೂ ಅಸ್ಪಷ್ಟ. ಹೋಗಲಿ, ಬರಿಯ ನಾಳೆಗೆ ಏನು ಮಾಡಬೇಕೆಂದು ತೋರುತ್ತಿದೆಯೇ? ಅದೂ ಕಷ್ಟದ ಮಾತು. ಏನೂ ತೋಚದ್ದಕ್ಕೆ—"ಅಲ್ಲಿಯೇ ಇದ್ದು ಮಂಜಯ್ಯನವರ ಮನೆಯ ಶಾಲೆಯ ಮಕ್ಕಳಿಗೆ ನೂಲು ಮಾಡಲು ಹೇಳಿ ಕೊಡುವೆ"ನಾಗಿ ನಿರ್ಧರಿಸಿದನು. ಆ ವಿಷಯವನ್ನು ಅವರಲ್ಲಿಯೂ ಪ್ರಸ್ತಾಪ ಮಾಡಿದನು. "ಊರಿಗೆ ಹೋದ ಮಾಸ್ತರರು ಬಂದ ಮೇಲೆ ಅದು ಸಾಧ್ಯ" ಎಂದರು ಅವರು. "ಹಾಗಾದರೆ ನಾನು ಜೂನು ತಿಂಗಳಿನಲ್ಲಿ ಬಂದರೆ ಸಾಲದೇ" ಎಂದು ಈತ ಕೇಳಿದರೆ "ಈಗ ನೀವು ಊರಿಗೆ ಹೋಗಿ ಏನು ಮಾಡುವುದು ಉಂಟು? ಇಲ್ಲಿಯೇ ಇದ್ದು ಬಿಡಿ" ಎನ್ನುತ್ತಾರೆ ಅವರು.

ಮಂಜಯ್ಯನವರಿಗೆ ಭರವಸೆಯ ಗೆಳೆಯರು ತಮ್ಮ ಆಚೀಚೆಗೆ ಇರಬೇಕು. ಅವರೊಡನೆ ತಾವೂ ಶೀವಿಯಿಂದ ಮಾತನಾಡುತ್ತಿರಬೇಕು. ಈತನಿಗೆ ಅವರ ಮಾತಿನ ತಥ್ಯಾಂಶವನ್ನು ತಿಳಿದು,ತನ್ನ ಹಾದಿಯನ್ನು ನಿರ್ಧರಿಸಬೇಕಿತ್ತು. ಮಂಜಯ್ಯನವರನ್ನು ಠಕ್ಕರು—ಎಂದು ತೆಗೆದು ಹಾಕಲು ಬರುವಂತಿಲ್ಲ. ಅವರ ತರ್ಕಸರಣಿಯಲ್ಲಿ ಯಾವ ತಪ್ಪೂ ಇರಲಿಲ್ಲ. ಆದರೆ ಅವರನ್ನು ನಂಬಿ ಅಲ್ಲಿಯೇ ಕುಳಿತಿರಲು ಧೈರ್ಯ ಬರುವುದಿಲ್ಲ. ಹೀಗೆ ಚಂಚಲನಾದ ಅವನು, ತನಗಿಂತ ಮೇಲಿನವರಿಂದ, ಮುಂದಣ ದಾರಿ ನಿರ್ಧರಿಸಬೇಕು ಎಂದು ಯೋಚನೆಮಾಡಿದನು. 'ಅದಕ್ಕಾಗಿ ತಾನೊಮ್ಮೆ ಮಂಗಳೂರಿಗೆ ಹೋದರೆ ಆಗದೇ? ಅಲ್ಲಿ ಅಸಹಕಾರ ಚಳವಳಿ ಬಲು ಬಿರುಸಾಗಿ ಸಾಗಿದಂತೆ ಪತ್ರಿಕೆಗಳಿಂದ ತಿಳಿದು ಬರುತ್ತದೆ. ಅವರು ಏನು ಮಾಡುತ್ತಿದ್ದಾರೆಂಬುದನ್ನು ಕಣ್ಣಾರೆ ನೋಡಿ, ಅಲ್ಲಿನ ದೇಶಭಕ್ತರಿಂದ ಉಪದೇಶ ಪಡೆದು ಮರಳಿ ಬಂದರಾಗದೇ—ಎಂದು ಯೋಚಿಸಿದನು.

ಇನ್ನು ಕೆಲವು ದಿನ ಮಂಜಯ್ಯನವರ ಸಹವಾಸದಲ್ಲೇ ಸಮಯ ಕಳೆಯಿತು. ಗ್ರಾಮ ಸಂಚಾರ ಮಾಡಿ, ಊರಿನ ಉದ್ಯೋಗಗಳಾದ ಬೆಲ್ಲ ತಯಾರಿಕೆ, ಕಾಚು ತಯಾರಿಕೆ—ಇವುಗಳ ವಿಷಯಗಳನ್ನು ಆತ ತಿಳಿದುಕೊಂಡನು. ಸ್ಲೇಟಿನ ಚೂರು, ಬಿದಿರಿನ ಕಡ್ಡಿಗಳಿಂದ ತಕಲಿಯನ್ನು ನಿರ್ಮಾಣಮಾಡಿ, ಮಂಜಯ್ಯನವರ ಮಕ್ಕಳಿಗೆ ನೂಲುಮಾಡಲು ಹೇಳಿಕೊಟ್ಟನು. ಅದರಿಂದಲೂ ಸಮಯ ಹೋಗದೆ, ಬೇಸರ ಬಂದು, ಇನ್ನು 'ಖಂಡಿತ ಊರಿಗೆ ಹೋಗುವೆ' ಎಂದು ತಿಳಿಸಿದನು.

ಆಗ ಮಂಜಯ್ಯನವರ ಅರವತ್ತು ವರ್ಷದ ತಾಯಿ ಮುಂದಕ್ಕೆ ಬಂದು 'ನಮ್ಮ ಮನೆಯಲ್ಲಿ ಇನ್ನೂ ನಾಲ್ಕುದಿನ ಇದ್ದು ಹೋಗಬಾರದೇ'? ಇಂಥ ಕುಗ್ರಾಮಗಳಿಗೆ ನಿಮ್ಮಂಥ ಓದಿದ ಮಂದಿ ಎಷ್ಟು ಜನ ಬರುತ್ತಾರೆ?' ಎಂದು ಉಪಚಾರಕ್ಕೆ ಅವನನ್ನು ಕಟ್ಟಿ ಹಾಕಿದರು. ಇನ್ನೂ ಒಂದೆರಡು ದಿವಸ ನಿಲ್ಲುವಂತಾಯಿತು.

ತನ್ನ ಕಾಲು ಏಕೆ ಹಾಗೆ ತಡೆಯುತ್ತಿದೆ—ಎಂದು ಅವನು ತಿರುಗಿ ತಿರುಗಿ ಯೋಚಿಸುವಂತಾಯಿತು. ಆ ಮನೆಯಲ್ಲಿನ ಯಾವುದೋ ಒಂದು ಆಕರ್ಷಕ ಶಕ್ತಿಯು ತನ್ನನ್ನು ಜಗ್ಗಿ ಹಿಡಿಯುತ್ತಿದೆ ಎಂದು ಅನಿಸ ತೊಡಗಿತು. ಅವನಿಗೂ ಮಂಜಯ್ಯನವರ ಮಗ ಸೀತಾರಾಮನಿಗೂ ತುಂಬ ಗೆಳತನವಾಗಿತ್ತು. ಆತನೂ ತಂದೆಯಂತೆಯೆ ಮಾತಿನ ಮಲ್ಲ. ಅವನೊಡನೆ ಗುಡ್ಡ, ಕಾಡು ಅಲೆಯುವುದಕ್ಕೆ ಇವನಿಗೂ ಇಷ್ಟವೆ. ಆದರೆ ಅದು ಒಂದೇ ಆಲೆಮನೆಗೆ ತನ್ನನ್ನು ಅಂಟಿಸುತ್ತಿದೆಯೇ-ಎಂದು ತೋರುತ್ತದೆ. ಕೃಷ್ಣಪ್ಪನವರ ಮನೆಯಿಂದ ಬರಿಯ ಎರಡು ದಿನಗಳಲ್ಲಿ ಓಡಿ ಬಂದ ತಾನು, ಇಲ್ಲಿ ಮಾತ್ರ ವಾರ ಕಳೆದರೂ ಹೊರಡವೆಯೆ ನಿಂತಿದ್ದೇನೆ-ಎಂದು ಅನಿಸಿತು. ನಾಳೆಗೆ ಹೊರಟೇ ಹೊರಡುತ್ತೇನೆ-ಎಂದುಕೊಂಡ.

ನಾಳೆ ಬರುವ ಮುಂಚೆ, ಅದೇ, ಅಲ್ಲಿನ ಕೊನೆಯ ಸಂಜೆ ಎಂದು ಸೀತರಾಮನನ್ನು ಕೂಡಿಕೊಂಡು ವಿಹಾರಕ್ಕೆ ಹೊರಟನು. ಅವನ ಜತೆಗೆ ಅವನ ತಂಗಿ, ಲಕ್ಷ್ಮಿಯೂ ಹೊರಟಳು. ಎರಡನೆಯವಳು ಅವಳು. ಹರೆಯದ ಹುಡುಗಿ. ಚೆಲುವಿನ ನಗು ಮೊಗದವಳು; ಬೇಡವೆಂದರೂ ಅವರಿಬ್ಬರ ಹಿಂದೆ ಸುಳಿದಾಡಿದಳು. "ಅದೇನು—ನೀವು ಅವನಿಗೆ ಮಾತ್ರ ನೂಲು ಮಾಡಲು ಹೇಳಿ ಕೊಡುವುದು? ನನಗೂ ಹೇಳಿ ಕೊಡಿ. ನಾನು ಅಕ್ಕನಿಗೆ ಹೇಳಿ ಕೊಡುತ್ತೇನೆ" ಎಂದಳು.

"ಹೌದು, ಅಕ್ಕ ನೂಲು ಮಾಡುತ್ತಾಳಲ್ಲ, ಮತ್ತೇನಿಲ್ಲವೇ"? ಎಂದು ಸೀತಾರಾಮ ಮೂದಲಿಸಿದ.

"ಯಾಕೆ ಮಾಡಬಾರದು? ಮನೆಯಲ್ಲಿ ಸುಮ್ಮನಿರುವಾಗ ಮಾಡಿದರೆ ಏನು ನಷ್ಟ?" ಎಂದು ರಾಧಾಕೃಷ್ಣ ವಕಾಲತ್ತು ವಹಿಸಿದ. ಲಕ್ಷ್ಮಿಗೆ ಮರುದಿನ, ಹೊರಡುವ ಮುಂಚೆ ನೂಲು ಮಾಡಲು ಹೇಳಿಕೊಡುವೆನೆಂದು ಭರವಸೆ ಇತ್ತನು. ಅನಂತರವೇ ಅವಳು ಅವನನ್ನು ಹೋಗಗೊಟ್ಟಳು.

ದಾರಿಯಲ್ಲಿ ಸೀತರಾಮನೊಡನೆ ಮಾತನಾಡುತ್ತ ಅಡ್ಡಾಡುತ್ತಿರುವಾಗ, ರಾಧಾಕೃಷ್ಣನ ಮನಸ್ಸು ಲಕ್ಷ್ಮಿಯ ಅಕ್ಕನನ್ನು ನೆನೆಯಲು ಯತ್ನಿಸುತ್ತಿತ್ತು. ಅವಳು ನೂಲುವ ಚಿತ್ರವನ್ನು ಕಲ್ಪಿಸಲು ಪ್ರಯತ್ನಿಸುತ್ತಿತ್ತು.

ಆ ಸಂಜೆ ಸಂಚಾರ ಮುಗಿದು ಮರಳಿ ಮನೆಗೆ ಬಂದ ರಾಧಾಕೃಷ್ಣನಿಗೆ, ಮರುದಿನ ಊರಿಗೆ ಹೊರಡಬೇಕೆಂಬ ಯೋಚನೆ ತೋಚದಾಯಿತು. ರಾತ್ರಿಯೆಲ್ಲ ಆತನಿಗೆ ದೆವ್ವ ಬಡಿದಂತೆ ಚಳಿಜ್ವರ ಬಡಿಯಿತು. ಬೆಳಗಾಗುವಾಗ ಆತ ಕಂಗಾಲಾಗಿ ಬಿದ್ದಿದ್ದ. ಮನೆಯವರೆಲ್ಲರೂ ಅವನನ್ನು ಉಪಚರಿಸುವವರೇ! ಅವನಿಗಾಗಿ ಕನಿಕರ ಪಡುವವರೇ, ಈತನ ಮನಸ್ಸಿಗೆ —ತಮ್ಮ ಗ್ರಾಮ ಸಂಚಾರಕ್ಕೆ ಎಂಥ ಪ್ರತಿ ಫಲ ದೊರೆಯಿತು?—ಎಂದು ತೋರಿತು. ಆ ದಿನವೆಲ್ಲ ತುಂಬ ನಿತ್ರಾಣ; ಕದಲಲಾರದಷ್ಟು ಮೈ ಬೇನೆ, ಬಾಯಿಗೆ ತುತ್ತು ಹೋಗದಷ್ಟು ಜಿಗುಪ್ಸೆ ಮರುದಿನ ಜ್ವರ ಮರುಕಳಿಸಿತು. ದಣಿವು ಹೆಚ್ಚಿತು. ಮೈ ಉರಿದು ಬೆವರಿತು. ತಾನು ಯಾರ್‍ಯಾರ ಮನೆಯಲ್ಲಿ ಬಿದ್ದುಕೊಂಡು ನರಳುವ ಪಾಡು ಬಂತೇ—ಎಂದು ಮನಸ್ಸು ನೊಂದಿತು. ತಾನು ಅಲ್ಲಿಂದ ಎಲ್ಲಿಗೆ ಹೋಗಲಿ? ತಂದೆಯ ಮನೆಗೆ ಹೋಗುವ ವಿಚಾರವು ರುಚಿಸಲಿಲ್ಲ. ಕುಂದಾಪುರದ ಎಣಿಕೆಯು ಮಾಯವಾಗಿ, ಬೈಂದೂರಿನಲ್ಲಿರುವ ಕೃಷ್ಣಪ್ಪನವರ ಕಡೆಗೆ ಮನಸ್ಸು ಓಡಿತು. ಜ್ವರ ಬಿಟ್ಟ ಮರುದಿನ, ಎದ್ದು ನಿಲ್ಲಲು ಕಾಲು ಬಾರದೆ ಹೋದರೂ ಹೊರಡುತ್ತೇನೆ—ಎಂಬ ಹಟವನ್ನು ತೊಟ್ಟನು.

ಆದರೆ ಮಂಜಯ್ಯನವರು ಬಿಡುತ್ತಾರೆಯೇ? "ಹೋಗ ಬಹುದಂತೆ ಸ್ವಲ್ಪ ಇಲ್ಲಿ ಯಾರಿಗೂ ಏನೂ ತೊಂದರೆ ಇಲ್ಲ. ಮಲೆ ಜ್ವರ ನಮಗೆ ಯಾರಿಗೂ ಬಾರದುದಲ್ಲ ನಿಮಗೆ ಅದು ಹೊಸತಾದುದರಿಂದ ಕಂಗಾಲಾಗಿದ್ದೀರಿ. ಗುಣವಾದ ಮೇಲೆ ಹೋಗುವಿರಂತೆ" ಎಂದರು. ಅವರ ತಾಯಿ ತನ್ನ ಮಗನೆಂಬಷ್ಟು ಅಕ್ಕರೆಯಿಂದ ಅವನ ಬಳಿಯಲ್ಲಿ ಕುಳಿತು ಮಾತನಾಡುತ್ತಾರೆ. ಸೀತಾರಾಮನೂ ಸಮೀಪದಲ್ಲೇ ಕುಳಿತಿರುತ್ತಾನೆ. ಇದರೊಳಗೇನೇ ಲಕ್ಷ್ಮಿ ನೂಲು ಮಾಡುವ ಉಪದೇಶ ಪಡೆದು— 'ಈ ನೂಲು ಯಾಕೋ ನಿಮಿಷಕ್ಕೆ ಎರಡು ಸಾರಿ ಗಂಟಾಗುತ್ತದೆ; ನಾಲ್ಕು ಸಾರಿ ತುಂಡಾಗುತ್ತದೆ" ಎಂದು ವಿನೋದಕ್ಕೆ ಎಡೆ ಮಾಡಿಕೊಡುತ್ತಿದ್ದಾಳೆ. ಒಂದೆರಡು ಬಾರಿ, ಅವಳ ಅಕ್ಕ, ಸತ್ಯ ಆತನಿಗೆ ಕುಡಿಯಲು

ಗಂಜಿ, ಹಾಲು, ಕಷಾಯಗಳನ್ನು ತಂದು ಮಗ್ಗುಲಲ್ಲಿ ಇರಿಸಿ ಹೋದುದೂ, ಕುಡಿದ ಬಟ್ಟಲನ್ನು ತೆಗೆಯಲು ಬಂದುದೂ ಉಂಟು.

ಯಾಕೋ ಅವನ ಮನಸ್ಸು ಈ ನೋವಿನ ಗಳಿಗೆಯಲ್ಲಿ ಈ ಒಂದು ಪದಾರ್ಥವನ್ನು ಹೆಂಬಲಿಸುವಂತೆ ಕಾಣುತ್ತಿತ್ತು. ಆ ಬೇನೆ, ಆಕಸ್ಮಿಕ ಪರಿಚಯಗಳೆಲ್ಲ ಯಾವುದೋ ಸ್ನೇಹ ಕಲ್ಪಿಸಲು ನೆರೆದ ಘಟನೆಗಳಂತೆ ಕಾಣಿಸತೊಡಗಿತು. ಸತ್ಯಳ ನೆನಪಿನೊಂದಿಗೆ ಸ್ನೇಹದ ಬಯಕೆ, ಸ್ನೇಹದ ಬಯಕೆಯೊಂದಿಗೆ ವಿವಾಹದ ಆಸೆ, ಅದು ಬರುತ್ತಲೇ ತನ್ನ ಧ್ಯೇಯ, ಅದರ ಸಾಧ್ಯಾಸಾಧ್ಯತೆ, ಇವೆಲ್ಲವೂ ಹಾಯತೊಡಗುವುವು. "ಈ ಜ್ವರ ಬಂದು ನನ್ನ ಮನಸ್ಸಿಗೆ ಮರುಳು ಹಿಡಿದಿದೆ" ಎಂದು ತೋರುತ್ತದೆ ಒಮ್ಮೆ; ಇನ್ನೊಮ್ಮೆ ಮನಸ್ಸಿನ ಹುದುಗಿದ ಬಯಕೆಗಳು ತಲೆ ಎತ್ತಿ ಕುಣಿಯುತ್ತವೆ-ಎಂದು ತಿಳಿಯುತ್ತಾನೆ.

ಒಂದು ವಾರ ಕಳೆಯಿತು ಚಾಪೆಯಲ್ಲಿ. ಬೇನೆ ಕಳೆಯಿತು. ಅದರ ಬದಲು ಸತ್ಯಳ ಕುರಿತಾದ ಹೊಸ ಬಯಕೆ ಉದಯಿಸಿತು. ಬಾಯಿ ಬಾರದ ಆ ಆಸೆ, ಮನದಲ್ಲಿ ರಂಗವಲ್ಲಿಯನ್ನು ಬರೆದು ತನ್ನ ಕೈವಾಡಕ್ಕೆ ತಾನೇ ಹಿಗ್ಗಿತು. ಆತ ಹೊರಡುವುದಕ್ಕೆ ಎಂದು ಮಂಜಯ್ಯನವರ ಗಾಡಿ ಸಿದ್ಧವಾಯಿತು. ಹೊರಡುವ ಮುನ್ನ ಅವರಿಗೆ ಹೇಳಿ ಅವರ ತಾಯಿಯನ್ನು ಬೀಳ್ಕೊಡಲು ಹೋದನು. "ಅವರು ಇನ್ನು ಎಂದು ಬರುವುದು?" ಎಂದು ಉಪಚಾರಮಾಡಿದರು. ಈತ "ನೀವು ಕರೆಯಿಸಿಕೊಂಡಾಗ" ಎಂದು ವೈಮರೆತು ಉತ್ತರವಿತ್ತು ಬಂದನು. ಗಾಡಿ ಹೊರಟಿತು. "ಜೂನಿನಲ್ಲಿ ಬನ್ನಿ" ಎಂದು ಮಂಜಯ್ಯನವರು ಒತ್ತಿ ಹೇಳಿದರು. 'ಆಗಲಿ ನೋಡುವ' ಎಂದು ನುಡಿದನು ಆತ. ಸಂಜೆ ಹೊರಟ ಗಾಡಿಯು ಬೆಳಗು ಮುಂಜಾನೆ ಗಂಗೊಳ್ಳಿಯನ್ನು ಸೇರಿತು. ಅಲ್ಲಿ ಇಳಿದು, ನದಿಯನ್ನು ದಾಟಿ, ಈತ ತನ್ನ ಊರನ್ನು ಸೇರಿಕೊಂಡನು.



# ನಾಲ್ಕನೆಯ ಅಧ್ಯಾಯ

ರಾಧಾಕೃಷ್ಣ ಊರನ್ನು ಸೇರಿ ತಿಂಗಳು ಎರಡಾಗುತ್ತಾ ಬಂದುವು. ಅವನ ಮನೆ ಇರುವುದು ಊರಿನ ಮೈದಾನವಾದ ನರಿಬೆಣದ ಎದುರಿಗೆ. ವಿಶಾಲವಾದ ಆ ಬಯಲು ಪ್ರದೇಶದ ಎದುರಿನ ಮನೆ ಎಂದರೆ ಅಲ್ಲಿ ಗಾಳಿಯ ಬಡಿತ ಕಡಲು ಕರೆಗಿಂತ ಕಡಿಮೆಯಲ್ಲ. ಮನೆಗೆ ಎದುರಿನಿಂದ ಪಡುವಣದ ಕಡಲುಗಾಳಿ ಆಗಾಗ ಬೀಸುತ್ತಿರುತ್ತದೆ. ಮನೆಯ ಪೂರ್ವಕ್ಕೆ ತಗ್ಗಾದ ಹೊಲ ಗದ್ದೆಗಳು. ಬಹು ದೂರದ ತನಕ ಸಮತಟ್ಟಾಗಿ ಹಸುರು ಹಾಸಿದ ಗದ್ದೆಗಳು. ಅವುಗಳ ನಡುವೆ ಅಷ್ಟೇ ವಿಶಾಲವಾಗಿ ಕಾಣಿಸುವ ನೀಲ ಹೊಳೆ, ಖಾರಿಗಳು. ಇನ್ನೂ ಆಚೆ ದೂರದ ದಿಗಂತದಲ್ಲಿ ಸುಂದರವಾದ ಪಶ್ಚಿಮ ಘಟ್ಟದ ಸಾಲುಗಳಿವೆ. ಈಗಂತೂ ಮಳೆಗಾಲ ಬಂದಿದೆ. ಅಲ್ಲಿನ ಹೊಳೆಗಳು ಮಳೆಯ ನೀರುಂಡು ಸೊಕ್ಕಿ, ಆಗಾಗ ಉಬ್ಬಿ ಹಸುರು ಹೊಲಗಳನ್ನೂ ಮುಳುಗಿಸುತ್ತದೆ. ಮೂಡಣ ಬಯಲು ನದಿ, ಬೆಟ್ಟ, ಹಸುರು, ನೀಲದ ಸುಂದರ ತೆರೆಯಾಗಿದೆ. ಅದಕ್ಕೆ ಅಂಚಾಗಿ, ಸೆರಗಾಗಿ, ಕೆಲವೊಮ್ಮೆ ಮುಸುಕಾಗಿ—ಬಾನು ಮುಗಿಲುಗಳಿಂದ ತುಂಬುತ್ತದೆ. ಒಮ್ಮೊಮ್ಮೆ ಕಾರ್ಮುಗಿಲುಗಳ ಅವತಾರ. ಕೆಲವೊಮ್ಮೆ ಹೊಗೆ ಬಣ್ಣದ ವಿಸ್ತೃತ ಹಚ್ಚಡ. ಒಂದು ಮಳೆ ಕಳೆದು, ಹೊಳವಾಗಿ, ಬಾನು ನಗುತ್ತಿರುವಾಗ ಉರುಳುವ ಬೆಳ್ಮುಗಿಲುಗಳ ವಿಚಿತ್ರ ಲೀಲಾಜಲ.

ಪಡುವಿಗೆ ವಿಶಾಲವಾದ ಮೈದಾನು ಭೂಮಿ ಹರಡಿದೆ. ಮಳೆಗಾಲದ ಹಸುರು ಎದ್ದಿತೆಂದರೆ ಊರಿನ ದನಕರುಗಳ ನಲಿದಾಟಕ್ಕೆ ಅದು ಬೀಡಾಗುತ್ತದೆ. ಸಂಜೆ ಪುರವಣಿಗರ ವಿಹಾರರಂಗವಾಗುತ್ತದೆ. ರಾತ್ರಿಯೆಲ್ಲ ಹೆಸರಿಗೆ ಸಮನಾಗಿ ನರಿಗಳ ಗಾಯನ ಶಾಲೆಯಾಗುತ್ತದೆ. ಈ ಎಲ್ಲ ಬೆಡಗಿಗೆ ಶ್ರುತಿಯಾಗುವಂತೆ, ಬರಿಯ ಎರಡು ಮೈಲು ದೂರದಿಂದ ಉರುಳುವ ಕಡಲಿನ ಗರ್ಜನೆಯಂತು ಇದ್ದೇ ಇದೆ. ಒಮ್ಮೊಮ್ಮೆ ಹೇಳಲು ಅಸಾಧ್ಯವಾದಷ್ಟು ಉಗ್ರ, ಕೂಗು ಅದರದು; ಹಲವೊಮ್ಮೆ ಗಾಳಿ ಮರಗಳ ತೋಪು ಒಂದರಲ್ಲಿ ಪಿಸು ಮಾತನಾಡುವ ಪ್ರಣಯಿಗಳ ನುಡಿಯ ಮೆಲುಧ್ವನಿ ಅದಕ್ಕೆ. ಬೇರೆ ಇನ್ನೊಮ್ಮೆ ಇದ್ದೂ ಇಲ್ಲದಂತೆ, ಕೇಳಿಸಿಯೂ ಕೇಳ

ಎಳೆಯ ಉಸಿರಾಟ ಅದರದು. ಮಳೆಗಾಲದ ಸೊಗಸು ಇನ್ನಾವ ಕಾಲಕ್ಕಿದೆ—ಎಂಬಾಗಲೇ ಅಂಥ ಸೊಗಸಿನ ಆವರಣದಲ್ಲಿ ಕುಳಿತಿದ್ದರೂ ಬೇಸಗೆಯ ಬೇಗುದಿಗಿಂತ ಹೆಚ್ಚಿನ ಬೇಗುದಿ ರಾಧಾಕೃಷ್ಣನದು. ಅವನ ಮನೆ, ಕವಿಗಳಿಗೆ ಪರ್ಣ ಕುಟೀರವಾಗಿ ಕಾಣಿಸಬೇಕಿತ್ತು. ಆದರೆ ಅನೇಕ ನಿಷ್ಫಲ ಕನಸುಗಳಲ್ಲಿ ಬಂಧಿತವಾದ ಅವನ ಮನಸ್ಸಿಗೆ ಮನೆ ಸೆರೆಮನೆಯಾಗಿದೆ. ಎಷ್ಟೋ, ಬಾರಿ ಆತ ತಾನು ಹಾಗೆ ಮುಳ್ಳಿನ ಹಾಸಿಗೆಯ ಮೇಲಿರುವುದಕ್ಕಿಂತ, ಗಾಂಧೀಜಿಯವರಂತೆ ಸೆರೆಮನೆಯ ಹಿಂದೆ ಇದ್ದರೆ ಸುಖವಲ್ಲವೇ? ಎಂದು ನೆನೆಯುತ್ತಾನೆ.

ಎಷ್ಟು ದಿವಸಗಳಿಂದ ಆತ ಸ್ವರಾಜ್ಯದ ಸುದಿನವನ್ನು ಕಾಯುತ್ತಿದ್ದಾನೆ. ಅಸಹಕಾರ ಚಳವಳಿಯನ್ನು ಹೂಡಿದಾಗ ಗಾಂಧೀಜಿಯವರು-ಒಂದೇ ಒಂದು ವರುಷದಲ್ಲಿ ಸ್ವರಾಜ್ಯ—ಎಂದು ನುಡಿದಿದ್ದರು. ಆ ಅಭಯದಲ್ಲಿ ಅವನ ವಿಶ್ವಾಸ ಹೊಂದಿತ್ತು. ಈಗ ವರ್ಷದಲ್ಲಿ ಆರುತಿಂಗಳು ಕಳೆದಾಗಿದೆ. ಇನ್ನು ಬರಿಯ ನೂರೆಂಬತ್ತು ದಿನ ಕಳೆದರೆ, ಮುಗಿಲಿಂದ ಮಳೆ ಬೀಳುವಷ್ಟು ಸುಲಭವಾಗಿ, ಬಯಕೆಯ ಸ್ವಾತಂತ್ರ್ಯ ಬಂದೀತೆಂದು ತಿಳಿಯುತ್ತಾನೆ. ಬಾಳುವೆಯ ಕೃತಯುಗವು ಪ್ರಾಪ್ತವಾಗುವುದೆಂದು ನಂಬುತ್ತಿದ್ದಾನೆ. ಆತ ತನ್ನ ವಯ್ಯಕ್ತಿಕ ನಿರಾಶೆಯ ಅನುಭವಗಳನ್ನು ಸೇರಿಸಿ, ಮಂಗಳೂರಿನ ಮಿತ್ರರೊಬ್ಬರಿಗೆ ಬರೆದ ಪತ್ರದಲ್ಲಿ ಹೀಗಿತ್ತು; "ಮೊದಲು ಮೂವರಾದರೂ ಇದ್ದೆವು. ಈಗ ಬರಿಯ ಒಬ್ಬನೇ ಉಳಿದಿದ್ದೇನೆ. ಊರವರ ಬೆಂಬಲ ಮಾತಿನಲ್ಲಿ ಮಾತ್ರ ಕಾಣುತ್ತಿದೆ. ಆದರೆ ಕಾರ್ಯದಲ್ಲಿ ಏನೂ ಆಗುತ್ತಲಿಲ್ಲ" ಎಂದು. ಒಂದೊಂದು ಕ್ಷೇತ್ರದಲ್ಲೂ ತನಗಾದ ನಿರಾಶೆಯನ್ನು ಬಣ್ಣಿಸಿ ಬರೆಯುವ ಇವನಿಗೆ ಪ್ರತಿಯಾಗಿ, ಅವರು ಆಸೆಯ ನುಡಿಗಳನ್ನೇ ಸಲ್ಲಿಸುತ್ತಿದ್ದಾರೆ. "ಯಾಕೆ ಇಷ್ಟು ನಿರಾಶೆ ನಿಮಗೆ? ಗಾಂಧೀಯವರ ನುಡಿ ಸುಳ್ಳು ಆದೀತೆ? ಇನ್ನು ಆರು ತಿಂಗಳ ಬಡಿದಾಟ ಮಾಡಿದರೆ ಸಾಕು. ಸರಕಾರ ತತ್ತರಿಸುವುದು ನಿಜ. ನಮ್ಮೂರಲ್ಲಿ ಅಲ್ಲದಿದ್ದರೂ ಇತರ ಪ್ರಾಂತ್ಯಗಳಲ್ಲಿ ಚಳವಳ ಬಿರುಸಾಗಿ ಸಾಗಿದೆ. ನಿಮ್ಮೂರಲ್ಲಿಯೇ ನೀನು ಒಂದು ರಾಷ್ಟ್ರೀಯ ಪಾಠಶಾಲೆಯನ್ನು ತೆರೆಯ ಬಹುದಲ್ಲ, ನೂರಾರು ಬಾಲಕರು ಸೇರಿಯೇ ಸೇರುತ್ತಾರೆ. ' ಮುಂದಿನ ಕಂದಾಯ ತೆರುವ ವೇಳೆಗೆ ಸಮನಾಗಿ, ನಾವು ಕಾಯಿದೆಭಂಗ ತೊಡಗಿದರೆ ನಮಗೆ

ವಿಜಯ ನಿಶ್ಚಯ, ಎಂದು ಬರೆಯುತ್ತಿದ್ದಾರೆ. ಅಂಥ ಕಾಗದಗಳನ್ನು ಓದುವಾಗಲೆಲ್ಲ ಅವನಿಗೆ ಸಂತೋಷವಾಗುತ್ತದೆ. ತುಟಿಯೊಡೆದು ನಗು ಬರುತ್ತದೆ. ಮುಂದೆ ವಿಚಾರಮಾಡಿ ಕುಳಿತಿರುವಾಗ ಮಾತ್ರ-"ಏನೋ ಅಪ್ಪ!" ಎನಿಸುತ್ತದೆ.

ಸರಿ—ಮುಂದಿನ ಆರು ತಿಂಗಳನ್ನು, ಅವನು ಕಳೆಯಬೇಡವೇ? ಊರಿಗೆ ಬಂದಂದಿನಿಂದ ಹಾಸುಗೆಯೇ ಗತಿಯಾಗಿದೆ. ಅವನ ಸಂಚಾರದ ಪ್ರಾರಬ್ಧವೆಲ್ಲಾ ಮಲೇರಿಯದ ರೋಗನ್ನು ಧರಿಸಿ, ಆವರಿಸಿ ಬಿಟ್ಟಿದೆ. ನಾಲ್ಕು ಹೆಜ್ಜೆ ದೂರ ನಡೆಯುವ ತ್ರಾಣ ಇಲ್ಲದಾಗಿದೆ. ಅದರಿಂದ ಉಂಟಾದ ಬೇಸರ, ನಿರುತ್ಸಾಹಗಳು ಸಾಲದೆಂಬಂತೆ, ತಂದೆ ರಾಮಪ್ಪಯ್ಯನವರ ಅತೃಪ್ತಿಯನ್ನು ಕಾಣುತ್ತಿರಬೇಕು. ತಂದೆಯ ಮೋಹವೆಲ್ಲಾ ಎರಡನೆಯ, ಮೂರನೆಯ ಮಕ್ಕಳ ಮೇಲೆ ಹೋಗಿ ನಿಂತಿದೆ. ಈತ ತನ್ನ ಮಗನಲ್ಲ—ಎಂಬ ನಿರಾಶೆ ಅವರಿಗಾಗಿದೆ. ಅವರು ಬಹಳ ನೊಂದಿವರು; ತಮ್ಮ ಭಾವನಿಂದ, ಹೆಂಡತಿಯಿಂದ, ಕಿರಿಯಮಗನಿಂದ, ಯಾರು ಯಾರು ಗೆಳೆಯರು ಇದ್ದಾರೋ ಅವರಿಂದ, ಜ್ವರದ ಪೀಡೆಗೆ ಸಿಲುಕಿ ನರಳುತ್ತಿರುವವನ ಮೇಲೆ, ಕ್ವೈನಿನಿನ ಇಮ್ಮಡಿ ಪ್ರಮಾಣದಲ್ಲಿ, ಕಹಿ ಉಪದೇಶ ಮಾಡಿಸುತ್ತಿದ್ದಾರೆ. "ಈ ವರ್ಷವಾದರೂ ಕಾಲೇಜನ್ನು ಸೇರಿ ವಿದ್ಯೆ ಮುಗಿಸು" ಎನ್ನುತ್ತಿದ್ದಾರೆ. "ಅಂಥ ಗಾಂಧೀಯವರನ್ನೇ ಜೈಲಿಗೆ ತುರುಕಿಯಾಯಿತು. ಅಂಥ ಇಂಥ ಕುರಿಗಳನ್ನು ಇನ್ನು ಬಲಿ ಹಾಕದೆ ಇರುತ್ತಾರೆಯೇ? ಬೆಂಕಿಯ ಮುಂದೆ ಮಿಣುಕುಹುಳ ಹಾರಿದರೆ ಏನು ಫಲ?" ಎನ್ನುತ್ತಿದ್ದಾರೆ. ಅವರ ನಿರಾಶೆಯು ಇಮ್ಮಡಿಸಿದೆ. ಭೀತಿ ನೂರ್ಮಡಿಸಿದೆ. ಒಂದರಿಂದ ಒಂದು ಅಧಿಕವಾಗಿದೆ. ಕಾರಣವಿಷ್ಟೆ—ಅವರ ಕುಲದಲ್ಲಿ ಈ ತನಕ ಒಬ್ಬರೇ ಒಬ್ಬರು, ಯಾವ ತಪ್ಪಿಗೂ ಸಿಕ್ಕಿದವರಲ್ಲ; ಸರಕಾರಿ ಜುಲ್ಮಾನೆ ಹೊತ್ತವರೂ ಅಲ್ಲ. ಜೈಲಿನ ಅಪಮಾನ ಕಟ್ಟಿಕೊಂಡವರೂ ಅಲ್ಲ. ಅಂಥ ಹೀನವಾದ ಕೆಲಸಕ್ಕೆ ತನ್ನ ಹೊಟ್ಟೆಯ ಕೂಸು ತಯಾರಾಗುತ್ತಿದೆಯಲ್ಲಾ—ಎಂಬ ತರ್ಕ ಅವರದು. ಆ ಯೋಚನೆ ಬಂದಾಗಲೆಲ್ಲಾ ರಾಧಾಕೃಷ್ಣನ ತಾಯಿ, ಕಂಬನಿ ಕರೆಯದ ಗಳಿಗೆಯಿಲ್ಲ. ಇವುಗಳನ್ನೆಲ್ಲ ಕೇಳಿ, ಕಂಡು ಈ ಹಿತೈಷಿಗಳಿಂದ ಪಾರಾಗುವ ಸಲುವಾಗಿಯಾದರೂ, ತಾನು ಮನೆಯನ್ನು ಬಿಡಬೇಕೆಂದೆಣಿಸುತ್ತದೆ, ರಾಧಾಕೃಷ್ಣನಿಗೆ. ಅವನ

ಈ ಬಯಕೆಯನ್ನು ಪೂರ್ಣಮಾಡುವ ಚೇತನ ಅವನ ಕಿಸೆಗೂ ಇಲ್ಲ, ಅವನ ಮೈಗೂ ಇಲ್ಲ. ನಾಳೆ ನಿಲ್ಲುವ ದಾರಿ ಯಾವುದು?-ಎಂದು ಸ್ಪಷ್ಟವಾಗಬೇಡವೇ?

ಅದರಿಂದಲೇ ಆತ ತನ್ನ ಮಂಗಳೂರಿನ ಗೆಳೆಯರಿಗೆ ಇನ್ನೊಂದು ಪತ್ರ ಬರೆದನು. "ನಾನು ಅಲ್ಲಿಗೇನೇ ಬರುತ್ತೇನೆ. ನೀವೆಲ್ಲರೂ ಸಾಹಸದಿಂದ ತೆರೆದ ಚರಕಾ ಸಂಘ, ರಾಷ್ಟ್ರೀಯ ಶಾಲೆಗಳಲ್ಲಿ ಸೇರಿ ಕೆಲಸಮಾಡುತ್ತೇನೆ" ಎಂದು. ಆ ಕಾಗದವನ್ನು ಬರೆದು, ಅಂಚೆಗೆ ಹಾಕಿ ಬಂದ ರಾತ್ರಿ ಅವನಿಗೆ ಆದ ವ್ಯಥೆ ಹೇಳಿ ತೀರದು. ತನ್ನ ಊರಿನ ಯೋಗಕ್ಷೇಮಕ್ಕಾಗಿ ತಾನು ದುಡಿಯುತ್ತಿರುವ ಬದಲು, ಅಂಜಿ, ಮಂಗಳೂರಿಗೆ ಹೋದರೆ ಇಲ್ಲಿನ ಕೆಲಸ ಯಾರು ಮಾಡಬೇಕು? ದೊಡ್ಡ ಪಟ್ಟಣಗಳಲ್ಲಿ ಜನರನ್ನು ಎಚ್ಚರಿಸುವುದು ಸುಲಭ; ಹಣ ಕೂಡಿಸುವುದು ಸುಲಭ, ಅವರ ಸಹಾನುಭೂತಿ ದೊರಕಿಸುವುದೂ ಸುಲಭ; ಕೆಲಸ ಮಾಡುವುದು ಸುಲಭ. ಆದರೆ ಗಾಂಧೀಜಿಯವರ ಹೇಳಿಕೆ ಏನು? ವಿದ್ಯಾರ್ಥಿಗಳನ್ನು ಕರೆದು 'ನೀವು ನಿಮ್ಮ ಗ್ರಾಮಗಳನ್ನು ಸೇರಿ, ಸ್ವಾತಂತ್ರ್ಯದ ದೀಪವನ್ನು ಉರಿಸಿ' ಎಂದಿಲ್ಲವೇ? ಅದನ್ನೆಲ್ಲ ನೆನೆಯುತ್ತಲೇ ಅವನ ಮನಸ್ಸು ಬದಲಾಯಿತು. ಏನೇ ಆಗಲಿ—ತನ್ನ ತಾಲೂಕಿನಲ್ಲಿಯೇ ಕೆಲಸಮಾಡಿಕೊಂಡಿರಬೇಕು, ಎಂಬ ನಿರ್ಧಾರ ಉಂಟಾಯಿತು. ನಾಲ್ಕಾರು ದಿನಗಳಲ್ಲಿ ಅವನ ಪರಮ ಹಿತೇಚ್ಛುಗಳಾದ ದಯಾನಂದರಾಯರ ಪತ್ರ ಬಂದಿತು "ನೀನು ಹಾಗೆ ಹೊರಟುಬರುವುದು ಬೇಡ. ಇಲ್ಲಿ ಕೆಲಸಗಾರರ ಸಂಖ್ಯೆ ಅಧಿಕವಾಗಿದೆ. ಇಲ್ಲಿಂದ ಹಳ್ಳಿಗೆ ಹೊರಡಬೇಕೆಂದರೆ ಯಾರೂ ತಯಾರಿಲ್ಲ. ಜನರಿಂದ ದೊರೆಯುತ್ತಿರುವ ಧನಸಹಾಯ ನಮ್ಮ ಇಲ್ಲಿನ ಕೆಲಸಗಳಿಗೆ ಸಾಕಾಗುವುದಿಲ್ಲ. ನಾನೇ ನನ್ನ ಸ್ವಂತದ ಹಣವನ್ನು ವ್ಯಯಿಸುತ್ತಾ ಇದ್ದೇನೆ. ಊರವರ ಮಾತುಗಳನ್ನು ಕೇಳಿ, ಸಂಸ್ಥೆಗಳನ್ನು ತೆರೆದಾಯಿತು. ಹಣ ತೆರುವ ಕಾಲಕ್ಕೆ, ಜನರ ಕೈ, ಮಾತಿಗಿಂತ ಬಹಳ ಹಿಂದೆ. ಆದರೆ ಇನ್ನು ಉಳಿದುದು ಬರಿಯ ಆರು ತಿಂಗಳು ಮಾತ್ರ" ಎಂಬುದು ಆ ಪತ್ರದ ಸಾರಾಂಶ.

ರಾಧಾಕೃಷ್ಣ ತಾನು ಮನೆಗೆ ಬಂದು, ಬಂಧಿಯಾಗಿ ಕಳೆದ ದಿವಸಗಳನ್ನು ಎಣಿಕೆ ಹಾಕುತ್ತಲೇ ಇದ್ದಾನೆ. ಮೂರು ತಿಂಗಳು ಆಯಿತೆಂದು

ತೋರುತ್ತದೆ. ಅಲ್ಲಿಗೆ ಬರುವ ಬದಲು ಕೃಷ್ಣಪ್ಪನವರ ಮನೆಗೆ ಹೋಗಿದ್ದರೆ, ಬೇನೆಯಾದರೂ ತೊಲಗುತಿತ್ತು ಎಂದು ತೋರಿತು. ಅದಕ್ಕಾಗಿ ದಿನ ತಾಸುಗಳನ್ನು ಎಣಿಕೆ ಹಾಕತೊಡಗಿದನು.

ಒಂದು ದಿನ ಅನಿರೀಕ್ಷಿತವಾಗಿ ಅವನಿಗೆ ಹಳೆಯ ಗೆಳೆಯನಾದ ಸದಾನಂದನ ಪತ್ರ ಬಂದಿತು. ಬರಹ ನೋಡಿಯೇ ತಿರಸ್ಕಾರ ಪ್ರಾಪ್ತವಾಯಿತು. 'ಈತನಿಗೆ ಪತ್ರ ಬರೆಯಲು ನಾಚಿಗೆ ಆಗುವುದಿಲ್ಲವೇ' ಎಂದು ತೋರಿತು. ಲಕೋಟಿಯನ್ನು ಒಡೆದನು. ಎರಡೆರಡು ಪತ್ರಗಳಿದ್ದವು. ಇನ್ನೊಂದು ಸಖಾರಾಮನದು. ಪತ್ರಗಳಲ್ಲಿ 'ಮುಂಬಯಿ' ಎಂಬ ತಲೆಬರಹ ನೋಡುತ್ತಲೇ 'ಸ್ವರಾಜ್ಯ ಫಂಡಿನ ಎಪ್ಪತ್ತೈದು ರೂಪಾಯಿಗಳನ್ನು ಕದ್ದು ಒಯ್ದವರು'—ಎಂದು ಉದ್ಗರಿಸಿ ಬದಿಗೆ ಇರಿಸಿದನು. ಮಾನಸ್ಸಿನ ತಿರಸ್ಕಾರ ಬಹು ಹೊತ್ತಿನ ತನಕವೂ, ಶಾಂತವಾಗಲಿಲ್ಲ. ಅಷ್ಟಕ್ಕೆ ಅವನ ತಮ್ಮ ಅಲ್ಲಿಗೆ ಬಂದನು. ಅಣ್ಣನೊಡನೆ 'ಅಣ್ಣಾ ಜ್ವರ ಬಿಟ್ಟಿದೆಯಾದರೆ ಇನ್ನು ಮಂಗಳೂರಿಗೆ ಹೋಗಬಹುದಲ್ಲ. ಈಗ ಹೋಗಿ ಸೇರಿದರೂ ಕಾಲೇಜಿನ ಹಾಜರಿಗೆ ಸಾಕು, ಎಂದನು. ಅನಂತರಾಮ ಆತನಿಗೆ ತುಂಬ ಪ್ರೀತಿಯವ. ಆದರೆ ಮನೆಯೇ ಬೇಡವಾಗಿರುವಾಗ ಅವನೊಡನೆ ಮಾತುಕತೆ ಕಡಿಮೆಯಾಗಿದೆ. ಇತ್ತ ಅಣ್ಣನ ಮೇಲೆ ಒಳಗಿಂದೊಳಗೆ ಬೇಸರವೂ ಉಂಟಾಗಿದೆ. ಆತನ S. S. L. C. ಮುಗಿದು ಕಾಲೇಜಿಗೆ ಹೋಗಬೇಕಾದ ವರ್ಷ ಅದು. ಅಣ್ಣನಿಂದಾಗಿ ಅವನ ತಲೆಯನ್ನೇರಿದ ಮದುವೆಯ ಭಾರದಿಂದ, ವಿದ್ಯೆಗೆ ಕೊನೆ ಬಂದಿತು. ತಂದೆ ಬೇಸಾಯದ ಕೆಲಸಕ್ಕೆ ಅವನನ್ನು ನೇಮಿಸಿ ಬಿಟ್ಟಿದ್ದಾರೆ. ಸ್ವಭಾವತ: ಅವನಿಗೆ ಓಡಾಟದಲ್ಲಿ ಪ್ರೀತಿ. ಊರೂರು ತಿರುಗುವ ಹಂಬಲ. ಮಂಗಳೂರಿಗೆ ಹೋಗಬಹುದಾದ ಇದೊಂದು ಸಂದರ್ಭವೂ ನಿಂತಿತು. ಅದಕ್ಕಾಗಿ ತುಂಬ ಬೇಸರ.

ಅಣ್ಣನು ತಮ್ಮನೊಂದಿಗೆ "ನೀನು ಇಂಟರಿಗೆ ಹೋಗುವ ಹಟ ಹಿಡಿಯ ಬಹುದಿತ್ತಲ್ಲಾ" ಎಂದನು. ಆತನ ನಂಜು ಕೆರಳಿತು. "ಇನ್ನು ನನಗೆ ಕಾಲೇಜು ಅಲ್ಲ. ನನಗೂ ರಾಷ್ಟ್ರೀಯ ಶಾಲೆ" ಎಂದು ಮಾತನಾಡಿದ. ತಮ್ಮನಿಗೆ ತನ್ನಂತೆಯೇ ರಾಷ್ಟ್ರಭಕ್ತಿ ಉಂಟಾಗಿದೆ ಎಂಬ ಸವಿಗ

ನಸು ಕಾಣುವುದರೊಳಗಾಗಿ ಆತ ಹೊರಟುಹೋದ. "ನಾನು ಯಾರಿಗೂ ಬೇಡದವನಾಗಿದ್ದೇನೆ" ಎಂಬ ಚಿಂತೆ ಈತನಿಗೆ ಉದಯಿಸಿತು.

ತನ್ನಿಂದಾಗಿ ತನ್ನ ತಮ್ಮನ ಭವಿಷ್ಯ ಹಾಳಾಯಿತೆಂದು ಅವನು ಊಹಿಸಬಲ್ಲನು. ಆದರೂ ತಮ್ಮ, ತನ್ನ ವಿಷಯದಲ್ಲಿ ಅಷ್ಟು ನಿಷ್ಠುರಿಯಾದಾನು ಎಂದು ತಿಳಿದಿಲ್ಲ. ತುಂಬ ನೋವಾಯಿತು. ಮನೆಯಲ್ಲಿ ಯಾರೂ ಇಲ್ಲದ ವೇಳೆ, ತಾಯಿಯ ವಿರಾಮವನ್ನು ನಿರೀಕ್ಷಿಸಿ, ಏಗುತ್ತ ಹೋಗಿ ಕುಳಿತುಕೊಂಡ. "ಅಮ್ಮ, ನಾನು ಎಲ್ಲಿಗಾದರೂ ಹೋಗುತ್ತೇನೆ. ನನ್ನ ಮೇಲಿನ ಸಿಟ್ಟಿಗೆ ಅನಂತನ ಕಾಲೇಜನ್ನು ತಪ್ಪಿಸಬಾರದು. ಅವನು ಓದುವಷ್ಟು ಓದಲಿ; ಅಪ್ಪನಿಗೆ ನೀನು ಅಷ್ಟನ್ನು ಹೇಳಬೇಕು" ಎಂದು ಉಪದೇಶ ಮಾಡಿದನು. ತಾಯಿ ಆ ವಿಷಯವನ್ನೇ ಮರೆತವಳಂತೆ "ಮಗು, ವಯಸ್ಸಾದ ಅಪ್ಪ, ಅಮ್ಮನನ್ನು ಬಿಟ್ಟು ನೀನು ಎಲ್ಲಿಗೆ ಹೋಗಬೇಕಂತಿದ್ದೀಯಾ?" ಎಂದು ರಾಗಮಾಡಿದಳು. ಮಗನು ಪ್ರಪಂಚದಿಂದಲೇ ಮರೆಯಾಗುತ್ತಾನೆಯೋ ಎಂಬ ಭಾವನೆ—ಅವಳಲ್ಲಿ. ಅದಕ್ಕಾಗಿ ಕಣ್ಣೀರಿನ ಹೊಳೆ. ಹಾಗೂ ಹೀಗೂ ಅವಳ ಸಮಾಧಾನಕ್ಕಾಗಿ "ನಾನು ಈ ತಾಲೂಕನ್ನು ಬಿಟ್ಟು ಎಲ್ಲಿಗೂ ಹೋಗುವದಿಲ್ಲ ಸತ್ಯ" ಎಂದು ಭರವಸೆ ನೀಡಿದ. ಆಕೆ, "ನೀನು ಏನು ಮಾಡುವುದೂ ಬೇಡ. ಮನೆಯಲ್ಲಿ ಸ್ವಸ್ಥ ಇದ್ದು ಬಿಡು. ನೀನು ಕಣ್ಣಿನ ಎದುರಿಗಿದ್ದರೆ ಅದೇ ಸಂತೋಷ, ತೃಪ್ತಿಯಿಂದ ಸಾಯುತ್ತೇನೆ. ಊರೂರು ಸುತ್ತಿ, ಜ್ವರ ಹಿಡಿಸಿಕೊಂಡು ಈಗ ನರಳುತ್ತಿರುವುದು ಸಾಲದೇ? ನಿನಗೂ ಕಷ್ಟ, ಕಾಣುವವರಿಗೂ ಕಷ್ಟ." ಎಂದು ಮರು ನುಡಿದಳು.

ಆ ದಿನ ಹಾಗೆಯೇ ಕಳೆಯಿತು. ಮನಸ್ಸು ತೀರ ಕದಡಿ ಹೋಯಿತು. ಅದರ ಮರುದಿನ-ಓದದೆ, ಇರಿಸಿದ್ದ ಗೆಳೆಯರಿಬ್ಬರ ಪತ್ರವನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತನು. ಮನಸ್ಸಿಲ್ಲದೆ ತೆರೆದನು. ಉದಾಸೀನವಾಗಿ ಓದತೊಡಗಿದ. ಇಬ್ಬರೂ ಅನಂತವಾಗಿ ಕ್ಷಮಾಯಾಚನೆ ಮಾಡಿದ್ದಾರೆ. ತಾವು ಹೇಳದೆ ಮರೆಯಾದ ತಪ್ಪಿಗೆ ಕ್ಷಮೆಕೇಳಿ, ಅವನ ಧೈರ್ಯ ಕಷ್ಟ ಸಹಿಷ್ಣುತೆಗಳಿಗಾಗಿ ಪ್ರಶಂಸಿಸಿ ಬರೆದಿದ್ದರು. ಅವರ ಪರವಾಗಿ ಕನಿಕರ ತೋರುವ ಸರದಿ ಈಗ ಬಂದಿತು. ಸಖಾರಾಮ ಬಡವ, ಅವನಿಗೆ ಲಗ್ನವಾಗಿದೆ. ಇಬ್ಬರು ಮಕ್ಕಳಿದ್ದಾರೆ. ಉತ್ಸಾಹದ ಗಳಿಗೆಯಲ್ಲಿ ನೌಕ

ರಿಗೆ ತಿಲಾಂಜಲಿ ಕೊಟ್ಟುದೇನೋ ನಿಜ. ಆದರೆ ಸಂಸಾರ ಪೋಷಣೆಯ ಭಾರ ಯಾರದು? ಆ ಕೆಲಸಕ್ಕಾಗಿ ಸಹಾಯ ಮಾಡುವೆವು ಎಂದ ಗೆಳೆಯರೂ ಹಿಂಜರಿದರು. "ಈಗ ನನ್ನ ತಲೆಯ ಮೇಲೆ ನನ್ನ ಕೈ—ನಿಂತಿರಬೇಕಾಗಿದೆ. ತಿರುಗಿ ಸೇವಾ ವೃತ್ತಿ ಗತಿಯಾಗಿದೆ. ಪುಣ್ಯಕ್ಕೆ ಖಾಸಗಿ ಶಾಲೆಯೊಂದರಲ್ಲಿ ನೌಕರಿ ದೊರೆತು, ನನ್ನ ಕುಟುಂಬ ಪೋಷಣೆಗೆ ಪರರ ಮುಖವನ್ನು ನೋಡಬೇಕಾಗಿಲ್ಲ" ಎಂಬುದು ಅವನ ಪತ್ರದ ಸಾರಾಂಶ.

ಸದಾನಂದನ ವಿಚಾರ ಹಾಗಲ್ಲ. ಆತ ಬರೆಯುತ್ತಾನೆ. "ತಂದೆಯ ಹತ್ತಿರ ಆ ಎಪ್ಪತ್ತೈದು ರೂಪಾಯಿಗಳನ್ನೂ, ರಶೀದಿ ಪುಸ್ತಕಗಳನ್ನೂ ಕೊಟ್ಟು ಬಂದಿದ್ದೇನೆ. ನಿನಗೆ ಮುಟ್ಟಿಸುವಂತೆ ಹೇಳಿದ್ದೇನೆ"ಎಂದು ತಿಳಿಸಿದ್ದಾನೆ. ತನ್ನ ಸ್ವಂತ ವಿಷಯವಾಗಿ ಬರೆದ ಒಕ್ಕಣೆಯು ಹೀಗಿತ್ತು— "ನೀನು ತಪ್ಪೆಂದು ತಿಳಿದರೂ ಚಿಂತೆಯಿಲ್ಲ. ನಮ್ಮ ನಮ್ಮ ಕಾಲ ಮೇಲೆ, ನಾವು ನಿಲ್ಲಲು ಕಲಿತಮೇಲೆ ಈ ದೇಶ ಸೇವೆಯ ಕೆಲಸಗಳು—ಎಂದು ನನಗೆ ಅನಿಸುತ್ತದೆ. ಮನೆಯವರಿಗೆ ವಿರೋಧವಾಗಿ ನಡೆದು, ತಿರುಗಿ ಅವರಿಂದಲೇ ವೆಚ್ಚಕ್ಕೆ ಹಣ ಬೇಡುವ ರೀತಿ ನನಗೆ ಸಮನೆಂದು ಕಾಣುವುದಿಲ್ಲ. ಇನ್ನೂ ಒಂದು ವಿಷಯ—ನಾಚಿಕೆಯ ಮಾತೂ ಅಹುದು. ಗ್ರಾಮ ಪ್ರಚಾರದಂಥ ಕಠಿಣ ಕೆಲಸಕ್ಕೆ ನಾನು ಆಳಲ್ಲ" ಎಂದು ಬರೆದಿದ್ದ. ಪತ್ರವು ದೀರ್ಘವಾಗಿತ್ತು. ರಾಧಾಕೃಷ್ಣ ಓದುತ್ತ ಓದುತ್ತ ಮನನ ಮಾಡುವಂತಿತ್ತು. ಇನ್ನೂ ಓದು ಮುಂದುವರಿಸಿದನು; "ನಾನು ನಮ್ಮ ಊರನ್ನು ಮರೆಯುತ್ತೇನೆಂದು ತಿಳಿಯಬೇಡ. ಪರೋಪಕಾರ ಮಾಡುವ ಮನಸ್ಸಿದ್ದವನಿಗೆ ನೂರಾರು ದಾರಿಗಳಿವೆ. ನನ್ನ ವೈದಕೀಯ ವಿದ್ಯೆಯನ್ನು ಮುಗಿಸಿದ್ದೇ ಆದರೆ ಇದಕ್ಕೂ ಹೆಚ್ಚಿನ ಸೇವೆ ಸಲಿಸಬಹುದೆಂದು ನನಗೆ ಅನಿಸುತ್ತದೆ. ಆ ಉದ್ಯೋಗ ಅಂತಹದು. ಅಲ್ಲದೆ ನಮ್ಮ ಹಳ್ಳಿಯ ಜನಗಳಿಗೆ ಪ್ರಭಾವಶಾಲಿಗಳಲ್ಲದವರು ಹೇಳಿದ ಮಾತು ಉಪಯೋಗವಿಲ್ಲ. ಜನತೆಯಲ್ಲಿ ಮೊದಲು ನಾವು ವರ್ಚಸ್ಸನ್ನು ಗಳಿಸಬೇಕು. ಡಾಕ್ಟರರುಗಳಿಗೂ, ವಕೀಲರುಗಳಿಗೂ ಅಂಥ ವರ್ಚಸ್ಸು ಸುಲಭ ಸಾಧ್ಯ. ಅವರ ಮಾತಿಗೆ ಬೆಲೆ ಬರುತ್ತದೆ. ಬರಿದೆ ಬೋಳುಬಪ್ಪರಾಗಿ 'ಹಾಗೆ ಮಾಡಿ; ಹೀಗೆ ಮಾಡಿ' ಅಂದರೆ ಯಾರು ಕೇಳುತ್ತಾರೆ?"ಎಂಬ ಹಿತೋಪದೇಶವೂ ಇತ್ತು.

ರಾಧಾಕೃಷ್ಣ ಒರಗಿದಲ್ಲಿಂದಲೇ ತುಟಿ ಕಚ್ಚಿಕೊಂಡನು. 'ಬೋಳು ಬಪ್ಪರ' ಮಾತನ್ನು ಕೇಳುವವರಾರು? ಆ ಮಾತನಾಡುವವನಿಗೂ ಒಂದು ಪ್ರಭಾವ ಬೇಕು-ಇಷ್ಟನ್ನು ಅವನು ಮನಗಾಣನೇ? ಅವನ ಸಂಚಾರದ ಅನುಭವ ಅಷ್ಟನ್ನು ಹೇಳಲಿಲ್ಲವೇ? ಸ್ಥಾನ, ಮಾನ, ಹಣ—-ಇವೆಲ್ಲವು ಪರಸ್ಪರ ಹೊಂದಿಕೊಂಡಿರುವ ವಸ್ತುಗಳು. ಒಂದಿಲ್ಲದೆ ಇನ್ನೊಂದಿಲ್ಲ. ಅವು ಇಲ್ಲದೆ ಸಮಾಜದಲ್ಲಿ ಯಾವಾತನಿಗೂ ಬೆಲೆಬರಲಾರದು—ಎಂಬ ಮಾತು ಸತ್ಯವೆನಿಸಿತು. ಅಲ್ಲದೆ ಆತನಿಗಾದರೂ ತನ್ನ ವೆಚ್ಚಕ್ಕಾಗಿ ಪರರ ಮುಖವನ್ನು ನೋಡುವ ದೀನಾವಸ್ಥೆ ಸಹಿಸದಾಗಿದೆ. ಗೆಳೆಯರಿಗೆ ಪತ್ರ ಬರೆಯುವಾಗ, ಅಂಚೆ ಚೀಟಿಗೆ ಮನೆಯವರನ್ನು ಬೇಡ ಬೇಕಲ್ಲಾ-ಎಂಬ ಕೊರಗು ಉಂಟಾಗುತ್ತಿದೆ. ಉದ್ದೇಶದಲ್ಲಿ ಅವರ ಅವಲಂಬನೆ ಮಾಡದ ತಾನು, ಅಂಚೆಯ ಆರು ಕಾಸಿಗಾಗಿ ಅವರನ್ನೇ ಅವಲಂಬಿಸ ಬೇಕಾಗಿದೆಯಲ್ಲ—ಎಂದು ನೋವಾಗುತ್ತಿದೆ. ಇನ್ನೊಮ್ಮೆ ಅವನ ಮನಸ್ಸು ಹೇಳುತ್ತಿದೆ: "ತಾನು ಸಮಾಜದ ಸೇವೆ ಮಾಡುತ್ತಿರುವಾಗ ತನ್ನ ಖರ್ಚು ವೆಚ್ಚವನ್ನು ಸಮಾಜವು ಹೊರಬೇಡವೇ?" ಎಂದು. ಅದಕ್ಕಾಗಿ ಅವನು ಯಾವ ಸಮಾಜವನ್ನು ಕೇಳಬೇಕು? ಈಗಲೇ ಜನರು "ಇವೆಲ್ಲಾ ಉದರಂ ಭರಣಂ ಬಹುಕೃತ ವೇಷಂ" ಎನ್ನುತ್ತಾರೆ. ಅದೂ ಅಲ್ಲದೆ, ತಾನು ಸಮಾಜದ ಯಾವ ಹಿತವನ್ನು ಸಾಧಿಸಿ ತೋರಿಸಿದ್ದೇನೆ-ಎಂದು ಸಮಾಜದಿಂದ ಮಾಸಾಶನ, ವರ್ಷಾಸನ, ಕೇಳಬೇಕು—ಎಂದೂ ತೋರುತ್ತದೆ. ಅಲ್ಲದೆ ಸಮಾಜವಾದರೂ "ನೀನು ನಮ್ಮ ಕೆಲಸ ಮಾಡು ಎಂದು ಕೇಳಿದೆಯೇ?"

ಮನಸ್ಸಿನ ಹೆಮ್ಮೆಯೆಲ್ಲವೂ ಮುರಿದು ತನ್ನ ಕ್ಷುದ್ರತನ ತನಗೇನೇ ತೋರತೊಡಗಿದೆ. ದೇಶ ಸೇವಕನೆಂಬ ಕೆಚ್ಚು ಕುದುರಿ, ತಾನೆಷ್ಟು ಪುಟ್ಟ ಹುಳು ಎಂದು ತೋರುತ್ತಿದೆ. ಈಗ ತಮ್ಮನೊಡನೆ ಆದ ಅನುಸಂಧಾನ, ಗೆಳೆಯರ ಈ ಪತ್ರಗಳು—ಇವೆಲ್ಲ ಸೇರಿ ಹಣ್ಣಾದ ಅವನನ್ನು ಮತ್ತಷ್ಟು ಸಣ್ಣಾಗಿ ಮಾಡಿದುವು. ಆದರೆ ಅವೊಂದೂ ಮುಂದಿನ ದಾರಿಯನ್ನು ತೋರಿಸದಾದುವು. ರಾತ್ರಿಯೆಲ್ಲ ಆತ ಯೋಚನೆಯ ಕಾವಿನಿಂದ ಬೇಯುತ್ತಿದ್ದ; ಜತೆಗೆ ಜ್ವರದ ಬಿಸಿಯೂ ಸೇರಿತ್ತು. ಅವನ ನರಳುವಿಕೆಯನ್ನು ಕೇಳಿ, ಅಳುಕುತ್ತ ಅನಂತರಾಮ ಅಣ್ಣನ ಹಾಸುಗೆಯ ಬಳಿಗೆ ಬಂದು

ಕುಳಿತ "ಅಣ್ಣಾ, ಚಳಿಯಾಗುತ್ತಿದೆಯೇ? ಕಂಬಳಿ ಹೊದೆಸಲೇ" ಎಂದು ಕೇಳಿದ. ಆತ ಮಾತನಾಡಲಿಲ್ಲ. ಅನಂತರಾಮ ಅವನಿಗೊಂದು ಹಚ್ಚಡ ಹೊದೆಯಿಸಿದ. ಮೆಲ್ಲಗೆ ಅವನ ಹಣೆಯನ್ನು ಮುಟ್ಟಿ ನೋಡಿದ. ಕೆಂಡದಂತಹ ಜ್ವರ ಬಂದಿತ್ತು. ಅಣ್ಣನೊಡನೆ ನಿಷ್ಠುರಮಾಡಿ ಮಾತನಾಡಿದ ಕೆಟ್ಟ ಗಳಿಗೆಯಿಂದ, ಅವನೂ ಕೊರಗುತ್ತಿದ್ದ. ಅಣ್ಣನು ಕಾಲೇಜು ಬಿಟ್ಟು ಬಂದಾಗ ತಾನೇ ಆ ವಿಷಯದಲ್ಲಿ ಹೆಮ್ಮೆ ತಾಳಿರಲಿಲ್ಲವೇ? ಆತ ತನ್ನ ತ್ಯಾಗದಿಂದ ಮನೆಗೆ ಕೀರ್ತಿ ತಂದನೆಂದು ತಿಳಿದಿರಲಿಲ್ಲವೇ? ಅವನ ಜತೆಗೆ ಸೇರಿ ತಾನೂ ಗ್ರಾಮಸಂಚಾರವನ್ನು ಮಾಡಿ ದೇಶಸೇವೆ ಮಾಡಬೇಕೆಂದು ಅನಿಸಿರಲಿಲ್ಲವೇ? ಅಂಥ ತಾನೇ ಈಗ ತಿರುಗಿ ಬಿದ್ದು ಸ್ವಾರ್ಥವನ್ನೆಣಿಸಿ ಮಾತನಾಡಿದುದು ಸಮವೇ—ಎಂದೆನಿಸಿತು. ಕಂಬನಿ ಒಡಮೂಡಿತು. ಕಂಠ ನಡುಗಿತು. "ಅಣ್ಣಾ, ನಾನು ಆಗ ಹೇಳಿದ್ದು ತೀರ ತಪ್ಪಾಯಿತು" ಎಂದು ಅತ್ತನು. ತಮ್ಮನ ಮನಸ್ಸು ಅವನಿಗೆ ನವೀನವಲ್ಲ. "ಛೀ, ಸುಮ್ಮನಾಗು. ಆದಕ್ಕೆಲ್ಲ ನನಗೆ ಬೇಸರವಾದೀತೇ" ಎಂದನು. ಬಹು ಹೊತ್ತಿನ ತನಕ ಇಬ್ಬರೂ ಮೌನವಾಗಿದ್ದರು. ಅನಂತ 'ಟವೆಲ್' ಎಂದು ಕೇಳಿದನು. "ಜ್ವರ ಬಿಟ್ಟಿತೇ, ಮೈ ಬೆವರಿತೇ" ಎಂದು ಕೇಳಿದನು. ಅನಂತ ಅವಸರವಾಗಿ ಹೋಗಿ, ಅರಿವೆಯೊಂದನ್ನು ತಂದು ಅವನ ಮೈಯನ್ನು ಉಜ್ಜುತ್ತ 'ಇನ್ನು ಹಾಗೆನ್ನುವುದಿಲ್ಲ.' ಎಂದು ಮೇಲಿಂದ ಮೇಲೆ ನುಡಿದನು. ರಾಧಾಕೃಷ್ಣನಿಗೆ ತಮ್ಮನೊಡನೆ ಮನಸ್ಸನ್ನು ಬಿಚ್ಚುವ ಇಷ್ಟವಾಯಿತು.

"ಅನಂತ, ಇವತ್ತು ಜ್ವರ ಬಂದರೆ, ನಾಳೆ ತಿರುಗಿ ಅದು ಬರಲಿಕ್ಕಿಲ್ಲ ಅಲ್ಲವೇ" ಎಂದನು.

"ಬರಲಾರದು"

"ನಾಳೆ ನನ್ನನ್ನು ಹೇಗಾದರೂ ಮಾಡಿ, ಗಂಗೊಳ್ಳಿಗೆ ಕರೆದುಕೊಂಡು ಹೋಗಿ ಬೈಂದೂರಿಗೆ ಹೋಗುವ ಗಾಡಿಯೊಂದರಲ್ಲಿ ಕುಳ್ಳಿರಿಸುತ್ತೀಯಾ"

"ಯಾಕೆ? ಜ್ವರ ಗುಣವಾಗದೆ ಇನ್ನೂ ತಿರುಗಾಡುವುದು"

"ಇಲ್ಲಿ ಮನೆಯಲ್ಲಿರುವುದು ನರಕವಾಗಿದೆ"

"ಎಲ್ಲರೂ ಬೈಯುತ್ತಾರೆ, ಹಂಗಿಸುತ್ತಾರೆ ಎಂದೇ?"

"ಅವರಿಗೆ ಸರಿಯೆಂದು ಕಂಡದ್ದನ್ನು ಹೇಳುತ್ತಿದ್ದಾರೆ. ಆದರೆ ನಾನು ಯಾರ ಅನ್ನಕ್ಕೂ ಬೀಳಬಾರದು ಅಲ್ಲವೇ"

"ಇದು ನಿನ್ನ ಮನೆಯಲ್ಲವೇ"

"ಮನೆ—ಅಹುದು. ನಾನು ಮನೆಯವರಿಗಾಗಿ ಏನು ಮಾಡುತ್ತಿದ್ದೇನೆ? ಬೇಡ ಆ ಮಾತು. ಅಪ್ಪನ ಮಾತನ್ನು ಕೇಳಿ ಸಾಕಾಗಿದೆ. ಇಲ್ಲಿದ್ದರೆ ಪ್ರಾಣವನ್ನು ಕಳೆದುಕೊಳ್ಳುವ ಎಂದು ಕಾಣುತ್ತದೆ. ಹಂಗಿನ ಅನ್ನ ಖಂಡಿತ ಬೇಡ. ಅಲ್ಲಿ ಕೃಷ್ಣಪ್ಪನವರು ಇದ್ದಾರೆ. ಒಂದು ತಿಂಗಳು ಅಲ್ಲಿದ್ದು ಜ್ವರ ಗುಣ ಮಾಡಿಸಿಕೊಂಡು—ಮುಂದೆ ಎಲ್ಲಾದರೂ ಹೋಗಿ ಬಿಡುತ್ತೇನೆ."

ತಮ್ಮನ ಅನುನಯುದ ನುಡಿಗಳಿಗೆ ಅವನ ಅಭಿಪ್ರಾಯ ಬದಲಾಗಲಿಲ್ಲ. ಆತ ನಿಟ್ಟುಸಿರನ್ನು, ಕರೆದು ಕೊನೆಗೆ "ಅಣ್ಣಾ ಎಲ್ಲಿಯೇ ಇರು, ಎಲ್ಲಿಗೇ ಹೋಗು, ನನಗೆ ಕಾಗದ ಬರೆಯುತ್ತಿರಬೇಕು. ಇನ್ನೆಂದೂ ನಿನ್ನ ವಿಷಯದಲ್ಲಿ ನಾನು ನಿಷ್ಠುರ ಮಾತನಾಡುವುದಿಲ್ಲ" ಎಂದನು.

ಮರುದಿನ ಅನಂತರಾಮನು ಗಂಗೊಳ್ಳಿಗೆ ಹೋಗಿ, ಆ ಸಂಜೆ ಹೊರಡುವ ಗಾಡಿಯೊಂದನ್ನು ಗೊತ್ತು ಮಾಡಿ ಬಂದನು. ಕತ್ತಲು ಕವಿಯುತ್ತಲೇ ಅಣ್ಣನನ್ನು ಮೆಲ್ಲನೆ ನಡೆಯಿಸಿಕೊಂಡು, ಹೊಳೆ ದಾಟಿಸಿ ಗಾಡಿಯಲ್ಲಿ ಕುಳ್ಳಿರಿಸಿ ಬಂದನು. ಗಾಡಿ ಬಾಡಿಗೆ ತಾನೇ ಕೊಟ್ಟಿದ್ದಲ್ಲದೆ ಅಣ್ಣನ ಕಿಸೆಯಲ್ಲಿ ಅವನಿಗೆ ಗೊತ್ತಿಲ್ಲದಂತೆ ಐದು ರೂಪಾಯಿಗಳನ್ನು ಇರಿಸಿ, ದುಃಖಿತನಾಗಿ ಮನೆಗೆ ಮರಳಿದನು.

ಮನೆಯನ್ನು ಸೇರುವಾಗ ರಾತ್ರಿ ಹತ್ತು ಗಂಟೆಯಾಗಿತ್ತು. ಮಕ್ಕಳಿಬ್ಬರನ್ನೂ ಕಾಣದೆ ತಾಯಿ ಕಾತರಳಾಗಿದ್ದಳು. 'ಏನು! ಏನು!' ಎಂದು ಯೋಚಿಸುವಾಗಲೇ ಅನಂತರಾಮ ಮನೆಗೆ ಬಂದನು. ಒಬ್ಬನೇ ಮರಳಿ ಬಂದುದನ್ನು ಕಂಡು, ತಾಯಿಗೆ ಆಶ್ಚರ್ಯವಾಯಿತು. ರಾಮಪ್ಪಯ್ಯನವರು, ಮೂರು ದಿನಗಳ ಹಿಂದೆ ಉಡುಪಿಗೆ ಹೋದವರು ಇನ್ನೂ ಬಂದಿರಲಿಲ್ಲ. ತಾಯಿ ಗಾಬರಿಯಿಂದ 'ಅಣ್ಣನೆಲ್ಲಿ? ಅಣ್ಣನೆಲ್ಲಿ?' ಎಂದು ಕೇಳಿದಳು. ಅನಂತನಿಗೆ—'ಎಲ್ಲಿಯೋ, ಎಲ್ಲಿಯೋ—'ಎಂದು ಹೇಳುವ ಮನಸ್ಸಾಯಿತು. ಆದರೆ ತಾಯಿಯ ಕಾತರ ಬಲ್ಲವನಾದುದರಿಂದ "ಸಾಯಂಕಾಲವೇ—ಯಾರೋ ಹೋಗುವವರ ಜತೆಗೆ ಬೈಂದೂರಿಗೆ ಹೋಗುತ್ತೇ

ನೆಂದು ಹೋದನು. ಅಲ್ಲಿ ಕೃಷ್ಣಪ್ಪನವರು ಇದ್ದಾರಲ್ಲ. ಹೋಗಿ ಮದ್ದು ಮಾಡಿಸುತ್ತಾನಂತೆ. ನಾನು ಎಷ್ಟು ಬೇಡವೆಂದರೂ ಕೇಳಲಿಲ್ಲ." ಎಂದು ನುಡಿದನು. 'ನಾನೇ ಕಳುಹಿಸಿಕೊಟ್ಟು ಬಂದೆ'—ಎಂದು ಸತ್ಯ ನುಡಿಯುವ ಧೈರ್ಯ ಅವನಲ್ಲಿ ಇರಲಿಲ್ಲ

ತಾಯಿ ದೀರ್ಘ ಉಸಿರು ಕರೆದಳು. "ಹೋಗಿದ್ದಾನೆ, ಇನ್ನು ಬರುತ್ತಾನೆಯೋ ಇಲ್ಲವೋ. ಮನೆಯಲ್ಲಿ ಎಲ್ಲರೂ ಅವನನ್ನು ಹಂಗಿಸುವವರೇ, ಮನೆಯಲ್ಲಿ ಮಗು ಹುಷಾರಿಲ್ಲದೆ ಮಲಗಿರುವಾಗ, ಹಾಗೆ ಹಂಗಿಸಿ, ಭಂಗಿಸಿ ಮಾತನಾಡಿದರೆ ಅವನೇನು ಮಾಡಿಯಾನು! "ಎಂದಳು. ಮಗನು ಮನೆಯನ್ನು ಅಗಲಿದ ಚಿಂತೆಗಾಗಿ, ಹೊಣೆಯನ್ನು ಗಂಡನ ಮೇಲೆ ಹೊರಿಸಿ ಹೋಗಿ ಮಲಗಿಕೊಂಡಳು. ಆತ ಹೋದ ಎರಡು ದಿವಸಗಳಲ್ಲಿ ರಾಮಪ್ಪಯ್ಯನವರು ಹಿಂದಿರುಗಿದರು. ಮಗನು ಮನೆಯಿಂದ ಹೊರಟುಹೋದ ವಿಷಯದಲ್ಲಿ ಅವರಿಗೆ ಯಾವ ಗಾಬರಿಯೂ ಉಂಟಾಗಲಿಲ್ಲ. "ಅದು ಕೈ ಮೀರಿಧ ಬಾಬು. ಹಿಂದಿನ ಕಾಲದಲ್ಲಿ ತಂದೆತಾಯಿಗಳೆಂದರೆ ಮಕ್ಕಳಿಗೊಂದು ಗಣ್ಯ. ಇದು ಕಲಿಯುಗವಷ್ಟೆ! ಅವರಿಂದಲೇ ಉಪದೇಶ ಮಾಡಿಸಿಕೊಳ್ಳುವ ಕಾಲ ಬಂದಿದೆ." ಎಂದು ಆಡಿದರು. ಅಣ್ಣನು ಇಲ್ಲದಾಗ, ಬೆಂಗಡೆಯಲ್ಲಿ ಸದಾ ದೂರುತ್ತಿರುವ ಧೋರಣೆಯು ಅನಂತರಾಮನಿಗೆ ಸಹಿಸುತ್ತಿರಲಿಲ್ಲ. ಅದನ್ನು ಹಲವು ಬಾರಿ ಅವನು ಕೇಳಿ ಕೇಳಿ ಕಿವುಡನಂತೆ ನಟಿಸುತ್ತಿದ್ದನು. ಒಂದೆರಡು ಬಾರಿ "ಅಪ್ಪಾ, ಏನಿದು? ಸದಾ ಹೇಳಿದ್ದನ್ನೇ ಹೇಳುತ್ತಿರುವುದು. ನಿಮ್ಮ ಮೇಲಿನ ದ್ವೇಷಕ್ಕೆ ಅವನು ಮನೆ ಬಿಟ್ಟು ಹೋದನೇ? ಸಮಯ ಪೋಲಿಮಾಡುವುದಕ್ಕೆ ಅವನು ಕಾಲೇಜು ಬಿಟ್ಟನೇ? ಮನೆಗೆ ಬಂದವರ ಎದುರಿಗೆಲ್ಲಾ ಅವನನ್ನು ದೂರಿ, ನಿಂದಿಸಿ ಏನು ಫಲ ಬಂತು?" ಎಂದು ವಾದಿಸಬೇಕಾಯಿತು.

ಅವರು ಅದಕ್ಕೆ "ಮಗು, ನಿನಗೆ ನನ್ನ ಹೊಟ್ಟೆಯ ಸಂಕಟ ಏನು ತಿಳಿದೀತು? ಅವನ ವಿದ್ಯೆಗೆ ಸ್ವಾವಿರ ಎರಡು ಸಾವಿರವೆಂದು ನೀರಿನಂತೆ ಹಣ ಸುರಿಸಿದವನು ನಾನು. ಅದಕ್ಕೆ ಯಾರೂ ಬರಲಿಲ್ಲ. ಈಗ ಮಾತ್ರ ಯಾವುದೋ ಊರಿನ ಗಾಂಧಿಯ ಮಾತನ್ನು ಕೇಳಿ, ಹಡೆದ ತಂದೆ ತಾಯಿಗಳ ಮಾತನ್ನು ತಾತ್ಸಾರ ಮಾಡಬೇಕೇ" ಎಂದು ತಮ್ಮದೇ ಗಾಯನ ಹೊಡಿದರು. ಅವನಿಗೆ ಬೇಸರ ಬಂದಿತು. "ಆಗಲಿ ನಿಮ್ಮದೇ ದ್ವಾಪರ

ತ್ರೇತಾಯುಗದ ಕಥೆಯನ್ನು ಹೇಳುತ್ತಾ ಕುಳಿತಿರಿ. ಮನೆಯ ಹೊರಗೆ ಇನ್ನೊಂದು ಪ್ರಪಂಚ ಇದೆ ಎಂದು ತಿಳಿದಿದ್ದರೆ ಅಲ್ಲವೇ" ಎಂದು ಕೋಪಿಸಿಕೊಂಡು ಹೊರಟು ಹೋದನು. ಅವುಗಳಲ್ಲಿ ಅವರಿಗೆ ಎಷ್ಟು ಮಾತು ಕೇಳಿಸಿತೋ ಬಿಟ್ಟಿತೋ, ಆದರೆ ರಾಮಪ್ಪಯ್ಯನವರು ಮೊದಲಿನಷ್ಟು ಜೋರಿನಿಂದ ಮಗನನ್ನು ತೆಗಳುವುದು ಕಡಿಮೆಯಾಯಿತು. ಹಿರಿಯ ಮಗನ ಮೇಲಿನ ಕ್ಷಮಾ ದೃಷ್ಟಿಯಿಂದ ಅಲ್ಲವಾದರೂ ಎರಡನೇಯವನನ್ನು ರೇಗಿಸಬಾರದು—ಎಂಬ ಯೋಚನೆಯಿಂದ ಇರಬೇಕು. ಹೀಗೆ ತನ್ನಂತೆಯೇ ಕುದಿದು ತಣಿಯುತ್ತಿದ್ದ ಆವರಣವನ್ನು ಬಂದು ಕುಲುಕಿದವರೆಂದರೆ ಮಂಜಯ್ಯನವರು.

ಆಲಿಮನೆ ಮಂಜಯ್ಯನವರು ಏಕಾಏಕಿಯಾಗಿ ರಾಮಪ್ಪಯ್ಯನವರಲ್ಲಿಗೆ ಬಂದು ಬಿಟ್ಟರು. ಹಾಗೆ ವರ್ಷಕ್ಕೆ ನಾಲ್ಕು ಬಾರಿ ತಮ್ಮ ತಾಲೂಕಿನ ರಾಜಧಾನಿಯಾದ ಕುಂದಾಪುರವನ್ನು ಅವರು ಸಂದರ್ಶಿಸುವುದಿತ್ತಾದರೂ ರಾಮಪ್ಪಯ್ಯನವರ ಮನೆಗೆ ಈ ತನಕ ಬಂದುದಿಲ್ಲ. ಅವರ ಪರಿಚಯವಿತ್ತು. ಇಬ್ಬರೂ ಒಬ್ಬರೇ ವಕೀಲರ ಕಕ್ಷಿಗಾರರು. ಕೋರ್ಟಿನ ಜಗುಲಿಯ ಮೇಲೆ ಕುಳಿತು ಒಬ್ಬರಿಗೊಬ್ಬರು ತಾಂಬೂಲ ಸೇವಿಸಲು ಕೊಟ್ಟದ್ದುಂಟು. ಊರು ಮನೆಯ ಕ್ರಿಮಿನಲ್ ಸಿವಿಲ್ ಮೊಕದಮ್ಮೆಗಳನ್ನು ಕುರಿತು ಚರ್ಚಿಸುತಿದ್ದುದೂ ಉಂಟು ಅಂಥವರು ಬೆಳಗಿನ ಎಳೆ ಬಿಸಿಲಿಗೆ ನಗು ನಗುತ್ತಾ ಅವರ ಮನೆಗೆ ಬಂದುದೆಂದರೆ ಅಪೂರ್ವದ ಸಂಗತಿಯೇ. ಹಿತ್ತಿಲು ಬಾಗಿಲಿನಲ್ಲಿ ಹೊಕ್ಕಾಗ, ಅವರ ಥಳಿಸುವ ವಜ್ರದ ವಂಟಿಯನ್ನು ಕಂಡ ಅನಂತರಾಮನು ಒಳಕ್ಕೆ ಓಡಿ "ಅಪ್ಪಾ, ತೀರ್ಥಳ್ಳಿಯವರೋ ಮಂಡಗದ್ದೆಯವರೋ—ಯಾರೋ ಘಟ್ಟದ ಸಾಹುಕಾರರು ಬಂದ ಹಾಗಿದೆಯಲ್ಲಾ" ಎಂದು ತಿಳಿಸಿದನು. ಅವರ ಸ್ವಾಗತಕ್ಕೆ ಅಣಿಯಾಗಿ ಚಾಪೆದಿಂಬುಗಳನ್ನು ಇರಿಸಿದನು. ರಾಮಪ್ಪಯ್ಯನವರು ತೀರ್ಥಳ್ಳಿಯವರೇ ನನ್ನ ಗುರುತದವರು ಯಾರೂ ಇಲ್ಲವಲ್ಲ" ಎಂದು ಸೋಜಿಗಗೊಂಡು, ಬಾಗಿಲಿನಿಂದ ಇಣಿಕಿ ನೋಡಿದರು. ಕಾಲಿಗೆ ಜೀಕಿನ ಜೋಡು, ಕೈಯಲ್ಲಿ ಬೆಳ್ಳಿಯ ಹಿಡಿಯ ಕೋಲು, ಮೈ ಮೇಲೆ ಅಲ್ಪಾಕಿನ ಕೋಟು, ಅದರ ಮೇಲೆ ರೇಶ್ಮೆಯ ಶಾಲು. ಉಟ್ಟುದು ಒಳ್ಳೆಯ ೧೮೦೨ನೆ ನಂಬರಿನ ಮಲ್ಲು ಬಟ್ಟೆ. ಇಷ್ಟರಿಂದ ಅಲಂಕೃತರಾಗಿ ತಮ್ಮಲ್ಲಿಗೇನೇ ಬರುತ್ತಿ

ರುವ ಮಂಜಯ್ಯನವರ ದರ್ಶನವಾಯಿತು. "ಛೀ, ಛೀ, ಮಾಣೀ, ಅದು ನಮ್ಮ ಆಲೆಮನೆ ಮಂಜಯ್ಯನವರಲ್ಲವೇ, ಅಂಥವರು ಮನೆಗೆ ಬರುವುದೆಂದರೆ ಒಂದು ಭಾಗ್ಯ. ಅಮ್ಮನ ಹತ್ತಿರ ಕಾಫಿ ಮಾಡಲಿಕ್ಕೆ ಹೇಳು" ಎಂದು ಬಾಯ ತಂಬುಲವನ್ನು ಕಿಟಕಿಯಿಂದಲೇ ತುಪ್ಪಿ, ನೇಲಿಯಲ್ಲಿ ತೂಗುತ್ತಿದ್ದ ಒಂದು ಪಂಚೆಯನ್ನು ಕಿತ್ತು, ಉಟ್ಟುಕೊಂಡು ಹೊರಕ್ಕೆ ಬಂದರು. ತಲೆಯ ಮೇಲೆ ಕೈ ಜೋಡಿಸಿ, "ಓ ಹೋ ಹೋ—ಸ್ವಾಮಿ, ಇದೇನು! ದೇವರೇ ಪ್ರತ್ಯಕ್ಷವಾದ ಹಾಗಾಯಿತಲ್ಲಾ" ಎಂದು ಬಲು ಪ್ರೌಢವಾದ ಪೀಠಿಕೆಯನ್ನು ಹಾಕಿದರು.

"ಬಂದೆ; ಹೀಗೇನೆ ಬಂದೆ. ಗುರುತಿನವರು ಅಂದ ಮೇಲೆ ಒಮ್ಮೆಯಾದರೂ ಬಂದು ನೋಡಬೇಡವೇ" ಎಂದು ಮನೆ ಹೊಗ್ಗುವ ಮೊದಲೇ ನುಡಿದು ತಂಬುಲ ಛೀತ್ಕರಿಸಿ ಮೆಟ್ಟನ್ನು ಕಳಚಿ, ಕಾಲನ್ನು ಜಾಡಿಸಿ ಒಳ ಹೊಕ್ಕರು. ತಮ್ಮ ಶಾಲು, ಕೋಲುಗಳನ್ನು ಚಾಪೆಯ ಮೇಲೆ ಮಲಗಿಸಿ—ವಿರಾಮ ಗತಿಯಿಂದ ತಾವು ಒರಗಿ ಕುಳಿತುಕೊಂಡರು. ಅನಂತರಾಮ ಕಾಲನ್ನು ತೊಳೆಯಲು ನೀರನ್ನು ತಂದಿರಿಸಿದ. ಎದ್ದು ಮುಖ ತೊಳೆದು, ಕಾಲು ತೊಳೆದುಕೊಂಡು ಬಂದರು. ಅನಂತರಾಮನ ಮುಖ ನೋಡುತ್ತಾ-"ಇದು ನಿಮ್ಮ ಎರಡನೆಯ ಹುಡುಗನಲ್ಲವೇ, ಮೊನ್ನೆ ಮೊನ್ನೆ ಮದುವೆಯಾದವನು ಎಂದರು. ಪ್ರತ್ಯುತ್ತರ ಬರುವ ಮೊದಲೇ "ನಮಗೆ ಯಾರಿಗೂ ಸುದ್ದಿ ಇಲ್ಲದೆ ಒಂದು ಲಗ್ನ ಮಾಡಿ ಬಿಟ್ಟಿರಲ್ಲ" ಎಂದರು. ನಿಜ ಹೇಳ ಹೋದರೆ ಅವರಿವರಲ್ಲಿ ಲಗ್ನಕ್ಕೆ ಹೇಳುವಷ್ಟು ಸಮೀಪದ ಸಂಬಂಧ ಇದ್ದಿರಲಿಲ್ಲ. ಆದರೆ ಮಾತು ಬಂದ ಮೇಲೆ, ಉತ್ತರ ಕೊಡದೆ ಗತಿಯುಂಟೇ. ಕಾರಣ ಸಿದ್ಧವಿತ್ತು; ಹೇಳಿಬಿಟ್ಟರು." ನೋಡಿ, ಆ ಲಗ್ನ ಎಂದರೆ ಕುತ್ತಿಗೆಗೆ ಬಂದದ್ದಕ್ಕೆ. ನಮ್ಮ ಹಿರಿಯ ಮಗನ ಕತೆ ಕೇಳಿರಬೇಕು ನೀವು. ಅವನಿಗೆ ಗೊತ್ತು ಮಾಡಿದ ಹುಡುಗಿಯನ್ನು ಈತನಿಗೆ ತರಬೇಕಾಯಿತು. ಕೇವಲ ಮಾತು ಕೊಟ್ಟ ಮೇಲೆ ಮುರಿಯಬಾರದು ಎಂದು ಆದ ನೆಂಟಸ್ತಿಕೆ. ಹೀಗಾಗಿ ಮನಸ್ಸೇ ಸಮಾಧಾನವಿಲ್ಲದೆ ಹೇಗೋ, ಹೇಗೋ ಆಗಿ ಹೋಯಿತು ಹೆಸರಿಗೆ ಒಂದು ಲಗ್ನ" ಎಂದರು.

ಮಂಜಯ್ಯನವರು—"ರಾಮಪ್ಪಯ್ಯ ಲಗ್ನ ಎಂಬುದೆಲ್ಲಾ ಹಾಗೆ. ಅದು ಕೇವಲ ಋಣಾನುಬಂಧ. ಅದರಲ್ಲಿ ಬ್ರಹ್ಮನ ಆಟವೇ ಹೊರತು ಇನ್ನು ಯಾರ ಆಟವೂ ನಡೆಯುವಂತಿಲ್ಲ. ನಿಮ್ಮ ಮಗನಿಗೂ. ಅಂದರೆ ಈ ಮಾಣಿಗೂ ಸಂಕಪ್ಪಯ್ಯನವರ ಮಗಳಿಗೂ ಋಣಾನುಬಂಧ ಬರೆಯದೆ, ಕೇವಲ ನಿಮ್ಮ ಹಿರಿಯ ಮಗನ ಮೊಂಡಾಟದಿಂದ ಹೀಗಾಯಿತ್ತೆಂದು ತಿಳಿಯುತ್ತೀರಾ"ಎಂದು, ಸಂದರ್ಭಕ್ಕೆ ಸಮನಾದ ತತ್ತ್ವೋಪದೇಶ ಮಾಡಿದರು. ಮತ್ತೂ ಅರ್ಧ ತಾಸಿನ ತನಕ ಉಭಯಕುಶಲೋಪರಿಸಾಂಪ್ರತಗಳಾದುವು. ಕಾಫಿ, ಉಪ್ಪಿಟ್ಟು ಸೇವನೆ ಆಯಿತು. ಅಷ್ಟಾದರೂ ಮಂಜಯ್ಯನವರು ತಾವು ಬಂದ ಉದ್ದೇಶವನ್ನು ಹೇಳಲೊಲ್ಲರು.

"ಅದು ಇರಲಿ, ತಮ್ಮ ಸವಾರಿ ಏನು ಬಂತು? ಅದನ್ನು ಹೇಳಲೇ ಇಲ್ಲವಲ್ಲ."

"ಬಂದೆ, ಹೀಗೇನೆ ಬಂದೆ. ಆಗ ವಕೀಲರಲ್ಲಿಗೆ ಬಂದಿದ್ದೆ. ನಿಮ್ಮ ನೆನಪಾಯಿತು ಬಂದು ಬಿಟ್ಟೆ. ಅಮೂ ಅಲ್ಲದೆ ನೋಡಿ,ಈ ಬೇಸಿಗೆಯಲ್ಲಿ ನಿಮ್ಮ ಮಗ ನಮ್ಮ ಊರಿಗೂ, ಅಂದರೆ ನಮ್ಮ ಮನೆಗೂ ಬಂದಿದ್ದ. ನಮ್ಮ ಮನೆಯಲ್ಲಿ ಎರಡು ಮೂರು ದಿವಸ ಇದ್ದ. ನನಗೆ ಅವನ ಮರ್ಜಿಯನ್ನು ನೋಡಿ ಬಹಳ ಖುಶಿಯಾಯಿತು. ಅವನು B. L. ಮುಗಿಸಿ ವಕಾಲತ್ತು ಮಾಡುವ ಹಾಗಿದ್ದರೆ ಕುಂದಾಪುರದ ನಮ್ಮ ಎಲ್ಲಾ ವಕೀಲರಿಗೂ ಒಂದು ಗುಟುಕು ನೀರು ಕುಡಿಸಲು ಸಾಕು. ಏನು ಮಾತು ಅನ್ನುತ್ತೀರಿ-ಥೀ-ಥೀ" ಎಂದರು. ಬಾಗಿಲ ಸಂದಿನಿಂದ ರಾಮಪ್ಪಯ್ಯನವರ ಹೆಂಡತಿ ಮಗನ ಪ್ರಶಂಸೆಯನ್ನು ಕೇಳಿ ಹಿಗ್ಗಿದಳು. ರಾಮಪ್ಪಯ್ಯ ಮಾತ್ರ ತದ್ ವಿಪರೀತವಾದರು;"ಅಯ್ಯೋ ಸ್ವಾಮಿ, ಅದನ್ನೇನು ಹೇಳುತ್ತೀರಿ. ಅವನು ವಕೀಲನಾಗಿ ಮನೆಗೊಂದು ಮರ್ಯಾದೆ ತಂದಾನು ಎಂದು ಎಣಿಸಿ ಬೆವರು ಸುರಿಸಿ ಹಣ ಖರ್ಚು ಮಾಡಿದೆ. ಆದ ಕೆಲಸ ಇದು" ಎಂದರು.

"ಅದು ಒಂದು ಋಣಾನುಬಂಧ. ಈಗ ಎಲ್ಲಿ ನಿಮ್ಮ ಮಗ........"

"ಬೈಂದೂರೋ, ಗುಜ್ಜಾಡಿಯೋ, ಹೊನ್ನಾವರವೋ! ನಮ್ಮನ್ನು ಕೇಳಿ ಎಲ್ಲಿಗಾದರೂ ಹೋಗುವುದುಂಟೇನು? ಇದ್ದೇವೆ ನಾವು ಮನೆಯಲ್ಲಿ ಮರದ ಕೊರಡುಗಳಂತೆ."

ಅಷ್ಟರಲ್ಲಿ ಅನಂತರಾಮು ನಡುವೆ ಬಾಯಿ ಹಾಕಿದನು. "ಅಪ್ಪಾ ಬೈಂದೂರು ಕೃಷ್ಣಪ್ಪನವರ ಮನೆಯಲ್ಲಿ ಇದ್ದಾನೆ, ಎನ್ನಬಾರದೇ? ಅವರು ಏನು ಕೆಲಸಕ್ಕಾಗಿ ಕೇಳಿದರೋ! ನೀನು ಬಂದ ಬಂದವರ ಮುಂದೆ ಎಲ್ಲಾ ಹೀಗೆ ಹರಿಕಥೆ ಮಾಡು" ಎಂದು ನುಡಿದು ಮರೆಯಾದನು.

ಮಂಜಯ್ಯನವರು ನಕ್ಕರು. "ರಾಮಪ್ಪಯ್ಯ, ಹೋಗಲಿ—ನಿಮಗೆ ಸಮಾಧಾನವಿದ್ದರೆ ನಿಮ್ಮ ಮಗನ ಜಾತಕವನ್ನು ಒಮ್ಮೆ ಕೊಟ್ಟು ಬಿಡಿ. ನಮ್ಮ ಅಮ್ಮನಿಗೆ ನಿಮ್ಮ ಹುಡುಗನನ್ನು ನೋಡಿ ಬಹಳ ಖುಶಿಯಾಗಿ ಬಿಟ್ಟಿದೆ. ಜಾತಕ ಕೂಡಿ ಬಂದರೆ ನೋಡುವ.

"ಅಯ್ಯೋ ಸ್ವಾಮಿ, ಜಾತಕ ಅನ್ನುತ್ತೀರಿ ನೀವು. ಈಗ ಹೋದ ನಲ್ಲಾ—ಅವನ ತಮ್ಮನಿಗೆ ಇನ್ನೂ ಹದಿನೆರಡು ವರ್ಷವಷ್ಟೆ. ನಾಳೆ ಮರ್ಯಾದೆ ಉಳಿಸಿಕೊಳ್ಳಲು ಅವನನ್ನು ನಾನು ಮಂಟಪದ ಮುಂದೆ ತಳ್ಳುವ ಹಾಗೂ ಇಲ್ಲ" ಎಂದರು. ಮಂಜಯ್ಯನವರು ತುಂಬಾ ನಕ್ಕರು. "ಯಾಕೆ ಇಷ್ಟು ಗಾಬರಿ ರಾಮಪ್ಪಯ್ಯ? ಮನುಷ್ಯ ಎಲ್ಲಾ ಗಳಿಗೆಯಲ್ಲಿ ಒಂದೇ ಸಮನಾಗಿ ಇರುತ್ತಾನೆಯೇ? ಅಲ್ಲದೆ ಮದುವೆ ಎಂಬುದು ಋಣಾನುಬಂಧದ ವಿಷಯದ ಹೊರತು ಬೇರೇನೂ ಅಲ್ಲ ಅಂದೆನಲ್ಲವೇ. ನಾವು ಜಾತಕ ನೋಡಿದುದರಿಂದ ಏನಾದರೂ ತಪ್ಪು ಇದೆಯೇ? ಅದೃಷ್ಟ ಇದ್ದರೆ, ಜಾತಕ ಕೂಡಿದರೆ ಆಗುತ್ತದೆ. ಇಲ್ಲವಾದರೆ ಇಲ್ಲ".

"ಸ್ವಾಮೀ, ನಿಮಗೆ ಬೇರೆ ಉದ್ಯೋಗವಿಲ್ಲ. ನಿಮ್ಮ ಮಗಳಾದರೇನು? ಬೇರೆಯವರ ಮಕ್ಕಳಾದರೇನು? ನಾಳೆ ಈ ಊರೂರು ತಿರುಗುವ ಉಂಡಾಡಿಯನ್ನು ಕಟ್ಟಿಕೊಂಡು ಕಣ್ಣೀರು ಹಾಕಬೇಕಾಗಿ ಬಂದರೆ? ಅದೂ ಅಲ್ಲದೆ ಅವನು ಲಗ್ನಕ್ಕೆ ಒಪ್ಪುವ ಹಾಗಿದ್ದರೆ ಜಾತಕ ನೋಡಿ ಪ್ರಯೋಜನ"

"ನಿಮಗೆ ಕೊಡುವುದಕ್ಕೇನು ಅಡ್ಡಿಯಪ್ಪಾ? ಅವನನ್ನು ಒಪ್ಪಿಸುವ ಭಾರ ನಮಗಿರಲಿ; ಜಾತಕ ಮೊದಲು ಕೂಡಲಿ."

ರಾಮಪ್ಪಯ್ಯನವರು ಮನೆಯೊಳಕ್ಕೆ ಹೋಗಿ ತಮ್ಮ ಹೆಂಡತಿಯ ಕಿವಿಯಲ್ಲಿ ಗುಜು ಗುಜು ಮಾತನಾಡಿ ಬಂದರು. ಮಗನ ವಿಷಯದಲ್ಲಿ ಆಕೆ ಇನ್ನೂ ಆಶಾವಾದಿಯೋ ಏನೋ! ಅಂದಳು. "ನೀವು ಕೊಡುವುದನ್ನು ಕೊಡಿ. ಅವರ ಮಗಳ ಅದೃಷ್ಟದಲ್ಲಿ ಬರೆದಿದ್ದರೆ ಲಗ್ನ ಆಗಬಾರದೆಂದು ಇದೆಯೇ?" ಎಂದುದರಿಂದ ಅವರು ಜಾತಕದ ನಕಲು ಒಂದನ್ನು

ಮಂಜಯ್ಯನವರ ಕೈಯ ಮೇಲೆ ತಂದು ಇರಿಸಿದರು. ಇರಿಸಿ,"ಮದುವೆಯ ಪ್ರಸ್ತಾಪ ಅವನೊಡನೆ ಮಾಡಬೇಕಾದವರು ನೀವು; ಅವನನ್ನು ಒಪ್ಪಿಸುವ ಜವಾಬ್ದಾರಿಯೂ ನಿಮ್ಮದು. ನೀವು ದಿಬ್ಬಣ ತೆಗೆದುಕೊಂಡು ಬನ್ನಿ ಅಂದರೆ ಬರುವವ ನಾನು" ಎಂದು ತಮ್ಮ ವ್ಯಥೆಯನ್ನು ಪ್ರಕಟಿಸಿದರು. ಅವರನ್ನು ಸಮಾಧಾನಗೊಳಿಸಿ, ಅವರ ಮನೆಯನ್ನು ಬಿಡುವುದಕ್ಕೆ, ಮಂಜಯ್ಯನವರಿಗೆ ಇನ್ನೂ ಅರ್ಧ ತಾಸು ಹಿಡಿಯಿತು.

ಅವರು ಹೊರಟುಹೋದ ಮೇಲೆ ರಾಮಪ್ಪಯ್ಯ ಹೆಂಡತಿಯನ್ನು ಕರೆದರು. "ಹೌದೇ, ಮಾಣಿಯ ಜಾತಕವನ್ನು ಅವರ ಕೈಯಲ್ಲಿ ಹಾಕಿತು, ಅಷ್ಟೇ ಹೊರತು, ಅವರ ಮಗಳ ಜಾತಕವನ್ನು ನಾವು ಕೇಳಲಿಲ್ಲವಲ್ಲಾ" ಎಂದರು.

"ಅದಕ್ಕೇನು? ತರಿಸಿಕೊಂಡರಾಯಿತು. ನೀವೆನ್ನುತ್ತಿದ್ದೀರೀ—ಮಂಜಯ್ಯನವರೆಂದರೆ ಐನೂರೋ, ಸಾವಿರವೋ ಮುಡಿ ಅಕ್ಕಿ ಹುಟ್ಟುವಳಿ ಉಳ್ಳವರೆಂದು. ಅವರಂಥ ದೊಡ್ಡವರು ನಮ್ಮಂಥವರ ಮನೆಯ ಸಂಬಂಧ ಬೆಳೆಸುತ್ತಾರೆಯೇ? ಏನಾದರೂ ಹೆಣ್ಣಿನ ಕಡೆಯಿಂದ ದೋಷವಿಲ್ಲದೆ ಬರಲಿಕ್ಕಿಲ್ಲ. ಒಂದೋ ಕುರುಡು ಕಣ್ಣು, ಇಲ್ಲವೇ ಕುಂಟು ಕಾಲು ............"

"ಏನೇನ್ನುತ್ತೀಯಾ ನೀನು? ಹೆಣ್ಣು ಕುರುಡು, ಕುಂಟು ಆದರೆ ನಮಗೆ ಕಾಣಲು ಕಣ್ಣಿಲ್ಲವೇ? ಅದೇನು ಇರಲಿಕ್ಕಿಲ್ಲ. ನಮ್ಮ ಮಗು ಬಿ. ಎ. ಓದಲಿಲ್ಲವೇ, ಅವರ ಮಾತಿನಿಂದಲೇ ಕೇಳಲಿಲ್ಲವೇ? ಅವನ ಮಾತಿಗೆ ಇವರು ಮೆಚ್ಚಿರಬೇಕು. ಅಷ್ಟೇನೇ. ಅವರು ಎಷ್ಟು ಮೆಚ್ಚಿದರೂ ಫಲವಿಲ್ಲ; ಕೈಗೆ ಬಾರದ ತುತ್ತು ಅದು. ಮಂಜಯ್ಯನವರು ಅಲ್ಲ—ಅವರ ಅಪ್ಪ ಬಂದರೂ ನಂಟಸ್ತಿಕೆ ಆಗುವ ನಮೂನೆ ಇಲ್ಲ. ಅವರು ಏನಾದರೂ ಆ ಗಾಂಧಿಗೇನೇ ಕಾಗದ ಬರೆದು, ಅವರಿಂದ ಇವನಿಗೆ ಬರೆಯಿಸಿದರೆ ಆಗುತ್ತದೆಯೋ ಏನೋ–" ಎಂದು ವಿಷಯವನ್ನು ಮುಗಿಸಿದರು.

ಮಂಜಯ್ಯನವರು ಜಾತಕವನ್ನು ಗಳಿಸಿ ಕೃತಕೃತ್ಯರಾಗಿ ಹೋದುದೇನೋ ನಿಜ. ಅವರು ಬಂದುದು ಕೇವಲ ತಮ್ಮ ತಾಯ ಆಗ್ರಹಕ್ಕಾಗಿ. ಮನೆಯಲ್ಲಿನ ಆ ಮುದುಕಿಗೆ ಅರುವತ್ತರ ಪ್ರಾಯ. ಸಾಯುವ ಮೊದಲು ಹಿರಿಯ ಮೊಮ್ಮಗಳ ಲಗ್ನ ನೋಡುವ ಬಯಕೆ. ಹುಡುಗಿ ಮದುವೆಗೆ

ನೆರೆದವಳೇ. ಅವರ ಸ್ಥಾನ ಮಾನಗಳಿಂದ ನಂಟುತನಗಳು ಬೇಡಿ ಮನೆಗೆ ಬರುವ ಸ್ಥಿತಿ ಇತ್ತು. ಆದರೆ ಹುಡುಗಿ ಹುಟ್ಟಿದ್ದು ಮೂಲಾ ನಕ್ಷತ್ರದಲ್ಲಿ. ಹೊಸ ಜಾತಕವನ್ನು ಸೃಷ್ಟಿ ಮಾಡದೆ ನಂಟುತನ ದೊರಕುವುದು ಕಠಿಣ. ಲೋಕ ರೂಢಿಯಂತೆ ಅದರಿಂದ ಹುಡುಗನ ತಂದೆಗೋ, ತಾಯಿಗೋ ಹಾನಿ ಎಂದು ನಂಬಿಕೆ. ನಕ್ಷತ್ರ ಅದು ಎಂದು ತಿಳಿದಿದ್ದರೆ ರಾಮಪ್ಪಯ್ಯ ನವರು ಜಾತಕವನ್ನು ಸಹ ಕೊಡುತ್ತಿದ್ದರೋ ಇಲ್ಲವೋ. ಇದರಿಂದಾಗಿ ಮಂಜಯ್ಯನವರು ಹಲವು ಬಾರಿ ಯತ್ನಿಸಿ ನಿರಾಶರಾಗಿದ್ದಾರೆ. ತಮಗಿಂತ ಕಡಿಮೆ ಅಂತಸ್ತಿನವರಲ್ಲಿ ಜಾತಕವನ್ನು ಕೇಳಿ ಹತಾಶರಾಗಿದ್ದಾರೆ. ತಂದೆ ತಾಯಿ ಸಾಯುವ ಭೀತಿ ಇಲ್ಲದೆ, ಮನಸ್ಸಿಗೆ ಒಪ್ಪುವ ಅನಾಥ ವರ ಇನ್ನೂ ದೊರಕಿಲ್ಲ. ಈ ನಿರಾಶೆಯ ಪರಿಸ್ಥಿತಿಯನ್ನು, ಮಗಳ ಕೊರಳಿಗೆ ಮಣಗಟ್ಟಲೆ ಚಿನ್ನ ಹೇರಿಯಾದರೂ, ನಿವಾರಿಸಿಕೊಳ್ಳಬೇಕೆಂಬ ಯೋಚನೆ ಮಂಜಯ್ಯನವರಿಗೆ. ರಾಧಾಕೃಷ್ಣನ ಕಡೆಗೂ ಅವರ ಮನಸ್ಸು ಹೊರಳುತ್ತಿರಲಿಲ್ಲ. ಈಗಲೂ ಹೊರಳಿಲ್ಲ. ಅವನ ದೇಶಸೇವೆಯನ್ನು ಇವರು ಹೊಗಳಿದ್ದು ನಿಜವಾದರೂ, ತಮ್ಮ ಅಳಿಯನಾಗುವವನು ಊರೂರು ಅಲೆದಾಟ ಮಾಡುವುದರಲ್ಲಿ ಆಗಲೀ, ಸರಕಾರೀ ಅನ್ನ ಛತ್ರಕ್ಕೆ ಕಾದಿಟ್ಟ ಅತಿಥಿಯಾಗಿರುವುದರಲ್ಲಾಗಲೀ ಅವರ ಒಪ್ಪಿಗೆ ಇಲ್ಲ.

"ನಮ್ಮ ಸತ್ಯನ ಅದೃಷ್ಟದಲ್ಲಿ ಆ ಮಾಣಿ ಬರೆದಿದ್ದರಾಗುತಿತ್ತು." ಎಂದು ಅವರ ತಾಯ ಅಂಬೋಣ. ಅಲ್ಲದೆ ರಾಧಾಕೃಷ್ಣನ ಹೆಸರನ್ನು ಕೇಳುವಾಗ ಅವಳ ತುಟಿ ಬಿರಿಯುತಿತ್ತೆಂದು ಅವರ ಹೆಂಡತಿಯ ಪರೀಕ್ಷೆ. ತಂದೆಯ ಮಾತಿಗೆ ಕಟ್ಟುಬೀಳದ ಮಗನಾದುದರಿಂದ, ಹುಡುಗಿಯನ್ನು ಒಲಿದರೆ, ಮೂಲಾ ನಕ್ಷತ್ರವಾದರೂ ಮದುವೆಯಾದಾನು. ಅಂಧ ಶ್ರದ್ಧೆಯುವನಲ್ಲ ಎಂಬ ವಿಶ್ವಾಸ ಇವರಿಗೆ. ಅವರು ಈ ಕೆಲಸಕ್ಕೆ ಮುಂದುವರಿದ ಧೈರ್ಯವೆಂದರೆ ಒಮ್ಮೆ ಈ ಅಳಿಯತನ ಗಂಟು ಬಿದ್ದಲ್ಲಿ, 'ಊರಲ್ಲಿಯೇ ಚರಖಾ ಶಾಲೆ ಮಾಡು, ಮಗ್ಗ ಇರಿಸು; ಬೇರೆ ಏನಾದರೂ ಮಾಡು' ಎಂದು ಅವನ್ನು ಪಳಗಿಸ ಬಲ್ಲೆ-ಎಂಬ ತಮ್ಮ ಬುದ್ಧಿವಂತಿಕೆಯ ಮೇಲಿನ ವಿಶ್ವಾಸ. ಇಷ್ಟರಲ್ಲಿ ಅನುಮಾನಾಸ್ಪದವಾಗಿ ಉಳಿದಿರುವ ವಿಷಯವೆಂದರೆ ಅವನನ್ನು ಲಗ್ನಕ್ಕೆ ಒಡಂಬಡಿಸುವ ವಿಚಾರ. ಅದು ಅಷ್ಟು ಸುಲಭದ ಕೆಲಸವಾಗಿದ್ದರೆ ರಾಮಪ್ಪಯ್ಯನವರು ಸಂಕಪ್ಪಯ್ಯನವರ ಮಗಳಿಗೆ ತಮ್ಮ

ಎರಡನೆಯ ಹುಡುಗನನ್ನು ಬಲಿಕೊಡಬೇಕಾಗಿರಲಿಲ್ಲ. ಆದರೂ ಪ್ರಯತ್ನ ಮಾಡಿ ನೋಡುತ್ತೇನೆಂದು ಮಂಜಯ್ಯನವರ ಹಟ.

ಊರಿಗೆ ಮರಳಿದ ಮಂಜಯ್ಯನವರು, ತಮ್ಮ ಪುರೋಹಿತರನ್ನು ಕರೆಯಿಸಿಕೊಂಡು, ಜಾತಕಗಳ ವಿಷಯವಾದ ಚರ್ಚೆಗಳನ್ನು ನಡೆಯಿಸಿದರು. "ಹುಡುಗ ಬಹಳ ಯೋಗ್ಯ—ಜಾತಕ ತೀರ ಪಸಂದವಾಗಿ ಕೂಡುತ್ತದೆ! ಹುಡುಗನಿಗೆ ಸ್ವಲ್ಪ ಕಾಲ ಗ್ರಹಗಳ ಅವಕೃಪೆಯಿದ್ದಂತೆ ಕಾಣಿಸಿದರೂ ಎರಡು ವರ್ಷಗಳಲ್ಲಿ ನಿರ್ವಿಘ್ನವಾಗುವಂತೆ ಕಾಣಿಸುತ್ತದೆ"ಎಂದು ಹೇಳಿದರು. ಪುರೋಹಿತರಲ್ಲವೇ? "ಎಲ್ಲಿನ ಜಾತಕ? ಏನು?" ಎಂದು ಕೇಳದೆ ಇರುತ್ತಾರೆಯೇ? ಮಂಜಯ್ಯನವರು ತಮ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳುವ ಸಲುವಾಗಿ "ಅದೆಲ್ಲಾ ಖಂಡಿತವಾದ ಮೇಲೆ ಹೇಳುವ ವಿಷಯ" ಎಂದು ತಿಳಿಸಿದರು. ಆವರ ತಾಯಿಗೆ ಜಾತಕದ ಫಲ ಕೇಳಿ ಹಿಗ್ಗು ಉಂಟಾಯಿತು. ಹಿರಿಯರ ಮಾತುಗಳು ಸತ್ಯಳ ಕಿವಿಗೂ ಮುಟ್ಟಿ, ಅವಳೂ ಹೊಸ ಕನಸಿನಲ್ಲಿ ತೇಲಾಡುವುದಕ್ಕೆ ಅವಕಾಶವಾಯಿತು. ಅವಳ ಚಿದಾಕಾಶವು, ರಾಧಾಕೃಷ್ಣನ ಬೆಳ್ಮುಗಿಲುಗಳ ನಲಿವಿನ ರಂಗವಾಯಿತು. ಅವನ ಹಿಂದು ಮುಂದು ತಿಳಿಯದೆ ಹೋದರೂ, ನೋಟಕ್ಕೆ ಚೆಲುವ; ಮಾತಿಗೆ, ಸುಲಭ, ಸರಳ ಎಂದು ತಿಳಿದಿದೆ. ತಾರುಣ್ಯದ ಕನಸುಗಳಿಗೆ ಜೋತುಕೊಳ್ಳಲು ಈ ಬಳ್ಳಿಯು ಸಾಲದೇ—ಸಿಪ್ಪೆಯನ್ನೇ ಮೋಹಿಸಿ ತಿರುಳನ್ನು ಕಲ್ಪಿಸುವ ಜಗತ್ತಲ್ಲವೇ ಅದು?

ಮಂಜಯ್ಯನವರು ಜಾತಕ ನೋಡಿಯಾಯಿತು; ತಮ್ಮ ನಿರ್ಧಾರ ಮಾಡಿ ಆಯಿತು. ಇನ್ನು ಅಳಿಯನ ಬೇಟೆಗೆ ಉರುಳು ಹಾಕುವುದು ಮಾತ್ರ ಬಾಕಿ ಉಳಿದಿದೆ. ನೇರಾಗಿ ರಾಧಾಕೃಷ್ಣನ ಬೈಂದೂರಿನ ವಿಳಾಸಕ್ಕೆ ಒಂದು ಪತ್ರ ಬರೆದರು. ಕುಡುಬಿ ಚಂಗಪ್ಪನ ಕೈಯಲ್ಲಿ ಕೊಟ್ಟು ಮುದ್ದಾಮ್ ಕಳುಹಿಸಿದರು. ಅದರ ವಿಷಯ ಹೀಗಿತ್ತು "ನಮ್ಮ ಮಾಸ್ತರರು ಊರಿಗೆ ಬಂದಿದ್ದಾರೆ. ಅವರಿಗೂ ನೂಲುವ, ನೇಯುವ ಅಭ್ಯಾಸ ತೊಡಗಿಸಬೇಕೆಂದು ತುಂಬಾ ಆಸೆ. ನಮ್ಮ ಹಳ್ಳಿಯ ಮಕ್ಕಳಿಗೆ ಅಂಥ ಯಾವುದಾದರೊಂದು ಉದ್ಯೋಗ ತಿಳಿದಿದ್ದರೆ ಎಷ್ಟೋ ಒಳ್ಳೆಯದಲ್ಲವೇ! ಈಗ ಮಳೆಗಾಲ ಮುಗಿಯುತ್ತ ಬರುವಲ್ಲಾಯಿತು. ಇನ್ನೊಮ್ಮೆ ಬರುತ್ತೇನೆ ಎಂದಿದ್ದೀರಿ. ನೀವು ಅವಕಾಶ ಮಾಡಿಕೊಂಡು, ಒಂದು ತಿಂಗಳ ಮಾತಿ

ಗಾದರೊ ನಮ್ಮಲ್ಲಿ ಇದ್ದು, ಯೋಗ್ಯ ಶಿಕ್ಷಣದ ವ್ಯವಸ್ಥೆ ಮಾಡಿಕೊಡುವಿರಾಗಿ ನಂಬಿದ್ದೇನೆ." ಎಂದು ಬರೆದರು. ಉತ್ತರವನ್ನು ತೆಗೆದುಕೊಂಡೇ ಬಾ—ಎಂದು ಚಂಗಪ್ಪನಿಗೆ ಅನುಜ್ಞೆಯಾಯಿತು. ಅದೇ ಬೆಳಗಿಗೇನೇ ಕಾಗದವನ್ನು ಹೊರಿಸಿ ಓಡಿಸಿದರು. ಚಂಗಪ್ಪ ಡಾಕ್ಟರರ ಮನೆಯನ್ನು ಸೇರಿ, ಕಾಗದ ಮುಟ್ಟಿಸಿದ. "ಆದಷ್ಟು ತೀವ್ರ ಬರುತ್ತೇನೆ."ಎಂಬ ಪ್ರತ್ಯುತ್ತರವನ್ನು ದೊರಕಿಸಿಕೊಂಡ. ಚಂಗಪ್ಪನನ್ನು ನೋಡಿ ರಾಧಾಕೃಷ್ಣ 'ಇಷ್ಟಕ್ಕಾಗಿ ಬಂದದ್ದೇ?' ಎಂದು ಕೇಳಿದರೆ, ತರಬೇತಿಗೊಂಡಿದ್ದ ಆತ "ಇಲ್ಲ ಒಡೆಯ, ಈಚೆ ಬದಲೇನೋ ಕೆಲಸಕ್ಕೆ ಬರುವುದಿತ್ತು. ಈ ಕಾಗದ ಕೊಟ್ಟರು. ಬಾಯಲ್ಲಿ— ಅವರು ಬರುವುದಾದರೆ ಕರೆದುಕೊಂಡೇ ಬಾ ಎಂದು ಹೇಳಿದ್ದಾರೆ." ಎಂದನು.

ಆ ಕಾಗದವನ್ನು ತಂದಾಗ ಕೃಷ್ಣಪ್ಪನವರು ಇದ್ದಿರಲಿಲ್ಲ. ರಾಧಾಕೃಷ್ಣನಿಗೆ ಜ್ವರ ಬಿಟ್ಟಿತ್ತು, ವಿಶ್ರಾಂತಿ ಆಗಿತ್ತು, ಉದ್ಯೋಗವಿಲ್ಲದೆ ಬೇಸರ ಬಂದಿತ್ತು. ಆತ ಆಗಲೇ ಆಲೆಮನೆಗೆ ಹೊರಡುವುದಕ್ಕೆ ಸಿದ್ಧನಾಗಿದ್ದ. "ಎಲ್ಲಿಗಾದರೂ ಹೋಗಿ ಏನಾದರೂ ಮಾಡಿದರೆ ಸಾಕು" ಎಂದೆನ್ನುವ ತವಕ ಅವನಿಗೆ. ಆದರೆ ಕೃಷ್ಣಪ್ಪನವರು ಕುಂದಾಪುರಕ್ಕೆ ಹೋಗಿದ್ದರು. ಹಿಂದಕ್ಕೆ ಬರಲು ಎರಡು ದಿನಗಳು ಬೇಕು. ಅವರಿಗೆ ತಿಳಿಸದೆ ಹೊರಡಲು ಮನಸ್ಸಾಗದೆ, ಖಂಡು ತುಂಡು ಉತ್ತರ ಸಲಿಸಲು ಧೈರ್ಯವಾಗದೆ, ಈ ಪ್ರತ್ಯುತ್ತರವನ್ನು ಕೊಟ್ಟು ಕುಳಿತನು.

ಚಂಗಪ್ಪ ತಂದ ಪ್ರತ್ಯುತ್ತರದಿಂದ, ಮಂಜಯ್ಯನವರಿಗೆ ಅಷ್ಟು ತೃಪ್ತಿಯುಂಟಾಗಲಿಲ್ಲ. "ನೀವು ಕೂಡಲೇ ಹೊರಟು ಬನ್ನಿ ಎಂದು ಬರೆಯುಲಿಲ್ಲವೇ" ಎಂದು ಅವರ ತಾಯಿ ಕೇಳಿದರು. "ಹಾಗೆ ಹೇಳುವುದಕ್ಕೆ ನಮ್ಮ ಮನೆಯ ಆಳೇ? ಅಲ್ಲದೆ ಆತುರವನ್ನು ತೋರಿಸಿ ಕೆಲಸ ಕೆಡಿಸಿಕೊಳ್ಳಬಾರದಲ್ಲಾ" ಎಂದರು.

ಈ ನಡುವೆ ಕೆಲವು ದಿವಸ ಅವರು—ರಾಮಪ್ಪಯ್ಯನವರು ನಮ್ಮ ಮಗಳ ಜಾತಕವನ್ನು ಕೇಳುತ್ತಿದ್ದಾರಲ್ಲಾ! ಏನು ಮಾಡಲಿ, ಅವಳದ್ದು ಮೂಲಾ ನಕ್ಷತ್ರವೆಂದರೆ ಅವರೂ ಕಲ್ಲು ಹಾಕಿ ಬಿಡುತ್ತಾರೆ. ಹುಡುಗ ಒಪ್ಪಿಗೆ ಕೊಡುವ ತನಕ ಅವರಿಗೆ ಜಾತಕ ಕಳುಹಿಸುವ ಹಾಗೂ ಇಲ್ಲ; ಸುಮ್ಮನೆ ಇರುವ ಹಾಗೂ ಇಲ್ಲ—ಎಂದು ಯೋಚನೆಗೆ ಈಡಾದರು.

ರಾಮಪ್ಪಯ್ಯನವರು ಹೆದ್ದರೂ ಅಲ್ಲ. ಅವರು ಹಾಗೂ ಹೀಗೂ ಮಾಡಿ, ಯಾರಾರ ಮೂಲಕವೋ ಅವರ ಮಗಳ ಜಾತಕವನ್ನು ದೊರಕಿಸಿ ಕೊಂಡರು. "ಹಾ ಮೊದಲೇ ಅಪ್ಪಬ್ಬೆಯರ ಮಾತನ್ನು ಕೇಳದ ಮಗ; ಜತೆಗೆ ಈ ಮೂಲಾ ನಕ್ಷತ್ರದ ಸೊಸೆಯನ್ನು ಕಟ್ಟಿಕೊಂಡರೆ, ನನ್ನದೋ, ಅವಳದೋ ಕೊರಳನ್ನು ಕೊಟ್ಟ ಹಾಗೆಯೇ ಸರಿ. ಇದು ಬೇಡವೇ ಬೇಡ-" ಎಂದು ತೀರ್ಮಾನಿಸಿದರು. ಇನ್ನು ಆ ತೀರ್ಮಾನವನ್ನು ಮಗನಿಗೆ ತಿಳಿಸಬೇಕೇ ಬೇಡವೇ? ಮಂಜಯ್ಯನವರಿಗೆ ತಿಳಿಸಬೇಕೇ ಬೇಡವೇ? ಎಂಬುದು ಅವರ ಮುಂದಿನ ಸಮಸ್ಯೆ. ಕೊನೆಗೆ ಅವರು "ಯಾಕೆ ಅಷ್ಟೆಲ್ಲಾ ಯೋಚನೆ? ನಮ್ಮ ಮಾತನ್ನೇ ಕೇಳಲಿಲ್ಲವಂತೆ. ಮಂಜಯ್ಯನವರ ಮಾತನ್ನು ಕೇಳುತ್ತಾನೆಯೇ! ಅವನು ಲಗ್ನ ಆಗುವವನಾದರೆ ಮೊದಲಿಗೇನೇ ಆಗುತ್ತಿರಲಿಲ್ಲವೇ" ಎಂದು ನಕ್ಕು ಸುಮ್ಮನಾದರು.

ರಾಧಾಕೃಷ್ಣ ಡಾಕ್ಟರರ ಮನೆಯಲ್ಲಿ ಕುಳಿತು ಎರಡು ವಾರಗಳ ಚಿಕಿತ್ಸೆಯನ್ನು ಪಡೆದ. ಅವನ ಶರೀರಕ್ಕೆ ಚೇತನ ಬಂದಂತೆ ಕಾಣುತ್ತದೆ. ಬೇರೆ ಉದ್ಯೋಗವಿಲ್ಲವಕ್ಕೆ ಎಂಬಂತೆ ಅವರ ಮಕ್ಕಳೊಡನೆ ಆಟವಾಡುತ್ತ ಸಮಯ ಕಳೆಯುತ್ತಾನೆ. ಅವನ ಮನಸ್ಸಿನ ತಳಮಳ ಮಾತ್ರ ಇನ್ನೂ ಶಾಂತವಾಗಿಲ್ಲ. "ಇಷ್ಟೆಲ್ಲವನ್ನು ಮಾಡಿ ಏನು ಬಂದಿತು? ಕಾಲೇಜನ್ನು ಬಿಟ್ಟು, ಏನು ಪುರುಷಾರ್ಥ ಸಾಧಿಸಿದಂತಾಯಿತು? ತನ್ನ ಜನರ ಸಲುವಾಗಿ ಶಾಶ್ವತವಾದ ಯಾವುದೇ ಒಂದು ಕೆಲಸ ಮಾಡದೆ ಹೋದರೆ, ಬಾಳ್ವೆಯನ್ನು ನೀರಲ್ಲಿ ಹೋಮಮಾಡಿದಂತಾಗಲಿಲ್ಲವೇ" ಎಂಬ ಸಮಸ್ಯೆ ಇನ್ನೂ ಕಣ್ಣಿನ ಮುಂದೆ ಕುಣಿಯುತ್ತಿದೆ. ಕೃಷ್ಣಪ್ಪನವರು ತಿರುಗಿ ಊರಿಗೆ ಬಂದಾಗಿದೆ. ಅವರೊಡನೆ ತನ್ನ ಭವಿಷ್ಯವನ್ನು ತರ್ಕಿಸಬೇಕೆಂದು ಬಯಸುತ್ತಾನೆ. ತಾತ್ಕಾಲಿಕವಾಗಿ ಆಲೆಮನೆಗೆ ಹೋಗಿ ಬರುವುದಂತೂ ಸರಿಯೇ. ಅಲ್ಲಿ ತನಗೇನು ಹೆಚ್ಚಿನ ಕೆಲಸವಿಲ್ಲ. ನೆಯಿಗೆಯ ಕೆಲಸ ತನಗೆ ಗೊತ್ತಿಲ್ಲದದು. ರಾಟೀ ನೂಲು ಮಾಡಲು, ಇಲ್ಲವೆ ಹತ್ತಿ ಹಿಂಜಲು ಹೇಳಿ ಕೊಡುವುದಕ್ಕೆ ಎಷ್ಟು ದಿನಗಳು ಬೇಕು? ಅನಂತರ ತಾನೇನು ಮಾಡಲಿ? ತನ್ನ ಅಲ್ಪ ಭಾವನೆಗಳು ಸಹಕಾರವಿಲ್ಲದೆ, ವರ್ಚಸ್ಸುಗಳುಳ್ಳ ಜನಗಳ ಬೆಂಬಲವಿಲ್ಲದೆ ಬರಿಯ ತನ್ನೊಬ್ಬನಿಂದ ಸಫಲವಾಗಲಾರವು ಎಂಬ ತೋರುತ್ತಿದೆ. ಈ ಕೆಲಸಕ್ಕೆ ಬೇಕಾದ ಪ್ರಭಾವವನ್ನು ತಾನು

ಹೇಗೆ ಗಳಿಸಬೇಕು? ಮುಖಂಡರ ಮಾತುಗಳನ್ನು ಸಾವಿರಾರು ಜನ ಕೇಳು ತ್ತಾರೆಂದು ತನ್ನ ಮಾತಿಗೆ ಕಿವಿಗೊಡುವವರು ಎಷ್ಟು ಜನ?

ಆದುದರಿಂದ ಕೃಷ್ಣಪ್ಪನವರು—ಬಂದ ಮೇಲೆ ಒಂದು ದಿವಸ ಈ ಪ್ರಶ್ನೆಯನ್ನು ಅವರ ಮುಂದೆ ಇರಿಸಿದನು. ಅವರು ನಗುತ್ತ "ರಾಧಾ, ನನ ಗೇನು ಈ ವಿಷಯ ತಿಳಿದಿದೆಯೆಂದು ಕೇಳುತ್ತೀ? ನಾನು ನಮ್ಮ ಜನರನ್ನು ನಂಬಿ ಯಾವ ಕೆಲಸ ಮಾಡಿದವನೂ ಅಲ್ಲ, ಮಾಡುವವನೂ ಅಲ್ಲ. ನನಗೆ ಕಾಣುವುದೆಂದರೆ—ನೀನು ಏನಾದರೂ ವಿದ್ಯೆಯನ್ನು ಪೂರ್ಣ ಮಾಡಿಕೊಂಡು, ನಿನ್ನ ಜೀವನ ಸ್ವತಂತ್ರವಾಗಿ ನಡೆಯಿಸಲು ಕಲಿತು ಕೊಂಡು, ಆ ಮೇಲೆ ನಿನ್ನ ನೆರೆಕರೆಯವರಿಗೆ ಶಕ್ತಿಯಾನುಸಾರ ಸಹಾಯ ಮಾಡಿದರೆ ಅಷ್ಟೇ ಸಾಕು ಎಂದು ತೋರುತ್ತದೆ. ಆದರೆ ಇನ್ನು ಕಾಲೇ ಜಿಗೆ ಸೇರುವ ಸಮಯವೂ ಕಳೆದಿರಬೇಕು" ಎಂದರು.

"ಛೇ—ಕಾಲೇಜಿನ ವಿಚಾರವನ್ನು ಮರೆತು ಬಿಟ್ಟಿದ್ದೇನೆ. ಒಮ್ಮೆ ಬಿಟ್ಟಮೇಲೆ ತಿರುಗಿ ಸೇರುವುದುಂಟೇ? ಬಿ. ಎ. ಗೆ ಕುಳಿತು ಏನು ಆಗಬೇಕಾ ದುದೂ ಇಲ್ಲ."

"ಅಭಿಮಾನವೇ?"

"ಅಭಿಮಾನವಲ್ಲ. ಆ ಪ್ರಶ್ನೆಯೇ ಇಲ್ಲ. ನಾನು ಬಿಟ್ಟದ್ದು ಪರಾಶ್ರ ಯದ ವಿದ್ಯೆ ಬೇಡವೆಂದು. ತಿರುಗಿ ಅದು ಏಕೆ ಬೇಕು? ಬರಿಯ ನನ್ನೊ ಬ್ಬನ ಜೀವನ ಸಾಗಿಸಿಕೊಂಡು ಹೋಗುವ ಪ್ರಶ್ನೆಯು ಕಷ್ಟದ್ದೆಂದು ನನಗೆ ಕಾಣಿಸುವುದಿಲ್ಲ. ಅದನ್ನೇ ನಾನು ಆದರ್ಶವಾಗಿ ಇಟ್ಟುಕೊಂಡರೆ, ನಾಳೆ ಅದರಲ್ಲಿಯೇ ಆಯುಷ್ಯ ಕಳೆಯುತ್ತದೆ. ಪ್ರಪಂಚ ಮುಳುಗಿದರೂ ಅದರ ಕಡೆಗೆ ಕಾಣುವ ಕಣ್ಣು ಬರಲಾರದು."

"ಹಾಗಾದರೆ ನೀನು ಮುಂದೆ ಲಗ್ನ-ಗಿಗ್ನ ಮಾಡಿಕೊಂಡು ಸಂಸಾ ರಿಯಾಗುವುದಿಲ್ಲ ಎಂದು ಲೆಕ್ಕವೇ?"

ಆ ಮಾತಿಗೆ ಆತ ಭಾವಭರಿತನಾಗಿ ಉತ್ತರವನ್ನಿತ್ತ: "ಹಿಂದುಸ್ಥಾ ನದ ಗುಲಾಮರ ಸಂಖ್ಯೆಯನ್ನು ಹೆಚ್ಚಿಸಲು ನಾನು ತಯಾರಿಲ್ಲ."

ಕೃಷ್ಣಪ್ಪನವರು ನಕ್ಕರು; "ಗಾಂಧೀಜಿಯವರು ಎಂದಿರುವ ಮಾತು ಅದು. ಅವರ ಪಾಲಿಗೆ ಅದು ಸಮನಾಗಿ ತೋರಬಹುದು. ಸಂಸಾರಿಯಾಗಿ ಮುಂದೆ ವಿರಕ್ತನಾಗುವ ವಿಚಾರ ಬೇರೆ, ಆಗುವ ಮೊದಲೇ ಅನುಭವ

ತಿಳಿಯದೆ ಆಡುವ ಮಾತು ಬೇರೆ. ನಾಳೆ ಬೆಳೆದ ಎಂದರೆ ಒಂಟಿ ಜೀವನ ನಿನ್ನಿಂದ ಸಾಧ್ಯವಾಗಲಾರದು. ಬಹು ಮುಂದಿಗೆ ಅದು ಅಸಾಧ್ಯವೇ. ಈ ವಯಸ್ಸಿನಲ್ಲಿ ನೀನು ಲಗ್ನ ಬೇಡವೆಂದರೂ ನಾಳಿನ ವಿಚಾರ ನಿನ್ನ ನಾಳಿನ ಮನಸ್ಸನ್ನೇ ಹೊಂದಿದೆ."

"ಅಂದರೆ ನನ್ನ ಮನಸ್ಸು ನನಗೆ ಗೊತ್ತಿಲ್ಲ ಎನ್ನುತ್ತೀರಾ?"

"ಈಗಿನದು ನಿನಗೆ ತಿಳಿದಿರಬಹುದು. ಆದರೆ ನಾಳಿನ ಮನಸ್ಸು ಇವತ್ತಿನಂತಿರಲಿಕ್ಕಿಲ್ಲ. ನೀನು ದೇಶದ ಗುಲಾಮರ ಸಂಖ್ಯೆಯನ್ನು ಬೆಳೆಯಿಸುವ ವಿಷಯ ಹೇಳುತ್ತೀಯಾ. ನಾನು ಮೂವರು ಗುಲಾಮರ ತಂದೆಯಾಗಿಲ್ಲವೇ?"

"ನಿಮಗೆಂದು ನಾನು ಆ ಮಾತು ಅನ್ನಲಿಲ್ಲ."

"ಅದನ್ನು ನಾನು ಬಲ್ಲೆ. ನಿನ್ನ ಮಾತಿನ ಅರ್ಥವನ್ನೇನೋ ನಾನು ವಿಮರ್ಶಿಸುತ್ತಿದ್ದೇನೆ. ನಿನ್ನ ಗಾಂಧೀಯವರಿಗೂ ಮೂರು ಮಂದಿ ಮಕ್ಕಳಿದ್ದಾರೆ. ಸ್ವಾತಂತ್ರ್ಯ ಸಂಪಾದಿಸುವುದಕ್ಕೂ, ಗುಲಾಮರು ಹುಟ್ಟಬೇಕಾದುದು ಅವಶ್ಯ. ಈ ಹೊತ್ತಿನ ಗುಲಾಮರಿಗೆ ಸ್ವರಾಜ್ಯ ಸಿಗದೆ ಹೋದರೂ ನಾಳಿನ ಗುಲಾಮರಿಗೆ ಅದು ಸಿಕ್ಕಬಾರದೆಂದಿಲ್ಲ.

"ಈ ವರ್ಷದೊಳಗಾಗಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರುವುದಿಲ್ಲ ಎನ್ನುತ್ತೀರಾ? ಗಾಂಧೀಜಿಯವರ ಭವಿಷ್ಯ ಸುಳ್ಳೇನು?"

"ಸುಳ್ಳೋ ಸತ್ಯವೋ, ನನಗಂತೂ-ಅದು ಸದ್ಯ ಬರುವಂತೆ ಕಾಣಿಸುತ್ತಲಿಲ್ಲ. ಹೋಗಲಿ, ಈ ವರ್ಷ ಅದು ಸಿಗಲಿಲ್ಲವೆಂದೇ ತಿಳಿಯುವ; ಆಗಲೂ ಮದುವೆ ಬೇಡೆನ್ನುತ್ತೀಯಾ"?

"ಅದೇನು ಹೇಳಲಾರೆ. ಈ ವರ್ಷದ ಚಿತ್ರವಷ್ಟೇ ನನ್ನ ಮುಂದಿನದು."

"ಹಾಗೆನ್ನು, ನಾಳಿನ ಭವಿಷ್ಯ ನಾವು ನಿರ್ಧರಿಸುವ ಹಾಗಿದ್ದರೆ ಪ್ರಪಂಚದ ವ್ಯವಹಾರ ಎಷ್ಟು ಸಲೀಸು ಇರುತ್ತಿತ್ತು ಗೊತ್ತೇ? ನಮ್ಮ ತಂತ್ರದಲ್ಲಿರುವುದರ ಸಾವಿರ ಪಾಲು ಪರತಂತ್ರದಲ್ಲಿದೆ. ಸಂಸಾರದ ಪ್ರತಿಯೊಂದು ಪ್ರಶ್ನೆಯೂ ಹಾಗೇನೇ. ಈಗ ನೀನು ಊರೂರು ತಿರುಗಾಡಿ ಬಂದಿದ್ದೀ. ಯಾಕೆ, ನೀನು ಅಂದಂತೆ ಜನರು ಕೇಳಲು ಸಿದ್ಧಲ್ಲ"?

"ಜನರಿಗೆ ತಿಳುವಳಿಕೆ ಬಂದಿಲ್ಲ."

"ತಿಳುವಳಿಕೆ ಬರುವಂತೆ ನಾವು ಏನು ಮಾಡಿದ್ದೇವೆ? ನಾಲ್ಕು ಉಪ

ನ್ಯಾಸ ಕೇಳಿ ಅವರು ತಯಾರಾಗುತ್ತಾರೆಯೇ?

"ಇಲ್ಲ, ತಯಾರಿಸಬೇಕು ಅವರನ್ನು"

"ಹೇಗೆ?"

"ಗಾಂಧೀಯವರು ಅಂದಿಲ್ಲವೇ, ನೂಲುವುದರಿಂದ, ಅಸ್ಪರ್ಶತಾ ನಿವಾರಣೆ, ಮಧ್ಯಪಾನ ನಿಷೇಧ-ಇವುಗಳಿಂದ"

"ನೂಲುವ ಜನಗಳೂ ಇದ್ದಾರೆ ಬೇರೆ ದೇಶದಲ್ಲಿ. ಹೊಲೆಯರಿಲ್ಲದ ಊರುಗಳೂ ಉಂಟು. ಅವೆಲ್ಲ ಸ್ವತಂತ್ರ ದೇಶಗಳೆಂದು ತಿಳಿಯಲೂ ಬೇಕಿಲ್ಲ. ಸ್ವತಂತ್ರ್ಯವಾಗಿರುವ ರಾಷ್ಟ್ರಗಳಲ್ಲಿ ಕುಡಿಕತನ,ಬಡತನದ ರಾಜ್ಯಗಳೇ ಅಧಿಕ. ಒಂದಕ್ಕೊಂದು ಸಂಬಂಧವಿಲ್ಲ. ನೀನು ಚರಿತ್ರೆಯ ಓದುವವನೇ? ಕತ್ತಿ ಹಿಡಿಯದೆ ಯಾವ ರಾಜ್ಯವು ಸ್ವಾತಂತ್ರ್ಯ ಗಳಿಸಿಲ್ಲ. ಹಾಗೆ ಮಾಡುವ ತನಕ ನಮ್ಮ ವೈರಿ ಓಡುವುದೂ ಇಲ್ಲ. ನಮ್ಮ ವೈರಿಗಳಿಗಿಂತ ಹೆಚ್ಚಾಗಿ ನಾವು ಕಾದಬಲ್ಲೆವಾದರೆ ಮಾತ್ರ ಸ್ವಾತಂತ್ರ್ಯ. ಇಲ್ಲವಾದರೆ ದಾಸ್ಯ"

"ಹಾಗಾದರೆ ಗಾಂಧೀಯವರ ಅಹಿಂಸಾವಾದ ನಿರರ್ಥಕವೇ"?

"ಅಹಿಂಸೆಯೇ? ಮನುಷ್ಯ ಸ್ವಭಾವವನ್ನು ತಿಳಿಯದ ಮಾತದು. ಅಡೂಗುಲಜ್ಜಿ, ಉಪವಾಸ ಮಾಡಿಕೊಂಡು ಸ್ವರ್ಗ ಗಳಿಸುತ್ತೇನೆ ಎಂದು ತಿಳಿದುಕೊಂಡ ಹಾಗಿದೆ ಆ ಕತೆ."

ಸರಿ ಮಾತು ಬಿಸಿಗೇರಿತು. ಉತ್ತರಗಳು ಅಂಬಿನಂತಾದುವು. ವಿಚಾರಕ್ಕಿಂತ ತರ್ಕಸರಣಿ ಮೇಲುಗೈ ಹೊಂದಿತು. ಆವೇಶ, ಅನುರಾಗ ತುಂಬಿದಲ್ಲಿ-ವಾದ, ಕ್ರೋಧ ಎರಡೂ ಒಂದೇ. ಇವೆಲ್ಲವುಗಳ ಪರಿಣಾಮವೆಂದರೆ ರಾಘನ ಮನಸ್ಸು ಮತ್ತಷ್ಟು ಚಂಚಲವಾದುದು. ನಿರ್ಧಾರ ಇನ್ನಷ್ಟು ದೂರಹೋಯಿತು. ಕೃಷ್ಣಪ್ಪನವರ ಮೇಲಿದ್ದ ಅಭಿಮಾನವೂ ತನ್ನ ಕಾವನ್ನು ಕಳೆದು ಕೊಂಡಿತು. ಕೊನೆಗೆ ಒಂದು ದಿವಸ ಆತ ಇನ್ನು ತಡೆಯಲಾರದೆ "ಕೃಷ್ಣಪ್ಪನವರೇ, ನಾನು ಒಮ್ಮೆ ಆಲೆಮನೆಗೆ ಹೋಗಿ ಬರುತ್ತೇನೆ. ಅವರು ಬರಬೇಕೆಂದು ಹೇಳಿ ಕಳುಹಿಸಿದ್ದಾರೆ. ಅವರ ಶಾಲೆಯ ಮಕ್ಕಳಿಗೆ ನೂಲುವುದನ್ನು ಹೇಳಿಕೊಟ್ಟು ಬರುತ್ತೇನೆ." ಎಂದು ಹೇಳಿದ.

ಕೃಷ್ಣಪ್ಪನವರು "ಹೊಂ" ಎಂದರು. ಕಾರಣ "ಈ ಹುಡುಗ ತುಂಬ ಯೋಚಿಸಿ, ಯೋಚಿಸಿ ತಲೆ ಕೆಡಿಸಿಕೊಳ್ಳುವುದರಲ್ಲಿದ್ದಾನೆ. ಸದ್ಯ ಏನ

ನ್ನಾದರೂ ಮಾಡುತ್ತಿರಲಿ. ಮನಸ್ಸಿಗೆ ನೆಮ್ಮದಿ ಬಂದೀತು. ಉದ್ಯೋಗ ವಿಲ್ಲದಿರುವುದು ತಪ್ಪು-" ಎಂದು ಸಮ್ಮತಿಸಿದರು. ಆದರೂ "ಜಾಗ್ರತೆಯಾ ಗಿರು. ಆಲೆಮನೆಯ ಮಲೇರಿಯದ ಕೊಂಪೆ. ಇಂಥಾ ಕರಾವಳಿಯಲ್ಲೇ ಅದು ಬರುತ್ತಿರುವಾಗ ಅಲ್ಲಿ ಕೇಳಬೇಕಾಗಿಲ್ಲ. ಅಲ್ಲಿಂದ ಬೇರೆ ಎಲ್ಲಿಗೂ ಹೋಗಬೇಡ. ಇಲ್ಲಿಗೇನೇ ಬಾ. ತಿರುಗಿ ಜ್ವರದ ಉಪದ್ರ ಕಾಣಿಸಿದರೆ ಇಲ್ಲಿಗೇನೇ ಬರಬೇಕು. ಸುಮ್ಮನೆ ಯೋಚಿಸಿ, ಯೋಚಿಸಿ ತಲೆಯನ್ನು ಮಾತ್ರ ಕೆಡಿಸಿ ಕೊಳ್ಳಬೇಡ."

ಆ ಮರುದಿನವೇ ರಾಧಾಕೃಷ್ಣ ಬೈಂದೂರಿನಿಂದ ಹೊರಟು ಮಧ್ಯಾ ಹ್ನಕ್ಕೆ ಸಮನಾಗಿ ಆಲೆಮನೆಯನ್ನು ಸೇರಿದ. ಅವನ ಅಂದಿನ ಪಯಣ ಚಿರಸ್ಮರಣೀಯವಾಗಿತ್ತು. ಅವನ ಕೈಯಲ್ಲಿ ಕೊಡೆ ಇದ್ದಿರಲಿಲ್ಲ. ಅವನು ಹೊರಟಾಗ ಆಕಾಶ ಬರಿದಾಗಿತ್ತು, ಬಿಸಿಲು ಚೆನ್ನಾಗಿ ಕಾಯುತ್ತಿತ್ತು, ಮಳೆಯ ಸುಳಿವಿಲ್ಲದೆ ಮೂರು ನಾಲ್ಕು ದಿನಗಳಾಗಿದ್ದುವು. ಆದುದರಿಂದ ಕೊಡೆಯ ನೆನಪು ಇವನಿಗೂ ಆಗಿರಲಿಲ್ಲ. ಇವನನ್ನು ಬೀಳ್ಕೊಡುವವ ರಿಗೂ ಆಗಲಿಲ್ಲ. ಈತ ನಡುದಾರಿಯನ್ನು ಸೇರುತ್ತಲೇ, ಬಾನು ಬಣ್ಣ ಬದಲಿಸಿತು. ಒಮ್ಮೆಗೇ ಮುಗಿಲು ಕವಿದು, ಗಾಳಿ, ಗುಡುಗು ಮಿಂಚುಗಳ ಅಬ್ಬರ ಕಾಣಿಸಿತು. ಆಶ್ರಯ ಪಡೆಯುವೆನೆಂದರೆ ಒಂದೇ ಒಂದು ಮನೆ ಸಮೀಪವಿರಲಿಲ್ಲ. ಒಂದು ಮಾವಿನ ಮರದ ಕೆಳಕ್ಕೆ ಹೋಗಿ ನಿಂತನು. ಸಿಡಿಲಿನ ಬಡಿತಕ್ಕೆ ಅಲ್ಲಿ ನಿಲ್ಲುವುದಕ್ಕೂ ಅಂಜಿಕೆಯಾಯಿತು. ಗಾಳಿ ಅಬ್ಬರದಿಂದ ಬೀಸತೊಡಗಿ, ಮರದ ಕೊಂಬೆ ರೆಂಬೆಗಳನ್ನು ಮುರಿ ಯ ತೊಡಗಿತು. ಅಲ್ಲಿ ನಿಂತರೂ, ಫಲವಿಲ್ಲ-ಎಂದು ಹಾದಿ ಸಾಗಿದನು. ನಿಂತು ಚಳಿಯಿಂದ ಕಂಗೆಡುವ ಬದಲು, ಓಡಿ ಮೈಯನ್ನು ಬೆಚ್ಚಗಿರಿಸಿಕೊ ಳ್ಳುವುದು ಒಳ್ಳೆಯದೆಂದು ತೋರಿತು. ಚೀಲದಲ್ಲಿದ್ದ ಅರಿವೆಗಳನ್ನು ಬಿಡಿಸಿ ತಲೆಯ ಮೇಲೆ ಹೆರವಿಕೊಂಡ. ಅವುಗಳ ಸೆರಗುಗಳನ್ನು ಕೈಯಲ್ಲಿ ಹಿಡಿದು ಕೊಂಡು ತಲೆ ತಗ್ಗಿಸಿ ನಡೆದನು. ಬೆನ್ನಿಗೆ ಮಳೆ ಚುಚ್ಚುತ್ತಿತ್ತು. ನಾಲ್ಕು ದಿಕ್ಕಿನಿಂದಲೂ ಗಾಳಿಯು ಬೀಸಿ ಅವನನ್ನು ತಳ್ಳಿ ತೇಲಿಸುವಂತಿತ್ತು. ಓಡುವ ಎಂದರೆ ಸಮವಾಗಿ ನಾಲ್ಕು ಮಾರು ದೂರ ಕಾಣಿಸುವಂತಿರಲಿಲ್ಲ. ಹಿಡಿದ ಮಳೆಯು ಬಿಡಲೇ ಇಲ್ಲ. ಎತ್ತೆತ್ತಲೋ ಹೆಜ್ಜೆ ಹಾಕಿದನು. ಕೊನೆಗೆ ಹಳ್ಳ ಒಂದರ ಮುಂದೆ ಹತಾಶನಾಗಿ ನಿಂತುಬಿಟ್ಟನು.

ತುಸು ಹೊತ್ತಿನಲ್ಲಿ ಮಳೆಯು ಬಿಟ್ಟಿತು. ಗಾಳಿಯೂ ನಿಂತಿತು. ಬಿಸಿಲು ಬಿದ್ದಿತು. ಅವನು ಹೋದ ಹಾದಿ ಕಾಡಿನ ಸೆರಗು ಒಂದರ ಕುರುಡು ಹಾದಿಯೆಂದು ತೋರಿತು.

ಸೂರ್ಯ ನೆತ್ತಿಗೆ ಬರಲು, ಇನ್ನು ಒಂದು ತಾಸು ಇರಬಹುದು. ಅಲ್ಲಿ ನಿಂತು ದಾರಿ ಕಾಣದೆ ಹಿಂದಕ್ಕೆ ಹೊರಳಿದನು. ಹೊರಡುವ ಮುನ್ನ, ಅರಿವೆಗಳನ್ನು ಹಿಂಡಿ ಮೈಯನ್ನು ಉಜ್ಜಿಕೊಂಡು ಪಂಚೆಯನ್ನು ನಡುವಿಗೆ ಬಿಗಿದು, ಉಳಿದುವನ್ನು ಗಂಟುಕಟ್ಟಿ ಮುಕಾಂಬಿಕೆಯ ದರ್ಶನಕ್ಕೆ ಹೋಗುವ ಮಳೆಯಾಳಿಯಂತಾದನು. ಒಂದು ಮೈಲು ದೂರ ನಡೆಯಲು ಇನ್ನಷ್ಟು ಸ್ಪಷ್ಟ ದಾರಿ ಕಾಣಿಸಿತು. ದೂರದಲ್ಲಿ ದನಕರುಗಳು ಕಾಣಿಸಿದುವು. ಸಮೀಪ ಹಳ್ಳಿಯೊಂದಿರಬೇಕು ಎಂದು ತಿಳಿಯಿತು. ಅಲ್ಲಿಗೆ ಹೋಗಿ ಆಲೆಮನೆ ತನ್ನ ಎಡಕ್ಕೆ ಉಳಿಯಿತು ಎಂದು ತಿಳಿದುಕೊಂಡ.

ಅಂತು ಇಂತು–ಹಲವಾರು ಬಾರಿ ಆಚೀಚೆ ತಿರುಗಿ, ದಾರಿ ತಪ್ಪಿ, ದಾರಿ ತಿದ್ದಿ, ಆಲೆಯ ಮನೆಯ ಮುಂದಿನ ಬಯಲನ್ನು ಸೇರುವಾಗ ಬಿಸಿಲು ಚೆನ್ನಾಗಿ ಹರಡಿತ್ತು. ಮುಗಿಲು ಪೂರ್ಣವಾಗಿ ಮರೆಯಾಗಿತ್ತು. ಮೈಯ ಅರಿವೆ ತುಸು ಒಣಗಿತ್ತು. ಬಯಲಿನ ಬದಿಯಲ್ಲಿ ಇದ್ದ ತೋಡು ಮಾತ್ರ ನೀರುಕ್ಕೊಬ್ಬಿ ಹರಿಯುತಿತ್ತು. ಬೇಸಿಗೆಯಲ್ಲಿ ಅವನು ಅದನ್ನು ನೋಡಿದ್ದನು. ಮಳೆಗಾಲದಲ್ಲಿ ಅದೇ ತೋಡಿಗೆ ಇಂಥ ರೌದ್ರ ಬಂದೀತೆಂದು ಎಣಿಸಲಿಲ್ಲ. ಅದನ್ನು ಇಳಿಯಲಾರದೆ ದಂಡೆಯಲ್ಲಿ ನಿಂತು ಕೂಗು ಹಾಕಿದನು. ಕೂಗಿಗೆ ಉತ್ತರವಾಗಿ ಊಟವನೊಬ್ಬನು ಕಾಣಿಸಿಕೊಂಡನು. "ಅಯ್ಯಾ, ಆ ದಿನ ನೀವು ಧನಿಯರ ಮನೆಗೆ ಬಂದವರಲ್ಲವೇ" ಎಂದು ಗುರುತಿಸಿದನು. ಅವನನ್ನು ಹಿಂಬಾಲಿಸಿ ರಾಧಾಕೃಷ್ಣ ಮಂಜಯ್ಯನವರ ಮನೆಗೆ ಹೊರಟನು. ತನ್ನ ವೇಷದ ಅರಿವು ಉಂಟಾಯಿತು. ಒದ್ದೆ ಅಂಗಿ, ಟೊಪ್ಪಿಗಳನ್ನು ಇನ್ನೊಮ್ಮೆ ಹಿಂಡಿ, ಕೊಡವಿ, ತೊಟ್ಟುಕೊಂಡನು.

ಅವರ ಮನೆಯ ಹೆಬ್ಬಾಗಿಲನ್ನು ಸೇರುವಾಗ, ಈ ತನಕ ಮರೆಯಾಗಿದ್ದ ಚಳಿ, ನಡುಕುಗಳೆಲ್ಲ ಕರುಳನ್ನು ಕೊರೆಯತೊಡಗಿದುವು. ಹಲ್ಲು ಕಟಕಟಿಸುತಿತ್ತು. ವಿಸ್ಮಿತರಾದ ಮಂಜಯ್ಯನವರು, 'ಛೀ-ಛೀ ಕೊಡೆ ಇಲ್ಲದೆ ಹೇಗೆ ಬಂದದ್ದೇ' ಎಂದು ಸ್ವಾಗತಿಸಿ ಒಳಕ್ಕೆ ಕರೆದೊಯ್ದು, ಬದಲಿಸಲು ಬೇರೆ ಅರಿವೆಯನ್ನು ತಂದು ಕೊಟ್ಟರು. ಆದರೂ 'ಈತ ಇದೇ ಸಾಕು' ಎನ್ನುತ್ತಿ

ದ್ದಾನೆ. ಅವರು "ಇದೆಂಥ ಮಕ್ಕಳಾಟಿಕೆ, ಶೀತವಾದೀತು; ನಾಳೆಗೆ ಜ್ವರ ಬಂದೀತು, ಒಣಗಿದ ಅರಿವೆ ಉಟ್ಟುಕೊಳ್ಳಿ ನೋಡುವ" ಎಂದರು. "ಅದು ಖಾದಿಯಾದರೆ ಮಾತ್ರ" ಅವರು ಸುಮ್ಮನಾದರು. ತಾವು ಕೆಲವು ದಿನಗಳ ಹಿಂದೆ ಒಂದು ಖಾದಿ ಶಾಲನ್ನು ಕೊಂಡಿದ್ದ ನೆನಪಾಯಿತು. "ಗಾಂಧೀ ಶಾಲು ಇರಬೇಕು. ತರುತ್ತೇನೆ" ಎಂದು ಒಳಗಿನಿಂದ ಒಂದು ಶಾಲು ತಂದು ಕೊಟ್ಟರು. ತಂದ ಅರಿವೆಯನ್ನು ರಾಧಾಕೃಷ್ಣ "ಇದು ಮಿಲ್ ಖಾದಿ" ಎಂದು ನಿರಾಕರಿಸಿದನು. "ಖಾದಿಗೆ ನಾವು ಎಲ್ಲಿಗೆ ಹೋಗಲೀ ಮಹಾರಾಯರೇ?" ಎಂಬ ಉದ್ಗಾರ ಹೊರಟಿತು.

ಸರಿ, ಅತಿಥಿ ಪೂಜೆಯು ಒದ್ದೆ ಅರಿವೆಯಲ್ಲೇ ನಡೆಯಬೇಕಾಯಿತು. ಉಳಿದ ಅರಿವೆಗಳನ್ನು ಒಣಗಿಸಿ, ಒಂದನ್ನು ಅಡ್ಡ ಬಿಗಿದುಕೊಂಡು, ಅಕಾಲ ಭೋಜನವಾಯಿತು. ಅಲ್ಲಿಯೂ ಉಪಚಾರವಾಯಿತು. ಉಟ್ಟ ಅರಿವೆಯು ಮೈಯಲ್ಲಿಯೇ ಪೂರ್ಣ ಒಣಗಬೇಕಾಯಿತು. ತಿರುಗಿ ಮುಗಿಲಿನ ಛಾಯೆ ಕಾಣಿಸಿದುದರಿಂದ, ಉಳಿದ ಅರಿವೆಗಳನ್ನು ಅಟ್ಟದಲ್ಲಿ ಒಣಗಿಸಲು ಏರ್ಪಾಡಾಯಿತು. "ಮಹಾರಾಯರೇ, ರಾತ್ರಿ ಚಳಿಯಲ್ಲಿ ಇದೊಂದು ವಸ್ತ್ರ ಸಾಕೇ" ಎಂದು ಕೇಳಿದರು ಮಂಜಯ್ಯನವರು.

"ಯಾಕೆ? ನಿಮ್ಮಲ್ಲಿ ಕಂಬಳಿ ಇಲ್ಲವೇ" ಎಂದನು ರಾಧಾಕೃಷ್ಣ. "ಹೋ—ಕಂಬಳಿ ಈಗ ತಾಜಾ ಖದ್ದರ್ ಅಲ್ಲವೇ" ಎಂದು ಅವರು ನಕ್ಕರು.

ಆ ದಿನ ಸಂಜೆ—ಮನೆಶಾಲೆಯ ಮಾಸ್ತರಿಗೂ, ಆತನಿಗೂ ಭೇಟಿಯಾಯಿತು. ಮರುದಿನದಿಂದಲೇ ತಕಲಿ ತರಗತಿಯ ತಯಾರಿಯು ನಡೆಯಿತು. ರಾಟೆ ತಯಾರಿಸಲು ಅನುಜ್ಞೆಯಾಯಿತು. ಊರ ಹತ್ತಿಯನ್ನು ಒಟ್ಟುಕೂಡಿಸುವ ವಿಚಾರ, ಕುಂದಾಪುರದಿಂದ ಹತ್ತಿ ತರಿಸುವ ವಿಚಾರ, ಮುಂದಿನ ವರ್ಷಕ್ಕೆ ಬೇಕಾಗುವ ಹತ್ತಿಯನ್ನು ಊರಲ್ಲಿಯೇ ಬೆಳೆಯಿಸುವ ವಿಚಾರ-ಎಲ್ಲವೂ ನಡೆದುವು. ಈ ಏರ್ಪಾಡುಗಳೆಲ್ಲವು ಜಾರಿಗೆ ಬರಲು ಎಷ್ಟು ದಿನ ಹಿಡಿದೀತೋ ಎಂಬ ಅನುಮಾನವು ಆ ಮಾಸ್ತರರಿಗಿತ್ತು.

ಆ ರಾತ್ರಿ ಆತ ಕಂಬಳಿಯನ್ನು ಹಾಸಿಕೊಂಡು, ಕಂಬಳಿಯನ್ನು ಹೊದೆದು, ಮೈ ತುರಿಸುತ್ತ ಮಲಗಿದ ರಾಧಾಕೃಷ್ಣನಿಗೆ, ಬಲವಾದ ಜ್ವರ ಬಡಿಯಿತು. ಮರುದಿವಸ ಕೆಮ್ಮು, ಎದೆ ನೋವುಗಳು ಸೇರಿಕೊಂಡುವು.

ಮೂರು ದಿವಸಗಳ ಕಾಲ ಬಿಟ್ಟು ಬಿಡದ ಜ್ವರದಿಂದ, ಮಂಜಯ್ಯನವರ ಮನೆಯವರಿಗೆ ತುಂಬ ಗಾಬರಿಯಾಯಿತು. ರಾಧಾಕೃಷ್ಣನಿಗಂತೂ ವೈಯುಪರವೆ ಇರಲಿಲ್ಲ. ಮಂಜಯ್ಯನವರ ತಾಯಿಯೇ–"ದೇವರೇ, ಒಮ್ಮೆ ಬಂದ ವಿಪತ್ತನ್ನು ಪಾರು ಮಾಡಿಬಿಡು. ನಮಗೆ ಕೆಟ್ಟ ಹೆಸರೊಂದು ಬರದಂತೆ ಮಾಡು" ಎಂದು ಪ್ರಾರ್ಥಿಸುವಂತಾಯಿತು. ಹಳ್ಳಿಯ ಕಷಾಯ, ಲೇಪ, ಪಥ್ಯೋಪಚಾರಗಳು ಬಿಡುವಿಲ್ಲದೆ ನಡೆದುವು. ಮನೆಯವರಿಗೆ ಉಂಟಾದ ಗಾಬರಿಯನ್ನು ಕಂಡು, ಇವನಿಗೂ ವ್ಯಥೆಯಾಯಿತು. ಮೂರು ದಿನವಾದರೂ ಜ್ವರ ಬಿಡದಿದ್ದುದ್ದನ್ನು ಕಂಡು ಮಂಜಯ್ಯನವರು "ಕೃಷ್ಣಪ್ಪನವರನ್ನು ಕರೆಯಿಸಲೇ, ಇಲ್ಲವಾದರೆ ಕುಂದಾಪುರಕ್ಕೆ ಹೇಳಿಕಳುಹಿಸಲೇ?" ಎಂದರು.

"ಕುಂದಾಪುರವೇ? ಬೇಡ" ಎಂದು ಮೆಲ್ಲಗೆ ನುಡಿದನು.

"ಕೃಷ್ಣಪ್ಪನವರಿಗೆ ಹೇಳಿ ಕಳುಹಿಸ ಬಹುದಲ್ಲಾ."

"ನೋಡುವ ಇನ್ನೊಂದು ದಿನ. ಗುಣವಾದೀತೆಂದು ಅನ್ನಿಸುತ್ತಿದೆ. ಎದೆನೋವು ಮಾತ್ರ ತಾಳಲಾರದಷ್ಟಿದೆ. ಕಫ ತುಂಬಿರಬೇಕು. ಮಳೆಯ ಆಟ ಇದೆಲ್ಲ; ಶಾಕ ಕೊಟ್ಟರೆ ಸಮಾಧಾನವಾಗ ಬಹುದು." ಮಂಜಯ್ಯನವರ ತಾಯಿ ಆ ಊರಿಗೆ ಒಬ್ಬ ವೈದ್ಯ ಇದ್ದಂತೆ. ಅವರಲ್ಲಿ ಇಲ್ಲದ ಗಿಡ ಮೂಲಿಕೆಗಳಿಲ್ಲ; ತಿಳಿಯದ ಗೃಹ ಚಿಕಿತ್ಸೆ ಇಲ್ಲ. ಶಾಖ ಕೊಡುವ ವಿಚಾರ ಬರುತ್ತಲೇ "ಛೀ ಅದೊಂದನ್ನು ಮಾಡದೆ ಕುಳಿತೆವೇ" ಎಂದುಕೊಂಡು, ತೌಡು ಕಾಯಿಸಿ ತಂದಳು. ಶಾಖಕೊಡಲು ಕುಳಿತಳು. ಅವರ ಸೊಸೆಗೆ ಅಡುಗೆ ಮನೆಯ ಸೇವೆ ಬಿಡುಗಡೆ ಇಲ್ಲದ್ದು. ಹೀಗಾಗಿ ಅಲ್ಲೇ ಸಮೀಪದಲ್ಲಿ ಸತ್ಯ ಅಜ್ಜಿಯ ಬಳಿ ಕುಳಿತು ಸರದಿಯಿಂದ ತವುಡು ಕಾಯಿಸಿ ಕೊಡುತ್ತಿದ್ದಳು. ಅವರಿಬ್ಬರ ಕಾವಲಿನಲ್ಲಿ ಒಂದೆರಡು ದಿನ ಸರಿಯಿತು. ಜ್ವರದ ಕುದಿ ಕಡಿಮೆಯಾಯಿತು. ಕಫ ಕರಗತೊಡಗಿದಂತೆ ಕಾಣಿಗಿತು. ರಾಧಾಕೃಷ್ಣನು ಮಲಗಿದಲ್ಲಿಂದಲೇ "ಇದು ಇನ್‌ಫ್ಲೂವೆಂಝುವೋ, ನಿಮೋನಿಯವೋ ಇರಬೇಕು." ಅಂದರೆ, ಆ ಮುದುಕಿಯು "ಅಂಥದೇನು ಅಲ್ಲ; ಗಾಬರಿಬೇಡ. ಇದು ಬರಿಯ ಶೀತಜ್ವರ. ಮಳೆಯಲ್ಲಿ ನೆನೆದು ಬಂದಿರಿ, ಚಂಡಿ ಆರಿವೆಯಲ್ಲಿ ತಿರುಗಾಡಿದಿರಿ, ಆದಕ್ಕೇ ಬಂದಿರಬೇಕು. ಇನ್ನು ಹಾಗೆ ಮಾಡಬಾರದು" ಎಂದು ಉಪದೇಶಿಸಿದಳು.

"ಆಯಿತಮ್ಮಾ" ಎಂದನು. ಈ ಮಾತನ್ನು ಬಳಿಯಲ್ಲಿ ಕಂಬಕ್ಕೆ ಒರಗಿಕೊಂಡು ಸತ್ಯ ಕೇಳುತ್ತಿದ್ದಳು. ಅಜ್ಜಿಯ ಉಪದೇಶಕ್ಕಾಗಿ ನಕ್ಕು ಬಿಟ್ಟಳು. ಅದು ಆತನ ದೃಷ್ಟಿಗೆ ಬಿತ್ತೆಂದು—ಅಂಜಿ "ಅಜ್ಜಿ, ಅದನ್ನೆಲ್ಲಾ ಏನು ಹೇಳುವುದು"! ಎಂದಳು.

ಮಲಗಿದ್ದಲ್ಲಿಂದಲೇ ಮುಖವನ್ನು ತಿರುವಿ ರಾಧಾಕೃಷ್ಣ ಅವಳನ್ನು ನೋಡಿದ. ಈ ನಾಲ್ಕೈದು ದಿನ ತನ್ನ ಉಪಚಾರದಲ್ಲಿ ಅಜ್ಜಿಗೆ ನೆರವಾದ ಆಕೆಯ ವಿಷಯವಾಗಿ ಆಸಕ್ತಿ ಪ್ರೀತಿಗಳು ಎರಡೂ ಉಂಟಾಗಿದ್ದುವು.

ಹತ್ತೆಂಟು ದಿನಗಳ ಚಿಕಿತ್ಸೆಯಿಂದ ರಾಧಾಕೃಷ್ಣ ಬೇನೆಯಿಂದ ಪೂರ್ಣವಾಗಿ ಪಾರಾದನು. ಶರೀರವು ತೀರ ಸೊರಗಿ ಹೋಗಿತ್ತು. ಮೈಯಲ್ಲಿ ಶಕ್ತಿ ಇರಲಿಲ್ಲ. ಹಾಗೆ ಎದ್ದು ಓಡಾಡುವುದಕ್ಕೂ ಅಜ್ಜಿ ಬಿಡುವಂತಿರಲಿಲ್ಲ. ಅವನ ಅನ್ನ ಪಾನಗಳನ್ನು ಅಲ್ಲಿಗೇನೆ ತಂದು ಒಪ್ಪಿಸುತ್ತಿದ್ದರು. ಸತ್ಯ ದಿನಕ್ಕೆ ನಾಲ್ಕಾರು ಬಾರಿಯಾದರೂ ಬಂದು 'ಈಗ ಹೇಗಿದ್ದೀರಿ' ಎಂದು ವಿಚಾರಿಸಿ ಕೊಂಡುಹೋಗುತ್ತಿದ್ದಾಳೆ.

"ಆ ಬಾರಿ ಬಂದವನಿಗೆ ನಿನಗೆ ಚಳಿಜ್ವರವಾಯಿತು. ಈ ಬಾರಿ ಶೀತ ಜ್ವರ ಬರಬೇಕೇ? ಆದರೂ ದೇವರು ಮರ್ಯಾದೆಯನ್ನು ಉಳಿಸಿದ" ಎಂದು ಮುದುಕಿ ಅವನೊಡನೆ ಅನ್ನುತ್ತಲೇ ಇದ್ದಳು.

ಒಂದು ತಿಂಗಳುಗಳೊಳಗಾಗಿ ಹೊಸ ಉಪಾಧ್ಯಾಯರು, ಹುಡುಗರಿಗೆ ಹೆಬ್ಬಾಗಿಲಲ್ಲಿ ಕುಳಿತು, ತಕಲಿಯಿಂದ ನೂಲು ಮಾಡಲು ಹೇಳಿಕೊಡುತ್ತಿದ್ದಾರೆ. ಬಿದಿರ ಬಿಲ್ಲಿನಿಂದ ಹತ್ತಿ ಹಿಂಜುವ ಪಾಠವನ್ನು ಹೇಳುತ್ತಿದ್ದಾರೆ. ಮಂಜಯ್ಯನವರನ್ನು ಆಗ್ರಹಪಡಿಸಿ ಊರ ಬಡಗಿಗೆ ನಾಲ್ಕು ದಿನ ಶ್ರಮಕೊಟ್ಟು, ಎರಡು ರಾಟೆಗಳನ್ನು ತಯಾರಿಸಿದ್ದಾಯಿತು. ಅದನ್ನು ನೋಡಲು ಊರಿಂದೂರೇ ಮಂಜಯ್ಯನವರ ಮನೆಯಲ್ಲಿ ಕಲೆಯಿತು. ಎಲ್ಲರೂ ನೂಲು ಮಾಡುವುದರಲ್ಲಿ ಬಂದು ಕೈ ನೋಡುವವರೇ ಸತ್ಯನ ತಂಗಿ ಲಕ್ಷ್ಮಿ ಅಂತೂ ತನಗೇ ಒಂದು ರಾಟೆ ಬೇಕೆಂದು ಹಟಹಿಡಿದಿದ್ದಾಳೆ.

ಮಂಜಯ್ಯನವರೂ ನೂಲು ಎಳೆದು, ಎಳೆದು ಗಂಟು ಮಾಡಿ ರಾಶಿ ಹಾಕುವುದುಂಟು.

ರಾಟೆಯ ಬಳಿಗೆ ಸುಳಿಯದವಳು ಸತ್ಯ—ಮಾತ್ರ. ನೂಲುವ ಆಸೆ ಕುತ್ತಿಗೆಯ ತನಕ ಇದೆ. ಆದರೆ ಅದನ್ನು ಕಲಿಯಲು ನಾಚಿಕೆ. ಹೆಬ್ಬಾ

ಗಿಲಿನಲ್ಲಿ ಕುಳಿತು, ತನ್ನಷ್ಟು ದೊಡ್ಡ ಹುಡುಗಿ ಅವರಿಂದ ಪಾಠ ಕಲಿಯು ವುದೇ-ಎಂದು. ಅದಕ್ಕಾಗಿ "ಲಕ್ಷ್ಮಿ, ನೀನು ಕಲಿತು ನನಗೆ ಹೇಳಿಕೊಡು" ಎಂದು ರಾಯಭಾರಿಯಾಗಿ ಅವಳನ್ನು ಅಟ್ಟಿದ್ದಾಳೆ. ಅವಳು ಕಲಿಯು ವುದು ಪೂರ್ಣವಾಗುವುದರೊಳಗೇನೆ ಊಟದ ಮನೆಗೆ ರಾಟಿಯನ್ನು ತರಿಸಿ ಕೊಂಡು ನೂಲು ಮಾಡತೊಡಗಿದ್ದಾಳೆ. ಒಂದು ದಿನ ಲಕ್ಷ್ಮಿ ಬಂದು ರಾಧಾಕೃಷ್ಣನೊಡನೆ "ಮಾಸ್ತರರೇ, ಅಕ್ಕ ಒಂದು ಗಂಟೆಯಲ್ಲೇ ನೂಲು ಮಾಡಲು ಕಲಿತಾಯಿತು. ನನಗೆ ಇನ್ನೂ ಬರುವುದಿಲ್ಲ. ಇನ್ನೂ ತುಂಡು ತುಂಡಾಗುತ್ತಿದೆ." ಎಂದು ವಾರ್ತೆಕೊಟ್ಟಳು. "ಯಾರು ಕಲಿಸಿದ್ದು ಅವ ಳಿಗೆ?"

"ಕಲಿಸಿದ್ದು ನಾನೇ."

"ಕಲಿಸಿದವಳಿಗೆ ಬರುವುದಿಲ್ಲವೇ" ಎಂದು ಆತ ನಕ್ಕ. ಆಕೆ ನೂಲು ವುದನ್ನು ನೋಡಬೇಕೆಂದು ಅವನಿಗೂ ಆಸೆ. ಆದರೆ ಈಗ ಅವಳು ಅವ ನೆದುರಿಗೆ ನೂಲುವ ಮಾತಿರಲಿ, ಊಟದ ಕಾಲದಲ್ಲಿ ತಮ್ಮ ತಂಗಿಯರ ಜೊತೆಗೆ ಕುಳಿತಿರುವುದೂ ಕಾಣುತ್ತಲಿಲ್ಲ. ತಾಯಿಯೊಂದಿಗೆ ಅವಳ ಪಂಕ್ತಿ ಸೇರಿದೆ. ಅಂದರೆ ಇಷ್ಟೇ--ಅವಳೇನೋ ಅಡುಗೆ ಮನೆಯ ಕಿಟಕಿ ಯಿಂದ ಕಣ್ಣು ತುಂಬಾ ನೋಡುತ್ತಾಳೆ. ಅವನೊಡನೆ ಮಾತನಾಡುವ ಲವ ಲವಿಕೆಯಂತೂ ಬಲವತ್ತರವಾಗಿದೆ. ಇವನಿಗೆ ಮಾತ್ರ ಅವಳ ದರ್ಶನವಾ ಗುವುದು ಕಷ್ಟವಾಗಿದೆ.



# ಐದನೆಯ ಅಧ್ಯಾಯ

ಆಲೆ ಮನೆಯಲ್ಲಿ ರಾಧಾಕೃಷ್ಣ ಮೂರು ತಿಂಗಳ ಕಾಲವನ್ನು ಕಳೆದುದಾಯಿತು. ಚಾವಡಿಯಲ್ಲಿ ಶಾಲೆ ನಡೆಯುತ್ತಿರುವಾಗ, ಸಮಯ ಪಾಠ ಹೇಳಿ ಕೊಡುವುದರಲ್ಲಿ ಹೇಗೂ ಹೋಗುತ್ತಿದೆ. ಸಂಜೆ ಅವರೊಡನೆ ಸೇರಿ ಆಟವಾಡುತ್ತಾನೆ. ಬೆಳಿಗ್ಗೆ ಒಬ್ಬಂಟಿಗನಾಗಿ ಊರಲ್ಲಿ ಅಲೆದಾಡಿ ಗ್ರಾಮಸ್ಥರ ಪರಿಚಯ ಮಾಡಿಕೊಳ್ಳುತ್ತಾನೆ. ಅವರಿಗೆ "ನೀವಿಷ್ಟು ಹತ್ತಿಯ ಗಿಡ ನೆಟ್ಟು, ನೂಲು ಮಾಡುತ್ತ ಬಂದರೆ ನಿಮ್ಮ ಖರ್ಚಿಗೆ ಬೇಕಾದ ಅರಿವೆಯನ್ನು ಮಾಡಿಕೊಳ್ಳಬಹುದಲ್ಲಾ" ಎಂದು ಉಪದೇಶಿಸುತ್ತಾನೆ. ಈ ನಡುವೆ ಊರಿನ ಬಳಿ ಯಾರಾದರೂ ಜೇಡರಿದ್ದಾರೆಯೋ ಎಂದು ವಿಚಾರಿಸುತ್ತಿದ್ದಾನೆ. ಅಲ್ಲಿಗೆ ಒಂದು ಹರದಾರಿ ದೂರದಲ್ಲಿ ಒಬ್ಬ ನೇಕಾರನಿರುವುದನ್ನು ತಿಳಿದುಕೊಂಡು, ಅವನ ಮನೆಗೆ ಹೋಗಿಬರುತ್ತ ನೆಯ್ಗೆಯನ್ನು ಕಲಿಯಲು ಪ್ರಯತ್ನಿಸುತ್ತಿದ್ದಾನೆ. ದಿನಗಳು ಹೀಗೆ ಸರಿದರೆ ಕತ್ತಲು ಸಮಯ, ಮಂಜಯ್ಯನವರ ತಾಯಿ ಶೇಷಮ್ಮನೊಡನೆ ಕುಳಿತು, ಲೋಕಾಭಿರಾಮವಾಗಿ ಹರಟೆ ಕೊಚ್ಚುತ್ತಾನೆ. ಅವರ ಜತೆಗೆ ಮನೆಯ ಮಕ್ಕಳು ಕುಳಿತಿರುವುದುಂಟು. ಅವರೆದುರಿಗೆ ನಿತ್ಯವೂ ದೇಶದ ಪರಿಸ್ಥಿತಿಯನ್ನು ಕುರಿತು ರಾಧಾಕೃಷ್ಣ ಮಾತನಾಡುತ್ತಿದ್ದ. ಅನೇಕ ವಿಷಯಗಳಲ್ಲಿ ಆ ಮುದುಕಿ ಆತನ ಅಭಿಮತವನ್ನು ಒಪ್ಪುತ್ತಿದ್ದಾಳೆ. "ಜನ ಬರಿದೆ ಹೊತ್ತು ಕಳೆಯುವುದಕ್ಕಿಂತ ನೂತದ್ದರಿಂದ ಹಾನಿ ಇಲ್ಲ" ಎಂದು ಒಪ್ಪುತಿದ್ದಾಳೆ. ಆದರೆ ಒಂದು ವಿಷಯದಲ್ಲಿ ಖಂಡಿತವಾದ ತೀರ್ಮಾನ; ನೀನೇನೂ ಹೇಳು ಮಗು–ನಿನ್ನ ಗಾಂಧಿ ಬ್ರಾಹ್ಮಣರೂ, ಹೊಲೆಯರೂ ಒಂದುಮಾಡುವುದನ್ನು ಮಾತ್ರ ನಾನು ಒಪ್ಪುವುದಿಲ್ಲ." ಎಂದುಬಿಡುತ್ತಾಳೆ.

"ಒಂದುಮಾಡುವುದೆಂದರೆ ಒಂದೇ ಮನೆಯಲ್ಲಿರುವುದಲ್ಲ."

"ಅವರನ್ನು ಮುಟ್ಟುವುದು, ಮಾಡುವುದು ಸಮವೇ? ಕೊರಗರು, ಕೂಸಾಳು ಎಂದು ಯಾರು ಮಾಡಿದ್ದು? ದೇವರೇ ಅಲ್ಲವೇ? ಯಾವ ಪಾಪ ಮಾಡಿ ಆ ಜನ್ಮ ಬಂದಿದೆಯೋ ಅವಕ್ಕೆ"

"ಅದನ್ನು ದೇವರೆಲ್ಲಿ ಮಾಡುತ್ತಾನೆ ಅಜ್ಜೀ? ಮನುಷ್ಯ ಮಾಡುವುದು ಅದನ್ನೆಲ್ಲ. ದೇವರಿಗೆ ತನ್ನ ಮಕ್ಕಳಲ್ಲಿ ಭೇಧವಿದ್ದೀತೇ. ವೇದಗಳಲ್ಲಿ ಈ ಅಸ್ಪರ್ಶತೆಗೆ ಆಧಾರವಿಲ್ಲ."

"ಹಾ, ವೇದ ಗೀದ ನನಗೇನು ಗೊತ್ತು? ನಮ್ಮ ಹಿರಿಯರಾರಿಗೂ ವೇದ ಗೊತ್ತಿಲ್ಲ ಅನ್ನುತ್ತೀಯ. ವೇದ ಶಾಸ್ತ್ರ ನಿನ್ನ ಗಾಂಧಿ ಒಬ್ಬನಿಗೇ ಗೊತ್ತು ಎನ್ನುತ್ತಿಯಾ" ಎಂದು ಮುದುಕಿ ತನ್ನ ಹಟ ಹಿಡಿದರೆ, ಆತನ ಹಟ ಮಣ್ಣು ಮುಕ್ಕುವುದು.

ಅವನು ನಿರುತ್ತರನಾಗುತ್ತಾನೆ. ಕೊನೆಗೆ ಉಪಾಯವಾಗಿ 'ಒಂದೊದು ಕಾಲದಲ್ಲಿ ಒಂದೊಂದು ತರಹೆ ಅಜ್ಜಿ; ಆಗಿನ ಕಾಲಕ್ಕೆ ಅದು ಸಮನಾಗಿರ ಬಹುದು. ಈಗಿನ ಕಾಲಕ್ಕೆ ಅದು ಒಪ್ಪುವುದಿಲ್ಲ' ಎಂದು ಹೇಳುತ್ತಾನೆ. ಅಲ್ಲಿಂದ ಮಾತು ಬೇರೆ ಕಡೆಗೆ ಹೊರಳುವುದು. ಹಾಗೇನೆ ಒಂದು ದಿವಸ ಆಚೀಚೆ ಮೊಮ್ಮಕ್ಕಳಿಲ್ಲದನ್ನು ಕಂಡು ಮುದುಕಿಯು ಪ್ರಸ್ತಾಪಿಸಿದಳು! "ಹೌದಾ ಇವರೇ, ನಾನು ಒಂದು ಸಂಗತಿ ಕೇಳುತ್ತೇನೆ. ಕೂಡದು ಎನ್ನಬಾರದು" ಎಂದಳು.

"ಏನು ಹೇಳಿ; ನನ್ನಿಂದಾಗುವುದಾದರೆ ಮಾಡುತ್ತೇನೆ" ಎಂದನು.

"ಆ ಮೇಲೆ ಅಲ್ಲ ಅಂದರೆ?"

"ಆಯಿತು ಅಂದ ಮೇಲೆ ಇಲ್ಲ ಅನ್ನುತ್ತೇನೆಯೇ. ಆಗುವ ಕೆಲಸ ವಾದರೆ ಮಾಡಬಹುದಲ್ಲಾ" ಎಂದನು. ಅವನ ಮನಸ್ಸಿನಲ್ಲಿ ಆ ಮುದುಕಿ ತನ್ನ ಬೇನೆಯ ವೇಳೆಯಲ್ಲಿ ಮಾಡಿದ ಉಪಚಾರಗಳನ್ನು ನೆನೆದು, ಕೃತ ಜ್ಞತೆ ತುಂಬಿದ ಕಾಲದಲ್ಲಿ, ಅಂಥ ಸಂದರ್ಭ ದೊರಕಿದರೆ ಸಂತೋಷ ಅನಿಸಿತು.

ಮುದುಕಿ ತುಸು ಸಮಯ ಬಾಯಿಯನ್ನು ಹಿಡಿದು "ಅಲ್ಲ ಮಗೂ, ನೀನೇನೆಂದು ತಿಳಿಯುತ್ತೀಯೋ! ನಮ್ಮ ಸತ್ಯನಿಗೆ ನೀನಂದರೆ ತುಂಬಾ ಆಸೆ. ಅವಳಿಗೆ ಲಗ್ನವಾಗುವ ಪ್ರಾಯ ಮೀರಿತು. ನಮಗೂ ಈ ಒಂದು ಸಂಬಂಧ ದೇವರು ನಡೆಯಿಸಿದರೆ ಆಗುತಿತ್ತು" ಎಂದಳು. ರಾಧಾಕೃಷ್ಣ ವಿಚಾರ ಮಗ್ನನಾಗಿ ಕುಳಿತನು. ಆಯಿತೆಂದು ಸುಲಭದಲ್ಲಿ ಉತ್ತರಿಸುವ ಪ್ರಶ್ನೆ ಅದಲ್ಲವಷ್ಟೆ.

"ಏನು, ಬೇಸರವಾಯಿತೇ" ಎಂದು ಆಕೆ ಕೇಳಿದಳು.

"ಬೇಸರವಿಲ್ಲ, ಹೆಣ್ಣು ಮಕ್ಕಳಿದ್ದವರು ಆ ಮಾತನ್ನು ಎತ್ತುವುದರಲ್ಲಿ ಆಶ್ಚರ್ಯವೂ ಇಲ್ಲ. ಆದರೆ ನಾನು ಮಾತ್ರ ಥಟ್ಟನೆ ಉತ್ತರ ಹೇಳು ವುದು ಕಷ್ಟದ ಕೆಲಸ."

"ಆಗಲಿ. ಯೋಚಿಸಿ, ಮನೆಯವರನ್ನು ಕೇಳಿ, ಹೇಳು."

ಅಂದಿನ ಸಂಭಾಷಣೆಯು ಏನೋ ಮುಗಿಯಿತು. ಅಲ್ಲಿಂದ ರಾಧಾ ಕೃಷ್ಣನ ಮನಸ್ಸು ಸಮುದ್ರ ಮಂಥನಕ್ಕೆ ತೊಡಗಿತು. ಈ ವಿಷಯವಾಗಿ ಮನೆಯವರನ್ನು ಕೇಳುವ ಸಂಗತಿ ಉಳಿದಿಲ್ಲ. ತನ್ನ ಪಾಲಿನ ನಿರ್ಧಾರ ತಾನು ಮಾಡಬೇಕಾದದ್ದು ಮುಖ್ಯ. ಹಿಂದಿನ ತನ್ನೆಲ್ಲ ವಿಚಾರ, ನಿರ್ಧಾ ರಗಳ ನೆನಪಾಗುತ್ತದೆ. ಆಲೆಮನೆಗೆ ತಾನು ಬರುವ ಮೊದಲು, ಕೃಷ್ಣ ಪ್ಪನವರೊಡನೆ ಆಡಿದ ವೀರ ವಾಕ್ಯಗಳ ನೆನಪಾಯಿತು. ಸೇವೆಗೆ— ಎಂದು ಹೊರಟ ತಾನು, ಸಂಸಾರದ ಉರುಳಿಗೆ ಸಿಲುಕಿಕೊಂಡರೆ ಹೇಗಾ ದೀತು-ಎಂಬ ಭೀತಿಯು ತಲೆದೋರಿತು. ಬರಿಯ ಲಗ್ನಕ್ಕೆ ಕೊನೆಯೇ? ದಾಂಪತ್ಯ, ಮನೆಮಾರು, ಮಕ್ಕಳು, ಮರಿಗಳು ಒಂದೊಂದೇ ಬರತಕ್ಕವು. ತಾನು ಗುಲಾಮರ ಸಂಖ್ಯೆಯ ವಿಷಯವಾಗಿ ಮಾತನಾಡಿದ್ದು ನೆನಪಾ ಯಿತು. ನಗುವೂ ಬಂದಿತು. ಓದಿ, ಕೇಳಿ, ಕಲಿತ ಅನುರಕ್ತಿ ಅವನನ್ನು ನಿಷೇಧ ಮಾರ್ಗಕ್ಕೆ ಸೆಳೆಯುತ್ತಿದ್ದಾಗಲೇ, ಅವನ ಮಾನವೀ ಸಹಜ ಸ್ವಭಾವ, ಸತ್ಯಳ ನಗು, ಚೆಲುವುಗಳು ಅವಳನ್ನು ಕುರಿತು ನೆನಪು ಹುಟ್ಟಿ ಸುತಿದ್ದುವು. ಅವಳ ಸ್ನೇಹದ ಬಯಕೆಯನ್ನು ಪ್ರೇರಿಸುತ್ತಿದ್ದವು. ತನ್ನೆರಡು ಬಾರಿಯ ಬೇನೆಗಳಲ್ಲಿ ತನ್ನ ಸೇವೆಗೆ ನೆರವಾದ ಆಕೆಯ ಋಣ ತೀರಿಸುವ ಬಗೆಯಾವುದು-ಎಂದು ತನ್ನನ್ನೇ ಆತ ಕೇಳಿಕೊಳ್ಳುತ್ತಾನೆ. ಒಂದೊಂದು ಬಾರಿ—ತತ್ಕಾಲಿಕವಾಗಿ ಮಾಡಿದ ಅವರ ಸೇವೆಗೆ ಬದಲಾಗಿ, ತನ್ನನ್ನು ಯಾವಜ್ಜೀವ ಮಾರಿಕೊಳ್ಳುವ ಬೆಲೆ ಹೆಚ್ಚಿನದಲ್ಲವೇ?—ಎಂದು ಕೊಳ್ಳು ತ್ತಾನೆ. ಇನ್ನೂ ಮನಸ್ಸಿನ ಕಲ್ಲೋಲವು ಶಾಂತವಾಗಲೊಲ್ಲದು. ಆದರೆ ಎಡೆಯಲ್ಲಿ ಪುಟ್ಟದೊಂದು ಆಶಾ ಕಿರಣವೂ ಹುಟ್ಟುತ್ತದೆ. ಆಕೆಯು 'ತನ್ನ ಜತೆಯಲ್ಲಿ ದೇಶ ಸೇವೆಗೆ ನೆರವಾದರೆ, ಲಗ್ನವಾದಲ್ಲಿ ಅಡ್ಡಿಯೇನು?' ಎಂಬ ತೀರ್ಮಾನವನ್ನು ತಂದುಕೊಂಡನು. ಅದರಿಂದ ಒಂದು ರಾತ್ರಿ, ಶೇಷಮ್ಮ ನವರೊಡನೆ ಮಾತನಾಡುತ್ತ ಕುಳಿತಾಗ ಮನಸ್ಸನ್ನು ಬಿಚ್ಚಿದನು! "ನೀವು ಹೇಳುವಾಗ ಅಲ್ಲವೆನ್ನಲಾರೆ. ಹುಡುಗಿಯು ನನ್ನ ಮನಸ್ಸಿಗೆ ಬಂದಿದ್ದಾಳೆ.

ನನ್ನ ಸ್ಥಿತಿಯೂ ನಿಮಗೆ ಗೊತ್ತು. ನನ್ನ ರೀತಿ, ನೀತಿ ಗೊತ್ತು. ನಮ್ಮ ಮನೆಯವರ ದಾರಿ ಬೇರೆ ಎಂಬುದೂ ನಿಮಗೆ ಗೊತ್ತು. ಇಂಥಹ ಸಂದರ್ಭದಲ್ಲಿ—ನೀವು ಹುಡುಗಿಯ ಮನಸ್ಸು ಏನೆಂಬುದನ್ನು ತಿಳಿದುಕೊಳ್ಳಬೇಕು. ನಾಳಿನ, ಕಷ್ಟ, ನಿಷ್ಠುರಗಳು ಅವಳಿಗೆ; ಇನ್ನಾರಿಗೂ ಅಲ್ಲ."

"ಅವಳು ಒಪ್ಪದೆ ಇರುತ್ತಾಳೆಯೇ."

"ಹಾಗಲ್ಲ-ಮದುವೆಗೆ ಅವಳು ಒಪ್ಪಬಹುದು. ನಾಳೆ ನನ್ನೊಂದಿಗೆ ಜೀವನ ಮಾಡಲು ಸಾಧ್ಯವಾಗಬೇಕಲ್ಲ: ನನ್ನ ಮನೆ, ಮಠಗಳನ್ನು ನಂಬಿ ಆ ಯೋಚನೆ ಮಾಡಿ ಉಪಯೋಗವಿಲ್ಲ."

"ಗಂಡನೆಂದ ಮೇಲೆ ಹೇಳಿದ ಹಾಗೆ ಇರಬೇಕು."

"ಇರಬೇಕು ಎನ್ನುವ ವಿಚಾರ ಬೇರೆ. ಹ್ಯಾಗೆ ಇರಬೇಕಾದೀತು ಎಂಬುದನ್ನು ಊಹಿಸಿ ತಿಳಿದು, ಒಪ್ಪತಕ್ಕ ವಿಚಾರ ಬೇರೆ."

"ಅದಕ್ಕೇನು ಮಾಡಬೇಕೆನ್ನುತ್ತೀ?"

"ಅವಳನ್ನೇ ಕೆಲವು ವಿಷಯಗಳಲ್ಲಿ ಕೇಳುವುದು ಒಳ್ಳೆಯದಲ್ಲವೆ."

"ಅವಳಿಗೇನು ತಿಳಿಯುತ್ತದೆ ಎಂದು"?

"ತಿಳಿಯಲಿ, ತಿಳಿಯದೆ ಇರಲಿ—ಕೇಳಬೇಕಾದುದು ನನ್ನ ಕರ್ತವ್ಯ"

ಶೇಷಮ್ಮನವರ ಕೆಲಸಕ್ಕೆ ವಿಜಯ ದೊರಕಿದಂತೆಯೆ. ಉಳಿದ ಕಾರುಭಾರಗಳೆಲ್ಲ ಸಣ್ಣ ಪುಟ್ಟ ಸಂಗತಿಗಳು ಮೊಮ್ಮಗಳನ್ನು ಒಪ್ಪಿಸುವ ಕೆಲಸ--ಅವಳ ರೀತಿಯಿಂದಲೇ ಅದು ನಿರ್ಧಾರವಾಗಿ ಬಿಟ್ಟಿದೆಯಲ್ಲ.

ಒಂದು ಸಂಜೆ ಅವರ ಮನೆ ಮಹಡಿಯಲ್ಲಿ ಉಪಾಹಾರಕ್ಕೆ ರಾಟಿ ಮಾಸ್ತರರನ್ನು ಕುಳ್ಳಿಸಿದ್ದರು. ಅಜ್ಜಿಯು ಮೊಮ್ಮಗಳನ್ನು ಕರೆದುಕೊಂಡು ಅಲ್ಲಿಗೇನೇ ಬಂದಳು. ಅಕ್ಕನ ಬಾಲವಾಗಿ ತಂಗಿಯೂ ಬಂದು "ಅಜ್ಜಿ, ಇವತ್ತು ಮಾಸ್ತರಿಗೆ ಮೇಲೆ ಯಾಕೆ ತಿಂಡಿ?" ಎಂದು ಕೇಳಿಯೇ ಕೇಳಿದಳು. ಅಜ್ಜಿಗೆ, ಉಪಾಯವಾಗಿ ಅವಳನ್ನು ನಿವಾರಿಸಲು ಸಾಧ್ಯವಾಗಲಿಲ್ಲ. ತಾನು ಹೊರಡುವಾಗ-"ಬಾರೇ ಅಧಿಕ ಪ್ರಸಂಗಿ" ಎಂದು ಗದರಿಸಿ, ಕರೆದುಕೊಂಡು ಹೋಗಬೇಕಾಯಿತು. ದಾರಿಯಲ್ಲಿ ಆಕೆಯು "ಅಜ್ಜಿ, ಅಕ್ಕನನ್ನು ಮಾಸ್ತರರು ಮದುವೆಯಾಗುತ್ತಾರೇನು?" ಎಂದು ಕೇಳಿದಳು. ಅಜ್ಜಿಯು ಅದಕ್ಕೆ "ನೀವು ಗೇಣು ಉದ್ದದ ಮಕ್ಕಳಿಗೆ ಎಷ್ಟೆಲ್ಲ ಅಧಿಕ ಪ್ರಸಂಗ?" ಎಂದಳು.

ಉಪಾಹಾರ ಮಾಡುತ್ತ ಕುಳಿತ ರಾಧಾಕೃಷ್ಣನು ಬಲು ಹೊತ್ತು ಮೂಕನಾಗಿದ್ದ. ತಲೆ ತಗ್ಗಿಸಿಕೊಂಡು ಸತ್ಯಳನ್ನು ನೋಡುತ್ತಿದ್ದರೆ ಅವಳು ನೆಲವನ್ನು ನೋಡುತ್ತಿದ್ದಳು. ಒಂದೆರಡು ಬಾರಿ ಕದ್ದು ನೋಡಿದಳು. ಆತನಿಗೆ ಅವಳನ್ನು ಏನೆಂದು ಮಾತನಾಡಿಸುವುದಕ್ಕೂ ತೋಚಲಿಲ್ಲ. ಕೊನೆಗೆ "ಅಜ್ಜಿ, ಕರೆದು ತಂದದ್ದು ಏಕೆಂದು ತಿಳಿಯಿತೇ" ಎಂದು ಕೇಳಿದನು.

"ಏಕೋ"

"ನಿನಗೆ ನನ್ನನ್ನು ಮದುವೆಯಾಗುವುದರಲ್ಲಿ ಇಷ್ಟವೇ?"

"ನನಗೇನು ಗೊತ್ತು, ಅವರಲ್ಲವೇ ಕೊಡುವವರು, ಬಿಡುವವರು?"

"ಅದಲ್ಲ ನಾನೆನ್ನುವುದು. ನನ್ನ ರೀತಿಗಳು ನಿನಗೆ ಗೊತ್ತು. ಮದುವೆಯಾದರೆ ನನ್ನೊಂದಿಗೆ ಇರಬೇಕಾದವಳು ನೀನು. ನನಗಂತೂ ಮೊದಲಿನಿಂದಲೂ ಲಗ್ನವಾಗುವ ಆತುರವಿಲ್ಲ."

ಆಕೆ ಮೌನ. ಅವಳ ಕಾಲು ಅನುಮಾನದಿಂದ ಹಿಂದಕ್ಕೆ ಸರಿಯಿತು.

"ಗಾಬರಿಯಾಗ ಬೇಡ. ಈಗೇನೋ ಲಗ್ನಕ್ಕೆ ಒಪ್ಪಿದ್ದೇನೆ. ಆದರೆ ನನ್ನ ಮನಸ್ಸಿನ ರೀತಿಗೆ ಕೂಡುವವರು ಬೇಕು. ನನಗೆ ನನ್ನ ಆಯುಷ್ಯವನ್ನು ದೇಶಸೇವೆಯಲ್ಲಿ ಕಳೆಯಬೇಕೆಂದು ಬಯಕೆ. ಮನೆಯವರ ದೃಷ್ಟಿಗೂ, ನನ್ನ ದೃಷ್ಟಿಗೂ ಹೊಂದುತ್ತಲಿಲ್ಲ. ಅವರ ಸಹಾಯವಿಲ್ಲದೆ ನಾನು ಬದುಕ ಬೇಕಾದವನು. ಬಡವನಾಗಿ ಬಾಳ ಬೇಕಾದೀತು. ನೀವು ಅನುಕೂಲವಂತರ ಮನೆಯವಳು. ಅಲ್ಲದೆ ಇನ್ನೊಂದು ಮುಖ್ಯ ಸಂಗತಿ- ನಾಳಿನ ನನ್ನ ಕೆಲಸ ಏನೆಂದೇ ಹೇಳಲಾರೆ. ಹೊಲೆಯರಿಗಾಗಿ ಒಂದು ಶಾಲೆ ತೆರೆದರೂ ತೆರದೆನೇ. ನಿಮ್ಮ ಮನೆಯಲ್ಲಿ ಈಗ-ಹೊಲೆಯರು ಗದ್ದೆಯ ಅಂಚಿನಲ್ಲಿ ನಿಲ್ಲಬೇಕು. ನನ್ನಲ್ಲಿ ಹಾಗಾಗಬಾರದಲ್ಲ. ಅಂಥವೆಲ್ಲ ನಿನಗೆ ಸೇರದೆ ಹೋದೀತು. ನಾಳೆ ನನ್ನಂತೆಯೆ ನೀನು ದಪ್ಪನಾದ ಖಾದಿ ಹಚ್ಚಡ. ತೊಡಬೇಕಾದೀತು. ನಿನಗೆ ಅಂಥವೆಲ್ಲ ಒಪ್ಪೀತೇ."

"ಅದನ್ನೆಲ್ಲ ಕೇಳುವುದೇನು?"

"ನಾಳೆ ಅನುಭವಿಸುವವಳು ನೀನು ಎಂಬುವುದರಿಂದ."

"ಅದೇನು ಮಹಾ ಸಂಗತಿ? ನಿಮಗೆ ಇದ್ದದ್ದು ನನಗೆ."

"ಎಲ್ಲ ವಿಷಯಗಳಲ್ಲೂ"

"ನಾನು ಹೋಗುತ್ತೇನೆ" ಎಂದು ಆಕೆ ಅಲ್ಲಿಂದ ಎದ್ದೇಬಿಟ್ಟಳು.

ಹರ್ಷಚಿತ್ತನಾದ ಆತನು ಅವಳ ಕೈಯನ್ನು ಹಿಡಿದು, ತಡೆಯಲು ನೋಡಿದನು. ಬೆರಳು ಸರಿದು, ಆಕೆ ನೇರಾಗಿ ಅಡುಗೆಯ ಮನೆಯನ್ನು ಸೇರಿಯೇ ಬಿಟ್ಟಳು.

ಆ ರಾತ್ರಿಯ ಸಭೆಯಲ್ಲಿ ಶೇಷಮ್ಮನವರ ಬಯಕೆಗೆ ಪರಿಪೂರ್ಣ ವಿಜಯ. ಮಂಜಯ್ಯನವರು ಈ ಸಂಧಾನದ ಫಲಿತಕ್ಕೆ ಕಿವಿ ನಿಮಿರಿಸಿಕೊಂಡು ಕಾದಿದ್ದರು. ಹಾಗೂ ಹೀಗೂ, ಈ ಒಬ್ಬ ಮಗಳನ್ನು ನೀಗಿಸಿಕೊಂಡರೆ ಮುಂದೆ ಕಷ್ಟ ಬರಲಾರದು. ಉಳಿದ ಮಕ್ಕಳ ಜಾತಕಗಳು ಒಳ್ಳೆಯವು-ಎಂದು ಉಸಿರುಗರೆದರು. ಹಿರಿಯಾಕೆ ಸತ್ಯಳು ಅವರ ಮೆಚ್ಚಿನ ಹುಡುಗಿ. ಅವಳ ಮದುವೆಯನ್ನು ಬಹಳ ವಿಜೃಂಭಣೆಯಿಂದ ಜರುಗಿಸಬೇಕೆಂದು ಅವರ ಅಪೇಕ್ಷೆ. ಆದರೆ ಶೇಷಮ್ಮಗೂ, ರಾಧಾಕೃಷ್ಣನಿಗೂ ನಡೆದ ಸಂಭಾಷಣೆಯ ರೀತಿ ಬೇರೆಯೇ ಹಾದಿಯನ್ನು ಹಿಡಿದಿತ್ತು.

"ಮದುವೆಗೇನೋ ಒಪ್ಪಿಗೆ. ಆದರೆ ಲಗ್ನ ನನ್ನಿಷ್ಟದಂತೆ ಆಗಬೇಕು. ನಾನು ತಂದೆಯನ್ನು ಕೇಳುವುದಿಲ್ಲ. ಅವರನ್ನು ಒಲಿಸುವ, ಇಲ್ಲವೆ ಬಿಡಿಸುವ ಕೆಲಸ ಮಂಜಯ್ಯನವರದು"

"ಅದಿರಲಿ"

"ಇನ್ನು ಲಗ್ನದ ವಿಚಾರ. ಅದನ್ನು ಎಷ್ಟು ಸುಲಭದಲ್ಲಿ, ಎಷ್ಟು ಕಡಿಮೆ ಖರ್ಚಿನಲ್ಲಿ ಮಾಡುತ್ತೀರೋ ಮಾಡಬೇಕು. ಹಾಗೆ ಮಾಡಿ ಆದ ಉಳಿತಾಯವನ್ನೆಲ್ಲ ಗಾಂಧೀ ಫಂಡಿಗೆ ಕೊಡಬೇಕು. ಮದುವೆಯ ಮನೆಗೆ ಸಕ್ಕರೆ ಬರಕೂಡದು. ಮದುವಣಿಗಿತ್ತಿಗೆ ಖಾದಿ ಉಡಿಸಬೇಕು" ಎಂದು ಒಂದೊಂದಾಗಿ ಗಾಂಧಿ ಕರಾರುಗಳನ್ನು ಹಾಕಿದನು. ಮುದುಕಿ ಅದನ್ನೆಲ್ಲ ಸುಲಭದಲ್ಲಿ ಒಪ್ಪಿಕೊಂಡರೂ, ಆ ನಿರ್ಣಯಗಳೆಲ್ಲ ಮಂಜಯ್ಯನವರ ಉತ್ಸಾಹವನ್ನು ಮುಕ್ಕಾಲು ಮೂರುವೀಸದಷ್ಟು ಅಪಹರಿಸಿದುವು. ಆಲೆಮನೆಯವರ ಹಿರಿಯ ಮಗಳ ಲಗ್ನವಲ್ಲವೇ! ಅದು ಇಷ್ಟು ಸಪ್ಪೆಯಾಗಿ ನಡೆಯಬೇಕೆಂಬ ವಿಚಾರ ಅವರ ಗಾಂಭೀರ್ಯಕ್ಕೆ ಕಡಮೆ. 'ಇಂಥ ನೂರು ಅಳಿಯಂದಿರನ್ನು ಕ್ರಯಕ್ಕೆ ಕೊಂಡೇನು ಎನ್ನುವ ಅವರ ಠೀವಿ, ಮಗಳ ಜಾತಕದ ಕೆಡು ನಕ್ಷತ್ರದ ನಿಮಿತ್ತವಾಗಿ ನಮ್ರವಾಗಬೇಕಾಯಿತು.

ಒಪ್ಪಿಕೊಂಡರು; "ಆಗಲಿ" ಎಂದರು. ಅಳಿಯ ದೇವನನ್ನು ಒಪ್ಪಿಸದೆ ಯಾವ ಕೆಲಸವೂ ಇಲ್ಲವಷ್ಟೆ. ಅಲ್ಲಿಂದ ತಿಥಿ, ಮುಹೂರ್ತ ನೋಡಿ

ಕೊಂಡು ರಾಮಪ್ಪಯ್ಯನವರಲ್ಲಿಗೆ ರಾಯಭಾರಕ್ಕೆ ಹೋದರು. ಹೋಗಿ "ಸ್ವಾಮಿ, ನಿಮಗೆ ಅಷ್ಟು ಅಪನಂಬಿಕೆ ಇದ್ದರೂ ನನಗೆ ಅಷ್ಟೇ ಧೈರ್ಯವಿತ್ತು. ಹುಡುಗನು ಒಪ್ಪಿಗೆಯನ್ನು ಪಡದೇ ಬಂದಿದ್ದೇನೆ. ಇನ್ನು ಬೇಕಾದದ್ದು ನಿಮ್ಮ ಆಶೀರ್ವಾದ" ಎಂದರು.

"ಎಲ್ಲಿದ್ದಾನೆ ಅವನೀಗ-ಬೈಂದೂರಲ್ಲೇ?"

"ತತ್ಕಾಲಕ್ಕೆ ನಮ್ಮಲ್ಲಿಯೆ ಇದ್ದಾನೆ. ನಾಳೆ ಬಂದಾನು ಇಲ್ಲಿಗೆ." ಆ ಕೊನೆಯ ವಾಕ್ಯಕ್ಕೆ ಯಾವ ಆಧಾರವೂ ಇದ್ದಿಲ್ಲ.

"ಓ, ಅಳಿಯನನ್ನು ಹಿಡಿದು ಹಾಕಿಯೇ. ನಮಗೆ ತಿಳಿಸಲು ಬಂದಿರೋ?"

"ಏನು ನಿಮ್ಮ ಅಭಿಪ್ರಾಯ? ನೀವು ದೊಡ್ಡ ಮನಸ್ಸು ಮಾಡಿ, ಅವನ ತಪ್ಪೇನಾದರೂ ಇದ್ದರೆ ಕ್ಷಮಿಸಿ, ನಮ್ಮದೇನಿದ್ದರೂ ಮನ್ನಿಸಿ, ಲಗ್ನಮಾಡಿಸಿ ಕೊಡಬೇಕು" ಎಂದರು. ಇಷ್ಟೊಂದು ಸೌಜನ್ಯ ಅವರ ಶೀಲದಲ್ಲಿ ಎಂದೂ ಬಂದಿರಲಿಲ್ಲ. ತಾಯಿಯ ಅಪ್ಪಣೆಯಂತೆ ಆ ರೀತಿಯಲ್ಲಿ ಸಂಧಾನವಾಗಬೇಕಿತ್ತು.

"ನೋಡುವ" ಎಂದು, ಒಂದು ಮಾತಿನಿಂದ ಮುಗಿಸಿಬಿಟ್ಟರು ರಾಮಪ್ಪಯ್ಯ.

"ನಿಮ್ಮ ಅಭಿಪ್ರಾಯವೇನು?" ಎಂದು ಮಂಜಯ್ಯನವರು ತಿರುತಿರುಗಿ ಕೇಳುತ್ತಲೇ, ಅವರು ಸ್ಪಷ್ಟವಾಗಿಯೇ "ನಮ್ಮ ಪಾಲಿಗೆ ಅವನು ಎಂದೇ ಹೋದವನು. ತಂದೆ ತಾಯಿಗಳಿಗೆ ಬಗ್ಗದ ಮಗನಿಗೂ ಅರಿಷ್ಟ ತರುವ ಸೊಸೆಗೂ, ಒಳ್ಳೆಯ ಜತೆ" ಎಂದರು.

"ಮಂಜಯ್ಯನವರೇ, ನಾವು ಮುದುಕರು ನಿಜ. ಆದರೆ ತಿಳಿದೂ ತಿಳಿದೂ ಮನೆಗೆ ಮೂಲಾ ನಕ್ಷತ್ರದ ಸೊಸೆಯನ್ನು ತರಲಿಕ್ಕೆ ಬಂದೀತೇ" ಎಂದು ನಿರಾಕರಿಸಿಬಿಟ್ಟರು.

ಮಂಜಯ್ಯನವರು ಹತಾಶರಾದರು. ಮುಂದಿನ ಮಾತಿಗೆ ಅವಕಾಶವಿರಲಿಲ್ಲ. ಜಾತಕದ ವಿಚಾರ ಇಬ್ಬರಿಗೂ ತಿಳಿದಿದ್ದ ವಿಷಯ. ಹಾಗಾಗಿ ಅಂಜಿ ಮನೆಗೆ ಹಿಂದಿರುಗಿದರು. ತಂದೆ ಒಪ್ಪದ ಮೇಲೆ ಮಗ ಏನು ಮಾಡುತ್ತಾನೋ ಎಂಬ ಅಧೈರ್ಯ ಅವರಿಗೆ. ತಮ್ಮ ತಾಯ ಮುಂದೆ ಅದೆಲ್ಲವನ್ನೂ ಹೇಳಿಕೊಂಡರು. ಅಲ್ಲಿಗೆ ರಾಧಾಕೃಷನೂ ಬಂದನು. ಅವರು

ಹೇಳುವ ಮಾತು ತಿಳಿದೇನೆ ಇತ್ತು. "ನನಗೆ ನಿಮ್ಮ ನಕ್ಷತ್ರ ಗಿಕ್ಷತ್ರಗಳಲ್ಲಿ ನಂಬಿಕೆ ಇಲ್ಲ. ಅದು ಸಮನಾಗಿದ್ದರೂ ನಮ್ಮ ತಂದೆಗೆ ಇದನ್ನು ಒಪ್ಪುವ ಬುದ್ಧಿ ಬರುತ್ತಿರಲಿಲ್ಲ. ನೀವು ಏನೂ ಯೋಚಿಸಬೇಕಾಗಿಲ್ಲ. ನಾನು ಆಡಿದ ಮಾತು ಮಾತೇ. ಆದರೆ ಒಮ್ಮೆ ಡಾಕ್ಟರರ ಮನೆಗೆ ಹೋಗಿ ಬರುತ್ತೇನೆ. ಅಲ್ಲಿಂದ ದಿನವನ್ನೂ ಮತ್ತೊಂದನ್ನೂ ನಿಶ್ಚಯಿಸಬಹುದು"ಎಂದನು.

ಈ ಬಾರಿ ಕಾಲುದಾರಿಯಿಂದ ಅವನು ಬೈಂದೂರಿಗೆ ಹೊರಡಲಿಲ್ಲ. ರಾತ್ರಿ ಗಾಡಿಯನ್ನು ಕಟ್ಟಿಸಿದರು. ಬಳಸಿನ ದಾರಿಯಾಗಿ, ಬೆಳಗಾಗುವಾಗ ಅದು ಬೈಂದೂರನ್ನು ಸೇರಿತು. ಮಂಜಯ್ಯನವರಿಗೆ ಅಳಿಯನ ಬೆನ್ನು ಬಿಡಲಿಕ್ಕೆ ಈಗಾಗಲೇ ಅಂಜಿಕೆ. ತನಗೂ ಬೈಂದೂರಲ್ಲಿ ಕೆಲಸವಿದೆ ಎಂದು ಅವರೂ ಅವನ ಜತೆಗೆ ಬಂದಿದ್ದರು. ಇಬ್ಬರೂ ಕೃಷ್ಣಪ್ಪನವರಲ್ಲಿ ಇಳಿದುಕೊಂಡರು. ಆದರದ ಸ್ವಾಗತವಾಯಿತು. ಬಂದ ಕೆಲಸವನ್ನು ತಿಳಿಸಿದ್ದಾಯಿತು. ಅವರು ಅದನ್ನು ಕೇಳಿ ಹೊಟ್ಟೆ ತುಂಬ ನಕ್ಕರು. "ಏನೋ, ಇದು ಸ್ವರಾಜ್ಯ ಸಂಪಾದನೆಗೆ ಇನ್ನೊಬ್ಬ ವಾಲೆಂಟಿಯರನ್ನು ಕಟ್ಟಿಕೊಳ್ಳುತ್ತೀಯಾ"? ಎಂದರು. ಆತನೂ ನಕ್ಕ. ಕೃಷ್ಣಪ್ಪನವರು "ಹೋಗಲಿ ಬಿಡಿ, ರಾಮಪ್ಪಯ್ಯನವರನ್ನು ಒಪ್ಪಿಸಲು ನಾನು ಯತ್ನಿಸುತ್ತೇನೆ, ಆಗದೆ ಹೋದರೆ ಗಂಡಿನ ಕಡೆಯ ಯಜಮಾನ ನಾನೇ-ಎಂದು ತಿಳಿಯಿರಿ" ಎಂದರು.

ಕೊನೆಗೂ ಆದುದು ಹಾಗೆಯೇ ಅನ್ನಿ. ಕೃಷ್ಣಪ್ಪನವರ ರಾಯಭಾರವು ವ್ಯರ್ಥವಾಯಿತು. ತನ್ನ ಮಗನ ತಲೆಯನ್ನು ಕೆಡಿಸಿದ ಆರೋಪದ ಪಾಲು ಅವರಿಗೂ ಬಂದಿತು. ರಾಮಪ್ಪಯ್ಯನವರ ಹೆಂಡತಿ ಕಣ್ಣೀರು ಕರೆದದ್ದು ವ್ಯರ್ಥವಾಯಿತು. ಅವರಿಲ್ಲದೆಯೇ ಕೃಷ್ಣಪ್ಪನವರ ದರ್ಬಾರಿನಲ್ಲಿ ಮದುವೆ ಜರಗಿತು. ತಂದೆಗೆ ತಿಳಿಸದೆ ಉಡುಪಿಗೆ ಹೋಗುತ್ತೇನೆಂದು ಸುಳ್ಳುಹೇಳಿ, ಅನಂತರಾಮನು ಮಾತ್ರ ಮದುವೆಗೆ ಬಂದಿದ್ದನು. ಬಂದು ಇದ್ದ ನಾಲ್ಕು ದಿನವೂ "ಅಪ್ಪನಿಗೆ ತಿಳಿದರೆ ನನ್ನನ್ನು ಸಿಗಿದು ಹಾಕುತ್ತಾರೆ" ಎನ್ನುತ್ತಲೇ ಇದ್ದ. ಅವನ ಮನಸ್ಸಿಗೆ ಮಾತ್ರ ತುಂಬ ತೃಪ್ತಿಯಾಯಿತು. ಅಣ್ಣನಿಗೆ ಲಗ್ನವಾಗದೆ, ತನಗೆ ಆದುದರ ಬಗ್ಗೆ ಅವನಿಗೆ ವಿಷಾದ ಇತ್ತು. ಈಗ ಅದು ಮಾಯವಾಯಿತು.

ಲಗ್ನದ ಕಾಣಿಕೆಯಾಗಿ ಇನ್ನೊರು ರೂಪಾಯಿಗಳನ್ನು ಮಂಜಯ್ಯನವರು ಮದುವಣಿಗನ ಕೈಮೇಲಿರಿಸಿ—"ಇದನ್ನು ಯಾವ ಫಂಡಿಗೂ

ಹಾಕು, ರಾಟೆ ಮಾಡಿಸು, ಮಗ್ಗ ಇರಿಸು" ಎಂದರು. ಮನೆಗೆ ಬಂದ ನೆಂಟರಿಷ್ಟರ ಮುಂದೆ, ಬಡತನದ ಲಗ್ನಕ್ಕೆ ನೆಪವಾಗಿ "ಇನ್ನೆಲ್ಲ ಲಗ್ನಗಳು ಈ ಸುಧಾರಣೆಯ ಕ್ರಮದಲ್ಲೇ ನಡೆಯಬೇಕು. ಅನಾವಶ್ಯಕದ ದುಂದುಗಾರಿಕೆಯಿಂದ ಫಲವೇನು?" ಎಂದು ಉಪನ್ಯಾಸ ಮಾಡುತ್ತಿದ್ದರು. ಮನಸ್ಸಿನಲ್ಲೇನೋ, ವಾಗ್ದೇವಿ ಲಕ್ಷ್ಮಿಯರ ಮದುವೆಯನ್ನು ಚಕ್ರಬಡ್ಡಿ ಕೂಡಿಸಿ ಜೋರಾಗಿ ನಡೆಯಿಸಬೇಕು ಎಂಬ ಬಯಕೆ ತುಂಬಾ ಇದೆ.

ಮದುಮಗಳು ಕುಂದಾಪುರಕ್ಕೆ ಹಿರಿಯರ ಮನೆಗೆ ಹೋಗುವುದಕ್ಕೆ ಅಂಜಿಕೆಯಾಗಿ, ಕೃಷ್ಣಪ್ಪನವರಲ್ಲಿಗೆ ಹೋದರು. ಅದು ಶೇಷಮ್ಮನವರ ಮನಸ್ಸಿಗೆ ಬರಲಿಲ್ಲ. ಅವರೆನ್ನುತ್ತಾರೆ; "ಮಗನೂ, ಸೊಸೆಯೂ ಹೋದರೆ ಕುತ್ತಿಗೆಗೆ ಕೈ ಹಾಕಿ ತಳ್ಳುವ ಧೈರ್ಯ ಬಂದಿತೇ" ಎಂದು. ಅದಕ್ಕೆ ಡಾಕ್ಟರರು ಎಂದರು "ರಾಮಪ್ಪಯ್ಯನವರು ನಮ್ಮ ನೆಂಟರು, ಅವರ ಗುಣ ನನಗೆ ಗೊತ್ತು. ಅವರ ಮೂಗಿನ ಮೇಲೆಯೇ ನರಸಿಂಹ ಅವತಾರವಿದೆ. ಸಿಟ್ಟು ಬಂದರೆ ಅವರಿಗೆ ಹಿಂದೂ ಇಲ್ಲ,ಮುಂದೂ ಇಲ್ಲ. ಅವರಿಗೆ ಮುಖ್ಯವಾದ ಹೆದರಿಕೆ ಎಂದರೆ-ಸೊಸೆಯ ನಕ್ಷತ್ರದ ಫಲದಿಂದಾಗಿ ತಾನೆಲ್ಲಾದರೂ ಸತ್ತು ಬಿಡುತ್ತೇನೆಯೋ ಎಂದು. ಉಳಿದ ಎಲ್ಲಾ ವಿಚಾರಗಳಲ್ಲಿಯೂ ಅವರನ್ನು ಒಲಿಸ ಬಹುದಿತ್ತು. ನೀವು ಆಸ್ತಿ, ಮನೆ ಇದ್ದವರೆಂದು ಅವರಿಗೆ ತಿಳಿದಿಲ್ಲವೇ? ದೊಡ್ಡ ನೆಂಟಸ್ತಿಕೆ ಎಂದರೆ ಬಾಯಿಬಿಡುವ ಸ್ವಭಾವ ಅವರದ್ದು" ಎಂದು ಹೇಳಿದರು.

ರಾಧಾಕೃಷ್ಣನ ಬೇಸರದ ದಿವಸಗಳು ಹೊಸ ದಾಂಪತ್ಯದಿಂದಾಗಿ ಹರ್ಷಪೂರ್ಣವಾಗಿಯೇ ಸಾಗಿದುವು. ಪ್ರತಿ ದಿನ ಕೆಲವು ಸಮಯವನ್ನಾದರೂ ಸತ್ಯಳೊಡನೆ ಕುಳಿತು ತಮ್ಮ ಭವಿಷ್ಯ ಚಿಂತನೆ ಮಾಡುವುದರಲ್ಲಿ ಕಳೆಯುತ್ತಾನೆ. ನವಯುಗಕ್ಕೆ ತಕ್ಕಂತೆ ತನ್ನ ಜೀವ ಸಂಗ್ರಾಮದ ಪಾಲುಗಾರ್ತಿಯಾಗಲು, ಅವಳಲ್ಲಿ ತನ್ನ ಏನೇನು ಬಯಕೆಗಳಿವೆಯೋ, ಅವನ್ನು ಪ್ರಕಟಿಸುತ್ತಿದ್ದನು. ಬಾಹ್ಯಜಗತ್ತಿಗೆ, ಹೆಚ್ಚು ಅವಳು ಹೊಸಬಳಾದ ಅವನನ್ನುವುದೆಲ್ಲವನ್ನೂ ಕುತೂಹಲದಿಂದ ಕೇಳುತ್ತಾಳೆ. ಸ್ವತಃ ಅವಳಿಗೆ ಏನು ಅನ್ನುವುದಕ್ಕೂ ಬಾರದು. ಅವನ ಮನವನ್ನು ಒಲಿಸುವುದರ ಸಲುವಾಗಿ ದಿನದಲ್ಲಿ ತಾಸು ಎರಡು ತಾಸು ಕಾಲ ನೂಲು ಮಾಡುತ್ತಾಳೆ. ಅದನ್ನು ಹೆಗ್ಗಳಿಕೆಯಿಂದ ಅವನ ಮುಂದಕ್ಕೆ ಇರಿಸುತ್ತಾಳೆ. ಅದನ್ನು ರಾಧಾಕೃಷ್ಣ ಮಾವ

ನಿಗೆ ತೋರಿಸಿ "ನಾಳೆ ನಿಮ್ಮ ಹುಣಿಸೆಬಿಟ್ಟನವನ ಜೇಡರವನಿಂದ ಇದನ್ನು ನೇಯಿಸಿ ನಿಮ್ಮ ಮಗಳಿಗೆ ಇದರಿಂದ ಒಂದು ಸೀರೆ ಮಾಡಿಸುತ್ತೇನೆ" ಎನ್ನುತ್ತಾನೆ. "ಇಷ್ಟು ಸ್ವಲ್ಪ ನೂಲಲ್ಲೇ" ಎಂದು ಅವರು ವಿಸ್ಮಯ ಪಟ್ಟರೆ "ಇನ್ನು ಒಂದು ತಿಂಗಳ ಕಾಲ ಅವಳು ಹೀಗೇನೆ ನೂಲ ಬೇಕು. ಮಗ್ಗ ಸಿಕ್ಕಿದರೆ ನಾನೇ ನೆಯಿದೇನು. ಆದರೆ ಮಗ್ಗಕ್ಕೆ ಎಲ್ಲಿ ಹೋಗಲಿ" ಅನ್ನುತ್ತಾನೆ. ಮಗ್ಗದ ನೆನಪಾಗುವಾಗ ಇನ್ನೊಂದು ನೆನಪಾಗುತ್ತದೆ. ಅದು ಗಿರಣಿ ಹಿಂಜಿದ ಹತ್ತಿ; ಅದನ್ನು ನಂಬಿದರೆ ಕೆಲಸ ಅರ್ಧಕ್ಕೆ ಅರ್ಧ. ಈಗ ಕಲಿಯುತ್ತಿರುವ ಮಕ್ಕಳಿಗೆ ಕೊಡುವುದಕ್ಕೆ ಹತ್ತಿ ಇಲ್ಲ. ಸಾಕಷ್ಟು ನೂಲು ಜಮಾಯಿಸದೆ ಬಟ್ಟೆ ಆಗುವಂತಿಲ್ಲ. ನೂತ ನೂಲು ಅಭ್ಯಾಸದ ನೂಲು. ಒಂದೊಂದು, ಒಂದೊಂದು ತೆರ. ನೇಯುವುದಕ್ಕೂ ಕಷ್ಟ.

"ಹತ್ತಿಗೇನು ಬರಗಾಲ? ನಮ್ಮ ಊರಲ್ಲಿಯೇ ಎಷ್ಟೋ ಗಿಡಗಳಿವೆಯಲ್ಲಾ" ಎನ್ನುತ್ತಾರೆ ಮಂಜಯ್ಯನವರು.

"ಗಿಡ ಇವೆ. ಈ ವರ್ಷ ಹಲವರು ನಟ್ಟಿದ್ದಾರೆ. ಆದರೆ ಗಿಡ ಬೆಳೆದು ಹತ್ತಿ ಆಗುವುದಕ್ಕೆ ಇನ್ನೂ ಒಂದು ವರ್ಷಬೇಕು. ಊರಿನ ಹತ್ತಿ ಜನಿವಾರಕ್ಕೊ, ದೇವರ ದೀಪಕ್ಕೊ ಸಾಕಾಗಬಹುದು. ನೂಲು ಮಾಡುವುದಕ್ಕೆ ಸಾಲದು" ಎಂದು ಉತ್ತರವೀಯುತ್ತಾನೆ.

ಅಂತೂ ನೂಲುವ ಒಂದೇ ವಿಷಯದೊಳಗೆ ಅವನ ಗ್ರಾಮ ಸುಧಾರಣೆಯ ಕೆಲಸ ನಿಂತುಬಿಟ್ಟದೆ. ಅವನ ಮನಸ್ಸಿಗೇನೇ ತಾನು ಬರಿಯ 'ಹೆಣ್ಣು ಕೆಲಸ'ದಲ್ಲಿ ಇದ್ದೇನೆ ಎಂದು ಅನ್ನಿಸುತ್ತದೆ. ತನ್ನಂತಹ ಓದು ಬಲ್ಲವ-ಬರಿಯ ಒಂದೆರಡು ತಾಸು ನೂತರೆ ಸಾಕೇ, ಇತರರಿಗೆ ನೂಲಲು ಹೇಳಿಕೊಟ್ಟರೆ ಸಾಕೇ--ಎಂದು ವಿಚಾರತಾಳುತ್ತಾನೆ. ಅದಕ್ಕೂ ಹೆಚ್ಚಿಗೆ ಏನು ಮಾಡಲಿ ಎಂದು ಯೋಚಿಸಿ, ಯೋಚಿಸಿ ಬಟ್ಟಿಗೆಡುತ್ತಾನೆ. ಅವನ ಹಂಬಲ—ಒಂದು ಪಂಚಮರ ಶಾಲೆಯನ್ನೂ, ರಾಷ್ಟ್ರೀಯ ಶಾಲೆಯನ್ನೂ ತೆರೆಯಬೇಕೆಂದು. ಹೊಲೆಯರ ಹುಡುಗರಿಗೆ ಬರಗಾಲವಿಲ್ಲ; ಶಾಲೆ ಎಲ್ಲರಿಗೂ ಬೇಕು—ಆದರೆ ಆಲೆಮನೆಯಲ್ಲಿ ಅವನ ಆಶೆ ಸಫಲವಾಗುವುದುಂಟೇ? ಅಲ್ಲಿ ರಾಷ್ಟ್ರೀಯ ಶಾಲೆಯನ್ನು ತೆರೆದರೂ ಅಷ್ಟರ ಮಟ್ಟಿಗೆ ಜನ ದೂರಗಾಲಿಟ್ಟಾರು. ಊರಿನ ಸ್ಥಿತಿ ತಿಳಿದೇ ಇದ್ದು ಆ ತೆರನ ಹಂಬಲ ಪ್ರಯೋಜನವಿಲ್ಲವೆಂದು ಚಿಂತಿಸುತ್ತಾನೆ. "ಇಲ್ಲ; ಒಮ್ಮೆ ಮಂಗಳೂರಿಗೆ

ಹೋಗಿ, ದಯಾನಂದರಾಯನ್ನು ಸಂಧಿಸಿ, ಮುಂದಿನ ದಾರಿ ನಿಶ್ಚಯಿಸಿ ಬರುತ್ತೇನೆ. ನಮ್ಮ ತಾಲೂಕಿನಲ್ಲಿ ಯಾವುದಕ್ಕೂ ಸಹಾಯ ದೊರೆಯದು" ಎಂದು ಬೇಸರಿಸುತ್ತಾನೆ. ಮಾವನ ಆದರ, ಅಜ್ಜಿಯ ಒತ್ತಾಯ, ಸತ್ಯಳ ಮೋಹದ ಸೆರೆಯಲ್ಲಿ ಸಿಲುಕಿ, ಅವನ ವಿಚಾರ, ನಿರ್ಧಾರಗಳು ಆರು ತಿಂಗಳ ಅವಧಿಯಲ್ಲಿಯೂ ತಡಿಯನ್ನು ಸೇರದೆ ಹೋಪುವು. ಈ ನಡುವೆ ಒಂದು ದಿನ— ಅವನಿಗೆ ತೀರ ಎಚ್ಚರವಾಯಿತು. ತಾನು ಇದಿರು ಕಾದ ವರ್ಷಾಂತ್ಯವು ಬಂದಿದೆ. ಪ್ರಪಂಚ ಹೇಗಿದ್ದರೂ-ಭರತ ಖಂಡಕ್ಕೆ ಸ್ವರಾಜ್ಯ ವನ್ನು ದೊರಕಿಸಿಕೊಡುವ ದಿನ ಸನ್ನಿಹಿತವಾಗಿದೆ. ಎಲ್ಲ ದಿನಗಳಂತೆ ಆ ದಿನವೂ ಬಂದು ಸರಿಯಿತು; ವಾರ ಸಂದಿತು; ತಿಂಗಳೊಂದಾಯಿತು. ಶುಭದ ಒಸಗೆ ಬರಲೇ ಇಲ್ಲ. ಕೃಷ್ಣಪ್ಪನವರೆಂದ ನುಡಿಗೆ ಅವನ ಕಣ್ಣು ತೆರೆಯಿತು. ಅಷ್ಟು ಸುಲಭದಲ್ಲಿ, ಅಷ್ಟು ತೀವ್ರದಲ್ಲಿ, ದೇಶಕ್ಕೆ ಸ್ವಾತಂತ್ರ್ಯ ಸಿಕ್ಕೀತೇ ಎಂಬ ಕಡು ಸತ್ಯವು ಅವನ ಕಣ್ಣ ಮುಂದೆ ಹಾಯ್ದಿತು. ಗಾಂಧೀ ಜಿಯ್ಯವರ ಆಶ್ವಾಸನ ಬೆಳಗಿನ ಮಂಜಿಗಿಂತ ಸುಲಭವಾಗಿ ಮಾಯವಾ ಯಿತು. "ಇಲ್ಲ — ಅವರೆಂದಂತೆ ಜನರೆಲ್ಲರೂ ಒಮ್ಮತವಾಗಿ ಅಸಹ ಕಾರ ಹೂಡಿದ್ದರೆ, ಆ ಸುದಿನ ಬರುತ್ತಿತ್ತೋ ಏನೋ. ಹಾಗೆ ಯಾರೂ ಮಾಡಲಿಲ್ಲ. ಬೆರಳಿಂದೆಣಿಸುವಷ್ಟು ಮಂದಿ ಮಾಡಿರಬೇಕು. ಆಲೆಮನೆ ಯವರಂತೆ, ತಮ್ಮ ತಾಲೂಕಿನವರಂತೆ, ಹೊಸ ಕೆರೆಗೆ-ಹಾಲು ತುಂಬಿ ಸುವ ಬದಲು, ನೀರನ್ನು ತುಂಬಿಸಿದವರೇ ಬಹಳ. ಪತ್ರಿಕೆಗಳಲ್ಲಿ ತಾನು ಓದಿ ತಿಳಿದ ಚಳವಳ, ಕೋಲಾಹಲಗಳು ತೀರ ಮೇಲಿನ ಬುರುಗು. ಆದುದ ರಿಂದ ತಮ್ಮ ಕೆರೆ ಹಾಲಿನ ಕೆರೆಯಾಗುವ ಬದಲು ನೀರಿನ ಕೆರೆಯೇ ಆಗಿ ಉಳಿದಿದೆ." ಎಂದು ತನಗೆ ತಾನೇ ಸಮಾಧಾನವನ್ನು ತಂದುಕೊಳ್ಳುವ ಪಾಡು ಬಂದಿತು.

ರಾಧಾಕೃಷ್ಣನದೇ ಒಂದು ದಾರಿ. ಸೋಲಿನ ಕಾರಣಗಳನ್ನು ಅಳಿ ಯುವ ಶೀಲ ಅವನದು. ಅವನ ಮಾರ್ಗದರ್ಶಕರೂ, ಮುಖ್ಯಗುರುಗಳೂ ಆದ ಮಹಾನುಭಾವರು ಮಂಗಳೂರಿನ ದಯಾನಂದ ರಾಯರು. ಅವರು ನಾಡಿನ ಧುರೀಣರು. ಹಲವರ ಆದರ್ಶರು. ದೇವರು ಅವರಿಗೆ ಸಂಪತ್ತು, ಸಂತಾನ, ಸುಖ ಎಲ್ಲವನ್ನು ಕೊಟ್ಟಿದ್ದಾನೆ. ಅಂಥ ಜೀವನದಿಂದ ಅವರ ಮನಸ್ಸು ಸೇವಾಜೀವನಕ್ಕೆ ಹರಿಯಿತು. ತ್ಯಾಗಕ್ಕೆ ಮುಂದುವರಿಯಿತು.

ಗಾಂಧೀಜಿಯವರ ಪ್ರಿಯ ದರ್ಶನದಿಂದ, ಸಂಭಾಷಣೆಗಳಿಂದ, ವ್ಯಕ್ತಿಯಲ್ಲಿ ರಾಷ್ಟ್ರೀಯತೆಯ ನವಿರು ಉದಯಿಸಿತು. ಅವರ ಜತೆಯಲ್ಲಿ ನೂರಾರು ತರುಣರು ಕಲೆತರು. ಔದಾರ್ಯ ಹೀನರು ಉದಾರಿಗಳಾದರು. ಮಂಗಳೂರಿನಲ್ಲಿ ಅವರು ಯುವಗಾಂಧಿಯವರೇ ಆದರು. ತೆರೆಗೈಯ್ಯ ಕರ್ಣನಂತೆ, ತಮ್ಮ ಬೊಕ್ಕಸವನ್ನು ರಾಷ್ಟ್ರ ಸೇವೆಗೆ ಮೀಸಲಿತ್ತರು. ಅವರ ವರ್ಚಸ್ಸು ಮೇರೆವರಿಯಿತು. ಹಲಸಿನ ತೊಳೆಗೆ ಮುತ್ತುವ ನೊಳ್ಳೆಗಳಂತೆ—ಸೋಮಾರಿಗಳೂ, ಸೋಗಿನವರೂ, ಅವರನ್ನು ಸುತ್ತುವರಿದರು. ಜನತೆಯ ಮಾತಿಗೂ ಮನಕ್ಕೂ ಇರುವ ಅಂತರವನ್ನು ಅರಿಯದ ಅವರು—ಎಲ್ಲರನ್ನು ನಂಬಿದರು. "ಅಲ್ಲಿ ಹತ್ತುನೂರು ಜನ ಶಾಲೆಗಾಗಿ ಕಾದಿದ್ದಾರೆ. ಅಲ್ಲಿ ಐನೂರು ಹೊಲೆಯರು ಮದ್ಯಪಾನ ತ್ಯಾಗದ ಪ್ರತಿಜ್ಞೆ ಮಾಡಿದ್ದಾರೆ; ಮತ್ತೊಂದು ಕಡೆ ಊರಿನ ಪ್ರಮುಖರೆಲ್ಲ ಕಾಯಿದೆ ಭಂಗಕ್ಕೆ ಅನುವಾಗಿದ್ದಾರೆ." ಎಂದರೆ ಎಲ್ಲವನ್ನು ನಂಬಿದರು. ಅಲ್ಲಿ, ಇಲ್ಲಿ ಓಡಾಡಿದರು. ತಮ್ಮ ಸಂಪತ್ತು, ತಮ್ಮದಲ್ಲವೆಂಬಷ್ಟು ಉದಾರವಾಗಿ ಹಣ ವ್ಯಯಿಸಿದರು.

ಅವರಿಗೆ ವರ್ಷಾಂತ್ಯದಲ್ಲಿ ಸ್ವರಾಜ್ಯ ಕರಗತವಾಗುತ್ತದೆ-ಎಂಬುವುದರಲ್ಲಿ ಅಖಂಡ ವಿಶ್ವಾಸವಿತ್ತು. ಯಾವನಾದರೂ ತರುಣ, ದೇಶಭ್ರಮಣದಿಂದ ನಿರಾಶನಾಗಿ ಬಂದರೆ, ಯಾವನಾದರೂ ವಿದ್ಯಾರ್ಥಿ ಮನೆಯವರ ಒತ್ತಾಯಕ್ಕೆ ಬಿಟ್ಟ ಶಾಲೆಯನ್ನು ತಿರುಗಿ ಸೇರುವೆನೆಂದರೆ—ಅವರದು ಒಂದೇ ಮಾತು: "ಇನ್ನೆಷ್ಟು ಸಮಯವಿದೆ. ಆರು ತಿಂಗಳಾಯಿತು. ಇನ್ನು ಆರು ತಿಂಗಳು ಉಳಿದಿವೆ. ಅಲ್ಲಿಯ ತನಕ ನಡೆಯಿಸಿ; ಶಾಲೆ ಆ ಮೇಲೆ ಸೇರುವುದಂತೆ. ಅಷ್ಟರೊಳಗೆ ದೇಶದ ಎಲ್ಲ ಶಾಲೆಗಳೂ ರಾಷ್ಟ್ರೀಯ ಶಾಲೆಗಳು ಆಗಿಯೇ ಆಗುತ್ತವೆ-" ಎಂದು ಅವರ ಆಸೆಯ ದೀವಿಗೆಯನ್ನು ಪೋಷಿಸುತ್ತಿದ್ದರು. ಅಂಥವರ ಪತ್ರ ಮುಖೇನವಾದ ಪ್ರೇರಣೆ, ಬೆಂಬಲ-ರಾಧಾಕೃಷ್ಣನಿಗಿತ್ತು. ಆತ ತನ್ನ ಹಣ ಕಾಸಿನ ಅಭಾವವನ್ನು ತೋರಿಕೊಂಡಿದ್ದಗೆ ಅವರು ಸಹಾಯ ಮಾಡುತ್ತಿದ್ದರೋ ಏನೋ. ಆದರೆ ಅವರ ಸುತ್ತಲು ಸುತ್ತಿಪಾಠಕರು, ಕೊರಗು ನಟಿಸುವವರು, ಕೆಲಸದ ನೆಪದಿಂದ ಹಣ ಸುಲಿಯುವವರು ಸೇರಿಕೊಂಡಿರುವಾಗ, ದೂರದಲ್ಲಿ ಬಾಯಿ ಮುಚ್ಚಿ ಕುಳಿತ ಕೆಲಸಗಾರನೊಬ್ಬನ ಕಡೆಗೆ ಅವರ ಗಮನ ಹರಿಯುವುದು ಸಾಧ್ಯವಿದ್ದಿಲ್ಲ.

ಗಾಂಧಿ ಭವಿಷ್ಯದ ಕೊನೆಗಾಲ ಬಂದಾಗಲಂತೂ ದಯಾನಂದರಾಯರು ತುದಿಗಾಲಿನ ಮೇಲೆ ನಿಂತು ಅನುಪಮವಾದ ಪವಾಡವನ್ನು ನಿರೀಕ್ಷಿಸುತ್ತಿದ್ದಾರೆ. ಆಶೆಯ ಆ ದಿವಸ ಬಂದು ಹೋಯಿತು. ಪವಾಡ ಮಾತ್ರ ಸಂಭವಿಸಲಿಲ್ಲ. ಯಾಕೆ ಹಾಗಾಯಿತು-ಎಂದು ಅವರೂ ಯೋಚಿಸಿದರು. ಕೊನೆಗೆ ಒಂದು ದಿವಸ ಗಾಂಧೀಯವರ ನುಡಿಗಳನ್ನು ಎತ್ತಿಕೊಂಡು—ಅವರ ಸಂದೇಶದಂತೆ ಯಾವತ್ತು ಜನ ನಡೆಯುದಿದ್ದುದರಿಂದ ಹಾಗಾಗಿರಬೇಕೆಂಬ ತೀರ್ಮಾನಕ್ಕೆ ಬಂದರು. "ಓಹೋ, ಅವರ ಅರ್ಥ ಹಾಗಿತ್ತೇ! ನಿಜ, ಅವರ ಮಾತೇ ಸಮ. ನಾವು ಅರ್ಥಮಾಡಿದುದೇ ತಪ್ಪು" ಎಂದುಕೊಂಡರು.

ಸರಿ, ಪವಾಡ ನಿರೀಕ್ಷಣೆಯಿಂದ ಕಾದುಕುಳಿತ ಶಾಲೆ, ನೇಯಿಗೆ ಶಾಲೆ, ಚಿಕಿತ್ಸಾ ಶಾಲೆಗಳು ಒರಿವೆ ನಡೆಯುತ್ತವೆಯೇ? ಕೆಲವು ದಿನ ಅವು ಜನರ ಬೆಂಬಲದಿಂದ ನಡೆದುದೂ ನಿಜ. ಬಹು ದಿನ ಮುಂದೆ ಸಾಗಿದುದು ರಾಯರ ಔದಾರ್ಯದಿಂದ. ಅಳತೆ ಮೀರಿದ ಔದಾರ್ಯ. ಮಾತಿನ ಉರುಳಿಗೆ ಬಲಿಯಾಗುವ ಅವರ ಸರಳತನ-ಅವರನ್ನು ಬಹುಬೇಗ ಸಾಲಿಗರ ಕೈಗೆ ಒಪ್ಪಿಸಿದುವು. ಅವರೂ ಎಲ್ಲವನ್ನು ನಡೆಯಿಸಿಕೊಂಡು ಹೋಗುವೆನೆಂಬ ಧೈರ್ಯವಿತ್ತು. ದಿನ ಸರಿಯಿತು, ತಿಂಗಳು ಸರಿಯಿತು. ಇವರಿಂದ ಹಣ ಸರಿಯಿತು, ಜನರಿಂದ ಉತ್ಸಾಹ ಸರಿಯಿತು. ತಮ್ಮ ಅನುಯಾಯಿಗಳನ್ನು ಜನರಲ್ಲಿ ಧನಸಹಾಯಕ್ಕಾಗಿ ಕಳುಹಿದರು. ಕಾಲವು ಸರಿದಂತೆ ಅವರೂ ಕಣ್ಮರೆಯಾದರು. ಜನರ ಸಹಾಯವೂ ಕಾಣದಾಯಿತು. ಅವರ ದೇಶಪ್ರೇಮವು ಹಡೆದ ಕೂಸುಗಳೆಲ್ಲವೂ-ಕಾಮಲೆ, ಗ್ರಹಿಣಿ, ಅಪಸ್ಮಾರ ಬೇನೆಗಳಿಗೆ ಬಲಿಯಾದುವು.

ಮಂಗಳೂರಿನಲ್ಲಿ ಧೂಮಕೇತುವಿನಂತೆ ಬಾಹದಾಕಾರವನ್ನು ತಾಳಿ ಬಾಲ ಬೆಳೆಯಿಸಿ ಮೆರೆದ ರಾಷ್ಟ್ರೀಯ ಚಳವಳದ ಅಬ್ಬರ, ಮಳೆ ಕಳೆದ ಬಾನಿನಂತೆ ಬರಿದಾಯಿತು. ದಯಾನಂದರಾಯರು ತಮ್ಮ ಭೂಮಿ, ಮನೆಗಳನ್ನೆಲ್ಲ ಅಡವು ಮಾಡಿಕೊಂಡು ಉರುಳಿಗೆ ಸಿಕ್ಕಿದ್ದೇ ಬಂದಿತು. ಅವರ ದೇಶ ಭಕ್ತಿಯ ಈ ಘಟ್ಟದಲ್ಲಿ, ಹತ್ತಿರ ಪರಿಚಿತನಾದ ರಾಧಾಕೃಷ್ಣ ಅವರಲ್ಲಿಗೆ ಯೋಚನೆಗಾಗಿ ಬಂದನು. ತುಂಬ ನಚ್ಚಿನ ಗೆಳತನ ಅವರದ್ದು. ಇಬ್ಬರದೂ ನಿಷ್ಕಲ್ಮಷ ಹೃದಯ. ಬಹುಕಾಲದ ಬಳಿಕ ಆದ ದರ್ಶನ.

ಮೊದಲಿನ ಸುದ್ದಿಯೆಂದು ಅಳುಕಿನಿಂದ ರಾಧಾಕೃಷ್ಣ ಅವರಿಗೆ ತನ್ನ ವಿವಾಹದ ವಾರ್ತೆಯನ್ನು ತಿಳಿಸಿದನು. ಅವರು "ನೀವು ಹೊಸತಾಗಿ ಆ ತಪ್ಪು ಮಾಡಿದರೇ? ಸಂಸಾರಿಯಾಗಿದ್ದ ನಾನೇ ದೇಶಸೇವೆಗೆ ಸಂಸಾರವೆಂಬುದು ಒಂದು ಬಂಧನ-ಎಂದು ಮನಗಾಣುತ್ತಿದ್ದೇನೆ" ಎಂದರು.

ರಾಧಾಕೃಷ್ಣನ ಮುಖ ಸಪ್ಪಗಾಯಿತು. ಅವನು ನೊಂದುಕೊಂಡನೆಂದು ತಿಳಿದು, ತಮ್ಮ ಮಾತಿನ ಉದ್ದೇಶವನ್ನು ವಿವರಿಸತೊಡಗಿದರು. "ನೋಡಿ, ನಾನು ಬೇರೆ ಅರ್ಥದಲ್ಲಿ ಹೇಳಿದ್ದಲ್ಲ. ನನಗೂ ಸಂಸಾರ ಇದೆ. ದೇವರು ಚೆನ್ನಾದ ಅನುಕೂಲತೆ ಕೊಟ್ಟಿದರಿಂದ ಮೊನ್ನೆ ಮೊನ್ನೆಯತನಕ ಯಾವ ಯೋಚನೆಯೂ ಇಲ್ಲದೇನೆ ಇದ್ದೆ. ದೇಶ ಸೇವೆಯೇ ನನ್ನ ಸರ್ವಸ್ವವಾಗಿತ್ತು. ಅದಕ್ಕಾಗಿ ಹಣ ವ್ಯಯಿಸಿದೆನು. ನನ್ನ ಎಲ್ಲವನ್ನೂ ವೆಚ್ಚಮಾಡಿದೆನು. ಬರಿಯ ಸ್ವಲ್ಪ ಕಾಲ, ತಾನು ಪ್ರೇರಿಸಿದ ಸಂಸ್ಥೆಗಳನ್ನೆಲ್ಲ ತಾನು ಸಾಕಿ ಬಂದರೆ, ಮುಂದೆ ಅವನ್ನು ಸಾಕುವ ಭಾರ ಸ್ವರಾಜ್ಯ ಸರಕಾರದ್ದು ಎಂದು ತಿಳಿದೆ. ಈಗ ನೋಡಿ—ನನ್ನ ಹಣ ಬರಿದಾಯಿತು. ಜನ ಸಹಾಯಕ್ಕೆ ಕಟ್ಟೆ ಬಿದ್ದುದಾಯಿತು. ಈಗ ಎಲ್ಲದಕ್ಕೂ ನಿಸ್ಸಹಾಯನಾಗಿ ಕುಳಿತ್ತಿದ್ದೇನೆ. ಸಂಸಾರದ ಹೊರೆ ಏನು ಎಂಬುದು ಈಗ ಒಂದೊಂದೇ ಕಾಣುತ್ತಿದೆ" ಎಂದರು. "ಹೋಗಲಿ, ಆ ಮಾತು. ಈಗ ಏನು ಬಂದಿರಿ? ಇನ್ನೇನು ವಿಶೇಷ? ನಿಮ್ಮೂರಲ್ಲಿ ಈಗ ಏನೇನು ನಡೆದಿದೆ" ಎಂದು ವಿಚಾರಿಸಿದರು. ಅವನಿಗೆ ಹಿಂದುಳಿದ ಕುಂದಾಪುರದಲ್ಲಿ ಚೈತನ್ಯ ತುಂಬಿಸಬೇಕೆಂಬ ಪ್ರೇರಣೆ ಅವರಿಂದ ಆಗಾಗ ಬರುತ್ತಲೇ ಇತ್ತು. 'ಯಾಕೆ ರಾಷ್ಟ್ರೀಯ ಶಾಲೆಯನ್ನು ತೆರೆಯ ಬಾರದು? ಯಾಕೆ ಖಾದೀ ಕೇಂದ್ರ ನಡೆಯಿಸಬಾರದು? ಹಿರಿಯಡ್ಕದವರು ಮಾಡಿದ್ದಾರೆ, ಉಡುಪಿಯವರು ಮಾಡಿದ್ದಾರೆ. ನೀಲೇಶ್ವರದಲ್ಲಿ ಜೋರಾವರಿಯಿಂದ ಕೆಲಸ ನಡೆಯುತ್ತಿದೆ' ಎಂದು ಬರೆಯುತ್ತಲೇ ಇದ್ದರು. ಅಂಥವರ ಮುಂದೆ ತನ್ನ ಕ್ಷುದ್ರ ಊರಿನ ವಿಚಾರ ಏನು ಹೇಳಬೇಕು? ಅವರ ಪತ್ರಕ್ಕೆ ಉತ್ತರ ಬರೆಯುವುದೇ ನಾಚಿಕೆಯಾಗುತ್ತಿತ್ತು. ಈಗ ಅವನ ಮನಸ್ಸಿನ ಚಾಂಚಲ್ಯ ತುರೀಯಕ್ಕೇರಿದೆ. ಪರರ ಸಹಾಯ ನಿರೀಕ್ಷಿಸಿ ಆಯಿತು. ಹೆರವರ ಮುಖದ ಮುಂದೆ ಕತ್ತು ಬಗ್ಗಿಸಿ ಬೇಡಿ ಆಯಿತು. ಇನ್ನು ಒಬ್ಬಂಟಿಗನಾಗಿ ಆದರೂ, ಒಂದು ಸಂಸ್ಥೆಯನ್ನು ತೆರೆಯಬೇಕೆಂಬ ನಿರ್ಧಾರಕ್ಕೆ ಬಂದಿದ್ದಾನೆ. ಬರಿಯ ನೂಲುವ

ನೇಯುವ ಕೆಲಸಗಳಿಂದ ಅವನ ಮನಸ್ಸು ತುಂಬಿ, ತೃಪ್ತಿ ಬರುವಂತಿರಲಿಲ್ಲ. ಮನುಷ್ಯ ಕುಲದ ಸ್ನೇಹವನ್ನು ಅದು ಸದಾ ಬಯಸುತ್ತಿತ್ತು. ಆಲೆಮನೆ ಯಲ್ಲಿದ್ದು, ಹತ್ತು ಜನ ಬಡ ಬಗ್ಗರ ಮನೆಯನ್ನು ಹೊಕ್ಕು ಹೊರಟ ಪರಿ ಣಾಮವಾಗಿ, ಅವನ ಮನಸ್ಸು ಅವರ ದಾರಿದ್ರ್ಯವನ್ನು ಕುರಿತು ಚಿಂತಿಸು ತ್ತಿತ್ತು. ಹೊಲೆಯರ ತುಂಬು ದಾರಿದ್ರ್ಯಕ್ಕಾಗಿ, ಅಜ್ಞಾನಕ್ಕಾಗಿ, ಅವನ ಮನಸ್ಸು ನೋಯುತ್ತಿತ್ತು. ಅಜ್ಜಿಗೂ, ಮಾವನಿಗೂ ತಿಳಿಸದಂತೆ ಅವರ ಗುಡಿಸಲುಗಳಿಗೆ ಕದ್ದು ಹೋಗಿ— "ಮದ್ಯಪಾನ ಬಿಡಿ, ಮಾಂಸಾಹಾರ ಬಿಡಿ, ಉಚ್ಛಿಷ್ಟ ಭೋಜನ ಬಿಡಿ" ಎನ್ನುತ್ತಿದ್ದ. ಅವನ ಕೂಗು ಯಾವ ಪರಿಣಾಮವನ್ನೂ ಮಾಡಲಿಲ್ಲ. ಅದಕ್ಕೆಲ್ಲ ಕಾರಣ ಅವರ ಅಪಾರ ಅಜ್ಞಾ ನವೆಂದು ತಿಳಿದಿದ್ದನು. ಈ ಜನಕ್ಕೆ ತಮ್ಮ ಬಾಳುವೆಯನ್ನು ಸಾಗಿಸುವ ಆರ್ಥಿಕ ಪುಷ್ಟಿಯನ್ನು ಕೊಡದ ಹೊರತು, ಉಳಿದೆಲ್ಲ ಮಾತುಗಳು ಅರಣ್ಯ ರೋದನ— ಎಂಬ ಅಸ್ಪಷ್ಟ ಕನಸಿನ ತಂದೆಯಾಗಿದ್ದ. ಆ ಕನ ಸಿನ ಕೂಸನ್ನು ಹೊತ್ತುಕೊಂಡು ಅವರೊಡನೆ ಚರ್ಚಿಸಲು ಬಂದಿದ್ದಾನೆ. ತನ್ನ ಆ ಯೋಚನೆಗೆ ಅವರ ಆರ್ಥಿಕ ಬೆಂಬಲ ದೊರೆತಿದೆಯೆಂದು ನಂಬಿ ಬಂದಿದ್ದಾನೆ. ಅದು ಫಲಿಸುವ ದಾರಿ ಈಗ ಕಾಣಿಸಲಿಲ್ಲ. 'ಏನು ಬಂದಿರಿ' ಎಂದು ಅವರು ಕೇಳಿದ್ದಕ್ಕೆ ಮನಸ್ಸನ್ನು ಬಿಚ್ಚಿ ಹೇಳಿದನು.

ದಯಾನಂದ ರಾಯರು ಉತ್ಸಾಹಶೀಲರು. ಉತ್ಸಾಹ ತುಂಬಿದ ಗಳಿಗೆಯಲ್ಲಿ ನೆಲ ಬಿಟ್ಟು, ಮುಗಿಲಾಗಿ, ಬಾನಲ್ಲಿ ತೇಲುವುದು ಅವರ ಸ್ವಭಾವ. "ಅಯ್ಯೋ, ಈ ನಿಮ್ಮ ಯೋಚನೆಗಳನ್ನು ನನಗೆ ಮೊದಲೇ ತಿಳಿ ಸಿದ್ದರೆ! ನೂರಾರು ಮಂದಿ ಠಕ್ಕರನ್ನು ನಂಬಿ ನನ್ನ ಹಣ ಸುರಿಯುವ ಬದಲು ಅಂಥ ಆಶ್ರಮಕ್ಕೆ ಸುರಿಯುತ್ತಿದ್ದೆ. ಆಗಲಿ ನೋಡುವ—ಯಾರೋ ಒಬ್ಬನಿಂದ ಸಾವಿರ ರೂಪಾಯಿ ಸಾಲ ಬರುವುದು ಇದೆ. ಇನ್ನು ಮೂರು ತಿಂಗಳಲ್ಲಿ ಅದು ಬಂದೇ ತೀರಬೇಕು. ನೀವು ನೆನಪು ಮಾಡಿ ಕಾಗದ ಬರೆದರೆ, ನೆಟ್ಟಗೆ ಅದನ್ನು ನಿಮಗೇ ಕಳುಹಿಸುತ್ತೇನೆ. ಆ ಸಾವಿರ ರೂಪಾ ಯಿಯಿಂದ ಎರಡು ವರ್ಷದ ಖರ್ಚು, ವೆಚ್ಚ ಹೇಗೂ ಸಾಗಿಸಬಹುದು. ಮುಂದೆ ದೇವರು ಇದ್ದಾನೆ ನೋಡುವ" ಎಂದರು. ಅವನೊಡನೆ ಭಾವೀ ಆಶ್ರಮದ ನಾಮಕರಣ, ಸ್ಥಳ ಕಾರ್ಯಕ್ರಮಗಳನ್ನು ಕುರಿತಾಗಿ ಚರ್ಚೆ ನಡೆಯಿಸಿದರು. ಮೂರು ದಿವಸಗಳ ಕಾಲ, ಅವನನ್ನು ಜತೆಯಲ್ಲಿ ಇರಿಸಿ

ಕೊಂಡರು. ಎಂಥೆಂಥವರನ್ನು ನಂಬಿದ ಅವರಿಗೆ ರಾಧಾಕೃಷ್ಣನಂತಹ ಸರಳವ್ಯಕ್ತಿಯು ಮೆಚ್ಚಿಗೆಯಾದುದರಲ್ಲಿ ಸೋಜಿಗವಿಲ್ಲ. "ಛೀ, ಛೀ, ಇಂಥ ಅಮೂಲ್ಯ ಕೆಲಸಗಾರನೊಬ್ಬನು ಇದ್ದೂ ನನಗೆ ತಿಳಿಯದೆ ಹೋಯಿತೇ" ಎಂದು ಅವರು ನೊಂದುಕೊಂಡರು.

ನಾಲ್ಕನೆಯ ದಿನ ರಾಧಾಕೃಷ್ಣನು ಕುಂದಾಪುರಕ್ಕೆ ಹೊರಡಲು ಸಿದ್ಧನಾದನು. ರಾಯರ ಆರ್ಥಿಕ ಸ್ಥಿತಿಯು ಚೆನ್ನಾದ ಅರಿವು ಇಲ್ಲದ ಅವನಿಗೆ ಅವರ ಬೆಂಬಲದಲ್ಲಿ ಅವಿಶ್ವಾಸ ಇರಲಿಲ್ಲ. ತನ್ನದೇ ಅವಿಶ್ವಾಸ ಅವನಿಗೆ. ತನ್ನ ಕಾರ್ಯಕ್ಕೆ ರಂಗ ಯಾವುದು ಎಂದು ತೋರಿರಲಿಲ್ಲ. ಪರಿಚಿತವಾದ ಊರಿನಿಂದ ಅಪರಿಚಿತವಾದ ಊರಿಗೆ ಹೋಗಲು ಧೈರ್ಯವಿರಲಿಲ್ಲ. ಅಲ್ಲದೆ ತನ್ನೂರಿನ ವಿಷಯವಾದ ಅಭಿಮಾನ ಬೇರೆ. ತನ್ನ ಗ್ರಾಮಗಳ ಉದ್ಧಾರವನ್ನು ತಾನು ಮಾಡದೆ, ಪರರು ಮಾಡುವುದುಂಟೇ ಎಂಬ ತರ್ಕ. "ಇಲ್ಲ—ಮಾವನಿಂದ ಭೂಮಿಯ ಒಂದು ತುಣುಕನ್ನು ಗೇಣಿಗೆ ಪಡೆದು ಅಲ್ಲಿಯೇ ಕೆಲಸ ತೊಡಗುತ್ತೇನೆ. ತಂದೆಯಿಂದ ಪಾಲು ಪಡೆದಾದರೂ ತನ್ನ ಆಶ್ರಮ ಕಟ್ಟುತ್ತೇನೆ. ತಾನೇನು ಮಾಡುವುದು ಇದೆಯೋ ಅದನ್ನು ತನ್ನ ಊರಿನಲ್ಲೇ ಮಾಡುತ್ತೇನೆ" ಎಂಬ ನಿರ್ಧಾರವನ್ನು ಆತ ಮಾಡುತ್ತಿರುವ ಗಳಿಗೆಯಲ್ಲೇ ಅವನ ಮಾರ್ಗದರ್ಶಿಗಳಾದ ದಯಾನಂದರಾಯರಿಗೆ ಬೇರೆಯೇ ಯೋಚನೆ ಹೊಳೆಯುತ್ತಿದೆ. ಯಾವ ದೊಡ್ಡ ಕೆಲಸವಾಗುವುದಿದ್ದರೂ, ಮುಖ್ಯ ನಗರವಾದ ಮಂಗಳೂರಿನಲ್ಲಿಯೇ ಆಗಬೇಕೆಂಬುದು ಅವರ ತರ್ಕಸರಣಿ. ಜಾಗದ ವಿಚಾರ ಬಂದಾಗ, ರಾಧಾಕೃಷ್ಣ ಅನುಮಾನಿಸುತ್ತಿದ್ದುದನ್ನು ಕಂಡು, ಒಮ್ಮೆಗೇ ನಿದ್ರೆಯಿಂದ ಎಚ್ಚತ್ತವರಂತೆ ಅಂದರು: "ಅದಕ್ಕೆ ಇಷ್ಟು ಗೊಂದಲವೇ, ಕಿರಿಪದವಿನಲ್ಲಿ ನನ್ನದೇ ಒಂದು ಭೂಮಿ ಇದೆ. ಸುಮಾರು ಐವತ್ತು ಮುಡಿ ಗೇಣಿ ಬರುವ ಒಮ್ಮಟ್ಟಾದ ಜಾಗ. ತುಂಬ ಬೆಟ್ಟು ಭೂಮಿಯೂ ಇದೆ. ನೀರಿನ ಆಶ್ರಯವಿದೆ. ಒಂದು ಕಡೆ ಎತ್ತರವಾದ ಗುಡ್ಡ. ಬಹಳ ಸುಂದರವಾದ ಸ್ಥಳ. ಆಶ್ರಮಕ್ಕೆ ಹೇಳಿ ಮಾಡಿದ್ದು. ಬಹಳ ದೂರವೂ ಇಲ್ಲ." ಎಂದು ತಿಳಿಸಿದರು. ಅದೇ ದಿನವೇ ಒಂದು ಬಾಡಿಗೆ ಮೋಟಾರಿನಲ್ಲಿ ಕುಳಿತುಕೊಂಡು ಮಂಗಳೂರಿನಿಂದ ಆರು ಮೈಲು ದೂರದಲ್ಲಿರುವ ಆ ಸ್ಥಳಕ್ಕೆ ರಾಧಾಕೃಷ್ಣನನ್ನು ಕರೆದೊಯ್ದರು. ಮೋಟಾರು, ಉನ್ನತವಾದ ಪದವು ಒಂದರ ಮೇಲೆ

ಹೋಗಿ ನಿಂತಿತು. ಅಲ್ಲಿಂದ ನಾಲ್ಕು ಸುತ್ತಲೂ ಸುಂದರವಾದ ಗುಡ್ಡಗಳ ಸಾಲು ಕಾಣಿಸುತ್ತಿದೆ. ತೆಂಕು ದಿಕ್ಕಿನಲ್ಲಿ, ಬರಿಯ ಒಂದು ಮೈಲು ದೂರ ದಲ್ಲಿ, ಮುಂದಗಮುನೆ ನೇತ್ರಾವತಿಯು ನೋಟವಿದೆ. ಪದವಿನಿಂದ ನೇರ ಕೆಳ ಕ್ಕಿಳಿವೊಡನೆಯೇ ಬರುವುದು ಅವರ ಭೂಮಿ.

ಅಲ್ಲಿನ ಹೊಲದ ಬಳಿ ಕಾಲಿಡುತ್ತಲೇ, ದಯಾನಂದರಾಯರ ಒಕ್ಕಲು ಬಿರುಮ ಮರಕಾಲ ಅವರನ್ನು ಸಂಧಿಸಿದನು; ಬಿರು ವಂದಿಸಿದ. ಮರ ಏರಿ ಎರಡು ಎಳನೀರುಗಳನ್ನು ತಂದಿರಿಸಿದ. ರಾಯರನ್ನು ಕಂಡಾಗಲೆಲ್ಲಾ ವಂದಿಸಿ, ಎಳನೀರು ಸಲ್ಲಿಸಿ, ತನ್ನ ದುಃಖದ ಹಾಲಾವಾಲಿಗಳನ್ನು ಹೇಳಿ ಕೊಂಡು ಗೇಣಿ ಸಲ್ಲಿಸದೆ ಇರುವ ಕದಿಮ ಆತ. ಆತನಲ್ಲಿ ರಾಯರಿಗೆ ತುಂಬಾ ನಂಬುಗೆ. ಆ ದಿನವೂ ಅವರ ಮುಂದೆ ತನ್ನ ತಾಪತ್ರಯಗಳನ್ನು ತೋಡಿಕೊಳ್ಳಲು ಹಿಂಪಾಗಲಿಲ್ಲ. ರಾಧಾಕೃಷ್ಣನು ಆ ಸ್ಥಳದಲ್ಲಿ ತುಂಬಾ ಅಡ್ಡಾಡಿದ; ಅಲ್ಲಿನ ಜಲಾಶ್ರಯ, ಕೃಷಿಗೆ ಅನುಕೂಲವಾದ ಭೂಮಿ, ಈಗಾಗಲೇ ಉತ್ತು ಬಿತ್ತಿದ ಹೊಲ ನೆಲಗಳನ್ನು ಕಂಡನು. ತನ್ನ ಉದ್ದೇ ಶಕ್ಕೆ ಇದು ಪ್ರಶಸ್ತ ಸ್ಥಳವೆಂದ ಒಪ್ಪಿಕೊಳ್ಳಬೇಕಾಯಿತು. ಆ ಸ್ಥಳದಲ್ಲಿ ಒಂದೆರಡು ಪುಟ್ಟ ಗುಡಿಸಲುಗಳು ಇದ್ದವು. ಆಶ್ರಮ ನಿರ್ಮಾಣಕ್ಕೆ ಹೆಚ್ಚೇನು ಬೇಕು? ಅವನ ಮನಸ್ಸು ಪರಿವರ್ತನೆಗೊಂಡಿತು. ಆ ಜಾಗಕ್ಕೆ ಒಲಿಯಿತು. ಈ ತೆರನ ಅನುಕೂಲ ಪ್ರದೇಶ, ರಾಯರ ಬೆಂಗಾ ವಲು ಸುಲಭದಲ್ಲಿ ದೊರೆಯುವಾಗ ಅವನ್ನು ಅಲ್ಲಗೆಳೆಯುವುದು ತಪ್ಪೆಂದು ತೋರಿತು. ಮಂಗಳೂರು ಒಂದು ಪರದೇಶವಲ್ಲವಷ್ಟೆ. ಅವನ ಎದು ರಿಗೇನೆ ರಾಯರು ಮರಕಾಲನ್ನು ಕರೆದು "ಬಿರುಮ, ಎಂಟು ವರ್ಷಗಳಿಂದ ನೀನು ಗೇಣಿಯನ್ನು ಬಾಕಿ ಇರಿಸಿಕೊಂಡೆ. ಅದನ್ನು ನೀನು ಕೊಡುತ್ತೀ ಎಂದು ನಾನು ನಂಬುವುದೂ ಇಲ್ಲ. ಕೊಡಬೇಕೆಂದರೂ ನಿನ್ನಲ್ಲಿ ಅದು ಇರಲಿಕ್ಕಿಲ್ಲ. ನನಗೆ ಮೊದಲಿನ ಅನುಕೂಲತೆ ಈಗ ಉಳಿದಿಲ್ಲ. ನಾನೂ ಸೋತವನೇ. ಈ ತಿಂಗಳಿನಿಂದ ಈ ರಾಯರಿಗೆ ಒಂದು ಒಳ್ಳೆಯ ಕೆಲ ಸಕ್ಕೆ ಈ ಭೂಮಿಯನ್ನು ಕೊಡುತ್ತೇನೆ ಅಂದಿದ್ದೇನೆ. ನೀನು ಬೇರೆಯೇ ಜಾಗವನ್ನು ಹುಡುಕಬೇಕಾಗುತ್ತದೆ. ಕೂಡಲೇ ಈ ಸ್ಥಳವನ್ನು ಬಿಡ ಬೇಕೆಂದು ನಾನು ಹೇಳುವುದಿಲ್ಲ. ಆದರೆ ಈ ವರ್ಷದಿಂದ, ಈ ಭೂಮಿ ಸಾಗುವಳಿಗೆ ನಿನಗೆ ಸಿಗುವ ಹಾಗಿಲ್ಲ" ಎಂದು ಬಿಟ್ಟರು.

ಅಲ್ಲಿಂದ ಅವರು ಮರುಳಿ ಮಂಗಳೂರಿಗೆ ಬಂದರು. ರಾಧಾಕೃಷ್ಣನ ಮನಸ್ಸು ಸವಿಗನಸುಗಳಲ್ಲಿ ತೇಲತೊಡಗಿತು. ತನ್ನ ಕೆಲಸ ಕೈಗೂಡುವು ದೆಂದು ತಿಳಿದನು. ಇನ್ನು ಹೆಂಡತಿಯನ್ನು, ಮಾವನನ್ನು ಒಲಿಸಿಕೊಳ್ಳ ಬೇಕಾದುದು ಮುಂದಿನ ಕೆಲಸ. ಸತ್ಯ, ತನ್ನ ಗಾನಕ್ಕೆ ತಕ್ಕಂತೆ ಹೆಜ್ಜೆ ಹಾಕಲು ಕಲಿತೇ ಇದ್ದಾಳೆ ಎಂಬ ವಿಶ್ವಾಸ. ಮಾವನನ್ನು ಕೇಳುವುದು ಕೇವಲ ಔಪಚಾರಿಕ—ಎಂದುಕೊಂಡನು. ಆತ ಮುಂದಿನ ಸಿದ್ಧತೆ ಗಾಗಿ ಆಲೆಮನೆಗೆ ಮರಳಿ ಬಂದನು. ಇತ್ತ ದಯಾನಂದ ರಾಯರು, ತಮ್ಮ ನಷ್ಟವಾದ ಇತರ ಎಲ್ಲ ಸಾಹಸ ನೋವುಗಳನ್ನು ಮರೆಯುವುದಕ್ಕೆ ಎಂಬಂತೆ, ಈ ಹೊಸ ಕನಸನ್ನೇ ಮೆಲುಕಾಡುತ್ತಿದ್ದರು. ಮನಸ್ಸಿನ ಯಾವ ವಿಚಾರವನ್ನೂ ಬಹಳ ಹೊತ್ತು ಬಚ್ಚಿಟ್ಟುಕೊಳ್ಳುವ ಸ್ವಭಾವ ಅವ ರದ್ದಲ್ಲ. ಅವರಲ್ಲಿಗೆ ಕಾಲಯಾಪನೆಗಾಗಿಯೂ, ಸ್ವಕಾರ್ಯಸಾಧನೆಗಾ ಗಿಯೋ ಬಂದು ಹೋಗುತ್ತಿದ್ದ ಅನೇಕ ದೇಶಭಕ್ತರು ಉಂಟು. ಅವ ರೊಡನೆ ತಮ್ಮ ಯೋಚನೆಗಳನ್ನು ಹಂಚಿ ಉಣ್ಣುವುದು ರಾಯರ ಸ್ವಭಾವ. ಅದರಂತೆ, ಈ ವಿಷಯವನ್ನೂ ಅವರ ಮುಂದಕ್ಕೆ ಇರಿಸಿದರು. ರಾಯರು ಮುಗಿಲ ಅರಮನೆ ಕಟ್ಟುವುದರಲ್ಲಿ ಮೊದಲೇ ನಿಪುಣರು. ಸಣ್ಣ ಪುಟ್ಟ ಯೋಚನೆಗಳನ್ನು ಅವರ ಮುಂದೆ ಹಾಯುವುದೆಂದೇ ಇಲ್ಲ. ಆದುದ ರಿಂದ, ಮುಂದೆ ತೆರಯಲಿರುವ ತಮ್ಮ "ದಲಿತಾಶ್ರಮದಲ್ಲಿ ಕನಿಷ್ಠ ಐವತ್ತು ಬಡ ಜನರಿಗೆ ಉದ್ಯೋಗ ಕಲ್ಪಿಸಬೇಕು; ವಿದ್ಯೆ ಒದಗಿಸಬೇಕು" ಎಂದು ಹೆವಣಿಕೆ ಹಾಕಿದರು. 'ಅಷ್ಟು ಸ್ವಲ್ಪ ಭೂಮಿಯಿಂದ ಅಷ್ಟೊಂದು ಕೆಲಸ ಸಾಧ್ಯವೇ' ಎಂದು ಗೆಳೆಯರು ಅನುಮಾನಿಸಿದರೆ, 'ಆಚೀಚೆಗಿನ ಭೂಮಿ ಗಳನ್ನು ಕೊಂಡರಾಯಿತು' ಎನ್ನುತ್ತಾರೆ. 'ಗೇಣಿ ಕೊಟ್ಟು ಬರುವ ಉಳಿ ತಾಯದಲ್ಲಿ ಏನು ಸಾಧ್ಯ' ಎಂಬ ಅನುಮಾನವಿತ್ತಿದ್ದರೆ, 'ಈಗ ಎಷ್ಟೆಲ್ಲಾ ಆಶ್ರಮಗಳು ಜಮೀನು ಇಲ್ಲದೆಯೆ ನಡೆಯುತ್ತಲಿಲ್ಲ, ಎನ್ನುತ್ತಾರೆ. ಯಾವೊಂದು ಆಶ್ರಮದ ಸ್ಪಷ್ಟವಾದ ಪರಿಚಯವೂ ಅವರಿಗಿರಲಿಲ್ಲ. ಅವರಿಗೆ ಗೊತ್ತಿದ್ದ ಖಂಡಿತವಾದ ಒಂದು ಮಾತು ಎಂದರೆ ಅವರ ತಾಯಿ ಹೇಳುತ್ತಿದ್ದ ಮಾತು: "ಕಿರಿ ಪದಪಿನ ಆಸ್ತಿ ಬಂಗಾರದಂಥ"ದೆಂದು. ಅದರ ಮೇಲೆ ನಿಂತಿದೆ ಅವರ ಮುಗಿಲ ಗೋಪುರ.

ತಮ್ಮ ಈ ಕನಸು ಕೃತಿಗೆ ಬರಲು ಹತ್ತೆಂಟು ಮಂದಿ ಕೆಲಸಗಾರ

ರಾಯರೂ ಬೇಡವೇ—ಎಂದು ತೋರಿತು. ಈ ತನಕ ಅವರ ಆಶ್ರಯದಲ್ಲಿ ದುಡಿದಿದ್ದು, ಕೆಲಸ ನೆರವೇರಿಸಲಾರವೆ, ಹೊಸ ಉದ್ಯೋಗ ದೊರಕಿಸಿ ಕೊಳ್ಳಲಾರದೆ, ಮಾತಿನಲ್ಲೇ ಕಾಲ ಕಳೆಯುತ್ತಿದ್ದ ಕೆಲವು ಸ್ವಯಂಸೇವ ಕರು ಇದ್ದರು. ಮನಸ್ಸಿಗೆ ಯೋಚನೆ ಹೊಳೆದ ಒಡನೆಯೇ, ರಾಯರು ಅಂಥ ನಾಲ್ಕಾರು ಮಂದಿಯನ್ನು ಕರೆಯಿಸಿ, ಕೆಲಸಕ್ಕೆ ನೇಮಕ ಮಾಡಿಯೂ ಆಯಿತು. ಅವರಾದರೂ, "ನಾಳೆ ಬೇರೊಂದು ಉದ್ಯೋಗ ಸಿಗುವ ತನಕ 'ಇದಾದರೂ ಇದು" ಎಂದುಕೊಂಡರು. ಈ ಯಾವ ಏರ್ಪಾಡುಗಳೂ ರಾಧಾಕೃಷ್ಣನಿಗೆ ತಿಳಿದಿರಲಿಲ್ಲ.

ಆತ ಮಂಗಳೂರಿನಲ್ಲಿ ಮೋಟಾರಿನಲ್ಲಿ ಕುಳಿತುಕೊಂಡವನು ಉಡುಪಿಗೆ ಹೋಗಿ ಇಳಿದನು. ಅಲ್ಲಿ ಕೆಲವೊಂದು ಕಾಂಗ್ರೆಸ್ ಗೆಳೆಯರ ಭೇಟಿಯಾಯಿತು. ಅವರಿಂದ—ತನ್ನ ಹಳೆಯ ಮಿತ್ರ ಸದಾನಂದನಿಗೆ ಉಡುಪಿಯಲ್ಲಿ ಆ ದಿನವೇ ಲಗ್ನ-ಎಂದು ತಿಳಿಯಿತು. ಆಮಂತ್ರಣವಿಲ್ಲದೆ ಹೋದರೂ, ಮದುವೆಯ ಮನೆಗೆ ಹೋಗಿ, ಆತನಿಗೆ ಭೇಟಿಯಾದನು. ಅಲ್ಲಿ ಆನಂದದ ಸ್ವಾಗತ ದೊರೆಯಿತು. "ನೋಡು ರಾಧಾಕೃಷ್ಣ—ಇನ್ನು ನಿನಗೆ ನಾನು ಬೇಕಾದ ಸಹಾಯ ಮಾಡಬಹುದು. ನನ್ನ ಪರೀಕ್ಷೆ ಮುಗಿಯಿತು. ನನಗೆ ಕುಂದಾಪುರದಲ್ಲಿ ಇರಲು ಮನಸ್ಸಿಲ್ಲ. ತಂದೆಯ ಕಿರಿಕಿರಿ ನನಗೆ ಸರಿಹೋಗುವುದಿಲ್ಲ. ಈ ಊರಿನಲ್ಲೇ ಒಂದು ಖಾಸಗಿ ಡಿಸ್‌ಪೆನ್ಸರಿ ತೆರೆಯುವ ಯೋಚನೆ ಮಾಡಿದ್ದೇನೆ. ಇಲ್ಲಿಂದ ನಿನಗೆ ಬೇಕಾದ ಸಹಾಯ ಮಾಡುತ್ತೇನೆ. ಹಣದ್ದಾದರೆ ಹಣದ್ದು. ನೀನು ಮುಂದೆ; ನಾನು ನಿನ್ನ ಹಿಂದೆ." ಎಂದು ಆತ ಭರವಸೆಕೊಟ್ಟನು.

ಅವನ ಪ್ರೋತ್ಸಾಹದಿಂದ ಈತನು ಉತ್ಸಾಹ ತಾಳಿದನು. ತನ್ನ ಹೊಸ ಯೋಚನೆಯನ್ನು ಅವನ ಮುಂದಿರಿಸಿದನು. ಅದಕ್ಕೆ ಸದಾನಂದ ನೆಂದ "ಹಾಗಾದರೆ ನೀನೂ ಕುಂದಾಪುರವನ್ನು ಬಿಟ್ಟಂತೆಯೇ. ಹಾಗಿದ್ದರೆ ಮಂಗಳೂರಿನಲ್ಲಿ ಆ ಆಶ್ರಮ ಮಾಡುವುದೇತಕ್ಕೆ? ಅದರ ಬದಲು ಉಡುಪಿಗೆ ಸಮೀಪ ಎಲ್ಲಿಯಾದರೂ ಮಾಡಿದರೆ, ನಾವು ಕೂಡಿಯೇ ಕೆಲಸಮಾಡಬಹುದಲ್ಲ."

"ದಯಾನಂದ ರಾಯರಿಗೆ ಮಾತು ಕೊಟ್ಟು ಬಂದಿದ್ದೇನೆ."

"ದಯಾನಂದರಾಯರಿಗೆ! ಅವರೀಗ ಮೊದಲಿನ ಸ್ಥಿತಿಯಲ್ಲಿ ಇಲ್ಲ. ಅವರ ಆಸ್ತಿಯೆಲ್ಲವೂ ಅಡವು ಆಗಿದೆಯಂತೆ. ಸಾಲದವರ ಬಿಗಿ ಈಗಾಗಲೇ ತೊಡಗಿದೆ. ಅವರನ್ನು ನಂಬಿ ಯಾವ ಕೆಲಸಕ್ಕೆ ತೊಡಗಿದರೂ, ನಾಳೆ ತೊಂದರೆ ಬರುವುದು ಖಂಡಿತ"

ನಿಶ್ಚಿಂತೆಯಿಂದ ಬಂದಿದ್ದ ಅವನ ಆಲೋಚನೆಗಳಿಗೆ, ಈ ಹೊಸ ವಾರ್ತೆಯನ್ನು ಕೇಳಿ ಏಟು ಬಿದ್ದಂತಾಯಿತು. ಅವರು ಮೊದಲಿನಂತಿಲ್ಲ ಎಂಬುದನ್ನು ಕೇಳಿ ಬಲ್ಲ. "ಆದರೆ ಸದಾನಂದನೆನ್ನುವಷ್ಟು ತೊಡಕಿನಲ್ಲಿರುವುದಾದರೆ, ತಮ್ಮ ಕಿರಿಪದವಿನ ಭೂಮಿಯ ತನಕ ತನ್ನನ್ನು ಒಯ್ದು, ಅಷ್ಟೆಲ್ಲ ಹೇಳುತ್ತಿದ್ದರೇ? ಈ ತನಕ ಅವರು ಮಾಡಿದ ಕೆಲಸ ಸ್ವಾರ್ಥವೇ? ಸುಳ್ಳೇ? ತಮ್ಮ ಹಿಂದು ಮುಂದು ಅಷ್ಟೂ ಗೊತ್ತಿಲ್ಲದ ಮನುಷ್ಯರೇ ಅವರು?" ಎಂದು ಆತ ಯೋಚಿಸಬೇಕಾಗಿ ಬಂದಿತು. "ಇರಲಿ, ಇನ್ನು ಹದಿನೈದು ದಿನಗಳಲ್ಲಿ ಯಾವುದಾದರೂ ನಿರ್ಧಾರಕ್ಕೆ ಬರುತ್ತೇನೆ. ಇರುವ ಪರಿಸ್ಥಿತಿಯನ್ನು ಅವರೊಡನೆಯೂ ಚರ್ಚಿಸುತ್ತೇನೆ. ನೀನು ಒಂದು ಯೋಗ್ಯವಾದ ಜಾಗ ಇದೆಯೋ ನೋಡು: ತೀರ ಪೇಟೆಯೂ ಆಗಬಾರದು, ತೀರ ಹಳ್ಳಿಯೂ ಆಗಬಾರದು" ಎಂದು, ಅಲ್ಲಿಂದ ಕುಂದಾಪುರಕ್ಕೆ ಬಸ್ಸು ಹಿಡಿದನು.

ಬಸ್ಸು ಊರನ್ನು ಸೇರುವಾಗ ಕತ್ತಲು ಕವಿದಿತ್ತು. ನೇರಾಗಿ ದೋಣಿ ಮಾಡಿಕೊಂಡು ಮಾವನ ಮನೆಗೆ ಹೋಗಲೇ, ಇಲ್ಲವೇ ಬಹು ದಿವಸಗಳಿಂದ ಕಾಣದೆ ಇದ್ದ ತಂದೆ ತಾಯರನ್ನು ಭೇಟಿಯಾಗಲೇ— ಎಂದು ಯೋಚಿಸಿದನು. ಹಾಗೆ ಮಾಡುವುದಕ್ಕೆ ಅಧೈರ್ಯ. ತಂದೆಗಂತೂ, ಅವನ ಮೇಲಿನ ಸಿಟ್ಟು ಮತ್ತಷ್ಟು ಹೆಚ್ಚಿರಬೇಕು. ತನಗೂ ತಿಳಿಸದೆ ಮದುವೆ ಮಾಡಿಕೊಂಡನಲ್ಲಾ ಎಂದು ತಾಯಿಯೂ ನೊಂದಿರಬೇಕು. ಯಾವ ಮುಖದಿಂದ ಅವರಿಬ್ಬರನ್ನು ಹೋಗಿ ನೋಡಲಿ? ಆದರೂ ಮಮತೆ ಕಡಿಯಲೊಲ್ಲದು. 'ಆದದ್ದು ಆಗಲಿ' ಎಂದು ಊರ ಮೈದಾನಿನ ಬಳಿ ಬಸ್ಸು ಬರುತ್ತಲೇ, ನಿಲ್ಲಿಸಿ ಇಳಿದನು. ಮನೆಯ ಹಿತ್ತಿಲನ್ನು ಸೇರುವಾಗ ಮೈ ಬೆವರುತಿತ್ತು; ಕಾಲು ನಡುಗುತಿತ್ತು. ತಾಸು ಒಂಬತ್ತಾಗಿರಬೇಕು. ಹೋಗಿ ಬಾಗಿಲನ್ನು ತಟ್ಟಿದನು. ಅನಂತರಾಮನು ಬಾಗಿಲನ್ನು ತೆರೆದು ಇವನನ್ನು ನೋಡಿ, "ಯಾರು ಅಣ್ಣನೇ? ನೀನು ಬಂದದ್ದು ಒಳ್ಳೆಯದಾಯಿತು.

ಆಲೆಮನೆಗೆ ಹೇಳಿ ಕಳುಹಿಸಿದೆವು. ನೀನು ಅಲ್ಲಿಲ್ಲ ಎಂದು ತಿಳಿಯಿತು. ಅಪ್ಪನಿಗೆ ಕಾಯಿಲೆ. ಒಂದು ಕ್ಷಣದಲ್ಲಿ, ಬಂದ ಡಾಕ್ಟರರನ್ನು ಮನೆಗೆ ಬಿಟ್ಟು ಬರುತ್ತೇನೆ" ಎಂದನು. ಅಷ್ಟರಲ್ಲಿ ಡಾಕ್ಟರರು ಹೊರಟು ಬಂದರು. ಅವರನ್ನು ತಾನೇ ಬಿಟ್ಟು ಬರುವೆನೆಂದು ರಾಧಾಕೃಷ್ಣ ಮುಂದಾದನು. ಲಾಟೀನು ಹಿಡಿದುಕೊಂಡು, ಅವರ ಬೆನ್ನಿಗೇನೇ ಹೊರಟ. ತಂದೆಯನ್ನು ಇದಿರಿಸಲು ಅವನ ಮನಸ್ಸಿಗೇನೇ ಭೀತಿ. ಅನಂತರಾಮನು ಒಳಕ್ಕೆ ಹೋಗಿ ಶುಭ ಸಮಾಚಾರವೆಂದು ಅವರ ಮುಂದೆ "ಅಣ್ಣ ಬಂದಿದ್ದಾನೆ, ಡಾಕ್ಟರರ ಒಟ್ಟಿಗೆ ಮದ್ದು ತರಲು ಅವನೇ ಹೋಗಿದ್ದಾನೆ "ಎಂದನು.

ಹಾಸಿಗೆ ಹಿಡಿದ ರಾಮಪ್ಪಯ್ಯನವರು ಆ ಸುದ್ದಿ ಕೇಳಿ ಉರಿದರು. "ಅವನು ಯಾಕೆ ಬಂದನಂತೆ ನನ್ನ ಮನೆಗೆ? ನನ್ನ ಸಾವು ಕಾಣಲಿಕ್ಕೇನು" ಎಂದು ಚೀರಾಡಿ ಬಿಟ್ಟರು. ಅವರ ಆರ್ಭಟೆಯನ್ನು ಕೇಳಿ ಅನಂತನಿಗೆ ಗಾಬರಿಯಾಯಿತು. ಹಾಸಿಗೆಯಿಂದ ಏಳದಂತೆ ಅವರನ್ನು ಒತ್ತಿ ಹಿಡಿಯಬೇಕಾಯಿತು. ಅನಂತರಾಮನ ತಾಯಿ, "ಏನಿದು, ಅಪ್ಪನನ್ನು ನೋಡಲು ಮಾಣಿ ಬರಬಾರದೇ" ಎಂದಳು. ಅವಳಿಗೆ ಎಲ್ಲ ಸಂಗತಿಯೂ ತಿಳಿದಿತ್ತು. ತನ್ನ ಯಜಮಾನರಿಗೆ ಬಂದ ಬೇನೆಯು ಕಠಿಣ ತರದ್ದೆಂದು ಗೊತ್ತು. ಅದು ಹೆಚ್ಚಿದುದು ಸಾವಿನ ನೆನವರಿಕೆಯಿಂದಲೇ. ಅವರ ಮನಸ್ಸಿನಲ್ಲಿ—ಮೂಲಾ ನಕ್ಷತ್ರದ ಸೊಸೆಯಿಂದ, ತನಗಾಗಲೀ, ತನ್ನ ಹೆಂಡತಿಗಾಗಲೀ, ಸಾವು ಖಂಡಿತ—ಎಂಬ ಜೋತಿಷ್ಯದ ತೀರ್ಮಾನ ಬೇರು ಬಿಟ್ಟಿತ್ತು. ಬೇನೆಯ ಜತೆಗೆ ಆ ಭೀತಿ ನಟ್ಟಿತ್ತು. ಮೈಯಲ್ಲಿ ನೀರು ತುಂಬಿ ತಿಂಗಳಾಯಿತು. ಜ್ವರದಿಂದ ಹಾಸಿಗೆ ಹಿಡಿದು ವಾರ ಆಯಿತು. ವಾರವೆಲ್ಲಾ ಅವರು ನರಳುತ್ತಿದ್ದು, ಅಣ್ಣನಿಗೆ ಸುದ್ದಿ ತಿಳಿಸಬಾರದೆಂದು ಅನಂತರಾಮನಿಗೆ ಅಪ್ಪಣೆ ಮಾಡಿದರು. ತಾಯಿಯ ಉಭಯ ಸಂಕಟ ಹೇಳತೀರದ್ದು. ಮಗ ತಾನಾಗಿ ಬಂದುದಕ್ಕೆ ತಾಯಿಗೆ ತುಂಬ ಹೆಗುರವಾದರೂ, ಅನಂತರಾಮನಿಗೆ ಎಷ್ಟೋ ಧೈರ್ಯವಾದರೂ, ಅಪ್ಪನ ಅವತಾರವನ್ನು ನೋಡಿ, ಎಲ್ಲಿಲ್ಲದ ಭೀತಿ ಉಂಟಾಯಿತು. ರಾವು ಬಡಿದವರಂತೆ ಅವರು ಕೋಪದಿಂದ ಚೀರತೊಡಗಿದರು. ಎಷ್ಟು ಸಮಾಧಾನ ಹೇಳಿದರೂ ವ್ಯರ್ಥ.

ಹಿತ್ತಿಲ ಬಾಗಿಲಿನ ಸದ್ದು ಆಗುತ್ತಲೇ, ಅನಂತರಾಮ ಹೊರಕ್ಕೆ ಓಡಿ ಅಣ್ಣನನ್ನು ಸಂಧಿಸಿದ. ಅಲ್ಲಿ ನಿಲ್ಲಿಸಿಕೊಂಡು, ಅತ್ತು, ಕತೆಯನ್ನೆಲ್ಲ

ಹೇಳಿದ. "ನಿನ್ನ ಹೆಂಡತಿಯ ಜಾತಕದ ಫಲ-ಈ ಕಾಯಿಲೆ-ಎಂದು ಅವರು ತಿಳಿದಿದ್ದಾರೆ; ನಿನ್ನ ಹೆಸರನ್ನು ಕೇಳಿಯೇ ಹಾರಾಡುತಿದ್ದಾರೆ." ಎಂದು ಅವನ ಹೆಗಲಿನ ಮೇಲೆ ಕೈ ಇರಿಸಿ, ಉಕ್ಕುವ ಅಳುವನ್ನು, ಕೈಯಿಂದ ಅದುಮುತೊಡಗಿದನು.

"ಹಾಗಾದರೆ ನಾನು ಹೋಗಲೇ? ನಾನು ಎದುರಿಗೆ ಬಂದರೆ ಅವರಿಗೆ ಮತ್ತಷ್ಟು ಕಷ್ಟವಾಗಿ, ಜ್ವರ ಹೆಚ್ಚೀತು. ಅದರಿಂದ ಶರೀರಕ್ಕೂ ತುಂಬ ಶ್ರಮವೇ" ಎಂದು ರಾಧಾಕೃಷ್ಣ ಕಂಬನಿಗರೆದ.

ಅನಂತನಿಗೆ ಏನು ಅನ್ನುವುದಕ್ಕೂ ತೋಚಲಿಲ್ಲ. "ಮದ್ದಿನ ಸೀಸೆಯನ್ನು ಕೊಡು. ನೀನು ಇಲ್ಲೇ ನಿಂತಿರು. ಈಗ ಬರುತ್ತೇನೆ" ಎಂದು ಮನೆಗೆ ಓಡಿದನು. ತಂದೆಯೊಡನೆ "ನೀವು ಸಿಟ್ಟು ಮಾಡುತ್ತೀರಿ ಎಂದು ಆತ ಬರಲೇ ಇಲ್ಲ. ಹೋಗಿ ಬಿಟ್ಟ. ನೀವು ಸ್ವಸ್ಥ ಮದ್ದು ಕುಡಿದು ಮಲಗಿಕೊಳ್ಳಿರಿ." ಎಂದು ಮದ್ದನ್ನು ಕುಡಿಸಿ, ಸೀಸೆಯನ್ನು ಬದಿಯಲ್ಲಿರಿಸಿ, ಈಚೆಗೆ ಬಂದ. ತಾಯಿ ಕಣ್ಣು ಸನ್ನೆ ಮಾಡಿದಳು. ಅವಳ ಬಳಿಗೆ ಸರಿದನು. "ಹೋದನೇ, ಎಲ್ಲಿಗೆ?" ಎಂದು ಕೇಳಿದಳು. ಸಂಗತಿಯನ್ನು ಹೇಳಿದನು ಆಕೆ "ಹೋಗಬಾರದೇ ಇನ್ನು, ಪೇಟೆಗೆ ಹೋಗಿ ಎಲ್ಲಾದರೂ ಮಲಗಿಕೊಳ್ಳಲಿ. ಇಲ್ಲಿದ್ದರೆ ಸ್ವರಕೇಳಿ ರೇಗುತ್ತಾರೆ. ನನಗೆ ಯಾಕೋ ಇವತ್ತು ತುಂಬ ಹೆದರಿಕೆ ಆಗುತ್ತದೆ" ಎಂದಳು. ಅಣ್ಣನಿಗೆ ಅಷ್ಟನ್ನು ತಿಳಿಸಿ, ಆತ ಮನೆಗೆ ಮರಳಿ ಬಂದನು.

ಆ ದಿನ ರಾಮಪ್ಪಯ್ಯನವರ ಸ್ಥಿತಿ ಎಲ್ಲರಿಗೂ ಹೆದರಿಕೆಯನ್ನು ಹುಟ್ಟಿಸುವಂತೆ ಇತ್ತು. ಕರೆ ಹೋಗಿ, ಭಾವ ನಾಗಪ್ಪಯ್ಯನವರೂ ಬಂದಿದ್ದರು. ರಾಧಾಕೃಷ್ಣ ಬಂದ ವಿಚಾರ ಅವರಿಗೂ ತಿಳಿಯಿತು. ಅವರು ನೆಟ್ಟಗೆ ರೋಗಿಯ ಬಳಿಗೆ ಹೋಗಿ ಕೈ ಹಿಡಿದು, ಮುಖ ಸವರಿ, "ನಿಮ್ಮ ಮಾಣಿ ಬಂದಿದೆ. ಮನೆಗೆ ಬರಲಿ, ನೀವು ಸಿಟ್ಟಾಗುವುದು ನ್ಯಾಯವಲ್ಲ. ಇಂಥ ಸಮಯದಲ್ಲಿ ಅದನ್ನೆಲ್ಲ ಮನಸ್ಸಿಗೆ ತಂದುಕೊಳ್ಳಬಾರದು" ಎಂದರು. ಭಾವನ ಮುಖವನ್ನು ನೋಡಿ ರಾಮಪ್ಪಯ್ಯ "ಹೊಂ" ಎಂದು ಘೂಂಕರಿಸಿದರು. "ನನಗೂ ಅವನಿಗೂ ಋಣವಿಲ್ಲ. ನನ್ನ ಶ್ರಾದ್ಧವನ್ನು ಸಹ ಅವನು ಮಾಡಬೇಕಾಗಿಲ್ಲ. ಮಾಡ ಕೂಡದು. ನನಗೆ ಉಳಿದ ಇಬ್ಬರು ಮಕ್ಕಳು ಪಿಂಡ ಹಾಕಿದರೆ ಸಾಕು" ಎಂದರು.

ಮನೆಯ ಆಕೆ "ಬೇಡ, ಈಗ ಯಾವ ಮಾತೂ ಬೇಡ. ಜ್ವರ ಸಿತ್ರಾಣಗಳು ತುಂಬಿರುವಾಗ ಇದೆಲ್ಲ ವಿಪರೀತವಾಗಿ ಕಾಣುವುದು ಸಹಜ. ಮೊದಲು ಅವರ ಮನಸ್ಸು ಸಮಾಧಾನಕ್ಕೆ ಬರಲಿ" ಎಂದಳು.

ಕತ್ತಲು ಏರಿತು. ತಾಲೂಕು ಕಚೇರಿಯ ಗಂಟೆ ಹದಿನೆರಡು ಬಾರಿಸಿದ್ದು ಸ್ಪಷ್ಟವಾಗಿ ಕೇಳಿಸಿತು. "ಅಣ್ಣಾ, ನೀನು ಮಲಗಿಕೋ. ಅನಂತನೂ ಮಲಗಲಿ. ನಾನೊಬ್ಬಳು ಕೂತಿದ್ದರೆ ಸಾಕು" ಎಂದಳು ಆಕೆ. ಆದರೆ ಯಾರೂ ಮಲಗಲಿಲ್ಲ. ಆ ರಾತ್ರಿ ಕಳೆಯುವುದು ಕಷ್ಟವೆಂದು ಅನಂತನಿಗೆ ಡಾಕ್ಟರರು ತಿಳಿಸಿದ್ದರು. ನಿಜ, ರಾತ್ರಿ ಪೂರ್ಣ ಕಳೆಯಲಿಲ್ಲ. ಸುಮಾರು ಎರಡು ಘಂಟೆಯ ಒಳಗೆ, ಮನೆಯಿಂದ ಮೊಳಗಿದ ಬೊಬ್ಬೆ ಹಿತ್ತಿಲ ಬಾಗಿಲ ಬಳಿ, ನೆಲದಲ್ಲಿ ಒರಗಿ ತೂಕಡಿಸುತ್ತಿದ್ದ ರಾಧಾಕೃಷ್ಣ ನನ್ನು ಎಚ್ಚರಿಸಿತು. ಗಾಬರಿಗೊಂಡು ಮನೆಗೆ ಓಡಿ ಬಂದನು. ಬಾಗಿಲು ಇಕ್ಕಿತ್ತು. ಕಿಟಿಕಿಯಿಂದಲೇ ರೋದನ ಹಾ ಹಾಕಾರಗಳ ದರ್ಶನವಾಯಿತು. 'ಅನಂತಾ' ಎಂದು ಕೂಗಿ ಕರೆದನು. ಕದ ತೆರೆಯಿತು. ತಾಯಿ ಬಂದು ಅವನನ್ನು ತಬ್ಬಿ ನೆಲಕ್ಕೆ ಕುಸಿದಳು.

ರಾಧಾಕೃಷ್ಣ ತಬ್ಬಿಬ್ಬಾದನು. ತಂದೆಯ ಅವಸಾನವು ವೈದ್ಯರ ಮಾತಿನಿಂದ ಅವನಿಗೂ ನಿರೀಕ್ಷಿತವಾಗಿತ್ತು. ಆದರೆ ಸಾಯುವ ಮುನ್ನ—ವೈರವನ್ನು ಹೊತ್ತೇ ಹೋಗುವರೆಂದು ಅವನು ಎಣಿಸಿರಲಿಲ್ಲ. ತನ್ನ ಆತ್ಮ ತೃಪ್ತಿಗೆ ಎಂಬಂತೆ, ಉಕ್ಕುವ ದುಃಖದಿಂದ ಅವರ ಕಾಲನ್ನು ಹಿಡಿದು, ಮಾತನಾಡದ ಕೊರಳಿನ ಮುಂದೆ "ಅಪ್ಪಾ, ನನ್ನಿಂದೇನು ತಪ್ಪು ಇದ್ದರೂ ಕ್ಷಮಿಸಿ" ಎಂದು ಬಿಕ್ಕಿ ಬಿಕ್ಕಿ ಅತ್ತನು. ಕೂಸಿಗೂ ಕಡೆಮೆ ಆದ ಅವನನ್ನು ಸೋದರ ಮಾವ ಸಾವರಿಸುತ್ತ "ನಿನಗೆ ಮರುಳೇ ಮಗು? ಬ್ರಹ್ಮ ಬರೆದುದನ್ನು ಯಾರಾದರೂ ತಪ್ಪಿಸ ಬಲ್ಲರೇ" ಎಂದು ಸಮಾಧಾನ ಹೇಳುವಂತಾಯಿತು.



## ಆರನೆಯ ಅಧ್ಯಾಯ

ರಾಧಾಕೃಷ್ಣ ಊರನ್ನು ಬಿಟ್ಟು ದಲಿತಾಶ್ರಮವನ್ನು ಸೇರಿದ್ದಾನೆ ಬಂದು ಸೇರಿ, ನಾಲ್ಕು ತಿಂಗಳ ಕಾಲ ಕಳೆದಿದೆ. ಅವನ ಪ್ರತಿಯೊಂದು ದಿನವೂ ನೆನೆಯುವಂತ್ತು; ಕೂಸು ಹುಟ್ಟುವ ಮೊದಲೇ, ಕೊರಳಿಗೆ ಬೀಸುವ ಕಲ್ಲನ್ನು ಕಟ್ಟಿಕೊಂಡು ಬಂದರೆ ಹೇಗಿರಬಹುದೋ—ಹಾಗಿತ್ತು ಅವನ ಸಂಸಾರ. ತಂದೆಯ ಮರಣದಿಂದಾಗಿ, ಆತ ಅಲ್ಲಿಗೆ ಬಂದು ಸೇರಲು ತುಸು ನಿಧಾನವಾಯಿತು. ಬರುವುದರೊಳಗಾಗಿ ದಯಾನಂದ ರಾಯರು ತಮಗೆ ತಿಳಿದಂತೆ ಎಲ್ಲಾ ಕೆಲಸ ನಡೆಯಿಸಿದ್ದರು. ಅವನು ಅಲ್ಲಿಗೆ ಬಂದು ಸೇರುವಾಗ ಆ ಜಾಗದಲ್ಲಿದ್ದ ಎರಡು ಹುಲ್ಲು ಚಾವಣಿಯ ಮನೆಗಳಲ್ಲಿ ಜನ ತುಂಬಿದ್ದರು. ಒಂದರಲ್ಲಿ ಹತ್ತೆಂಟು ಮಂದಿ ಬಾಲಕರು; ಇನ್ನೊಂದರಲ್ಲಿ ಮೂರು ಮಂದಿ ಸಹ ಅಧ್ಯಾಪಕರು. ಈತ ಆ ಬಳಗಕ್ಕೆ ಮುಖ್ಯ ಆಚಾರ್ಯ. ಸಪತ್ನಿಕನಾಗಿ ಬಂದಿದ್ದಾನೆ. ಬಂದವರಿಗೆ ನೆಲೆಸಲು ಬೇರೆ ಜಾಗವಿಲ್ಲ. ಇವರು ಬಂದು ಹೋಗುವಾಗಲೆಲ್ಲ ಮನೆಯ ಜನ ಎದ್ದು, ಕುಳಿತು, ಸರಿಯುವುದಾಯಿತು. ತಾನು ಅಲ್ಲಿಗೆ ಒಮ್ಮೆಗೇ ಸಂಸಾರಿಯಾಗಿ ಬಂದುದು ತಪ್ಪಾಯಿತು—ಎಂದು ಅವನಿಗೆ ತೋರಿತು. ಆದರೆ ಅವರಿಬ್ಬರ ಆಗಮನದಿಂದ ಉಳಿದವರಿಗೆ ಅಷ್ಟೊಂದು ತೊಂದರೆ ಆಗಿರಬೇಕಿಲ್ಲ. ಕಾರಣವಿಷ್ಟೆ—ಆಶ್ರಮ ಪ್ರಾರಂಭವಾದ ಬಹು ದಿವಸಗಳ ತನಕ ಅಲ್ಲಿನ ಮುಖ್ಯ ಚಟುವಟಿಕೆ—ಎಂದರೆ ಅಡುಗೆಯ ಕೆಲಸ. ಹತ್ತಾರು ಮಂದಿಗೆ ಅಡುಗೆ ಮಾಡಿಸಿ, ಬಡಿಸಿ ಉಣ್ಣುವಾಗ ಉಪಾಧ್ಯಾಯರ ಉತ್ಸಾಹ ಬರಿದಾಗುತಿತ್ತು. ಈಗ ಇನ್ನಿಬ್ಬರು ಹೆಚ್ಚಿಗೆ ಸೇರಿದರು. ಹೆಂಗಸು ಒಬ್ಬಳು ಬಂದುದರಿಂದ ಅಡುಗೆಯ ಪಟ್ಟವನ್ನು ಅವಳಿಗೆ ಒಪ್ಪಿಸಿ, ತಾವು ಹಾಯಾಗಿ ಇರಬಹುದಲ್ಲಾ ಎಂದು ಅವರು ಯೋಚಿಸಿದರು.

ರಾಧಾಕೃಷ್ಣನಿಗೆ ಏನು ಮಾಡುವುದಕ್ಕೂ ತೋಚಲಿಲ್ಲ. ಕುಳಿತಿರಲು ಜಾಗವಿಲ್ಲದೇನೇ, ಇಷ್ಟೊಂದು ಜನರನ್ನು ಪ್ರಾರಂಭದಲ್ಲಿಯೇ ತುಂಬಿಸಬಾರದಿತ್ತು—ಎಂದುಕೊಂಡನು. ಅಧ್ಯಾಪಕರು ಒಬ್ಬರು "ನೀವೇಕೆ ಹೆದರುತ್ತೀರಿ? ದಯಾನಂದರಾಯರು ಹೇಳಲಿಲ್ಲವೇ—ಶಾಲೆಗಾಗಿ

ಬೇರೆಯೇ ಒಂದು ದೊಡ್ಡ ಚಾವಣಿಯನ್ನು ಹಾಕಿಸುತ್ತೇನೆ—ಎಂದು ನಿಮಗೇನೂ ಯೋಚನೆ ಬೇಡ" ಎಂದರು. ಈತ ಬಂದೊಡನೆಯೆ, ಉಳಿದವರು ತಮ್ಮ ಶೈಕ್ಷಣಿಕ ಶೀವಿಯನ್ನು ಚಲಾಯಿಸಿದರು. ಪಾಕಶಾಲೆಯಲ್ಲಿ ಸತ್ಯಳ ಶ್ರಮವನ್ನು ತಗ್ಗಿಸುವ ಕೆಲಸ ರಾಧಾಕೃಷ್ಣನಿಗೆ ಸಂದಿತು. ಮೂವರು ಉಪಾಧ್ಯಾಯರು ತಮ್ಮ ಕೆಲಸಗಳನ್ನು ತಾವೇ ನಿರ್ಣಯಿಸಿಕೊಂಡಿದ್ದರು. ಒಬ್ಬರು ಚರಖಾ ಮಾಸ್ತರರು, ಒಬ್ಬರು ಹಿಂದೀ ಅಧ್ಯಾಪಕರು; ಮತ್ತೊಬ್ಬರು ಸರ್ವತ್ರ ಉಪನ್ಯಾಸಕರು. ಅಷ್ಟು ಮಂದಿ ಬಾಲಕರಲ್ಲಿ, ಅಷ್ಟು ಭಿನ್ನ ವಯಸ್ಸಿನವರು ಸೇರಿದ್ದರು. ತಿಳಿವಿನಲ್ಲಿಯೂ ಅದೇ ಬಗೆಯ ಅಂತರವಿತ್ತು. ಇವರೆಲ್ಲರನ್ನು ಗುಂಪುಕೂಡಿಸಿಯೋ, ಸಂದರ್ಭಕ್ಕೆ ಸಮನಾಗಿ ಗುಂಪು ಬಿಡಿಸಿಯೋ, ಪಾಠಕಲಿಸುವ ವ್ಯವಸ್ಥೆ ಆಗಬೇಕಾಯಿತು.

ನೂಲುವ ಮಾಸ್ತರರು, ಅಷ್ಟಕ್ಕೆ ಮಾತ್ರ ಪಂಡಿತರು. ಸುಮಾರು ಐವತ್ತು ವಯಸ್ಸಾಗಿರ ಬಹುದು. ಉಬ್ಬಸದಿಂದ ಮಾತನಾಡುವುದಕ್ಕೆ ಆಗುತ್ತಿರಲಿಲ್ಲ. ಹೆಂಡತಿ ಮಕ್ಕಳನ್ನು ಕಳೆದುಕೊಂಡ ಸಂಸಾರಿಕರು. ಯಾವುದೋ ಸಂಸ್ಥೆಯಲ್ಲಿ ಕೆಲಸಮಾಡಿದ್ದು, ತುಸು ನಂಬುಗೆ ಕೆಡಿಸಿಕೊಂಡು, ಅಲ್ಲಿಗೆ ಬಂದು ಸೇರಿದರು. ತಮ್ಮ ಉಳಿದ ಉಸಿರನ್ನು ದಯಾನಂದರಾಯರ ಗುಣಗಾನದಲ್ಲಿ ಕಳೆಯಲು ಶಕ್ತರಾದುದರಿಂದ, ಈ ಕೆಲಸವು ದೊರೆಯಿತು. ರಾಯರ ದೃಷ್ಟಿಯಲ್ಲಿ "ನಮ್ಮ ಚಾರಪ್ಪ ಮಾಸ್ತರರು A—1 ಜನ! ಹಿಂದೀ ಅಧ್ಯಾಪಕರು ಕರ್ರಗಿನ, ತೆಳ್ಳಗಿನ ಒಬ್ಬ ತರುಣ. ಉದ್ದಾಮ ರಾಷ್ಟ್ರ ಭಕ್ತಿ ಅವರದು. ಆಶ್ರಮದ ಗಿಡ ಮರಗಳು ಸಹ ಹಿಂದೀ ಭಾಷೆಯನ್ನು ಕಲಿಯಬೇಕೆಂದು ಅವರ ಮತ. ಅಲ್ಲಿನ ಮೂಲನಿವಾಸಿಯಾದ ಬಿರುಮ ಮರಕಾಲನೊಡೆಯೂ ಅವರು "ಆಯಿಯೇ ಜನಾಬ್" ಎಂದು ಮಾತನಾಡುವರೇ ಹೊರತು ಮನೆಯ ಮಾತಾದ ತುಳುವನ್ನಾಗಲೀ, ನಾಡನುಡಿಯಾದ ಕನ್ನಡದಲ್ಲಿಯಾಗಲೀ ಮಾತನಾಡಿ, ನಾಲಿಗೆ ಕೆಡಿಸಿಕೊಂಡವರಲ್ಲ ಯಾವಾಗ ಕೇಳಿದರೂ—ತುಳಸೀದಾಸ ರಾಮಾಯಣ, ಪ್ರೇಮಚಂದ್ರರ ಕಾದಂಬರಿಗಳ ವಿಚಾರಗಳು-ಅವರ ನಾಲಿಗೆಯ ಮೇಲೆ ನಲಿಯುತ್ತಿದ್ದುವು. ದಯಾನಂದರಾಯರ ಗತ ಇಲ್ಲವೆ ಮೃತ ರಾಷ್ಟ್ರೀಯ ಪಾಠಶಾಲೆಯಲ್ಲಿ ದುಡಿದು ಕೀರ್ತಿತಾಳಿದವರು. ಕ್ಷಣಕಾಲಕ್ಕೂ

ಅವರು ತಮ್ಮ ಖಾದಿ ಟೋಪಿಯನ್ನು ಬಿಟ್ಟವರಲ್ಲ. ಬಿಟ್ಟರೆ—ಅವರ ಉಸಿರೇ ಅಲುಗಾಡದು. ತುಂಬಿದ ಜುಟ್ಟನ್ನು ಮುಚ್ಚುವರೆ, ರಾತ್ರಿಯೂ ಅದನ್ನು ಬಳಸುತ್ತಾರೆ. ನಖ ಶಿಖಾಂತ ಅವರು ಖಾದಿಮಯರು. ಉಳಿದವರಂತಲ್ಲ. ಅವರು ಬಂದ ದಿವಸವೇ ಕೂತ, ಪ್ರವಚನ ತೊಡಗಿದರು. ರಾಧಾಕೃಷ್ಣ ಬಂದು ಸೇರುವಾಗ ಮಕ್ಕಳಿಗೆ ಪಹಿಲಿ ಕಿತಾಬ್ ಮುಗಿದು ಹೋಗಿತ್ತು. ದುಸಿರೀ ಕಿತಾಬು ಸಿಗದೆ ಒದ್ದಾಡುತ್ತಿದ್ದರು. ಅವರು ತಮ್ಮ ಊರಲ್ಲಿ ಶೀನಪ್ಪ ಎಂಬ ಹೆಸರು ಪಡೆದವರಾದರೂ, ರಾಷ್ಟ್ರೀಯತೆಯಿಂದ ಬೇಗಿ, ಶ್ರೀ ಪಂಡಿತ್ ನಿವಾಸಜೀ ಎಂದು ಕರೆಯಿಸಿಕೊಂಡಿದ್ದಾರೆ. ಬಾಲಕರು 'ಪಂಡಿತ್‌ಜೀ' ಎಂದು ಸಂಭಾವಿಸಲೇ ಬೇಕು. ಅವರ ಮನಸ್ಸಿಗೆ ನಿಜವಾದ ಆಶ್ರಮ ಆಗಬೇಕಾದರೆ, ತನ್ನಂತೆ ರಾಷ್ಟ್ರೀಯತೆಯಲ್ಲಿ ಅದ್ದಿ ತೇಲಿದ, ಜನ ಬೇಕೇಹೊರತು ಯಾವುದೋ ಹಳ್ಳಿ ಮೂಲೆಯ ರಾಧಾಕೃಷ್ಣ ಅದಕ್ಕೆ ತಕ್ಕವನೆಂದು ತೋರಿ ಬರಲಿಲ್ಲ. ಗಾಂಧೀಜಿಯವರೇ--ಪರದೇಶಿಯ ವಿದ್ಯೆಯಿಂದ ನಮಗೆ ಉಪಯೋಗವಿಲ್ಲ ಎಂದು ಸಾರಿರುವಾಗ ಅರ್ಧ ಇಂಗ್ಲಿಷ ವಿದ್ಯಾವಂತನಾದ ರಾಧಾಕೃಷ್ಣನು, ಆಚಾರ್ಯಪಟ್ಟಕ್ಕೆ ಬರುವುದು ಏನೂ ಸಮವೆನಿಸಲಿಲ್ಲ. ಬಂದ ಮೇಲೆಯೂ, ಅವನನ್ನು ಒಪ್ಪುವುದು ಅವರ ಮನಸ್ಸಿಗೆ ತುಂಬ ಕಷ್ಟವಾಗಿತ್ತು. ಇನ್ನು ಮೂರನೆಯ ಮಾಸ್ತರರ ವಿಚಾರ--ಅವರು ಇಂಟರ್ ಓದಿದ್ದಾರಂತೆ. ಹಲವರಿಗೆ ದೇಶಸೇವೆಯಲ್ಲಿ ಬೇಸರ ಬಂದಿರುವಾಗ,ಇವರು ಹೊಸತಾಗಿ ಸೇರಿದವರು. ಅವರ ಮನೆ, ಮಠ ಯಾರಿಗೂ ತಿಳಿಯದು. ಒಂದು ದಿನ ಅವರಾಗಿ ದಯಾನಂದರಾಯರಲ್ಲಿಗೆ ಹೋಗಿದ್ದರು. ನಾಲ್ಕು ದಿವಸಗಳ ಹಿಂದೆ ತಾವು ಓದಿದ್ದ, ಹೆರಬಿಲಾಸ ಶಾರದಾ ಇವರ Hindu Superiority ಗ್ರಂಥದ ನೆನಪಿನಿಂದ ಒಂದೇ ಸವನೆ ಎರಡು ತಾಸುಮಾತಾಡಿದರು. ಅವರ ಫಲವಾಗಿ "ಸಾಂಸ್ಕೃತಿಕ ಶಿಕ್ಷಣಕ್ಕೆ ಅವರನ್ನು ಬಿಟ್ಟು ಇನ್ನಾರೂ ಇಲ್ಲ" ಎಂಬ ತೀರ್ಮಾನಕ್ಕೆ ರಾಯರು ಬಂದರು. ಈ ಮೂವರ ಮೇಲೆ ಆಚಾರ್ಯ ರಾಧಾಕೃಷ್ಣನಿದ್ದಾನೆ; ಇವರುಗಳಿಂದ ತಮ್ಮ ದಲಿತಾಶ್ರಮವು ಗುರುಕುಲದ ಮಟ್ಟವನ್ನು ಬಹು ಬೇಗನೆ ಸೇರುವುದೆಂದು ರಾಯರು ತಿಳಿದಿದ್ದರು.

ಇನ್ನು ಅಲ್ಲಿ ಕಲಿತ ಬಾಲಕರ ವಿಚಾರ. ಅವು ಆಯ್ದ ಕುಸುಮಗಳು. ಅವರಲ್ಲಿ ಮೂವರು ಐದಾರು ವರ್ಷದ ಮುದ್ದುಗಳು. ಮಾಗ

ಊರಿನ ಬಡ ತಾಯಿತಂದೆಯರಿಂದ ಎರವಲಾಗಿ ತಂದಿರಿಸಿದ ವಸ್ತುಗಳು. ಉಳಿದ ಎಂಟು ಮಂದಿಯಲ್ಲಿ ಎಂಟು ವರ್ಷದಿಂದ ತೊಡಗಿ ಹದಿನಾಲ್ಕು ವರ್ಷದ ತನಕ ಇರುವ ಸಮೀಪದ ಗ್ರಾಮಸ್ಥರ ಮಕ್ಕಳು. ರಜೆ ಬಂದರೆ, ಹಬ್ಬ ಬಂದರೆ, ಬೇಸರ ಬಂದರೆ, ಮನೆಯ ನೆನಪು ಬಂದರೆ-- ಹೇಳಿಯಾಗಲೀ, ಹೇಳದೆ ಆಗಲೀ, ತಮ್ಮ ಮನೆಗೆ ಹೋಗಿ ಬರುವ ಮಕ್ಕಳು. ಅವರಲ್ಲಿ ಹಿರಿಯರಾದ ಇಬ್ಬರು ವರ್ಷ ಹದಿನಾಲ್ಕೆಂದರೂ, ಹದಿನಾರು, ಹದಿನೆಂಟರ ಗಾತ್ರದವರು. ಶಾಲೆಗೆ ಹೋಗಿಯೇ ಆಗಬೇಕಾದುದು ಏನಿಲ್ಲ. ಆದರೆ ಅವರ ಆವಾಂತರ ಸಹಿಸಲಾರದ ತಂದೆತಾಯರು, ಅವರನ್ನು ದಲಿತಾಶ್ರಮಕ್ಕೆ ದಾನಮಾಡಿದ್ದಾರೆ. ಈ ಹನ್ನೊಂದು ಮಂದಿ ಹನ್ನೊಂದು ಜಾತಿಗೆ ಸೇರಿದವರು. ಅವರಲ್ಲಿ "ದಲಿತರು" ಅಂದರೆ ಅಸ್ಪೃಶ್ಯರು ಯಾರೂ ಇರಲಿಲ್ಲ. ಅದಕ್ಕಾಗಿಯೇ ಆಶ್ರಮದ ತೆರೆಯೋಣ ವನ್ನು ಮುಂದುವರಿಸುವುದು ರಾಯರಿಗೆ ಇಷ್ಟವಾಗಲಿಲ್ಲ. ದಲಿತಾಶ್ರಮ ವೆಂದು ಮೊದಲೇ ನಾಮಕರಣ ಮಾಡಿಯಾಗಿತ್ತು. ದಲಿತ ಜನ ಸಿಗುವ ತನಕ, ರಾಯರ ಆತುರ ತಡೆದು ನಿಲ್ಲುವಂತಿಲ್ಲ. 'ಆಶ್ರಮವನ್ನು ತೆರೆದ ಮೇಲೆ, ಅವರು ಬಂದೇ ಬರುತ್ತಾರೆ' ಎಂಬ ಧೈರ್ಯದಿಂದ ಅದರ ಕೆಲಸ ವನ್ನು ಪ್ರಾರಂಭಿಸಿಬಿಟ್ಟರು.

ರಾಧಾಕೃಷ್ಣನು ಅಲ್ಲಿಗೆ ಬಂದ ಮೊದಲನೆಯ ದಿನ, ಸುತ್ತಲೂ ಬಾಲಕರನ್ನು ಕುಳ್ಳಿರಿಸಿಕೊಂಡು, ಪಂಡಿತಜೀಯವರು ಮಕ್ಕಳಿಗೆ ರಾಷ್ಟ್ರ ಗೀತೆಯ ಪಾಠ ಮಾಡಿಸುತ್ತಿದ್ದರು. ಇವನ ಗುರುತು ಅವನಿಗೆ ಇರಲಿಲ್ಲ. "ಇದರ್ ರಸ್ತಾ ನಹೀಂ" ಎಂದು ಅವನನ್ನು ಕಂಡು ಹೇಳಿದರು. ಆತ ಮೆಲ್ಲಗೆ ಬಂದು "ನಾವು ಇಲ್ಲಿಗೆ ಬಂದವರು, ದಯಾನಂದರಾಯರ ಹೇಳಿಕೆ ಮೇರೆಗೆ" ಎಂದ ಮೇಲೆ ಸುಮ್ಮನಾಗಿ, ಹೆಚ್ಚಿಗೆ ಮಾತನಾಡದೆ ತಮ್ಮ ಪಾಠವನ್ನು ಮುಂದುವರಿಸಿದರು

ಒಂದು ವಾರದ ತನಕ ಅವನು, ಯಾರೊಡನೆಯೂ ಅಲ್ಲಿನ ಶಿಕ್ಷಣ ವನ್ನು ಕುರಿತು ಚರ್ಚೆಮಾಡಲಿಲ್ಲ. ಬದಲು ತಮ್ಮಿಬ್ಬರಿಗಾಗಿ ತೆಂಗಿನ ಸೋಗೆಗಳಿಂದ ಗುಡಿಸಲು ಒಂದನ್ನು ಕಟ್ಟುವುದರಲ್ಲಿ ಸಮಯವನ್ನು ಕಳೆದನು. ಸತ್ಯ, ಆರಂಭದಲ್ಲಿ ಅಡುಗೆ ಮಾಡುತ್ತಿದ್ದ ಮಕ್ಕಳಿಗೆ ನೆರವಾದಳು. ಮುಂದೆ ಅವರ ನೆರವನ್ನು ಕೊಂಡು ತಾನೇ ಅಡುಗೆಯ ಕೆಲಸ ತೊಡಗಿ

ದಳು. ಆ ಕೆಲಸಕ್ಕೆ ಬೇಕಾದ ಸಾಮಾಗ್ರಿಗಳಾಗಲೀ, ಜಿನಸುಗಳಾಗಲೀ ಅಲ್ಲಿ ಸಮವಾಗಿರಲಿಲ್ಲ. ಅಡುಗೆಯ ಕೆಲಸ ಆಕೆಗೆ ತಿಳಿದುದೂ ಅಷ್ಟರಲ್ಲಿಯೇ ಇತ್ತು. ಆದರೂ ಹೇಗೆ ಹೇಗೆಯೋ ದಿನ ಸಾಗಿಸಿದಳು. ಒಂದು ಒಂದು ಪಕ್ಷ ಕಳೆದರೂ 'ಬರುವೆನು' ಎಂದಿದ್ದ ದಯಾನಂದರಾಯರು ಬರಲೇ ಇಲ್ಲ. ರಾಧಾಕೃಷ್ಣನು ಕಾತರನಾದನು. ಸಮವಾದ ವ್ಯವಸ್ಥೆ ಇಲ್ಲದೆ ಇದೇ ರೀತಿಯಲ್ಲಿ ಕೆಲಸ ಮಾಡಿದರೆ, ಬಟ್ಟೆಗೆಟ್ಟೀತೆಂದು ತರ್ಕಿಸಿ ಅದಕ್ಕೊಂದು ಯೋಚನೆ ಮಾಡುವ ಸಲುವಾಗಿ, ಉಳಿದ ಅಧ್ಯಾಪಕರ ಸಹಾಯವನ್ನು ಕೋರಿದನು. "ಇಷ್ಟು ಹುಡುಗರಿದ್ದಾರೆ. ಎಲ್ಲರಿಗೂ ಬೇರೆ ಬೇರೆ ವಯಸ್ಸು. ಒಂದೊಂದು ತರಗತಿ. ಅವರನ್ನು ಹೇಗೆ ಹಂಚಬೇಕು, ಯಾವ ಪಾಠ ಹೇಳಿ ಕೊಡಬೇಕು, ಯಾರಿಗೆ ಏನೇನು ಕೆಲಸ—ಇದೆಲ್ಲ ನಿಷ್ಕರ್ಷಿಸ ಬೇಡವೇ" ಎಂದು ಅವರನ್ನು ಕರೆದನು.

ಚರ್ಚೆಗೆ ಆ ನಾಲ್ಕು ಮಂದಿಯೂ ಕುಳಿತರು. ಪಂಡಿತ್‌ಜೀಯವರು ಅಖಂಡ ಹಿಂದಿಯಲ್ಲಿ ಭಾಷಣ ಮಾಡಿದರು. ಅದೇ ರಾಷ್ಟ್ರೀಯ ಶಿಕ್ಷಣಕ್ಕೆ ಮೂಲ ಮಂತ್ರ—ಎಂದರು. ರಾಧಾಕೃಷ್ಣನಿಗೆ ತಡೆಯದಾಯಿತು. "ಪಂಡಿತರೇ ಸಿಟ್ಟಾಗ ಬೇಡಿ; ಈ ಮಕ್ಕಳಿಗೆ ಮೊದಲು ಅವರ ಊರಿನ ಮಾತು ಬರಲಿ. ಬಿಡುವಿನಲ್ಲಿ ಸ್ವಲ್ಪ ಇಗ್ಲಿಷನ್ನೋ, ಹಿಂದಿಯನ್ನೋ ಕಲಿಸುವ. ಮೊದಲು ಈ ಮಕ್ಕಳನ್ನು ಯಾವ ಕೆಲಸಕ್ಕೆ ತಯಾರಿಸುವುದೆಂದು ನಿಷ್ಕರ್ಷೆ ಮಾಡುವ" ಎಂದರು.

ಪಂಡಿತ್‌ಜೀಯವರು "ಆಶ್ರಮವನ್ನು ತೆರೆದ ದಯಾನಂದರಾಯರು ಅದನ್ನು ಹೇಳಲಿಲ್ಲವೇ? ಈ ಮಕ್ಕಳನ್ನು ರಾಷ್ಟ್ರ ಸೇವೆಗೆ ತಯಾರಿಸಬೇಕೆಂದು" ಎಂದರು.

ರಾಧಾಕೃಷ್ಣ "ಈ ಆರೇಳು ವರ್ಷದ ಮಕ್ಕಳನ್ನು ರಾಷ್ಟ್ರ ಸೇವೆಗೇನು ತಯಾರಿಸುತ್ತೇವೆ. ಆ ಕೆಲಸ ನಾವು ದೊಡ್ಡವರು, ಮಾಡಿದರೇನೆ ಸಾಕು. ಅವರನ್ನು ಕಳುಹಿಸಿದ ಹಿರಿಯರು ಏನು ತಿಳಿದುಕೊಂಡಿದ್ದಾರೆಯೋ. ನಾಳೆ ಹಳ್ಳಿಯಲ್ಲಿ ಬದುಕಿಕೊಂಡಿರ ಬೇಕಾದ ಮಕ್ಕಳು. ಅವರು ಅಲ್ಲಿನ ಜೀವನಕ್ಕೆ ಹೊಂದುವಂತೆ ಮಾಡಬೇಕಾದುದು ನಮ್ಮ ಕೆಲಸ."

ನಿವಾಸಜೀಯವರು ತಾಳ್ಮೆಗೆಟ್ಟು ಎದ್ದು ನಿಂತರು. "ಯಾವು ದಕ್ಕೂ ದಯಾನಂದರಾಯರು ಬಂದು ಇತ್ಯರ್ಥ ಪಡಿಸಲಿ. ಹಿಂದೀ ಪಾಠಗಳ ವಿಷಯವಾಗಿ ನನ್ನನ್ನು ಕೇಳಿ. ಉಳಿದ ವಿಷಯಕ್ಕೆ ನಾನಿಲ್ಲ." ಎಂದರು.

ದಯಾನಂದರಾಯರು ಮಾತ್ರ ಇನ್ನೂ ಹತ್ತು ದಿವಸ ಕಳೆದರೂ ಅಲ್ಲಿಗೆ ಬರಲಿಲ್ಲ. ಪ್ರಾಯಶಃ ಎ. ಐ. ಸಿ. ಸಿ; ಕೆ. ಪಿ. ಸಿ. ಸಿ ಗಳಿಗೆ ಅಲೆ ದಾಡುತ್ತಿರಬೇಕು. ಇಲ್ಲಿ ಮಾತ್ರ ಉಗ್ರಾಣದಲ್ಲಿ ಅಕ್ಕಿಯೂ ಉಳಿದಿರ ಲಿಲ್ಲ. ಅವನ್ನು ಕುರಿತು ರಾಧಾಕೃಷ್ಣ ಯೋಚಿಸಿ-"ಪಂಡಿತರೇ, ಪಾಠದ ವಿಚಾರ ಹಾಗಿರಲಿ. ಇಲ್ಲಿನ ದಿನ ದಿನದ ಕೆಲಸಗಳಿವೆಯಲ್ಲಾ, ಆ ಕೆಲಸಗಳನ್ನು ಹಂಚಿಕೊಳ್ಳುವ. ಇಲ್ಲಿಗೆ ಬೇಕಾಗುವ ಖರ್ಚು ಎಷ್ಟು? ಇದನ್ನು ಹೇಗೆ ಕೂಡಿಸಬೇಕು? ಆರ್ಥಿಕ ದೃಷ್ಟಿಯಿಂದ ಇದು ಆದಷ್ಟು ಸ್ವತಂತ್ರ ಆಗುವ ಹಾಗೆ ಹೇಗೆ ಮಾಡಬೇಕು" ಎಂದನು. ಅದಕ್ಕೆ ಕೆಮ್ಮುತ್ತ, ಕೆಮ್ಮುತ್ತ, ಜಾರಪ್ಪ ಮಾಸ್ತರರು "ಆ ಚಿಂತೆಯೆಲ್ಲ ನಿಮಗೆ ಯಾಕೆ? ದಯಾನಂದರಾಯರು ಅದನ್ನೆಲ್ಲ ತಾವೇ ಮಾಡುತ್ತೇವೆ ಅಂದಿ ಲ್ಲವೇ?" ಅಂದರು. ಈತ ಅಸಮಾಧಾನಗೊಂಡನು. "ಅವರು ಬಂದು ಮಾಡುವ ತನಕ ನಾವು ನಿದ್ರಿಸುತ್ತ ಕುಳಿತಿರುವುವೇ? ಇಷ್ಟು ಮಕ್ಕಳನ್ನು ಇರಿಸಿಕೊಂಡು, ಸಾಕಬೇಡವೇ? ,ಇಲ್ಲಿರುವ ಅಕ್ಕಿ ನಾಳೆಗೇನೆ ಸಾಲದು. ಇಲ್ಲಿ ಒಂದು ತೊಟ್ಟು ಹಾಲಿಗೂ ವ್ಯವಸ್ಥೆ ಇಲ್ಲ. ಯಾರ ಮಕ್ಕಳಾದರೂ ಸರಿಯೇ,--ನಮ್ಮ ಜವಾಬ್ದಾರಿ ಇರುವಷ್ಟು ದಿನ, ಅವರಿಗೆ ಸಮನಾಗಿ ಹೊಟ್ಟೆಗೆ ಹಾಕಬೇಡವೇ" ಎಂದನು.

"ಅಕ್ಕಿ ಇಲ್ಲ" ಎಂಬ ಮಾತು ಕೇಳಿ ಜಾರಪ್ಪನವರು ಯೋಚನೆಗೆ ಈಡಾದರು. ಸತ್ಯ, ಪಾಕಶಾಲೆಯನ್ನು ಹೊಕ್ಕಂದಿನಿಂದ ಅವರು ಅಲ್ಲಿ ಸುಳಿದವರಲ್ಲ. ಈಗ ತುಸು ಗಾಬರಿಯಲ್ಲಿ "ರಾಯರೇ, ನನ್ನ ಆರೋಗ್ಯ ನೋಡಿದಿರಿ. ಖಂಡಿತ ಓಡಾಟಕ್ಕೆ ನಾನು ಆಳಲ್ಲ. ಇಲ್ಲಿನ ಮಕ್ಕಳ ಮೇಲು ವಿಚಾರಣೆ ನನಗಿರಲಿ. ಅವರಿಗೆ ಸದಾ ನೂಲು ಮಾಡುವುದನ್ನು ಹೇಳಿ ಕೊಡುವ ಕೆಲಸ ನನ್ನದು" ಎಂದರು. ಆದಕ್ಕೆ ರಾಧಾಕೃಷ್ಣ "ನೂಲು ಮಾಡುವುದನ್ನು ಹೇಳುವುದಕ್ಕೆ ಎಷ್ಟು ಸಮಯ ಬೇಕು—ವರ್ಷವೇ, ತಿಂಗಳೇ? ಒಮ್ಮೆ ಹೇಳಿತು ಎಂದರೆ ಮುಂದೆ ಅವರಷ್ಟಕ್ಕೆ ಅವರೇ ಕೆಲಸ

ಮಾಡಲಾರರೇ? ಇಲ್ಲಿರುವ ಮಕ್ಕಳಲ್ಲಿ ದೊಡ್ಡವರಿಗೆ ನಾವು ನೇಯುವುದನ್ನೋ, ಕೃಷಿಯನ್ನೋ ಹೇಳಿಕೊಡಬಹುದು. ಬೇರೆ ಯಾವ ಪಾಠ ಹೇಳಬೇಕು, ಹೇಗೆ-ಎಂಬುದರ ತೀರ್ಮಾನ ಮಾಡಬೇಡವೇ. ಒಬ್ಬರ ಗಮನವು ಇಲ್ಲಿನ ವರಮಾನವನ್ನು ಹೆಚ್ಚಿಸುವುದಕ್ಕೇನೆ ಇರಬೇಕು. ಮೊದಲನೆಯ ವರ್ಷ ನಾವು ಹೊರಗಿನಿಂದ ವಂತಿಗೆ, ವರಾಡಗಳನ್ನು ಬೇಡಬೇಕಾದೀತು. ಆದರೆ ಆ ಕಟ್ಟಿ ಕೊಟ್ಟ ಬುತ್ತಿಯು ಬಹು ದಿನಕ್ಕೆ ಬರಲಿಕ್ಕಿಲ್ಲ. ಇಲ್ಲಿ ಇಷ್ಟು ಚೆನ್ನಾದ ಗದ್ದೆಗಳಿವೆ; ನೀರಿದೆ. ನಮಗೆ ಬೇಕೆನ್ನುವಷ್ಟು ಅಕ್ಕಿಯನ್ನು ನಾವೇ ಬೆಳೆಯಿಸಲು ಸುಲಭ" ಎಂದರು.

ಅಂಥ ಆಪತ್ತೇನಾದರೂ ತಮ್ಮ ಮೇಲೆ ಬಿದ್ದೀತು—ಎಂದು ಅಂಜಿ ಸಂಸ್ಕೃತಿ ಅಧ್ಯಾಪಕರಾದ ದತ್ತಪ್ಪನವರು "ಬೌದ್ಧಿಕ ಶಿಕ್ಷಣದ ಸಂಪೂರ್ಣ ವ್ಯವಸ್ಥೆಯು ನನಗೆ ಇರಲಿ. ನನ್ನಿಂದ ಬೇಸಾಯ ಗೀಸಾಯ ಆಗುವಂತಿಲ್ಲ" ಎಂದರು. ಇನ್ನು ಜಾರಪ್ಪನವರಿಂದಲೂ ಮಾತು ಬರಲಿಲ್ಲ. ಪಂಡಿತಜೀಯವರು ಸುಮ್ಮಗೇನೇ ಇದ್ದಾರೆ. ಆದುದರಿಂದ ದತ್ತಪ್ಪನವರು "ಹೋಗಲಿ, ಇನ್ನೂ ಒಂದು ಕೆಲಸ ಹೆಚ್ಚಿಗೆ ಮಾಡುತ್ತೇನೆ; ಅಡುಗೆಯ ಮನೆ, ಉಗ್ರಾಣ ಭೋಜನಶಾಲೆಗಳ ಮೇಲುತನಿಖೆಗಳನ್ನು ನಾನು ನೋಡಿಕೊಂಡಿರುತ್ತೇನೆ" ಎಂದರು.

"ಇಲ್ಲಿ ಮೇಲುತನಿಖೆಯೇ ಬೇಕಿಲ್ಲ. ಅಂದರೆ ನಾವೇ ಮಾಡಿಮುಗಿಸಬೇಕಾದ ಕೆಲಸಗಳು ಎಲ್ಲ. ನನ್ನ ಹೆಂಡತಿ ಏನೋ ಒಳಗಿನ ಕೆಲಸ ಮಾಡುತ್ತಾಳೆ. ಇಷ್ಟೊಂದು ಚಿಕ್ಕ ಮಕ್ಕಳಿದ್ದಾರೆ, ಅವರನ್ನು ನಿತ್ಯ ಮೀಯಿಸುವವರು ಬೇಕು. ಅಡುಗೆ ಮಾಡುವವರು ಬೇಕು, ಚಿಕ್ಕವರ ಬಟ್ಟೆಗಳನ್ನು ಒಗೆದು ಕೊಡಬೇಕು, ತಲೆಯ ಹೇನನ್ನು ಸಹ ತೆಗೆಯಬೇಕು, ಅಡುಗೆ ಆದ ಮೇಲೆ ಬಡಿಸುವವರು ಬೇಕು. ನೀರು ತರುವ ಕೆಲಸ, ಕಟ್ಟಿಗೆ ತರುವ ಕೆಲಸ—ಇನ್ನೂ ಹತ್ತೆಂಟು ಸಣ್ಣ ಪುಟ್ಟ ಕೆಲಸಗಳಿಗೆ ನಾವೇ ಕೈ ಹಾಕಿ ಮಾಡಿದರೆ, ಮಕ್ಕಳು ನಮಗೆ ಸಹಾಯವಾದಾರು. ಇದಕ್ಕೆಲ್ಲ ನಾವು ಇನ್ನೊಬ್ಬರ ಮುಖವನ್ನು ನೋಡಿ ಪ್ರಯೋಜನವಿಲ್ಲ" ಎಂದನು.

ಆ ಎಲ್ಲ ವಿಚಾರಗಳೂ ಒಂದು ಕಮಿಟಿಯಲ್ಲಿಯೆ ನಿರ್ಧಾರವಾಗಬೇಕೆಂದೂ ಅಧ್ಯಕ್ಷ ದಯಾನಂದರು ಇಲ್ಲದೇನೇ ಅದು ಆಗುವಂತಿಲ್ಲವೆಂದೂ

ಅಂದಿನ ಸಭೆಯು ಬರ್ಖಾಸ್ತು ಆಯಿತು. ಆ ಸಂಜೆ ರಾಧಾಕೃಷ್ಣನು ಮಂಗಳೂರಿನ ತನಕ ಹೋಗಿ, ರಾಯರ ದಾರಿಯನ್ನು ಕಾದನು. ರಾಯರು ಊರಲ್ಲಿ ಇದ್ದಿರಲಿಲ್ಲ; ಎಂದು ಬರುವರೆಂದೂ ತಿಳಿಯಲಿಲ್ಲ. ಕಲ್ಕತ್ತೆಗೆ ಹೋದಹಾಗಿದೆ--ಎಂದು ಯಾರೋ ಅಂದದ್ದನ್ನು ಕೇಳಿ, ಆಶ್ರಮಕ್ಕೆ ಬಂದನು. ಆ ಸುವಾರ್ತೆಯು ಎಲ್ಲರ ಕಿವಿಗೂ ಮುಟ್ಟಿತು. ಮರುದಿವಸ ಪಂಡಿತ್‌ಜೀಯವರು ತಮಗೆ ಬೇರೆ ತಂಟೆ ಬೇಡವೆಂದು, ಎಲ್ಲ ಬಾಲಕರನ್ನು ಸುತ್ತು ಕುಳ್ಳಿರಿಸಿಕೊಂಡು, ಹಿಂದೀ ಸಂಭಾಷಣೆ ತೊಡಗಿದರು. ರಾಧಾಕೃಷ್ಣ ಅಲ್ಲಿಗೆ ಬಂದನು. ಅವರನ್ನು ಈಚೆ ಕರೆದು "ನೀವು ಕನ್ನಡ ಚೆನ್ನಾಗಿ ಬಂದ ಹುಡುಗರಿಗೆ, ಹಿಂದೀ ಪಾಠವನ್ನು ಹೇಳಿ; ಯಾವ ಪರ ಭಾಷೆಯನ್ನೂ ಹೇಳಿ. ಕನ್ನಡವೇ ಬಾರದ ಮಕ್ಕಳಿಗೆ ಯಾವ ಪರ ಭಾಷೆಯ ಪೀಡೆಯೂ ಬೇಡ." ಎಂದನು. ಅವರು ಆತನನ್ನು ದುರದುರನೆ ನೋಡುತ್ತ, ತಿರುಗಿ ತಮ್ಮ ಹಟವನ್ನು ನಡೆಯಿಸಿಯೇ ಬಿಟ್ಟರು.

ರಾಧಾಕೃಷ್ಣನು ಬಂದ ಹದಿನೈದು ದಿವಸಗಳಲ್ಲಿ, ತನ್ನ ಗುಡಿಸಲಿನ ಸಲುವಾಗಿ ಸಾಮುಗ್ರಿಗಳನ್ನು ದೊರಕಿಸಿಕೊಳ್ಳಲು ಊರಲ್ಲಿ ಅಲೆದಾಡಿದನು. ಒಬ್ಬಿಬ್ಬರ ಪರಿಚಯವೂ ಆಯಿತು. ಈಗ ಅವರಲ್ಲಿಗೆ ಹೋಗುವ ಎಂದು ಹೊರಟನು. ಆ ದಿನದ ಗ್ರಾಸಕ್ಕೆ ಬೇರೆ ದಾರಿ ಇದ್ದಿರಲಲ್ಲ. ಅದಕ್ಕಾಗಿ ಹೊರಟಿದ್ದ ಅವನು, ಹಿಂದೀ ರಣಾಗ್ರದಲ್ಲಿ ಸಿಲುಕಿಕೊಂಡನು. ಕೊನೆಗೆ ಶ್ಯಾಮು, ಸೀಲ ಎಂಬ ಇಬ್ಬರು ಹಿರಿಯ ಹುಡುಗರನ್ನು ಕರೆದುಕೊಂಡು ಗ್ರಾಮದಲ್ಲಿ ಭಿಕ್ಷಾಟನೆಗೆ ಹೊರಟನು. ಮೊದಲ ಬಾರಿ ಅಲ್ಲವೇ? ಹೋದ ಇವರಿಗೆ— ಭಿಕ್ಷೆ ಎತ್ತಲು ಸಂಕೋಚವಾದರೂ, ತಮ್ಮ ಊರಿನ ಹೊಸ ಸಂಸ್ಥೆಗಾಗಿ ದಾನಮಾಡುವುದರಲ್ಲಿ ಊರವರಿಗೆ ಉತ್ಸಾಹವೇ ಆಯಿತು. ಅದರಿಂದ ಹತ್ತೆಂಟು ಸೇರು ಅಕ್ಕಿ ಸಂಪಾದನೆ ಆಯಿತು. ಹೆಚ್ಚಿನ ದೂರ ಅವರು ನಡೆಯಲಿಲ್ಲವಾದರೂ, ಹೆಚ್ಚಿನ ವೇಳೆಯನ್ನು ಮಾತುಗಳಲ್ಲಿ ಕಳೆಯದೆಯೆ ಅಷ್ಟೊಂದು ದೊರೆಯಲಿಲ್ಲ. ಆ ಅಕ್ಕಿಯನ್ನು ತಂದು, ಸತ್ಯಗೆ ಒಪ್ಪಿಸಲು, ಆಕೆಯು ಸಣ್ಣಗೆ ಮುಖ ಮಾಡಿಕೊಂಡು "ಏನು ಹತ್ತು ಸೇರು ಇದೆಯೇ! ಇರಬಹುದೇ? ಊಟಕ್ಕೆ ಹದಿನೈದು ಬಾಯಿಗಳಿವೆ. ಬೇರೆ ಏನು ಇಲ್ಲದಿದ್ದರೂ ಬರಿಯ ಅನ್ನವನ್ನಾದರೂ ಬಡಿಸಬೇಕಲ್ಲ. ಇನು ಎರಡು ದಿವಸಕ್ಕೆ ಬಂದೀತು. ಇದೇ

ರೀತಿ ನಿತ್ಯವೂ ಜೋಳಿಗೆ ಹಾಕಿಗೊಂಡು ಹೊರಡಬೇಕಾದೀತೇ" ಎಂದು ನುಡಿಯುತ್ತಲೇ ರಾಧಾಕೃಷ್ಣ ನಕ್ಕನು. "ಯಾಕೆ ಹೆದರುತ್ತೀಯೆ? ಏನಾದರೂ ಒಂದು ವ್ಯವಸ್ಥೆ ಮಾಡದಿರುತ್ತಾರೆಯೇ? ನೀನು ಅವಸರ ಮಾಡಿದರೆ ಹೇಗೆ" ಎಂದ.

ಆತ ಭಿಕ್ಷಾವೃತ್ತಿಗೆ ಎರಡು ಹೀಗೆ ದಿನಕ್ಕೊಮ್ಮೆ ಓಡಬೇಕಾಯಿತು. ರಾಧಾಕೃಷ್ಣ, ಅವನ ಜತೆಗೆ ಪಾಠಕ್ಕಿಂತ ತಿರುಗಾಟದ ಮೇಲೆ ಪ್ರೀತಿ ಇರುವ ಒಬ್ಬಿಬ್ಬರು ಬಾಲಕರು ಹೋಗುತ್ತಿದ್ದರು. ಹೀಗೆ ಹದಿನೈದು ದಿವಸಗಳ ಕಾಲ ಸರಿಯಿತು. ರಾಯರು ಮಂಗಳೂರಿಗೆ ಬಂದ ವರ್ತಮಾನ ದೊರೆಯಿತು. ಅದನ್ನು ಕೇಳುತ್ತಲೇ ಪಂಡಿತ್‌ಜೀಯವರು "ನಾನು ಅವರನ್ನು ಇಲ್ಲಿಗೆ ಕರೆದುಕೊಂಡು ಬರುತ್ತೇನೆ" ಎಂದು ಓಡಿದರು. ಅಲ್ಲಿ ಹೋಗಿ ರಾಧಾಕೃಷ್ಣನನ್ನು ದೂರುವಷ್ಟೆಲ್ಲಾ ದೂರಿದರು. ತಮ್ಮಿಬ್ಬರ ಭಿನ್ನವಾದ ಆದರ್ಶಗಳನ್ನು ಅವರಿಗೆ ಬಣ್ಣಿಸಿ ಹೇಳಿದರು. "ನೀವು ಬಾರದೆ, ಎಲ್ಲವನ್ನು ಖಂಡತುಂಡು ಮಾಡದೆಹೋದರೆ, ಇನ್ನು ಎಂಟು ದಿವಸಗಳಲ್ಲಿ ಈ ಆಶ್ರಮ ಮುಚ್ಚುವ ಸ್ಥಿತಿಯು ಬಂದೀತು" ಎಂದು ಬೆದರಿಕೆಹಾಕಿದರು. ದಯಾನಂದರಾಯರು ಬಿಡುವಲ್ಲಿ ಬಿಡುವುಮಾಡಿಕೊಂಡು, ಮರುದಿನವೇ ಅಲ್ಲಿಗೆ ಬಂದರು. ಮೊದಲು ಅಂದವರನ್ನು ನಂಬುವ ಪದ್ಧತಿ ಅವರದು. ಹೀಗಾಗಿ ಹಿಂದೀ ಪಂಡಿತರು ಹೇಳಿದ ಎಲ್ಲಾ ಮಾತುಗಳನ್ನು ಹದಿನಾರಣೆ ಸತ್ಯವೆಂದು ನಂಬಿಯೇ ಬಂದಿದ್ದರು. ಅವರು ಬರುತ್ತಲೇ ಜಾರಪ್ಪ ಮಾಸ್ತರರು, ಅವರೊಡನೆ ಅಲ್ಲಿನ ಆಹಾರ ಪರಿಸ್ಥಿತಿಯನ್ನು ಬಣ್ಣಿಸಿದರು. ಈ ಹದಿನೈದು ದಿವಸಗಳ ಕಾಲ ಭಿಕ್ಷೆ ಯೆತ್ತಿ ತಮಗೆ ಅನ್ನಹಾಕಿದ ರಾಧಾಕೃಷ್ಣನ ವಿಷಯದಲ್ಲಿ ತುಂಬ ಆದರವನ್ನು ವ್ಯಕ್ತ ಪಡಿಸಿದರು. ದತ್ತಪ್ಪ ಮಾಸ್ತರರದ್ದು ಕೇವಲ ಬೌದ್ಧಿಕ ಪ್ರಪಂಚವಷ್ಟೆ. "ಮೊದಲಿಗೆ ಕರಿಕ್ಯುಲಂ ಮಾಡದೆ ತೊಂದರೆಯಾಗಿ ಬಿಟ್ಟಿದೆ. ಕೆಲಸ ಮಾಡುವ ಹಾಗೆಯೇ ಇಲ್ಲ" ಎಂದು ಅವರು ತೀರ್ಮಾನವಿತ್ತರು. ಪಂಡಿತರು—ಎದುರಿನಲ್ಲಿ ಯಾವ ಮಾತನ್ನೂ ಆಡಲಿಲ್ಲ. ರಾಧಾಕೃಷ್ಣನು ಬಹಳ ಹೊತ್ತು ಮೌನವಾಗಿದ್ದ. ಉಳಿದವರ ಮಾತುಗಳು ಮುಗಿದುವು. ಜಾರಪ್ಪ ಮಾಸ್ತರರೊಡನೆ ರಾಯರು "ನನಗೆ ಈ ಮೊದಲು ಅಕಸ್ಮಾತ್ ಹೊರಗೆಹೋಗಬೇಕಾಗಿದ್ದು ಇಲ್ಲಿಗೆ ಬರಲು ಆಗಲಿಲ್ಲ. ಇನ್ನು ಅಂಥ ಸ್ಥಿತಿ ಬರಲಾರದು;

ಆರು ತಿಂಗಳ ಸಾಮುಗ್ರಿಗಳನ್ನು ದಾಸ್ತಾನು ಇರಿಸುವ. ಮಕ್ಕಳ ಹಾಲಿಗಾಗಿ ಒಂದೆರಡು ಎಮ್ಮೆಗಳನ್ನು ಕಟ್ಟಲೇಬೇಕು, ಕೇಳಿದರೆ ಯಾರೂ ದಾನ ಮಾಡಿಯಾರು" ಎಂದು ಸುಲಭವಾದ ಭರವಸೆಕೊಟ್ಟರು. ರಾಧಾಕೃಷ್ಣನು ಅವರನ್ನು ತನ್ನ ಪರ್ಣ ಕುಟೀರಕ್ಕೆ ಕರೆದೊಯ್ದನು. ಅಲ್ಲಿ—ಕ್ರಮವಾಗಿ ತನ್ನ ಮನಸ್ಸಿನ ಅಭಿಪ್ರಾಯಗಳನ್ನು ಅವರ ಮುಂದೆ ಬಿಡಿಸಿ ಹೇಳಿದನು. "ರಾಯರೇ, ನೀವು ಇದರ ಪೂರ್ಣವಾದ ಜವಾಬ್ದಾರಿ ವಹಿಸಿದರೆ ಚೆನ್ನ. ಈ ಆಶ್ರಮದ ಉದ್ದೇಶ ಹೀಗೆ; ಇಲ್ಲಿನ ಕಾರ್ಯಕ್ರಮ ಹೀಗೆ; ಯಾರು ಯಾರು ಯಾವಾವ ಕೆಲಸ ಮಾಡಬೇಕು—ಎಂಬ ವಿವರವನ್ನು ಹಾಕಿ ಕೊಟ್ಟಲ್ಲಿ, ಅದರಂತೆ ನಾವು ನಮ್ಮ ಕೆಲಸವನ್ನು ಮಾಡುವುದು ಸುಲಭವಾಗುತ್ತದೆ. ಇಲ್ಲಿನ ಅನುಭವ ನನಗಿರುವುದು ಬಹಿಯ ಸ್ವಲ್ಪ ಸಮಯದ್ದು. ಅದರ ಮೇಲಿಂದ ಹೇಳುವುದಾದರೆ, ಇಲ್ಲಿರುವ ನಾಲ್ಕು ಮಂದಿಯಲ್ಲಿ, ನಾಲ್ಕು ದಾರಿ, ನಾಲ್ಕು ಗುರಿಗಳು ಇದ್ದ ಹಾಗೆ ಕಾಣುತ್ತದೆ. ನಮ್ಮ ಅಭಿಪ್ರಾಯಭೇದಗಳಿಂದ ಶಾಲೆಯ ಕೆಲಸ ಕೆಡಬಾರದಷ್ಟೆ. ಇದರ ಶ್ರೇಯಸ್ಸು ನಮಗೆ. ನೀವು ಮುಂದಾಳಾದರೆ ಆಗ ನಮಗೆ ಚರ್ಚೆ ಮಾಡುವ ಕೆಲಸವಿಲ್ಲ. ನೀ ಹೇಳಿದ್ದನ್ನು ಒಪ್ಪಿಮಾಡುವ ಕೆಲಸ ಮಾತ್ರ" ಎಂದು ಸಂಗತಿಯಾನುಸಾರಗಳನ್ನು ವಿವರಿಸಿದನು.

"ರಾಧಾಕೃಷ್ಣ, ನಾನು—ಈ ಜವಾಬ್ದಾರಿಗೆ ನೀವು ತಕ್ಕವರೆಂದು ಯೋಚಿಸಿ ಕೆಲಸ ತೊಡಗಿದ್ದೇನೆ. ನನ್ನ ನೂರಾರು ತಾಪತ್ರಯಗಳಲ್ಲಿ ಇದರ ಕಡೆಗೆ ಹೆಚ್ಚಿನ ಗಮನ ಕೊಡುವುದಕ್ಕೆ ಆಗಲಾರದು. ಇದರ ಆಚಾರ್ಯಪಟ್ಟವು ನಿಮಗೆ. ಇದಕ್ಕೆ ಏನೇನು ಸಲಕರಣೆ ಆಗಬೇಕು? ಎಷ್ಟು ಹಣ ಬೇಕು? ಅಷ್ಟನ್ನು ತಿಳಿಸಿದರೆ ನನ್ನಿಂದ ಆಗುವಷ್ಟು ಬೆಂಬಲ ಕೊಡುತ್ತೇನೆ."

"ನೀವು ನನ್ನನ್ನು ಬರಲು ಹೇಳಿದ್ದಂತೂ ಸರಿಯೇ. ನಾನೂ ಬಂದಿದ್ದೇನೆ. ಸಂಸಾರ ಸಹಿತನಾಗಿ, ಕೆಲಸಮಾಡಬೇಕೆಂಬ ಉದ್ದೇಶದಿಂದಲೇ ಬಂದಿದ್ದೇನೆ. ನಾನು ಬರುವ ಮೊದಲೇ ನೀವು ಅವಸರವನ್ನು ಮಾಡಿ ಇಲ್ಲಿನ ಸಹಾಯಕರನ್ನು ನೇಮಿಸಿದಿರಿ. ನಮ್ಮ ಕೆಲಸದ ರೂಪ ನಿಶ್ಚಯವಾಗದೆ, ಜನರನ್ನು ಕೊಟ್ಟರೆ ಏನು ಪ್ರಯೋಜನ? ಉದ್ದೇಶಕ್ಕೆ ತಕ್ಕ ಜನ ದೊರಕಿಸಬೇಕೇ ಹೊರತು, ಜನಕ್ಕೆ ಒಪ್ಪುವ ಉದ್ದೇಶವಾಗಬಾರದಲ್ಲ?

ಅಲ್ಲದೆ, ಹಣಕಾಸಿನ ವಿಚಾರ ಮುಖ್ಯವಾದದ್ದು. ಇಷ್ಟೊಂದು ಮಂದಿಯ ಜೀವನ ಹೋಗಬೇಕು. ಈ ಹದಿನೈದು ದಿವಸ, ಬೇರೆ ದಾರಿ ಕಾಣದೆ, ಭಿಕ್ಷೆಯನ್ನು ಎತ್ತಿ ದಿನ ಕಳೆಯಬೇಕಾಯಿತು. ಆ ರೀತಿಯಿಂದ ಬಹಳ ದಿನ ಗ್ರಾಮಸ್ಥರ ಸಹಾಯ ದೊರಕೀತು-ಎನ್ನುವ ಹಾಗಿಲ್ಲ. ಅಲ್ಲದೆ ಈಗಾಗಲೇ—'ನಮ್ಮ ಮಕ್ಕಳಿಗೆ ಮನೆ ಮನೆ ಬೇಡುವ ಪಾಠ ಬೇಡ' ಎಂಬ ದೂರೂ ಬಂದಿದೆ."

"ಹಣ ಕಾಸಿನ ವಿಚಾರ ನಾನು ಮಾಡುತ್ತೇನೆಂದೆನಲ್ಲ. ಮಂಗಳೂರಿನಲ್ಲಿ ಒಂದು ರೌಂಡು ಸುತ್ತಿದರೆ—ಜನ ಎಷ್ಟೊ ಕೊಟ್ಟಾರು, ಏನೂ ಕೊಟ್ಟಾರು; ಮೊದಲಾದರೆ ನಾನೇ ತೆರುತ್ತಿದ್ದೆ."

"ನೀವು ಹಾಗೆ ಹೇಳುತ್ತಿದ್ದೀರಿ. ನನಗೆ ಆ ಧೈರ್ಯವಿಲ್ಲ. ಅದು ಸಾಧ್ಯವಿದ್ದರೆ ನಿಮ್ಮ ಮಂಗಳೂರಿನ ಶಾಲೆಯನ್ನು ಮುಚ್ಚುವ ಅಗತ್ಯ ಬೀಳುತ್ತಿರಲಿಲ್ಲ. ನನ್ನ ವಿಚಾರ ಹೀಗೆ--ಆರಂಭದಲ್ಲಿ ಪರರಿಗೆ ಕೈಯೊಡ್ಡುವುದು ಅನಿವಾರ್ಯವಾದರೂ, ಮುಂದೆ ಈ ಸಂಸ್ಥೆಯು ತನ್ನ ಕಾಲಿನ ಮೇಲೆ ತಾನು ನಿಲ್ಲಬೇಕು."

"ಅದು ಯೋಗ್ಯವಾದ. ವಿಚಾರ ನಾವು ಅಮೇರಿಕದ ಟಸ್ಕೆಜಿ ಇನ್ಸ್ಟಿಟ್ಯೂಟಿನ ಆದರ್ಶ ಇರಿಸಿಕೊಳ್ಳುವ. ಅದರ ವಿವರಗಳೂ ಕಾರ್ಯಭಾರಗಳೂ ನಿಮ್ಮವು. ಇಲ್ಲಿನ ಒಳ ಆಡಳಿತೆಗೆ ಕೈ ಹಚ್ಚುವ ಇಷ್ಟವು ನನಗಿಲ್ಲ. ಅದು ಚೆನ್ನಾಗಿ ನಡೆಯಬೇಕು, ಬಹಳ ಕಾಲ ನಡೆಯಬೇಕು—ಇಷ್ಟೇ ನನ್ನ ಆಶೆ."

"ಹಾಗಿದ್ದರೆ ನೀವು ಎಲ್ಲರನ್ನೂ ಕರೆಯಿಸಿ ಆ ಮಾತನ್ನು ಹೇಳಬೇಕು."

"ಸರಿಯಲ್ಲವೇ!"

"ಇಲ್ಲಿ ಈ ಸ್ಥಳದ ಅನುಕೂಲತೆಯನ್ನು ನೋಡಿದರೆ ಕೃಷಿಯನ್ನು ಮುಖ್ಯವಾಗಿ ನಾವು ಇರಿಸಿಕೊಳ್ಳಬಹುದು. ಅದರಿಂದ ನಮ್ಮ ಆರ್ಥಿಕ ಸ್ಥಿತಿಗೂ ಸಹಾಯವಾದೀತು. ಇಲ್ಲಿಗೆ ಬರುವ ಮಕ್ಕಳೂ ನಾಳೆ ತಮ್ಮ ಹಳ್ಳಿಗಳಿಗೆ ಹೋಗಿ, ತಮ್ಮ ತಮ್ಮ ಪಾಡಿನ ಜೀವನ ನಡೆಯಿಸಬೇಕಾದವರು. ಅದಕ್ಕೆ ನಮ್ಮಿಂದಾದ ರೂಪ ಕೊಡಬೇಕು. ನಮ್ಮ ಹಿಂದೀ ಪಂಡಿತರು ಅನ್ನುತ್ತಾರೆ: ಇಲ್ಲಿ ರಾಷ್ಟ್ರಸೇವಕರನ್ನು ನಾವು ನಿರ್ಮಿಸಬೇಕೆಂದು.

ಈ ಮಕ್ಕಳಿಗೆ ಅಷ್ಟು ದೊಡ್ಡ ಯಾವ ಮಾತೂ ಬೇಡ. ನಮ್ಮ ಜೀವನದಿಂದ ಮಕ್ಕಳು ತನ್ನಂತೆಯೇ ಆ ಆದರ್ಶವನ್ನು ಕಲಿಯಬೇಕಾಗಿದೆ. ಅದೇನು ಹೇಳಿಕೊಟ್ಟು ಬರುವ ಪಾಠವಲ್ಲ. ಬೇಡ, ಇನ್ನು ಮಕ್ಕಳಿಗೆ ಕನ್ನಡ ಬರುವ ಮೊದಲೇ, ಹಿಂದೀ ಭಾಷೆಯ ಒತ್ತಾಯ ಬೇಡ. ತಮ್ಮ ಆವರಣದ ಪರಿಚಯ ಆಗುವ ಮೊದಲೇನೆ ಆಕಾಶ ಪುರಾಣಗಳನ್ನು ಹೇಳಿ, ಗೊಂದಲ ಎಬ್ಬಿಸಿ ಪ್ರಯೋಜನವಿಲ್ಲ. ನಮ್ಮ ಉಪಾಧ್ಯಾಯರು ಬರಿಯ ಉಪನ್ಯಾಸಕರಾದರೆ, ಕಾಲೇಜು ನಡೆಯಿಸಬಹುದೇ ಹೊರತು, ಮಕ್ಕಳಿಗೆ ಪ್ರಯೋಜನವಾಗಲಾರದು. ದಿನದಲ್ಲಿ ಸ್ವಲ್ಪ ಸಮಯವನ್ನು ಶರೀರದ ಶ್ರಮಕ್ಕಾಗಿ ವಿನಿಯೋಗಿಸದೆ ನಮ್ಮ ಕೆಲಸ ಸಾಗುವ ಹಾಗಿಲ್ಲ."

"ನಿಮಗೆ ಯಾಕೆ ಅಂಥ ಅನುಮಾನ? ನಿಮ್ಮ ವಿಚಾರಗಳೆಲ್ಲ ನನಗೆ ಒಪ್ಪುತ್ತವೆ. ನಮ್ಮ ಪಂಡಿತರಿಗಾಗಲೀ, ದತ್ತಪ್ಪನವರಿಗಾಗಲೀ, ಶಿಕ್ಷಣದ ವಿಷಯದಲ್ಲಿ ಸಾಕಷ್ಟು ವಿಚಾರ ತಿಳಿದಿದೆ. ಅವರೂ ಈ ಮಾತನ್ನು ಒಪ್ಪುವವರೇ"

"ಅದನ್ನು ತಿಳಿದೇ ಈ ಮಾತು ಹೇಳುತ್ತಿದ್ದೇನೆ."

"ಹಾಗಾದರೆ ನಿಮಗೆ ಏನೇನು ಆಗಬೇಕೆಂದು ಹೇಳಿ."

"ಇಲ್ಲಿ ಈ ಸಂಸ್ಥೆಯು ಬೆಳೆಯಬೇಕಾಗಿದ್ದರೆ, ಈ ಭೂಮಿಯ ಸಂಪೂರ್ಣವಾದ ಉಪಯೋಗವನ್ನು ನಾವು ಪಡೆಯುವಂತಿರಬೇಕು. ಈ ಜಮೀನು ನಿಮ್ಮದೇ ಆದರೂ, ಅದು ತಾತ್ಕಾಲಿಕವಾಗಿ ಪರರಿಗೆ ಅಡವು ಆಗಿದೆ ಎಂದು ಕೇಳಿದೆ."

ರಾಧಾಕೃಷ್ಣನ ಈ ಮಾತು ರಾಯರನ್ನು ಅಸಮಾಧಾನಗೊಳಿಸಿತು.

"ನಿಮಗೆ ನನ್ನಲ್ಲಿ ಅಪನಂಬಿಕೆಯೇ" ಎಂದು ಕೇಳಿದರು ಅವರು

"ಹಾಗಲ್ಲ. ನಾಳೆ ಅಡವುದಾರರು ನಮ್ಮನ್ನು ಏಕಾಏಕಿ ಓಡಿಸುವ ಸ್ಥಿತಿ ಬರಬಾರದು ಎಂಬುದಕ್ಕೆ ಹೇಳುತ್ತಿದ್ದೇನೆ.."

"ಹಾಗೆ ಓಡಿಸುವವರು ಯಾರು? ಅವರ ಸಾಲವನ್ನು ನಾನು ಮುಟ್ಟಿಸುವುದಿಲ್ಲವೆಂದು ತಿಳಿಯುತ್ತೀರಾ? ಭೂಮಿ ಅವರ ಸ್ವಾಧೀನ ಆಗುತ್ತದೆಯೆಂದು ತಿಳಿಯುತ್ತೀರಾ? ನನಗೆ ಇನ್ನು ಇಲ್ಲಿಯೇ ಹಣ ಸುರಿಯುವ ಯೋಚನೆ ಇದೆ. ಒಂದೆರಡು ಕಟ್ಟಡಗಳನ್ನು ಕಟ್ಟಿಸಬೇಕು ಎಂದಿದೆ.

ಯಾವುದಕ್ಕೂ ಆ ದಿನ ಹೇಳಿದ್ದೆನಲ್ಲಾ,—ಅದೊಂದು ಸಾಲದ ವಸೂಲಿಯಾಗದೆ ಕಾದು ಕುಳಿತ್ತಿದ್ದೇನೆ."

"ನನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳುತ್ತೇನೆ. ಆ ಮೇಲೆ ತೊಡಕು ಬರಬಾರದು ಎಂಬುದು ನನ್ನ ಉದ್ದೇಶ. ನೀವೂ ಅಡವುದಾರರೂ ಸೇರಿ ಈ ಆಶ್ರಮವನ್ನು, ಇಲ್ಲಿಂದ ಹತ್ತು ವರ್ಷ ಕಾಲವಾದರೂ ಕದಲಿಸವುದಿಲ್ಲ ಎಂಬ—ಭರವಸೆ ನಮಗಿರಬೇಕು. ಆಗ ಮಾತ್ರ ನಾನು ಇಲ್ಲಿ ಇರಬಲ್ಲೆ. ಇಲ್ಲವಾದರೆ ಏನು ಮಾಡುವುದೂ ಕಷ್ಟದ ಕೆಲಸ—ಎಂದು ನನಗೆ ಅನಿಸುತ್ತದೆ"

ರಾಯರು ವಿಚಾರಪರರಾದರು. ಅವರಿಗೆ ತಮ್ಮ ಜವಾಬ್ದಾರಿಯ ಜ್ಞಾನವಾದಂತೆ ಕಂಡಿತು. "ನೀವು ಅನ್ನುವುದು ತೀರ ಸಮ. ಹಾಗೆಯೇ ಮಾಡುವ" ಎಂದು ನುಡಿದು, ಉಳಿದವರನ್ನು ಕರೆಯಿಸಿಕೊಂಡರು. ಪಂಡಿತರು ಮರೆಯಲ್ಲಿ ಇದ್ದು, ಮಾತನ್ನು ಕೇಳುತ್ತಿದ್ದವರು, ಈಗ ಸಮ್ಮುಖಕ್ಕೆ ಬಂದರು. ಅವರೆಲ್ಲರ ಎದುರಿಗೆ ರಾಯರು, "ನೋಡಿ, ನನಗೆ ನೂರಾರು ಕೆಲಸಗಳೆಂಬುದು ನಿಮಗೆ ಗೊತ್ತು. ನಿಮಗೆ ಮಿಸ್ಟರ್ ರಾಧಾಕೃಷ್ಣರವರ ಪರಿಚಯ ಇಲ್ಲದೇನೆ ಹೋದರೂ, ನನಗೆ ತುಂಬಾ ಸಮಯದಿಂದ ಗೊತ್ತು. ಅವರ ಮೇಲಿನ ವಿಶ್ವಾಸದಿಂದ, ನಾನು ಈ ಕೆಲಸವನ್ನು ತೊಡಗಿದ್ದೇನೆ. ಅವರು ಇಲ್ಲಿನ ಆಚಾರ್ಯರಾಗಿ ನಿಂತು, ಕೆಲಸ ಮಾಡಿಸಬೇಕಾದವರು. ನೀವು ಅವರಿಗೆ ಬೆಂಬಲವಾಗಿ ನಿಂತು, ಕೆಲಸ ಮಾಡಬೇಕಾದ್ದು ಕರ್ತವ್ಯ. ಅವರು ಹಾಕಿದ ಹಂಚಿಕೆಗೆ ನೀವು ಬದ್ಧರಾಗಿರಬೇಕು" ಎಂದರು.

ಆಗ ನಿವಾಸ್‌ಜೀಯವರು "ಅವರ ಪ್ಲೇನಿನಲ್ಲಿ ರಾಷ್ಟ್ರಭಾಷೆಗೇನೆ ಜಾಗವಿಲ್ಲ" ಎಂದರು.

"ಎಳೆಯ ಮಕ್ಕಳಿಗೆ ಅದು ಬೇಡ—ಎಂಬುದು ಇಷ್ಟೇ ನನ್ನ ಅಭಿಪ್ರಾಯ. ಸರಿಯಾದ ವಯಸ್ಸಿನವರಿಗೆ ಆ ಪಾಠವನ್ನು ಹೇಳಲಿ. ಬರಿಯ ಎರಡು ಇಲ್ಲವೆ ಮೂರು ನಾಲ್ಕು ಮಂದಿಗೆ ಪಾಠ ಹೇಳುವುದರಲ್ಲಿ ಮಾತ್ರ ಕೆಲಸ ಮುಗಿಯಬಾರದು. ಇತರ ಹಲವಾರು ಕೆಲಸಗಳ ಹೊಣೆಯನ್ನೂ ಅವರು ಹೊರಬೇಕು" ಎಂದ ರಾಧಾಕೃಷ್ಣ.

"ಅದು ಸರಿಯಾದ ಮಾತು ಅಲ್ಲವೇ?" ಎಂದರು ರಾಯರು. ರಾಯರ ಒಲವು ಬದಲಾದುದನ್ನು ನೋಡಿ, ಪಂಡಿತರು ಸುಮ್ಮಗಾದರು. ಎದುರಿನಲ್ಲಿ ಚರ್ಚಿಸಿ ಫಲವಿಲ್ಲ ಎಂದು ಕಂಡಿತು ಅವರಿಗೆ.

ರಾಧಾಕೃಷ್ಣನು ರಾಯರ ಬೆನ್ನನ್ನು ಬಿಡಲಿಲ್ಲ. ಮಂಗಳೂರಿಗೆ ಅವರೊಂದಿಗೇನೆ ಹೋದನು. ಅವರನ್ನು ಜಿಗಣೆಯಂತೆ ಅಂಟಿಕೊಂಡನು. ಭೂಮಿಯ ಅಡವುದಾರನನ್ನು ಮಾತನಾಡಿಸಿದನು. ಯಾರು ಯಾರನ್ನೋ ದಾಕ್ಷಿಣ್ಯಕ್ಕೆ ಕೆಡವಿ, ಕಿರಿ ಪದವಿನ ಆಸ್ತಿಯನ್ನು ಹತ್ತು ವರುಷಗಳವಾಯಿದೆಗೇಣಿಗೆ ಪಡೆದುಕೊಂಡೇನೆ ತನ್ನ ಸ್ಥಳಕ್ಕೆ ಮರಳಿಬಂದನು. ಇಷ್ಟೆಲ್ಲ ಮಾಡಿ ಅವನು ತನ್ನ ಗುಡಿಸಲನ್ನು ಸೇರುವಾಗ, ನಿವಾಸಜೀಯವರು ಕುಪಿತರಾಗಿ ಹೊರಟೇ ಹೋಗಿದ್ದರು. ಜಾರಪ್ಪನವರೂ ಹೊರಡುವವರಿದ್ದರು. ಉಬ್ಬಸ ಜೋರಿದ್ದುದರಿಂದ ಅದು ಗುಣವಾಗುವ ತನಕ ಹೊರಡಲಾಗಲಿಲ್ಲ. ದತ್ತಪ್ಪನವರಿಗೆ ಸಂದಿಗ್ಧ ಮನಸ್ಸು; ಅವರನ್ನು ಹೊರಡಿಸುವುದರಲ್ಲಿ ರಾಧಾಕೃಷ್ಣ ಆತುರಪಡಲೂ ಇಲ್ಲ. ಒಬ್ಬನಿಗೇನೆ ಈ ಕೆಲಸ ಸಾಧಿಸದಷ್ಟೆ. ಪಂಡಿತರು ತಾವು ಹೊರಡುವಾಗ, ಇಬ್ಬರು ಬಾಲಕರನ್ನು ತಪ್ಪಿಸಿಯೇ ಹೊರಟರು. ರಾಧಾಕೃಷ್ಣನು ಮಕ್ಕಳನ್ನು ಕಟ್ಟಿಕೊಂಡು, ತೆಂಗಿನ ಗಿಡಕ್ಕೆ ನೀರು ಎರೆಯಲು ತೊಡಗಿದೊಡನೆಯೇ, ಇನ್ನಿಬ್ಬರು ಬಾಲಕರು—'ನಮ್ಮ ಮನೆಯ ಗಿಡಕ್ಕೆ ನೀರು ಹಾಕಬಾರದೇ' ಎಂದು ಹೊರಟು ಹೋದರು. ಆ ಗ್ರಾಮದ ಕೆಲವು ಹಿರಿಯರು "ಅಲ್ಲಿಯೂ ದುಡಿದು ಉಣ್ಣುವುದಾದರೆ ಮನೆಯಲ್ಲೇ ಅಷ್ಟು ಕೆಲಸ ಮಾಡಬಹುದಲ್ಲಾ" ಎಂದು ನುಡಿಯ ತೊಡಗಿದರು.

* * * *

ಈಗ ಆತನ ಆಶ್ರಮದ ನಾಲ್ಕು ತಿಂಗಳ ಬಾಳುವೆ ಸಾಗಿದೆಯಷ್ಟೇ ಮುಂದಿನ ತಿಂಗಳು—ಜೂನು. ಬೇಸಾಯದ ಸಮಯವದು. ಆಶ್ರಮದಲ್ಲಿ ರಾಧಾಕೃಷ್ಣನು ಏಕ ಮಾತ್ರ ನಾಯಕ. ಅವನ ಜತೆಗೆ ಇಬ್ಬರು ಅರೆಮನಸ್ಸಿನ ಅಧ್ಯಾಪಕರು. ಹೆಸರು ಉಳಿಸುವುದಕ್ಕೆಂಬಂತೆ ಐವರು ಮಂದಿ ಬಾಲಕರು ಉಳಿದಿದ್ದಾರೆ. ಸಹಾಯಕಿಯಾಗಿ, ಅಭ್ಯಾಸವಿಲ್ಲದೆ, ಮನೆಗೆಲಸದಲ್ಲಿ ಸೋತು ನುಗ್ಗಾಗುತ್ತಿರುವ ಸತ್ಯ ಹೇಗೂ ಜತೆಗೆ ಇದ್ದಾಳೆ.

ಹೆಚ್ಚೇನು—ಸತ್ಯ ಅಲ್ಲಿ ದಣಿದುಹೋಗುವುದರಲ್ಲಿ ಆಶ್ಚರ್ಯವಿರಲಿಲ್ಲ; ಗಂಡುಸೆನಿಸಿದ ರಾಧಾಕೃಷ್ಣನು ಆ ತೆರನ ದುಡಿತಕ್ಕೆ ಆಳಾಗಿರಲಿಲ್ಲ. ಅವನ ಸಹಾಯಕ್ಕೆ ದೊರೆತ ಇಬ್ಬರು ಅಧ್ಯಾಪಕರು, ಮಾತಿನ ಬುರುಡೆಗಳೇ. ದತ್ತಪ್ಪಮಾಸ್ತರರು, ಅಲ್ಲಿಗೆ ಬರುವ ಹಳ್ಳಿಯವರೊಡನೆ—ಕರ್ಣಾಟಕ ಗತವೈಭವ, ಭಾರತೀಯರ ಮೇಲ್ಮೆಗಳನ್ನು ಕುರಿತಾಗಿ, ತಾಸು ತಾಸು ಉಪನ್ಯಾಸ ಮಾಡುತ್ತಾರೆ. ಹುಡುಗರ ಮುಂದೆ ಕುಳಿತರೂ ಹಾಗೇನೆ. ಅವರಿಂದ ಅವರನ್ನು ತಪ್ಪಿಸಿ, ದಿನಕ್ಕೆ ಒಂದೆರಡು ತಾಸು ಕಾಲ, ಬರಿಯ ಓದುಬರಹಗಳನ್ನು ಹೇಳಿಸಿಕೊಡುವುದು ಕಷ್ಟವಾಗುತ್ತಿತ್ತು. ಜಾರಪ್ಪಮಾಸ್ತರರು, ಮಳೆಗಾಲ ಕಾಲು ಇರಿಸಿದಂದಿಗೆ ಶರತಲ್ಪಶಾಯಿಗಳಾದರು. ಉಬ್ಬಸ ಕೆಮ್ಮುಗಳಿಂದ ಉಳಿದವರಿಗೂ ಭಯಭೀತಿಗಳನ್ನು ಹುಟ್ಟಿಸಿದರು. ರಾಧಾಕೃಷ್ಣ, ತಾನು ಹೊತ್ತ ಹೊಣೆಯನ್ನು ಮರೆಯಲಾರನಷ್ಟೆ! ಮಗೆತು ಮನೆಯಲ್ಲಿ ತುಂಬಿದ ಐದಾರು ಮಕ್ಕಳನ್ನು ಉಪವಾಸ ತಳ್ಳಲೇ? ಅವರಲ್ಲಿ, ಇಬ್ಬರು, ಮೂವರು ರಜೆ ಬಂದಾಗ, ಬಂಧುಗಳ ಮನೆಗೆ ಹೋಗಿ ಬರುತ್ತಾರೆ. ಇನ್ನಿಬ್ಬರು ಯಾರಿಗೂ ಬೇಡವಾದ ಮಕ್ಕಳು.

ಆತ ನಿರ್ಧರಿಸಿಯೇ ಬಿಟ್ಟನು!-ಇದು ದಲಿತಾಶ್ರಮವೋ, ವಿದ್ಯಾಪೀಠವೋ—ಇನ್ನೇನೋ! ಆ ಹೆಸರು ಕೊಟ್ಟವರಿಗೇನೋ ಆ ಹೊಣೆ. ಮೊದಲು ತಾನು, ಅಲ್ಲಿ ಆದಷ್ಟು ಕಡಿಮೆ ಪರಾವಲಂಬನದಿಂದ ಜೀವನ ಸಾಗಿಸಬಲ್ಲ ದಾರಿಯನ್ನು ಹುಡುಕಬೇಕಾಗಿದೆ. ಸಮಯ ಬಂದರೆ, ಇದ್ದ ಉಪಾಧ್ಯಾಯರನ್ನು ಓಡಿಸಿ, ತನ್ನ ಕೆಲಸಕ್ಕೆ ಒದಗುವವರನ್ನು ಹುಡುಕಬೇಕಾಗಿದೆ. ಅದಕ್ಕಾಗಿ, ಒಮ್ಮೆ, ಮನೆಗೆ ಮಿಂಚಿನ ಓಟ ಓಡಿದನು. ಊರಿಗೆ ಹೋಗಿ ತನ್ನ ತಮ್ಮನಿಂದ, ಐನೂರು ರೂಪಾಯಿಗಳಷ್ಟು ಹಣವನ್ನು ಸಾಲವಾಗಿ ತಂದನು. ಅದರಲ್ಲಿ ಬಹು ಭಾಗವನ್ನು, ಆಪತ್ತಿಗೆಂದು ಕಾದಿರಿಸಿ, ಸ್ವಲ್ಪ ಅಂಶದಿಂದ ಬೇಸಾಯಕ್ಕೆ ಬೇಕಾಗುವ ಬಿತ್ತು, ಗೊಬ್ಬರ, ಒಂದು ಜತೆ ಕೋಣಗಳನ್ನು ಬೆಲೆಗೆ ಕೊಂಡುಕೊಂಡನು. ಮಳೆ ಹನಿಯುತ್ತಲೇ ಕಿರಿಪದವಿನ ಮೂಲದ ಒಕ್ಕಲಾದ, ಬಿರುಮ ಮರಕಾಲನನ್ನು ಅಂಗಲಾಚಿ ಬೇಡಿ, ಆಳಾಗಿ ದುಡಿಸಿಕೊಂಡನು. ಮರಕಾಲನಿಗೂ ಅದೇನೆ ಬೇಕಿತ್ತು. ತಾನು ಇದ್ದ ಸ್ಥಿತಿಯಲ್ಲಿ ಆತ ಸ್ವಂತ ಬೇಸಾಯವನ್ನು ಮಾಡಲಾರ. ಗೇಣಿಯನ್ನು ಉಳಿಸಿಕೊಂಡೇ ಜೀವನ ಸಾಗಿಸಿದ ಅವನು, ದುಡಿ

ಯಲು ಕಲಿತವನಲ್ಲ. ಅವನ ರೀತಿಗೆ ಜಿಗುಪ್ಸೆಗೊಂಡು, ಅವನ ಹೆಂಡತಿಯು, ಮಕ್ಕಳನ್ನು ಕಟ್ಟಿಕೊಂಡು ತವರುಮನೆಗೆ ಹೋಗಿದ್ದಳು. ಒಬ್ಬಂಟಿಗನಾಗಿ ಉಳಿದ ಅವನನ್ನು, ಈಗ ಶಾಲೆಯವರೂ ಓಡಿಸಿ ಬಿಟ್ಟರೆ—"ತಾನು ಎಲ್ಲಿಗೆ ಹೋಗಬೇಕು"—ಎಂದು ಅವನು ಕಂಗಾಲಾದ ಗಳಿಗೆಯಲ್ಲೇ, ರಾಧಾಕೃಷ್ಣ ಅವನನ್ನು ಕೆಲಸಕ್ಕೆ ನೇಮಿಸಿಕೊಂಡನು. ಆತನ ಕಾವಲು ಗಣ್ಣಿನಲ್ಲಿ ಪರಮಾಲಸಿಯಾದ ಬಿರುಮ—ಶಪಿಸುತ್ತ ದುಡಿಯಬೇಕಾಯಿತು. ಆದರೆ ಆ ದುಡಿತದಿಂದ, ಆವನ ದಿನದ ಊಟ ಹೋಗಿ, ಎರಡಾಣೆ ಸಂಬಳ ದೊರೆಯುತ್ತದೆ ಎಂದು ಖಂಡಿತವಾಯಿತು. ಮರಕಾಲನ ಜತೆಗೆ ರಾಧಾಕೃಷ್ಣನು ಬಯಲಿಗೆ ಇಳಿವನು. ಐದು ಮಂದಿ ಬಾಲಕರಲ್ಲಿ ಕಿರಿಯರಾದ ಇಬ್ಬರನ್ನು ಬಿಟ್ಟು, ಉಳಿದ ಮೂವರನ್ನು ದಿನಕ್ಕೆ ತಾಸೆರಡು ತಾಸು ತೋಟಗಾರಿಕೆಗೆ ಎಳೆದುಕೊಂಡನು. ಈ ಮಳೆಗಾಲ ಕಳೆವರೆ—ಅನ್ನ, ತರಕಾರಿ, ಮೆಣಸುಗಳ ಮಟ್ಟಿಗೆ ತಾನು ಸ್ವತಂತ್ರನಾದೇನು—ಎಂದು ತೋರಿತು. ಈ ಸ್ವಾತಂತ್ರ್ಯ ಅವನಿಗೆ ಬಹಳ ಮುಖ್ಯವಾಗಿತ್ತು. ಅಂತರಂಗದಲ್ಲಿ ಅವನಿಗೆ—ರಾಯರ ಸಹಾಯದ ವಿಶ್ವಾಸ ಹೋಗಿದೆ. ತನ್ನ ಎದೆಗಾರಿಕೆಯ ಮೇಲೆಯೇ ತಾನು ಬದುಕಬೇಕೆಂಬ ನಿಶ್ಚಯ ತೋರಿದೆ.

ಬೇಸಾಯದ ಈ ದಿನಗಳಲ್ಲಿ ಅವನಿಗೆ ಬಿಡುವು ಎಂದರೆ, ನಂಜೆ ಊಟವಾದ ಬಳಿಕ. ಸಂಜೆಗೆ ಮುಂಚೆಯೇ ಆ ಊಟ, ಸಾಬರ್ಮತಿ ಆಶ್ರಮದ ಮಾದರಿಯಲ್ಲಿ. ಅದರಿಂದ ಸತ್ಯಳಿಗೆ ತುಸು ಹೆಚ್ಚಾಗಿ ವಿಶ್ರಾಂತಿ ಸಿಗುತ್ತಿತ್ತು. ಆಗ ಪತ್ನಿಯನ್ನು ಜತೆಗೆ ಕುಳ್ಳಿರಿಸಿಕೊಂಡು, ಆಶ್ರಮದ ಬಾಲಕರಿಗೆ ಏನಾದರೂ ಕತೆ ಹೇಳುತ್ತಾ ಇರುತ್ತಾನೆ.

ಶ್ಯಾಮ, ನೀಲ, ನಾಗಪ್ಪ ಇವರು ಮಕ್ಕಳಲ್ಲಿ ಹಿರಿಯರು. ಅವರು, ತಮ್ಮಿಂದ ಕೆಲಸಮಾಡಿಕೊಂಡರೂ, ದೊಡ್ಡ ಮಾಸ್ತರರ ಬಳಿಯಲ್ಲಿಯೇ ಹೆಚ್ಚಾಗಿ ಕಲೆಯುತ್ತಾರೆ. ಕೆಮ್ಮುತ್ತ ಕುಳಿತಿರುವ ಜಾರಪ್ಪನವರಿಗೆ, ಮಕ್ಕಳು ಸಮೀಪ ಬಾರದಿದ್ದರೇನೆ ಕ್ಷೇಮ. ಅವರ ರಾಟೆಯ ಶಿಕ್ಷಣ ನಡೆದಾಗ ನಡೆಯುತ್ತದೆ; ಇಲ್ಲವಾದರೆ ಇಲ್ಲ. ಬಾಲಕರು ವೇಳೆ ಇದ್ದಾಗ ನೂಲು ಮಾಡಿಯೇ ಮಾಡುತ್ತಾರೆ. ದತ್ತಪ್ಪ ಮಾಸ್ತರರಿಗೆ ಸಭೆ ನೆರೆಯಿಸುವಾಗ ಬರುವ ಸ್ಫೂರ್ತಿ ಉಳಿದ ಗಳಿಗೆಯಲ್ಲಿ ಬರುವುದಿಲ್ಲ. ಅವರಿಗೆ ಆಶ್ರಮದ ವಿಷಯದಲ್ಲಿ ತುಂಬ ಅಸಮಾಧಾನ. ಆಗಾಗ ದಯಾನಂದ

ರಾಯರಲ್ಲಿಗೆ ಹೋಗಿ-"ಹುಡುಗರಿಗೆ ಬೌದ್ಧಿಕ ಶಿಕ್ಷಣವಾಗಲೀ ರಾಷ್ಟ್ರೀಯ ಶಿಕ್ಷಣವಾಗಲೀ ಇಲ್ಲದೆ ಬರಿಯ ಬೇಸಾಯದ ಕೆಲಸಕ್ಕೆ ಹಾಕಿದ್ದಾರೆ" ಎಂದು ದೂರು ಹೇಳುತ್ತಾರೆ. ದೂರನ್ನು ಕೇಳಿ—ರಾಯರಿಗೆ ಮನಸ್ಸು ಚಂಚಲವಾದರೂ ಹೆಚ್ಚಿನ ಗಮನ ಕೊಡುವ ವಿರಾಮ ಇದ್ದಿರಲಿಲ್ಲ.

ಸತ್ಯೆಳ ದಿನಚರಿಯು ತುಂಬ ಕಷ್ಟತರವಾದದ್ದು. ಬಾಲ್ಯದ ವಿಶ್ರಾಂತಿಯು ಇಲ್ಲಿ ಕಣ್ಮರೆಯಾಗಿದೆ. ಮುಂಜಾನೆ ಏಳುತ್ತಾಳೆ—ಗದ್ದೆಗೆ ಸಮೀಪದ ಕೆರೆಯೊಂದರಲ್ಲಿ ಮುಸುರೆ ತಿಕ್ಕುತ್ತಾಳೆ. ಅದಕ್ಕೆ ಆಚಾರ್ಯರು ಬಂದು ಸಹಾಯವಾಗುವುದೂ ಉಂಟು. ಅನಂತರ ಬೆಳಗ್ಗೆ ಒಂದು ಗಂಜಿ, ಮಧ್ಯಾಹ್ನಕ್ಕೊಂದು ಅಡುಗೆ, ಸಂಜೆ ಒಂದು ಊಟ-ಇವುಗಳಿಗಾಗಿ ಶ್ರಮಿಸುವಾಗ ದಿನ ನುಂಗಿ ಹೋಗುತ್ತದೆ. ಎಡೆಯಲ್ಲಿ ಕಿರಿಯ ಮಕ್ಕಳಿಗೆ ಅವಳೇನೆ ಸ್ನಾನ ಮಾಡಿಸಬೇಕು. ಮಧ್ಯಾಹ್ನ ಊಟವಾದ ಮೇಲೆ, ಮಕ್ಕಳ ಹೇನು ತುಂಬಿದ ತಲೆಯನ್ನು ಬಾಚಿ, ಹೇನಿನ ಶಿಕಾರಿ ನಡೆಯಿಸಬೇಕು. ಎಷ್ಟು ಮಾಡಿದರೂ ಮುಗಿಯದ ಕೆಲಸ ಅದು. ಅವುಗಳ ತಲೆಯಲ್ಲಿ ಏನು ತುಂಬಿದೆಯೋ—ದಿನದಿಂದ ದಿನ ಆ ಹೇನಿನ ಪೈರು ಹೆಚ್ಚುತ್ತಿತ್ತು! ಕೊನೆಗೆ ತೀರ ನಿರಾಶೆಗೊಂಡು, ರಾಧಾಕೃಷ್ಣನ ಕೈಯಿಂದ ಅವರಿಗೆಲ್ಲ ಚವಲನ್ನು ಮಾಡಿಸಿಯೇ ಬಿಟ್ಟಳು. ಅಂತೂ ಇದರಲ್ಲಿಯೇ ಬೆಳಗು, ಬೈಗು ಆಗುತ್ತದೆ. ತವರು ಮನೆಯಿಂದ, ಈ ಬೆವರು-ಮನೆಗೆ ಬಂದ ಬಳಿಕ, ಅವಳು ಬಹಳವಾಗಿ ಸೊರಗಿದಳು. ಇಷ್ಟೆಲ್ಲ ತಾಪತ್ರಯ, ಬೇಕೆಂದೇ ಕಟ್ಟಿಕೊಂಡುದು ಅಲ್ಲವೇ-ಎಂದು ಅವಳಿಗೆ ಒಮ್ಮೊಮ್ಮೆ ತೋರುತ್ತಿತ್ತು. ಆದರೂ ಇವೇ ಕೆಲಸಗಳಲ್ಲಿ ಉತ್ಸಾಹ ತೋರುತ್ತಿದ್ದ ಗಂಡನನ್ನು ನೋಡಿ, ಅವಳೂ ಹರ್ಷ ತಾಳುತ್ತಾಳೆ. ಅಲ್ಲಿನ ಊಟವೋ! ಬೇಯಿಸುವವಳೇನೋ ಅವಳು. ಆದರೆ ಹಾಲು ಮೊಸರಿಲ್ಲದ ಊಟ ಊಟವೇ? ನಿತ್ಯ—ತವರಿನ ಎಮ್ಮೆ, ದನಗಳನ್ನು ನೆನೆಯುತ್ತಾಳೆ. ಅವಳ ಶರೀರ ಒಣಗಿದೆ. ರಾಧಾಕೃಷ್ಣನೂ ಪುಷ್ಟನಾಗಿರಲಿಲ್ಲ. ಅವರ ಸಾಕು ಮಕ್ಕಳೂ ಹಾಗೇನೆ. ಹಾಲನ್ನು ಕೊಂಡುಕೊಳ್ಳುವ ಅನುಕೂಲತೆ ಅಲ್ಲಿ ಇನ್ನೂ ಉಂಟಾಗಲಿಲ್ಲ. ಆದಕ್ಕಾಗಿ ಅವಳು "ನೀವು, ಸಾಗುವಳಿಗೆ ಕೋಣಗಳನ್ನು ತಂದಿರಿ. ಈ ಮಕ್ಕಳು ಹಾಲಿಲ್ಲದೆ ಕಜ್ಜಿಯಿಂದ ನರಳುತ್ತವೆ. ನೀವೂ ಸೊರಗಿ ಕಡ್ಡಿಯಾಗಿದ್ದೀರಿ. ಶರೀರಕ್ಕೆ ಸ್ವಲ್ಪವಾದರೂ ತಂಪು

ಬೇಡವೇ?” ಎಂದಳು. “ಮಹಾರಾಯತಿ, ಊರಿಂದ ತಂದ ಹಣ ಇನ್ನೂ ಉಳಿದಿದೆ. ಎಮ್ಮೆಯೊಂದನ್ನು ಕೊಳ್ಳಬೇಕಂತಲೂ ಮನಸ್ಸಿದೆ. ದಯಾನಂದರಾಯರು ಒಂದನ್ನು ಕೊಡಿಸುವಾ ಎಂದಿದ್ದರು. ಅದನ್ನು ನಂಬಿ, ಕಾದು ಪ್ರಯೋಜನವಿಲ್ಲವೆಂದು ಕಾಣುತ್ತದೆ. ಇಲ್ಲೇ ಸಮೀಪದಲ್ಲಿ ಚೆನ್ನಾದ್ದೊಂದು ಎಮ್ಮೆ ಇದೆ. ಆದರೆ ಈ ಎರಡು ಕೋಣಗಳ ಜತೆಗೆ ಅದನ್ನೂ ಕಟ್ಟಿದರೆ, ನೋಡಿಕೊಳ್ಳಬೇಕು ನೀನೇ ಅಲ್ಲವೇ”—ಎಂದನು.

“ಅದರ ಸೇವೆಗೆ ತಕ್ಕ ಪ್ರತಿಫಲ ಸಿಕ್ಕೀತು.”

“ಹೊಂ, ಹಾಗೆ ಪ್ರತಿಫಲ ಮನುಷ್ಯರಿಂದಲೇ ಸಿಗುವುದಿಲ್ಲ.” ಎಂದ ಈತ. ಅವಳು ನಕ್ಕಳು. ತಮ್ಮ ಆಶ್ರಮದ ಎಳೆಯ ಕೂಸುಗಳು ತಮಗೆ ತಿಳಿದಷ್ಟು ದಣಿಯುತ್ತಿರುವಾಗ,—ಠಾಕುಠೀಕಿನಿಂದ ಪುಸ್ತಕಕ್ಕೂ, ನಾಲಿಗೆಗೂ ನೆಚ್ಚಿ ಕುಳಿತಿರುವ ದತ್ತಪ್ಪನವರಿಗೂ, ಆತ ಈ ಮಾತನ್ನಾಡಿದ್ದೇಕೆಂದು ತಿಳಿಯಿತು. ಆ ರಾತ್ರಿ ಸತ್ಯ—ತಡೆಯಲಾರದ ಒಂದು ವ್ಯಥೆಯನ್ನು ಗಂಡನ ಮುಂದಕ್ಕೆ ಇರಿಸಿದಳು. “ಅವರು ಸಹಾಯಕ್ಕೆ ಬಾರದಿದ್ದರೂ ಚಿಂತೆಯಿಲ್ಲ............ನೀವು ಮನೆಯಲ್ಲಿ ಇಲ್ಲದಾಗಲೆಲ್ಲಾ ಕೆಲಸವಿರಲಿ, ಇಲ್ಲದೆ ಇರಲಿ, ಅಡುಗೆ ಮನೆಗೆ ಹತ್ತು ಸಾರಿ ಬಂದು ಹೋಗುತ್ತಿರುತ್ತಾರೆ............ಅವರ ನೋಟ, ನಡಿಗೆ, ಏನೂ ನನಗೆ ಹಿತವಾಗಿ ಕಾಣಿಸುತ್ತಲಿಲ್ಲ” ಎಂದಳು.

“ಏನು ಮಾಡುವುದು ಸತ್ಯ? ದೊಡ್ಡವರು ತೊಡಿಸಿದ ಕೋಳ ಇದು. ಉಪಾಯದಿಂದ ನಿವಾರಿಸಿಕೊಳ್ಳಬೇಕಷ್ಟೆ” ಎಂದನು.

ರಾಧಾಕೃಷ್ಣನಿಗೆ-ಒತ್ತಟ್ಟು, ಶಾಲೆಗೆ ಹೇಗೆ ರೂಪಬಂದೀತು ಎಂಬ ಯೋಚನೆ, ಇನ್ನೊತ್ತಟ್ಟು, ಅದರ ಆರ್ಥಿಕ ಚಿಂತೆ. ಜತೆಗೆ, ಇದ್ದ ಕೆಲಸಗಾರರನ್ನು ದುಡಿಸುವುದೆಂತು ಎನ್ನುವ ಯೋಚನೆ.

ಮಳೆಗಾಲದ ಒಂದು ತಿಂಗಳು ಕಳೆಯುತ್ತಲೇ ಬಾಲಕರು ಕೆಮ್ಮು, ಶೀತ, ಜ್ವರಗಳಿಗೆ ಒಬ್ಬೊಬ್ಬರಾಗಿ ಗುರಿಯಾದರು. ಜಾರಪ್ಪ ಮಾಸ್ತರರು ಮಲಗಿದಲ್ಲೇನೇ. ಕೊನೆಗೆ ಉಪಾಯವಿಲ್ಲದೆ, ಅವರನ್ನು ಮಂಗಳೂರಿಗೆ ಸಾಗಿಸಬೇಕಾಯಿತು. ಯಾರಿಗೆ ಕಾಯಿಲೆಯಾದರೂ ಮದ್ದನ್ನು ತರಲು ಮಂಗಳೂರಿಗೇನೇ ಹೋಗಬೇಕು. ದತ್ತಪ್ಪ ಮಾಸ್ತರರು ಕದಲುವವರಲ್ಲ. ಅದಕ್ಕೂ ಅವನೇ ಹೋಗಬೇಕು. ಹಾಗೆ ಹೋಗಿ ವಾರಕ್ಕೋ,

ಹತ್ತು ದಿನಕ್ಕೋ, ಸಾಕಾಗುವಷ್ಟು ಔಷಧಿ ತರುತ್ತಾನೆ. ಇದು ಮುಂದಿನ ಭವಣೆಗಳಲ್ಲೊಂದು—ಎಂಬುದರಿಂದ ಹೊಮಿಯೊಪೆತಿಕ್ ಪುಸ್ತಕ ತಂದು, ನಿತ್ಯ ಕಾಯಿಲೆಗಳ ಚಿಕಿತ್ಸೆಯನ್ನು ಓದಿ ತಿಳಿದು, ತನ್ನ ವೈದ್ಯ ತಾನೇ ಆಗುವ ಪ್ರಯತ್ನವನ್ನು ಮಾಡುತ್ತಿದ್ದಾನೆ.

ಒಂದು ದಿನವಂತೂ ಅವನಿಗೇನೇನೂ ಬಿಡುವಿರಲಿಲ್ಲ. ಮೆಣಸಿನ ಗಿಡಗಳು ಗಾಳಿಗೆ ಬಿದ್ದು ನೆಲ ಅಳೆಯುತ್ತಿದ್ದುವು. ಅವನ್ನೆಲ್ಲ ಎಬ್ಬಿಸಿ, ನೆಟ್ಟಗೆ ಮಾಡಿ ಕೋಲು ಕಟ್ಟಿ ಬಿಗಿಯಬೇಕು. ಬುಡಕ್ಕೆ ಮಣ್ಣನ್ನು ರಾಶಿ ಹಾಕಬೇಕು-ನಾಳೆಗೆ ಮುಂದುವರಿಸುವ ಕೆಲಸವಲ್ಲ. ಅತ್ತ, ಮರ ಕಾಲನನ್ನು ಕರೆಯುವಂತಿರಲಿಲ್ಲ. ಆತ ಕಾಲು ಚಾಚಿಕೊಂಡು ಮಲಗಿದ್ದಾನೆ. ಮೊದಲ ಬಾರಿಗೆ—ರಾಧಾಕೃಷ್ಣ ದತ್ತಪ್ಪನವರನ್ನು ಕರೆದು "ಮಾಸ್ತರರೇ, ನಮ್ಮ ನೀಲನಿಗೆ, ಶೀತ ಜ್ವರ, ಎದೆ ನೋವು ತೊಡಗಿದೆ. ಕೂಡಲೆ ಏನಾದರೂ ಲೇಪ ಗೀಪ ಹಚ್ಚಬೇಕು. ವಿಪರೀತಕ್ಕೆ ಹೋಗಬಾರದಷ್ಟೆ. ನನಗೆ ಇಲ್ಲಿ ಹಿತ್ತಿಲಿನ ಕೆಲಸ ಮುಗಿಯುವಂತಿಲ್ಲ. ಒಮ್ಮೆ ಆಸ್ಪತ್ರೆಗೆ ಹೋಗಿ ಬರುತ್ತೀರಾ? ಲೇಪ, ಔಷಧ, ಪಥ್ಯ ಯಾವುದೆಂದು ಕೇಳಿ ತೆಗೆದುಕೊಂಡು ಬನ್ನಿ." ಎಂದನು. ದತ್ತಪ್ಪ ಮಾಸ್ತರರ ಅಭಿಮಾನಕ್ಕೇನೆ ಅದು ಬರೆಯಿಟ್ಟಂತೆ! "ಏನು—ಶಾಲೆಯ ಮಾಸ್ತರನೂ ನಾನೇ, ಪೇದೆಯೂ ನಾನೇ ಎಂದು ತಿಳಿದಿರಾ?" ಎಂದರು. ರಾಧಾಕೃಷ್ಣನು ಮಾತನಾಡಲಿಲ್ಲ ಮಾತಿಗೆ ಅದು ಸಮಯವೂ ಅಲ್ಲವೆಂದು ಬಲ್ಲ. "ಸತ್ಯ, ಅಂದು ನನಗೆ ನಿಮ್ಮ ಮನೆಯಲ್ಲಾದ ಕಾಯಿಲೆ ಇದು; ನೀಲನಿಗೆ ತೌಡು ಕಾಯಿಸಿ, ಎದೆಗೆ ಶಾಖವನ್ನು ಕೊಡು. ಕುಡಿಯಲು ಮಜ್ಜಿಗೆಸೊಪ್ಪಿನ ಕಷಾಯವನ್ನು ಮಾಡಿಕೊಡು. ಸಹಾಯಕ್ಕೆ ಶ್ಯಾಮನನ್ನು ಕರೆದುಕೋ. ನಾನು ಮಂಗಳೂರಿಗೆ ಓಡಿಹೋಗಿ ಬರುತ್ತೇನೆ. ಮೆಣಸಿನ ಗಿಡಕ್ಕಿಂತ, ಈ ಹುಡುಗನ ಜೀವ ಮುಖ್ಯವಲ್ಲವೇ"—ಎಂದು ಹೇಳಿ ಆತನೇ ಹೊರಟು ಹೋದನು. ಅದರ ಬೆನ್ನಿಗೆ ದತ್ತಪ್ಪಮಾಸ್ತರರೂ ಎದ್ದು, ಅಡುಗೆಯ ಮನೆಗೆ ಕಾಲಿರಿಸಿದರು. ಅವರನ್ನು ಕಂಡೂ ಕಾಣದಂತೆ ಸತ್ಯ, ಹುಡುಗನಿಗೆ ಶಾಖಕೊಡುತ್ತ ಕುಳಿತು ಕೊಂಡಳು. ದತ್ತಪ್ಪನವರು "ಅಮ್ಮಾ, ನಾನು ಮಧ್ಯಾಹ್ನ ಊಟಕ್ಕಿಲ್ಲ. ಇನ್ನು ಇಲ್ಲಿ ಬರಿಯ ಒಂದು ತಿಂಗಳ ಕಾಲ ಇದ್ದೇನಷ್ಟೆ—ನಿಮ್ಮ ಹೆಡ್‌ಮಾಸ್ತರರಿಗೆ ಹೇಳಿಬಿಡಿ-

ಬರಿಯ ಅನ್ನಕ್ಕಾಗಿ ಇಲ್ಲಿ ಬಿಟ್ಟಿದುಡಿಯುವುದು ನನ್ನಿಂದ ಸಾಧ್ಯವಿಲ್ಲ" ಎಂದರು.

ಅವಳು ಮೌನವಾಗಿಯೇ ಇದ್ದಳು.

"ದಯಾನಂದ ರಾಯರಾದರೂ ಶಾಲೆನಡೆಯಿಸುತ್ತಿದ್ದರೆ, ತಿಂಗಳು ತಿಂಗಳು ಸಂಬಳವಾದರೂ ಕೈಗೆ ಬರುತಿತ್ತು. ಈ ರಾಯರನ್ನು ನಂಬಿ, ಮೂರು ಹೊತ್ತಿನ ಗಂಜಿಗೂ, ಒದ್ದಾಡುವಂಥ ಪಾಡು ಬಂದಿದೆ" ಎಂದು ಹೇಳಿಹೋದರು. ಹಾಗೆ ಹೇಳಿ ಹೋದವರೂ, ಸಂಜೆಯ ಊಟದ ಕಾಲಕ್ಕೆ ಸಮನಾಗಿ, ಹಾಜರಿದ್ದರು. ರಾಧಾಕೃಷ್ಣ, ಆರು ಮೈಲು ದೂರ ನಡೆದು ಹೋಗಿ, ಔಷಧವನ್ನು ತೆಗೆದುಕೊಂಡು ಬಂದನು. ಬಂದವನೇ ಹುಡುಗನ ಉಪಚಾರವನ್ನು ಕೈಕೊಂಡನು.

ಇದೇ ರೀತಿ—ಬೇಸಾಯ, ಜೇನೆಗಳ ಸೇವೆಯಲ್ಲಿ ಅವನ ಶಿಕ್ಷಣದ ಕೆಲಸಕ್ಕೆ ಯಾವ ಬಿಡುವೂ ದೊರೆಯಲಿಲ್ಲ. ನೂಲುವ ಇಲಾಖೆಗಂತೂ ಗುರುಗಳೇ ಬೇಡವಾಯಿತು. ಕಾರಣ-ಹತ್ತಿ ದೊರಕಿಸುವ ವ್ಯವಸ್ಥೆ ಕಷ್ಟವಾಗಿತ್ತು. ಮಂಗಳೂರಿನಲ್ಲೂ ಅದೇ ಅವಸ್ಥೆಯು ಬಂದಿತ್ತು. ಮಾಡಿದ ನೂಲನ್ನು ಕೊಳ್ಳುವವರು ಇದ್ದಿರಲಿಲ್ಲ. ನೇಯುವವರು ಮೊದಲೇ ಇದ್ದಿರಲಿಲ್ಲ. ಆ ಕೆಲಸ ತಾನೇ ಮಾಡುತ್ತೇನೆಂದು ರಾಧಾಕೃಷ್ಣನಿಗೆ ಮನಸ್ಸು ಹೇಳಿದರೂ, ಅಂದಿನ ಪರಿಸ್ಥಿತಿಯಲ್ಲಿ, ಯಾವ ಕೆಲಸವನ್ನೆಲ್ಲಾ ತಾನೊಬ್ಬ ಮಾಡಬಹುದು—ಎಂಬ ಅನುಮಾನ ಇದ್ದೇ ಇತ್ತು.

ಇತ್ತ ದತ್ತಪ್ಪರಾಯರ ನಿರ್ಗಮನದಲ್ಲಿ ಅವನಿಗೆ ಬೇಸರಪಿರಲಿಲ್ಲ. ಅವರನ್ನು ಹೋಗಕೂಡದು ಎಂದು ಆಗ್ರಹಪಡಿಸಲೂ ಇಲ್ಲ. ಅವರು-ತಿಂಗಳ ವಾಯಿದೆಯು ಕಳೆದರೂ ಹೊರಡಲಿಲ್ಲ. ಕೆಲಸ ಮಾಡುವುದನ್ನು ಮಾತ್ರ ನಿಲ್ಲಿಸಿದ್ದರು. ಆ ಸ್ಥಿತಿಯು ಒದಗುತ್ತಲೇ ಈತ, "ಮಾಸ್ತರರೇ, ಇದು ಯಾರೊಬ್ಬರ ಸ್ವಂತದ ಕೆಲಸವೂ ಅಲ್ಲ. ಇಲ್ಲಿ ಸಂಬಳ ನನಗೂ ಇಲ್ಲ, ನಿಮಗೂ ಇಲ್ಲ. ದಯಾನಂದರಾಯರು ನಿಮಗೆ ಏನು ಹೇಳಿದ್ದಾರೋ, ತಿಳಿಯದು. ನನಗೆ ಕಾಣಿಸುವ ವಿಚಾರ ಇಷ್ಟು—ಇಲ್ಲಿ ದುಡಿದರೆ ಮಾತ್ರ, ನಾಳಿನ ಅನ್ನ, ನನಗಿದೆ, ನಿಮಗಿದೆ" ಎಂದರು. ಅವರು ರೇಗಿದರು. "ಅಹುದು ಗೊತ್ತಾಯಿತು. ಆಶ್ರಮದ ನೆಪದಿಂದ ಬಡವರ ಮಕ್ಕಳನ್ನು ದುಡಿಯಿಸಿಕೊಂಡು, ಸ್ವಂತ ಮನೆಯನ್ನು ಹೊಡುವ ವಿಚಾರ ಇದು"

ಎಂದು ಹೇಳಿ ಹೊರಟೇಹೋದರು. ಮಂಗಳೂರಿಗೆ ಹೋಗಿ, ದಯಾನಂದರಾಯರಲ್ಲಿ ಏನೇನು ಬೆಸೆದರೋ ತಿಳಿಯದು. ರಾಯರು ಒಂದು ದಿವಸ ಅವರನ್ನು ಕೂಡಿಯೇ ಬಂದರು. ಬಂದವರು ರಾಧಾಕೃಷ್ಣನಿಗೆ ಅವಕಾಶಕೊಡದಂತೆ, ಸಂಸ್ಥೆ ನಡೆಯಿಸುವ ವಿಚಾರದಲ್ಲಿ ಅರ್ಧತಾಸಿನ ತನಕ ಮಾತನಾಡಿದರು. ಆತ ಕೇಳುತ್ತ ಕುಳಿತನು. ಅನಂತರ "ಬನ್ನಿ, ಹೋಗುವ" ಎಂದು ಅವರನ್ನು ಕರೆದುಕೊಂಡು-ತಾನು ಮಾಡಿದ ಚಾವಣಿ, ಕೃಷಿ, ಕೆಲಸಗಳನ್ನು ಒಂದೊಂದಾಗಿ ತೋರಿಸಿದನು. ಮುಂದೆ—"ನನ್ನ ಕನಸು ಇದು, ಸ್ವಾವಲಂಬನೆ ತನ್ನ ಗುರಿ; ಈ ತನಕ ಮನೆಯಿಂದ ಇಷ್ಟು ಹಣ ತಂದು ಹಾಕಿದೆ. ಯಾರನ್ನೂ ಬೇಡಲಿಲ್ಲ—ಬೇಡದೆ ಆಗುವಂತಿಲ್ಲ; ಅದನ್ನಾದರೂ ಮಾಡಬಹುದು. ಆದರೆ ಸಹಾಯಕರು ದೊರೆಗಳಂತಿರುವ ಬದಲು, ಮಕ್ಕಳ ಮೇಲೆ ಪ್ರೀತಿ ಇಟ್ಟಲ್ಲಿ, ಕೆಲಸದಲ್ಲಿ ಶ್ರದ್ಧೆ ತೋರಿದಲ್ಲಿ—ಆಗುತ್ತಿತ್ತು. ಅಂಥವರನ್ನು ಕೊಡಿಸುತ್ತೀರಾ?—ಎಂದನು."

ದತ್ತಪ್ಪರಾಯನು ಕೊಟ್ಟ ದೂರುಗಳ ಮುಂದಕ್ಕೆ—ಈತನ ಕೆಲಸ. ಸಾಹಸಗಳ ಚಿತ್ರ, ತ್ಯಾಗಗಳು, ದಯಾನಂದರಾಯರಿಗೂ ಕಾಣಿಸಿದುವು. "ನಿಮ್ಮ ದಾರಿಯೇ ಸಮುಸಾದುದು. ನಾಳೆಯೇ ಇಬ್ಬರನ್ನು ಕಳುಹಿಸಿಕೊಡುತ್ತೇನೆ. ಸ್ವಯಂಸೇವಕರಿಗೆ ಮಂಗಳೂರಿನಲ್ಲಿ ಬರಗಾಲವೇ" ಎಂದರು. ಅದಕ್ಕೆ ರಾಧಾಕೃಷ್ಣ "ರಾಯರೇ-ಸ್ವಯಂಸೇವಕರು ಬೇಡ. ನಮ್ಮ ಜನ ಬಿಟ್ಟಿ ಸೇವೆ ಬಯಸುವುದು ತಪ್ಪು; ಮಾಡಿಸುವುದೂ ತಪ್ಪು. ಎಲ್ಲಿ—ಧರ್ಮಾರ್ಥ ಕೆಲಸ ಇದು—ಎಂಬ ಭಾವನೆ ಬರುತ್ತದೆಯೋ ಅಲ್ಲಿ, ಶಿಸ್ತೆಂಬುದು ಉಳಿಯುವುದಿಲ್ಲ. ನಮಗೆ ಅಂಥವರಿಂದ ಕೆಲಸ ಮಾಡಿಸುವುದಕ್ಕೂ ಬರುವುದಿಲ್ಲ. ಎಷ್ಟು ಉಪದ್ರವಾದರೂ ಸರಿಯೇ, ಜನರ ಪರೋಪಕಾರ ಮಾತ್ರ ಬೇಡ" ಎಂದನು. ಅವರು ನಕ್ಕರು........"ಆದರೆ ನೀವೇ ಬಿಟ್ಟಿ ದುಡಿಯುತ್ತಿದ್ದೀರಲ್ಲಾ" ಎಂದರು.

"ನಿಜ, ನಾನು ದುಡಿಯುತ್ತಿದ್ದೇನೆ—ನನ್ನ ಹೊಣೆಯನ್ನು ತಿಳಿದು. ಅದರಿಂದಲೇ ಪರರಿಂದ ಅದನ್ನು ನಾನು ಬಯಸುವುದಿಲ್ಲ. ನನ್ನ ವಿಷಯವೂ ಹಾಗೇನೆ; ಈ ಹೊತ್ತು ನಾನು ಬಿಟ್ಟಿ ಮಾಡಿದರೂ, ನಾಳೆ ನನ್ನ ಹೆಂಡತಿ ಮಕ್ಕಳು—'ಇವರ ಪರೋಪಕಾರದಿಂದ ನಮ್ಮ ಭವಿಷ್ಯ ಮುಳುಗಿತು'—ಎನ್ನುವ ಸ್ಥಿತಿಯು ಬರಬಾರದು" ಎಂದನು. ರಾಯರು ವಿಸ್ಮಿತರಾ

ವರು. ಇತರ ಉದಾತ್ತ ತತ್ವಗಳನ್ನು ಅವರು ಒಪ್ಪಿಕೊಂಡಂತೆ, ಇದನ್ನೂ ಒಪ್ಪಿಕೊಂಡು ಹೋದರು. ಹೋಗುವ ಮುನ್ನ, "ಹಾಗಾದರೆ ಇದರ ಖರ್ಚಿನ ವ್ಯವಸ್ಥೆ ಹೇಗಾಗಬೇಕು? ಇದನ್ನು ಖಾಸಗಿಯಿಂದ ನಡೆಯಿಸ ಬೇಕೆಂಬ ಇಷ್ಟವೇ ನಿಮ್ಮದು?" ಎಂದು ಕೇಳಿದರು.

"ಅದು ತನ್ನ ಕಾಲಿನಮೇಲೆ ನಡೆಯುವಂತಾದರೆ, ಹತ್ತು ಮಂದಿಯ ವಶಕ್ಕೆ ಒಪ್ಪಿಸಬೇಕೆಂಬುದೇ ನನ್ನ ಹಂಬಲ. ನಿಮ್ಮಿಂದ ಅನುಕೂಲವಾ ದರೆ, ನೀವು ಒದಗಿಸುವೆನೆಂದ ಸಾವಿರ ರೂಪಾಯಿಗಳನ್ನು ಸಾಲವಾಗಿ ಕೊಡಿ. ಮುಂದಿನ ವರ್ಷ ಕೃಷಿಯನ್ನು ವಿಸ್ತರಿಸಿ, ಏನಾದರೊಂದು ದ್ರವ್ಯಾರ್ಜನೆಯ ಉದ್ಯೋಗವನ್ನು ಸೇರಿಸಿ, ಶಾಲೆಯ ಬೆಳವಣಿಗೆ ಸಾಧಿ ಸುತ್ತೇನೆ"

ರಾಯರು—ತಮಗೆ ಬರಬೇಕಾದ ಹಣ ಹೇಗೆ ಬಾರದೆಹೋಯಿತು— —ಎಂದು ತಮಗಾದ ವಂಚನೆಯ ಕತೆಯೊಂದನ್ನು ಹೇಳಿದರು. ಆ ಬಳಿಕ "ಆ ದಿವಸ ನೀವು ಒತ್ತಾಯ ಮಾಡಿ, ನಮ್ಮ ಅಡವುದಾರರಿಂದ ಹತ್ತು ವರ್ಷಕ್ಕೆ ಇದನ್ನು ವಾಯಿದೆಗೇಣಿಗೆ ಮಾಡಿಸಿಕೊಂಡಿರಿ. ಅಲ್ಲವಾದರೆ ತುಂಬಾ ತೊಂದರೆ ಬರುತ್ತಿತ್ತು. ಈಗ ಈ ಭೂಮಿಯನ್ನು ನಾನು ಅವರಿ ಗೇನೆ ಮಾರಿ ಬಿಟ್ಟೆ. ಏನು ಮಾಡಲಿ— ಸಾಲುಗಾರನ ತಗಾದೆ ಅಷ್ಟಿದೆ." ಎಂದರು. ಸಾಲ ಮೂಲಗಳ ವಿಷಯದಲ್ಲಿ. ನಾಲ್ಕು ಹಿತವಚನಗಳನ್ನು ಹೇಳುವ ಇಚ್ಛೆ ರಾಧಾಕೃಷ್ಣನಿಗೆ ಇತ್ತಾದರೂ, ಹಿರಿಯರ ಮುಂದಕ್ಕೆ, ಆ ಮಾತನ್ನು ಆಡದಾದನು. ರಾಯರು ರಾಧಾಕೃಷ್ಣನ ಮೇಲಿನ ವಿಶ್ವಾ ಸದಿಂದ "ನಾಳೆ, ಆದಿತ್ಯವಾರ ಬೆಳಿಗ್ಗೆ ಬನ್ನಿ. ನಾಲ್ಕಾರು ಮಂದಿ ಸ್ನೇಹಿ ತರನ್ನು ಕರೆಯಿಸಿಕೊಂಡು ನಿಮ್ಮ ಬೆಂಬಲಕ್ಕೆ ಒಂದು ಸಮಿತಿಯನ್ನು ರಚಿಸಿ ಕೊಡುತ್ತೇನೆ. ಆಶ್ರಮ ಸ್ವತಂತ್ರವಾಗುವ ತನಕವಾದರೂ, ಹಣದ ಸಹಾಯವನ್ನು ಮಾಡುತ್ತೇನೆ" ಎಂದು ಆಶ್ವಾಸನ ಕೊಟ್ಟು ಹೊರಟರು. ರಾಯರೊಡನೆ ಬಂದ ದತ್ತಪ್ಪನವರು "ನಾನೇನು ಮಾಡಲಿ?" ಎಂದು ಕೇಳಿದರು.

"ರಾಧಾಕೃಷ್ಣನಿಗೆ ಒಪ್ಪಿತವಾದರೆ ಅಲ್ಲಿಯೇ ಇದ್ದು ಬಿಡಿ. ನನಗೆ ಅದರ ಜವಾಬ್ದಾರಿಯು ಇಲ್ಲ. ಎಲ್ಲವೂ ಅವರದು" ಎಂದರು. ಪರಿಣಾಮ ತಿಳಿದೇ ಇದೆ.

ಮುಂದಿನ ಆದಿತ್ಯವಾರ ಬಂದಿತು. ಬೇಸಾಯದ ಕೆಲಸಕ್ಕೆ ಬಿಡುವಾಗಿತ್ತು. ಬೆಳಗಾಗುತ್ತಲೇ, ಒಂದು ತಾಸು ಕಾಲ, ರಾಧಾಕೃಷ್ಣನು ಮಕ್ಕಳಿಗೆ ಸ್ವಲ್ಪ ಪಾಠ ಹೇಳಿದನು. ಒಬ್ಬ ಚಿಕ್ಕ ಹುಡುಗನನ್ನು ಬಿಟ್ಟರೆ ಉಳಿದವರು ಓಡಾಡುತ್ತಿದ್ದರು. ಸತ್ಯಳಿಗೆ, ಹೆಚ್ಚಿನ ಆತುರ ಇರಲಿಲ್ಲ. ಹಾಗೆಂದು, ಮಧ್ಯಾಹ್ನಕ್ಕೆ ಮುಂಚಿತವಾಗಿ ಮಂಗಳೂರಿಗೆ ಹೋದನು. ಅಲ್ಲಿ ರಾಯರ ನಗುಮೊಗದ ಸ್ವಾಗತವು ಸಿದ್ಧವಾಗಿತ್ತು. ಇಬ್ಬರಿಗೂ ಊಟವಾಯಿತು. ಆ ಬಳಿಕ ರಾಯರು—ತಾವು ರಚಿಸಲಿರುವ ಕಮಿಟಿಯ ಅಸ್ತಿವಾರವನ್ನು ಹಾಕಿದರು. 'ದಲಿತಾಶ್ರಮ ಸಹಾಯಕ ಸಂಘ'ವೆಂದು ಕರೆದು, ಅದಕ್ಕೆ ಒಂದು ಸಂಘಟನೆ ತಯಾರಿಸಿದರು. ಪ್ರತಿಯೊಂದು ಜಾತಿಯವರಿಂದಲೂ ಒಬ್ಬೊಬ್ಬ ಪ್ರತಿನಿಧಿಯುಳ್ಳದಾಗಿ ಇರತಕ್ಕದೆಂದೂ ತಾನು ಅದರ ಕಾರ್ಯನಿರ್ವಾಹಕನಾಗುವುದೆಂದೂ ತೀರ್ಮಾನಿಸಿಕೊಂಡಿದ್ದರು. ಅದಕ್ಕಾಗಿ ಅವರ ಮನೆಯಲ್ಲಿಯೆ ಸಭೆಯೊಂದನ್ನು ಆಮಂತ್ರಿಸಿದ್ದರು. ಮುಸುಲ್ಮಾನ ಬಂಧುಗಳ ಪರವಾಗಿ--ಜನಾಬ್ ಗಫೂರರವರಿಗೂ, ಸಾಹುಕಾರರ ಪರವಾಗಿ" ರಂಗಪ್ಪ ನಾಯಕರಿಗೂ, ಬ್ರಾಹ್ಮಣ ವರ್ಗದಲ್ಲಿ ಶ್ರೀ--ನಂದರವರಿಗೂ, ಬಿಲ್ಲವರ ಮುಖಂಡರಾದ--ಎಲಿಯಪ್ಪನವರಿಗೂ, ಮೊಗವೀರ ಮುಖಂಡ ಪುತ್ರನ್‌ರಿಗೂ, ನಾಡವರ ಪರವಾಗಿ ದೇಜು ಶೆಟ್ಟರಿಗೂ, ಪಂಚಮರ ಪ್ರತಿನಿಧಿಯಾಗಿ ಬಚ್ಚಣ್ಣನವರಿಗೂ—ಹೀಗೆ ಆಮಂತ್ರಣಗಳು ಹೋದುವು. ರಾಯರು ಯಾವುದೇ ಸಮಿತಿಯ ನಿರ್ಮಾಣವನ್ನು ಮಾಡುವುದಾಗಲಿ, ಒಂದೊಂದು ಜಾತಿಯ ಭೂತಕ್ಕೂ, ತಕ್ಕ ಪ್ರಾತಿನಿಧ್ಯದ ಹವಿಸ್ಸನ್ನು ಅರ್ಪಿಸದೆ ತೃಪ್ತರಾಗುವವರಲ್ಲ. ತಾವು ನಿಷ್ಪಕ್ಷಪಾತಿಗಳು ಎಂದು ತೋರಿಸುವುದಕ್ಕೆ ಬೇರೆ ಯಾವ ಸಾಕ್ಷಿ? ಆದರೆ ಅವರ ಮಂಗಳೂರಿನಲ್ಲಿ, ಜಾತೀಯತೆ ಒಂದು ನಾರುಹುಣ್ಣಿನಂತಾಗಿದೆ. ಎರಡು ಜಾತಿಯವರು ಸೇರಿ ಕೆಲಸ ಮಾಡಿದರಲ್ಲವೇ—ಇಂಥ ಹತ್ತಾರು ಮಂದಿ ಕೂಡಿ ಕೆಲಸ ಮಾಡುವುದು! ಹೀಗಾಗಿ ಅಲ್ಲಿ ಸಭೆ ಜರಗುವ ವೇಳೆಗೆ ಪದವೀಧರನಾಗಲು ಹಾತೊರೆಯುತ್ತಿದ್ದ ಪಂಚಮ ಮುಖಂಡ ಬಚ್ಚಣ್ಣನವರಲ್ಲದೆ, ಉಳಿದ ಯಾರೂ ಅಲ್ಲಿಗೆ ಬಂದಿರಲಿಲ್ಲ.

"ನೋಟೀಸು ಕಡಿಮೆಯಾಗಿ, ಬರಲಿಕ್ಕಾಗಲಿಲ್ಲವೆಂದು ಕಾಣುತ್ತದೆ" ಎಂದುಕೊಂಡು ರಾಯರು, ಒಂದು ಜಟ್ಕಾ ಬಂಡಿಯನ್ನು ತರಿಸಿ,

ರಾಧಾಕೃಷ್ಣನನ್ನು, ಬಚ್ಚಣ್ಣನವರನ್ನು ಜತೆಗೆ ಕುಳ್ಳಿರಿಸಿಕೊಂಡು, ಆಮಂತ್ರಿತರ ಮನೆಗೆ ತಾವೇ ಅತಿಥಿಗಳಾಗಿ ಹೋದರು. ಒಬ್ಬಿಬ್ಬರು ಕಾಣ ಬಯಸಲಿಲ್ಲ; ಉಳಿದ ಇಬ್ಬರು ಸಂಜೆಯ ತನಕ ಅವರೊಡನೆ ಮಾತನಾಡುತ್ತಾ ಕುಳಿತ್ತಿದ್ದು—"ಯಾವುದಕ್ಕೂ ನೋಡಿ, ಕಮಿಟಿ ಮಾಡಿದ್ದಂತು ಸರಿಯೆ. ನಮಗೆ ಅದರಲ್ಲಿರುವುದಕ್ಕೂ ಸಂತೋಷ. ಆದರೆ ಇನ್ನು ಸ್ವಲ್ಪ ಸಮಯದ ವರೆಗೆ ಯಾವುದಕ್ಕೂ, ನಾವು ವಂತಿಗೆ ವರಾಡಕ್ಕೆ ಹೋಗುವ ಹಾಗಿಲ್ಲ. ಹೋದ ನಾವೇನೆ ತಿರುತಿರುಗಿ ಹೋದರೆ, ಜನ ಹಣ ಕೊಡುವಂತೆಯೂ ಇಲ್ಲ" ಎಂದು ಉಪದೇಶಮಾಡಿ ಕಳುಹಿಸಿದರು. ರಾಯರು "ಅವರಂದುದು ನಿಜ, ಈಗೀಗ ವಂತಿಗೆ ವರಾಡಕ್ಕೆ ಹೋಗುವ ಜನರು ಬಹಳ ಆಗಿದ್ದಾರೆ. ಈ ಶಾಲೆ. ಆ ಮಿಶನ್, ಈ ಆಸ್ಪತ್ರೆ, ಎಂದು ಪರ ಊರಿನಿಂದಲೂ ಬೇಡಲಿಕ್ಕೆ ಜನ ಬರುತ್ತಿದ್ದಾರೆ. ಬರುವವರೆಲ್ಲರೂ, ಕೊಡುವ ನಾಲ್ಕು ಮಂದಿಯಲ್ಲಿಗೇನೇ ಹೋಗುತ್ತಾರೆ. ಅವರು ಎಷ್ಟೆಂದುಕೊಟ್ಟಾರು?" ಎಂದು ಊರಿನ ದಾನಿಗಳ ಪರವಾಗಿಯೇ ಮಾತನಾಡಿದರು. ರಾಧಾಕೃಷ್ಣ ಮಾತನಾಡಲಿಲ್ಲ. ತಾವು ಹೋದ ಒಂದೆರಡು ಕಡೆಗಳಲ್ಲಿ, ಯಜಮಾನರು ಮನೆಯಲ್ಲಿ ಇದ್ದರೂ, ಇಲ್ಲವೆಂದು ನಟಿಸಿದುದನ್ನು ಆತ ಪರಿಶೀಲಿಸಿದ್ದನು. "ರಾಯರು ಬರುವುದೇ ವಂತಿಗೆ ವಸೂಲಿಗೆ" ಎಂಬ ಅಭಿಪ್ರಾಯ ಜನರಲ್ಲಿ ಉಂಟಾಗಿರಬೇಕು. ಅದರಿಂದ ಅವರನ್ನು ಕರೆದೊಯ್ದರೆ, ಯಾವ ಪ್ರಯೋಜನವೂ ಆಗಲಾರದೆಂದು ಆತ ತಿಳಿಯುವಂತಾಯಿತು.

ತಿರುಗಿ ಬಂದು, ರಾಯರ ಮನೆಯಲ್ಲಿ ಇಳಿದ ಗಳಿಗೆಯಲ್ಲೇ, ಹೊಸಬರೊಬ್ಬರು ಅಲ್ಲಿಗೆ ಬಂದರು. ರಾಯರು ಅತ್ಯುತ್ಸಾಹದಿಂದ "ಬನ್ನಿ ಮಿ| ಕಾಮತ್, ಈ ನಮ್ಮ ಸ್ನೇಹಿತರ ಪರಿಚಯ ಮಾಡಿಕೊಡುತ್ತೇನೆ" ಎಂದು ಕಾಮತರಿಗೆ ರಾಧಾಕೃಷ್ಣನ ಪರಿಚಯ ಮಾಡಿಕೊಟ್ಟರು. ಅವರಿಗೆ ಇವರ ಪರಿಚಯ ಮಾಡಿಕೊಟ್ಟರು. ಅಲ್ಲಿಗೆಬಂದ ಕಾಮತರೂ ಇನ್ನಾರೂ ಅಲ್ಲ—ಹಳೆಯ ಸದಾನಂದನೇ ಆತ. ಸಂದ. ಯಸ್. ಕಾಮತ್ ಎಂದು ತನ್ನ ಹೆಸರನ್ನು ಸುಧಾರಿಸಿಕೊಂಡು, ಮಂಗಳೂರಿನಲ್ಲಿಯೇ ತೀರ ಹೊಸತಾಗಿ ಒಂದು ಆಸ್ಪತ್ರೆಯನ್ನು ಈಗ ತೆರೆದಿದ್ದಾನೆ. ರಾಧಾಕೃಷ್ಣಗೆ ತುಂಬ ನಗು ಬಂದಿತು. ಕಾರಣ-ಹಿಂದೆ ಕುಂದಾಪುರದಲ್ಲಿ ತನ್ನ ಜತೆಯಲ್ಲಿ

ಗ್ರಾಮಸಂಚಾರ ಮಾಡಿದ ಆತನು ತನಗೆ ಪರಿಚಿತನೆಂದು ರಾಯರೂ ಮರೆತಿರಬೇಕು. ತವೊಳಗೆ ಪರಿಚಯವಿದೆ ಎಂದು ತೋರಿಸಿಕೊಂಡರೆ, ಇನ್ನೂ ಅರ್ಧ ಗಂಟೆಯಕಾಲ ಮಾತಿನಲ್ಲಿ ಕಳೆದು, ತಾನು ಮನೆಯನ್ನು ಸೇರುವುದಕ್ಕೆ ಕತ್ತಲಾದೀತು—ಎಂದು ತಿಳಿದುಕೊಂಡು, ಬೀಳ್ಕೊಡುವ ಮುನ್ನ, "ಮಿ! ಕಾಮತ್ ನಮ್ಮಲ್ಲಿಗೆ ಒಮ್ಮೆ ಬನ್ನಿ, ಇಲ್ಲವಾದರೆ ನಾನೇ ನಿಮ್ಮಲ್ಲಿಗೆ ಬರುತ್ತೇನೆ. ನಿಮ್ಮ ಆಸ್ಪತ್ರೆ ಎಲ್ಲಿದೆ? ನಮ್ಮ ಹುಡುಗರಿಗೆ ಆಗಾಗ ಮದ್ದು ಮತ್ತೊಂದು ಬೇಕೇ ಬೇಕಾಗುತ್ತದೆ" ಎಂದನು.

"Always at your service" ಎಂದು ಕಾಮತರ ಸವಾರಿ ನುಡಿಯಿತು. ಅಷ್ಟು ಕ್ಷಿಪ್ರದಲ್ಲಿ ಹಳೆಯ ಗೆಳೆಯರಿಬ್ಬರ ಬೀಳ್ಕೊಟ್ಟರು.

ಮನೆಗೆ ಹಿಂದಿರುಗುವಾಗ ರಾಧಾಕೃಷ್ಣನಿಗೆ "ರಾಯರ ಅತಿ ಸರಳತೆಯಿಂದ, ಪ್ರತಿಯೊಂದೂ ಹಾನಿಯಾಗುತ್ತಿದೆಯಲ್ಲಾ" ಎಂದು ಅನಿಸಿತು. ತಾನು ಹೋದ ಕೆಲಸ ನಿರಾಶೆಯಲ್ಲಿ ಕೊನೆಗೊಂಡಿತಾದರೂ, ಸದಾನಂದನ ಭೇಟಿಯಾದುದು ಸಂತೋಷವಾಯಿತು. ಅವನಾದರೂ ತನ್ನ ಹಿಂದಿನ ಮಾತಿನಂತೆ, ಸ್ವಲ್ಪವಾದರೂ ಪರ್ತಿಸಿದರೆ, ತನಗೆ ಸಹಾಯವಾಗುತ್ತಿತ್ತು—ಎಂದು ಎಣಿಕೆಹಾಕುತ್ತ ಕಿರಿಪದವನ್ನು ಸೇರಿದನು.

ಸದಾನಂದ ರಾಯರು—ರಾಯರಲ್ಲ, ಕಮ್ತಿ, ಅಲ್ಲ ಕಾಮತ್—ಆ ಹೆಸರು ತೀರಾ ಸಾಮಾನ್ಯವಾಯಿತೆಂದು, ಹೊಸ ಶೈಲಿಯಲ್ಲಿ ನಂದ. ಯಸ್. ಕಾಮತ್ ಎಂದು ಹೆಸರು ಬದಲಿಸಿದ್ದನು. ಲಗ್ನವಾಗಿ, ಉಡುಪಿಯಲ್ಲಿ ಡಿಸ್‌ಪೆನ್ಸರಿ ತೆರೆಯುತ್ತೇನೆಂದು ಯೋಚಿಸಿದವನು, ತಿಂಗಳೊಳಗಾಗಿ ಮಂಗಳೂರಿಗೆ ಬಂದು ಸೇರಿಕೊಂಡನು. ಅಲ್ಲಿಯೇ ಹೊಸ ಕನಸುಗಳನ್ನು ಕಾಣತೊಡಗಿದನು. ಆ ಊರಿನಲ್ಲಿ ಸರಕಾರಿ ಆಸ್ಪತ್ರೆಗೆ ಸಮಗಟ್ಟುವಂತೆ, ತಾನು ಒಂದು ದೊಡ್ಡ ಮಹಾ ಆಸ್ಪತ್ರೆ ತೆರೆಯಬೇಕೆಂದು ಎಣಿಸಿದನು. ವಿದೇಶಗಳಲ್ಲಿ ಅಂಥ ಸಾವಿರಾರು ಖಾಸಗಿ ಸಂಸ್ಥೆಗಳಿವೆ ಎಂದು ಕೇಳಿಬಲ್ಲನು. ಆ ಆಸೆಯು ಅವನಲ್ಲಿ ಬಲವಾಗಿ ತೊಡಗಿತು. ಮನೆಯಿಂದಲೂ, ವಿವಾಹದಿಂದಲೂ, ಅನೇಕ ಅನುಕೂಲಸ್ಥ ಬಂಧುಗಳಿದ್ದುದರಿಂದ ಅದು ಸುಲಭವೆಂದು ಕಂಡಿತು. ಕನಿಷ್ಟ ನೂರು ರೋಗಿಗಳಾದರೂ, ವಿಶ್ರಮಿಸಿ ಚಿಕಿತ್ಸೆ ಪಡೆಯುವಂಥ—ಒಂದು Lying in—hospital ತೆರೆಯಲು ಬದ್ಧ ಕಂಕಣನಾದನು. ಊರಲ್ಲಿ ಬೇನೆ

ಇರುವಷ್ಟು ದಿನ, ಬಡವರನ್ನೂ ಅಲ್ಲದೆ, ಶ್ರೀಮಂತರನ್ನೂ ಅದು ಕಾಡು ವಷ್ಟು ದಿನ—ತನ್ನ ವೈದ್ಯಕೀಯ ವೃತ್ತಿಯು, ಎಷ್ಟೊಂದು ಪರೋಪಕಾರದ ವೃತ್ತಿಯೋ, ಅಷ್ಟೇ ವ್ಯವಹಾರದ ವೃತ್ತಿಯೂ ಅಹುದು—ಎಂದು ತಿಳಿದಿದ್ದನು. ಆದುದರಿಂದ ಮಂಗಳೂರಿನ ಒಂದು ಭಾಗದಲ್ಲಿ, ಒಮ್ಮೆಗೇ ನಾಲ್ಕಾರು ದೊಡ್ಡ ಮನೆಗಳನ್ನು ಬಾಡಿಗೆಗೆ ಹಿಡಿದನು. "ಬೇಡ—ಒಂದೇ ಹಿತ್ತಿಲಿನಲ್ಲಿ ನಾಲ್ಕಾರು ಮನೆಗಳಿರುವ ತಾವನ್ನು ಆರಿಸುವುದು ಒಳ್ಳೆಯದು. ಅದನ್ನು ಕ್ರಯಕ್ಕೆ ಪಡೆದುಕೊಳ್ಳುವುದು ಮತ್ತಷ್ಟು ಅವಶ್ಯ" ಎಂದು ತನ್ನ ಸಿರಿವಂತಿಕೆಯನ್ನೂ, ಮಾವನ ಮನೆಯ ವರ್ಚಸ್ಸನ್ನೂ ಆ ಸಾಹಸಕ್ಕಾಗಿ ಬಳಸಿದನು. ಸಾವಿರಾರು ರೂಪಾಯಿಗಳ ಉಪಕರಣಗಳನ್ನೂ ಔಷಧಗಳನ್ನೂ, ಒದಗಿಸಿಕೊಂಡು, ಮಹಾನುಭಾವರೊಬ್ಬರನ್ನು ಮದ್ರಾಸಿನಿಂದಲೇ ಕರೆಯಿಸಿ, ಈ "Doctor Nand's lying-in-hospital" ನ ಆರಂಭೋತ್ಸವವನ್ನು ನಡೆಯಿಸಿದನು. ಒಂದು ಸಲಹೆಗಾರ ಮಂಡಲವನ್ನು ರಚಿಸಿ, ಊರಿನ ಹಿರಿಯ ವೈದ್ಯರನ್ನು ಒಲಿಸಿಕೊಳ್ಳಲು, ಅವರ ಹೆಸರುಗಳನ್ನು ಜತೆಗೆ ಸೇರಿಸಿಕೊಂಡನು. ಚಿಕಿತ್ಸೆಗೆ ತೊಡಕಾಗುವ "ಕೇಸು"ಗಳನ್ನು ಆಯಾಯ ವಿಷಯದಲ್ಲಿ ತಜ್ಞರಾದವರ ಗಮನಕ್ಕೆ ತರ, ವಂತೆ ಏರ್ಪಡಿಸಿದನು. ಬಂದವರ ಮುಂದೆ 'ಇನ್ನು ಒಂದು ವರ್ಷದೊಳಗಾಗಿ—ಇಲೆಕ್ಟ್ರೊ ಥೆರಪಿ, ರೇಡಿಯಮ್ ಥೆರಪಿ, ತೊಡಗಿ ಬಿಡುತ್ತೇನೆಂ'ದು ಎಂದು ಬಾಯಪ್ರಚಾರವನ್ನು ಬೆಳೆಯಿಸಿದನು.

ಸುಮಾರು ಒಂದು ತಿಂಗಳ ಕಾಲ ಮಂಗಳೂರಿನ ಪತ್ರಿಕೆಗಳಲ್ಲಿ, ಈ ನವೀನ ಆಸ್ಪತ್ರೆಯ ಚಿತ್ರಗಳೂ ಡಾ। ನಂದರವರ ಚಿತ್ರಗಳೂ ತುಂಬಿ ತುಳುಕಿದವು. ರಾಧಾಕೃಷ್ಣನಿಗೆ ಅವರು ಭೇಟಿಯಾಗುವಾಗ ಇಷ್ಟೆಲ್ಲ ನಡೆದು ಒಂದು ತಿಂಗಳ ಕಾಲವೇ ಸರಿದಿತ್ತು. ಅವನು ಮಾತ್ರ ಕಿರಿಪದವಿನಂಥ ಕಗ್ಗವಿಯಲ್ಲಿ ಕುಳಿತುಕೊಂಡುದ್ದರಿಂದ ಈ ನವೀನ ಹೆಗ್ಗೂಸಿನ ಜನನ ವಾರ್ತೆಯನ್ನು ತಿಳಿದಿರಲಿಲ್ಲ. ಈಗ ನಂದರವರು ದಯಾನಂದ ರಾಯರ ಮನೆಗೆ ಬಂದುದೂ ತಮ್ಮ ಕಾರ್ಯಕಲಾಪಗಳ ಪ್ರಚಾರಕ್ಕೆ. ತಾವು ಸದ್ಯಕ್ಕೆ ತೆರೆಯಬೇಕೆಂದಿದ್ದ X—ರೇ ಮಂದಿರವನ್ನು ಯಾವ ಮಹಾನುಭಾವರ ಹಸ್ತದಿಂದ ತೆರೆಯಲಿ ಎಂದು ಯೋಚಿಸಲು. ಎಂದರೆ, ಅವರಿಗೆ ನಾಲ್ಕಾರು ತಿಂಗಳೊಳಗಾಗಿ, ಪಂಡಿತ ಜವಹರಲಾಲರೊ,

ಜಮುನಾಲಾಲ್ ಬಜಾಜರೋ, ಮಂಗಳೂರಿಗೆ ಬರುವರೆಂಬ ವಾರ್ತೆ ದೊರಕಿತ್ತು. ಅಂಥ ಧುರೀಣರನ್ನು ಈ ಕೆಲಸಕ್ಕೆ ಒಪ್ಪಿಸಲು ರಾಯರು ತಕ್ಕ ಸೂತ್ರಧಾರರು ಎಂಬುದರಿದಲೇ, ಈಗಿನಿಂದ ತಯಾರಿ ನಡೆಯಿಸುತ್ತಿದ್ದಾರೆ. ರಾಯರು "ಅವರು ಬರುವುದು ಖಂಡಿತವಾಗಲಿ. ನಿಮ್ಮ ಕೆಲಸ ದೊಡ್ಡದು. ಅಂಥವರಿಂದಲೇ ಅದು ಜರಗಬೇಕು" ಎಂದು ಮರುಮಾತನಾಡಿದರು. ನಂದರವರು ಬಹಳ ಹೊತ್ತು ರಾಯರನ್ನು ಉಬ್ಬಿಸುತ್ತ ಕುಳಿತರು. ಹೊರಡುವಾಗ "ನನ್ನಿಂದಾಗುವ ಸೇವೆ ಏನಾದರೂ ಇದ್ದರೆ ಹೇಳಿರಿ; ಮಾಡುತ್ತೇನೆ" ಎಂದು ತಾವಾಗಿಯೇ ನುಡಿದು, ಹೋದರು. 'ಹಾಗೆ ತಾವಾಗಿಯೇ ಮುಂದೆ ಬಂದು ಸಹಾಯಮಾಡುವವರು ಎಷ್ಟು ಮಂದಿ?—ಎಂದು ಸರಳಜೀವಿಯಾದ ದಯಾನಂದ ರಾಯರು ಹರ್ಷತಾಳಿದರು. ಅವರು ಇನ್ನೂ ಅರ್ಧತಾಸು ಕುಳಿತಿದ್ದರೆ "ದಲಿತಾಶ್ರಮಕ್ಕೆ ನಿಮ್ಮ ಬೆಂಬಲ ಬೇಕು" ಎನ್ನುತ್ತಿದ್ದರೋ ಏನೋ. ಆದರೆ ಅವರು ಹೊರಟು ಹೋಗಿದ್ದರು. ಆ ನೆನಪು ಇವರಿಗೂ ಹೋಗಿತ್ತು. ಅಲ್ಲದೆ ನಂದರು ಹೋಗುತ್ತ, ಹೋಗುತ್ತ ಹೇಳಿದ ಮಾತದು. ಥಟ್ಟನೆ ಅಲ್ಲಿಯೇ ಅದುಮಿ ಹಿಡಿಯಲು ಬಂದೀತೇ?

ಈಗ ಡಾ| ನಂದರವರು ವಾರಕ್ಕೊಂದೆರಡು ಬಾರಿಯಾದರೂ ರಾಯರ ಮನೆಗೆ ಬಂದು ಹೋಗುತ್ತಿದ್ದರು. ಅವರ ಮನೆಯವರಿಗೆ, ಇವರದೇ ಧರ್ಮಾರ್ಥ ಚಿಕಿತ್ಸೆ. ಹಿಂದೆ ಶಾಲೆ ಬಿಟ್ಟಾಗ ಇವರು ಅವನನ್ನು ಅಭಿನಂದಿಸಿದ್ದರು. ಈಗ ಅವೇ ಅವರು, ನಂದರ ಔದಾರ್ಯವನ್ನು ಕಂಡು "ಇಲ್ಲ, ನೀವು ಓದನ್ನು ಮುಗಿಸಿ, ಉತ್ತಮ ಕೆಲಸ ಮಾಡಿದಿರಿ. ನಿಮ್ಮ ಆಸ್ಪತ್ರೆಯೆಂಬುದು ನರಳುವ ಮಂಗಳೂರಿನ ಜಗತ್ತಿಗೆ, ಶ್ರೇಷ್ಠ ದಾನ" ಎಂದು ಪ್ರಶಂಸಿಸಿದರು. ಇಂಥ ಎಲ್ಲ ಮಾತುಗಳಿಂದ ನಂದರ ಮನಸ್ಸಿನಲ್ಲಿ, ತಾನು ಕ್ರಮೇಣ ಮಂಗಳೂರಿನ ಜನಜೀವನದಲ್ಲಿ ಮನ್ನಣೆಯ ಸ್ಥಾನ ಪಡೆಯಬೇಕೆಂಬ ಆಕಾಂಕ್ಷೆ ಉದಯಿಸಿತು. ರಾಜಕೀಯ ರಂಗದಲ್ಲಿ ರಾಯರು ಹಳೆಯ ಹುಲಿಗಳಾಗುತ್ತಾ ಬಂದುದು ಎಲ್ಲರಿಗೂ ಗೊತ್ತು. ಚಾತುರ್ಯದಿಂದ ವರ್ತಿಸಿದರೆ—ಅವರದೇ ಸ್ಥಾನ ತಮಗೆ ದೊರೆಯಬಹುದೆಂಬ ಆಶೆ. ಬಂದ ವರ್ಷವೇ ಕಾಂಗ್ರೆಸ್ಸ್ ಚಳವಳಿಯಲ್ಲಿ

ಕೈತೊಡಕಿಸಲು ಅನುಮಾನವಾದರೂ, ಹತ್ತು ಜನರ ಮುಂದೆ ಮೆರೆಯಲು, ನಾಳೆಯಾದರೂ—ಹಾಗೆಮಾಡಬೇಕೆಂದು, ತೋರಿತು.

ನಂದರ ಅದೃಷ್ಟ ಚೆನ್ನಾಗಿತ್ತೋ, ಅಥವಾ ಜನಕ್ಕೆ ಹೊಸ ಒಡವೆಯಲ್ಲಿ ಹೆಚ್ಚಿನ ಮೋಹವೋ! ಆಸ್ಪತ್ರೆಯು ತೆರೆದಂದಿನಿಂದ ಎಲ್ಲರೂ ಅಲ್ಲಿ ನುಗ್ಗತೊಡಗಿದರು. ಕಟ್ಟಡ, ವ್ಯವಸ್ಥೆ, ಚಿಕಿತ್ಸಾ ಸಲಕರಣೆಗಳು, ಪರಿಚಾರಕರು, ಡೌಲು, ಎಲ್ಲವೂ ಜನರನ್ನು ಒಲಿಸಿದುವು. ಅವರ ಸಲಹೆಗಾರ ಮಂಡಲದ ಹಿರಿಯ ವೈದ್ಯರೇ ಅಸೂಯೆಪಡುವಂತೆ, ಕಾಯಿಲೆಯವರೆಲ್ಲರೂ ಅಲ್ಲಿಗೇ ಹೋಗತೊಡಗಿದರು. ಕೆಲವೇ ದಿವಸಗಳಲ್ಲಿ ಒಬ್ಬಿಬ್ಬರು ಸಲಹೆಗಾರರು "ನೀವು ನಮ್ಮ ಹೆಸರನ್ನು ದುರುಪಯೋಗಮಾಡಿ, ನಮ್ಮ ಕುಳುವಾರುಗಳನ್ನು ತಪ್ಪಿಸುತ್ತಿದ್ದೀರಿ" ಎಂದು ಪತ್ರ ಬರೆಯುವಂತಾಯಿತು. ನಂದರು ಅಂಥದು ಏನನ್ನೂ ಮಾಡಿರಲಿಲ್ಲ. ಹೆಸರನ್ನು ಬಳಸಿದ ಬಳಿಕ, ಅವರೂ ಇದರ ಬೆಂಗಡೆಯಲ್ಲಿ ಇದ್ದಾರೆ—ಎಂಬ ಸಾಮಾನ್ಯ ಅರ್ಥವು ಜನತೆಗೆ ತನ್ನಂತೆಯೇ ತೋರಿತು. ರೋಗಿಗಳ ಆಧಿಕ್ಯದಿಂದಾಗಿ ಡಾ| ನಂದರವರು ಬಿಡುವಿಲ್ಲದಷ್ಟು ದುಡಿಯಬೇಕಾಯಿತು. ತಮಗೆ ವಿರಾಮ ದೊರಕಿಸಿಕೊಳ್ಳುವುದರ ಸಲುವಾಗಿ, ಕೆಲವೊಂದು ದಿವಸಗಳಲ್ಲಿ ಇಬ್ಬರು ವೈದ್ಯಕೀಯ ಸಹಾಯಕರನ್ನು, ಜತೆಗೆ ನೇಮಿಸಿಕೊಳ್ಳಬೇಕಾಯಿತು. ಅನುಭವವಿದ್ದರೂ, ಅದೃಷ್ಟವಿಲ್ಲದೆ ಜೀವನಕ್ಕೆ ಕಷ್ಟಪಡುತ್ತಿದ್ದ, ಡಾ| ನಾರಾಯಣರಾಯರು, ವೈದ್ಯಕೀಯ ವಿದ್ಯೆಯನ್ನು ಮುಗಿಸಿ ಸ್ವಂತ ಹಣವಿಲ್ಲದೆ ಆಸ್ಪತ್ರೆ ತೆರೆಯಲು ಒದ್ದಾಡುತ್ತಿದ್ದ, ಡಾ| ನಾಗರಕಟ್ಟೆ ಎಂಬಿಬ್ಬರು ಅವರೊಡನೆ ಸೇರಿಕೊಂಡರು. ಅವರ ಬೆಂಬಲದಿಂದ, ರಾತ್ರಿ ಹಗಲೂ ತೆರೆದಿರುವ (Day & night) ಆಸ್ಪತ್ರೆಯಾಯಿತು ನಂದರದ್ದು.

ಅಷ್ಟೆಲ್ಲ ಕೆಲಸ, ಕೀರ್ತಿಗಳನ್ನು ಅಷ್ಟು ಶೀಘ್ರದಲ್ಲಿ ಸಾಧಿಸಿಕೊಂಡು ಮೇಲೆ ಬಂದ ನಂದರಿಗೆ, ಇನ್ನೂ ಒದ್ದಾಟದಲ್ಲಿಯೇ ಇರಬಹುದಾದ, ರಾಧಾಕೃಷ್ಣನನ್ನು ಆ ದಿನ ಕಂಡು, ಅಷ್ಟೊಂದು ಉತ್ಸಾಹ ಆಯಿತು ಎನ್ನಲಾರೆ. ಉಡುಪಿಯಲ್ಲಿ ತೋರಿಸಿದ ಆದರದ ಅರೆವಾಸಿಯನ್ನೂ ವ್ಯಕ್ತ ಮಾಡಲಿಲ್ಲ. ಆತ ಹೋದ ಬಳಿಕ, ಅವನ ನೆನಪೂ ಅಡಗಿರಬೇಕು. ಅವನ ವಿಚಾರದಲ್ಲಿ "ಕೆಲಸಕ್ಕೆ ಬಾರದ ಕನಸುಗಾರ" ಎಂದು ತರ್ಕಮಾ

ಡಿರಬೇಕು. ಅವರಿಂದ ಸಹಾಯದ ಆಸೆಯನ್ನು ಹೊತ್ತವನು ರಾಧಾಕೃಷ್ಣ ಮಾತ್ರ. ಅವನು ದಿನದಿನವೂ ಸದಾನಂದನನ್ನೇ ನೆನೆಯುತ್ತಿದ್ದ.

* * * *

ಆ ರಾತ್ರಿ ಸ್ಮರಣೀಯವಾಗಿತ್ತು. ಅಸಾಧ್ಯ ಮಳೆ ಬಡಿಯುತ್ತಲೇ ಇತ್ತು. ಗಾಳಿಯ ಅಬ್ಬರ ಹೇಳಲಾರದಷ್ಟು ಇತ್ತು. ಚಳಿಗೆ ಹೆರುಕು ಚಾಪೆ ಚಿಂದಿಗಳ ಎಡೆಯಿಂದ, ಶಾಲೆಯ ಕೂಸುಗಳು "ಉ ಹೂಂ, ಉ ಹೂಂ" ಎಂದು ರಾಗಾಲಾಪ ಮಾಡುತ್ತಿದ್ದುವು. ಮಗ್ಗುಲ ಕೋಣೆಯಲ್ಲಿ ಮಲಗಿಕೊಂಡ ರಾಧಾಕೃಷ್ಣನು ಅದನ್ನು ಕೇಳುತ್ತ–"ಪಾಪ, ಈ ಹರುಕು ಗೋಣಿ, ಚಾಪೆಗಳಲ್ಲಿ ಇವು ಹೇಗೆ ಮಳೆಗಾಲ ಕಳೆದಾವು? ಮುಂದಿನ ಆದಿತ್ಯವಾರ ಸದಾನಂದನನ್ನು ಕಂಡು ಬರುತ್ತೇನೆ. ಅವನಿಗೇನು ದಾಡಿ? ಮಕ್ಕಳಿಗೆ ಇಷ್ಟು ಅರಿವೆಯನ್ನಾದರೂ ಕೊಡಿಸಲಾರನೇ?" ಎಂದು ನೆನೆದನು. ಆ ದಿನ ಆತ ತುಂಬ ಸಂಚಾರಮಾಡಿ ಬಂದಿದ್ದನು. ಆಯಾಸವೂ ಆಗಿತ್ತು. ಹೊರಗೆ ಮಳೆಯ ಜಿರಿಜಿರಿ ನಡೆದಿತ್ತು. ಮೈಯನ್ನು ಮುದುರಿ ಮಲಗಿದ್ದನು. ಬೆಳಗಾದರೂ, ಬೆಳಕಾಗಲಿಲ್ಲ. ಸತ್ಯ ಬೇಗನೆ ಏಳುವ ಪರಿಪಾಠದವಳು. ಎದ್ದು ಮುಸುರೆಯನ್ನು, ಹೊರಗಿರಿಸುವೆನೆಂದು ಬಂದಿದ್ದಳು. ಹೊರಗಿನ ಗಾಳಿ ಮಳೆಗೆ, ಏನೂ ಕಾಣಿಸಲಿಲ್ಲ. ಅಂಗಳಕ್ಕೆ ಕಾಲಿಡುವುದಾಗಲಿಲ್ಲ. ಒಳಕ್ಕೆ ಹೋಗಿ ಗುಡಿಸಲ ತಟ್ಟಿಯನ್ನು ಬಿಗಿದು ಮಲಗಿಕೊಂಡಳು. ಗಂಡ ಹೆಂಡಿರಿಬ್ಬರೂ ಎಚ್ಚರಗೊಳ್ಳುವಾಗ, ಆಶ್ರಮದ ಬಾಲಕರು ಇನ್ನೂ ಮಲಗಿಯೇ ಇದ್ದರು. ಚಳಿಯಿಂದ, ಪಾಪ, ಒಬ್ಬರಿಗೊಬ್ಬರು ಅಂಟಿಕೊಂಡು, ಮುದ್ದೆಯಾಗಿದ್ದರು. ರಾಧಾಕೃಷ್ಣನು ಹೊರಗೆ ಬಂದನು. ಮಳೆಯ ಅಬ್ಬರವು ಒಂದೇ ಸವನೆ ಸಾಗಿತ್ತು. ಗಾಳಿಗೆ ಏನೂ ತಡೆಯುವಂತಿರಲಿಲ್ಲ.

ಆದರೂ ಒಂದು ಓಲೆಯ ಕೊಡೆಯನ್ನು ಹಿಡಿದುಕೊಂಡು ಹೊರಕ್ಕೆ ಬಂದನು. ತರಕಾರಿ, ಚಪ್ಪರಗಳೇನಾದುವು— ಹಟ್ಟಿಯ ಮಾಡೇನಾಯಿತು—ಶಾಲೆಯ ಮಾಡಿನ ಚಾವಣಿ ಉಳಿದಿದೆಯೋ— ಎಂದು ನೋಡ ಹೋದನು. ಗಾಳಿಯು ಅವನನ್ನೇ ಹಾರಿಸಿಬಿಡುವಂತಿತ್ತು. ಹಟ್ಟಿಯ ಮಾಡು ಬರಿದಾಗಿತ್ತು. ಹುಲ್ಲು ನಾಲ್ಕು ದಿಕ್ಕಿಗೂ ಹಾರಿ ಹೋಯ್ತಿತ್ತು.

ಹೊಸದಾಗಿ ತಂದ ಎಮ್ಮೆಯೂ ಹೂಡುವ ಕೋಣಗಳೂ, ಮಳೆ ನೀರಿಗೆ ಅಭಿಷೇಕ ಹೊಂದುತ್ತಿದ್ದುವು. ‘ಅಂಥ ಮಾಡೇ ಹಾಗಾದರೆ ತರಕಾರಿ ಚಪ್ಪರ, ಮೆಣಸಿನ ಸಾಲುಗಳ ಅವಸ್ಥೆಯೇನೆ’ಂದು ನೋಡಲು ಧಾವಿಸಿದನು. ಅವನಿಗೂ ಒಂದು ಚೆನ್ನಾದ ಸ್ನಾನವಾಯಿತು. ಮೂರು ತಿಂಗಳ ಕಾಲ ದುಡಿದು, ಬೆಳೆಯಿಸಿದ ಗಿಡಗಳೆಲ್ಲ ನೆಲ ಹಿಡಿದಿದ್ದುವು. ಹೊಲ ಗದ್ದೆಗಳಲ್ಲಂತೂ ನೀರು ಕೋಡಿ ಹರಿಯುತ್ತಿತ್ತು. ಇನ್ನು—ಶಾಲೆಯ ಮಾಡನ್ನು ನೋಡುವಾ—ಎಂದು ಹೋದನು. ಅದು ತುಸು ಎತ್ತರದಲ್ಲಿದ್ದುದರಿಂದ ಆ ಹೊಸ ಕಟ್ಟಡ, ಗಾಳಿಗೆ ಹಾರಿಯೇ ಹೋಗಿದ್ದರೂ ಆಶ್ಚರ್ಯವಾಗುತ್ತಿರಲಿಲ್ಲ. ಆದರೆ ಕಟ್ಟಡದ ಎದುರಿಗೆ ಕೆಲವು ದೊಡ್ಡ ಮರಗಳಿದ್ದುದರಿಂದ ಗಾಳಿಯ ಬಿರುಸು ತಡೆದಿತ್ತು. ‘ಶಾಲೆ’ ಉಳಿದಿದೆ ಎಂದು ಸಂತೋಷಗೊಂಡು ತಿರುಗಿ ಹೊರಟನು.

ಅಷ್ಟರಲ್ಲಿ ಬಿರುಮ ಮರಕಾಲನ ನೆನಪಾಯಿತು. ಮನೆಮುಂದಿನ ಹೊಲಗಳನ್ನು ದಾಟಿ, ಅಲ್ಲಿದ್ದ ಹಳ್ಳವನ್ನು ಸೇತುವೆಯಿಂದ ದಾಟಿ ಅಲ್ಲಿಗೆ ಹೋಗಬೇಕು. ಆದರೆ ಅಂದು ಆ ತೋಡಿನ ಬಳಿಗೆ ಹೋಗುವಂತೆಯೇ ಇದ್ದಿರಲಿಲ್ಲ. ಎಲ್ಲೆಲ್ಲೂ ನೆರೆಯ ನೀರು ತುಂಬಿತ್ತು. ತೋಡು ದಾಟಲು ಹಾಕಿದ್ದ ಸೇತುವೆಯ ಮರ ತೇಲಿಹೋಗಿತ್ತು. ದೂರದಿಂದಲೇ “ಮರಕಾಲ, ಮರಕಾಲಾ”—ಎಂದು ಒದರಿದನು. ಮರಕಾಲನಿಂದ ಮರುಧ್ವನಿ ಬರಲಿಲ್ಲ. ಗಾಳಿ ಮಳೆಗಳ ಬಿರುಸಿಗೆ ಯಾರ ಸ್ವರ, ಯಾರಿಗೂ ಕೇಳಿಸುವುದು ಶಕ್ಯವಿರಲಿಲ್ಲ. ಗಾಬರಿಯಾಯಿತು. ಹಿಂದಕ್ಕೆ ಬಂದು, ಪದವು ಗುಡ್ಡವನ್ನೇರಿ, ಬಳಸು ದಾರಿಯಿಂದ, ಮರಕಾಲನ ಕುಟೀರದ ಬೆಂಗಡೆಗೆ ಹೋಗಿ ಇಳಿದನು. ಮರಕಾಲನ ಮನೆಯೇನೋ ಅಖಂಡವಾಗಿ ನಿಂತಿತ್ತು. ಆತ ಕಂಬಳಿ ಹೊದ್ದು ಜಗುಲಿಯ ಮೇಲೆ ಕುಳಿತು, ಹೊಗೆಸೊಪ್ಪು ಜಗಿಯುತ್ತಿದ್ದ. ರಾಧಾಕೃಷ್ಣ “ಬಚಾವು—ನೀನು ಬದುಕಿದ್ದೀಯೋ ಏನೆಂದು ನೋಡಲಿಕ್ಕೆ ಬಂದೆ” ಎಂದು ನಗುತ್ತ ನುಡಿದನು. “ಮರಕಾಲ, ನಮ್ಮ ಹಟ್ಟಿಯ ಮಾಡು ಮಾತ್ರ, ದಶ ದಿಕ್ಕುಗಳಿಗೆ ಸೇರಿಬಿಟ್ಟಿದೆ. ಗೋಡೆ ಉಳಿದರೆ ಅಷ್ಟೇ ಸಾಕು. ಕೋಣ, ಎಮ್ಮೆ, ಅಲ್ಲೇ ಇದ್ದರೆ ತೊಂದರೆಯಾಗಲಿಕ್ಕಿಲ್ಲವೇ? ಕಟ್ಟಲು ಬೇರೆ ಸ್ಥಳವಿಲ್ಲ. ಕಟ್ಟಿದರೆ ಶಾಲೆಗೆ ತಂದು ಕಟ್ಟಬೇಕು—” ಎಂದನು. “ಅವಕ್ಕೇನು ಧಾಡಿ-ಮಾಸ್ತರರೇ? ಕೋಣಕ್ಕೆ ಶೀತ

ಆಗಲಿಕ್ಕೆ ಉಂಟೇ"? ಎಂದು ಆ ಸೋಮಾರಿಗಳ ದೊರೆ ಉತ್ತರವಿತ್ತನು.

ಮುಂದೆ—ಬಾಯಿಂದ ತಂಬುಲವನ್ನು ತುಪ್ಪಿ, ಅಸ್ಪಷ್ಟವಾಣಿಯಿಂದ "ನಾನು ತೋಡಿನ ವರೆಗೆ ಹೋಗಿ ಬಂದೆ, ತುಂಬ ನೀರು ಬಂದಿತ್ತು. ಈ ತನಕ ಇಷ್ಟು ನೀರು ಎಂದೂ ಏರಿದ್ದಿಲ್ಲ. ಈ ಮಳೆಗೆ ನೋಡಿ ನೀವು, ಮಧ್ಯಾಹ್ನವಾಗುವುದರೊಳಗೆ ಊರಿಂದ ಊರೇ ತೇಲಿ ಹೋಗುತ್ತದೆ" ಎಂದು ನುಡಿದನು.

"ಮರಕಾಲ, ನಾನು ಅವಸರದಲ್ಲಿ ಏನನ್ನೂ ನೋಡಲಿಲ್ಲ. ಪದೆ ವಿನ ಮೇಲೆ ಹೋಗಿ ನೋಡುವ. ಹೊಳೆಯ ನೀರಿನ ಏರಾಟ ಅಲ್ಲಿಂದ ಕಂಡೀತು" ಎಂದನು ರಾಧಾಕೃಷ್ಣ.

"ಅದಕ್ಕೆಲ್ಲ ಅಷ್ಟೆಲ್ಲ ದೂರ ಹೋಗುವುದೇಕೆ? ಈ ನೀರು, ಮಳೆ, ಗಾಳಿ ಕಂಡೇನೆ ಅಂದಾಜು ಮಾಡಲು ಬರುವುದಿಲ್ಲವೆ?" ಎಂದು ಉತ್ತರ ಬಂದಿತು.

"ಪುಣ್ಯಾತ್ಮ—ನೀನು. ಇಲ್ಲಿಯೇ ಬಿದ್ದಿರುವುದಲ್ಲ. ತೊಂಡೆಯ ಚಪ್ಪರ ನೆಲಸಮವಾಗಿದೆ. ಹೋಗಿ ಏನಾದರೂ ಮಾಡಬೇಡವೆ?"

"ಅಯ್ಯೋ, ನಿಮಗೆ ಮರಳು! ಈ ಗಾಳಿಗೆ ಅದನ್ನು ಸಮಮಾಡಿ ದರೂ, ಇನ್ನು ಅರ್ಧ ಗಳಿಗೆಯಲ್ಲಿ ತಿರುಗಿ ಬೀಳುವುದಿಲ್ಲವೇ? ಮಳೆ ಸಮ ನಾಗಿ ಬಿಟ್ಟ ಮೇಲೆ ನೋಡುವ."

"ನಿನಗೆ ಆಲಸ್ಯ."

"ಆಲಸ್ಯವಲ್ಲ, ಮಣ್ಣಲ್ಲ. ಇದು ಅಮವಾಸ್ಯೆಯ ಸಂದು. ಈ ಮಳೆ ಇನ್ನೆರಡು ದಿವಸ ಬಿಡುವಂತಿಲ್ಲ. ನೆರೆ ನೀರಿನ ಜತೆಗೆ ಗಾಳಿಯ ಅಬ್ಬರವೂ ಸೇರಿದರೆ ನಮ್ಮ ಬೈಲಿನವರ ಗತಿ ಮೋಕ್ಷವೇ ಸರಿ"

"ನಿನ್ನ ಬಾಯಿತುಂಬ ಅಮಂಗಲವೇ. ನಿನಗೆ ಕೆಳಬೈಲಿನವರ ಮೇಲೆ ಅಷ್ಟೇಕೆ ಸಿಟ್ಟು"?

"ಅವರನ್ನು ಹೊಳೆಗೆ ಹಾಕಬೇಕು. ಅವರಲ್ಲವೇ-ಧನಿಗಳಿಗೆ ಚಾಡಿ ಹೇಳಿ ನನ್ನನ್ನು ಭೂಮಿಯಿಂದ ತಪ್ಪಿಸಿದ್ದು."

"ಹೋ, ಇದು ನಾನು ಇಲ್ಲಿಗೆ ಬಂದುದರ ಸಿಟ್ಟೇ? ಮರಕಾಲ, ಈಗ ನಾವು ಇಲ್ಲಿಗೆ ಬಂದಿರಲಿಲ್ಲವೆಂದೇ ತಿಳಿದು ಕೋ-ನಿನ್ನ ಹೆಂಡತಿ, ಮಕ್ಕಳೇ ನಿನ್ನನ್ನು ಬಿಟ್ಟು ಓಡಿ ಹೋದಮೇಲೆ, ನೀನು ಬೇಸಾಯಮಾಡುವು

ದಾದರೂ ಸಾಧ್ಯವಿತ್ತೇ? ಅಲ್ಲದೆ ವರ್ಷವರ್ಷವೂ, ಗೇಣಿಯನ್ನು ತಿಂದು ಹಾಕಿದರೆ, ಅವರು ಗದ್ದೆಗಳನ್ನು ನಿನಗೆ ಕೊಡುವುದಾದರೂ ಸಾಧ್ಯವೇ"?

"ಅವಳ ಕಿವಿಯನ್ನು ತಿರುಪಿದವರು ಅವರೇ ಎಲ್ಲ—ಆ ಕೆಳಬೈಲು. ರಾಮಣ್ಣ—ಅವನಲ್ಲ, ಅವನ ಅಪ್ಪ–ಅವನೊಬ್ಬ ಅಡಿಯಾರೆದು ಹೋದರೆ, ಚೆನ್ನಾಗುತಿತ್ತು."

"ನೀನು ಕುಡಿದು, ಬಡಿದು, ಹೆಂಡತಿಯನ್ನು ಓಡಿಸಿದರೆ—ಅದರ ಪಾಪ ಅವರ ತಲೆಯ ಮೇಲೆಯೇ."

"ನಾನು ಕುಡಿದು ಬಡಿದೆನೆಂದು ನಿಮಗೆ ಹೇಳಿದವರು ಯಾರು? ನಿಮ್ಮ ಕಿವಿಯನ್ನು ಚುಚ್ಚಿದವನೂ ಅವನೇ. ನಾನೇನು ಸಣ್ಣ ಮಗುವಲ್ಲ. ನನಗೆ ಎಲ್ಲವೂ ತಿಳಿಯುತ್ತದೆ. ಆದರೆ ನುಂಗಿಕೊಂಡಿದ್ದೇನೆ."

ರಾಧಾಕೃಷ್ಣನಿಗೆ—'ಈ ಮರಕಾಲನ ಹತ್ತಿರ ಯಾಕೆ ಮಾತನಾಡಲು ನಿಂತೆನೋ' ಎಂದೆನಿಸಿ ಮರಳಿದನು. ಮರಳುವಾಗಲೊಮ್ಮೆ, ಪದವನ್ನೇರಿ, ಹೊಳೆಯನ್ನು ಕಾಣಬೇಕು ಎಂದು ಎನಿಸಿತು. ಆದರೆ ಹೊಳವಾಗದೆ—ಅಲ್ಲಿಗೆ ಹೋದರೂ, ಏನೂ ಕಾಣಿಸುವಂತಿರಲಿಲ್ಲ. ಅಲ್ಲದೆ, ತಾನು ಉಟ್ಟ ಅರಿವೆಗಳು ತೊಯ್ದು ಹೋಗಿದ್ದುವು. ಅದರಲ್ಲೇ ಇದ್ದರೆ ಶೀತವಾದೀತು ಎಂದು, ಗುಡ್ಡದ ದಾರಿಯನ್ನು ಸುತ್ತಿ ಮನೆಗೆ ಬಂದನು. ಬಂದು, ಮೊದಲು ಕೋಣ, ಎಮ್ಮೆಗಳನ್ನು ಸ್ಥಳ ತಪ್ಪಿಸಿ, ಶಾಲೆಯ ಚಾವಡಿಯಲ್ಲಿ ಕಟ್ಟಿದನು. ಹಟ್ಟಿ ಕುಸಿದು ಬಿದ್ದು ಅವಕ್ಕೆ ಸಾವು, ನೋವು ಉಂಟಾಗಬಾರದಲ್ಲ? ಮನೆಗೆ ಬಂದು, ಮಕ್ಕಳನ್ನು ಕರೆದು "ಇವತ್ತು ಬೆಳಗಾಗಿ ಜಾವ ಹೊತ್ತಾದರೂ ಬೆಳಕಿನ ಚೂರಿಲ್ಲ. ನೀವು ಮನೆಯೊಳಕ್ಕೇನೆ ಕುಳಿತಿರಿ. ಹೊರಕ್ಕೆ ಹೋಗಿ ಶೀತ, ನೆಗಡಿ ಹಿಡಿಸಿಕೊಳ್ಳಬೇಡಿ" ಎಂದು ಹೇಳಿದನು.

ಗಳಿಗೆ, ಗಳಿಗೆ ಕಾದರೂ ಮಳೆಗೆ ವಿರಾಮವಿಲ್ಲ. ತಾಸು ಅರೆತಾಸಿಗೆ ಒಮ್ಮೆ, ಸುಂಟರ ಗಾಳಿಗಳೆದ್ದು, ಊರನ್ನೇ ಕಿತ್ತು ಬಿಡುತ್ತೇವೆ ಎಂದು, ಗಹಗಹಿಸಿ ನಕ್ಕು ಉರುಳಿ ಹೋಗುತ್ತಿದ್ದುವು. ಸಂಜೆ ತುಸುವೇ ಹೊಳವಾಯಿತು. ಆತ "ಸತ್ಯ, ನನಗೇಕೋ ಹೆದರಿಕೆಯಾಗುತ್ತಿದೆ. ಪದವನ್ನೇರಿ ಸುತ್ತು ನೋಡಿ ಬರುತ್ತೇನೆ. ಈ ಮಳೆಯನ್ನು ನೋಡಿದರೆ ಅನರ್ಥವೇ ಸಂಭವಿಸುವಂತೆ ಕಾಣುತ್ತದೆ" ಎಂದ.

"ಹೊಂ-ಮೂರು, ನಾಲ್ಕು ಸಾರಿ ಆಯಿತು. ನೀವು ಇವತ್ತು ಮಳೆಯಲ್ಲಿ ಸ್ನಾನ ಮಾಡಿ ಬಂದದ್ದು" ಎಂದಳು ಅವಳು.

"ಈಗ ಮಳೆ ಬಿಟ್ಟದ್ದಕ್ಕೆ ಹೇಳಿದೆ"—ಹೀಗೆಂದು ತಡೆಯಲಾರದ ಆತುರದಿಂದ ಹೊರಟು, ಪದವನ್ನೇರಿದನು. ಅಲ್ಲಿಂದ ತೆಂಕಣ ದಿಕ್ಕನ್ನು ನೋಡಿದರೆ, ನೇತ್ರಾವತಿಯ ಹೊಳೆಯು ಕಡಲಿನಂತಾಗಿತ್ತು. ಕೆಳಗಿನ ಕಣಿವೆ, ಬಯಲುಗಳು ಸಂಪೂರ್ಣ ಮುಳುಗಿದ್ದುವು. ಊರಿನ ದಾರಿಗಳೆಲ್ಲವು ನೀರಿನ ಪಾಲಾಗಿದ್ದುವು. ಹಾಗೆಯೇ ಮೂಡುದಿಕ್ಕಿಗೆ ನಡೆದು, ಅರ್ಧ ಮೈಲು ದೂರ ಹೋದನು. ಅಲ್ಲಿಂದಲೂ ಅದೇ ಭೀಕರ ನೋಟ ಕಾಣಿಸಿತು. ಅಲ್ಲಿಂದ ಇಳಿದು ಕೆಳಬೈಲಿಗೆ ಇಳಿದು ನೋಡುವ ಎಂದು ಯೋಚಿಸುವಷ್ಟರಲ್ಲಿ, ಪಡುವಣ ಬಾನನ್ನು ಬೃಹದಾಕಾರದ ಕಾರ್ಮುಗಿಲು ಕವಿಯುತ್ತ ಬಂದಿತು. ಮುಗಿಲ ಬೆಂಗಡೆಗೆ ಗಾಳಿಯ ಸುಳಿವು ತಲೆದೋರಿತು. ಆ ಗಾಳಿಗೆ ಸಿಕ್ಕಿಕೊಂಡರೆ, ಮನೆಗೆ ಬರುವ ದಾರಿಯೂ ಕಾಣಿಸದೆಂದು ಓಟ ಕಿತ್ತನು. ಅರ್ಧದಾರಿ ಬರುವುದರೊಳಗಾಗಿ, ಮಳೆ ಬಡಿಯಿತು. ಮನೆಯನ್ನು ಸೇರುವಾಗ, ಕೈಯಲ್ಲಿ ಹಿಡಿದ ಓಲೆ ಕೊಡೆಯ ತುಮುರು ಮಾತ್ರ ಉಳಿದಿತ್ತು.

"ಹೌದು—ಹೇಳಿದರೆ ಕೇಳುತ್ತೀರಾ ನೀವು, ತಿರುಗಿಯೂ ನೆನೆದೇ ಬಂದಿರಿ. ಇದ್ದ ಮೂರು ಅರಿವೆಗಳನ್ನು ಒದ್ದೆ ಮಾಡಿಕೊಂಡಿದ್ದೀರಿ. ನಿಮ್ಮ ದೇವರ ಖಾದಿ, ಬಿಸಿಲು ಇದ್ದಾಗ ಒಣಗುವುದಕ್ಕೇನೆ ಒಂದು ದಿವಸ ಬೇಕು. ಮಳೆಗಾಲವೆಲ್ಲ, ಮುಗ್ಗಲು ಅರಿವೆಯನ್ನು ಉಟ್ಟು ನನಗಂತು ಬೇಸರ ಬಂತು. ಇವತ್ತು ನೀವು ಎಲ್ಲವನ್ನೂ ತೊಯಿಸಿಕೊಂಡಿದ್ದೀರಿ. ಇನ್ನು ಏನನ್ನು ಉಟ್ಟುಕೊಳ್ಳುತ್ತೀರಿ"? ಎಂದಳು ಸತ್ಯ.

"ಏನಾದರೂ ಉಟ್ಟರಾಯಿತು. ಕಂಬಳಿ ಸುತ್ತಿ ಕೊಂಡರಾಯಿತು. ಈ ಬಟ್ಟೆಯನ್ನು ಮುರಿ, ಮುರಿ ಹಿಂಡಿ, ಒಲೆಯ ಹಿಂದೆ ಕಟ್ಟುತ್ತೇನೆ" ಎಂದು ಅಷ್ಟು ಕೆಲಸಮಾಡಿ, ಕಂಬಳಿ ವೇಷವನ್ನು ತಾಳಿದನು.

ಆ ವೇಷವನ್ನು ಕಂಡು ಆಕೆಗೆ ನಗು ಬಂದಿತು. "ನೆನಪಿದೆಯೇ, ಹಿಂದೊಮ್ಮೆ ನೀವು ಹೀಗೆಯೇ ವೇಷಮಾಡಿದ್ದು?" ಎಂದಳು.

ಆತನಿಗೂ ನಗುವು ಬಂದಿತು. "ಹೊಂ............ಚೇಷ್ಟೆ ಮಾಡುತ್ತೀಯಾ? ಆಗ ಹಾಗೆ ಮಾಡಿದುದರಿಂದ—'ಸತ್ಯಮೇವ ಜಯತೆ!" ಎಂದನು.

ಸತ್ಯಳಿಗೆ ಹೊಟ್ಟೆ ತುಂಬ ನಗು ಬಂದಿತು. "ಹೌದು, ಸತ್ಯಳನ್ನು ಏವಂಚ ನೀವು ಜಯಿಸಿದಿರಿ. ಸತ್ಯ ಮಾತ್ರ ನಿಮ್ಮ ಕೈಯಲ್ಲಿ ಸೋತಳು."

ಆ ದಿನ ಮಧ್ಯಾಹ್ನ ಊಟಕ್ಕೆ ಬಂದ ಮರಕಾಲನು, ಸಂಜೆ ಊಟದ ತನಕವೂ ಅಲ್ಲಿಯೇ ಇದ್ದನು. ಮನೆಯಲ್ಲಿ ಗಾಳಿಗೆ ಒಂದು ಮಿಣುಕು ದೀಪವನ್ನು ಉರಿಸುವುದೂ ಕಷ್ಟವಾಗಿತ್ತು. ರಾಧಾಕೃಷ್ಣನ ಧ್ಯಾನವೆಲ್ಲ ಮಳೆಯ ಕಡೆಗೇನೆ. ಕತ್ತಲಾಯಿತು. "ಈ ಹೆರಕುಬಾಯ ಮರಕಾಲ ಅಂದ ಹಾಗೆ ಆದರೇನು ಗತಿ?"—ಎಂದುಕೊಂಡೇ ಆತ ಮಲಗಿದನು, ನಿದ್ರೆಗೆ ಪೀಠಿಕೆಯಾಗಿ, ಯಾವಾವ ಊರುಗಳ ನೆರೆಯ ಕತೆಯನ್ನು ಹೇಳಿ ಹೊತ್ತು ಕಳೆದನು.



# ಏಳನೆಯ ಅಧ್ಯಾಯ

ಬೆಳಕು ಹರಿಯುವಾಗ, ಮಳೆಯು ಅಷ್ಟೊಂದು ಬಿರುಸಾಗಿ ಇದ್ದಿರಲಿಲ್ಲ. ಹಾಗೆಂದು ಅಂಗಳಕ್ಕೆ ಬಂದು ನೋಡಿದರೆ ಹೊಲಗದ್ದೆಗಳಲ್ಲಿ ನೀರು ಬಹಳವಾಗಿ ಏರಿತ್ತು. ಆಗ ರಾಧಾಕೃಷ್ಣನಿಗೆ-ಊರಿಗೆ ಬಂದ ವಿಪತ್ತು ಸ್ಪಷ್ಟವಾಯಿತು. "ಸತ್ಯ, ನೆರೆ ನೀರು ಇನ್ನೂ ಏರುವಂತೆಯೇ ಕಾಣುತ್ತದೆ. ಇದ್ದ ನಾಲ್ಕು ಅರಿವೆಗಳನ್ನು ಕಟ್ಟಿಕೊಂಡು, ಯಾವಾಗ ಬೇಕಾದರೂ, ಆವಾಗ ನಾವು ಸಹ ಹೊರಡಬೇಕಾದೀತು.'' ಎಂದು ತಿರುಗಿ ಪದವನ್ನು ಏರಿದನು. ಜತೆಗೆ ಮರಕಾಲನೂ ಹೋದನು. ಆತನಿಗೂ ನೆರೆಯ ಭೀತಿ ನಾಟಿತ್ತು. ಅಲ್ಲಿ ಹೋಗಿ ನೋಡಿದರೆ, ಪ್ರಳಯದ ವಿಶ್ವರೂಪವೇ ಕಾಣಿಸುತ್ತಿತ್ತು. ನದಿಯು ಕೊಬ್ಬಿ, ಅವರಿದ್ದ ಗುಡ್ಡದ ಸಾಲನ್ನು ತಬ್ಬಿತ್ತು. ಕೆಳ ಬೈಲಿನಲ್ಲಿ ಯಾವೊಂದು ಮನೆ ಮಠಗಳೂ ಕಾಣಿಸುತ್ತಿರಲಿಲ್ಲ. ಕೆಲವೊಂದು ಮರದ ಕುಡಿಗಳೂ, ಅವಕ್ಕೆ ತೇಲಿ ಅಂಟಿಕೊಂಡಿದ್ದ ದೋಣಿಗಳೂ ಕಾಣಿಸಿದುವು. ಆ ಮಳೆಯ ಜಿನುಗಿನಲ್ಲಿ, ದೋಣಿಯಲ್ಲೇ ನಿತ್ತು ಎಂಬುದೂ ಸ್ಪಷ್ಟವಾಗುತ್ತಿರಲಿಲ್ಲ. ದೂರದಲ್ಲಿ ನೀರಿನ ಒಯ್ಲು, ನೂರಾರು—ಮರ, ಮಾಡು, ಜಾನುವಾರಗಳನ್ನು ತೇಲಿಸಿ, ಸಾಗುತ್ತಿದ್ದ ಭೀಕರ ನೋಟವೂ ಕಾಣಿಸುತ್ತಿತ್ತು. ಅಲ್ಲಿಂದ ತುಸು ಮೂಡಣಕ್ಕೆ ಹೋದನು. ಗುಡ್ಡದ ಅಂಚಿನಲ್ಲಿ ನೆರೆಯಿಂದ ಪಾರಾಗಿ ಬಂದಿದ್ದ ಜನರು, ನೆನೆದು ತಪಿಸುತ್ತಿದ್ದ ನೋಟ ಕಾಣಸಿಕ್ಕಿತು. ರಾತ್ರಿಯಿಂದಲೂ ಅಲ್ಲಿಯೇ ಕುಳಿತುಕೊಂಡು, ಮನೆಯನ್ನು ಬಿಡಲಾರದೆ, ದೋಣಿಯಲ್ಲಿ ಕುಳಿತೋ, ಮಾಡಿನ ಮೇಲೆ ಕುಳಿತೊ, ಸೆರೆಯಾಗಿದ್ದ ಬಂಧುಗಳನ್ನು ನೆನೆಯುತ್ತ ಒಬ್ಬರಲ್ಲ-ಹಲವಾರು ಜನರು ಅಲ್ಲಿ ಕಾತರಗೊಂಡು ಯೋಚಿಸುತ್ತಿದ್ದರು. ಹಣದ ಪೆಟ್ಟಿಗೆಯನ್ನು ಬಿಟ್ಟು ಬರಲು ಕೆಲವರಿಗೆ ಅಂಜಿಕೆ. ಅಟ್ಟದಲ್ಲಿ ಇರಿಸಿದ ಅಕ್ಕಿಯನ್ನು ಬಿಟ್ಟು ಬರಲು ಅಂಜಿಕೆ ಕೆಲವರಿಗೆ. ಅಂಥವರು ನೀರು ಏರುತ್ತಲೇ ಜಗುಲಿಯಿಂದ ಮಹಡಿಯನ್ನೇರಿದರು. ಮಹಡಿಯಿಂದ ಮನೆ ಮಾಡನ್ನೇರಿದರು. ಮಾಡಿಂದ ಮರವನ್ನೇರಿದರು. ಈಗ ಅವರು ಅಲ್ಲಿಂದ ಪಾರಾಗುವುದೇ ಕಷ್ಟವಾಗಿದೆ. ರಾತ್ರಿಗೆ ಮುಂಚೆ ಬಂದವರು

ಮಾತ್ರ ಪಾರಾದರು. ಅದನ್ನೆಲ್ಲ ಕಂಡು ರಾಧಾಕೃಷ್ಣನ ಎದೆ ದಡಬಡಿಸಿತು. ಅವನ ಮನಸ್ಸು ಕಂಗಾಲಾಯಿತು. ಸ್ವರದಲ್ಲಿ ನಡುಕು ಹುಟ್ಟಿತು. ಹೊಟ್ಟೆಯ ಕೂಸುಗಳನ್ನು ಕಟ್ಟಿಕೊಂಡು, ಇನ್ನೂ ಮಳೆಯಲ್ಲೇ ಕುಳಿತ್ತಿದ್ದ ಆ ದುಃಖಿಗಳನ್ನು ನೋಡಿ ಆತ ವ್ಯಥೆಗೊಂಡನು. "ಇಲ್ಲಿದ್ದು ಏನು ಮಾಡುತ್ತೀರಿ? ಯಾವುದಾದರೂ ಒಂದು ಮಾಡಿನ ಕೆಳಗೆ ಹೋಗಿ ಸೇರಬಾರದೇ?'' ಎಂದು ಅವರನ್ನು ಕೇಳಿದನು.

"ಹೋಗುವುದು—ಎಲ್ಲಿಗೆಂದು ಬೇಡವೇ? ನಮಗೆ ಮನೆಯೇ, ಮಠವೇ,—ಎಲ್ಲರೂ ಹಾಡೂ ಒಂದೇ ಆಗಿದೆ." ಎಂದರು ಅವರು.

"ಹೋಗುವುದೆಲ್ಲಿಗೆ? ನಮ್ಮವರು ಅಲ್ಲಿ ಜಲದೇವತೆಯ ದವಡೆಯಲ್ಲಿ ಸಿಕ್ಕಿಕೊಂಡಿರುವಾಗ" ಎಂದರು ಕೆಲವರು.

"ನೋಡುವ—ಗಂಡಸರು ನಾವು ಇಲ್ಲಿಯೇ ನಿಂತಿರುವ. ದೋಣಿ ಏನಾದರೂ ಸಿಕ್ಕಿದರೆ, ತಪ್ಪಿಸಲು ಬರುವವರನ್ನಾದರೂ ತಪ್ಪಿಸುವ. ನಿಮ್ಮಲ್ಲಿ ಹೆಂಗಸರು, ಮಕ್ಕಳು ನಮ್ಮ ಶಾಲೆಯ ಚಾವಣಿಯನ್ನು ಹೋಗಿ ಸೇರಿಬಿಡಿ, ಅಲ್ಲಿ ನೂರು ಜನ ನಿಲ್ಲಬಹುದು. ತಲೆಯ ಮೇಲಿನ ನೀರಾದರೂ ತಪ್ಪೀತು. ಈ ಹನಿಯಲ್ಲಿ, ಪುಟ್ಟ ಮಕ್ಕಳನ್ನು ಹಿಡಿದುಕೊಂಡು ಕುಳಿತರೆ, ಅವು ಮರಗಟ್ಟಿ ಸತ್ತಾವು" ಎಂದನು. ಹಲವರು ಹೊರಟರು. ತಮ್ಮ ಮನೆಯ ಹೆಂಗಸರು ಮಕ್ಕಳಿಗೆ "ನೀವು ಹೋಗಿ, ಮಳೆ ಬಿಟ್ಟರೆ ಬರುತ್ತೇವೆ" ಎಂದರು. ಅಲ್ಲಿದ್ದ ಹಲವಾರು ಹೆಂಗಸರು ಮಕ್ಕಳನ್ನು ತನ್ನ ಶಾಲೆಗೆ ಕಳುಹಿಸಿ ತಾನು, ನೆರೆಗೆ ಬಲಿಯಾದ ಹತ್ತೆಂಟು ಗಂಡಸರೊಡನೆ ಅಲ್ಲಿಯೇ ಆಚೀಚೆ ಅಲೆದಾಡಿದನು. ಆಗ ತುಸು ದೂರದಲ್ಲಿ ಒಂದು ಗೇರು ಮರದ ಕೆಳಗೆ ಒಂದು ಕಂಬಳಿಯ ಮರೆಯು ಕಾಣಿಸಿತು. ಅದೇನೆಂದು ನೋಡಹೋದನು. ನೋಡುವುದೇನು? ಅಲ್ಲಿ ಇಬ್ಬರು ಹೊಲತಿಯರು ಕುಳಿತಿದ್ದರು. ಅತ್ತೆ ಸೊಸೆಯರಂತೆ ಕಂಡಿತು. ಅವರಿಬ್ಬರಲ್ಲಿ ಕಿರಿಯಳಾದವಳ ಕೈಯಲ್ಲೊಂದು ಕೂಸಿತ್ತು. ಆ ಕೂಸಿಗೆ ಕಂಬಳಿಯ ಮಾಡನ್ನು ಹಿಡಿದು, ಹೊಟ್ಟೆಯ ಕೆಳಗೆ ಆಶ್ರಯವಿತ್ತು, ಬಾಗಿ ಕುಳಿತಿದ್ದರು. ವಿಚಾರಿಸಲಾಗಿ-ಪಾಪ, ಅದು ಮುಂಚಿನ ದಿನ ಹುಟ್ಟಿದ ಕೂಸಂತೆ, ನೆರೆಯ ಗಾಬರಿಯಿಂದ ಮನೆಯಲ್ಲಿದ್ದ ಇಬ್ಬರೇ ಹೆಂಗಸರು, ಆ ಮಗುವನ್ನು ಹೊತ್ತು, ಕತ್ತಲಾಗುವಾಗ ಹೇಗೂ ಪಾರಾಗಿ ಬಂದಿದ್ದರು. ರಾತ್ರಿ

ಯೆಲ್ಲ—ಚಳಿಮಳೆಯಲ್ಲಿ ಅದೇ ರೀತಿ ಕುಳಿತು ಕಂಗಾಲಾಗಿದ್ದರು. ಬೆಳಗೂ ಆಯಿತು—ಆದರೂ ಹೋಗಬೇಕೆಲ್ಲಿಗೆ ಎಂಬ ಅರಿವಿಲ್ಲದೆ ತಡೆ ಸುತ್ತಿದ್ದರು.

ರಾಧಾಕೃಷ್ಣನಿಗೆ ಆ ಬಡ ಸ್ತ್ರೀಯರನ್ನು ಕಂಡು, ಏನು ಮಾಡುವುದೋ ತೋಚದಾಯಿತು. ಇಷ್ಟು ಹೊತ್ತು ಮಳೆಯಲ್ಲಿ ಕಳೆದುದೂ ಅಲ್ಲದೆ ಇನ್ನೂ ಅವರಲ್ಲೇ ಕುಳಿತುದಾದರೆ-ಆ ಬಾಣಂತಿಯ ಪಾಡು ಏನಾಗಬೇಕು? ಕೂಸಿನ ಗತಿ ಏನು?—ಎಂದು ಅವನು ಯೋಚನೆಗೆ ಈಡಾದನು. ಚಳಿಯಿಂದ ಅವರು ನಡುಗುತ್ತಿದ್ದಾರೆ. ಅವರನ್ನು ಎಲ್ಲಿಗೆ ಕರೆದೊಯ್ಯಬೇಕು?—ಎಂಬುದು ಹೊಳೆಯುವುದರ ಮೊದಲೇ, ಕನಿಕರದ ಒತ್ತಡದಿಂದ: "ಇಲ್ಲಿ ಕುಳಿತರೆ ಹೇಗೆ? ಬನ್ನಿ, ಹೊರಡಿರಿ" ಎಂದುಬಿಟ್ಟ. ಅಷ್ಟು ಹೇಳುವವರು ಇದ್ದರೆ ಸಾಕಿತ್ತು ಅವರಿಗೆ. "ಎಲ್ಲಿಗೆ ಹೋಗುವುದು?" ಎಂದು ಕೇಳಿದರು.

"ಯಾವುದಾದರೂ ಒಂದು ಮಾಡಿನ ಕೆಳಗೆ ಹೋಗಿ ಕುಳಿತರೆ ಆಯಿತಲ್ಲಾ?" ಎಂದನು ಈತ. ಅವರು ಹೊರಟರು; ಈತನು ಮುಂದಾದ. ದಾರಿಯಲ್ಲಿ ಒಂದೊಂದಾಗಿ, ಮುಂದಿನ ತೊಡಕು ಅವನ ಮನಸ್ಸಿನಲ್ಲಿ ಮಿಂಚಿತು. ಶಾಲೆಯ ಚಾವಣಿಯಲ್ಲಿ ಈಗಾಗಲೇ ಹತ್ತೆಂಟು ಮಂದಿ ಹೋಗಿಸೇರಿದ್ದಾರೆ. ಇವರನ್ನು ಅವರ ಒಟ್ಟಿಗೆ ಸೇರಿಸುವಂತಿರಲಿಲ್ಲ. ಅವರೂ ಇವರನ್ನು ಸಮೀಪಕ್ಕೆ ಸಹಿಸುವಂತೆ ಇಲ್ಲ. ಎಷ್ಟೆಂದರೂ ಅಂಥ ಶ್ರದ್ಧೆ. ಆಪತ್ತಿನಲ್ಲಿ ತಮ್ಮ ಸಂಕುಚಿತ ಭಾವನೆಗಳನ್ನು ಬಿಡಲಾರದ ಜನಗಳಿಗಾಗಿ ಸಿಟ್ಟುಗೊಂಡು ಪ್ರಯೋಜನವೇನು? ಆ ಕಾರಣದಿಂದ, ತನ್ನ ನೆರವನ್ನು ಯಾರೊಬ್ಬರಿಗೂ ತಪ್ಪಿಸುವುದು ಸಮನಲ್ಲವೆಂದು, "ಇವರನ್ನು ಮರಕಾಲನ ಮನೆಯಲ್ಲಿ ಬಿಟ್ಟರೆ ಏನು?" ಎಂದು ಯೋಚಿಸಿದನು. ಜತೆಯಲ್ಲಿ ಮರಕಾಲನೂ ಇದ್ದ. ಆತನ ಮುಖವನ್ನು ನೋಡಿದ. ಆತ ಪ್ರತಿಯಾಗಿ"ಎಲ್ಲಿಗೆ, ದೇವರೇ" ಎಂದನು. "ನಿನಗೇನು ಬುದ್ಧಿ ಇಲ್ಲ. ಹೇಳಿದಷ್ಟು ಕೆಲಸಮಾಡು." ಎನ್ನುತ್ತಲೇ, ಆತ "ಶಾಲೆಗೆ ಇವರನ್ನು ಕರೆದುಕೊಂಡು ಹೋದರೆ, ಅವರು ಹೊರಟಾರು" ಎಂದನು. "ಯಾರ ಸುದ್ದಿ ನಿನಗೇಕೆ? ನಿನ್ನ ಮನೆಗೆ ಬಾರದಿದ್ದರೆ ಆಯಿತಲ್ಲಾ" ಎಂದನು ರಾಧಾಕೃಷ್ಣ. ಆತನ ಮುಖವು ಸಪ್ಪಗಾಯಿತು. "ಏನು ಒಡೆಯ,

ಎಲ್ಲರೂ ನನ್ನನ್ನು ಸದರ ಎಂದೇ ತಿಳಿದಿದ್ದಾರಲ್ಲ. ನನ್ನ ಮನೆಗೇನೆ ಬರಲಿ ಅವರು; ನಾನೇ ಒಂದೆರಡು ದಿವಸ ಈಚೆ ಇರುತ್ತೇನೆ. ಹಾಗೆ ನಾನು ಯೋಚಿಸಿ ಹೇಳಿದರೆ, ನೀವು ನನ್ನನ್ನು ಕರುಳಿಲ್ಲದ ಮನುಷ್ಯನೆಂದು ತಿಳಿದು ಬಿಟ್ಟರಲ್ಲವೇ?" ಎಂದನು.

ರಾಧಾಕೃಷ್ಣನಿಗೆ ವಿಸ್ಮಯವಾಯಿತು. ಮರಕಾಲನಿಗೆ, ಕೆಳಬೈಲಿನವರ ಮೇಲೆಯೇ ಕೋಪ ಎಂದು ತಿಳಿದಿದ್ದ. ಅವರಲ್ಲಿ ಕೆಲವರ ಮೇಲಾದರೂ ಕರುಣೆಯಿಲ್ಲದೇ ಇಲ್ಲ ಎಂಬುದು ಈಗ ತಿಳಿಯಿತು. ರಾಧಾಕೃಷ್ಣ, ಸಿಟ್ಟುಮಾಡಬೇಡ ಮರಕಾಲ. ಅವರು ಹೊಲೆಯುವರಲ್ಲವೇ, ಯಾರೂ ಅವರನ್ನು ಹೊಗ್ಗಿಸಿಕೊಳ್ಳುವಂತಿಲ್ಲ. ಪಾಪ ಒಬ್ಬಳು ಬಾಣಂತಿ, ಇನ್ನೊಂದು ಕೂಸು, ಒಬ್ಬಳು ಮುದುಕಿ. ಅವರು ಇಲ್ಲಿ ಕಂಗಾಲಾಗಿ ಬಿದ್ದಿರುವಾಗ ನಾನು ಇಲ್ಲಿ ನೋಡುತ್ತಿರಬಾರದಲ್ಲ. ಅದಕ್ಕಾಗಿ ನನ್ನ ಬಿಡಾರಕ್ಕೆ ಕರೆದುಕೊಂಡು ಹೋಗುವುದೆಂದು ಯೋಚನೆ ಮಾಡಿದೆ.'' ಎಂದನು.

"ನಿಮ್ಮ ಮಡಿ ಮೈಲಿಗೆ ಕೆಡಬಹುದಂತೆ. ನನ್ನದು ಅದಕ್ಕಿಂತ ಏನು ಹೆಚ್ಚು?" ಎಂದು ಮರಕಾಲನೇ ಅವರಿಗೆ ಮಾರ್ಗದರ್ಶಕನಾದನು. ಅವರು ಮೂವರನ್ನೂ ಕರೆದುಕೊಂಡು ಮರಕಾಲನು ತನ್ನ ಮನೆಗೆ ಹೊರಟನು. ರಾಧಾಕೃಷ್ಣನೂ ಅವರ ಜತೆಗೆ ಹೋದ. ಅವರನ್ನು ಬಿರುಮನ ಮನೆಗೆ ಕಳುಹಿಸಿಕೊಟ್ಟು ತಾನು ತನ್ನ ಮನೆಗೆ ತಿರುಗಿದ. ಬಾಣಂತಿಗೆ ಏನೇನಾಗಬೇಕು—ಎಂದು ವಿಚಾರಿಸಿಕೊಂಡು, ಹೆಂಡತಿಯೊಡನೆ 'ಏನಾದರೂ ಔಷಧಿಯನ್ನು ತಯಾರಿಸು' ಎಂದು ಹೇಳಿದನು. "ಸತ್ಯ, ನಿನ್ನದು ಏನಾದರೂ ಒಣ ಸೀರೆಯ ತುಂಡೊಂದಿದ್ದರೆ ಶ್ಯಾಮನ ಹತ್ತಿರ ಕೊಟ್ಟು ಮರಕಾಲನ ಮನೆಗೆ ಮುಟ್ಟಿಸು. ಎಲ್ಲರಿಗೂ ಸೇರಿ ಸುಮಾರು ಐದು ಸೇರು ಅಕ್ಕಿ ಹಾಕಿ ಉದ್ದಕ್ಕೆ, ಒಂದು ಗಂಜಿಯನ್ನು ಮಾಡು" ಎಂದು ಅಪ್ಪಣೆಮಾಡಿದನು.

"ಎಲ್ಲರಿಗೂ-ಗಂಜಿ ಮಾಡಬಹುದು. ಆದರೆ ಇವತ್ತಿಗೆ ಅಕ್ಕಿ ಮುಗಿದರೆ, ನಾಳೆಗೆ ಯಾರನ್ನು ಬೇಡುತ್ತೀರಿ? ಇದ್ದುದನ್ನು ಇವತ್ತೇ ಬರಿದು ಮಾಡಿದರೆ, ನಾಳೆ ಇಲ್ಲಿನ ಮಕ್ಕಳಗತಿಯೇನು?"ಎಂದಳು."ನಿನಗೇಕೆ ಸತ್ಯ, ನಾಳಿನ ಚಿಂತೆ? ನಾಳಿನದು ನಾಳೆಗೆ, ಇವತ್ತಿನದು ಇವತ್ತಿಗೆ. ಇವತ್ತು

ಮಾಡಬೇಕಾದ ಕೆಲಸವನ್ನು, ನಾಳೆಗೆ ಮಾಡಿದರೆ ಚಂದವಿದೆಯೇ?" ಎಂದನು. 'ಆಗಲಿ' ಎಂದಳು ಆಕೆ. ತಿರುಗಿ ಮಳೆಯಲ್ಲಿ ಆತ ಹೊರಗೆ ಹೊರಟುದನ್ನು ಕಂಡು.

"ಇವತ್ತೆಲ್ಲ ಹೀಗೆಯೆ ಮಳೆಯಲ್ಲಿ ಸರ್ಕೀಟು ಎಂದು ಕಾಣುತ್ತದೆ" ಎಂದಳು. "ಇನ್ನೊಮ್ಮೆ ನೋಡಿಬರುತ್ತೇನೆ—ಯಾರ್ಯಾರ ಗತಿ ಏನೇನು ಆಗಿದೆಯೆಂದು. ಪಾಪ—ಇನ್ನೂ ಹತ್ತೆಂಟು ಮಂದಿ, ಮನೆ ಮಾಡುಗಳ ಮೇಲೋ, ಮರಗಳ ಮೇಲೋ ಸಿಕ್ಕಿಬಿದ್ದಿದ್ದಾರಂತೆ. ಏನು ಗತಿಯೋ ಅವರದ್ದು? ಈಗ ಏನೋ ಹೊಳವಾಗಿದೆ. ಮಳೆಗಾಲದ ಹೊಳ ಅದು. ಮಾಯವಾಗಲಿಕ್ಕೆ ಮೂರು ಕ್ಷಣಗಳೂ ಬೇಡ" ಎಂದು ತಿರುಗಿ ಗುಡ್ಡವನ್ನು ಏರಿದನು.

ಅವನು ಮೇಲಕ್ಕೆ ಬರುವಾಗ, ಅರೆಗಳಿಗೆಯಷ್ಟು ಸಮಯ, ಮುಗಿಲನ್ನು ಹರಿದುಕೊಂಡು, ಸೂರ್ಯ ತನ್ನ ಕಿರಣಗಳನ್ನು ಚೆಲ್ಲಿದ್ದನು. ಕೆಳಗಿನ ಘೋರ ಪ್ರಳಯವನ್ನು ಕಂಡು, ಆತ ವಿಕಟವಾಗಿ ಹಲ್ಲು ಕಿರಿಯುವಂತಿತ್ತು ಆ ನೋಟ. ತೆಂಕಣದಲ್ಲಿ ವಿಶಾಲವಾಗಿ ಹರಡಿದ ಕೆಂಪು ನೀರಿನ ಹಾಳೆಯು ಅವನೊಂದಿಗೆ ತಾನೂ ನಕ್ಕಿತು. ಎಷ್ಟು ಕಲಂಕಿತ ಕ್ರೂರ ಹೃದಯ ಅದರದ್ದು. ರಾಧಾಕೃಷ್ಣ ನದಿಯ ಕರೆಯನ್ನು ನೋಡುವ ಸಲುವಾಗಿ, ತಿರುಗಿ ಗುಡ್ಡವನ್ನು ಇಳಿದು ಬಂದನು. ತೀರ ಆ ಮಗ್ಗುಲಿನಲ್ಲೂ ನೀರು ಶಾಂತವಾಗಿರುವ ಬದಲು, ನೀರು ಸುಳಿಸುಳಿಯು ಬಂದು ದಂಡೆಯನ್ನು ಕೊರೆಯುತ್ತಿತ್ತು. ಬಿಸಿಲು ಬಿದ್ದುದರಿಂದ, ದೂರದ ನೋಟ ಸ್ಪಷ್ಟವಾಗಿ ಕಾಣುತ್ತದೆ. ಹನಿಮಳೆಯು ನಿಂತಿತ್ತು. ನೀರ ಕನ್ನಡಿಯಿಂದ ಮರುಕಳಿಸುವ ಸೂರ್ಯ ರಶ್ಮಿಯು ದೃಷ್ಟಿಯನ್ನು ಕುಕ್ಕುತ್ತಲೂ ಇಲ್ಲ. ನದಿಯಲ್ಲಿ ಒಂದೊಂದು ದ್ವೀಪದಂತೆ, ಉಳಿದುಕೊಂಡ ಹಿತ್ತಲು, ಮನೆಗಳು ಗುರುತಿಸುವಂತಿವೆ. ಈತ ಅಲ್ಲಿದ್ದವರನ್ನು ಕೂಡಿಕೊಂಡು, ಆಚೀಚೆ ನಿರೀಕ್ಷಿಸಿ ನೋಡಿದನು. ಆ ದೂರದಲ್ಲಿ, ನೀರಿಗೆ ಸೆರೆಯಾದ ಹಲವಾರು ಮಂದಿ, ಜೀವವನ್ನು ತಮ್ಮ ಮುಷ್ಟಿಯಲ್ಲಿ ಹಿಡಿದುಕೊಂಡು ಕುಳಿತಿದ್ದರು: ಹಾಗೆ ಕುಳಿತು ತಮ್ಮ ತಪ್ಪನ್ನು ನೆನೆಯುತ್ತ, ಜಲದೇವತೆಯನ್ನು 'ಒಮ್ಮೆಗೆ ಪಾರು ಮಾಡು' ಎಂದು ಬೇಡುತಿದ್ದರು. ನೆರೆಯು ಏರಿ ಮುಕ್ಕಾಲು ದಿನ ಆಗಿತ್ತು. ಅಷ್ಟರೊಳಗನೇ, ಕಿವಿಯಿಂದ ಕಿವಿಗೆ ವಾರ್ತೆ ಹಬಿದೆ—ಅ

ಊರು ಮುಳುಗಿತಂತೆ, ಆ ಊರು ಹೋಯಿತಂತೆ,—ಎಂದು ಅಲ್ಲಿದ್ದ ನಾಲ್ಕಾರು ಮಂದಿ ಹೇಳುತ್ತಿದ್ದಾರೆ. ಯಾರು 'ಆ ಊರು ಈ ಊರುಗಳಿಗೆಲ್ಲ ಹೋಗಿಬಂದವರೋ!'

ಎಲ್ಲರ ಜತೆಗೆ ಈತ ಪ್ರತಿಯೊಬ್ಬರ ವಿಚಾರವನ್ನೂ ಕೇಳುತ್ತಿದ್ದಾನೆ; ತಲೆಗೆ ಕೈಕೊಟ್ಟು ಕುಳಿತವರ ಮುಂದೆ, ತಾನೂ ಗಲ್ಲಕ್ಕೆ ಕೈಕೊಟ್ಟು ಗಳಿಗೆ ಎಣಿಕೆ ಮಾಡುತ್ತಾನೆ. ಪ್ರತಿ ಗಳಿಗೆಗೂ, ಅಂಗುಲ ಅಂಗುಲವಾಗಿ ನೀರು ಏರುವುದು ಕಾಣಿಸುತ್ತಲೇ ಇತ್ತು ಅವರಿಗೆ. ಮೌನ ಪ್ರಾರ್ಥನೆಯಲ್ಲಿ ಮಗ್ನರಾದ ಜನರೊಡನೆ, ತಾನೂ ಸೇರಿ ಮಾಡುವುದೇನೆಂದು ಅವನಿಗೆ ತೋರಲಿಲ್ಲ. ಆದರೂ ಬರಿದೆ ಕುಳಿತಿರಲಾರದೆ, ತನಗೆ ಪರಿಚಿತರಾದ ಕೆಳಬೈಲಿನವರನ್ನು ಕುರಿತು, ಒಂದೊಂದಾಗಿ ವಿಚಾರಿಸುತಿದ್ದಾನೆ. "ಏನಾಯಿತೋ—ಹೀಗೆ ನೀರು ಏರುವುದನ್ನು ಕಂಡು, ಸಾಯಂಕಾಲವೇ ಹಳ್ಳಿಯಲ್ಲಿನ ದನಕರುಗಳ ಕೊರಳು ಬಳ್ಳಿ ತಪ್ಪಿಸಿದೆವು. ಬಡಗು ದಿಕ್ಕಿಗೆ ಹೊಡೆದುಬಿಟ್ಟೆವು. ನೀರಿನ ಒಯ್ಲಿಗೆ ಅವು ಎಲ್ಲಿಗೆ ಹೋದುವೋ, ಎಲ್ಲಿ ನೆಲವೇರಿದವೋ, ಏನು ಕತೆಯೋ" ಎಂದು ಒಬ್ಬನು ಎನ್ನುತ್ತಾನೆ. "ನಾವು ನಿನ್ನೆ ಸಾಯಂಕಾಲವೇ ಬಂದಿದ್ದೆವು. ಪುಣ್ಯಕ್ಕೆ ಒಂದು ದೋಣಿ ಸಿಕ್ಕಿತು. ಇದ್ದ ಎರಡು ಮುಡಿ ಅಕ್ಕಿಯನ್ನು ತಪ್ಪಿಸಿಕೊಂಡು ಬಂದೆವು. ಮಳೆಗಾಲ ಮುಗಿಯುವ ತನಕ ಉಣ್ಣಬೇಕಲ್ಲಾ" ಎಂದನು ಇನ್ನೊಬ್ಬ.

"ದೋಣಿ ಸಿಕ್ಕಿತೇ, ಯಾರದ್ದು? ಏನು ಮಾಡಿದಿ?" ಎಂದು ಈ ತನಕ ಮೂಕನಾಗಿಯೇ ಕುಳಿತಿದ್ದ, ಕೆಳಬೈಲಿನ ರಾಮಣ್ಣ ಪೂಜಾರಿ, ಈಗ ಮಾತನಾಡಿದ.

• "ದೋಣಿ ಯಾರದ್ದೋ! ಮಧ್ಯಾಹ್ನ ನೀರಲ್ಲಿ ಬಳಿದು ಬರುತ್ತಿದ್ದುದ್ದನ್ನು ಕಂಡು, ಹಿಡಿದು ಹಾಕಿದೆವು. ಕೊನೆಗೆ ನಮ್ಮ ಕೆಲಸಕ್ಕಾದರೂ ಒದಗಿದ ಹಾಗಾಯಿತಲ್ಲಾ"

ರಾಮಣ್ಣನು, ಒಮ್ಮೆಗೆ ಉತ್ಸಾಹ ತಾಳಿದನು. "ಎಲ್ಲಿ ಕಟ್ಟಿದ್ದೀರಿ? ಎಲ್ಲಿದೆ? ನಾನು ಒಂದು ಸಾರಿ ಮನೆಗೆ ಹೋಗಿ ಬರುತ್ತೇನೆ?" ಎಂದು ಎದ್ದು ನಿಂತನು. ರಾಧಾಕೃಷ್ಣನು ಅವನ ಮುಖವನ್ನೇ ಬಿರ, ಬಿರನೆ ನೋಡುತ್ತಿದ್ದಾನೆ. ಕೆಳಬೈಲಿನ ರಾಮಣ್ಣನು ಅವನಿಗೆ ಹೊಸಬನಲ್ಲ. ತನ್ನ ಆಳು ಬಿರುಮ ಮರಕಾಲನ ಉಗ್ರಕ್ಕೆ ಬಲಿಯಾಗಿದ್ದ ಅವನ ಹೆಸರು

ಚೆನ್ನಾಗಿ ಗೊತ್ತು. 'ರಾಮಣ್ಣನ ಮನೆ ಕೊಚ್ಚಿ ಹೋಗಲಿ'—ಎಂದು ಬಿಳುವು ಧ್ಯಾನ ಮಾಡಿರಲಿಲ್ಲವೇ?

ದೋಣಿಯ ವಿಚಾರವನ್ನು ಎತ್ತಿದವನು, "ದೋಣಿ.......ನಂಬಿಗೆಯದಲ್ಲ. ಇಲ್ಲೇ ಕೆಳಕ್ಕೆ, ಹಳುಪನ ಮನೆಯಲ್ಲಿ ಕಟ್ಟಿದ್ದೇವೆ. ನಮ್ಮ ಮನೆಯ ಚೂರುಪಾರು ಸಾಮಾನೆಲ್ಲಾ ಅದರಲ್ಲಿಯೇ ಇದೆ. ಆದರೆ ಈ ನೀರಿನ ಒಯ್ಲಿನಲ್ಲಿ ದೋಣಿ ನಿಮ್ಮ ಮನೆ ತನಕ ಹೋಗುವುದು ಹೇಗೆಂದು ಬೇಡವೇ?"

"ಹೋಗದೆ ಮಾರ್ಗವಿಲ್ಲ, ನಾನು ನನ್ನ ಅಪ್ಪನಿಗೆ ನೂರು ಸಾರಿ ಬೇಡವೆಂದೆ: 'ಈ ನೀರು ನಂಬಿಗೆಯದಲ್ಲ, ಮನೆಯಲ್ಲಿರುವುದು ಒಳ್ಳೆಯದಲ್ಲ, ಜತೆಗೆ ಬನ್ನಿ'—ಎಂದರೆ 'ಊಂ ಹೊಂ' ಅಂದರು. 'ನೀನು ಮಕ್ಕಳು ಮರಿಗಳನ್ನು ಕರೆದುಕೊಂಡು ಹೋಗು; ಹೆಂಗಸರೂ ಹೋಗಲಿ' ಎಂದರು. ನಿನ್ನೆ ಮಧ್ಯಾಹ್ನದ ಮಾತದು. ಆಗ ಇಷ್ಟೊಂದು ನೀರು ಏರಿರಲಿಲ್ಲ. ಹೆಗಲಮೇಲೆ ಮಕ್ಕಳನ್ನು ಹಾಕಿಕೊಂಡು, ಕುತ್ತಿಗೆಯ ವರೆಗಿನ ನೀರಿನಲ್ಲಿ, ಹಾಗೆಯೇ ನಡೆದುಕೊಂಡು ಬಂದೆವು. ಸಾಮಾನು, ಸರಂಜಾಮುಗಳೆಲ್ಲ, ಅಲ್ಲೇನೇ. ನಾವು ಈಚೆ ಬಂದದ್ದೇ ಬಂದದ್ದು........ಏನು ಗಾಳಿ, ಏನು ಮಳೆ! ನೀರು ಕ್ಷಣಕ್ಕೆ ಏರಿತು. ನಿನ್ನೆ ರಾತ್ರಿಯೆಲ್ಲ, ನಿಮ್ಮ ಹಾಗೆಯೇ, ತಪಸ್ಸುಮಾಡುತ್ತ ದಂಡೆಯಲ್ಲಿ ಕುಳಿತದ್ದೇ. ಆದರೂ ಇಷ್ಟಾದರೂ ಒಬ್ಬರು ಇದ್ದದ್ದು ಇನ್ನೊಬ್ಬರಿಗೆ ಗೊತ್ತಿರಬೇಡವೆ! ಏನು ನೀರು, ಏನು ಸುಳಿ, ಏನು ಮಾತಾಯಿ! ಕಾರು ತಿಂಗಳ ಕಡಲಿನ ಅವತಾರವೆಲ್ಲ, ಈ ಹೊಳೆಯ ನೀರಿಗೆ ಬರಬೇಕೆ! ಇನ್ನಾದರೂ, ಹೋಗಿ, ಅಪ್ಪನನ್ನು ತಪ್ಪಿಸಿಕೊಂಡು ಬರಬೇಕೆಂದಿದೆ."

"ಏನು, ನಿನ್ನಪ್ಪ ಇನ್ನೂ ಅಲ್ಲಿ ಮನೆಯಲ್ಲಿಯೇ ಇದ್ದಾನೆಯೇ" ಎಂದ ರಾಧಾಕೃಷ್ಣ.

"ಹೌದು ಒಡೆಯ, ಈ ಮುದುಕರಿಗೆ ಸಾಯುವ ಕಾಲಕ್ಕೂ ಆಸೆಯೇ. ಐವತ್ತು ಮುಡಿ ಅಕ್ಕಿ ಇದೆ ಮನೆಯಲ್ಲಿ, ಬಿಟ್ಟು ಬರುವುದು ಹೇಗೆ ಎಂದು ಆಸೆ.......ಅಂಥಾದ್ದಾದರೆ ಮಾಡು ಏರುತ್ತೇನೆ ಎಂದಿದ್ದಾನೆ. ಉಪ್ಪರಿಗೆಯ ಮನೆ; ಕಲ್ಲಿನ ಕುಂದಗಳಿವೆ. ಗೋಡೆ ಮಾತ್ರ ಮಣ್ಣಿನದು. ಅದೇನು ಉಳಿಯುವ ಹಾಗಿಲ್ಲ ಈ ನೀರಿಗೆ!........ನೋಡಿ, ಓ ಅಲ್ಲಿ ಆ

ಮಾವಿನ ಮರಗಳ ಗುಂಪು ಕಾಣಿಸುವುದಿಲ್ಲವೇ? ಹುಲ್ಲುಗಿಲ್ಲು ತಗಲಿ ನಿಂತದ್ದು? ಅದರ ಆಚೆಗೇನೆ ಮನೆಯಿದೆ. ಯಾಕೋ ಕಾಣಿಸಬೇಕಿತ್ತು, ಕಾಣಿಸುವುದಿಲ್ಲ. ಅವರು ಮರವನ್ನಾದರೂ ಹತ್ತಿಕೊಂಡಿದ್ದರೆ ದೇವರು ಜೀವವನ್ನು ಉಳಿಸುತಿದ್ದ; ಏನು ಮಾಡಿದ್ದಾರೋ ಏನೋ. ಈಗ ಇಷ್ಟು ಬಿಸಿಲು ಬಿದ್ದಿದೆ. ಇವರ ದೋಣಿ ಸಿಕ್ಕಿದರೆ, ಇನ್ನೊಬ್ಬ ಆಳೂ ನಾನೂ ಸೇರಿಕೊಂಡು ಹೇಗಾದರೂ ಮಾಡಿ ಅವರನ್ನು ತಪ್ಪಿಸುತ್ತಿದ್ದೆವು" ಎಂದು ಉಸಿರುಗರೆದನು.

ಅಷ್ಟರಲ್ಲಿಯೆ ಬಿರುಮ ಮರಕಾಲನು ಬಂದನು. ಅವನನ್ನು ಕಂಡು ರಾಮಣ್ಣ," ಮರಕಾಲ ಬಂದನು. ಅವನು ಮನಸ್ಸು ಮಾಡಿದರೆ, ನಮ್ಮ ಅಪ್ಪನನ್ನು ತಪ್ಪಿಸುವುದು ದೊಡ್ಡ ಕೆಲಸವಲ್ಲ"—ಎಂದನು. ತನ್ನ ಹೆಸರನ್ನು ರಾಮಣ್ಣ ಹೇಳಿದುದನ್ನು ಕಂಡು ಆತನಿಗೆ ಆಶ್ಚರ್ಯವಾಯಿತು. ಅವನ ಮುಖ ಕೆಂಪೂ ಆಯಿತು. ಆ ಚಹರೆಯನ್ನು ತಿಳಿದುಕೊಂಡ ರಾಧಾಕೃಷ್ಣನು ಬೇರೆ ವಿಷಯವನ್ನು ಪ್ರಸ್ತಾಪಿಸುವನಂತೆ, "ಮರಕಾಲ, ಇಲ್ಲಿ ಬಾ" ಎಂದು ಕರೆದನು. ಆತ ಬರುತ್ತಲೇ ಅವನನ್ನು ಮಗ್ಗುಲಿಗೆ ಕರೆದುಕೊಂಡು ಹೋಗಿ, "ಬಿರುಮ, ನೀನು ಯಾವಾಗ, ಪಾಪದ ಆವುಗಳನ್ನು ನಿನ್ನ ಸ್ವಂತ ಮನೆಗೇನೆ ಕರೆದುಕೊಂಡು ಹೋದೆಯೋ, ನಿನ್ನಂಥ ಧೀರನಿಲ್ಲ ಎಂದು ತೋರಿಬಿಟ್ಟಿದೆ ನನಗೆ. ಈ ಸಮಯದಲ್ಲಿ ನಾವು ಯಾವುದಕ್ಕೂ ಹಿಂದೆ ಮುಂದೆ ನೋಡಬಾರದು. ಬೈಲಿನಲ್ಲಿ ಇನ್ನೂ ತುಂಬ ಮಂದಿ ಸಿಕ್ಕಿ ಬಿದ್ದಿದ್ದಾರಂತೆ. ಅವರನ್ನು ಬಚಾಯಿಸುವ ಭಾರ ನಮ್ಮದು. ಈಗ ಒಂದು ಗಳಿಗೆ ಮಳೆ ಬಿಟ್ಟಿದೆ. ಪುಣ್ಯಕ್ಕೆ ಒಂದು ದೋಣಿಯೂ ಸಿಕ್ಕಿದೆ. ನಾನು, ನೀನು ಇನ್ನು ಯಾರಾದರೂ ಒಬ್ಬ ಗಟ್ಟಿ ಆಳು. ಅಲ್ಲಿಯ ವರೆಗೆ ಹೋಗಿಯೇ ಶುದ್ಧ. ಏನು ಆಗುತ್ತದೆಯೋ, ಅದನ್ನು ಮಾಡಲೇ ಬೇಕು. ಬರಿಯ ಒಬ್ಬನ ಜೀವವನ್ನು ಉಳಿಸಿದರೂ ಅಷ್ಟು ಪುಣ್ಯ ಇದೆ. ಆದರೆ ಅನ್ನುತ್ತೇನೆ ಮರಕಾಲ—ಇಂಥ ಹುಚ್ಚರು ಇದ್ದಾರೆಯೇ! ಜೀವ ಹೋಗುವಾಗ ಅದು ದೊಡ್ಡದೆಂದು ಓಡಿಬರುವುದು ಬಿಟ್ಟು, ಅಕ್ಕಿ, ಸಾಮಾನು ಎಂದು ಇನ್ನೂ ಅಲ್ಲಿಯೇ ಕೂತಿದ್ದಾರಲ್ಲಾ, ಒದ್ದೆಯಾದ ಅಕ್ಕಿ ಮುಡಿಗಳು ಇನ್ನು ಕೈಗೆ ಬರುತ್ತವೆಯೇ? ಹೋದದ್ದು

ಹೋದದ್ದೇ. ಜೀವನ್ನಾದರೂ ಉಳಿಸಿಕೊಳ್ಳಬಹುದಿತ್ತಲ್ಲ"—ಎಂದು ಉಪದೇಶ ಮಾಡಿದನು.

"ಇನ್ಯಾರು ಹುಚ್ಚರೋ ಅಲ್ಲಿರುವವರು? ಬುದ್ಧಿ ಸ್ವಲ್ಪವಾದರೂ ಇದ್ದಿದ್ದರೆ, ಅಲ್ಲಿ ಇರುತ್ತಾರೆಯೇ?" ಎಂದನು ಮರಕಾಲ.

"ನಿನಗೆ ಗೊತ್ತಿಲ್ಲ. ಹಾಗೆ ಬುದ್ಧಿ ಹೆಚ್ಚಾಗಿ, ರಾಮಣ್ಣನ ಅಪ್ಪನೇ, ಅಲ್ಲಿ ಸಿಕ್ಕಿ ಬಿದ್ದಿದ್ದಾನಂತೆ."

"ಅವನೇ, ಆ ಮುದುಕನೇ, ಹೋದರೆ ಹೋಗಲಿ ಒಡೆಯ, ಬೇರೆ ಯಾರನ್ನಾದರೆ ಬದುಕಿಸಿ ಪ್ರಯೋಜನವುಂಟು."

"ಛೀ, ಮರಕಾಲ, ಈ ಸಮಯದಲ್ಲಿ ಅಂಥ ಮಾತನ್ನು ಆಡಬಾರದು. ಪಾಪ! ಯಾರ ಜೀವವಾದರೂ ಒಂದೇ."

"ಅಲ್ಲ ಒಡೆಯ, ಅವನು ತೀರ ಘಟಿಂಗ. ನನ್ನ ಹೆಂಡತಿ, ಮಕ್ಕಳನ್ನು ಚಾಡಿ ಹೇಳಿ ಓಡಿಸಿದ್ದು ಯಾರೆನ್ನುತ್ತೀರಿ?"

"ಅದು ಅವನೇ ಎನ್ನುವುದು—ನಿನ್ನ ಊಹೆ. ಅವನಿಗೆ ಅದರಿಂದೇನು ಲಾಭ? ನೀನು ಯಾರೋ, ಅವನು ಯಾರೋ? ಅಲ್ಲದೆ ಇಂಥ ಗಳಿಗೆಯಲ್ಲಿ ಏನಿದ್ದರೂ ಮನಸ್ಸಿಗೆ ಅದನ್ನೆಲ್ಲ ತಂದುಕೊಳ್ಳಬಾರದು."

"ಅದನ್ನು ಮರೆಯುವುದು ಹೇಗೆ ಸ್ವಾಮಿ? ಹಣದ ಗರ್ಜಿಗೆಂದು, ನನ್ನವಳ ಬಳೆಯ ಜೋಡನ್ನು ಕದ್ದು, ನಂಬಿಗೆಯಿಂದ ಅವನಲ್ಲಿ ಅಡವು ಇಟ್ಟರೆ, ಆ ಕಳ್ಳ ಅದನ್ನು ಅವಳಿಗೆ ತೋರಿಸಿ, ನನ್ನ ಮೇಲೆ ಸಿಟ್ಟುಗೊಂಡು ಹೊರಟು ಹೋಗುವ ಹಾಗೆ ಮಾಡಿದ."

ರಾಧಾಕೃಷ್ಣ ಅವನನ್ನು ಗದರಿಸಿದನು.

"ದೊಡ್ಡ ಮನಸ್ಸು ಮಾಡು ಅಂದರೆ ಹೀಗೇನು? ನೀನು ಅವನ ಜೀವ ಕಾಪಾಡಿದರೆ, ಅವನು ಆ ಉಪಕಾರ ಮರೆಯಲಿಕ್ಕಿಲ್ಲ. ಆ ಬಳೆಯನ್ನು ಹಿಂದೆ ಹಿಂದಕ್ಕೆ ಕೊಟ್ಟರೂ ಕೊಟ್ಟಾನೇ."

"ಹೊಂ ಕೊಟ್ಟಾನು, ಹೋಗಲಿ, ನೀವು ಅಂದದ್ದಕ್ಕೆ ಹೋಗುತ್ತೇನೆ. ಕಳ್ಳನಾಗಲೀ, ಸುಳ್ಳನಾಗಲೀ—ಜೀವಜೀವವೇ" ಎಂದ. ರಾಧಾಕೃಷ್ಣನಿಗೆ ಸಂತೋಷವಾಯಿತು. ರಾಮಣ್ಣನನ್ನು ಕರೆದ. "ರಾಮಣ್ಣ, ದೋಣಿ ಎಲ್ಲಿದೆ ನೋಡುಹುಡುಕು. ಮರಕಾಲ ಬರುತ್ತಾನೆ. ನಾನೂ

ಇದ್ದೇನೆ. ನನಗೆ ದೋಣಿ ಒತ್ತಲಿಕ್ಕೆ ಮಾತ್ರ ಬರುವುದಿಲ್ಲ, ನಾನು ಬರುವುದು ಧೈರ್ಯಕ್ಕೆ."

"ನೀವು ಬೇಡ ಮಾಸ್ತರರೇ. ಮರಕಾಲ ಬಂದರೆ ಸಾಕು—ಕೆಲಸ ಆಯಿತೆಂದೇ ಲೆಕ್ಕ. ಅವನು ಮನಸ್ಸು ಮಾಡಿದರೆ ದೈವದ ಹಾಗಿನವ. ಈ ಹೊಳೆ ಅವನಿಗೊಂದು ಮುಲಾಜೇ" ಎಂದನು ರಾಮಣ್ಣ.

ಹೀಗೆಂದು ಅವಸರವಾಗಿ ಅವರು ದೋಣಿಯ ಬಳಿಗೆ ಹೋದರು. ದೋಣಿಯ ಸಾಮಾನುಗಳನ್ನು ಬದಿಗೆ ಒತ್ತಟ್ಟಿಗೆ ಇರಿಸಿದರು. ಒಂದು ದಪ್ಪದ ಬಿದಿರನ್ನು ಸಿಗಿದು, ಮರಕಾಲ ಒಂದೆರಡು ತೊಳೆಗಳನ್ನು ತಯಾರಿಸಿದನು. ಒಳ್ಳೆಯ ಹುಮ್ಮಸದಿಂದ "ಬಾ ಕೂತುಕೋ, ರಾಮಣ್ಣ" ಎಂದು ಕರೆದನು. ಅವರಿಬ್ಬರೂ ದೋಣಿಯನ್ನು ಏರಿದರು. ರಾಮಣ್ಣನು ಆಗ "ಇವನ ಉಪಕಾರ ಎಂದೂ ಮರೆಯಲಿಕ್ಕಿಲ್ಲ" ಎಂದ. ರಾಧಾಕೃಷ್ಣ "ಮರಕಾಲನಿಗೆ ಗಡದ್ದು ಇನಾಮು ಆಗಬೇಕು" ಎಂದು ಹೇಳಿದನು.

"ಜೀವ ಬದುಕಿಸಿದವರಿಗೆ ಏನೂ ಕೊಟ್ಟೇನು."

ರಾಧಾಕೃಷ್ಣ ದೋಣಿಯೇರುವುದರಲ್ಲಿದ್ದನು. ಅವನನ್ನು ಬೇಡವೆಂದರು. ಬಿರುಮ ರಾಮಣ್ಣನೊಡನೆ "ನೀನು ಒಂದು ತೊಳೆ ಹಿಡಿ, ನಾನೊಂದು ಹಿಡಿಯುತ್ತೇನೆ" ಎಂದನು. ರಾಮಣ್ಣ ತೊಳೆ ತೆಗೆಯುವುದನ್ನು ನೋಡಿ, ಆತ ನಕ್ಕು, "ಅಯ್ಯಾ, ಇವನು ತೊಳೆ ಹಿಡಿದರೆ, ನೆಟ್ಟಗೆ ಅಳುವೆ ಸೇರಬಹುದು........ಆಗಲಿ, ದೇವರು ಇವತ್ತಿಗೆ ಗಟ್ಟಿ ರಟ್ಟೆಗಳನ್ನು ಕೊಟ್ಟಿದ್ದಾನೆ; ಈ ನೀರಿಗೆ ನಾನು ಸಾಕು. ರಾಮಣ್ಣ ನೀನು–ನಾನು ಹೇಳಿದ ದಿಕ್ಕಿಗೆ ತೊಳೆಯನ್ನು ಚುಕ್ಕಾಣಿಯ ಹಾಗೆ ಸುಮ್ಮನೆ ಹಿಡಿದುಕೊಂಡರೆ ಸಾಕು" ಎಂದನು. ಆತ ದೋಣಿಯನ್ನು ದಂಡೆಯ ಬದಿಯಿಂದಲೇ ತಳ್ಳುತ್ತ, ತುಂಬ ಮುಂದಕ್ಕೆ ತೆಗೆದುಕೊಂಡು ಹೋದನು. ಅನಂತರ ದೋಣಿಯು ಪ್ರವಾಹಕ್ಕೆ ಎದುರಾಗಿ, ನಡುವೆ ಸರಿಯಿತು. ನೀರಿನ ಭರಕ್ಕೆ ಒಂದು ಮಾರು ಮುಂದೆ ಹೋಗುವುದರೊಳಗೆ, ಮೂರು ಮಾರು ಕಡಲಿನ ಕಡೆಗೆ ಸಾಗುತಿತ್ತು. ಮರಕಾಲ ನಿಂತುಕೊಂಡು, ದೆವ್ವದಂತೆ ತೊಳೆ ಒತ್ತಿದನು; ಆತ ಕಣ್ಣಿನ ಮೇಲೆ ಕಣ್ಣಿಟ್ಟು, ಎದುರು ನೀರನ್ನು ನೋಡುತ್ತ, ದೋಣಿಯನ್ನು ನಡೆಸತೊಡಗಿದನು. "ಅಯ್ಯೊ, ನನಗೆ ಬೈಲಿನ ನೀರು ಅಷ್ಟು ಚೆನ್ನಾಗಿ ಆಗುವುದಿಲ್ಲ. ಆ ಮರದ ಗುಂಪಿಗೆ

ಮುಟ್ಟಿದರೆ ಆಯಿತಲ್ಲಾ? ನೀನು ಬಾಣಿಯನ್ನು ಗಟ್ಟಿಯಾಗಿ ಹಿಡಿದು ಕೊತುಕೊ, ಎಲ್ಲಾದರೂ ನೀರಿನ ಕೆಳಗಿನ ಗಿಡಗಂಟಿ ಬಡಿಯಬಹುದು''

ರಾಮಣ್ಣ ''ನೀನು ಹಿಡಿದ ದಾರಿಯೇ ಸಮ. ಈ ಮಜಲು ಗದ್ದೆಯ ಸಾಲನ್ನು ದಾಟಿದರೆ, ಬೈಲಿನ ಹೊಂಡ ಸಿಗುತ್ತದೆ'' ಎಂದ.

ನೋಡು ನೋಡುತ್ತ ದೋಣಿ ಸರಿಯಿತು. ಕಾಣುತ್ತ ನಿಂತವರಿಗೆ ದೋಣಿ ಸಣ್ಣದಾಗಿ ಕಾಣಿಸಿತು. ಮರಕಾಲನ ಅಂದಾಜು ಸೂಕ್ಷ್ಮವಾಗಿತ್ತು. ಅವನು, ಅಷ್ಟು ಮೇಲಕ್ಕೆ ಹೋಗಿ ದೋಣಿ ಬಿಟ್ಟುದರಿಂದ, ಹಾಗೂ, ಹೀಗೂ, ರಾಮಣ್ಣನ ಮನೆಯ ಹಿತ್ತಿಲಿಗೆ ಹೋಗಿ ಹಿಡಿಯುವುದು ಸಾಧ್ಯವಾಯಿತು. ಹಿತ್ತಿಲಲ್ಲಿ, ಹಿತ್ತಿಲಿನ ಮಾವಿನ ಮರಗಳ ನಡುವೆ ಹೋಗಿ ತಗಲಿ ನಿಂತಿತು. ಬಂದುದು ಬರಿಯ ಅರ್ಧ ಮೈಲು ದೂರವಾಗಬಹುದು. ಮರಗಳು ಮರೆಯಾಗಿದ್ದುದರಿಂದ ಆ ಕಡೆ ಹೋಗುವುದೂ ಕಷ್ಟವಿತ್ತು. ಆಚೆ ಏನಿತ್ತೆಂದು ಕಾಣಿಸುವುದೂ ಇಲ್ಲವಾಯಿತು.

ಒಮ್ಮೆಗೇ ಅಷ್ಟರಲ್ಲಿ, ಬಾನಿಗೆ ಹುಚ್ಚು ಹಿಡಿಯಬೇಕೇ? ಬಿದಿರಿನ ಮೆಳೆಗಳನ್ನು ಮುರಿಯಲು ಹೊರಟ ಮದ್ದಾನೆಗಳ ಹಿಂಡಿನಂತೆ, ಪಡುವಣದಿಂದ, ಕರಿ ಮುಗಿಲುಗಳು, ಬಾನನ್ನು ಸುತ್ತುವರಿದವು. ಮುಗಿಲ ಬೆನ್ನಿಗೇನೇ ಬಂದಿತು ಬಿರುಗಾಳಿ. ಇಲ್ಲ, ಬಿರುಗಾಳಿಯ ಬೆನ್ನೇರಿ ಬಂದಿರಬೇಕು ಈ ಮುಗಿಲ ಹಿಂಡು. ಅಂತು ನೆರೆ ಬರುವಾಗಲೆಲ್ಲ ಅವೆರಡಕ್ಕೂ ಇದೇ ಬಗೆಯ ನಂಟುತನ ಇರಬೇಕೇ? ಚಿಟಚಿಟಲೆಂದು ಗೋಲಿ ಗಾತ್ರದ ಹನಿ ಅಪ್ಪಳಿಸಿತು. ರಾಮಣ್ಣನ ಎದೆಯಲ್ಲಿ ಅದೇ ಗಾತ್ರದ, ಆಲಿಕಲ್ಲುಗಳು, ಉದರ ತೊಡಗಿದುವು. ರಾಧಾಕೃಷ್ಣನಿಗೆ ಒಮ್ಮೆಗೆ ಚಿಂತೆ ಅಂಕುರಿಸಿತು. ಒಂದು ಜೀವ ಉಳಿಸುವುದಕ್ಕೆ ಹೋಗಿ, ಇನ್ನೆರಡು ಜೀವಗಳನ್ನು ಮಾರಿಗೆ ಕೊಡುತ್ತಿದ್ದೇನೆ—ಎಂದು ಅಂತರ್ಯವು ಹೇಳತೊಡಗಿತು. ಅವರು ಮರದ ರೆಂಬೆಗಳನ್ನು ಹಿಡಿದುಕೊಂಡು ದೋಣಿಯಲ್ಲೇ ಕುಳಿತಿದ್ದಾರೆ. ರೆಂಬೆಗಳ ಎಡೆಗೆ ಸಿಲುಕಿದ ದೋಣಿ ತೇಲಿ ಹೋಗುವ ಭೀತಿ ಇರಲಿಲ್ಲ. ಮಳೆ ಒಂದೇ ಸವನೆ ಬರತೊಡಗಿದೆ. ಒಮ್ಮೆ ಮಳೆಯ ಅಬ್ಬರ, ಇನ್ನೊಮ್ಮೆ ಗಾಳಿಯ ಅಬ್ಬರ, ಆವೃತ್ತಿಯಿಂದ ಬರುವಂತೆ ಕಂಡಿತು. ನದಿಯ ಮೇಲುಗಡೆ ಮಬ್ಬು ಕವಿಯಿತು. ಮಳೆ ನಿಲ್ಲುವ ಭರವಸೆಯೇ

ಉಂಟಾಗಲಿಲ್ಲ. ನದಿಯ ದಂಡೆಯ ಮೇಲೆ ಕುಳಿತ ರಾಧಾಕೃಷ್ಣ, ದೋಣಿ ಮರಳದೆ, ಮನೆಗೆ ಹಿಂದಿರುಗುವ ಹಾಗಿಲ್ಲ. ಈಗಾಗಲೇ ವೇಳೆ ಆಯಿತು. "ಸತ್ಯ, ಅಷ್ಟೆಲ್ಲ ಜನರಿಗೆ ಗಂಜಿ ಬಡಿಸಬೇಕು. ಬಡಿಸಿದಳೋ, ಇಲ್ಲವೋ. ಆ ದೊಡ್ಡ ಚರಿಗೆಯನ್ನು ಒಬ್ಬಳಿಂದ ಇಳಿಸಲಿಕ್ಕೆ ಆಗುತ್ತದೆಯೋ, ಇಲ್ಲವೋ...........ಕಾಲಿನ ಮೇಲೆ ಹಾಕಿಕೊಂಡರೆ ಏನು ಗತಿ? ನಾನು ಇಲ್ಲಿ ಇರುವುದಕ್ಕೂ ಇಲ್ಲ, ಅಲ್ಲಿ ಇರುವುದಕ್ಕೂ ಇಲ್ಲ" ಎಂಬ ಯೋಚನೆಗಳು ಬಂದುವು. ಅಷ್ಟರಲ್ಲಿ "ದೊಡ್ಡ ಪಾತ್ರೆಯೇ ಇಲ್ಲವಲ್ಲ, ಸಣ್ಣದರಲ್ಲೇ ಒಂದೆರಡಾವರ್ತಿ ಬೇಯಿಸಬೇಕು. ನಾನು ಇಲ್ಲಿರುವ ಬದಲು, ಅಲ್ಲಿದ್ದರೆ ಆಗುತ್ತಿತ್ತೋ, ಏನೋ" ಎಂದು ಯೋಚನೆ ಮಾಡತೊಡಗಿದ. ಅವನ ಮನಸ್ಸು ಯಾವ ತೆರನ ಕಳವಳದಿಂದ ತುಂಬಿತ್ತೆಂದು ಬಣ್ಣಿಸಲು ಬರುವಂತಿರಲಿಲ್ಲ. ಒಂದು ಕಡೆ ನೀರು ಪಾಲಾದ ದೋಣಿಯ ಚಿಂತೆ. ಇನ್ನೊಂದು ಕಡೆ ಮನೆಯಲ್ಲಿರುವ ಅನಾಥರ ಚಿಂತೆ; ಮೂರನೆಯದೇ ಆದ ಚಿಂತೆಯೂ ಬರುತ್ತದೆ—ಮಳೆಯಲ್ಲಿ ತೊಯ್ದ ಬಾಣಂತಿಯ ಪಾಡು ಏನಾಯಿತೋ ಎಂದು.

ಆದರೂ ಅಲ್ಲಿಂದ ಕಾಲು ಕೀಳಲು ಮನಸ್ಸು ಬಾರದು. ಆಪತ್ತಿಗೆ ಧುಮುಕಿದವರು ಬರುವ ತನಕ ಕಾಯಬೇಡವೇ? ಆಚೀಚೆ ಕುಳಿತವರು ಅಲ್ಲಿ ಮಳೆಯಲ್ಲೇ ಕಾಯಲಾರದೆ, ಕರೆದು ತಂದವರನ್ನು ನೋಡುವ ಸಲುವಾಗಿ ಹೊರಟು ಹೋದರು. ಆಗ ಸೂರ್ಯ ಕಾಣಿಸುವಂತಿದ್ದರೆ, ಬೆಳಗೆಲ್ಲವೂ ಕಳೆದು, ನೆತ್ತಿಗೆ ಏರಿ ತಿರುಗಿರಬೇಕಿತ್ತು. ಅವನ ಹೊಟ್ಟೆಯಲ್ಲಿಯೂ ಹಸಿವು, ಒಂದು, ಎರಡು, ಮೂರು—ಎಂದು ಗಂಟೆಯನ್ನು ಬಾರಿಸುತ್ತಲೇ ಇತ್ತು. ಸಮಯವನ್ನು ಕಳೆದಂತೆ ಆತನ ಮುಖ ನಿರಾಶೆಯಿಂದ ತುಂಬಿಕೊಂಡಿತು. ತಾನೇಕೆ ಮರಕಾಲನನ್ನು ಹುರಿದುಂಬಿಸಿ ಕಳುಹಿದೆ? ಕಳುಹಿದ ಮೇಲೆ ತಾನೂ ಅವರ ಜತೆಯೊಳಗೆ ಹೋಗಬೇಡವಿತ್ತೇ—ಎಂದು ಚಿಂತೆಪಡುವಂತಾಯಿತು.

ಮರಕಾಲನ ಕತೆಯನ್ನು ಕೇಳುತ್ತೀರಾ? ಅವನು ಹೋಗುವಾಗ ಅಷ್ಟೊಂದು ತೊಂದರೆ ಆಗಲಿಲ್ಲ. ಮುಂದೆ ಬೀಸಿದ ಗಾಳಿ ಮಳೆ, ದಾರಿಯಲ್ಲೇ ಎದುರಾಗಿದ್ದರೆ, ಅವರ ಪಾಡು ಏನಾಗುತ್ತಿತ್ತೋ? ಅಷ್ಟರೊಳಗೇನೇ ತಾವನ್ನು ಸೇರಿದರು. ದೋಣಿಯನ್ನು ಮರದ ಕೊಂಬೆಗೆ ಬಿಗಿದು

ತಾವೂ ಮರದ ಕೊಂಬೆಯನ್ನು ಏರಿದರು. ಇನ್ನು ಮಳೆಗಾಳಿಯ ಭರ ಎಂದು ತಗ್ಗೀತು ಎಂದು ಕಾಯುವ ಕೆಲಸ. ಅದು ಬಿಟ್ಟರೆ ಮೆಲ್ಲಗೆ ದೋಣಿಯನ್ನು ಮರದ ಆಚೆಯ ಮಗ್ಗುಲಿಗೆ ತಂದು, ಅಲ್ಲಿಂದ ಮುಂದೆ ಇರುವ ಮನೆಗೋ, ಇನ್ನೊಂದು ಮರಕ್ಕೋ ಹೋಗುವುದು ಸಾಧ್ಯ. ಈಗ ಏನು ಮಾಡುವುದಕ್ಕೂ ಇಲ್ಲ. ಅಲ್ಲಿನ ಪ್ರವಾಹ ತುಂಬ ಬಲವಾಗಿದೆ. ಸಾಲದುದಕ್ಕೆ ತಡೆಯಲಾರದಷ್ಟು ಗಾಳಿ ಮಳೆ. ಅವಸರ ಮಾಡಿದಲ್ಲಿ ದೋಣಿಯು ಮಗುಚಬಹುದು.

ಮರಕಾಲನಿಗೆ ಉತ್ಸಾಹಬರುವಂತೆ ರಾಮಣ್ಣ ಮಾತನಾಡುತ್ತಿದ್ದ. "ಇಷ್ಟೇ ದೂರ, ಇಷ್ಟೇ ಬಯಲಾದರೆ ಹೇಗೂ ಹಿಂದಕ್ಕೆ ಹೋಗಬಹುದು. ಆದರೆ ನಾನೆನ್ನುತ್ತೇನೆ, ನೀನು ಮನುಷ್ಯನಲ್ಲ. ನೀನಾದ್ದಕ್ಕೆ ತೊಳೆಯನ್ನು ತೆಗೆದೆ. ನನ್ನ ಕೈಯಿಂದ ತೊಳೆಯೇ ತೇಲಿ ಹೋಗುತ್ತಿತ್ತು" ಎಂದು ಮಾತನಾಡುತ್ತಿರುವಾಗಲೇ ಗಾಳಿಯ ಆವಾಂತರ ತೊಡಗಿತು. "ಬಂತೇ, ತಿರುಗಿ ಈ ಶನಿ ಮಳೆ'' ಎಂದನು ಮರಕಾಲ. ಅದರ ಅಬ್ಬರದಲ್ಲಿ ಇಬ್ಬರೂ ತೊಯ್ದು, ಚಳಿಯಿಂದ ನಡುಗತೊಡಗಿದರು. ದೂರದ ದಂಡೆಯಲ್ಲಿ— ರಾಧಾಕೃಷ್ಣ 'ಎಂದು ಈ ಅರಿಷ್ಟದ ಮಳೆ ಬರುವುದು ನಿಂತೀತೋ' ಎಂದು ಕಾದಂತೆಯೇ, ಇವರೂ ಇಲ್ಲಿ ಜಪ ಮಾಡುತ್ತಿದ್ದಾರೆ.

ಮರಕಾಲನಿಗೆ ತಾಳ್ಮೆಗೆಟ್ಟಿತು. ಎಷ್ಟು ಹೊತ್ತೆಂದು ಕಾದು ಕುಳಿತಿರುವುದು. "ಇದು ಬಿಡುವ ಜಾತಿಯ ಮಳೆಯೇ ಅಲ್ಲ. ಇದನ್ನು ನಂಬಿದರೆ ನಾವು ಇಲ್ಲೇನೆ, ಸಾಯುವ ಋಣವಿದ್ದರೆ ಸಾಯುತ್ತಾರೆ. ಬದುಕುವ ಅದೃಷ್ಟ ಇದ್ದವರು ಬದುಕುತ್ತಾರೆ" ಎಂದು ದೋಣಿಯ ಹಗ್ಗವನ್ನು ಬಿಡಿಸಿದ. ಮರದ ಕೊಂಬೆಗಳನ್ನು ಒಂದೊಂದಾಗಿ ಹಿಡಿದುಕೊಂಡು, ದೋಣಿಯನ್ನು ಮುಂದಕ್ಕೆ ತಳ್ಳಿಕೊಂಡು, ಮಾವಿನ ಮರದ ಈಚೆ ಮಗ್ಗುಲಿಗೆ ಬಂದ. ಈಚೆ ಬಂದರೆ ಮುಂದಕ್ಕೇನು ಕಾಣಿಸುವ ಸ್ಥಿತಿಯೂ ಇರಲಿಲ್ಲ.

"ರಾಮಣ್ಣ, ಇದು ನಿಮ್ಮ ಮನೆಯ ಮುಂದಿನ ಮಾವಿನ ಮರ ಅಲ್ಲವೇನಯ್ಯಾ'' ಎಂದು ಕೇಳಿದ.

"ಹೊಂ.........ಆದರೆ ಮನೆ ಕಾಣಿಸುವುದಿಲ್ಲವಲ್ಲ?'' ಎಂದು ಗಾಬರಿಯಾದ.

"ಕಾಣಲು ಮಳೆ ನಿಲ್ಲುವುದು ಬೇಡವೇ?''

"ಹೌದು........ನಿಲ್ಲಬೇಕು. ಅದರೊಳಗೆ ಏನು ಗತಿಯೋ. ' ಈ ಮರ ಮನೆಯಷ್ಟೇ ಎತ್ತರ. ಅದೂ ಏರಿನಲ್ಲೇ ಇದೆ. ಆದರೆ ಈ ನೀರಿನ ಒಯ್ಲಿಗೆ ಮನೆ ಉಳಿಯಲಿಕ್ಕಿಲ್ಲ. ನನಗೇನೋ ಬರಿಯ ಭ್ರಮೆ. ಅಪ್ಪ ಹೋದನೆಂದೇ ಲೆಕ್ಕ........ಬೇಡಾ ಎಂದೆ. ದುಡ್ಡಿನ ಪಿಶಾಚಿ ಹಿಡಿದಿತ್ತು. ಹೋದದ್ದು ಭಾಗೀರಥಿಯ ಗಂಟು,—ನಮ್ಮ ಅದೃಷ್ಟ ಇದ್ದರೆ ಸಿಗುತ್ತದೆ, ಇಲ್ಲವಾದರೆ ಇಲ್ಲ" ಎಂದು ನಡುಗುವ ಕಂಠದಿಂದ ಅಳತೊಡಗಿದನು. ಅವನ ಕಣ್ಣಿನಲ್ಲಿ ತುಳುಕಿದ ನೀರನ್ನೆಲ್ಲಾ ಮಳೆ ಉಜ್ಜುತ್ತಲೇ ಇತ್ತು. ಮರಕಾಲ ಅವನಿಗೆ ಸಮಾಧಾನ ಹೇಳುವ ಬದಲು, ಬಂದ ಕೆಲಸ ಪೂರೈಸುವ ದಾರಿ ಯೋಚಿಸುತ್ತಿದ್ದಾನೆ.

ಎಷ್ಟು ಸಮಯ ಹೀಗೆ ಕಳೆದಾರು? ಅದೃಷ್ಟವಶಾತ್ ಗಾಳಿಯ ಜೋರು ಕಡಮೆಯಾಗದಿದ್ದರೂ, ಜಡಿಮಳೆಯು ಹನಿ ಮಳೆಯಾಯಿತು.

"ಹೀಗೆಯೇ ಗಾಳಿ ಬಂದರೆ, ನೀರು ಒಂವಕ್ಕೆರಡು ಏರುತ್ತದೆ. ನಾವು ಬೇಗ ಮನೆಗೆ ಹೊರಡಬೇಕು" ಎಂದನು ಮರಕಾಲ. ಆತನ ದೃಷ್ಟಿಯು ತೆಂಕಿಗೆ ನಾಟಿತ್ತು. ಮಳೆ ಕಡಿಮೆಯಾಗಿ ಹತ್ತು ಗಜ ದೂರದಲ್ಲಿದ್ದ ಅವರ ಮನೆಯ ಮಾಡು ಕಾಣಿಸಿತು. ಇಬ್ಬರಲ್ಲೂ ಒಮ್ಮೆ ಉತ್ಸಾಹ ತಲೆದೋರಿತು. "ಗಟ್ಟಿ ಹಿಡಿದುಕೋ ರಾಮಣ್ಣ" ಎಂದು ಮರಕಾಲ ರಾವುಗೈಯಿಂದ ಆ ಹುಚ್ಚು ಹೊಳೆಯನ್ನು, ತೊಳೆಯಿಂದ ಮರ್ದಿಸತೊಡಗಿದನು. ದೋಣಿ ಅಂಬಿನಂತೆ ಮನೆಯ ಹುಲ್ಲಿನ ಚಾವಣಿಗೆ ಹೋಗಿ ಬಡಿಯಿತು. 'ಹಿಡೀ, ಹಿಡೀ' ಎಂದು ಇಬ್ಬರೂ ಕೂಗಿದರು. ಹೇಗೋ, ಹೇಗೋ, ಮಾಡನ್ನು ಬಾಚಿ ಎಳೆದರು. ಮಹಡಿಯು, ನೀರಿನ ಮೇಲೆ ಕಾಣಿಸುತಿತ್ತು. ದೋಣಿಯನ್ನು ಜಾಗ್ರತೆಯಿಂದ ಕಿಟಕಿಯೊಂದರ ಸರಳಿಗೆ ಕಟ್ಟಿದರು. ರಾಮಣ್ಣ "ಅಪ್ಪಾ, ಅಪ್ಪಾ" ಎಂದು ಕೂಗಿಕೊಂಡ. ಆ ಗದ್ದಲಕ್ಕೆ ಅದು ಯಾರಿಗೆ ಕೇಳಿಸಬೇಕು? ತಂದೆ ಯಾವ ಮೂಲೆಯಲ್ಲಿದ್ದಾನೋ?

ಇಬ್ಬರೂ ಕಪಿಗಳಂತೆ ಮಾಡು ಹತ್ತಿದರು. ಮಾಡಿನ ಹುಲ್ಲನ್ನು ತೂತು ಮಾಡಿ, ಬಿದಿರ ಎಳೆಗಳನ್ನು ಹಿಗ್ಗಿಸಿ, ಮಹಡಿಯೊಳಕ್ಕೆ ಹಾರಿದರು. ಒಳಗಡೆ ಮುದಿ ಸುಬ್ಬ ಪೂಜಾರಿ ಸಾವುಬಡಿದ ಮುಖದಿಂದ ಕೂತಿದ್ದಾನೆ. ತೆಂಕಣದ ಕಿಟಕಿಯನ್ನು ತೆರೆದು, ನದಿಯ ನೀರನ್ನು ನೋಡುತ್ತಿದ್ದಾನೆ.

ನಡುವಿಗೆ, ನಾಲ್ಕಾರು ಬಂಜೆ ತೆಂಗಿನ ಕಾಯಿಗಳನ್ನು ಕಟ್ಟಿ ಕೊಂಡಿದ್ದ. ಜತೆಗೆ ಒಂದು ಅರಿವೆಯ ದಟ್ಟಿಯೂ ಇತ್ತು. ಕೈಯಲ್ಲಿಯೂ ಒಂದು ಒಂದು ಕಿರಿಯ ಗಂಟು. ಅಲ್ಲಿ ಕುಳಿತು ಜಲ ಪ್ರಯಾಣದ ತಯಾರಿ ನಡೆಯಿಸಿದ್ದ.

ಮಗನ ಮುಖವನ್ನು ಕಾಣುತ್ತಲೇ ಸುಬ್ಬ, "ಹೇಗೆ ಬಂದಿರಿ? ನಾನು ಇನ್ನು ಒಂದು ಗಳಿಗೆ ಹೆಚ್ಚು ಕಡಿಮೆಯಾದರೆ ನೀರನ್ನು ಹಾರಿ ಹೇಗಾದರೂ ತೇಲಿಕೊಂಡು ಹೋಗುತ್ತೇನೆ'' ಎಂದು ಮಾಡಿದ್ದೆ.

"ನಿಮಗೇನು? ನಾನು ಹೇಳಿದರೆ ತಾಗುವುದಿಲ್ಲ. ಮನೆ ಇಷ್ಟು ಹೊತ್ತು ನಿಂತದ್ದೇ ಆಶ್ಚರ್ಯ. ಮಣ್ಣಿನ ಗೋಡೆಯಲ್ಲವೇ? ಮನೆ ಬೀಳುತ್ತಿದ್ದರೆ ಇಲ್ಲಿಯೇ ಆಗುತ್ತಿತ್ತು; ಬನ್ನಿ ಹೋಗುವ ದೋಣಿಯನ್ನು ತಂದಿದ್ದೇವೆ'' ಎಂದ. "ದೋಣಿಯೇ" ಎಂದು ಆತ ಜಿಗಿದು ಹಾರಿದ. ಎಲ್ಲರೂ ತಿರುಗಿ ಮಾಡನ್ನೇರಿದರು. ತಂದೆಯ ಸೊಂಟದ ಬಂಜೆಕಾಯಿಗಳನ್ನು ಕಂಡು ಮಗ, "ಆ ಬಂಜೆಕಾಯಿ ಬಿಡಿಸಬಾರದೆ? ಮಾಡಿನ ತೂತಿನಿಂದ ನೀವು ಬರುವುದು ಹೇಗೆ?'' ಎಂದ.

ಮರಕಾಲ "ಅದನ್ನು ಬಿಡಿಸಲಿ, ಆದರೆ ಬಿಟ್ಟುಬರುವುದು ಬೇಡ" ಎಂದ.

"ಅಪ್ಪಾ, ಆ ಕೈಗಂಟು ಇಲ್ಲಿಕೊಡಿ''ಎಂದ.

"ಬೇಡ, ಇರಲಿ ನನ್ನ ಹತ್ತಿರ'' ಎಂದನು ಆ ಮುದುಕ.

"ಎಲೆ ಅಡಿಕೆ ಚೀಲ ಪೂಜಾರಿಗಳ ಕೈತಪ್ಪಬಾರದಲ್ಲವೇ?" ಎಂದನು ಮರಕಾಲ.

ಎಲ್ಲರೂ ಮಾಡನ್ನು ಏರಿದರು. ತಿರುಗಿ ದೋಣಿಯನ್ನು ಸೇರಿದರು. ಮಳೆ ಪೂರ್ಣವಾಗಿ ಹೋಗಿರಲಿಲ್ಲ. ಆದರೆ ಬರಿಯ ಜಿನುಗು ಮಳೆ.

"ಪೂಜಾರರೇ, ನಿಮ್ಮ ಮನೆ ಈ ತನಕ ಉಳಿದದ್ದೇ ನಿಮ್ಮ ಅದೃಷ್ಟ'' ಎಂದುಕೊಂಡು ಮರಕಾಲ ಅವರಿಬ್ಬರನ್ನೂ ಕುಳ್ಳಿರಿಸಿಕೊಂಡು, ದೋಣಿಯನ್ನು ಎದುರು ನೀರಿಗೆ ಹೊಡೆದ. ಎಷ್ಟು ರಟ್ಟೆ ಬಡಿದರೂ, ಅಂಗುಲ ದೂರ ಹೋಗುವುದೂ ಕಷ್ಟವಾಗಿತ್ತು. ಅಂತು ಮಾವಿನ ಮರಗಳನ್ನು ಸೇರಿದರು. ಅವನ್ನು ಹಿಡಿದು ಅವನೆ ಸುತ್ತುವರಿದು, ಹೊರಟ ದಂಡೆಗೆ ಮುಖ ಮಾಡಿ ನಿಲ್ಲಿಸಿಕೊಂಡ. "ರಾಮಣ್ಣ, ಇನ್ನು ಹೆದರಿಕೆ ಇಲ್ಲ. ತೊಳೆಯ ಕೆಲ

ಸವಿಲ್ಲ. ನಾನು ಚುಕ್ಕಾಣಿ ಹಿಡಿಯುತ್ತೇನೆ. ಒಯ್ಲಿಲಿಗೆ ದೋಣಿಬಿಟ್ಟು ಮೆಲ್ಲಗೆ ಬದಿಗೆ ಬರುವ. ಕೆಳಗಿಂದ ಮರಮಟ್ಟು ತಡೆದರೆ ಮಾತ್ರ ಹೆದರಿಕೆ. ನಿನಗೆ ತಿಳಿದಿದ್ದರೆ ಬಯಲಿನ ಅಂದಾಜು ಹೇಳು'' ಎನ್ನುತ್ತಲೇ ಆತ ಅಲ್ಲಿನ ಬಯಲಿನ ನಕಾಶೆಯನ್ನು ಬಾಯ್ದೆರೆಯಿಂದ ಹೇಳಿದ.

ಮರಕಾಲನಿಗೆ ಕುಳಿತು ಬೇಸರವಾಗಿ "ಪೂಜಾರರೇ, ಒಂದು ವೀಳೆಯ ಕೊಡಿ ನೋಡುವಾ, ಹಾಗೆಯೇ ಒಂದು ಹೊಗೆಸೊಪ್ಪಿನ ಚೂರು'' ಎಂದು ಕೇಳಿದ.

"ಇದು ಎಲೆ ಅಡಿಕೆ ಸಂಚಿ ಅಲ್ಲ ಮರುಳೇ.''

"ಓ ಗೊತ್ತಾಯಿತು. ಪವನಿನ ಗಂಟು. ನಮ ಪಾಲು ಉಂಟಲ್ಲ ನನಗೆ'' ಎಂದನು ನಗುತ್ತ ಮರಕಾಲ.

"ಹೌದೌದು" ಎಂದು ಉಭಯ ಸಂಕಟದಿಂದ ಪೂಜಾರಿ ಹೇಳಿದ.

ಗಾಳಿಯ ಬಿಡುವಿಗಾಗಿ ಕಾದರೂ, ಗಾಳಿ ನಿಂತರೆ ಮಳೆ ನಿಲ್ಲದು, ಮಳೆ ನಿಂತರೆ ಗಾಳಿ ನಿಲ್ಲದು. "ರಾಮಣ್ಣಾ ಏನೂ ಆಗಲಿ, ಹೋಗಿ ಬಿಡುವ. ಹೊತ್ತಿನ ಗೊತ್ತೂ ಆಗುವುದಿಲ್ಲ ಹೀಗೆ ಕುಳಿತು ಪ್ರಯೋಜನವಿಲ್ಲ'' ಎನ್ನುವಾಗಲೇ ದೆವ್ವದಂತಹ ಕಲ್ಲೋಲವಾಯಿತು. ಮಾವಿನ ಮರಕ್ಕೂ, ತೆಂಕಣದ ನೀರಿನ ತೆರೆಗಳು ಬಡಿದುವು. ಏನು ಏನೆಂದು ಯೋಚಿಸುತ್ತಿರುವಾಗಲೇ, ಪಡುವಣ ಪ್ರವಾಹದಲ್ಲಿ ಹುಲ್ಲಿನ ರಾಶಿ ತೇಲುವುದು ಕಂಡಿತು. "ಅಪ್ಪಾ ಕಂಡೆಯಾ? ಮನೆ ಬಿತ್ತೆಂದು ಕಾಣುತ್ತದೆ. ಮಾಡು ತೇಲುತ್ತಿದೆಯಲ್ಲ" ಎಂದ ರಾಮಣ್ಣ. "ನಾವು ಬರುವುದು ಒಂದು ಗಳಿಗೆ ಹೆಚ್ಚು ಕಡಿಮೆಯಾಗಿದ್ದರೆ ಎಲ್ಲವೂ ವ್ಯರ್ಥವಾಗುತ್ತಿತ್ತು. ಮುಖ್ಯ.. ದೇವರು ಕಾಪಾಡಿದ್ದು'' ಎಂದ ಮರಕಾಲ.

"ಏನು-ನಾನು ಸಾಯುತ್ತಿದ್ದೆನೆಂದೇ? ಬಂಜೆಕಾಯಿ ಕಟ್ಟಿಕೊಂಡಿದ್ದೆ. ಈಸಿಯೇ ಬಿಡುತ್ತಿದ್ದೆ. ಅಷ್ಟು ತ್ರಾಣ ಸಾಕು. ಇಪ್ಪತ್ತಾಳು ಎತ್ತರದ ತಾಳೆಯ ಮರವನ್ನು ಏರಿ ಮೂರ್ತೆ ಕಟ್ಟುವುದಿಲ್ಲವೇನೇ ನಾನು" ಎಂದು ಮುದುಕ ಧಿಮಾಕಿನಿಂದ ನುಡಿದ.

"ಹೌದು, ಹಾಗೆಯೇ ಈಸಿ ಈಸಿ, ಉಳ್ಳಾಲದಲ್ಲಿ ನಂತರ ಮನೆಗೆ ಹೋಗಿ ಸೇರುತ್ತಿದ್ದಿರಿ" ಎಂದು ನಕ್ಕು ಹೇಳಿದ ಮರಕಾಲ.

ಮಾತಿಗೆ ಇದು ಹೊತ್ತು ಅಲ್ಲವೆಂದು, ಆತ ಅವರಿಬ್ಬರನ್ನು ಕುರಿತು "ಇಬ್ಬರೂ ಗಟ್ಟಿಯಾಗಿ ಬಾಣೆಯನ್ನು ಹಿಡಿದುಕೊಳ್ಳಿ. ಗಾಳಿಗೆ ದೋಣಿ ಹೊಂಗೀತು. ಆದರೂ ಕೈಬಿಡಬೇಡಿ. ದೇವರು ಕಾಪಾಡುತ್ತಾನೆ" ಎಂದು ಗೆಲ್ಲುಗಳ ಕೈಬಿಟ್ಟನು.

ಎಲ್ಲಿಗೆ ಹೋದರೂ ಇನ್ನು ದಡವೇ. ಚುಕ್ಕಾಣಿಯನ್ನು ಹಿಡಿದು ಕುಳಿತ. ದೋಣಿ ವೇಗವಾಗಿ ಪಡು, ಬಡಗಣ ದಿಕ್ಕಿಗೆ ಓಡಿತು.

ಮಳೆ ತಿರುಗಿ ಜೋರಾಯಿತು. ಮುಂದಿನ ದಾರಿ ಕಾಣಿಸದಾಯಿತು. ಹಿಂದೆ ಕುಳಿತ ಮರಕಾಲ ಕಣ್ಣು ಮಿಟುಕಿಸುತ್ತ "ರಾಮಣ್ಣ, ಎದುರಿಗೆ ಏನಾದರೂ ಅಡ್ಡವಾದರೆ ಹೇಳು" ಎಂದು ಎಚ್ಚರಿಸಿದ. ಬರಿಯ ಹತ್ತು ನಿಮಿಷದೊಳಗಾಗಿ ದೋಣಿ ಒಂದು ತೆಂಗಿನ ತೋಟವನ್ನು ಹೋಗಿ ಸೇರಿತು. ಕುಳಿತವರು ಎದ್ದು ನಿಂತು, ಮರದ ಸೋಗೆಗಳನ್ನು ಹಿಡಿದು ಕೊಂಡರು. ಹಾಗೆ ಗರಿಗಳನ್ನು ಎಳೆಯುತ್ತ, ತೋಟವನ್ನು ಪಾರಾಗುತ್ತಲೇ ಇನ್ನೂ ಒಂದು ನೀರಿನ ಹಾಳೆ ಕಾಣಿಸಿತು. ತಿರುಗಿ ಮುಂದುವರಿದರು. ದೋಣಿ ವೇಗವಾಗಿ ಹೋಗಿ, ಒಂದು ಕೇದಗೆಯ ಹಳುವನ್ನು ಹೊಕ್ಕಿತು. ಅದರ ಗರಗಸದ ಎಲೆಗಳು ಮುದಿ ಪೂಜಾರಿಯ ಮೈಯನ್ನು ಸವರಿ ರಕ್ತ ಬರಿಸಿದುವು. "ಏ ಮಹಾರಾಯ, ಎಲ್ಲಿ ನುಗ್ಗಿಸಿದೆ ನಮ್ಮನ್ನು" ಎಂದನು ಆ ಮುದುಕ. ಮರಕಾಲ ದೋಣಿಯನ್ನು ಹಿಂದಕ್ಕೆ ತಳ್ಳಿ, ಹಳುವನ್ನು ತಪ್ಪಿಸಿ, ಅದು ಇರುವ ಗುಡ್ಡದ ಕಡೆಗೆ ಬಂದು ಸೇರಿದ.

ಒಮ್ಮೆ ನೆಲ ಸೇರಿದರು. ಉಸಿರು, ಉಸಿರಿಗೂ, 'ದೇವರು ಕಾಪಾಡಿದನಪ್ಪ' ಎಂದುಕೊಂಡರು. ಸಮೀಪದ ಯಾವುದೋ ಗಿಡಕ್ಕೆ ದೋಣಿಯನ್ನು ಬಿಗಿದು, ಒಂದು ಸಾರಿಗೆ ಗುಡಿ ಗೂಡಾರವನ್ನು ಸೇರುವ' ಎಂದು, ಗುಡ್ಡದ ಕಡೆಯಿಂದ ಮೇಲೆ ಏರಿದರು. ಅಲ್ಲಿಂದ ಆ ಗಾಳಿ ಮಳೆಗೇನೇ, ನಡೆದು ಬಂದರು. ಪಾಪ, ನದಿ ದಂಡೆಯಲ್ಲಿ ಕಾದು ಬೇಸತ್ತ ರಾಧಾಕೃಷ್ಣ ತುಸುವೊದಲು ಮನೆಯನ್ನು ಸೇರಿದ್ದನು. ಮರಕಾಲ ಮನಗೆ ಬರುವಾಗ ಸತ್ಯ ಹೊರಗಿದ್ದಳು; "ನೀನು ಬಂದೆಯೋ ಪುಣ್ಯಾತ್ಮ. ನಿನ್ನನ್ನು ಯಾಕೆ ನಾನು ಕಳುಹಿಸಿದೆ ಎಂದು ಅವರು ಅಳುವುದೊಂದೇ ಬಾಕಿ. ಅಷ್ಟೊಂದು ಹೆದರಿ ಹೋಗಿದ್ದಾರೆ" ಎಂದಳು. ರಾಮಣ್ಣನು "ಮಾಸ್ಟರರೆಲ್ಲಿ ಹಾಗಾದರೆ?" ಎಂದು ಕೇಳಿದನು.

"ಅವರೀಗಷ್ಟೆ ಒಂದು ತುತ್ತು ಉಂಡು ತಿರುಗಿ ಓಡಿದರು"

"ಅಪ್ಪಾ, ನಾನು ಮಾಸ್ಟರರನ್ನು ಕರೆದುಕೊಂಡು ಬರುತ್ತೇನೆ. ಅವರ ದಾಕ್ಷಿಣ್ಯಕ್ಕೆ ಅಲ್ಲವಾದರೆ ಈ ಬಿರುಮ ಹೊರಡುತ್ತಿರಲಿಲ್ಲ. ಅವನಿಗೇನಾದರೂ ಗಡದ್ದು ಇನಾಮು ಕೊಡಬೇಕು ಎಂದು ಹೇಳಿದ್ದಾರೆ ಅವರು"

"ಬಿರುಮ, ಇವತ್ತು ಏನು ಮಾಡುವ ಹಾಗೂ ಇಲ್ಲ. ಮುಂದಿನ ಠಾವುಠಿಕಾಣಿಯನ್ನು ಕಾಣಬೇಕಲ್ಲ. ನಾಳಿನ ಸಾಯಂಕಾಲ ನಮ್ಮ ರಾಮಣ್ಣ ನಿನ್ನನ್ನು ಅಂಗಡಿಗೆ ಕರೆದುಕೊಂಡು ಹೋಗಿ, ಕಳ್ಳಿನಲ್ಲಿ ಸ್ನಾನ ಮಾಡಿಸುತ್ತಾನೆ ಆಯಿತೋ?'' ಎಂದ ಮುದಿ ಪೂಜಾರಿ.

ಮರಕಾಲನಿಗೆ ನೆತ್ತಿಗೆ ಏರಿತು ಕೋಪ- "ನೀವು ಕೊಡುವ ಎರಡು ಸೀಸೆ ಹೆಂಡಕ್ಕೆ ಬಂದುದಲ್ಲ ನಾನು. ನಾನು ನಮ್ಮ ಮಾಸ್ತರರ ದಾಕ್ಷಿಣ್ಯಕ್ಕೆ ಬಂದೆ. ನಿಮ್ಮ ಇನಾಮಿಗಲ್ಲ.'' ಎಂದು ಬಿಟ್ಟ.

ತಂದೆ ಮಕ್ಕಳಿಬ್ಬರೂ ಹೊರಟರು. ರಾಮಣ್ಣ ಮುಂದೆ ಹೋದವನು ತಿರುಗಿ ಅವಸರವಾಗಿ ಹಿಂದೆ ಬಂದು, ಮರಕಾಲನ ಕಿವಿಯಲ್ಲಿ "ನಮ್ಮ ಅಪ್ಪನ ಹಣೆಬರಹವೇ ಹಾಗೆ. ನಿನ್ನ ಋಣ ತೀರಿಸುವ ಭಾರ ನನ್ನದು. ನಿನ್ನ ಉಪಕಾರ ಜೀವ ಹೋದರೂ ಮರೆಯಲಿಕ್ಕಿಲ್ಲ ನಾನು" ಎಂದು ನುಡಿದು, ರಾಧಾಕೃಷ್ಣನನ್ನು ಕರೆಯಲು ಹೋದನು.

ಮರಕಾಲ ಅಲ್ಲಿಯೇ ಕುಳಿತು, ಒದ್ದೆ ಪಂಚೆಯನ್ನು ಹಿಂಡಿಕೊಂಡು ಉಸ್ಸೆಂದು ಕುಳಿತ. ಸತ್ಯ, ಒಂದು ಬಟ್ಟಲಿನಷ್ಟು ಗಂಜಿಯನ್ನು ತಂದು ಅವನ ಮುಂದೆ ಇರಿಸಿದಳು. ಬಕಬಕನೆ ಅದನ್ನು ಆತ ಉಂಡನು. ಉಣ್ಣುವಾಗ ಚಳಿಯಲ್ಲಿ ನಡುಗುತ್ತಿದ್ದ ಅವನನ್ನು ಕಂಡು, ಅವಳು- "ಹೋಗು, ಬಚ್ಚಲು ಒಲೆಯಲ್ಲಿ ಬೆಂಕಿಯಿದೆ. ಸ್ವಲ್ಪ ಚಳಿಕಾಯಿಸಿಕೋ" ಎಂದು ತನ್ನ ಮನೆಯ ಕೆಲಸದಲ್ಲಿ ತಲ್ಲೀನಳಾದಳು.

ಅವಳಿಗಂತು ಆ ದಿವಸ ನೆರೆಯ ಉತ್ಪಾತದ ಕತೆಯನ್ನು ಕೇಳಿಯಾವುದು ಮಾಡುವುದಕ್ಕೂ, ಮೈ, ಮನ ನಡುಗುತ್ತಿತ್ತು. ಶ್ಯಾಮ ನೀಲರು ಅವಳಷ್ಟೇ ಬೆಪ್ಪುಗಟ್ಟಿ ಅವಳ ಹಿಂದೆ ಅಲೆದಾಡುತ್ತಿದ್ದರು.

ರಾಮಣ್ಣ, ತಂದೆಯನ್ನು ಬಂಧುಗಳ ಮನೆಗೆ ಹೋಗಲು ಹೇಳಿ, ತಾನು ಮಾಸ್ತರರನ್ನು, ಕರೆತರಲು ಹೊರಟನು.

"ಅಪ್ಪಾ, ನೀನು ದೂಮಣ್ಣನಲ್ಲಿಗೆ ಹೋಗು. ಮನೆಯವರೆಲ್ಲರೂ ಅಲ್ಲಿಯೇ ಇದ್ದಾರೆ. ಮನೆಯ ದನ, ಕೋಣಗಳೆಲ್ಲ ಯಾವ ಉರು ಸೇರಿ ದುವೋ; ಇವತ್ತು ಹುಡುಕುವ ಹಾಗಿಲ್ಲ; ನಾಳೆ ನೋಡುವ" ಎಂದು ಹೇಳಿ ಒಬ್ಬನೇ ಮುಂದುವರಿದನು.

ಅಷ್ಟರಲ್ಲಿ ಸುಬ್ಬ ಪೂಜಾರಿಗೆ ಮನೆಯಲ್ಲಿ ಬಿಟ್ಟು ಬಂದಿದ್ದ ದೇವರ ಡಬ್ಬಿಯ ನೆನಪಾಯಿತು. "ಅಯ್ಯೋ ಮಗು, ದೇವರ ಡಬ್ಬಿಯನ್ನು ಅಲ್ಲೇ ಬಿಟ್ಟು ಬಂದೆನಲ್ಲಾ. ನಾಳೆ ನನ್ನ ದೈವಕ್ಕೆ ಸಿಟ್ಟು ಬಂದರೆ ಏನು ಗತಿ" ಎಂದನು.

"ಹೌದು, ಈಗೇಕೆ ಯೋಚನೆ. ದೇವರದನ್ನೆಲ್ಲ ಅವನೇ ದೋಚಿ ಕೊಂಡು ಹೋಗಿದ್ದಾನೆ. ನಮ್ಮದ್ದನ್ನು ನಮಗೆ ಬಿಟ್ಟರೆ ಸಾಲದೇ?"

ರಾಮಣ್ಣ ಅವನನ್ನು ಬೀಳ್ಕೊಟ್ಟು, ಮಾಸ್ತರರಿಗಾಗಿ ಕೂಗಿ, ಊರೆಲ್ಲ ಸುತ್ತಿದನು. ರಾಧಾಕೃಷ್ಣ ದೋಣಿಯಲ್ಲಿ ಹೋದವರನ್ನು ಕಾಣದೆ, ಎಲ್ಲಿಂದೆಲ್ಲಿಗೆ ಸುತ್ತುತ್ತಲೇ ಇದ್ದನು. ಮುಸ್ಸಂಜೆಯ ಹೊತ್ತಿಗೆ ಇಬ್ಬರೂ ಸಂಧಿಸಿದರು. ರಾಧಾಕೃಷ್ಣನಿಗೆ ದಿನವೆಲ್ಲ, ಅವಭೃತಸ್ನಾನವಾಗಿಯೇ ಇತ್ತು. ಬೆದರಿಕೆಯಿಂದ ಕಪೋಲಗಳು ಬೆವರುತ್ತಲೇ ಇದ್ದುವು. ರಾಮಣ್ಣ ಸಿಕ್ಕಿದ್ದೆಂದರೆ ಹೋದ ಗಂಟು ಸಿಕ್ಕಿದಂತಾಯಿತು. "ಬಿರುಮ ಬಂದನೇ? ನಿನ್ನಪ್ಪ ಸಿಕ್ಕಿದರೇ?'' ಎಂದು ಮೇಲಿಂದ ಮೇಲೆ ಕೇಳಿಯೇ ಕೇಳಿದನು. ಮೇಲಿಂದ ಮೇಲೆ ಅವರ ಸಾಹಸವನ್ನು ಕೇಳಿ, ಸಂತೋಷಪಟ್ಟು "ಒಮ್ಮೆಗೆ ಪಾರಾದೆ. ಇನ್ನು ಮನೆಯನ್ನು ಸೇರಬಹುದು" ಎಂದು ಅವನನ್ನು ಜತೆಗೆ ಕರೆದುಕೊಂಡು ಮನೆಯನ್ನು ಸೇರಿದನು. ಅವನನ್ನು ಕಂಡು ಸತ್ಯಳಿಗೂ ಅಷ್ಟೊಂದು ಸಂತೋಷವಾಯಿತು. "ಸತ್ಯ, ನನಗೆ ರಾತ್ರಿ ಊಟವೂ ಬೇಡ, ಏನೂ ಬೇಡ. ತೀರ ಚಳಿ, ಚಳಿ ಆಗುತ್ತಿದೆ. ಕಂಬಳಿ ಹೊದ್ದು ಸ್ವಸ್ಥ ಮಲಗಿಕೊಳ್ಳುತ್ತೇನೆ'' ಎಂದು ಒಳಕ್ಕೆ ಹೋದ. ಕತ್ತಲಾಯಿತು. ರಾಧಾ ಕೃಷ್ಣನು ತುಂಬ ಆಯಾಸಗೊಂಡಿದ್ದ. ಮೈಯ ಶ್ರಮಕ್ಕಿಂತ ಮನಸ್ಸಿನ ದಣಿವು, ಅತಿಯಾಗಿತ್ತು. ಆದುದರಿಂದ ಆತ ಸತ್ಯಳನ್ನು ಕರೆದು "ನೀನೇ ನಾದರೂ ಮಾಡಿ, ಬಡಿಸಿ ಬಿಡು. ನನ್ನ ಕಾಲು ಸೋತು ಸುಣ್ಣವಾಗಿದೆ. ನನಗೇನೂ ತೋರುವುದಿಲ್ಲ. ಮನಸ್ಸೆಲ್ಲ ಏನೇನೋ ಆಗಿದೆ. ನಾಳೆ ಬೆಳಗ್ಗೆ ಇವರಿಗೆ ಏನಾಗಬೇಕು, ಎಂಬುದನ್ನು ನಾನು ಯೋಚಿಸಬೇಕು. ಎಂದಂದು

ಮಲಗಿಕೊಂಡನು. ಅಷ್ಟರಲ್ಲಿ ಆ ಹೊಲೆಯರ ಹೆಂಗುಸಿನ ನೆನಪಾಯಿತು. "ಅವರಿಗೇನು ಕಳುಹಿಸಿದ್ದೀರಿ? ಹೇಗಿದ್ದಾರೆ ಅವರು? ಏನಾದರೂ ತಿಳಿಯಿತೇ" ಎಂದು ವಿಚಾರಿಸಿದನು. ಉತ್ತರ ಬರುವುದರೊಳಗಾಗಿ, ತಾನೇ ಹೋಗಿ ನೋಡಿ ಬರುವೆನೆಂದು ಹೊರಟನು. ಅಷ್ಟರಲ್ಲಿ ಮಳೆಯ ಆರ್ಭಟಿ ತಿರುಗಿ ತೊಡಗಿತ್ತು. ಸತ್ಯ "ಈಗ ಎಲ್ಲಿಗೆ ಹೋಗುತ್ತೀರಿ, ಕತ್ತಲಾಯಿತು. ಜಿರಾಪತಿ ಮಳೆ ಬರುತ್ತಿದೆ. ಬೆಳಿಗ್ಯೆ ಒಂದು ಸೀರೆ ತುಂಡು, ಚಾಪೆ ಕಳುಹಿಸಿದ್ದೇನೆ. ಎರಡು ಸಾರಿ ಗಂಜಿ ಕಳುಹಿಸಿದ್ದೇನೆ. ಕಾಳಜೀರಿಗೆ, ನಂಜಿನ ಸಾಂಬಾರ ಎಲ್ಲ ಹಾಕಿಕೊಟ್ಟಿದೇನೆ. ಮಕ್ಕಳು ಹೋಗಿ ಕೊಟ್ಟುಬಂದುವು ಏನು ಬೇಕು, ಎಂದು ಕೇಳಿದ್ದಕ್ಕೆ ಏನೂ ಬೇಡ—ಅಂದುವಂತೆ. ಬೆಳಿಗ್ಗೆ ಹೋಗಿ ನೋಡಿದರಾಯಿತು. ನೀವು ಎಷ್ಟೆಂದು ತಿರುಗಾಡುವುದು? ನಿಮಗೂ ಜ್ವರಗಿರ ಬಂದು................"ಎಂದು ಉಪದೇಶಮಾಡಿದಳು. ಆತನು ನಿರುತ್ತರನಾಗಿ, ಹೋಗಿ ಮಲಗಿಕೊಂಡನು. ಸತ್ಯ ತನ್ನ ಕೆಲಸಗಳನ್ನು ಮುಗಿಸಿ, ಮಕ್ಕಳಿಗೆ ಮಲಗಲು ಹೇಳಿ, ಶಾಲೆಯ ಕಡೆಗೆ ಹೋದಳು. ಅಲ್ಲಿದ್ದವರನ್ನು ಉಪಚರಿಸುತ್ತ "ಹೇಗೆ ಮಲಗಿಕೊಳುತ್ತೀರಾ? ಕೊಡುವಾ ಎಂದರೆ ನಾಲ್ಕು ಒಣ ಚಾಪೆಗಳೂ ಇಲ್ಲ" ಎಂದು ಬರಿಯ ಬಾಯ ಉಪಚಾರದಲ್ಲಿ ತನ್ನ ವ್ಯಥೆಯನ್ನು ಮರೆಯಿಸಿ ಮನೆಗೆ ಬಂದಳು. ಅವಳು ಬಂದು ಮಲಗುವಾಗ, ರಾಧಾಕೃಷ್ಣ ಗೊರೆಯುತ್ತಿದ್ದ. "ದೀಪ ಸಣ್ಣಗೇನೇ ಇರಲಿ, ರಾತ್ರಿ ಇಲ್ಲಿಗೂ ನೀರೇರಿ ಬಂದರೆ ಏನು ಗತಿ?" ಎಂದು ದೀಪ ಸಣ್ಣದುಮಾಡಿ ಇಟ್ಟಳು. ಅಲ್ಲಿಂದಲೇ ಮರಕಾಲನನ್ನು ಕೂಗಿ "ಬಿರುಮ, ರಾತ್ರಿ ಎಚ್ಚರವಾದಾಗಲೆಲ್ಲ ಆಚೀಚೆ ನೀರು ಬಂದಿದೆಯೋ ನೋಡಿಕೊಂಡು ಬಾ" ಎಂದು ಹೇಳಿ, ತಾನೂ ಮಲಗಿಕೊಂಡಳು. ಹೊರಗೆ, ಮಲಗಿ ನಿದ್ರೆ ಹೋಗಿದ್ದ ಬಿರುಮನಿಗೆ, ಈ ಮಾತುಗಳು ಎಷ್ಟು ಕೇಳಿಸಿದುವೋ, ಯಾರಿಗೆ ಗೊತ್ತು?

ಮಧ್ಯರಾತ್ರಿ ಆಗುವಾಗ ರಾಧಾಕೃಷ್ಣನಿಗೆ ಎಚ್ಚರವಾಯಿತು. ಅವನ ನಿದ್ರೆ ಸುಖಕರವಾಗಿ ಆಗಿರಲಿಲ್ಲ. ಭೀಕರ ಸ್ವಪ್ನಗಳಿಂದ ತುಂಬಿತ್ತು. ನೆರೆ, ಬಿರುಗಾಳಿ, ಸಿಡಿಲು, ಬೆಂಕಿಯ ಉಪದ್ವ್ಯಾಪಗಳಿಂದ, ಊರಿಂದ ಊರೇ ನಾಶವಾದಂತೆ, ಕಾಣುತ್ತಿತ್ತು. ಗಾಬರಿಯಿಂದ-ಅಯ್ಯೋ, ಅಯ್ಯೊ ಎಂದು ಚೀರಿದನು. ಸತ್ಯ ಗಾಬರಿಯಿಂದ ಎಚ್ಚತ್ತು "ಏನು-ನೀರು ಬಂತೇ"

ಎಂದು ಕೂಗಿ ಕುಳಿತಳು. ಬೆಳಕು ಉರಿಯುತ್ತಿತ್ತು. ಆ ಬೆಳಕಿನಲ್ಲಿ ಸುತ್ತ ಏನೂ ಆಗದ್ದನ್ನು ಕಂಡು "ನೀವು ಕನವರಿಸಿದಿರಾ?"-ಎಂದು ಕೇಳಿದಳು. ತಿರುಗಿ ರಾಧಾಕೃಷ್ಣನಿಗೆ ನಿದ್ರೆಯೇ. ಇನ್ನೆರಡು ತಾಸು ಕಾಲ, ಇದೇ ರೀತಿಯಿಂದ ಸ್ವಪ್ನಗಳು! ನೆರೆಯ ಉಪಟಳ, ಮುಂದಿನ ಬರಗಾಲ ಉಪವಾಸಗಳು ನಿದ್ರೆಯಲ್ಲಿ ಅವನನ್ನು ಕೆಣಕಿದವು. ಇನ್ನೊಮ್ಮೆ ಸರಿಯಾಗಿ ಎಚ್ಚರವಾಯಿತು. ಹೆದರಿಕೆಯಿಂದ—ಸ್ವಪ್ನಗಳಿಗೆ ಅಂಜಿ ಕುಳಿತುಕೊಂಡ. ಗೋಡೆಗೆ ಒರಗಿಕೊಂಡು ಯೋಚಿಸ ತೊಡಗಿದ. ನಾಳಿನ ಗತಿ ಏನು? ಇವರನ್ನು ಸಾಕಲು ಅಕ್ಕಿ ಎಲ್ಲಿಂದ ತರಲಿ? ಮಂಗಳೂರಿಗೆ ಹೋಗಿ, ಈ ಅನಾಹುತದ ಪರಿಯನ್ನು ತಿಳಿಸಿ, ಏನಾದರೂ ಸಹಾಯ ಗಳಿಸಬೇಡವೇ? ಆ ನೆನಪಿನಲ್ಲಿ ಬೇರೊಂದು ನೆನಪೂ ಹುಟ್ಟಿತು. ಮರಕಾಲನ ಮನೆಯಲ್ಲಿ ತಂದು ಹಾಕಿದ ಹೊಲತಿಯರ ಪಾಡಿನ ನೆನಪಾಯಿತು. ಸತ್ಯಳು "ಏನು" ಎಂದು ಅರ್ಧ ತೂಕಡಿಕೆಯಲ್ಲಿಯೇ ಮಾತನಾಡಿದಳು. "ಅವರಿಗೆ ಸಾಯಂಕಾಲ ಗಂಜಿ ಕಳುಹಿದೆ ಎಂದೆಯಾ, ಏನೋ ಹೇಳಿದೆ ನೀನು ಆಗ; ನನಗೆ ನೆನಪಾಗಲೊಲ್ಲದು" ಎಂದ. ಸತ್ಯ "ಸಾಯಂಕಾಲ ಶ್ಯಾಮ ಹೋಗಿ ಗಂಜಿ ಕೊಟ್ಟುಬಂದಿದ್ದ. ಅವನು ಗಂಜಿ ಇರಿಸಿ ಬಂದನಂತೆ, ಅವರು ಮಲಗಿಕೊಂಡಿದ್ದರಂತೆ. ಚೆನ್ನಾಗಿ ನಿದ್ದೆ ಹತ್ತಿರಬೇಕು ಎಂದು ಹೇಳಿದ"ಎಂದಳು. ಆತ"ಯಾಕೋ ನನಗೆ ಅವರದ್ದು ಹೆದರಿಕೆಯಾಗುತ್ತಿದೆ. ಅವರಿಬ್ಬರನ್ನೇ ಅಲ್ಲಿ ಬಿಟ್ಟದ್ದು ತಪ್ಪಾಯಿತು. ಈ ಗಾಳಿ ಮಳೆಗೆ ಆ ಮನೆಯ ಅವಸ್ಥೆ ಏನಾಗಿದೆಯೋ. ಹೋಗಿ ನೋಡಿಕೊಂಡು ಬರಲೇ?" ಎಂದನು.

"ಈಗ"! "ಇನ್ನು ಯಾವಾಗ? ಬೆಳಗ್ಗಿನಿಂದಲೂ ಹೋಗಲಿಲ್ಲ. ಯೋಚನೆಯಿಂದ ನಿದ್ದೆ ಬರುವಂತಿಲ್ಲ. ಟೋರ್ಚು ದೀಪ ಇದ್ದರೆ ಆಗುತ್ತಿತ್ತು. ಲಾಟಾನು ಗಾಳಿಗೆ ನಿಲ್ಲಲಿಕ್ಕಿಲ್ಲ."

"ಇದೆಯಲ್ಲಾ! ಅದರ ಬೆಟರಿ ಹೇಗಿದೆಯೋ, ತೆಗೆಯದೆ ಬಹಳ ದಿವಸವಾಯಿತು." ಎಂದು ಅದನ್ನು ಅರಸಿ ತಂದಳು.

"ಹಾಗಾದರೆ ಹೋಗಿ ಬರುತ್ತೇನೆ."

"ಮರಕಾಲನನ್ನು ಕರೆದುಕೊಂಡು ಹೋಗಿ."

ಮರಕಾಲನಿಗೆ ತೊಂದರೆಯಾದರೂ ಚಿಂತೆ ಇಲ್ಲ ಎಂದು ಅವನನ್ನು ಎಬ್ಬಿಸಿ,ಎಚ್ಚರಿಸಿ, ಆ ಮನೆಯ ಕಡೆಗೆ ಹೋದರು. ಹೋಗಿ ಕದ ತಟ್ಟುವ

ಕಾರಣವೂ ಇದ್ದಿರಲಿಲ್ಲ. ಗಾಳಿಗೆ ಅದು ತೆರೆದೇ ಇತ್ತು. ತುಸು ಆಶ್ಚರ್ಯವಾಯಿತು. ರಾಧಾಕೃಷ್ಣ ಬೆಳಕು ಒಳಗೆ ಹಾಯಿಸಿದ. ಮರಕಾಲ ಒಳಗೆ ಕಾಲಿಟ್ಟು ಬಗ್ಗಿ ನೋಡಿದ. ಒಳಗಡೆ ಕತ್ತಲಲ್ಲಿ ಒಂದು ಹರಕು ಚಾಪೆಯ ಮೇಲೆ ಬಾಣಂತಿ ಮಲಗಿದ್ದಳು. ಮಗು ಕಿರುಚುತಿತ್ತು. ಮುದುಕಿ ಮಾತ್ರ ಅಲ್ಲಿ ಕಾಣಿಸಲಿಲ್ಲ. "ಅರೇ, ಆ ಜಬ್ಬಿ ಎಲ್ಲಿಗೆ ಹೋದಳು?" ಎಂದು ಕೂಗಿದ. ಇಬ್ಬರೂ ಅಲ್ಲಿ ತಟಸ್ಥವಾಗಿ ನಿಂತು, ಮಲಗಿದಾಕೆಯನ್ನು ನೋಡುತ್ತಲೇ ಇದ್ದಾರೆ. ಕೂಗುತ್ತಿರುವ ಕೂಸಿಗಾಗಿ ತುಸುವೂ ಕದಲದ ಆಕೆಯನ್ನು ಕಂಡು, ಅನುಮಾನಿಸಿ, ಮುಖದ ಬಟ್ಟೆಯನ್ನು ಈಚೆ ಎಳೆದರು. ಟೋರ್ಚ್ ಬೆಳಕಿನಲ್ಲಿ ನೋಡುತ್ತಲೇ-ರಾಧಾಕೃಷ್ಣನಿಗೆ ರೋಮಾಂಚನವಾಯಿತು. ಮೈ ಮುಟ್ಟಿ ನೋಡಿದನು. ಅವಳು ಇನ್ನು ಮಾತನಾಡಳು. ಆಕೆಯ ಅವತಾರ ಸಮಾಪ್ತಿಯಾಗಿತ್ತು. ಭೀತಿಗೊಂಡು, ಆಕೆಯ ಅತ್ತೆಯು ಅಲ್ಲಿಂದ ಓಡಿಹೋಗಿರಬೇಕು.

"ಹಾ, ಇದು ಯಾರಿಗೆ ಗೊತ್ತು? ಅಲ್ಲಿಂದ ತಂದು ಇಲ್ಲಿ ಕೊಂದ ಹಾಗಾಯಿತೇ?" ಎಂದನು ಮರಕಾಲ.

"ಸಂಜೆ ಗಂಜಿಯ ಪಾತ್ರೆ ತಂದಿರಿಸುವಾಗ-ಇಬ್ಬರೂ ಮಲಗಿದ್ದರು-ಎಂದು ಶ್ಯಾಮ ಹೇಳಿದನಂತೆ" ಎಂದು ಆಚೀಚೆ ರಾಧಾಕೃಷ್ಣ ನೋಡಿದನು. ಗಂಜಿಯ ಪಾತ್ರೆ ಹಾಗೇನೇ ಇತ್ತು. ಅದನ್ನು ಮುಟ್ಟಿದವರಿಲ್ಲ. ಅಲ್ಲಿ ಈಗ ಉಳಿದವು ಎರಡು ಜೀವಗಳು ಮಾತ್ರ. ಸ್ವರ ಆಡಿಸುತ್ತಿರುವುದೊಂದು; ಅನಂತ ಮೌನವನ್ನು ಸೇರಿದುದು ಇನ್ನೊಂದು.

"ಹಾಗಾದರೆ ಮುದುಕಿ ಏನಾದಳು? ಇವಳು ತನ್ನ ಸೊಸೆ, ಅವಳ ಗಂಡ ಎಲ್ಲಿಯೋ ಗಟ್ಟದಲ್ಲಿದಾನೆ ಎಂದ ಹಾಗಿದೆಯಲ್ಲ."

"ಶವ ತೆಗೆಯ ಬೇಕಲ್ಲ? ಅದಕ್ಕೆ ನಂಟರನ್ನು ಅರಸಿಕೊಂಡು ಹೋಗಿರಬೇಕು. ಈ ನೆರೆಯ ಗದ್ದಲದಲ್ಲಿ ಯಾರಾದರೂ ಸಿಕ್ಕಿದರೋ, ಇಲ್ಲವೋ. ಅಥವಾ ಈ ಕತ್ತಲಿಲ್ಲ ಎಲ್ಲಿಗೋ ಹೋಗಿ, ಏನು ಆಯಿತೋ" ಎಂದನು ಮರಕಾಲ.

ರಾಧಾಕೃಷ್ಣನ ಮುಖ ಬೆವರಿಬಿಟ್ಟಿತು. ಒಂದೇ ಸವನೆ ಕಿರುಚುತ್ತಿದ್ದ ಕೂಸನ್ನು ಕಂಡು, ತುಟಿ ತೊನಲಿತು. ಅದರ ಬಳಿಯಲ್ಲಿ ಹೋಗಿ ಕುಳಿತುಕೊಂಡನು. ಅದರ ಹಣೆಯ ಮೇಲೆ ಕೈ ಇರಿಸಿದನು. "ಏನು

ಮಾಡಲಿ." ಎಂದು ಮರಕಾಲನನ್ನು ಕೇಳಿದನು. "ಮರಕಾಲ, ನಾವೀಗ ಏನೂ ಮಾಡುವ ಹಾಗಿಲ್ಲ. ಹೊರಗೆ ಮಳೆ ಬಿಟ್ಟಿದೆ; ಈ ಮಗು ಒಂದನ್ನೇ ಇಲ್ಲಿ ಬಿಡುವುದು ಸರಿಯಲ್ಲ. ಕಾಟು ನಾಯಿಯೋ, ನರಿಗಳೋ ಬಂದು ತಿಂದು ಬಿಟ್ಟರೆ! ನಾನು ಮನೆಗೆ ಎತ್ತಿಕೊಂಡು ಹೋಗುತ್ತೇನೆ. ನಿನಗೆ ಹೆದರಿಕೆ ಆಗದಿದ್ದರೆ ಇಲ್ಲೇ ಕಾವಲಿರು. ಆ ಮುದುಕಿ ಬರುವ ತನಕ ಯಾರಾದರೂ ಒಬ್ಬರು ಇರಬೇಕಲ್ಲ" ಎಂದನು.

ರಾಧಾಕೃಷ್ಣ ಮಗು ಎತ್ತುವುದನ್ನು ಕಂಡು, "ಅದನ್ನು ನೀವು ಹಿಡಿದು ಕೊಳ್ಳುವುದು ಬೇಡ. ನಾನು ತೆಗೆದುಕೊಳ್ಳುತ್ತೇನೆ. ಹೆಣಕ್ಕೆ ಯಾವ ಮಣ್ಣಿಗೆ ಕಾವಲು? ಇಲ್ಲಿ ಒಬ್ಬನೇ ಇರುವುದಕ್ಕೂ ಧೈರ್ಯವಿಲ್ಲ. ಬಾಗಿಲಿಗೆ ಚಿಲುಕ ಇದೆ; ಹಾಕಿ ಹೋಗಿ ಬಿಡುವ."

ಮರಕಾಲನಿಗೆ ಸಾವಿನ ಹೆದರಿಕೆ ಇಲ್ಲ ಎಂಬುದು ಅಂದು ಖಚಿತವಾಗಿತ್ತು. ಆದರೆ ಸತ್ತವರ ಭೀತಿ ಇನ್ನೂ ಇದೆ ಎಂದು ತೋರಿ ಈಗ ನಗು ಬಂದಿತು. ಮರಕಾಲ ಆ ಕೂಸನ್ನು ಎತ್ತಿಕೊಂಡ. ಇಬ್ಬರೂ ತ್ವರೆಯಿಂದ ಮನೆಗೆ ಸಾಗಿದರು. ದಾರಿಯಲ್ಲಿ ರಾಧಾಕೃಷ್ಣನ ಮನದ ತಳಮಳ ಹೇಳ ತೀರದು. ನಡೆದ ದುರ್ಘಟನೆಗಾಗಿ, ನೋವು ಒತ್ತಟ್ಟು, ಮಗುವಿನ ವಿಷಯವಾದ ಚಿಂತೆಯು ಇನ್ನೊತ್ತಟ್ಟು. ಬರಿಯ ದಿನ ತುಂಬಿದ ಆ ಕೂಸನ್ನು, ಎಲ್ಲಿಗೆ ಒಯ್ಯಬೇಕು? ಯಾರು ಆರೈಕೆ ಮಾಡಬೇಕು? ಅದಕ್ಕೆ ತಾನಲ್ಲದೆ, ಇನ್ನಾರು ಗತಿ—ಎಂಬ ಯೋಚನೆ ಬರುತ್ತಲೇ, ಆ, ತಾನು ಸತ್ಯಳೆಂದೇ ತೋರಿ, ಅಳುಕು ಬಂದಿತು. ತುಂಬ ನಿಷ್ಠಾವಂತರ ಮನೆಯಲ್ಲಿ ಹುಟ್ಟಿದವಳು ಅವಳು. ತನ್ನ ಜತೆಗಾರ್ತಿಯಾಗಿ ಇಷ್ಟೊಂದು ತಾಪತ್ರಯ ಅನುಭವಿಸುತ್ತಿದ್ದುದು ಸಾಲದೆನ್ನುವುದಕ್ಕೆ ಈ ಹೊಸ ಹೊರೆಯನ್ನು ಒಪ್ಪಿಸುವುದೇ ಎಂದು ಚಿಂತಿಸುವಂತಾಯಿತು.

ಮರಕಾಲ ಅನ್ನುತ್ತಾನೆ—"ಅಯ್ಯಾ, ನಾಳೆ ನಾಡಿದು ಹುಡುಕಿ ಎಲ್ಲಿಯಾದರೂ ಮಕ್ಕಳಿಲ್ಲದ ಹೊಲೆಯರಿಗೆ ಕೊಟ್ಟು ಬಿಡುವ. ಒಂದೆರಡು ದಿವಸ, ಬಾಯಿಗೆ ಬತ್ತಿಯ ಹಾಲು ಉಣಿಸಬೇಕಾದೀತು. ಕೆಲಸ ಕಷ್ಟವಿದೆ. ಆದರೆ ನೀವು ಬೇಕೆಂತಲೇ ಸುತ್ತಿಕೊಂಡ ಆವಾಂತರ ಇದು. ಯಾರೇನು ಮಾಡುವುದು" ಎಂದನು.

"ಮರಕಾಲ, ಇದನ್ನೆಲ್ಲ ತಾಪತ್ರಯ ಎಂದು ತಿಳಿಯಬಾರದು, ತಿಳಿದು ಮಾಡಬಾರದು. ಏನು ಮಾಡುವುದಿದ್ದರೂ, ಅದನ್ನು ಸಂತೋಷ ದಿಂದ ಮಾಡಬೇಕು. ಯಾರು ಯಾರಿಗೆ, ಯಾವ ಯಾವ ಗಳಿಗೆಗೆ, ಏನೇನು ಕಷ್ಟ ಬಂದೀತು--ಎಂದು ಹೇಳುವುದು ಹೇಗೆ? ನಾಳೆ ನಾನೂ, ನೀನು ಸುದ್ದಿ ಇಲ್ಲದೆ ಕಣ್ಣು ಮುಚ್ಚಬಾರದೆಂದು ಇದೆಯೋ?"

"ಹೌದು ಒಡೆಯ. ಸಾವು ಮಾತ್ರ ಯಾರಿಗೂ ತಪ್ಪಿದ್ದಲ್ಲ. ಅದಕ್ಕೆ ಅಲ್ಲವೆ—ಆ ಮಳೆ ಗಾಳಿಯಲ್ಲಿ, ಸುಬ್ಬ ಪೂಜಾರಿಯನ್ನು ತರಲಿಕ್ಕೆ ಹೋದದ್ದು. ಅಷ್ಟೆಲ್ಲಾ ಮಾಡಿದ್ದಕ್ಕೆ ಅಯ್ಯಾ, ಪೂಜಾರಿ ಕೊಡುವ. ಇನಾಮು ಗೊತ್ತೇ? ನಾಳೆ ಒಂದಿಷ್ಟು ಕಳ್ಳಿನ ನೀರು ಕುಡಿಸುತ್ತಾನಂತೆ. ಈ ಹೊಲತಿ ಸಾಯುವ ಬದಲು, ಅವನಂಥವರು ಸತ್ತರೆ ಊರಿಗೆ ಸುಖ"

"ಎಂಥ ಮಾತನಾಡುತ್ತೀ ಮರಕಾಲ. ಯಾರು ಸತ್ತರೆ ಯಾರಿಗೇನು ಲಾಭ? ಜನ ಉಳಿಯಬೇಕು, ಸುಖವಾಗಿರಬೇಕು............ಬಿಡು ಆ ಮಾತು. ಇನ್ನು ಬೆಳಗಾಗಲಿಕ್ಕೆ ಎಂದೆರಡು ಜಾವ ಇದೆಯೋ ಏನೋ. ಬೆಳಗಾಗುತ್ತಲೇ, ಆ ಮುದುಕಿ ಎಲ್ಲಿ ಹೋದಳೆಂದು ವಿಚಾರಿಸು. ಅವಳು ಬರಲಿ, ಬಾರದೇ ಇರಲಿ—ಆ ಹೆಣಕ್ಕೊಂದು ಗತಿ ಕಾಣಿಸಬೇಕಲ್ಲಾ?" ಅಷ್ಟರಲ್ಲಿ ಮನೆ ಬಂದಿತು. ರಾಧಾಕೃಷ್ಣ, ಕದ ತಟ್ಟಿದನು. ಮಗುವನ್ನು ಆತನ ಕೈಗೆ ಕೊಡುವಾಗಲೂ, ತಾನೇ ಅದನ್ನು ಎತ್ತುವಾಗಲೂ, ಮರ ಕಾಲನು ತುಟಿಕಚ್ಚಿಕೊಂಡಿದ್ದ. ಆತನ ಅಂತರಂಗದಲ್ಲಿ ಅವನಿಗೆ 'ಇವರು ಯಾವ ಜಾತಿಯ ಬ್ರಾಹ್ಮಣರೋ, ಇವರ ದೋಸ್ತಿ ಮಾಡಿ ತನಗೂ ಪ್ರಾರಬ್ಧ ಬಂದಿತು." ಎಂದು ಅನಿಸುತ್ತಿತ್ತು.

ಬಾಗಿಲು ತೆರೆದ ಸತ್ಯ, ರಾಧಾಕೃಷ್ಣನ ಕೈಯ ಕೂಸನ್ನು ಕಾಣು ತ್ತಲೇ "ಏನಿದು, ಏನಾಯಿತು" ಎಂದು ಗಾಬರಿಯಿಂದ ಕೇಳಿದಳು.

"ನಾವು ಯೋಚಿಸಿದ್ದೊಂದು, ಆದುದು ಇನ್ನೊಂದು. ಶ್ಯಾಮ ನಿನ್ನೆ ಸಂಜೆ ಇಬ್ಬರನ್ನು ನೋಡಿದ್ದೇ ಸುಳ್ಳಾಗಿರಬೇಕು. ಅವನು ಇಟ್ಟ ಗಂಜಿಯ ಪಾತ್ರೆ ಹಾಗೆಯೇ ಇದೆ. ಈ ಮಗುವಿನ ತಾಯಿ ಸತ್ತು ಹೋಗಿ ದ್ದಾಳೆ. ಅತ್ತೆ ಅಲ್ಲಿಂದ ಓಡಿದ್ದಾಳೆ; ಇದನ್ನು ತೆಗೆದುಕೊಂಡು ಬಂದೆ. ನೀನು ಏನು ಅನ್ನುತ್ತೀಯೋ ನನಗೆ ತಿಳಿಯದು'' ಎಂದು ದನಿಯನ್ನು ಸಣ್ಣದು ಮಾಡಿ ಹೇಳಿದನು. ನಿಜಕ್ಕೂ ತಂದೆಯು ಮಡಿದ ಆ ದಿನ,

ಅವನ ಮನಸ್ಸಿನಲ್ಲಿ ಉಂಟಾದ ಬೇಸರದ ನಾಲ್ಕು ಪಾಲು ನೋವು, ಈಗ ಉಂಟಾಗಿದೆ.

ಅವನ ಮುಖವನ್ನೇ ಸತ್ಯ ನೋಡಿದಳು. ಆ ಮುಖದ ಇಂಗಿತವನ್ನು ಕ್ಷಣದಲ್ಲೇ ಅರಿತಳು. "ನಿಮಗೇಕೆ ಬೇಸರ? ನಾನು ಏನಾದರೂ ಅಂದೇನು ಎಂದೇ! ನನಗೂ ಏನೆಂದು ದಾರಿ ತೋರುವುದಿಲ್ಲ. ಆದರೆ ಆಪತ್ತು ಬಂದಾಗ ಹೊಲೆಯರೂ, ಬ್ರಾಹ್ಮಣರೂ ಎಲ್ಲ ಒಂದೇ. ಜೀವ ಜೀವವೇ, ಬದುಕು ಬದುಕೇ" ಹೀಗೆಂದು ಒಂದು ಮೂಲೆಯಲ್ಲಿ ಚಾಪೆ ಹರಡಿ, ಬಟ್ಟೆಹಾಸಿ, ಮಗುವನ್ನು ತಾನೇ ಎತ್ತಿಕೊಂಡು ಹೋಗಿ ಮಲಗಿಸಿದಳು. ಆ ಮಗುವಿನ ಮೇಲೆ ಒಂದು ಅರಿವೆಯನ್ನು ಹೊದಿಸಿದಳು. "ಎಲ್ಲ ಗಡಿಬಿಡಿ ಮುಗಿಯತ್ತಲೇ, ಯಾರಿಗಾದರೂ ಕರೆದುಕೊಡುವ. ಆ ಮೇಲೆ ಮನೆಗೆ ಶುದ್ಧಗೋಮಯ ಮಾಡಿ, ಪಂಚಗವ್ಯ ಹಾಕಿಸಿ........" ಎಂದಳು. ರಾಧಾಕೃಷ್ಣನ ಮನಶ್ಶಾಂತಿ ಕುಲುಕಿಹೋಯಿತು. ಆಕೆಯ ಬಾಯಿಂದ ಬಂದ ಈ ಕೊನೆಯ ಮಾತುಗಳು ಅವನನ್ನು ಯೋಚನೆಗೆ ಈಡುಮಾಡಿದುವು. "ಆಪದ್ಧರ್ಮ ಎಂದಷ್ಟೆ ಸತ್ಯ ನನ್ನ ಕೃತಿಯನ್ನು ಒಪ್ಪಿರಬೇಕು" ಎಂದುಕೊಂಡ. ಸತ್ಯ ಹೋಗಿ ಮಲಗಿದಳು. ಈತ ಗೋಡೆಗೆ ಒರಗಿ ಅಲ್ಲಿಂದಲೇ ತೂಕಡಿಸತೊಡಗಿದ. ನಡುನಡುವೆ ಕೂಸು ಅಳುತಿತ್ತು. ಅದಕ್ಕೂ ತ್ರಾಣ ಸಾಲದೆ ಶಾಂತವಾಯಿತು. ಬೆಳಕು ಹರಿಯುವ ತನಕ ಯಾರೂ ಏನೂ ಮಾಡುವಂತಿರಲಿಲ್ಲ. ರಾಧಾಕೃಷ್ಣನಿಗೆ ತಿರುಗಿ ಗಾಢವಾದ ನಿದ್ರೆ. ಆ ನಿದ್ರೆಯಲ್ಲಿ ಇನ್ನು ಹೆಚ್ಚಿನದಾದ ಭೀಕರ ಸ್ವಪ್ನಗಳು.

ಬೆಳಕು ಹರಿಯಿತು. ಹೊರಗೆ ಮಳೆಯೂ ಬಿಟ್ಟಿತ್ತು. ಮನೆಯಲ್ಲಿ ಯಾರಿಗೂ ಎಚ್ಚರವಾಗಿರಲಿಲ್ಲ. ಆದರೆ, ಶಾಲೆಯಲ್ಲಿ ವಸತಿಮಾಡಿದವರು, ಹೊಳವಾದ ಸಂಗತಿಯನ್ನು ಕಂಡು, ನೀರು ಎಷ್ಟು ಇಳಿದಿದೆ ಎಂದು ನೋಡಲು ಹೋದರು. ಬೆಳಗ್ಗೆ ಎದ್ದ ಮರಕಾಲನಿಗೆ ತಲೆ ತುಂಬ ಚಿಂತೆ—ಆ ಓಡಿಹೋದ ಮುದುಕಿಯನ್ನು ಹುಡುಕಬೇಕು. ಹೆಣವನ್ನು ತೆಗೆಯಿಸಬೇಕು. ಸಾವಾದ ಆ ಮನೆಯನ್ನು ತಾನು ಇನ್ನು ಹೊಗುವಂತಿಲ್ಲ. ತನಗೆ ಬಿಡಾರವಿಲ್ಲದಾಯಿತು. ಹೆಂಡತಿಯನ್ನು ಹೇಗೆ ಮಾಡಿಯಾ

ದರೂ ಕರೆದು ತರುವ ಎಂದು ಯೋಚಿಸಿದರೂ ದಾರಿ ಇಲ್ಲ—ಇದೆಲ್ಲ ಅವನ ಸಂಸಾರದ ಚಿಂತೆಗಳು.

ಸತ್ಯ, ಎದ್ದವಳೇ ಕೂಸನ್ನು ನೆನೆದು, ಎಮ್ಮೆಯನ್ನು ಕರೆಯಲು ಹೋದಳು. ದಣಿದ ಗಂಡನನ್ನು ಎಚ್ಚರಿಸಲು ಅವಳಿಗೆ ಮನಸ್ಸಾಗಲಿಲ್ಲ. ಅವಳ ಮನಸ್ಸು, ನಿದ್ರೆ ಕಳೆದು ತಿಳಿಗೊಂಡ ಮೇಲೆ "ಈ ಕೂಸನ್ನು ಎಷ್ಟು ದಿನ ಸಾಕಬೇಕು?" ಎಂಬ ವಾಸ್ತವಿಕ ಪ್ರಪಂಚದ ತುಲನೆಯ ಲ್ಲಿತ್ತು. ಅವಳ ಮನಸ್ಸಿನಲ್ಲಿ ಅದು—ಬರಿಯ ಶೂದ್ರ ಶಿಶು ಎಂದಿತ್ತು. ತೀರ ಕೆಳದರ್ಜೆಯ ಹೊಲೆಯರ ಮಗು ಎಂದು ಇನ್ನೂ ಹೊಳೆದಿರಲಿಲ್ಲ.



# ಎಂಟನೆಯ ಅಧ್ಯಾಯ

ನೆರೆಗೆ ಬಲಿಯಾದ ಊರವರ ಚಿಂತೆಯು ನೂರಾರು ಬಗೆಯಾಗಿತ್ತು. ಬಂದ ನೆರೆ ಎರಡು ದಿನಗಳಲ್ಲಿ, ಕುಗ್ಗಿ ಇಳಿಯಿತು. ಬಯಲನ್ನು ಆವರಿಸಿದ ನೀರು ಇಳಿಯಲು, ಇನ್ನೂ ನಾಲ್ಕು ದಿನ ಹಿಡಿದೀತು. ಆದರೆ ಎತ್ತರದ ಮನೆಯ ತಾವುಗಳೆಲ್ಲ ತಿರುಗಿ ತಲೆಯೆತ್ತಿ ನಿಂತಿದ್ದುವು. ನೆರೆಯ ಬಿರುಸು ಬರಿಯ ಒಂದು ದಿವಸದಷ್ಟು ಕಾಲ ಕಾಣಿಸಿತ್ತಾದರೂ, ತಾನು ಮಾಡುವ ಹಾವಳಿಯನ್ನು ಅದು ಮಾಡಿಕೊಂಡೇ ಹೋಗಿತ್ತು. ಬರಿಯ ಕೆಳಬೈಲಿನವರಿಗಷ್ಟೇನೆ ಬಂದ ನೆರೆಯಲ್ಲ ಅದು. ನೇತ್ರಾವತಿಯ ದಂಡೆಯಲ್ಲಿ ವಾಸಿಸಿದವರು ಎಲ್ಲರೂ ಅದರ ಉಲ್ಬಣವನ್ನು ಸಹಿಸಬೇಕಾಯಿತು. ಜಿಲ್ಲೆಯ ಇತರ ನದಿಗಳೂ, ನೇತ್ರಾವತಿಯಂತೆ ಸೊಕ್ಕಿದ್ದುವು. ಮೂರು ನಾಲ್ಕು ದಿನಗಳ ಕಾಲ, ಒಂದೂರಿನಿಂದ ಇನ್ನೊಂದು ಊರಿಗೆ ಸುದ್ದಿ ಹೋಗುವುದು ಅಸಾಧ್ಯವಾಗಿತ್ತಾದರೂ, ವಾರ ಮುಗಿಯುವುದರೊಳಗಾಗಿ ಇಡೀ ಜಿಲ್ಲೆಯ ಕಂಗಾಲು ಸ್ಥಿತಿಯು ಎಲ್ಲರಿಗೂ ತಿಳಿದುಬಂದಿತು. ಪ್ರತಿ ಒಬ್ಬರೂ ತಂತಮ್ಮ ಊರಿನ ನೆಗೆ ಹಾವಳಿಯನ್ನು ಕುರಿತು, ಮಿರುಗು ಕೊಟ್ಟು ಹೇಳುವವರೇ. "ಒಂದೇ ಬಾರಿ ಹತ್ತು ಹೆಣ ತೇಲಿ ಹೋದುದನ್ನು ಕಂಡಿದ್ದೇವೆ," ಎನ್ನುವವರು ಉಂಟು. "ಸಾವಿರ ದನಕರುಗಳು ನೀರು ಪಾಲಾದುವು ಒಂದು ಹಳ್ಳಿಯಲ್ಲೇ" ಎನ್ನುವವರು ಉಂಟು. "ಏನಾದರೂ ಹತ್ತು ಸಾವಿರ ಮನೆಗಳು ನಾಶವಾಗಿರಬಹುದು" ಎಂದು ಗಣಿತ ಹಾಕುವವರು ಉಂಟು. ತಮ್ಮ ಊಹನಾ ಶಕ್ತಿಯನ್ನು ಮೀರಿಸಿ ನೆರೆಯ ಹಾವಳಿಯನ್ನು ಬಣ್ಣಿಸುವ, ಚಿತ್ರಗಾರರಾದರು ಎಲ್ಲ. ವಾಸ್ತವಿಕವಾಗಿ ಯಾರು ಅದರ ಹಾವಳಿಗೆ ಗುರಿಯಾಗಿದ್ದರೋ, ಅವರ ಬಾಯಿಂದ ಮಾತೇ ಬರುವಂತಿರಲಿಲ್ಲ. ಎದೆಯಲ್ಲಿ ನಟ್ಟ ಭೀತಿ ಇನ್ನೂ ಮಾಯವಾಗಿರಲಿಲ್ಲ. ನಾಳಿನ ಪಾಡನ್ನು ನೆನೆದು ಅವರು ಮತ್ತಷ್ಟು ತಬ್ಬಿಬ್ಬಾಗಿದ್ದರು. ಅವರು ಈಗ ವಾಸಮಾಡುವುದಕ್ಕೆ ತಾವು ಹುಡುಕಬೇಕು. ಬಿದ್ದ ಗೋಡೆಗಳನ್ನು ಎಬ್ಬಿಸಬೇಕು, ಕೊಚ್ಚಿ ನಿರ್ನಾಮವಾದ ಮಾಡನ್ನು ನಿರ್ಮಿಸಬೇಕು, ಕಡಿದ ಹೊಲದ ಅಂಚುಗಳನ್ನೂ ಕಟ್ಟುಗಳನ್ನೂ ಸರಿಮಾಡಬೇಕು...

ಮಣ್ಣಿನಿಂದ ತುಂಬಿದ ಗದ್ದೆಗಳನ್ನು ತಿರುಗಿ ಮೊದಲಿನಂತೆ ಮಾಡಬೇಕು. ಹೀಗೆ ಒಬ್ಬೊಬ್ಬರ ಪಾಲಿಗೆ ಹತ್ತೆಂಟು ಸಮಸ್ಯೆಗಳು ಇದಿರಾಗಿವೆ. ನಾಳಿನ ಪ್ರಶ್ನೆ ಅಷ್ಟು ವಿವಿಧವಾಗಿ ಇದ್ದರೆ, ತತ್ಕಾಲದ ತೊಡಕುಗಳು ಕಡಿಮೆಯುವಲ್ಲ. ಉಡಲು ಅರಿವೆ ಇಲ್ಲ, ಇರಲು ಆಸರೆ ಇಲ್ಲ, ಉಣಲು ಅನ್ನವಿಲ್ಲ. ನದಿ ದಂಡೆಯ ಮೇಲೆ ಮನೆ ಮಾಡಿ ಕುಳಿತವರೆಲ್ಲರ ಪಾಡೂ ಹೀಗೆಯೇ ಆಗಿತ್ತು. ಮುಂದಿನ ಬೆಳೆಯು ಬತ್ತವು ಕೈಗೆ ಬರುವ ತನಕ ಬೇಡಿ ತಿನ್ನಬೇಕು—ಅಷ್ಟೇ. ಹೆಚ್ಚಿನ ಚಿಂತೆ ಅರಿವೆಯದು. ಮೈಮೇಲಿನ ಅರಿವೆಯಲ್ಲೇ ಪಾರಾಗಿ ಬಂದವರು ಎಷ್ಟೋ ಮಂದಿ.

ಜಗತ್ತು ಈ ಅದ್ಭುತ ಸುದ್ದಿಗೆ ಕಿವಿಗೊಟ್ಟು, ಹಿಗ್ಗಿ, ವಿಸ್ಮಯಗೊಂಡಷ್ಟು-ಸಹಾಯಕ್ಕೆ ತ್ವರೆಗೊಳ್ಳಲಿಲ್ಲ. ಕೆಳಬೈಲಿನವರ ಸಲುವಾಗಿ ರಾಧಾಕೃಷ್ಣ ಹಾತೊರೆದಂತೆ ಅಲ್ಲೊಬ್ಬರು, ಇಲ್ಲೊಬ್ಬರು, ನೊಂದವರಿಗಾಗಿ, ಕನಿಕರಪಟ್ಟರು. ಬಲಿಗೀಡಾದವನು, ತಮ್ಮ ಬಂಧುವೂ ಆಪ್ತನೂ ಆದಲ್ಲಿ ಅವನ ಕಷ್ಟವನ್ನು ನೂರ್ಮಡಿಯಾಗಿ ಬಣ್ಣಿಸುವುದರಲ್ಲಿಯೇ ಅವರ ಕನಿಕರ ಮುಗಿಯುತ್ತಿತ್ತು. ರಾಧಾಕೃಷ್ಣ ಮಂಗಳೂರಿಗೆ ಧಾವಿಸಿದನು. ಅವನಿಗೆ ಅಲ್ಲಿ, ಪರಿಚಿತರೆಂದರೆ ದಯಾನಂದರಾಯರು ಮತ್ತು ಡಾ। ನಂದರು. ಸುದ್ದಿ ಚೆನ್ನಾಗಿ ಹಬ್ಬುವ ಮೊದಲೇ, ಅವನು ಅಲ್ಲಿಗೆ ಹೋಗಿ ಮಾತನಾಡಿದುದರಿಂದ, ಅವನ ಕಾರ್ಯ ಪರಿಣಾಮಕಾರಿಯಾಗಲಿಲ್ಲ. ಅವರು "ಈಗೇಕೆ ಅಷ್ಟು ಗಡಿಬಿಡಿ. ಪ್ರತಿವರ್ಷ ಬರುವಷ್ಟೇ ನೆರೆಯು ಈಗಲೂ ಬಂದಿರಬೇಕು. ಅಥವಾ ತುಸು ಹೆಚ್ಚಿರಬಹುದು" ಎಂದರು. ಈತ ತನ್ನೊಂದು ಗ್ರಾಮದ ವಿಚಾರವನ್ನೆಲ್ಲ ಬಣ್ಣಿಸಿ ಹೇಳಿದನು. "ನೀವು ಕಣ್ಣಾರೆ ನೋಡಿ, ಗ್ರಾಮ ಸಂಚಾರಮಾಡಿದಲ್ಲಿ ತಿಳಿದೀತು" ಎಂದನು. ಆದರೆ ನಾಗರಿಕರ ಹೃದಯ, ಸಮನಾಗಿ ಕರಗುವುದಕ್ಕೆ ಒಂದು ವಾರ ಕಾಲ ಹಿಡಿಯಿತು. ಆಗ ಸುದ್ದಿಯು ಸಂತೆಯೇ ಹಬ್ಬಿತು. ನೆರೆಯೇನೋ ಇಳಿದಿತ್ತು. ದಯಾನಂದರಾಯರು 'ಇನ್ನು ನಾವು ತಡ ಮಾಡಿದರೆ ಆಗದು' ಎಂದು, ಮಂಗಳೂರಿನ ಸಮೀಪದ ಹಳ್ಳಿಗಳನ್ನು ಸುತ್ತಿ ಬಂದರು. ಕೊನೆಗೆ ಊರ ಹಿರಿಯರನ್ನು ಸಭೆ ಕರೆಯಲು ನಿಶ್ಚಯಿಸಿದರು. ಆ ಸಭೆ ಕೂಡಲು ಇನ್ನೂ ನಾಲ್ಕು ದಿನ ಹೋಯಿತು. ಸಭೆಯ ಮುಂದೆ ರಾಧಾಕೃಷ್ಣ, ತನ್ನ ಬಡ ಅನುಭವಗಳನ್ನು ಬಿಚ್ಚಿಹೇಳಿ

ದನು. ಸಾಹುಕಾರ ರಂಗಪ್ಪಯ್ಯನವರು ಸಭೆಯಲ್ಲಿ ಎದ್ದು ನಿಂತು "ನಮ್ಮ ಅರ್ಕುಳ, ಬಂಟ್ವಾಳ, ಗುರುಪುರಗಳಲ್ಲಿ ಹೇಳಲಾರದಷ್ಟು ಹಾನಿ ಆಗಿದೆ. ಊರಿಗೆ ಒಂದೊಂದು ಮನೆ ಕೂಡ ಉಳಿದಿಲ್ಲ. ಈ ವರ್ಷ ನಮಗೆ ಗೇಣಿ ಹುಟ್ಟುವುದು ಕಷ್ಟ. ಮೊದಲಿನ ನಮ್ಮ ಕೆಲಸವೆಂದರೆ—ಸರಕಾರವು ಕಂದಾಯ ಮಾಫಿ ಮಾಡುವಂತೆ ಕೇಳಬೇಕು. ಬಡ ಜನರಿಗೆ ಮನೆ ಕಟ್ಟಲು ಧರ್ಮಾರ್ಥ ಮರ ಬಿದಿರುಗಳನ್ನು ಆದಷ್ಟು ಬೇಗನೆ ಒದಗಿಸುವಂತೆ ಕೇಳಿಕೊಳ್ಳಬೇಕು" ಎಂದರು.

ಕ್ರಿಸ್ತೀಯರ ಮುಂದಾಳಾದ ರೆವೆರೆಂಡ್ ಗೋಮಿಯಸ್‌ರು "ನೆರೆ ಹಾವಳಿಗೆ ಬಲಿಯಾದವರಲ್ಲಿ ನಮ್ಮ ಕೆಥೋಲಿಕರಷ್ಟು ಯಾರೂ ಆಗಲಿಲ್ಲ. ಅಂದರೆ ನೋಡಿ—ಕಲ್ಯಾಣಪುರ, ಉಪ್ಪೂರು, ಉದ್ಯಾವರಗಳಲ್ಲಿ ಸಾವಿರಾರು ತೆಂಗಿನ ತೋಟಗಳನ್ನು ಮಾಡಿಕೊಂಡಿರುವರು ನಮ್ಮವರು. ಅವರ ಮನೆ ಮಠ ಒಂದೂ ಉಳಿದೇ ಇರಲಿಲ್ಲ. ಹೊಳೆಯ ಕರೆಯಲ್ಲಿ ಹೂತಿಟ್ಟ ತೆಂಗಿನ ಕತ್ತವೆಲ್ಲ ಕಡಲ ಪಾಲಾಯಿತು. ಈ ವರ್ಷದ ಅವರ ಅನ್ನವೇ ಹೋದಂತೆ" ಎಂದರು. ಇದೇ ತೆರನಲ್ಲಿ ಒಬ್ಬೊಬ್ಬರ ಮುಂದಾಳುಗಳು, ಒಂದೊಂದು ವಿಧದ ಆಪ್ತ ಅನುಭವಗಳನ್ನು ಹೇಳಿದರು. ಡಾ| ನಂದುರವರು ಕೊನೆಗೆ ಎದ್ದು ನಿಂತು ಅಮೋಘ ಭಾಷಣ ಮಾಡಿದರು. ಪರೋಪಕಾರದ ಅವತಾರವೆತ್ತಿದವರಂತೆ ತೋರಿಸಿಕೊಂಡರು. "ನನ್ನ ವೈದ್ಯಾಲಯವನ್ನು ನೆರೆಯಲ್ಲಿ ನೊಂದವರ ಸಲುವಾಗಿ ಮೀಸಲಿರಿಸುತ್ತೇನೆ" ಎಂದರು. ಕೈ ಚಪ್ಪಾಳೆ ಆಯಿತು. ಆ ದಿನ ಹಾವಳಿಗೆ ಗುರಿಯಾದವರ ಸಹಾಯಾರ್ಥವಾಗಿ ಡಾ| ನಂದರವರ ಅಧ್ಯಕ್ಷತೆಯಲ್ಲಿ, ದಯಾನಂದ ರಾಯರ ಕೋಶಾಧ್ಯಕ್ಷತೆಯಲ್ಲಿ, ಸಾಹುಕಾರ ರಂಗಪ್ಪನವರ ಕಾರ್ಯದರ್ಶಿತ್ವದಲ್ಲಿ ಒಂದು ಕಮಿಟಿ ನಿರ್ಮಾಣವಾಯಿತು. ನೆರೆದ ಮಹಾನುಭಾವರು ಉದಾರವಾಗಿ, ತಮ್ಮ ತಮ್ಮ ವಂತಿಗೆಗಳನ್ನು ಹೇಳಿದರು. ಇನ್ನು ಈ ವಾರ್ತೆಯನ್ನು ಪತ್ರಿಕೆಗಳಲ್ಲಿ ಪ್ರಚಾರ ಪಡಿಸಿ, ಹೊರಗಿನ ಪಟ್ಟಣಗಳಿಂದ ಸಹಾಯವನ್ನು ತರಿಸಿಕೊಳ್ಳುವರೆ, ನಂದ, ದಯಾನಂದರನ್ನು ಅಧಿಕರಿಸಲಾಯಿತು. ಸಭೆ ಮುಗಿಯುವುದರಲ್ಲಿತ್ತು; ಕುಳಿತಿದ್ದ ರಾಧಾಕೃಷ್ಣ ತಾಳ್ಮೆಗೆಟ್ಟು ಎದ್ದು ನಿಂತನು. "ನಿಮ್ಮ ಕೆಲಸವೇನೋ ಸ್ತುತ್ಯ. ಆದರೆ ನೀವು, ನಾಳೆಯ ಯೋಚನೆ ಮಾಡಿದಿರೇ ಹೊರತು, ಈ ಹೊತ್ತಿನ

ಪ್ರಶ್ನೆ ಮರೆತಹಾಗೆ ಕಾಣುತ್ತದೆ. ಈ ನಿಮ್ಮ ಸಹಾಯ ಬರುವುದರೊಳಗೆ ಜನ ಉಪವಾಸ ಸಾಯಬಾರದಷ್ಟೇ! ಅವರಿಗೆ ಈ ಕೂಡಲೇ ಕೊಡಬೇಕಾದ ಅನ್ನ ವಸ್ತ್ರಗಳ ಗತಿಯೇನು! ಅದು ಮುಖ್ಯವಾದದ್ದು. ಅನಂತರ ಯಾರು ಯಾರಿಗೆ ಏನೇನು ಹಾನಿ ಆಗಿದೆ, ಎಂಬುದರ ವಿವರ ನಿಶ್ಚಯ ಮಾಡುವ ಕೆಲಸವೂ ಅಷ್ಟೇ ಮುಖ್ಯವಾದದ್ದು" ಎಂದನು.

"ನಿಜ. ಅಷ್ಟು ಮಾಡದೆ ಇದ್ದರೆ ಹೇಗೆ ಆಗುತ್ತದೆ?" ಎಂದರು ದಯಾನಂದ ರಾಯರು.

ಡಾ। ನಂದರವರು "ನೀವು ಸಭೆ ಮುಂದುವರಿಸಿ; ನನಗೆ ಅರ್ಜೆಂಟು ಒಂದು ಕೇಸಿದೆ. ನೀವು ಮಾಡಿದ ತೀರ್ಮಾನಕ್ಕೆ ನಾನು ಸಿದ್ಧ" ಎಂದು ಹೇಳಿ ಹೋದರು. ಅಲ್ಲಿ ನೆರೆದವರು—ಹಾವಳಿಗೆ ಈಡಾದ ಸ್ಥಳಗಳನ್ನು ಸಂದರ್ಶಿಸಿ ವರದಿ ಮಾಡುವ ಕೆಲಸ ಮುಖ್ಯ—ಎಂದು ಒಪ್ಪಿಕೊಂಡರು. ಆದರೆ ಆ ಕೆಲಸದ ಹೊಣೆಯನ್ನು ಹೊರುವ ಮುಂದಾಳುಗಳು ಮಾತ್ರ ಅಲ್ಲಿರಲಿಲ್ಲ. ರಾಧಾಕೃಷ್ಣನು ತನ್ನ ಪ್ರಾಂತದ ಹೊರೆಯನ್ನು ತಾನು ಒಪ್ಪಿಕೊಂಡನು. ರಾಯರು, ತಾವು ದೀರ್ಘ ಸಂಚಾರಮಾಡಿ ಉಳಿದ ವ್ಯವಸ್ಥೆಗಳನ್ನು ಮಾಡುವೆವು ಎಂದರು. ಅಲ್ಲಿ ಕೂಡಿದ ಕೆಲವರು ತತ್ಕಾಲದ ಕೆಲಸಕ್ಕೆ ಇಷ್ಟಿಷ್ಟು ಅಕ್ಕಿಯನ್ನು ಒದಗಿಸಬೇಕೆಂದು ನಿರ್ಣಯಿಸಿದರು.

ಅಂದಿನಿಂದ, ರಾಧಾಕೃಷ್ಣನಿಗೂ, ರಾಯರಿಗೂ, ಕೈತುಂಬ ಕೆಲಸವಾಯಿತು. ಸಂಚಾರದ ಕೆಲಸಕ್ಕೆ ಪ್ರಮುಖರು ಬಾರದೆ ಹೋದರೂ, ಹೇಳ ಹೆಸರಿಲ್ಲದ ಹಲವಾರು ಮಂದಿ, ಜತೆಗೂಡಿದರು. ಪತ್ರಿಕೆಗಳಲ್ಲಿ ಎಲ್ಲೆಲ್ಲೂ, ನೆರೆ ಹಾವಳಿಯ ಮೊರೆತ ಮೂಡಿತು. ಧನ ಸಹಾಯದ ಭರವಸೆ ಎಲ್ಲ ಕಡೆಗಳಿಂದಲೂ ಬಂದಿತು. ರಾಧಾಕೃಷ್ಣ ಮೊದಲಾದವರು ಊರೂರುಗಳನ್ನು ಸುತ್ತಿ ಬಂದರು. ಬಹು ಕಡೆಗಳಲ್ಲಿ ನೆರೆಗೀಡಾದವರು ಈ ಸಹಾಯ ಬರುವ ತನಕ, ನಿಸ್ಸಹಾಯರಾಗಿ ತಮ್ಮ ಪಾಡಿಗೆ ತಾವೇ ಇದ್ದರು. ಆಚೀಚೆ ನಂಟರ ಮನೆಗೆ ಹೋದವರುಂಟು; ಸಾಲದ ಭಿಕ್ಷೆ ಬೇಡಿದವರುಂಟು, "ಮಳೆಗಾಲದ ದಿನ ಹೇಗೂ ಅರ್ಧ ಉಪವಾಸ; ಈ ಬಾರಿ ಪೂರ್ಣ ಉಪವಾಸ" ಎಂದು ಹಲ್ಲು ಕಡಿದು, ಆ ದುರ್ದಿನಗಳನ್ನು ತಳ್ಳಿದವರೂ ಉಂಟು.

ಬಂದ ನೆರೆಯಿಂದ ಆದ ಒಂದು ಮುಖ್ಯ ಪರಿಣಾಮವೆಂದರೆ-ದಲಿ ತಾಶ್ರಮದ ಮೇಲೆ. ಅದು ನಿಂತಿದ್ದೂ, ಕೊಚ್ಚಿಹೋದಂತಾಯಿತು. ಎರಡ ನೆಯ ದಿನವೇ ರಾಧಾಕೃಷ್ಣ ತನ್ನ ಮನೆಗೆ ಹೊಲೆಯರ ಕೂಸನ್ನು ಹೊಗ್ಗಿಸಿ, ಹೆಂಡತಿಗೆ ಒಂದು ಹೊರೆ ತೊಡಿಸಿ, ಮುಂದೆ ಸಂಚಾರಕ್ಕೆ ಇಳಿದನು. ಮರಕಾಲ, ಮೃತಳ ಜಾತಿಯವರನ್ನು ಕರೆದು, ಸತ್ತವಳನ್ನು ಮಣ್ಣುಗೂಡಿಸಿದ. ಆಕೆಯ ಅತ್ತೆಯ ಶೋಧನೆ ಕೊನೆ ತನಕವೂ ಆಗಲಿಲ್ಲ. ಮಗುವಿನ ತಂದೆ ಯಾವ ಘಟ್ಟದಲ್ಲಿದ್ದಾನೆಂಬುದನ್ನು ವಿಚಾರಿಸಿ ಆತನಿಗೆ ಕಾಗದ ಬರೆಯಿಸಿದ್ದಾಯಿತು.

ರಾಧಾಕೃಷ್ಣನಿಗೆ ಬಿಡುವಿಲ್ಲದ ಕೆಲಸ; ತನ್ನ ಗ್ರಾಮವನ್ನು ಸುತ್ತುವುದು, ಮಂಗಳೂರಿಗೆ ಓಡುವುದು, ಸುತ್ತಲಿನ ಗ್ರಾಮಗಳಿಗೆ ಓಡಿ, ಅಲ್ಲಿಯ ಹಾನಿಯ ಎಣಿಕೆ ಹಾಕುವುದು. ಆತ ಮಾಡಿದ ಮೊದಲಿನ ಕೆಲಸವೆಂದರೆ-ಮನೆಯಲ್ಲಿ ಜರಗಿದ ಛತ್ರವನ್ನು ನಡೆಯಿಸಲು ಹತ್ತಾರು ಮುಡಿ ಅಕ್ಕಿಯನ್ನು ತಾನೇ ಹಣಕೊಟ್ಟು ತಂದುದು. ಅದನ್ನು ಬೇಯಿಸಿ ಹಾಕುವ ಆಡಳಿತೆ ಸತ್ಯಳಿಗೆ. ಅಷ್ಟು ಮಾಡಿದ ಬಳಿಕವೇ, ಅವನ ಸಂಚಾರಕ್ಕೆ ಅವಕಾಶ. ಅಲ್ಲಿಯೇ ತಿರುಗಾಡುತ್ತಿದ್ದಾಗ, ಸಂಜೆ ಬಂದು, ಹೆಂಡತಿಗೆ ವರದಿ ಒಪ್ಪಿಸುತ್ತಿದ್ದ. ಅವನಿಲ್ಲದ ದಿವಸ ಆಕೆ ತುಂಬ ವ್ಯಾಕುಲಳಾಗಿ ಕಾಲ ಕಳೆಯುತ್ತಿದ್ದಳು. ನೆರೆಯ ಕತೆಯಿಂದ ಗಾಬರಿಗೊಂಡ ಮಂಜಯ್ಯನವರು, ಮಗಳಿಗೆ ಊರಿಗೆ ಬರಲು ಕಾಗದ ಬರೆದಿದ್ದರು. ತಂಗಿ ವಾಗ್ದೇವಿಗೆ ವರ ನಿಶ್ಚಯವಾಗಿತ್ತು. ಅಜ್ಜಿಯ ಆರೋಗ್ಯ ಕೆಟ್ಟು, ಮೊಮ್ಮಗಳ ಚಿಂತೆಯಲ್ಲಿದ್ದಾಳೆ—ಒಂದಲ್ಲ ಮೂರು, ಮೂರು ಕಾರಣಗಳು ಸೇರಿಕೊಂಡಿವೆ. ಈ ಪತ್ರ ಗಂಡನಿಗೆ ತೋರಿಸುವುದಕ್ಕೇನೇ ಆಕೆಗೆ ಭಯ. ಉತ್ತರ ಬರೆದು ಅಂಚೆಗೆ ಹಾಕಿ, ಅನ್ನುವುದಕ್ಕೂ ಭಯವೇ.

ಸತ್ಯ, ತನ್ನ ಮನೆಯನ್ನು ಕುರಿತು ಚಿಂತಿಸುತ್ತಿರುವ ಗಳಿಗೆಯಲ್ಲೆಲ್ಲ ರಾಧಾಕೃಷ್ಣ ಊರಿನ ಕೊರಗನ್ನು, ಬಿಡಿಸಿ, ಅಳೆದು ಮುರುಕಗೊಂಡು ನೋಡುತ್ತಿದ್ದಾನೆ. ನೊಂದ ಜನರ ನೀತಿಯನ್ನು ಪರೀಕ್ಷೆಮಾಡಿಕೊಳ್ಳುತ್ತಿದ್ದಾನೆ. "ನೀವು ಅದನ್ನೆಲ್ಲ ಕೇಳುವುದೇತಕ್ಕೆ? ನಮಗೆ ಎಷ್ಟು ನಷ್ಟವಾದರೇನು?—ಕೊಡಿಸುವವರು ಯಾರಾದರೂ ಇದ್ದಾರೆಯೇ" ಎಂದು ಸಂಶಯಪಡುವವರು ಕೆಲವರು. "ಸಾಹುಕಾರ ರಂಗಪ್ಪಯ್ಯನವರು

ಹೋದ ಮನೆಯನ್ನು ಕಟ್ಟಿಸಿ ಕೊಡುತ್ತಾರೆಯೋ? ಈ ವರ್ಷದ ಗೇಣಿಯ ಮಟ್ಟಿಗಾದರೂ ರಿಯಾಯಿತಿ ತೋರಿಸುತ್ತಾರೆಯೋ?" ಎಂದು ತಮ್ಮ ಸಹಾಯ ಸಮಿತಿಯ ಮುಖಂಡರ ಮೇಲೆಯೇ ಆರೋಪವಿಡುವವನು ಒಬ್ಬ. ನೆರೆಯಿಂದ ಹೋದ ಅಕ್ಕಿಯ ಮುಡಿ ಒಂದಾದರೆ, ಹೋದದ್ದು ನಾಲ್ಕು ಎಂದು ಅಳುವವನೊಬ್ಬ. ತಮಗಾದ ಹಾನಿ, ತಮಗೇನೇ ಬಣ್ಣಿಸಲು ಬಾರದೆ, "ನೀವೇ ಅಂದಾಜುಮಾಡಿ" ಎಂದು ಕಣ್ಣೀರು ಕರೆಯುವವರು ಎಷ್ಟೋ ಮಂದಿ. ಹೀಗಿದ್ದರು ವಿವಿಧ ಜನ; ಹೀಗಿತ್ತು ಅವರ ವಿವಿಧ ಮನ.

"ಮನೆ ಕಟ್ಟಲು ಎಷ್ಟು ಹಣ ಬೇಕಾಗಬಹುದು? ಹೋದ ಮನೆಗೆ ಎಷ್ಟು ಖರ್ಚುಮಾಡಿದ್ದಿರಿ?"

"ಬಡವರ ಮನೆಗೆ ಖರ್ಚು, ಕ್ರಯ ಎಷ್ಟೆಂದು ಹೇಳಲಿ? ದುಡಿಯುವುದು ಹೇಗೂ ದುಡಿಯಬಹುದು; ಮಡಿತ ತಪ್ಪಿದ್ದಲ್ಲ. ತಿರುಗಿ ಕಟ್ಟುವುದಕ್ಕೆ ಐವತ್ತು ಗಳು, ಇನ್ನೂರು ಮಡಲಾದರೂ ಬೇಡವೇ?" ಎಂದು ಉತ್ತರಿಸುತ್ತಾರೆ ಮನೆಯವರು.

"ಎಷ್ಟು ಜನರು ನೀವು, ಈಗ ಇರುವವರು?"

"ಘಟ್ಟಕ್ಕೆ ಹೋದವರನ್ನು ಬಿಟ್ಟು ಆರು ಮಂದಿ ಇದ್ದೇವೆ"

"ಕಾಳುಕಡಿ ಏನು ದಾಸ್ತಾನು ಇತ್ತು?"

"ಹೋದದ್ದು ಹೇಳಿ ಏನು ಪ್ರಯೋಜನ? ಯಾರಾದರೂ ಕೊಡುವವರು ಇದ್ದಾರೆಯೆ?"

"ಅಲ್ಲಲ್ಲಿ ಹಣ ಒಟ್ಟು ಮಾಡುತ್ತಾ ಇದ್ದೇವೆ. ನಿಮಗೆಲ್ಲ ಎಷ್ಟು ಸಹಾಯ ಬೇಕು ಎಂಬುವನ್ನು ತಿಳಿದು ಬರಲಿಕ್ಕೇನೇ ನನ್ನನ್ನು ಕಳುಹಿಸಿದ್ದಾರೆ."

"ಹೋಯಿತು ನೋಡಿ—ಒಂದು ಕಳಸೆ ಅಕ್ಕಿ ಇದ್ದಿತ್ತು. ಮೂರು ನಾಲ್ಕು ಮಣವಾದರೂ ಗೆಣಸು ಇದ್ದಿರಬಹುದು."

"ಮತ್ತೇನೇನು?"

"ಮಡಿಕೆ, ಕುಡಿಕೆ, ಇದ್ದದ್ದು, ಬಿದ್ದದ್ದು."

"ಅಂವರೆ? ಕಂಚು, ತಾಮ್ರ ಏನಾದರೂ ಇತ್ತೇ?"

"ಮೂರು ಕಂಚಿನ ಬಟ್ಟಲು ಇದ್ದುವು. ಅವು ಹೋದುವು. ಮಡಿಕೆ, ಮರಿಗೆ ಹೋದರೆ ಹೋಗಲಿ, ಪುನಃ ಕಂಚು ಗಿಂಚು ತೆಗೆದು ಕೊಳ್ಳುವ ತ್ರಾಣ ಇದೆಯೇ ನಮಗೆ ?"

ರಾಧಾಕೃಷ್ಣನು ತನ್ನ ಸುತ್ತಾಟದಲ್ಲಿ-ಮನೆಮಾರನ್ನು ಕಳೆದುಕೊಂಡ ಹಲವು ಪಂಚಮರ ಪರಿಚಯವನ್ನು ಮಾಡಿಕೊಂಡನು. ಅವರ ಆರ್ಥಿಕ ಪರಿಸ್ಥಿತಿಯು ಅವನಿಗೆ ಈಗ ಮಂದಟ್ಟಾಯಿತು. ಅವರಲ್ಲಿದ್ದುದೇ ಕಡಿಮೆ. ಅದೂ ಹೋದಾಗ ಎಷ್ಟು ದುಃಖವಾಗಬೇಡ? ಒಂದೆರಡು ಕಂಚಿನ ಬಟ್ಟಲುಗಳು ಅವರ ಸಂಪತ್ತು. ಆರೇಳು ಮಂದಿಗೆ ಅವರು ಕಾದಿರಿಸಿದ, ಆಹಾರ ತಿನಸುಗಳ ಬೆಲೆ ಮಾತ್ರ ಒಂದೆರಡು ರೂಪಾಯಿಗಳದು. ಮಳೆಗಾಲವೆಂದರೆ ಅವರಿಗೆ ಮೂರು ದಿನಕ್ಕೊಂದು ಊಟ. ಈಗ ಅದೂ ಅಪಹೃತವಾಯಿತು. ಜಗತ್ತು ಎಷ್ಟೇ ಸುಖವಾಗಿದ್ದರೂ, ಯಾರ ಪಾಡು ಹೇಗೆ ಇದ್ದರೂ, ಈ ಜನ, ಅನ್ನವನ್ನು ಮೆಚ್ಚಿ ಬದುಕುವುದಕ್ಕಿಂತ, ಅಧಿಕವಾಗಿ ಉಪವಾಸವನ್ನು ಜರೆಯುಬಲ್ಲ ತಮ್ಮ ಹೊಟ್ಟೆಯನ್ನು ನಂಬಿ ಕುಳಿತಿದ್ದಾರೆ—ಎಂದು ಕಂಡಿತು.

ಅವರ ಮನೆ ಮಠಗಳಿಗೆ ಆದ ನಷ್ಟವೂ ಸಾಮಾನ್ಯವೇ. ಅವರಿಗೆ ದುಡಿಯುವ ರಟ್ಟೆಗಳು ಉಂಟು. ಹೇಗಾದರೂ ದಿನ ತೆಗೆದಾರು. ಬೇಡಿ, ಕಾಡಿ, ಗುಡಿ ಕಟ್ಟಿಕೊಂಡಾರು. ಆದರೆ ಅವು ಮಳೆಯ ದಿನಗಳು; ನೆಲದ ತಂಡಿಗೆ, ಮರಳನ್ನು ಹಾಸಿದ್ದಾರೆ. ಮೇಲಿನ ಮಾಡಿಗೆ, ಬಾನೇ ಮುಚ್ಚಿಗೆಯಾಗಿದೆ. ಅವರ ಪಾಡು ಆ ತೆರನಾದರೆ, ಹೊಲಮನೆ ಕಳಕೊಂಡ ರೈತರ ಪಾಡು ಇನ್ನೊಂದು ವಿಧ. ಮುಂದಿನ ಬಿತ್ತಿಗೆ ಇರಿಸಿದ ಬತ್ತ, ಜಾನುವಾರುಗಳ ಹಾನಿ, ಅವರ ಪಾಲಿನ ಕ್ರೂರವಾದ ಪೆಟ್ಟು. ಬೆಳೆದ ಗದ್ದೆಗಳ ಮೇಲೆ, ನೆರೆಯ ಮರಳು ಬಂದು ಆದ ಹಾನಿ ಹೇಳಲಾರದ ನೋವು. ಹಳ್ಳ ಹೊಲವಾಗಿದೆ, ಹೊಲ ಹಳ್ಳವಾಗಿದೆ. ಅದನ್ನು ಕಡಿದು, ಹೊತ್ತು ಮಾಡಿದ ಮೇಲೆಯೇ, ಮುಂದಿನ ಬೇಸಾಯದ ಆಸೆ ಅವರಿಗೆ. ಅಲ್ಲಿಯ ತನಕ, ಮಕ್ಕಳು ಮರಿಗಳನ್ನು ಕಟ್ಟಿ ಕೊಂಡು "ಎಲ್ಲಿಗೆಹೋಗಲಿ, ಏನು ಮಾಡಲಿ?" ಎಂಬ ಚಿಂತೆಯಲ್ಲಿಯೇ ತೊಳಲಾಡುತ್ತಾರೆ. ರಾಧಾಕೃಷ್ಣ ತಮ್ಮ ಗ್ರಾಮದ ವರದಿ ಮುಗಿಸಿ ಇನ್ನೂ—ನಾಲ್ಕಾರು ಗ್ರಾಮಗಳನ್ನು ಸುತ್ತಿ ಬಂದನು. ಆ ಹದಿನೈದು ದಿವಸಗಳಲ್ಲಿ ತನ್ನೂರಿನ ಬಡವರ

ಸಲುವಾಗಿಯೂ, ಸ್ವಲ್ಪ ಅಕ್ಕಿ ಅರಿವೆಗಳ ಸರಬರಾಯವನ್ನು ಮಾಡಿ ಕೊಂಡು ಬಂದನು. ಅವನಂತೆ ಇನ್ನು ಕೆಲವರು ಸಂಚಾರ ಮಾಡಿ ವರದಿ ತಂದುದರಿಂದ, ಅಂಥಲ್ಲಿಗೆ ಸಹಾಯ ಕಳುಹಿಸುವುದು ಸಾಧ್ಯವಾಯಿತು. ಕಮಿಟಿ ಮೆಂಬರರಾದ, ರಂಗಪ್ಪಯ್ಯನವರ ಪಿಚಾರ ಸರಣಿ ಬೇರೆಯೇ ಇದೆ. ಅವರ ಗಮನವೆಲ್ಲ ಅರ್ಕುಳ, ಬಂಟ್ವಾಳ, ಗುರುಪುರಗಳ ಹೊರತು ಇನ್ನೆಲ್ಲಿಗೂ ಹರಿಯುವಂತಿಲ್ಲ. "ಅಲ್ಲಿಂದ ರಿಪೊರ್ಟು ಬಂದಿಲ್ಲವಲ್ಲಾ? ಯಾರಿಗೆ ಎಷ್ಟು ಸಹಾಯಬೇಕು" ಎಂದು ಆಕ್ಷೇಪ ಬಂದರೆ, "ನೀವು ಮೊದಲು ಈ ಒಂದೊಂದು ಊರಿಗೆ ಕನಿಷ್ಠ ನೂರು ನೂರು ಮುಡಿ ಅಕ್ಕಿ ಕಳುಹಿಸಿ; ಬಳಿಕ ಉಳಿದಲ್ಲಿಗೆ" ಎಂದು ಬಿಡುತ್ತಾರೆ. ಅದರ ಕಾರಣವಿಷ್ಟೇ- ಅವರ ಹಲವಾರು ಒಕ್ಕಲುಗಳ ಮನೆ, ಇರುವುದೇ ಆ ಊರುಗಳಲ್ಲಿ. ಅದರಿಂದಾಗಿ ನಾಳೆ ತಮ್ಮ ಗೇಣಿಗೆ ಮೋಸವಾದೀತೆಂಬ ಭೀತಿ. ಅಕ್ಕಿ ಯನ್ನು ಕೊಟ್ಟಲ್ಲಿ, ಅವರೇ ಖುದ್ದಾಗಿ ಹೋಗಿ, ಅಷ್ಟನ್ನು ಹಂಚಿ ಬರಲು ಸಿದ್ಧರು. ರೆವೆರೆಂಡ್ ಗೋವಿಯಸ್‌ರವರು ಎರಡು ದಿವಸದ ತಿರುಗಾಟ ದಿಂದ, ಕಲ್ಯಾಣಪುರ, ಉದ್ಯಾವರಗಳ ವರದಿ ಮಾಡಲು ಶಕ್ತರಾಗಿದ್ದಾರೆ. "ಅಲ್ಲಿ ಆದಷ್ಟು ಹಾನಿ ಎಲ್ಲಿಯೂ ಆಗಲಿಲ್ಲ. ಒಂದೊಂದು ಗ್ರಾಮದಲ್ಲಿ ಒಂದೊಂದು ಲಕ್ಷ ರೂಪಾಯಿ ನಷ್ಟವಾಗಿದೆ. ಕನಿಷ್ಠ ಮೂರು ಸಾವಿರ ಮನೆಗಳು ಬಿದ್ದಿದ್ದಾವೆ. ಇಪ್ಪತ್ತು ಸಾವಿರ ಜನ ಉಪವಾಸವಿದ್ದಾರೆ. ಮೊದಲು ಬಂದ ಹಣ ಅಲ್ಲಿಗೆ ಹೋಗಬೇಕು. ನೆರೆಯಲ್ಲಿ-ಹಾನಿಗೆ ಗುರಿ ಯಾದವರು, ಸೇಕಡಾ ತೊಂಬತ್ತೊಂಬತ್ತು ಕೆಥೊಲಿಕರೇ ಆದುದರಿಂದ, ಸಹಾಯ ವಿತರಣೆ ಮಾಡುವುದಕ್ಕೂ ಕಷ್ಟವಿಲ್ಲ. ನಮ್ಮ ಪ್ಯಾರಿಷ್ ಚರ್ಚುಗಳ ಮುಖಾಂತರ ಚೆನ್ನಾಗಿ ಹಂಚಬಹುದು" ಅನ್ನುತ್ತಾರೆ.

"ತಾವು ಇನ್ನೊಮ್ಮೆ ಹೋಗಿ ಪ್ರತಿಯೊಬ್ಬನಿಗೆ ಏನೇನು ಹಾನಿ ಯಾಗಿದೆ ಎಂಬ ವಿವರಗಳನ್ನು ಸಂಗ್ರಹಿಸಬೇಕು. ಬರಿಯ ಅವಸರದಿಂದ ಹೋಗಿ ಬಂದರೆ ಪ್ರಯೋಜನವಿಲ್ಲ. ತತ್ಕಾಲ ಅಲ್ಲಿ ಸಹಾಯ ಶಿಬಿರ ತೆರೆದಿದೆ; ಅಲ್ಲಿ ಸಹಾಯಮಾಡುತ್ತಾರೆ. ನೀವು—ನಾನು ಹೇಳಿದ ಕೆಲಸ ಮಾಡಿಸಿ." ಎನ್ನುತ್ತಾರೆ ದಯಾನಂದರಾಯರು.

"ಅದು ಕ್ರಿಶ್ಚನ್ ವಟಾರವಲ್ಲವೆ? ನಮ್ಮ ಪ್ಯಾರಿಷ್ ಒಂದರಲ್ಲೇ ಎಲ್ಲಾ ಲೆಕ್ಕಗಳೂ ಸಿಗುತ್ತದೆ. ನೀವು ತತ್ಕಾಲ ಐನೂರು ಐನೂರು ಮುಡಿ

ಅಕ್ಕಿಯ ವ್ಯವಸ್ಥೆಮಾಡಿ; ಜತೆಗೆ ಒಂದೊಂದು ಸಾವಿರ ರೂಪಾಯಿಯ ನ್ನಾದರೂ ಮಂಜೂರು ಮಾಡಿರಿ. ನಾನೇ ಅಲ್ಲಿಗೆ ಹೋಗಿ ಬಟ್ವಾಡೆ ಮಾಡಿ ಬರುತ್ತೇನೆ." ಎಂದು ರೆವೆರೆಂಡರವರು ತಮ್ಮ ವಿಶೇಷ ತ್ಯಾಗ ಬುದ್ಧಿಯನ್ನು ತೋರಿಸಿದರು.

ತಮ್ಮ ಕೆಲಸ ಸುಲಭವಾಗುವದಕ್ಕೆ ಅದೇ ಯುಕ್ತಮಾರ್ಗವೆಂದು, ದಯಾನಂದರಿಗೆ ತೋರಿತು. ಅವರು 'ಆಗಲಿ' ಎನ್ನುವವರಿದ್ದರು. ಆಗ ಆ ಚರ್ಚಾ ಕೂಟದಲ್ಲಿದ್ದ ರಾಧಾಕೃಷ್ಣನು ಎದ್ದು ನಿಂತು, "ಅದಕ್ಕೆ ನನ್ನ ವಿರೋಧವಿದೆ. ಜವಾಬ್ದಾರಿ ಹೊರುವವರು ಒಂದೊಂದು ಪ್ರಾಂತದ್ದನ್ನು ಪೂರ್ಣವಾಗಿ ಹೊರಬೇಕು. ಇದು, ಯಾವುದೇ ಒಂದು ಜಾತಿ, ಒಂದು ಪಂಗಡದ ವಿಚಾರವಲ್ಲ. ಎಲ್ಲರಿಗೂ ಬಂದ ಆಪತ್ತು. ಹಸಿವಿನ ಮುಂದೆ ಎಲ್ಲ ಜಾತಿಯವರೂ ಒಂದೇ. ಬರಿಯ ಕ್ರಿಶ್ಚನರು ಒಬ್ಬರೇ ಹಸಿದವರೆಂದು ನಾವು ತಿಳಿಯುವುದೇ?" ಎಂದು ಆತ ವಾದ ಮಾಡಿದ್ದಾಯಿತು. ಅದು "ತಾನೂ ತಿನ್ನ, ಪರರಿಗೂ ಕೊಡ ಎಂಬ ಮುಂಡುವಾದ"ವೆಂದು ಹೇಳಿ, ಪಾದ್ರಿಗಳು ಕುಪಿತರಾದರು. ಕೊನೆಗೆ—ಅಲ್ಲಿಗೆ ವಿಶೇಷ ಸಹಾಯ ಕಳು ಹಿಸುವ ಮೊದಲು, ಹಾನಿಯ ಸಂಪೂರ್ಣ ವರದಿಯನ್ನು ಸ್ಥಳೀಯರ ಬೆಂಬಲದಿಂದ ಮಾಡಿಸಿ ತರಿಸಬೇಕೆಂದು ನಿರ್ಣಯವಾಯಿತು. ಆ ಕೆಲ ಸಕ್ಕೆ ರಾಯರು ಹೋಗುವೆನೆಂದರು. ಜತೆಗೆ ಗೋವಿಯಸರನ್ನೂ ಬರಲು ಹೇಳಿದರು.

ಈ ತನಕ ಗಂಭೀರವಾಗಿ ಕುಳಿತಿದ್ದ ಡಾ| ನಂದರವರು ತಮ್ಮ ವೈದ್ಯಕೀಯ ಸಹಾಯವನ್ನು, ಯಾರೂ ಬಯಸದೆ ಹೋದುದಕ್ಕಾಗಿ ವ್ಯಥೆಯನ್ನು ವ್ಯಕ್ತಪಡಿಸಿದರು. ಆಗ ರಾಧಾಕೃಷ್ಣ, "ಡಾಕ್ಟರರೇ ತಮಗೆ ನಿಜವಾಗಿ ಸಹಾಯಮಾಡುವ ಮನಸಿದ್ದರೆ— ಯಾವ ಯಾವ ಮೂಲೆ ಯಿಂದ ನೊಂದವರು ನಿಮ್ಮ ಆಸ್ಪತ್ರೆಗೆ ಬರಬೇಕೆಂದು ಹೇಳಿದರೆ, ಹಾಗೆ ಬರುವುದು ಸಾಧ್ಯವೇ? ಬದಲು ತಾವಾಗಲೀ, ತಮ್ಮ ಸಹಾಯಕರಾ ಗಲೀ, ಔಷಧವನ್ನು ಹಿಡಿದುಕೊಂಡು, ಸಮೀಪದ ಕೆಲವು ಸ್ಥಳಗಳಿಗಾ ದರೂ ಹೋದರೆ, ಆಗ ಎಷ್ಟೋ ಉಪಕಾರವಾಗಬಹುದು. ನೆರೆಯಲ್ಲಿ ಒದ್ದೆಯಾಗಿ ತಂಡಿಯಲ್ಲಿ ವಾಸಿಸುವ ಅವರಲ್ಲಿ, ಶೀತ, ಜ್ವರ ತುಂಬ ಕಾಣು ತ್ತಿದೆ" ಎಂದನು. ನಂದರವರು ತುಸು ಅವಾಕ್ಕಾದರು. ಕೊನೆಗೆ ಮಾತಿನ

ಧೋರಣೆ ಬದಲಾಯಿಸಿ "ಹಾಗೆ ಮಾಡುವ. ಸಮನಾದ ಒಬ್ಬ ಸಹಾಯಕನನ್ನು ಮೊದಲು ವಿಚಾರಿಸಿ ನೋಡುತ್ತೇನೆ" ಎಂದರು.

ಕೊನೆಗೂ, ಡಾ। ನಂದರಹರ ಮಾತು ಬರಿಯ ಉಪಚಾರದ ಮಾತಾಯಿತು. ಅವರು ತಮ್ಮ ಅಧ್ಯಕ್ಷತನವನ್ನು--ಕೇವಲ ಪತ್ರಿಕೆಗಳಲ್ಲಿ ವರದಿ, ವಿನಂತಿಮಾಡಿ ಕೊಳ್ಳುವುದರಲ್ಲಿಯೇ ಉಪಯೋಗಿಸಿದರು. ಆ ವರದಿಗಳಿಂದ, ಉಳಿದವರ ಸಂಖ್ಯೆಗಿಂತ, ಅಳಿದವರ ಸಂಖ್ಯೆಯಲ್ಲಿ ಹೆಚ್ಚು ಎಂದು ತೋರುತ್ತಿದ್ದರೂ, ಹಿಂದುಸ್ಥಾನದ ಎಲ್ಲೆಡೆಗಳಿಂದಲೂ ತುಂಬ ಧನ ಸಹಾಯವೇನೋ ಒದಗಿತು.

ನೆರೆ ಬಂದು ಹೋಗಿ ಎರಡು ತಿಂಗಳ ಕಾಲ ಸರಿಯಿತು. ಮಳೆಗಾಲವೂ ಮುಗಿದಿದೆ. ಈಗಷ್ಟೆ ಜನರಿಗೆ ಅರಿವೆ, ಅಂಚಡಿಗಳನ್ನು ದಾನ ಮಾಡಿದ್ದಾರೆ. ನಮ್ಮ ಸುಬ್ಬ ಪೂಜಾರಿಯಂಥವರು, ಇದ್ದೂ ಇಲ್ಲದಂತೆ ತೋರಿಸಿಕೊಂಡು, ಆ ದಾನಕ್ಕೆ ಕೈಯೊಡ್ಡಿದುದೂ ಉಂಟು. ಜನಕ್ಕೆ ಹೊರಗಿನ ಆರ್ಥಿಕ ಸಹಾಯ ಬಂದು ಒದಗುವ ಮೊದಲೇ, ಎಷ್ಟೋ ಗುಡಿಸಲುಗಳು ಸ್ವಸಹಾಯದಿಂದ ತಲೆಯೆತ್ತಿ ನಿಂತಿದ್ದುವು. ಈ ಸಮಯದಲ್ಲಿ ರಾಧಾಕೃಷ್ಣನಿಗೆ ತೋರಿದ ಮುಖ್ಯ ಭಾವನೆಯೆಂದರೆ—ಮಾಡುವ ಸಹಾಯ ಏನೇ ಇರಲಿ, ಅದನ್ನು ಆದಷ್ಟು ತ್ವರೆಯಿಂದ, ವಿವೇಚನೆಯಿಂದ ಮಾಡಿದ್ದಲ್ಲಿ ಇದರ ಹತ್ತು ಮಡಿ ಹಿತ ಜನಕ್ಕೆ ಆಗುತ್ತಿತ್ತು—ಎಂದು. 'ಈಗ ಇಷ್ಟಾದರೂ ಆಯಿತಲ್ಲಾ' ಎಂಬುದು ಅವನ ತೃಪ್ತಿ.

ಈಗ ಬೇಸಾಯದ ಪೈರು ಕಟಾವಾಯಿತು. ಅವನ ಮನೆಯ ಪೈರೂ ಅಂಗಳಕ್ಕೆ ಬಂದು ಬಿದ್ದಿದೆ. ಈ ನೆರೆಯ ಗಡಿಬಿಡಿಯಲ್ಲಿ, ತನ್ನ ಶಾಲೆಯ ಅವಸ್ಥೆಯನ್ನು ನೋಡದೆ ಹೋದೆನಲ್ಲಾ—ಎಂದು ಒಂದು ದಿನ ಆತ ಯೋಚಿಸುತ್ತಿರುವ ಗಳಿಗೆಗೇ, ಅಂಚೆಯ ಪೇದೆ ಅಂಗಳಕ್ಕೆ ಕಾಲಿರಿಸಿದನು. ಬಂದು, ಅವನ ಕೈಯ ಮೇಲೆ ಪತ್ರವೊಂದನ್ನು ಇರಿಸಿಹೋದನು. ಅದನ್ನು ಒಡೆದು ನೋಡಿ, ಅವನ ಮುಖ, ಕಪ್ಪುಗಟ್ಟಿತು. ನೇರಾಗಿ ಒಳಕ್ಕೆ ಹೋಗಿ "ಸತ್ಯ, ನಿನಗೆ ಮನೆಯಿಂದ ಹಿಂದೆ ಎರಡು ಕಾಗದಗಳು ಬಂದಿದ್ದುವೇ.'' ಎಂದು ಕೇಳಿದನು.

"ಯಾಕೆ? ಬಂದಿದ್ದುವು. ತಿಂಗಳೋ, ಹದಿನೈದು ದಿವಸಕ್ಕೋ ಹಿಂದೆ" ಹಿಂದೆ?

"ನನಗೆ ಹೇಳಲೇ ಇಲ್ಲವೇಕೆ?"

"ಹೇಳಿ ಮಾಡುವುದೇನು? ನೀವು ಮನೆಯಲ್ಲಿ ಸಮನಾಗಿ ಇದ್ದರ ಲ್ಲವೇ, ಹೇಳುವುದು?........ಅಲ್ಲದೆ, ಈ ಮಗು ಒಂದು ಇದೆಯಲ್ಲಾ" ಎಂದು ಮುಖವನ್ನು ತಗ್ಗಿಸಿ ಮಾತನಾಡಿದಳು. ಆ ಮಾತು ಯಾವುದೋ ನೋವನ್ನು ಒತ್ತಿ, ತಡೆದು, ಹೇಳುವಂತಿತ್ತು. ಆತನಿಗೂ ಬಾಯಿ ಬಾರ ದಾಯಿತು. ತುಂಬ ವ್ಯಥೆಯಿಂದ "ಸತ್ಯ, ನಿನ್ನನ್ನು ಊರಿನ ತನಕ ಕರೆದು ಕೊಂಡೇ ಬರಬೇಕೆಂದಿದ್ದಾರೆ. ಅಜ್ಜಿಯ ಹತ್ತನೆಯ ದಿನಕ್ಕಾದರೂ ಹೋಗ ಬೇಡವೆ?" ಎಂದನು. ಅವನ ಮುಖ ಚಿರಟಿತು. ಕಾಗದವನ್ನು ಆಕೆಯ ಕೈಯಲ್ಲಿ ಕೊಟ್ಟು, ಒಳಕ್ಕೆ ಹೋಗಿ, ಒಂದು ಚಾಪೆಯ ಮೇಲೆ ಮುಖ ಮುಚ್ಚಿಕೊಂಡು ಕುಳಿತನು. ಎಲ್ಲ ಒಂದು ಬರಿಯ ಕ್ಷಣಕ್ಕೆ ಮಾತ್ರ. ಮರುಗಳಿಗೆಗೆ ಸತ್ಯಳ ಕೊರಳು ಬಿಗಿದ ರೋದನ ಹೊರಟೊಡನೆಯೇ ಕ್ಷಮಾಯಾಚನೆಗಾಗಿ ಆತ ಓಡಬೇಕಾಯಿತು. "ನೀನು ಆಗಲೇ ಹೇಳಿ ದ್ದರೆ, ಹೇಗಾದರೂ ಮಾಡಿ ನಿನ್ನನ್ನು ಕಳುಹಿಸಿಕೊಡುತ್ತಿದ್ದೆ. ಅಜ್ಜಿಯನ್ನು ನೋಡುವ ಋಣ ನಮಗೆ ಇಬ್ಬರಿಗೂ ಇಲ್ಲದೆಹೋಯಿತು. ಚಿನ್ನದಂಥ ಹೆಂಗಸು ಆಕೆ. ಸಂದಿತು ಋಣ. ಅತ್ತರೆ ಬರುತ್ತದೆಯೇ?" ಎಂದು ಆತ ಮರುಕದಿಂದ ಕಂಬನಿಕರೆಯುತ್ತಿದ್ದ ತನ್ನ ಪತ್ನಿಯನ್ನು ಸಂತಯಿಸಲು ಹೋದನು. ಪಾಪ, ಹೆಣ್ಣು ಒಡಲು ಅದು. ಅಷ್ಟು ದಿನಗಳಿಂದಲೂ ತನ್ನ ನೋವನ್ನೂ ಆತುರವನ್ನೂ ತಡೆದು ಹಿಡಿದಿತ್ತು. ಎಷ್ಟೋ ಬಾರಿ ಅವಳ ಮನಸ್ಸು ಉದ್ವೇಗಗೊಂಡು "ಈ ಒಂದು ಕರಿ ಗೂಬೆ ಸತ್ತಿದ್ದರೆ, ತವ ರಿಗೆ ಹೋಗುವ ಬಿಡುಗಡೆ ಬರುತ್ತಿತ್ತು. ಅದು, ಇನ್ನು ನಮ್ಮ ಮನೆ ಯಿಂದ ಹೊರಡುವ ತನಕ ನಾನಿನ್ನು ಬರುವುದಿಲ್ಲ. ಎಂಥ ಅಸಹ್ಯದ ಕೆಲಸ" ಎಂದು ಆಕೆಯ ಮನಸ್ಸು ಕಲಕುಗೊಂಡಿತ್ತು. ಈಗ ಊರಿನ ಆತುರವೇ ಅಳಿದಂತಾಗಿದೆ. 'ಅಜ್ಜಿಯನ್ನು ತಿರುಗಿ ಕಂಡು ಮಾತನಾಡಿಸು ವುದಕ್ಕೆ ಉಂಟೇ? ಊರನ್ನು ಬಿಟ್ಟು ಬರುವಾಗ, ನೋಡಿದ ಆ ದರ್ಶ ನವೇ ಕೊನೆಯ ದರ್ಶನವಾಗಬೇಕೇ?, ಈ ದುಃಖಕ್ಕೆ ತಾಳ್ಮೆಯನ್ನು ತಂದು ಕೊಳ್ಳಲು, ಯಾವ ಅನುಭವಿಯವಳು? ತೀರ ಚಿಕ್ಕ ಕೂಸಿನಂತೆ ಬಿಕ್ಕಿ, ಬಿಕ್ಕಿ ಅಳತೊಡಗಿದಳು. ರಾಧಾಕೃಷ್ಣನು ಅವಳ ತೋಳುಗಳನ್ನು ತಬ್ಬಿ ಹಿಡಿದು, ಗಲ್ಲ ಸವರುತ್ತ "ಹೀಗೆ ಅಳಬಾರದು, ಯಾರು ಶಾಶ್ವತ?"

ಎಂದು ಅಂಥ ಸಂದರ್ಭಗಳಲ್ಲಿ ಎಲ್ಲರೂ ಹೇಳುವ, ಹಳಸಲು ವೇದಾಂತವನ್ನು, ಬಾಳ್ವೆಯ ಹೊಸ್ತಿಲಲ್ಲಿರುವ ಆಕೆಗೆ ಹೇಳುತ್ತಲೇ ಇದ್ದನು.

ಒಳಗಿನ ಗದ್ದಲವೇನೆಂದು ಬಿರುಮ, ಶ್ಯಾಮ, ನೀಲ, ಮತ್ತೊಬ್ಬ—ಇಣಿಕಿ ನೋಡುತ್ತಿದ್ದರು. ತಮ್ಮ ಸಾಕುತಾಯಿ ಈ ತೆರನ ರೋದನಕ್ಕೆ ಬಲಿಯಾದುದು ಇದೇ ಮೊದಲು-ಎಂದು ಅವರು ಬಲ್ಲರು.

ಯಾವುದಕ್ಕೂ ವೇಳೆ ಇರಲಿಲ್ಲ. ಆ ದಿನವೇ ಎಲ್ಲ ನಿರ್ಧಾರವಾಗಬೇಕು. ಸಂಜೆಯೊಳಗೆ ಮಂಗಳೂರನ್ನು ಸೇರಿ ಮರುದಿನವೇ, ಮೋಟರಿನಲ್ಲಿ ಕುಳಿತು ಊರಿಗೆ ಹೊರಡಬೇಕು. ಮೋಟರು, ದೋಣಿ, ಗಾಡಿ ಎಂದು ಹೇಗೆ ಧಾವಿಸಿದರೂ ನಿಧಾನವೇ! ತಾನು ಜತೆಯಲ್ಲಿ ಹೋಗದೆ ಆಕೆಯನ್ನು ಕಳುಹುವಂತಿಲ್ಲ. ತಾನೂ ಹೊರಟರೆ ಇಲ್ಲಿನ ಹೊಣೆಯಾರದ್ದು? ಆ ಬಡಕೂಸನ್ನು ಯಾರು ನೋಡಬೇಕು? ಶಾಲೆಯ ಮಕ್ಕಳ ಗತಿ? ಸ್ವಂತ ಸಂಸಾರಕ್ಕಿಂತ ಮಿಗಿಲಾದ ಸಂಸಾರ ಇದು ಆಯಿತೇ—ಎಂದು ತಬ್ಬಿಬ್ಬಿಗೆ ಒಳಗಾದನು.

ಅವನ ಮನಸ್ಸಿನ ತೊಡಕನ್ನು ಕಂಡು ಆಕೆಯು "ಬೇಡ, ಹೋಗಿ ಮಾಡುವುದೇನು? ಇದ್ದಾಗ ಹೋಗಿದ್ದರೆ ಒಂದು ಲೆಕ್ಕ. ಇನ್ನು ಸತ್ತವರು ಹೇಗೂ ಬರುವುದಿಲ್ಲ" ಎಂದಳು. ಅವಳು ಎಲ್ಲ ತೊಂದರೆಗಳನ್ನು ಅರಿತವಳು. ಆದರೆ ಅವಳ ಈ ಮಾತು, ತನ್ನ ಆಸೆ, ವೇದನೆಗಳನ್ನು ಬಿಗಿಹಿಡಿದು ಆಡುವ ಮಾತುಗಳೆಂದು ಅವನೂ ಬಲ್ಲನು. ಯೋಚಿಸಿ, ಯೋಚಿಸಿ-ಕಡೆಗೆ ರಾಧಾಕೃಷ್ಣನು 'ಸತ್ಯ, ನಮ್ಮಲ್ಲಿ ಒಬ್ಬರು ಇಲ್ಲಿದ್ದರೆ ಸಾಕು. ನೀನು ಹೋಗಲೇ ಬೇಕು. ಹೋಗದೆ ಇರುವುದೂ ಚಂದವಲ್ಲ. ನಾನು ನಿನ್ನನ್ನು ಮಂಗಳೂರಿನಲ್ಲಿ ಬಸ್ಸಿನಲ್ಲಿ ಕುಳ್ಳಿರಿಸಿ ಬರುತ್ತೇನೆ. ಜತೆಗೆ ಬಿರುಮನೂ ಹೋಗಲಿ. ಕುಂದಾಪುರಕ್ಕೆ ಹೋದರೆ, ಅಲ್ಲಿಂದ ಅನಂತರಾಮ ನಿನ್ನನ್ನು ಮನೆಗೆ ಒಯ್ದು ಮುಟ್ಟಿಸುತ್ತಾನೆ. ಅವನಿಗೊಂದು ತಂತಿ ಕೊಡುತ್ತೇನೆ" ಎಂದ. ಮರಕಾಲ ಕಿವಿ ನಿಮಿರಿಸಿ ನಿಂತಿದ್ದ ಹೊರಗೆ. ಅವನು ಇದ್ದಲ್ಲಿಗೆ ಬಂದು ಸಂಗತಿಯನ್ನು ಹೇಳಿದ್ದಾಯಿತು. "ಏನು ಮಾಡಲಿ, ಹೇಳು? ಈ ಮಗುವಿಗೋಸ್ಕರ ನಾನು ಇಲ್ಲಿ ಇರಬೇಕು" ಎಂದನು.

"ಅಯ್ಯೊ, ನೀವು ಅದನ್ನು-ಮಗು ಗಿಗು-ಎಂದು ರಾಗ ಎಳೆಯುವುದನ್ನು ನಾನು ನೋಡಲಾರೆ. ಆ ಕೆಲಸ ನನಗೆ ಬಿಡಿ, ನಾನು ಯಾರಿಗಾ

ದರೂ ಅದನ್ನು ಕೊಟ್ಟುಬರುತ್ತೇನೆ. ಮಳೆಗಾಲ ಕಳೆಯಿತು. ಯಾರಿಗಾ ದರೂ ಕೊಡಬಹುದು. ಅಲ್ಲದೆ ಇದ್ದರೆ, ಇಂಥ ಮಕ್ಕಳನ್ನು ಮಂಗಳೂರಿನ ಪಾದ್ರಿಗಳು ತೆಗೆದುಕೊಳ್ಳುತ್ತಾರಂತಲ್ಲ? ನೀವು ಬ್ರಾಹ್ಮಣರಾಗಿ, ಎಷ್ಟು ದಿನ ಅದನ್ನು ಕೊರಳಿಗೆ ತಬ್ಬಿಕೊಂಡು ಇರುತ್ತೀರಂತೆ?" ಎಂದನು.

"ಹಾಗೇಕೆ ಮಾಡಬಾರದು?" ಎಂದಳು ಸತ್ಯ. ಆಕೆಯ ಮನಸ್ಸಿನ ಪ್ರತಿರೋಧ, ಈ ಅಪರೋಕ್ಷವಾದ ನುಡಿಯಿಂದ ವ್ಯಕ್ತವಾಯಿತು. ಆದರೆ ಅವನ ಅಂತರಂಗ ಬೇರೆಯೇ ಹೇಳುತಿತ್ತು. ಭಿಕಾರಿಗಳ ಕೈಗೆ ಕೊಟ್ಟು ಅದನ್ನು ಅನುಪಾನವಿಲ್ಲದೆ ಸಾಯಿಸುವ ಇಷ್ಟ ಅವನಿಗಿರಲಿಲ್ಲ. ಹಿಂದು ವಾದ ತಾನು, ಪಾದ್ರಿಗಳಿಗೆ ದಾನ ಮಾಡುವರೆ ಮನಸ್ಸು ಒಪ್ಪುತ್ತಲಿಲ್ಲ. ಆದಕ್ಕಾಗಿ ವಿಷಯವನ್ನು ಮರೆಯಿಸಲು, "ಅದೆಲ್ಲಾ ಮುಂದಿನ ಸಂಗತಿ. ನೀನು ನಾಳೆ ಇವಳ ಜತೆಯಲ್ಲಿ ಕುಂದಾಪುರಕ್ಕೆ ಹೋಗಬೇಕು. ನಿಮ್ಮಿ ಬ್ಬರನ್ನು ಬಸ್ಸಿನಲ್ಲಿ ಕುಳ್ಳಿರಿಸುವ ಕೆಲಸ ನನ್ನದು" ಎಂದ.

ಮರಕಾಲನಿಗೆ ಮುಂದೆ ಮಾತೂ ಬರಲಿಲ್ಲ. ಬೇರೆ ಸಮಯವಾಗಿದ್ದರೆ "ಹೊಂ," ಎನ್ನುವವನು ಅವನು. ನಾಳೆ ಅವನು ಸಹ ಯಾತಕ್ಕೋ ಮುಹೂರ್ತವನ್ನು ನೋಡಿ ಇರಿಸಿದ ದಿನ. ಪ್ರಯಾಣಕ್ಕೆ ಅವನ ಸ್ವಾರ್ಥ ಒಪ್ಪದಾಗಿದೆ. ಅದನ್ನು ಮೌನದಿಂದ ತಿಳಿದುಕೊಂಡ ರಾಧಾಕೃಷ್ಣನು "ಶ್ಯಾಮಾ, ಎರಡು ದಿವಸ ನಾವಿಬ್ಬರೂ ಮನೆಯಲ್ಲಿಲ್ಲ. ಆ ಪಾಪದ ಮಗು ವನ್ನು ನೋಡಿಕೊಂಡು ಉಳಿದವರಿಗೆ, ಒಂದು ಗಂಜಿಮಾಡಿ ಬಡಿಸು ತ್ತೀಯಾ? ಜಾನುವಾರನ್ನು ಮರಕಾಲ ನೋಡಿಕೊಂಡಾನು" ಎಂದನು.

ಶ್ಯಾಮ ಆಶ್ರಮವಾಸಿಗಳಲ್ಲಿ ಹಿರಿಯ. ಹದಿನಾರು ವಯಸ್ಸಾಗಿತ್ತು. ಸತ್ಯ, ರಾಧಾಕೃಷ್ಣರೆಂದರೆ ತಂದೆತಾಯಿಗಳಿಗಿಂತ ಹೆಚ್ಚು ಅಕ್ಕರೆ. ತಮ ಗಾಗಿ ನಿತ್ಯ ದುಡಿಯುತ್ತಿರುವ ಅವರನ್ನು ಕಂಡು, ಅವನಿಗೆ ಎಲ್ಲಿಲ್ಲದ ಮೋಹ. ಅಲ್ಲದೆ ಆತನಿಗೆ ತಂದೆ ತಾಯಿರು ಇದ್ದಿರಲಿಲ್ಲ. ನೆರೆಯಲ್ಲಿ ಬಳಿದು ಬಂದ ಕೂಸಿನಂತೆ, ಅವನೂ ಒಬ್ಬ. "ಅದಕ್ಕೇನಂತೆ, ನೀವು ಏನೂ ಯೋಚನೆಮಾಡಬೇಡಿ. ಎಲ್ಲವನ್ನು ನಾನು ನೋಡಿಕೊಳ್ಳುತ್ತೇನೆ. ಎಷ್ಟೋ ಸಾರಿ ನಾನೇ ಹಾಲು ಉಣ್ಣಿಸಿದ್ದೇನೆ" ಎಂದು ಧೈರ್ಯ ಹೇಳಿದ. ಆತ ಮರಕಾಲನನ್ನು ಕರೆದು, ಹೊರಗಿನ ಕೆಲಸಗಳ ವಿವರಗಳನ್ನು ಹೇಳಿ ಕೊನೆಗೆ, "ಮಕ್ಕಳಿಗೆ—ಎಮ್ಮೆ ಹಾಲು ಕೊಡದೇ ಹೋದರೆ ಆಚೀಚೆ

ಬೇಡಿ ಹಾಲು ತಂದುಕೊಡು. ಮನೆಯಲ್ಲಿ ಮಗುವಿದೆ. ಮರೆಯಬೇಡ” ಎಂದು ನುಡಿದನು. ಆ ಸಂಜೆ ಅವರಿಬ್ಬರೂ ತುಂಬಿದ ಮನಸ್ಸಿನಿಂದ ಮಂಗಳೂರಿಗೆ ಹೋದರು.

ಶ್ಯಾಮ, ಗುರುವಿನ ಸ್ಥಾನವನ್ನು ತಾನು ವಹಿಸಿದನು. ಮನೆಯ ಕೆಲಸವನ್ನು ತೊಡಗಿದನು. ದಿನದ ಅರ್ಧವನ್ನು ಅಡುಗೆಯ ಮನೆಯಲ್ಲಿಯೂ, ಉಳಿದ ಸಮಯವನ್ನು ಕೂಸಿನ ಬಳಿಯಲ್ಲಿಯೂ ಕಳೆಯುವೆನೆಂದುಕೊಂಡ. ಆ ರಾತ್ರಿ ನಿಶ್ಚಿಂತೆಯಿಂದ ಕಳೆಯಿತು. ಮರುದಿನ ಬೆಳಿಗ್ಗೆ ಮಾತ್ರ ಮರಕಾಲನ ಸವಾರಿ ಅಲ್ಲಿರಲಿಲ್ಲ. ಎಮ್ಮೆಯನ್ನು ಕರೆದು, ಕೋಣಗಳನ್ನು ಮೇವಿಗೆ ಅಟ್ಟುವ ಕೆಲಸವನ್ನು ಹುಡುಗರೇ ಮಾಡಬೇಕಾಯಿತು.

ಮರಕಾಲನ ಅವಸ್ಥೆಯನ್ನು ಕೇಳುತ್ತೀರಾ? ಹೆಂಡತಿ ಮಕ್ಕಳು ಅಗಲಿ ಹೋದಂದಿನಿಂದ ಅವನು ಬರಿಯ ಹುಚ್ಚನಾಗಿದ್ದ. ಆಕೆಯ ಬಳೆಗಳನ್ನು ಅವಳಿಟ್ಟಲ್ಲಿಂದ ಜಾರಿಸಿ, ಸುಬ್ಬ ಪೂಜಾರಿಯಲ್ಲಿ ಅಡವಿರಿಸಿದ ಕತೆ ಕೇಳಿದ್ದೀರಿ. ಹಾಗೆ ಸಾಲ ತಂದ ಎಂಟು ರೂಪಾಯಿಗಳನ್ನು ನಾಲ್ಕು ದಿವಸದಲ್ಲಿ ಕುಡಿದು ಮುಗಿಸಿದ. ಈ ವಿಚಾರ ಹೇಗೋ, ಏನೋ, ಅವನ ಹೆಂಡತಿಗೆ ತಿಳಿಯಿತು. ಈತ ಬೇಸಾಯವನ್ನು ಬಿಟ್ಟು, ಕೈಕಟ್ಟಿ ಕುಳಿತುದನ್ನು ಕಂಡು ರೇಗಿದ ಅವಳು, ತುಂಬ ಸಿಡಿಮಿಡಿಗೊಂಡು ತನ್ನೆರಡು ಕೂಸುಗಳನ್ನು ಕಟ್ಟಿಕೊಂಡು, ತವರು ಮನೆಗೆ ಹೋದಳು. ಈತ ಕರೆಯ ಹೋದುದೂ ವ್ಯರ್ಥವಾಯಿತು. ತನ್ನ ಬಳೆಯ ಜತೆ ಮನೆಗೆ ಬರುವ ತನಕ ಕದಲುವುದಿಲ್ಲವೆಂದು ಹಟ ಹಿಡಿದಳು.

ಅದರಿಂದ ಮರಕಾಲನ ಕೋಪಶಾಪಗಳೆಲ್ಲ ಸುಬ್ಬ ಪೂಜಾರಿಯ ಮೇಲೆ ಎರಗಿದುವು. ಹಾಗಿರಲು, ಪೂಜಾರಿಯನ್ನು ನೆರೆಯಿಂದ ಪಾರು ಮಾಡಿದಾಗ ಅವನು ಇನಾಮಿನ ವಿಚಾರವನ್ನು ಮಾತನಾಡಿದ್ದನ್ನು ಕೇಳಿ ಈತನಿಗೆ ಹಿಡಿಸದಷ್ಟು ಕೋಪ ಬಂದಿತ್ತು. ಬೇರೆ ಸಮಯವಾಗಿದ್ದರೆ ಅವನನ್ನು ಸಿಗಿದು ತುಂಡರಿಸುತ್ತಿದ್ದನೋ ಏನೋ. ಪೂಜಾರಿ ಜಿಪುಣರಲ್ಲಿ ಜಿಪುಣ. ಆತ ಮುಳುಗಿದ ಮನೆಯನ್ನು ಬಿಡದೆ ಕುಳಿತದ್ದು, ಅಲ್ಲಿ ಹೂತಿಟ್ಟ ಹಣದ ಸಲುವಾಗಿ. ಕೊನೆ ಗಳಿಗೆಯ ತನಕವೂ ಅಲ್ಲಿರುತ್ತಿದ್ದ ಆತ. ಕೈಗೆ ದೊರೆತಷ್ಟು ರೂಪಾಯಿಗಳನ್ನು ಉಡುವಿಗೆ ಕಟ್ಟಿಕೊಂಡಿದ್ದ. ಆ ವಿಚಾರ ಮಗನಿಗೂ ಗೊತ್ತಿರಲಿಲ್ಲ. ಎಲೆ ಅಡಿಕೆಯ ಸಂಚಿಯಂತೆ

ಕಾಣುತ್ತಿದ್ದುದು ಚಿಲ್ಲರೆ ನಾಣ್ಯದ ಕಾಸಿನ ಗಂಟು. ಅದಕ್ಕೇನೆ ಆತ ಮರ ಕಾಲನ ಮುಂದೆ ಗಂಟನ್ನು ಬಿಡಿಸಲು ಅಂಜಿದ್ದು. ಅದಕ್ಕೇನೇ ನಾಳಿನ ವಾಯಿದೆ ಹಾಕಿದ್ದು. ರಾಮಣ್ಣ, 'ನಾಳೆ ನಿನಗೆ ಗಡದ್ದು ಮಾಡುತ್ತೇನೆ' ಎಂದಿದ್ದ. 'ಕೊನೆಗೆ ಅಷ್ಟಾದರೂ ಅಷ್ಟು; ಗಂಟಲ ತನಕ ಹೆಂಡವಾದರೂ ಹೆಂಡ.- ಬೇಡ ಎನ್ನುವ ಮನಸ್ಸು ಮರಕಾಲನಿಗೆ ಇದ್ದಿರಲಿಲ್ಲ.

ನಾಳೆ ಬರುವೆನೆಂದ ಆ ರಾಮಣ್ಣನು ಎಂಟು ದಿವಸವೂ ಕಾಣಸಿಗ ಲಿಲ್ಲ. ಅವನನ್ನು ಹುಡುಕಾಡುವುದು ಮರಕಾಲನಿಗೆ ಸಾಧ್ಯವಾಗಲಿಲ್ಲ. ಮಾಸ್ತರರ ಬಿಟ್ಟಿಯಲ್ಲಿಯೇ ಅವನ ಸಮಯವೆಲ್ಲ ಹೋಯಿತು. "ಈ ಪೂಜಾರಿ ಒಂದು ಸಲ ನನ್ನ ಕೈಗೆ ಸಿಗಲಿ. ಅವನನ್ನು ಸಿಗಿದು ಹಾಕು ತ್ತೇನೆ" ಎಂದು ಕಾದಿರುವ ಗಳಿಗೆಗೇನೇ, ರಾಮಣ್ಣನ ಭೇಟಿ ಆಯಿತು. ಕಂಡೊಡನೆಯೇ ಮರಕಾಲ "ನಂಬಿದರೆ ನಂಬಬೇಕು ನಿಮ್ಮಂಥವರನ್ನು" ಎಂದು ಬಿಟ್ಟ.

"ಯಾಕೆ ನಂಬಬಾರದು?" ಎಂದ ತರುಣ ರಾಮಣ್ಣ.

"ಅಲ್ಲ. ನಾಳೆ—ಎಂದು ಆಡಿದ ಮಾತು ಇಲ್ಲದೇ ಹೋದರೆ?"

"ಅಷ್ಟೆಯೇ" ಎಂದು ಕಿಸೆಯಿಂದ ಒಂದು ಕಾಗದದ ಕಟ್ಟನ್ನು ತೆಗೆದು ಅವನ ಕೈಯಲ್ಲಿ ಇರಿಸಿದ.

ಅದನ್ನು ಬಿಚ್ಚಿನೋಡುತ್ತಾನೆ,—ತಾನು ಸುಬ್ಬನಲ್ಲಿ ಅಡವು ಇರಿಸಿದ ಬಳೆಗಳು ಅವು. ಮರಕಾಲನಿಗೆ ಸ್ವರ್ಗವೇ ಸಿಕ್ಕಿದಂತಾಯಿತು. "ನನ್ನ ಸಾಲ ಯಾವಾಗ ತೀರಿಸಬೇಕಂತೆ" ಎಂದು ಕೇಳಿದನು.

"ಸಾಲ ತೀರಿತು ಅಲ್ಲವೇ ಮರಕಾಲ? ಇದಕ್ಕಿಂತ ದೊಡ್ಡ ಋಣ ಪರಿಹಾರ ಉಂಟೇ?" ಎಂದು ಮರಕಾಲನ ಬೆನ್ನನ್ನು ಚಪ್ಪರಿಸಿ ರಾಮಣ್ಣ ಹೊರಟುಹೋದನು. ರಾಮಣ್ಣನಿಗೆ ಮರಕಾಲನ ಸಿಟ್ಟಿನ ಯಾವತ್ತೂ ಗುಟ್ಟು ತಿಳಿದಿದೆ. ಅಷ್ಟಿದ್ದೂ ಜೀವಕ್ಕೆ ನೆರವಾದ ಮರಕಾಲನ ಉಪಕಾ ರವನ್ನು ಆತ ಮರೆತಾನೆಯೆ? ಜಿಪುಣ ತಂದೆಯೊಡನೆ ಜಗಳ ಮಾಡಿ, ಈ ಇನಾಮನ್ನು ತಂದು ಒಪ್ಪಿಸಿಯೇ ಬಿಟ್ಟನು.

ಈ ಎರಡು ತಿಂಗಳ ಅವಧಿಯಲ್ಲಿಯೂ ಬಳೆಯ ಜೋಡನ್ನು ಮರ ಕಾಲ ತನ್ನ ನಡುವಿಗೆ ಬಿಗಿದುಕೊಂಡೇ ಇದ್ದಾನೆ. ಹೇಗಾದರೂ ಮಾಡಿ,

ಹೆಂಡತಿಯನ್ನು ಒಲಿಸಿ, ಕರೆದು ತರಬೇಕೆಂಬುದು ಅವನ ಯೋಚನೆ. ಆದರೆ ಅಂಥ ದಿಗ್ವಿಜಯಕ್ಕೆ ಬರಿದೆ ಹೋಗಲಾರ; ಧೈರ್ಯ ಸಾಲದು. "ಪರವ" ಒಬ್ಬನನ್ನು ಭೇಟಿಯಾಗಿ, ಮುಹೂರ್ತ ಕೇಳಿ ಹೋಗಬೇಕು. ಅವನೂ ಮನೆ ಕಳೆದುಕೊಂಡವರಲ್ಲಿ ಒಬ್ಬನು. ಹೀಗಾಗಿ ತನ್ನ ಯೋಚನೆಗಳಿಂದ ಅಲೆದಾಡುತ್ತಿದ್ದಾನೆ. ಹೇಗಾವರೂ ಮಾಡಿ ಮರಕಾಲನು ಅವನನ್ನು ಸಂಧಿಸಿ, ದಿನ ನಿಶ್ಚಯಮಾಡಿಕೊಂಡು ಬಂದರೆ, ಅದೇ ದಿನಕ್ಕೆ ನಮ್ಮ ಮಾಸ್ತರರು, ಕುಂದಾಪುರಕ್ಕೆ ಹೋಗುವ ಬಿಟ್ಟಿಯನ್ನು ಹೆಚ್ಚಬೇಕೇ?

ಮಾಸ್ತರರು ಹೋದ ಮರುದಿನ ಮುಂಜಾನೆಯೇ ಮರಕಾಲನು ಮಾಯವಾದನು; ಅತ್ತೆಯ ಮನೆಗೆ ತನ್ನವಳನ್ನು ಒಲಿಸಲು ಹೋಗಿ ಒಂದು ವಾರ ಕುಳಿತನು. ಈಗ ಅವರನ್ನು ಕರೆದು ತರಬೇಕು-ಎಲ್ಲಿಗೆ? ಊರಲ್ಲಿದ್ದ ಮನೆಗಳು ಮಣ್ಣುಗೂಡಿ ಹೋಗಿವೆ. ತಂದರೆ ಆ ಸಾವಿನ ಮನೆಗೇನೇ ತರಬೇಕಾಯಿತು. ವ್ಯಥೆಯಿಂದ—ಯಾರನ್ನೋ ಕರೆದು, ಮನೆಯ ಸೋಂಕನ್ನು ತೆಗೆಯಿಸಿ, ಎರಡನೆಯ ಬಾರಿಗೆ ಮನೆ ತುಂಬಿಸಿದ್ದಾಯಿತು.

ಇತ್ತ ರಾಧಾಕೃಷ್ಣ ಕುಂದಾಪುರದ ತನಕ ಪ್ರಯಾಣಮಾಡಿದ. ಅಲ್ಲಿ ಅನಂತರಾಮನಿಗೆ ಮುಂದಿನ ಕೆಲಸವನ್ನು ಒಪ್ಪಿಸಿ, ಮರುದಿನವೇ ಮಂಗಳೂರನ್ನು ಸೇರಿದನು. ಅಲ್ಲಿಂದ ಬಂದು ನೋಡುವಾಗ, ಮರಕಾಲ ವೇಳೆಯಲ್ಲಿ ಮೋಸಕೊಟ್ಟದ್ದು ತಿಳಿಯಿತು. "ಹಾಗೆ ನೋಡಿದರೆ, ನಾನು ಹಿಂದಿರುಗಿದ್ದೇ ಒಳ್ಳೆಯದಾಯಿತು. ಮಾವ ಏನು ತಿಳಿಯುತ್ತಾರೋ? ಕುಂದಾಪುರಕ್ಕೆ ಹೋಗಿಯೂ ಅಲ್ಲಿಯ ತನಕ ಹೋಗಲಿಲ್ಲವೆಂದು ಬೇಸರಗೊಂಡಾರು-ಮಾಡುವುದೇನು" ಎಂಬ ವ್ಯಥೆಯುಂಟಾಯಿತು. ಅವನಿಲ್ಲದ ಆ ಎರಡು ದಿನ ಕಾಲ, ಶ್ಯಾಮ ತುಂಬ ಎಚ್ಚರದಿಂದ ತನ್ನ ಕೆಲಸವನ್ನು ಮಾಡಿದ್ದ. ಈಗ ರಾಧಾಕೃಷ್ಣನ ಮೇಲೆಯೇ ಆ ಹೊರೆಗಳೆಲ್ಲವು ಬಂದು ತಿರುಗಿ ಸೇರಿದುವು.

ಇದಾಗಿ ಒಂದು ವಾರವೂ ಕಳೆಯಲಿಲ್ಲ—ಸತ್ಯಳಿಂದ ಅವನಿಗೆ ಪತ್ರ ಬಂದಿತು. "ನಾನೊಂದು ಎರಡು ತಿಂಗಳು ಕಳೆದ ಮೇಲೆ ಅಲ್ಲಿಗೆ ಬಂದರೆ ಆಗದೇ?" ಎಂಬ ಬೇಡಿಕೆಯ ಮಾತುಗಳನ್ನು ಅವಳು ಬರೆದಿದ್ದಳು. ಅದರ ಜತೆಗೆ "ಮಗುವನ್ನು ಯಾರಿಗಾದರೂ ಕೊಟ್ಟರೇ?" ಎಂದೂ ಕೇಳಿದ್ದಳು. ಅದನ್ನು ಓದುತ್ತಲೇ ರಾಧಾಕೃಷ್ಣನ ಮನಸ್ಸು ತೀರ ಕುದಿಯತೊಡಗಿತು.

ಆಕೆಯು ಬರುವಿಕೆ ನಿಧಾನವಾದರೆ ಎಲ್ಲವನ್ನೂ ತಾನು ನೋಡಿಕೊಂಡೇನು. ಆದರೆ ಈ ತನಕ ತನ್ನವಳಿಂದ ಮಾಡಿಸಿದ ಸೇವೆ, ಮಗುವಿನ ಆರೈಕೆ, ದಾಕ್ಷಿಣ್ಯದ ಸೇವೆ ಆಯಿತಲ್ಲಾ—ಎಂಬ ಯೋಚನೆ ಹೊಳೆಯಿತು. ಅವಳ ಮನಸ್ಸು ಈ ಒಂದು ವಿಚಾರದಲ್ಲಿ ಉದಾರವಾಗಲಿಲ್ಲವಲ್ಲ—ಎಂದು ನೋವಾಯಿತು. ಅವಳ ಮನಸ್ಸಿಗೆ ಒಪ್ಪದ ಕೆಲಸವನ್ನು ಇನ್ನು ಮುಂದಾದರೂ ಅವಳಿಂದ ಮಾಡಿಸುವುದು ಸಮವೇ—ಎಂಬ ಚಿಂತೆಯು ಉಂಟಾಯಿತು. ಅದನ್ನು ಇತರರಿಗಾದರೂ ಕೊಟ್ಟುಬಿಡಬೇಕು ಎಂಬುದನ್ನು ಯೋಚಿಸುವುದಾಯಿತು.

* * * *

ಆ ವಾರದ ಕೊನೆಗೆ ಬಿರುಮ ಮರಕಾಲನು ಪತ್ನಿ ಪುತ್ರ ಸಮೇತನಾಗಿ, ಕಿರಿಪದವಿಗೆ ಚಿತ್ತೈಸಿದನು. ಅವರ ಮನೆಗೆ ಬಂದು "ಅಯ್ಯ, ಸಿಟ್ಟು ಮಾಡಿದರೋ ಏನೋ. ನಾನು ಏನು ಮಾಡಲಿ? ಇವಳನ್ನು ಕರೆದು ತರುವುದಕ್ಕೆ ಗಳಿಗೆಯನ್ನು ನಿಶ್ಚಯಮಾಡಿಕೊಂಡು ಹೋಗಿದ್ದೆ. ದಿನ ಕಂಡು ಹೋದರೂ, ಕರೆದು ತರಲು ರಾಮಾಯಣವಾಯಿತು. ಇನ್ನು ಗಳಿಗೆ ತಪ್ಪಿಹೋಗಿದ್ದರೆ ಬೇರೊಂದೇ ಮದುವೆ ಆಗಬೇಕಿತ್ತೋ ಏನೋ" ಎಂದು ಕ್ಷಮಾಯಾಚನೆಮಾಡಿದನು.

ರಾಧಾಕೃಷ್ಣನಿಗೆ ಇದರಿಂದ ಹಳೆಯ ನೆನಪುಗಳು ಉದಯವಾದುವು. ಹಿಂದೆ ರಾಮಣ್ಣನೊಡನೆ ಮಾಡಿದ ಸಂಧಾನದ ವಿಚಾರ ನೆನಪಿಗೆ ಬಂತು. "ಕೊನೆಗೂ ಬಿರುಮ, ಸುಬ್ಬ ನಿನಗೇನಾದರೂ ಕೊಟ್ಟನೇ? ರಾಮಣ್ಣನಿಗೆ ನಾನು ಹೇಳಿದ್ದು ಸಾರ್ಥಕ ಆಯಿತೇ" ಎಂದು ಕೇಳಿದ.

"ಹೌದು ಒಡೆಯ, ರಾಮಣ್ಣ ನಾನು ಮೊದಲು ತಿಳಿದ ಹಾಗಲ್ಲ ಅಪ್ಪನಿಗೆ ಆನೆಯಾದರೂ ಮಗ ಚಿಂತೆ ಇಲ್ಲ, ದರ್ಬಾರಿ. ಅವನು ನನ್ನ ಸಾಲ ಮಾಫಿಮಾಡಿ ಬಳೆಯ ಜೋಡನ್ನು ತಂದು ಕೊಟ್ಟಿದ್ದಾನೆ" ಎಂದು ಹೇಳಿ, ಅದರಿಂದ ತಾನು ಮಾಡಿದ ಮುಂದಿನ ಕೆಲಸವನ್ನು ವಿವರಿಸಿ "ಈಗ ಗಂಡಹೆಂಡಿರು ಇಬ್ಬರೂ ಬಂದಿದ್ದೇವೆ. ಸ್ವಲ್ಪವಾದರೂ ಬೇಸಾಯ ಮಾಡದೆ ಕಳೆಯುವ ಹಾಗಿಲ್ಲ. ಅವಳಿಗೆ ಮೊದಲೇ ನನ್ನ ಮೇಲೆ ಸಿಟ್ಟು" ಎಂಬ ಪೀಠಿಕೆಯನ್ನು ಹಾಕಿದನು. ಅವನ ಮನಸ್ಸಿನಲ್ಲಿ-ಮಾಸ್ತರರು ಇದ್ದ

ಭೂಮಿಯು ತನ್ನದು. ಅವರು ಅದನ್ನು ತನಗೇನೇ ಬಿಟ್ಟರೆ ಆಗುತ್ತಿತ್ತು—ಎಂದು ತೋರಿತು. ಆದರೆ ಅಷ್ಟನ್ನು ಹೇಳುವ ಧೈರ್ಯ ಮಾತ್ರ ಬರಲಿಲ್ಲ.

ಈ ಮಾತು ನಡೆಯುತಿದ್ದಾಗ ಆ ಸಾಕು ಮಗು ಕೂಗಿತು. ರಾಧಾಕೃಷ್ಣ ಅದಕ್ಕೆ ಹಾಲುಕೊಡುವ ವೇಳೆ ಆಯಿತೆಂದು ಒಳಕ್ಕೆ ಹೋದನು. ಆಗ ಮರಕಾಲ ತನ್ನ ಹೆಂಡತಿಯೊಂದಿಗೆ ಆ ಮಗುವಿನ ಕತೆಯನ್ನು ಹೇಳಿದನು. ಆ ಮಗುವಿನ ತಾಯಿ ತಮ್ಮ ಗುಡಿಸಲಿನಲ್ಲಿಯೇ ಸತ್ತ ಸಂಗತಿಯನ್ನು ಮಾತ್ರ ಹೇಳಲೇ ಇಲ್ಲ. ಅವನ ಹೆಂಡತಿ ಹೊನ್ನಕ್ಕ ಕತೆಯನ್ನು ಕೇಳಿ:

"ಅದು ಯಾವ ಕೂಸ"?

"ಕೂಸನೂ ಅಲ್ಲ ಮೇರನೂ ಅಲ್ಲ. ಕೊರಗರದ್ದೇ ಮಗು. ಕೆಳಬೈಲಿನ ಆ ತುದಿಯಲ್ಲಿ ಕೊಪ್ಪ ಕಟ್ಟಿಕೊಂಡು ಇದ್ದಿಲ್ಲವೇ? ಆ ಸುಟ್ಟನ, ಸತ್ತುಹೋದನಲ್ಲಾ ಕಳೆದ ವರ್ಷ............"

"ಯಾರು ಬಟ್ಯನೇ?"

"ಹಾ, ಅವನೇ. ಅವನ ಮಗನ ಮಗು"

"ಅವನಾದರೆ, ಅವನ ಅಳಿಯ ಘಟ್ಟಕ್ಕೆ ಹೋಗುವವ. ಅವನ ಮಗುವಾದರೆ ಸುದ್ದಿ ತಿಳಿಸಿದರೆ ಬರುತ್ತಿದ್ದ. ಕೊಯಿಲಿನ ಸಮಯಕ್ಕೆ ಊರಿಗೆ ಬರಬೇಕಿತ್ತು. ಇನ್ನಾದರೂ ಬಾರದೆ ಇರಲಾರ" ಎಂದಳು.

"ಅವಳಿಗೂ ನಗು ಬಂದಿತು. ಆ ಕೊರಗರ ಕೂಸನ್ನು ಇವರು ಸಾಕುವುದೆಂದರೆ ಏನು—ಎಂದು ಆ ಬ್ರಾಹ್ಮಣರ ವಿಚಾರದಲ್ಲಿ ತಾತ್ಸಾರ ಭಾವನೆ ಯುಂಟಾಯಿತು. ಬಹಳ ಹೊತ್ತಿನ ತನಕ ರಾಧಾಕೃಷ್ಣ ಹೊರಗೆ ಬಾರದುದರಿಂದ, ಮರಕಾಲ ಹೆಂಡತಿ ಹೊನ್ನಕ್ಕಳೊಡನೆ ಮನೆಗೆ ತೆರಳಿದ. ಮರುದಿನದಿಂದ, ಕಿರಿಪದವಿನಲ್ಲಿ—ಆ ಗಂಡಹೆಂಡಿರಿಬ್ಬರೂ ಜತೆಗೂಡಿ ದುಡಿಯತೊಡಗಿದರು. ಇನ್ನು ಸುಗ್ಗಿಯ ಬೆಳೆ, ಸುಗ್ಗಿಗೆ ನೀರು, ಧಾನ್ಯದ ಬೆಳೆ, ಗೆಣಸು, ಗೆಣಸಿನ ನೀರು—ಮಾಡುವವರಿಗೆ ಕೆಲಸ ಇದ್ದೇ ಇದೆಯಲ್ಲ .

*　　*　　*　　*

ರಾಧಾಕೃಷ್ಣ ಎಷ್ಟು ಯೋಚಿಸಿದರೂ ದಾರಿಗಾಣದಾದ. ಹೆಂಡತಿಗೆ ಪತ್ರವನ್ನೇನೋ ಬರೆದ-"ನೀನು ಮನೆಯಲ್ಲಿರಬೇಕೆಂದು ಆಸೆಯಿರುವಷ್ಟು

ದಿನ ಇದ್ದುಕೊಂಡೇ ಬಾ. ಆಗಾಗ ಅಲ್ಲಿಗೆ ಹೋಗಿ ಬರಲು ಆಗುತ್ತದೆಯೇ?" ತನಗೆ ಇಲ್ಲಿನ ಕೆಲಸವೇನೂ ಕಷ್ಟವಾಗಲಾರದು ಎಂದೂ ತಿಳಿಸಿದನು. ಅದರ ಜತೆಯಲ್ಲಿ "ಈ ಮಗುವನ್ನು ಸಾಕಿಕೊಂಡಿರುವ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು? ಇಷ್ಟವಿಲ್ಲದೆ ನೀನು ಆ ಕೆಲಸವನ್ನು ಮಾಡುತ್ತಿರು ವುದು ನನಗೂ ನೋವಿನ ಸಂಗತಿ. ಇನ್ನು ಮುಂದೆ ಆ ಕೆಲಸ ನನಗೇನೆ ಇರಲಿ" ಎಂದು ಬರೆದನು. ಅದರಿಂದ ಆಕೆಯ ಮನಸ್ಸು ಹೆಚ್ಚಿನ ತಳ ಮಳಕ್ಕೆ ಗುರಿಯಾಗದೆ ಇದ್ದೀತೇ?

ಇತ್ತ ದೀವಳಿಗೆ ಹಬ್ಬ ಬರಲಾಯಿತು. ಮಾವನ ಮನೆಯಿಂದ ಅಳಿ ಯನಿಗೆ ಕರೆಯೂ ಬಂದಿತು. ಸತ್ಯಳನ್ನು ಕರೆದುಕೊಂಡು ಹೋದ ಹಾಗೂ ಆಯಿತು; ಹಬ್ಬಕ್ಕೆ ಬಂದಂತೂ ಆಯಿತು—ಎಂದು ಪತ್ರ ಬರೆದಿದ್ದರು. ಅದರ ಮೇಲಿಂದ—ಆಕೆ ತಮ್ಮ ನೂತನ ಸಂಸಾರದ ಕತೆಯನ್ನು ತಂದೆಗೆ ತಿಳಿಸಿ ಗೊಂದಲ ಎಬ್ಬಿಸಿರಲಿಲ್ಲ—ಎಂಬುದು ಸ್ಪಷ್ಟವಾಯಿತು. ಆದರೆ ತಾನು ನಾಲ್ಕಾರು ದಿವಸಗಳ ಮಾತಿಗೆ ಹಾಗೆ ಅಲ್ಲಿಗೆ ಹೋಗಿಬರುವುದು ಸಾಧ್ಯವೇ ಎಂಬ ಯೋಚನೆ ತಲೆದೋರಿತು. ಅದು ಆಗುವ ಕೆಲಸವಲ್ಲ. ಕಾರಣವನ್ನು ವಿವರಿಸಿ ಬರೆಯುವಂತೆಯೂ ಇಲ್ಲ. ಸುಮ್ಮನೆ ಉಪಚಾರ ಕ್ಕಾಗಿ ಉತ್ತರ ಬರೆದ—"ಬರಲು ಪ್ರಯತ್ನ ಮಾಡುತ್ತೇನೆ! ಆಗದೆ ಹೋ ದರೆ ಕ್ಷಮಿಸಬೇಕು"—ಎಂಬ ಇಬ್ಬಾಯ ಕಾಗದ ಹಾಕಿದ. ಜತೆಗೆ ಅನಂತ ರಾಮನಿಗೆ ಒಂದು ಪತ್ರ ಬರೆದ "ಆಲೆಮನೆಗೆ ಹೋಗಿ, ಸತ್ಯ ಎಂದು ಬರುವುದೆಂದು ತಿಳಿದು, ಮಂಗಳೂರಿಗೆ ಕರೆದುಕೊಂಡು ಬಾ" ಎಂದು ತಿಳಿ ಸಿದನು. "ದೀವಳಿಗೆ ಕಳೆದು ಹೋದರೆ ಸಾಕು, ಮೊದಲೇ ಹೋಗಿ ಕೇಳು ವುದು ಬೇಡ" ಎಂದೂ ಸೂಚಿಸಿದ.

ಇನ್ನು ಆತನು ತನ್ನ ಆಶ್ರಮದ ಆರು ಮಂದಿ ಕಳೆದುಳಿದ, ತಿರುಗಿ ಅನ್ನಕ್ಕಾಗಿ ಸೇರಿದ, ಬಾಲಕರ ಶಿಕ್ಷಣ ವಿಚಾರವನ್ನು ಯೋಚಿಸಬೇಡವೇ? ಇಷ್ಟು ದಿನ ನೆರೆ, ಬೇಸಾಯ, ಕೊಯಿಲು ಇವುಗಳ ಚಿಂತೆಯಾಯಿತು. ಈಗ ಸುಗ್ಗಿಯನ್ನು ಬಿತ್ತಿಯೂ ಆಗಿದೆ. ಗೆಣಸು ನಟ್ಟೂ ಆಗಿದೆ. ಸಹಾಯಕರಿ ಲ್ಲದೆ ಮಾಡುತ್ತಿದ್ದ ಆಶ್ರಮದ ಕೆಲಸಗಳಿಗೆ ಈಗ ತುಸು ವಿರಾಮ ಒದಗಿದೆ. ಅಲ್ಲದೆ ಹುಡುಗರ ಹಿರಿಯರಿಂದ-ಅವರನ್ನು ಕೂಲಿ ಕಸಬಿಗೆ ಹಚ್ಚಿದ್ದಾನೆ- ಎಂಬ ಅಪವಾದ ಬರಬಾರದಲ್ಲಾ? ಇನ್ನಾದರೂ ತಾನು ಶಿಕ್ಷಣದ ಪುನ

ವ್ಯವಸ್ಥೆಯನ್ನು ಮಾಡದೆ ಹೋದರೆ ಕೇಡೇ ಸರಿ-ಎಂದು ಯೋಚಿಸುತ್ತಿರುವಾಗಲೇ, ಒಬ್ಬೊಬ್ಬರೇ ಹಿರಿಯರು ಅಲ್ಲಿ ಉದಯಿಸಿದರು. ಮಕ್ಕಳನ್ನು ತಂದು ಒಪ್ಪಿಸಿದ ಅವರಿಗೆ, ಈಗಷ್ಟೆ ಅವರ ನೆನಪಾದಂತೆ, ಅವನಿಗೆ ಕಂಡಿತು. "ದೀವಳಿಗೆ ಸಮೀಪಿಸಿತಲ್ಲವೆ" ಅದಕ್ಕಾಗಿ ಬಂದಿರಬೇಕು ಎಂದು ಆತ ಆಲೋಚಿಸಿದ. ಆದರೆ ಬಂದವರು ಹಬ್ಬಕ್ಕೆ ಕರೆಯಲು ಬಂದುದಲ್ಲ. ಬದಲು "ಇದು, ಹೊಲೆಯರ ಆಶ್ರಮ ಆಗುವುದಾದರೆ ನಮ್ಮ ಮಕ್ಕಳನ್ನು ಇರಿಸುವ ಹಾಗಿಲ್ಲ. ಬಡವರಾದರೇನು? ಜಾತಿ, ನೀತಿ ಒಂದೂ ಬೇಡವೇ?" ಎಂಬ ಅಭಿಪ್ರಾಯವನ್ನು ಪ್ರಕಟಿಸಿದರು. ದೀವಳಿಗೆಗೆ ಎರಡು ದಿನ ಮುಂಚೆ ಅಲ್ಲಿ ಉಳಿದ ಶಿಷ್ಯನೆಂದರೆ ಶ್ಯಾಮ ಒಬ್ಬನೇ. ಅತಿ ವೇದನೆಯಿಂದ ರಾಧಾಕೃಷ್ಣನು ಶ್ಯಾಮನನ್ನು ಕರೆದು "ನಿನಗೆ ಯಾರೂ ನೆಂಟರಿಲ್ಲವೇ? ದೂರದಿಂದ ಯಾರೋ ಇದ್ದಾರೆಂದು ಅಂದೆಯಲ್ಲ? ಎಲ್ಲಿ ಅದು—ಕಾರ್ಕಳದಲ್ಲೇ? ಹಬ್ಬಕ್ಕೆ ಹೋಗಿ ಬರುವಿಯಾದರೆ ಹೋಗಿ ಬಾ, ನಾನು ಹಣ ಕೊಡುತ್ತೇನೆ. ಇಲ್ಲಿ ನಿನಗೊಬ್ಬನಿಗೆ ಬೇಸರವಾದೀತು" ಎಂದು ನುಡಿದನು.

ಶ್ಯಾಮನ ಮುಖ ಸಣ್ಣದಾಯಿತು. "ಯಾಕೆ? ಅವರೆಲ್ಲರು ಹೋದರೆಂದೇ? ನಾನು ಹೋಗುವುದಿಲ್ಲ. ನೀವು 'ಇರು' ಎನ್ನುವ ತನಕ ಇರುತ್ತೇನೆ. ಇದ್ದ ಒಬ್ಬ ಚಿಕ್ಕಪ್ಪ ಎಂದೇ ನನ್ನನ್ನು ಹೊಡೆದು ಓಡಿಸಿದ್ದಾನೆ. ಯಾವುದೋ ಬಾದರಾಯಣ ಸಂಬಂಧ ಅದು; ಒಂದು ಚೂರು ತಂದೆ ಮಾಡಿಟ್ಟ ಭೂಮಿ ಇತ್ತು; ಅದು ಅವರಿಗೇನೇ ಅಡವು. ಅವರು ಓಡಿಸಿದರೆ ಓಡಿಸಲಿ. ಅವರು ಮಾಡಿದ ಪಾಪದ ಫಲವು ಅವರಿಗೆ ದೊರಕೀತು. ಆದರೆ ನೀವೂ ನನ್ನನ್ನು ಓಡಿಸುವ ಮನಸ್ಸು ಮಾಡುತ್ತೀರಿ—ಎಂದು ತಿಳಿದಿರಲಿಲ್ಲ" ಎಂದು ಹೇಳಿ ಬಿಕ್ಕಿ ಬಿಕ್ಕಿ ಅತ್ತನು.

"ನಾನು ನಿನ್ನನ್ನು ಓಡಿಸುವುದಕ್ಕೆ ಹಾಗೆ ಹೇಳಿದ್ದಲ್ಲ. ನಿನ್ನ ಮನಸ್ಸು ಹೇಗಿದೆಯೋ ಎಂದು ನೋಡುವುದಕ್ಕೆ ಹೇಳಿದೆನು. ಎಲ್ಲರೂ ಹೋದರು. ನೀನು ಒಬ್ಬನೇ ಉಳಿದವ. ಏನು ಮಾಡುತ್ತೀಯೋ-ಎಂದು ಕೇಳಿದೆ. ಹಾಗೆ ನೀನು ನಾಲ್ಕು ದಿನ ಹಬ್ಬಕ್ಕೆ ಹೋಗಿ ಬರುವುದು ನನಗೂ ಸಂತೋಷವೇ. ನೀನು ಬಂದು ಎಷ್ಟೋ ಸಮಯವಾಯಿತು."

"ನನಗೆ ಯಾರೂ ಇಲ್ಲ. ನಾನು ಎಲ್ಲಿಗೆ ಹೋಗಲಿ? ಹೋಗಿ ಆಗಬೇಕಾದುದು ಏನು? ದಾರಿಯಲ್ಲಿ ಭಿಕ್ಷೆಯೆತ್ತಿ ತಿರುಗಾಡುತ್ತಿದ್ದ ನನ್ನನ್ನು

ದಯಾನಂದ ರಾಯರು ಕರೆದು ಇಲ್ಲಿಗೆ ಕಳುಹಿಸಿದರು. ನೀವು ಹೇಳಿದ ಕೆಲಸಮಾಡಿಕೊಂಡಿರುತ್ತೇನೆ. ನನ್ನ ಜೀವನ ನಾನು ಸಾಗಿಸುವಷ್ಟು ಪಾಠ ಹೇಳಿಕೊಡಿ. ಆ ಮೇಲೆಯೂ ನಿಮ್ಮ ಒಟ್ಟಿಗೆ ಇರಬೇಕೆಂದು ನನಗೆ ಆಸೆ. ಸತ್ಯಕ್ಕ ನನಗೆ ತಾಯಿ. ನೀವು ನನಗೆ ತಂದೆ" ಎಂದ. ಅವನ ಮರುಕದ ನುಡಿಯನ್ನು ಕೇಳಿ ತನ್ನ ಹೊಣೆಯ ಅರಿವು ಆಯಿತು. ಒಂದು ಕ್ಷಣ ಕಾಲ ಅವನ ಮನಸ್ಸು ದು:ಖದಿಂದ, ಕೋಪಕ್ಕೆ ಹಾರಿದ್ದು ನಿಜ. ಬಾಯಿಂದ ವ್ಯಂಗ್ಯ ಬಂದುದೂ ನಿಜ. ಅವನ ಮಿದು ಮನಸ್ಸಿನ ನೋವು ಅವನಿಗೇನೇ ಗೊತ್ತು. ಈಗ ಅವನಿಗೆ—ತನ್ನಿಂದ ಹೆಚ್ಚು ಆಗದಿದ್ದರೂ, ಒಂದು ಮಗು ವಾದರೂ ಚೆನ್ನಾಗಿದ್ದು ಬಾಳ್ವೆ ಬೆಳಗಿದರೆ ಸಾಕು—ಎಂದು ತೋರುತ್ತಿದೆ. ಶ್ಯಾಮು, ಒಳ್ಳೆಯ ಸ್ವಭಾವದವ. ಹೇಳಿದ ಯಾವ ಕೆಲಸವನ್ನೂ ಒಲ್ಲೆ ಎಂದವನಲ್ಲ. ಅವನ ಮಿತಿ—ಅವನ ಜಾಣತನ. ಆತ ತೀರ ಬುದ್ಧಿವಂತ ನಲ್ಲ. ಅಷ್ಟೊಂದು ಹೆಡ್ಡನೂ ಅಲ್ಲ. ಮುಂದುವರಿದ ಓದಿಗೆ ತಕ್ಕವನಲ್ಲವಾದ ರೂ ಹಾಕಿಕೊಟ್ಟ ದಾರಿಯಲ್ಲಿ ಹೋಗಬಲ್ಲ. ಆದರೆ ದಾರಿ ಹಾಕಿಕೊಡಬೇ ಕಾದ ರಾಧಾಕೃಷ್ಣನಿಗೆ ಅದು ಯಾವುದೆಂದು ತಿಳಿಯದಾಗಿದೆ. ನಾಳೆ ಈ ಹುಡುಗ ಬೇಸಾಯ ಮಾಡಿ ಬದುಕಬೇಕೇ? ಏನಾದರೊಂದು ಕೈಗಾರಿ ಕೆಯಿಂದ ಜೀವನಸಾಗಿಸಬೇಕೇ, ಯಾವ ಕಸುಬಿಗೆ ಅವನ ಜೀವನವನ್ನು ತಿರುಗಿಸಬೇಕು—ಎಂಬ ಎಲ್ಲ ವಿಚಾರಗಳು ಬರುತ್ತಲೇ, ಹೇಳಿಕೊಡುವ ತನಗೇ ಏನು ಬರುತ್ತಿದೆ—ಎಂಬ ಅನುಮಾನವೂ ಉಂಟಾಗುತ್ತಿದೆ.

*  *  *  *

ನಾಳೆ, ಕೆಲವು ದಿವಸಗಳಲ್ಲಿ ಸತ್ಯ ತವರಿನಿಂದ ಬರುತ್ತಾಳೆ. ಆಗ ತನ್ನ ದಲಿತಾಶ್ರಮದ ಗತಿ ಏನು? ಇತರರು ಬರುವ ಆಸೆ ಮಾಯವಾ ಗಿದೆ. ಬರಿಯ ತಾವು ಮೂರು ಮಂದಿ ಅಲ್ಲಿಬೇಸಾಯ ಜೀವಿಗಳಾಗಿ ದಿನ ನಿರ್ವಹಿಸಬೇಕೇ? ಅದರಿಂದ ಯಾರಿಗೇನು ಮಾಡಿದಂತಾಯಿತು-ಎಂಬ ಪ್ರಶ್ನೆಯು ಮೂಡಿ, ಮುಂದಣದ ದಾರಿಯು ಎಂದಿನಂತೆ ಕುರುಡು ದಾರಿ ಯಾಗಿ ಕಾಣತೊಡಗಿತು. ಬೇಸಾಯ ಜೀವನದ, ಕಷ್ಟ, ಸುಖಗಳನ್ನು ಕಣ್ಣಾರೆ ಕಾಣುತ್ತಿದ್ದಾನೆ. ಆ ವಿದ್ಯೆ ಒಂದರಿಂದಲೇ, ಅಂದಿನ ಯುಗಕ್ಕೆ ತಕ್ಕ ಪ್ರಾಪಂಚಿಕ ಜೀವನ ಸಾಗಲಾರದೆಂಬುದನ್ನು ತಿಳಿದುಕೊಂಡಿದ್ದಾನೆ. ತಮ್ಮ ಆರ್ಥಿಕ ಬೆಳವಣಿಗೆಗೆ ಯಾವ ಉದ್ಯೋಗವನ್ನು ತಗಲಿಸಿಕೊಂಡರೆ

ಒಳಿತು? ಕೆಲಸ ತೊಡಗುವಾಗಲೇನೋ-ಬುಕ್ಕರ್. ಟಿ. ವಾಶಿಂಗ್‌ಟನನ ಟಸ್‌ಕೆಜೀ ಶಾಲೆಯ ಆದರ್ಶವನ್ನು ಇರಿಸಿಕೊಂಡಿದ್ದ. ಆದರೆ ನೆರೆಕರೆಯ ಬೇಸಾಯಗಾರರ ಮಕ್ಕಳು ಅಲ್ಲಿಗೆ ಬಂದು ಪಾಠ ಕಲಿಯಲು ಉತ್ಸಾಹ ತಾಳಲಿಲ್ಲ. ಅದೇಕೆಂದು ತಾನು ಯೋಚಿಸಬೇಡವೇ? ತಾನು ಮಾಡುತ್ತಿರುವ ಕೃಷಿಗೂ, ಆ ಗ್ರಾಮ ನಿವಾಸಿಗಳ ಕೃಷಿಯ ರೀತಿಗೂ ಏನು ವ್ಯತ್ಯಾಸವಿದೆ? ಕೆಸರಲ್ಲಿ ದಿನವೆಲ್ಲ ಓಡಾಡುತ್ತಿರುವ ಹಳ್ಳಿಯ ಮಕ್ಕಳಿಗೆ, ಅವರ ಹಿರಿಯರು ಹೇಳಿ ಕೊಡಲಾರದ ಯಾವ ಹೊಸ ಬದುಕನ್ನು ತಾನು ಕಲಿಸಿ ಕೊಡಲಾಪೆ—ಎಂಬ ಯೋಚನೆ ಮಾಡಬೇಕಾಗಿದೆ; ಮಾಡುತ್ತಿದ್ದಾನೆ. ಮಾಡುತ್ತ ಹೋದಂತೆ ನಿರುತ್ಸಾಹದ ತೆರೆಯು ಕಣ್ಣ ಮುಂದೆ ಹಾಸುತ್ತದೆ.

ಯೋಚನೆಗಳ ಎಡೆಯಲ್ಲಿ ಜಾನುವಾರುಗಳ ನೆನಪಾದರೆ "ಹೋಗು, ಶ್ಯಾಮಾ, ಕೋಣ, ಎಮ್ಮೆ ಎಲ್ಲಿ ಮೇಯುತ್ತವೆಯೋ ನೋಡಿಕೊಂಡು ಬಾ" ಎಂದು ಅವನನ್ನು ಕಳುಹಿಸುತ್ತಾನೆ. ತನ್ನ ಬಳಿಯಲ್ಲಿದ್ದ ಒಂದೆರಡು ಪುಸ್ತಕಗಳನ್ನು ತೆರೆದು ಓದುತ್ತಾನೆ. ಆ ಓದೂ ಜೀಡವಾಗುತ್ತದೆ. ಓದಿದ್ದನ್ನೇ ತಿರುತಿರುಗಿ ಎಷ್ಟೆಂದು ಓದಲಿ? ಆ ಹಳ್ಳಿಯ ಮೂಲೆಯಲ್ಲಿ ಒಂದು ವಾಚನಾಲಯವೇ, ಪುಸ್ತಕಾಲಯವೇ? ಏನಿದೆ? ಹೊರಗಿನ ಜಗತ್ತು ಹೇಗೆ ಸರಿಯುತ್ತಿದೆ—ಎಂಬುದನ್ನು ಅಲ್ಲಿ ಕುಳಿತು ಯೋಚಿಸುವಂತೆಯೇ ಇರಲಿಲ್ಲ.

ಹೀಗೆ ಎಷ್ಟೊಂದು ಬೇಸರದ ಗಳಿಗೆಗಳು, ದಿನಗಳು, ಅವನ ಪಾಲಿಗೆ ಸಂದುವೋ ತಿಳಿಯದು. ಶ್ಯಾಮ, ಅವನ ಸಾಕು ಮಗು, ಈ ಮೂವರೊಳಗೆ ಆಶ್ರಮ ಪ್ರಪಂಚ ಮುಗಿದಿದೆ. ಕೂಸು ಇರುವಷ್ಟು ದಿನ ಅವನೇ ತಾಯಿ. ಮಂಗಳೂರಿಗೆ ಹೋಗಿ ಬರುವುದಕ್ಕೂ ತೊಂದರೆ. ನಡು ನಡುವೆ—ನೆರೆ ಹಾವಳಿಯಿಂದ ನಷ್ಟಗೊಂಡವರ ಬಳಿಗೆ ಹೋಗಿ ಬರಬೇಕು. ಅವರ ಗೋಳನ್ನೊಯ್ದು ಪೇಟೆಯಲ್ಲಿನ ಸಮಿತಿಯವರಿಗೆ ಮುಟ್ಟಿಸಬೇಕು. ಅಲ್ಲಿಂದ ಏನಾದರೂ ಸಹಾಯವನ್ನು ದೊರಕಿಸಿ ಕೊಡಬೇಕು. ಬಿದಿರು ಕೊಳ್ಳಲು ಕಾಸಿಲ್ಲದೆ, ಇನ್ನೂ ಮನೆಯನ್ನು ಕಟ್ಟದವರೂ ಉಂಟು. ಉಳುವ ಎತ್ತು ಕೋಣಗಳನ್ನು ತಿರುಗಿ ಕೊಳ್ಳಲಾರದೆ ಹಂಬಲಿಸುತ್ತಿದ್ದವರೂ ಉಂಟು. ಆ ಪ ಹಾನಿಯನ್ನೆಲ್ಲ ಹೊರಗಿನ ಸಹಾಯವು ತುಂಬೀತೇ? ಅಂಥ ನಿಸ್ಸಹಾಯರ ಎದೆಗಳಿಗೆ, ಮಾಂಸಖಂಡಗಳನ್ನು ಎಷ್ಟು ತುಂಬಿಸಿ

ಕೊಟ್ಟಾನು? ಈ ಕೆಲಸಗಳಿಗಾಗಿ ಮಿಂಚಿನಂತೆ ಒಮ್ಮೊಮ್ಮೆ ಮಂಗಳೂರಿಗೆ ಹೋಗಿ ಬರಬೇಕಾಗುವುದೂ ಉಂಟು.

ಈ ನಡುವೆ ಬಿರುಮ ಮರಕಾಲನು ಒಂದು ದಿನ ಶುಭವಾರ್ತೆಯೊಂದನ್ನು ತಂದನು. ಬಟ್ಯನ ಅಳಿಯ ಘಟ್ಟದಿಂದ ಬಂದಿದ್ದಾನೆ ಎಂದೂ ಸಮೀಪದಲ್ಲಿ ಎಲ್ಲೋ ವಾಸವಾಗಿದ್ದಾನೆಂದೂ ತಿಳಿಸಿದನು. "ಅವನನ್ನು ಕರೆದು ತರುತ್ತೇನೆ. ಅವನ ಮಗುವನ್ನು ಅವನಿಗೆ ಕೊಟ್ಟು ಬಿಡಿ. ನಿಮಗೆ ಅದನ್ನು ಯಾರು ಯಾರಿಗೆ ಕೊಡಲು ಮನಸ್ಸಿಲ್ಲವಾದರೆ ಹೋಗಲಿ-ಅವನು ತನ್ನ ಹೊರೆಯನ್ನು ತಾನು ಹೊರಲಿ" ಎಂದು ಹೇಳಿದನು.

ಆ ದಾರಿಯೇನೋ ಸಮಂಜಸವೆನಿಸಿತು. ಒಮ್ಮೊಮ್ಮೆ ಅವನ ಮನಸ್ಸಿನಲ್ಲಿಯೂ—ತನ್ನ ಮತ್ತು ಸತ್ಯಳ ಒಮ್ಮನಸ್ಸಿಗೆ ಅಡ್ಡ ಬರುತ್ತಿರುವ ಆ ಕೂಸನ್ನು ತಕ್ಕವರು ಕೊಂಡೊಯ್ದರೆ ಆಗಬಹುದು—ಎಂದು ತೋರುತ್ತಿತ್ತು. ಆಗ "ಇದೆಲ್ಲ ಸ್ವಾರ್ಥದ ಬಯಕೆ ಅಲ್ಲವೇ?" ಎಂದು ಬುದ್ಧಿ ಮರು ನುಡಿಯುತ್ತದೆ. ಆದರೆ ಈಗ ಮಗುವನ್ನು ತಂದೆಗೆ ಕೊಡುವುದರಲ್ಲೇನು ಕಷ್ಟ? ಏನು ಅಸಂಗತ? "ಮರಕಾಲ, ನೀನು ಆದಷ್ಟು ಬೇಗ ಅವನು ಎಲ್ಲಿದ್ದಾನೆಂದು ನೋಡಿ, ಹುಡುಕಿ ಕರೆದುಕೊಂಡು ಬಾ" ಎಂದು ಅನುಜ್ಞೆ ಮಾಡಿದನು.

ಮರಕಾಲ ಶಿಶುವಿನ ತಂದೆಯಾದ ಬಟ್ಯನ ಅಳಿಯ ಸೋಮನನ್ನು ಹುಡುಕಿಕೊಂಡು ಹೋದನು. ಮರಕಾಲ ನಾಲ್ಕಾರು ಬಾರಿ ಹೋಗಿ, ದಣಿದು, ಊರು ಸುತ್ತಿ, ಕೊನೆಗೆ ಆತನ ದರ್ಶನವಾಯಿತು. ಆತ ದೀವಳಿಗೆಗೆ ನಾಲ್ಕು ದಿನ ಮುಂಚಿತವಾಗಿಯೇ ಬಂದಿದ್ದನಂತೆ. ಆ ಸುದ್ದಿ ಇನ್ನಾರೋ ತಿಳಿಸಿದರು. ನೆರೆಯ ಸುದ್ದಿ ಕೇಳಿದಾಗಲೇ ತನ್ನ ಊರಿಗೂ ಬಂದಿದ್ದ. ಅಂತೂ ಮರಕಾಲನಿಗೆ ಸಂಧಾನಕ್ಕೆ ಹೋಗುವಾಗ ಸೋಮ ಮನೆಯಲ್ಲಿದ್ದ; ಯಾರದೋ ಮನೆ ಅದು. ಅವನ ಮನೆಯು ಉಳಿದಿರಲಿಲ್ಲ. ಅಲ್ಲಿ ಹಿರಿಯರೂ ಇರಲಿಲ್ಲ. ಮೊದಲು ಬಂದವನು ತನ್ನ ಅಕ್ಕನ ಮನೆಗೆ ಬಂದಿದ್ದನಂತೆ. ಅಕ್ಕನ ಮನೆಯವರಿಗೆ ಸೋಮನ ತಾಯಿ, ಹೆಂಡತಿಯರ ಸುದ್ದಿ ತಿಳಿಯದೆಹೋಗಿತ್ತು. ನೆರೆಯು ಕಳೆದು ಸ್ವಲ್ಪ ದಿವಸಗಳ ಮೇಲೆ ಎಲ್ಲಾ ಸಂಗತಿ ತಿಳಿಯಿತು. ತಾಯಿ ಹಾಗೇಕೆ ಹೋದಳು? ಎಲ್ಲಿಗೆ ಹೋದಳು? ಎಂಬುದು ಇಂದಿಗೂ ತಿಳಿಯದಾಯಿತು. ಅಕ್ಕ

"ನನ್ನ ಸ್ಥಿತಿಯಲ್ಲಿ ಆ ಚೋಟು ಕೂಸನ್ನು ತಂದುಕೊಂಡು ಏನು ಮಾಡಬೇಕು? ಅದು ಪ್ರಾಣ ಬಿಟ್ಟರೆ ಆ ಪಾಪ ತನಗೇಕೆ?" ಎಂದು ಸುಮ್ಮನಾದಳು. ಅವಳ ತಾಯಿ ಹೆದರಿ, ದುಃಖದಿಂದ ಪ್ರಾಣವನ್ನು ನೀಗಿಸಿ ಕೊಂಡಿದ್ದಾಳೆಂದು ತರ್ಕಿಸಬೇಕಾಯಿತು. ಸೋಮನು ಬಂದ ಮೇಲೆ ಎಲ್ಲರು ಸೇರಿ ಸಂಗತಿಯನ್ನು ಯೋಚಿಸಿದರು. ಅವನೇನೋ ಕೂಸು ತರುವುದಕ್ಕೆ ಮುಂದಾದ. ಅಕ್ಕನು ಮಾತ್ರ ಅಡ್ಡ ಬಂದಳು. "ನಿನಗೆ ಮಗು ವನ್ನು ನೋಡುವ ಆಸೆಯಾದರೆ ಹೋಗಿ ನೋಡಿ ಬಾ, ಆದರೆ ಅದನ್ನು ತಂದು ಏನು ಮಾಡುವ ಹಾಗಿದೆ? ಸರಿಯಾದ ಮಾಡು ಇಲ್ಲದೆ ನನ್ನ ಸಂಸಾರ ನೋಡಿಕೊಂಡು ಹೋಗುವುದೇ ನನಗೆ ಕಷ್ಟವಾಗಿದೆ. ಅದು ವರ್ಷ, ಎರಡು ವರ್ಷಗಳ ಮಗುವಾದರೆ ಏನೂ ಮಾಡಬಹುದು. ನೀನು ಅದನ್ನು ಕಟ್ಟಿಕೊಂಡು, ಊರಲ್ಲಿ ಇರುವ ಹಾಗೆಯೂ ಇಲ್ಲ ಘಟ್ಟಕ್ಕೆ ಹೋಗುವ ಹಾಗೂ ಇಲ್ಲ"—ಎಂದು ಬೆದರಿಸಿದಳು. ಹೀಗಾಗಿ ಅವನು ನೋಡುವುದಕ್ಕೇ ಬರಲಿಲ್ಲ.

"ಹೋದವಳು ಹೇಗೂ ಹೋದಳು. ನೀನು, ಒಳ್ಳೆಯ ಬಳಿಯನ್ನು ನೋಡಿ ಇನ್ನೊಂದು ಮದುವೆಯಾಗು. ನಿನ್ನ ಹೊಸ ಹೊಲತಿ ಒಪ್ಪಿದರೆ ಆ ಮೇಲೆ ಅದನ್ನು ಕರೆದು ತರಬಹುದು. ಅದರ ಮೊದಲು ಅಲ್ಲಿಗೆ ಹೋಗ ಬೇಡ" ಎಂದಳು. ಅಲ್ಲಿಂದ ಆತ ಹೆಣ್ಣು ಹುಡುಕಿಕೊಂಡು ಅಲೆದಾಡಿದ. ಕನ್ಯೆ ನೋಡಿ, ನಿಶ್ಚಯ ಮಾಡಿಕೊಂಡು ಬಂದ ಗಳಿಗೆಯಲ್ಲೇ ಮರಕಾಲನ ದರ್ಶನ ಅವನಿಗೆ ಆದದ್ದು. ಅದಕ್ಕೆ ಉತ್ತರವಾಗಿ "ಆಯಿತು, ನಾಳೆಯೇ ಬರುತ್ತೇನೆ" ಎಂದು ಕಳುಹಿಸಿ ಕೊಟ್ಟ.

ಅಂಥ ಆರೆಂಟು ನಾಳೆಗಳೇ ಸಂದುವು. ಇನ್ನೊಮ್ಮೆ ಮರಕಾಲ ಅವ ನನ್ನು ಹುಡುಕಿಕೊಂಡು ಹೋದನು. ಅವನು ಮನೆಯಲ್ಲಿ ಇರಲಿಲ್ಲ. ಸೋಮನ ಅಕ್ಕನನ್ನು ಕೇಳಿದನು. ಆಕೆ ನಗುತ್ತ "ಅವನು ಇನ್ನೊಂದು ಮದುವೆಯಾಗಿ ಹೊಲತಿಯೊಡನೆ ಘಟ್ಟಕ್ಕೆ ಹೋಗಿ ಮೂರು ದಿವಸವಾ ಯಿತು." ಎಂದು ತಿಳಿಸಿದಳು.

ಮರಕಾಲನ ಮೂಗಿನ ತುದಿ ಕೆಂಪಾಯಿತು. ಸೋಮನ ಪಾಲಿಗೆ ಸಲಿಸಬೇಕೆಂದಿದ್ದ ಬೈಗಳನ್ನೆಲ್ಲಾ—ಅವನ ಅಕ್ಕನಿಗೆ ಒಪ್ಪಿಸಿ, ಮನೆಗೆ ಹಿಂದಿರುಗಿದನು. "ಅಯ್ಯೋ, ಆ ಘಟಿಂಗ ಇನ್ನೊಂದು ಮದುವೆಯಾಗಿ

ಘಟ್ಟಕ್ಕೆ ಓಡಿ ಹೋದನಂತೆ. ಅವನಿಗೆ ಬೇಡದ ಮಗುವನ್ನು ನೀವು ಏನೆಂದು ಸಾಕುವುದು? ಸತ್ತರೆ ಸಾಯುತ್ತದೆ, ಬದುಕಿದರೆ ಬದುಕುತ್ತದೆ. ಯಾರಿಗಾದರೂ ಕೊಟ್ಟುಬಿಡಿ. ನಾನಾದರೆ ಮೂರು ದಾರಿ ಸೇರುವಲ್ಲಿ ಅದನ್ನು ಬಿಟ್ಟು ಬರುತ್ತಿದ್ದೆ. ಪಾಪ ಬಂದರೆ ಅದು ಅವನಿಗೆ; ಓಡಿ ಹೋದ ಹೊಲೆಯನಿಗೆ. ಅವನ ಕರ್ಮವನ್ನು ನೀವು ಅನುಭವಿಸುವುದು ಯಾಕೆ?" ಎಂದು ಉದ್ಗರಿಸಿದನು. ಅವನಿಗೆ-ತಾನೇ ಆ ಶಿಶುವನ್ನು ರಕ್ಷಿಸುದಕ್ಕಿಂತ ಹೆಚ್ಚಿನ ಕೋಪ ಬಂದಿತ್ತು.

ರಾಧಾಕೃಷ್ಣ ಅದನ್ನು ಕಂಡು, "ನೀನೇಕೆ ಸಿಟ್ಟಾಗುತ್ತೀ ಬಿರುಮ? ತಂದೆಗೆ ಬೇಡಾದ ಮಕ್ಕಳು, ಮಕ್ಕಳಿಗೆ ಬೇಡವಾದ ತಂದೆ—ಊರಲ್ಲಿ ಸಾವಿರಾರು ಇರುತ್ತವೆ. ಸೋಮನೂ ಒಬ್ಬ ಅಂಥವನೇ. ಅವನು ಮನುಷ್ಯನಾಗಿದ್ದರೆ ಕೂಸನ್ನು ನೋಡುವುದಕ್ಕಾದರೂ ಬರುತ್ತಿದ್ದ. ಅವನಿಗೆ ನಾನು ಎಲ್ಲಿಯಾದರೂ 'ನಿನ್ನ ಮಗುವನ್ನು ತೆಗೆದುಕೊಂಡು ಹೋಗು' ಎಂದೇನು ಎಂದು, ಹೆದರಿಯೇ, ಬರಲಿಲ್ಲವೆಂದು ಕಾಣುತ್ತದೆ" ಎಂದು ಮಾತು ಮುಗಿಸಿದ.

ಒಂದು ವಿಚಾರದಲ್ಲಿ ರಾಧಾಕೃಷ್ಣನಿಗೆ ಆಂತರಿಕ ಸಮಾಧಾನವಿತ್ತು. ತನ್ನ ಆಶ್ರಮಕ್ಕೆ ದಯಾನಂದರಾಯರು "ದಲಿತಾಶ್ರಮ" ಎಂದು ನಾಮಕರಣ ಮಾಡಿದುದಕ್ಕೂ, ದಲಿತರ ಒಂದು ಶಿಶು ತನ್ನಂತೆಯೆ ಅದಕ್ಕೆ ದತ್ತವಾಗಿ ಬಂದುದಕ್ಕೂ. ಆ ಶಾಂತಿ ಮಾತ್ರ ಬಹಳ ದಿನ ಉಳಿಯಲಿಲ್ಲ. "ಸತ್ಯ ಬರುತ್ತಾಳೆ, ನಾಳಲ್ಲ, ನಾಡಿದ್ದಾದರೂ" ಎಂದು ಯೋಚನೆ ಹೊಳೆಯುತ್ತಲೇ ಮಂಜಿನಂತೆ ಅದು ಮಾಯವಾಯಿತು. ಒಮ್ಮೊಮ್ಮೆ ಹೀಗೂ ಅನಿಸುತ್ತದೆ!

"ಇಲ್ಲ, ಸತ್ಯ ಸಾಂಪ್ರದಾಯಿಕರಲ್ಲಿ ಹುಟ್ಟಿದವಳು. ಆದರೂ ಎಷ್ಟೋ ವಿಷಯಗಳಲ್ಲಿ ತನ್ನ ಪೂರ್ವ ಭಾವನೆಗಳನ್ನು ಮರೆಯಲು ಕಲಿತಿದ್ದಾಳೆ. ಮನೆಯಲ್ಲಿ ಸುಖವಾಗಿ ಓಡಾಡಿದವಳಾದರೂ ಇಲ್ಲಿ ಒಂದು ದಿನ ತುಂಬ ದುಡಿಯುತ್ತಿದ್ದಾಳೆ. ಮೊದಲ ಬಾರಿಗೆ ಕೂಸನ್ನು ಕಂಡು— ಯಾವುದಾದರೂ ಜೀವವಲ್ಲವೇ—ಎಂದು ಕನಿಕರಿಸಲಿಲ್ಲವೇ? ಪ್ರಾಯಶಃ ತನ್ನವರಿಗೆ ತಿಳಿದರೆ ಏನೆಂಬಾರು ಎಂಬ ಅಂಜಿಕೆಯು ಬಂದಿರಬೇಕು. ಆ ಭಾವನೆಯು ಕ್ರಮೇಣ ಮನಸ್ಸಿನಿಂದ ಅಳಿದೀತು" ಎಂದುಕೊಂಡ. ಈಗ ಒಂಟಿಯಾ

ಗಿದ್ದು ಬೇಸರವಾಗುತ್ತಿದೆ. ಬೇಗ ಬರುವಂತೆ ಅವಳಿಗೆ ಕಾಗದ ಬರೆಯುತ್ತೇನೆ—ಎಂದು ದೀರ್ಘ ಪತ್ರ ಒಂದನ್ನು ಬರೆದನು. ಅದರಲ್ಲಿ ಆಶ್ರಮ ಬರಿದಾದ ವಿಚಾರವನ್ನು ಎದೆನೋವಿನಿಂದ ಚಿತ್ರಿಸಿದನು. ಕೂಸಿನಿಂದ ತನ್ನ ಇತರ ಕೆಲಸಗಳೂ, ಕೈಕಟ್ಟಿದ ಸಂಗತಿಯನ್ನು ವಿವರಿಸಿದನು. ಶ್ಯಾಮನ ನೆರವು, ಸ್ವಭಾವಗಳನ್ನು ಬಣ್ಣಿಸಿದನು. ಕೊನೆಗೆ—ಕೂಸನ್ನು ಕಾಣುವುದಕ್ಕೆ ಬಾರದ ತಂದೆಯನ್ನೂ ಕುರಿತು ಬರೆದನು. "ಇಂಥ ಸ್ಥಿತಿ ಹೊಲೆಯರ ಒಂದು ಕೂಸಿಗೇ ಬರಬೇಕೆಂದಿಲ್ಲ. ಯಾರಿಗೂ ಬರಬಹುದು. ನಮಗೇ ಆ ಪಾಡು ಬಂದಿರಬಾರದೇ, ದೇವರ ಮುಂದೆ ಯಾರು ಹೆಚ್ಚು, ಯಾರು ಕಡಿಮೆ?" ಎಂದು ಬರೆದು "ನೀನು ಆದಷ್ಟು ತೀವ್ರ ಕುಂದಾಪುರಕ್ಕೆ ಬಂದು ಅನಂತರಾಮನೊಂದಿಗೆ ಇಲ್ಲಿಗೆ ಬಾ" ಎಂದು ಆ ಪತ್ರವನ್ನು ಮುಗಿಸಿದನು.

ಪತ್ರವನ್ನು ಬರೆದ ಮರುದಿನವೇ ಕೂಸು ಅಸ್ವಸ್ಥಗೊಳ್ಳಬೇಕೆ? ಕುಡಿಸುತ್ತಿದ್ದ ಹಾಲಿನ ದೋಷವೋ, ಇನ್ನೇನೋ! ಮಗು ಆ ದಿನ ರಾತ್ರಿ ತುಂಬ ಅಳತೊಡಗಿತು. ಏತಕ್ಕೆಂದೇ ಸೂಚನೆಯಾಗಲಿಲ್ಲ. ಯಾರನ್ನು ಕೇಳುವುದಕ್ಕೂ ತೋಚುವುದಿಲ್ಲ. ಮರಕಾಲನ ಹೆಂಡತಿಯು ಬಂದು "ಅದಕ್ಕೇನೋ ನೋಂಕು ಆಗಿರಬೇಕು" ಎಂದೂ "ಸುಳಿದಿಟ್ಟರೆ ಹೋಗುತ್ತದೆಂದು " ಹೇಳಿದಳು. ಈತನಿಗೆ ನಂಬುಗೆ ಇಲ್ಲದ ಚಿಕಿತ್ಸೆ ಅದು. ಮಗು ಬಿಡುವಿಲ್ಲದೆ ಅಳುತ್ತಿರುವುದನ್ನು ಕಂಡು ಮರುದಿನ ಬೆಳಿಗ್ಗೆ ಮರಕಾಲನನ್ನು, ಡಾ। ನಂದರಲ್ಲಿಗೆ ಔಷಧಕ್ಕೆಂದು ಹೇಳಿಕಳುಹಿಸಿದನು. ಆತ ಹೊತ್ತುಮಾಡಿ ಮನೆಗೆ ಬಂದು, ಒಂದು ಮದ್ದಿನ ಸೀಸೆಯನ್ನು ಕೊಟ್ಟನು. "ಇದರಿಂದ ಆಗಾಗ ನಾಲ್ಕು ನಾಲ್ಕು ಬೊಟ್ಟು ನೀರನ್ನು ಕುಡಿಸಬೇಕಂತೆ. ಮತ್ತೆ ಹೊಟ್ಟೆಗೆ,. ಹಾಲಿನಿಂದ ಏನೋ ಮಾಡಿ ಕೊಡುವ ಹಾಗೆ ಹೇಳಿದರು" ಎಂದ. "ಏನು? ಏಂಥದು?" ಎಂದು ಪ್ರಶ್ನೆ ಮಾಡಿ ಸಾಕಾಗಿ "ವೇ" ಎಂದು ಊಹಿಸಿ ತಿಳಿಯಬೇಕಾಯಿತು. "ಕುದಿದ ಹಾಲಿಗೆ ನಿಂಬೆ ಹಣ್ಣಿನ ರಸವನ್ನು ಹಿಂಡಲು ಹೇಳಿದರೇ?" ಎಂದು ಕೇಳಲು ಈತ "ಹಾಂ"ಯೆಂದು ಉತ್ತರವಿತ್ತನು.

ಮನೆಯಲ್ಲಿ ನಿಂಬೆ ಹಣ್ಣು ಇದ್ದಿರಲಿಲ್ಲ. ನಿಂಬೆ ಹಣ್ಣು ಸಿಗುವುದು ಕಿರಿಪದವಿನಲ್ಲಿ ಸಾಧ್ಯವೇ? ಮರಕಾಲ: "ನಾಲ್ಕು ನಿಂಬೆ ಹಣ್ಣು ತಂದರೆ

ಆಗುತ್ತಿತ್ತು" ಎಂದ. "ಎಲ್ಲಿಂದ?" ಎಂದನು ಆತ. ಮಂಗಳೂರಿಗೆ ಈಗ ತಾನೇ ಆರಾರು ಮೈಲು ಹೋಗಿ ಬಂದ ಅವನನ್ನು ತಿರುಗಿ ಅಲ್ಲಿಗೆ ಓಡಿಸು ವುದಕ್ಕೆ ಮನಸ್ಸು ಒಪ್ಪದೆ, ಶ್ಯಾಮುನನ್ನು ಕಳುಹಿಸಲೇ-ಎಂದು ಯೋಚನೆ ಮಾಡಿದನು. ಅಲ್ಲಿಗೆ ಹೋಗಿ ಬರುವಾಗ ಕತ್ತಲಾಗುತ್ತದೆ. ಆದುದರಿಂದ "ಶ್ಯಾಮು, ನಾನು ಬರುವ ತನಕ ಈ ಮಗುವನ್ನು ನೋಡಿಕೊಂಡಿರು. ಗಳಿಗೆಗೆ ಒಂದೊಂದುಸಾರಿ ನಾಲ್ಕು ತೊಟ್ಟು ಮದ್ದು ಕೊಡು. ಅದು ಓಮದ ನೀರಾಗಿರಬೇಕು. ಅದಕ್ಕೆ ಬಾಯಾರಿಕೆಯಾದರೆ, ಕಾಯಿಸಿ ತಣಿಸಿದ ನೀರನ್ನು ಕೊಡು—ಸಾಕು" ಹೀಗೆಂದು, ತಾನೇ ನಿಂಬೆ ಹಣ್ಣು ತರಲು ನಾಗಾಲೋಟವನ್ನು ಹೊಡಿದನು. ಅದನ್ನು ತೆಗೆದುಕೊಂಡು ಆತನು ಮನೆಗೆ ಬರುವಾಗ ರಾತ್ರಿ ಹೊತ್ತು ಸರಿದಿತ್ತು. ಮನೆಗೆ ಬಂದೊಡನೆಯೇ, ಶ್ಯಾಮನು, "ಮಗುವಿನ ಮೈ ತುಂಬ ಕಾದಿದೆ" ಎಂದ.

"ಮದ್ದು ಕೊಟ್ಟೆಯಾ?"

"ಕೊಟ್ಟೆ."

"ನೀರು ಕೊಟ್ಟೆಯಾ?"

"ಕೊಟ್ಟೆ."

ಆತ ಹಾಲನ್ನು ಬಿಸಿಮಾಡಿ ಕಾಯಿಸಿ ಅದಕ್ಕೆ ನಿಂಬೆ ಹಣ್ಣಿನ ರಸ ಹಿಂಡಿ, ವೇ ತಯಾರಿಸಿ, ತೊಟ್ಟು ತೊಟ್ಟಾಗಿ ಅದರ ಬಾಯಿಗೆ ಎರೆದನು. ಮಗು ಜ್ವರದಿಂದ ಬಾಡಿಹೋಗಿತ್ತು. ಮೊದಲೇನೆ ಅದು ಬಹಳ ಕೃಶವಾದ ಜೀವ, ಈಗ ಅದನ್ನು ನೋಡುವಂತಿರಲಿಲ್ಲ. ಬಳಲಿಕೆಯಿಂದ ರಾತ್ರಿ ಮಗು ಕಣ್ಣು ಮುಚ್ಚಿತಾದರೂ, ಆ ಜ್ವರವನ್ನು ಕಂಡು ಈತನಿಗೆ ಮಾತ್ರ ನಿದ್ದೆ ಹತ್ತಲಿಲ್ಲ. ಇಷ್ಟು ದೂರದಲ್ಲಿ ಕುಳಿತು ಮಗುವಿಗೆ ಸರಿಯಾದ ಅನುಪಾನ ಮಾಡಲಾರೆವು ಎಂಬ ಹೆದರಿಕೆಯುಂಟಾಗಿ ಅದನ್ನು ಹೊತ್ತು ಕೊಂಡು ಹೋಗುವ ಯೋಚನೆಯನ್ನು ಮಾಡಬೇಕಾಯಿತು. "ಈ ಜ್ವರ ದಲ್ಲಿ ಏನು ಹೊತ್ತುಕೊಂಡು ಹೋಗುತ್ತೀರಿ?" ಎಂದು ಶ್ಯಾಮು ಅಧೈರ್ಯ ಹುಟ್ಟಿಸಿಮದರಿಂದ ಆತ ಬೆಳಗಾಗುತ್ತಲೇ, ಇನ್ನೊಮ್ಮೆ ಡಾ। ನಂದರ ಆಸ್ಪ ತ್ರೆಗೆ ಓಡಿಧನು. ಅವರು ಬರುವ ತನಕ ಕಾದುಕುಳಿತಿದ್ದು, "ಒಮ್ಮೆ ಬಂದಿ ದ್ದರೆ ತುಂಬ ಉಪಕಾರ ವಾಗುತ್ತಿತ್ತು" ಎಂದು ಕೇಳಿಕೊಂಡನು. ಆದರೆ

ಡಾಕ್ಟರವರ ಕಾರು ಆ ಸಮಯಕ್ಕೆ ಸರಿಯಾಗಿ "ಪಂಕ್ಚರ್" ಆಗಿತ್ತು. ಬಾಡಿಗೆ ಕಾರಿನಲ್ಲಿ ಕರೆದು ಒಯ್ಯುವಷ್ಟು ಶ್ರೀಮಂತಿಕೆ ಅವನಿಗಿರಲಿಲ್ಲ,

"ಹಾಗಾದರೆ ಅದನ್ನು ಹೊತ್ತು ತರಲೇ? ಇಲ್ಲಿಯೇ ಇರಿಸಿಕೊಂಡು ನೋಡುವಿರಾದರೆ ನಾನು ತರುತ್ತೇನೆ" ಎಂದನು. "ಆಗಲಿ" ಎಂದರು ಅವರು. ಅದರಿಂದ ಅವನಿಗೆ ಸಂತೋಷವಾಯಿತು. ತಿರುಗಿ ಆರು ಮೈಲು ಪಯಣವನ್ನು ಸಾಗಿಸಿದನು. ಮರಕಾಲನನ್ನು ಕರೆದು "ಅದನ್ನು ಆಸ್ಪತ್ರೆಗೆ ತೆಗೆದುಕೊಂಡು ಹೋಗಬೇಕೆಂದಿದ್ದೇನೆ. ನೀನು ಬಾ ಜತೆಗೆ; ಅರ್ಧ ದೂರ ನೀನು ಹೊತ್ತರೆ, ಅರ್ಧ ದೂರ ನಾನು ಹಿಡಿದುಕೊಳ್ಳಬಹುದು. ಆದಷ್ಟು ಬೇಗನೆ ಹೋಗಬೇಕು. ಅದರ ಜ್ವರ ಏನೇನೂ ನಿಂತಿಲ್ಲ." ಎನ್ನುತ್ತಲೇ ಮರಕಾಲ "ಅಯ್ಯಾ, ನಾನು ಅದನ್ನು ಹೊತ್ತು ತರಲಾರೆ. ನಾಳೆ ಜಾತಿಯವರು ಏನೇನೋ ಅಂದಾರು. ನನ್ನ ಹೊನ್ನಿಯೂ ಸಿಟ್ಟು ಮಾಡಿಯಾಳು. ಇಲ್ಲಿ ಗುಟ್ಟಿನಲ್ಲಿ ಅದನ್ನು ಆರ್ಚೀಜಿ ತರುವುದಕ್ಕೂ ರಾಜಾ ರೂಢಿಯಲ್ಲಿ ಪೇಟೆಗೆ ಸಾಗಿಸುವುದಕ್ಕೂ ವ್ಯತ್ಯಾಸವಿಲ್ಲವೇ"ಎಂದುಬಿಟ್ಟನು.

ರಾಧಾಕೃಷ್ಣನಿಗೆ ಅಸಮಾಧಾನವಾಯಿತು. ಮುನಿದು ಪ್ರಯೋಜನವೇನು? ತಾನೂ ಶ್ಯಾಮನೂ, ಆ ಕೆಲಸ ಮಾಡುವುದಾಗಿ ನಿಶ್ಚಯಿಸಿ "ನಿನ್ನಿಂದ ಆಗದಿದ್ದರೆ ಹೋಗಲಿ. ನಾವೇ ಅದನ್ನು ಹೊರುತ್ತೇವೆ. ನೀನು ಇಷ್ಟಾದರೂ ಮಾಡು—ಅಂಗಳದಲ್ಲಿ ಕೆಯ್ಯ ರಾಶಿ ಹಾಗೇ ಬಿದ್ದಿದೆ. ಅದನ್ನು ಬಡಿ. ಎಮ್ಮೆ, ಕೋಣ ನೋಡಿಕೊಂಡಿರು ನಾವು ಬರುವ ತನಕ"ಎಂದು ಅನುಜ್ಞೆ ಮಾಡಿದ. ಆತ "ಅಷ್ಟು ಮಾಡುವ. ನಾವು ಈಗ ಇಬ್ಬರಿಲ್ಲವೇ" ಎಂದ. ಅಡಿಕೆ ಹಾಳೆಯೊಂದನ್ನು ತಂದು ಅದರ ಮೇಲೆ ಒಂದೆರಡು ಅರಿವೆ ಹಾಸಿ, ಮಗುವನ್ನು ಇರಿಸಿ, ಎದೆಯ ಮುಂದಕ್ಕೆ ತಬ್ಬಿ ಹಿಡಿದು ಆತ ಹೊರಟುಬಿಟ್ಟನು. ಬಿಸಿಲು ಬೀಳದಂತೆ, ಕೊಡೆ ಹಿಡಿದು ಇವನ ಹೆಜ್ಜೆಗೆ ಸಮನಾಗಿ ಶ್ಯಾಮ ಓಡುತ್ತಿದ್ದಾನೆ. ಈತನ ಕೈ ಬಚ್ಚಿದರೆ ಶ್ಯಾಮ ಮಗುವನ್ನು ಹಿಡಿಯುತ್ತಾನೆ. ಈತ ಅದಕ್ಕೆ ಕೊಡೆ ಹಿಡಿಯುತ್ತಾನೆ. ಅಂತೂ ಬೆಳಗಿನ ಹತ್ತು ಗಂಟೆಯ ಹೊತ್ತಿಗೆ, ಮುಖದಲ್ಲಿ ಬೆವರು ಇಳಿಸುತ್ತಾ ನಂದರ ಚಿಕಿತ್ಸಾಲಯವನ್ನು ಸೇರಿದರು. ನಂದರು ತುಂಬ ಕೆಲಸದಲ್ಲಿದ್ದರು. ಅವರನ್ನು ಸುತ್ತುವರಿದು ರೋಗಿಗಳು ನಿಂತಿದ್ದರು. ಆ ಹಿಂಡಿನಲ್ಲಿ ನುಗ್ಗಿ, ಮಗುವನ್ನು ತಂದ ವಿಚಾರ ತಿಳಿಸುವುದಕ್ಕೆ ಸ್ವಲ್ಪ ಸಮಯ ಹೋಯಿತು. ಈಗ

ಅದನ್ನು ವಾರ್ಡುಕೋಣೆ ಒಂದರಲ್ಲಿ ಮಲಗಿಸಿದ್ದಾಯಿತು. ಇನ್ನರ್ಧ ತಾಸಿನಲ್ಲಿ ಡಾಕ್ಟರರು ಬಂದು ಮಗುವನ್ನು ಪರೀಕ್ಷಿಸಿ ನೋಡಿದರು. "ನಿಮಗೇನೂ ಯೋಚನೆ ಬೇಡ. ನೀವು ಸಮೀಪ ಇರಬೇಕೆಂದೂ ಇಲ್ಲ. ಇಲ್ಲಿ ವಾರ್ಡ್ ಜನಗಳು ಇಲ್ಲವೇ?" ಎಂದು ಒಂದು ಚೀಟಿಯನ್ನು ಬರೆದು ನರ್ಸಿನ ಕೈಯಲ್ಲಿ ಕೊಟ್ಟರು.

ನರ್ಸು "ಇದು ನಿಮ್ಮ ಕೂಸೇ? ತುಂಬ ನಿತ್ರಾಣಿಯಾಗಿದೆಯಲ್ಲಾ?" ಎಂದಳು.

"ಹೂಂ" ಎಂದನು ಈತ. ಅದಕ್ಕೆ ಏನು ಕಾಯಿಲೆ ಎಂದು ವಿಚಾರಿಸಿ ತಿಳಿಯುವ ಕುತೂಹಲ ಅವನಿಗೆ. ಆದರೆ ಡಾಕ್ಟರರಿಗೆ ಅವರ ಕೆಲಸದಲ್ಲಿ ಬಿಡುವೇ ಆಗಲಿಲ್ಲ.

ಮಗುವನ್ನು ಮಲಗಿಸಿ, ಹಣೆಗೆ ಒಂದು ಬಟ್ಟೆ ಇಟ್ಟರು. ಈತನೇ ಅದಕ್ಕೆ ಕೊಲೋನ್ ವಾಟರ್ ಹಾಕುತ್ತಾ ಕುಳಿತನು. ಮಗುವಿನ ಬಳಿಯಲ್ಲಿ ಶ್ಯಾಮನೂ ಆತನೂ, ಕಾವಲು ಕುಳಿತರು.

ಡಾಕ್ಟರರು ಬೆಳಗಿನ ಕೆಲಸವನ್ನೆಲ್ಲ ಮುಗಿಸಿ ತಮ್ಮ ಮನೆಗೆ ಹೊರಟು ಹೋದರು. ಗೆಳೆಯನೆಂಬ ಅಭಿಮಾನದಿಂದ ಅವನನ್ನು ಕಂಡು ಏನು ಸಂಗತಿ ಎಂದು ಹೇಳಲೇ ಇಲ್ಲ. ಮರವೆ ಆಯಿತೋ, ಬಿಡುವು ಇದ್ದಿಲ್ಲವೋ ಎಂದು ಈತ ಊಹಿಸಿದ. ಸಂಜೆ ಐದು ಗಂಟೆಗೆ ತಿರುಗಿ ಅವರು ಬಂದರು. ಇವನ ಆಗ್ರಹಕ್ಕಾಗಿ ಇನ್ನೊಮ್ಮೆ ಶಿಶುವಿನ ಪರೀಕ್ಷೆ ಮಾಡಿದರು. ಅದರ ಜ್ವರ ಕಡಿಮೆಯಾಗಿರಲಿಲ್ಲ. ಈಗ ಅದು ಮದ್ದಿಗೂ, ಆಹಾರಕ್ಕೂ ತುಟಿಯನ್ನು ಬಿಚ್ಚುವುದಿಲ್ಲ.

"ಏನೂ ಆಗಲಿಕ್ಕಿಲ್ಲ ಅಲ್ಲವೇ?" ಎಂದು ಕೇಳಿದ.

"ಏನೂ ಆಗಲಾರದು, ನೋಡುವ, ಅದೇ ಮದ್ದು ನಡೆಯಲಿ" ವಾಸ್ತವಿಕವಾಗಿ ಡಾಕ್ಟರ್ ಸಾಹೇಬರವರಿಗೆ ಮಗುವಿಗೆ ಇಂಥದೇ ಕಾಯಿಲೆ ಎಂದು ತಿಳಿಯಲಿಲ್ಲ. ಮೊದಲ ಬಾರಿ ಅವರು ಅಜೀರ್ಣಕ್ಕೆ ಎಂದು ಮದ್ದು ಕೊಟ್ಟಿದ್ದರು. ಈಗ ಕೂಸು ಆಹಾರವನ್ನು ಮುಟ್ಟುವುದಿಲ್ಲ. ಅದರ ಜ್ವರ ತಗ್ಗುತ್ತಿಲ್ಲ. ಅವರಿಗೆ ಬೇನೆ ಏನೆಂದು ಸೂಚಿಸಲಿಲ್ಲ. "ಹೊಸಬ ತಾನು; ತನಗೆ ಅನುಭವಸಾಲದು"ಎನ್ನುವ ಸೌಜನ್ಯ ಅವರ ಮನಸ್ಸಿಗೆ ಬರಲಿಲ್ಲ. ಎಲ್ಲಾ ಬೇನೆಗಳಿಗೂ ತಾನೇ ತಜ್ಞ ಎಂಬ ಮನೋವೃತ್ತಿಯು ಅವರಿಗೆ.

ಬಂದಂತಿತ್ತು. ಯಶಸ್ಸು ಅವರನ್ನು ಹಾಗೆ ಮಾಡಿತ್ತು. ಆ ದಿನ ಸಂಜೆ ಯೆಲ್ಲ ಹಾಗೆಯೇ ಸರಿಯಿತು. ಅವರಿಬ್ಬರೂ ಮಗುವಿನ ಮಂಚ ಬಿಟ್ಟು ಏಳಲಿಲ್ಲ. ಇವರ ಶ್ರದ್ಧೆಯನ್ನು ಕಂಡು ನರ್ಸು "ಅದರ ತಾಯಿಬಂದಿಲ್ಲವೇ" ಎಂದು ಕೇಳಿದಳು. "ಅದು ತಾಯಿ ಇಲ್ಲದ ಕೂಸು, ಹೊಲೆಯರದು." ಎನ್ನುತ್ತಲೇ ದಾದಿಯ ಮುಖ ಮೊನಚಾಯಿತು. ರಾಧಾಕೃಷ್ಣನಿಗೆ ತಾನು ವಿವೇಚನೆ ಇಲ್ಲದೆ ಆಡಿದ ಮಾತು ನೆನಪಿಲ್ಲ. ದಾದಿಗೆ ಮಾತ್ರ ಅಲ್ಲಿಗೆ ಬಂದು ಹೋಗುವ ಇಚ್ಛೆ ಕಡಿಮೆಯಾಯಿತು.

ರಾತ್ರಿ ಕಳೆದು ಇನ್ನೊಂದು ಬೆಳಗಿನ ಸರದಿ ಬಂದಿದೆ. ರಾಧಾಕೃಷ್ಣ ನಂದರಿಗಾಗಿ ಕಾದಿದ್ದ. ಅವರು ಬಂದವರು, "ಈಗ ಬಂದೆ, ಜನ ಕಾದಿದ್ದಾರೆ. ಸ್ವಲ್ಪ ಬಿಡುವು ಮಾಡಿಕೊಂಡು ಬರುತ್ತೇನೆ" ಎಂದು ತಮ್ಮ ಕೋಣೆಗೆ ಹೋದರು. ಅವರು ಬರಲೇ ಇಲ್ಲ. ಮನೆಗೆ ಹೊರಡುವಾಗ ರಾಧಾಕೃಷ್ಣ ಅವರನ್ನು ತಡೆದು ಹಿಡಿದ. ತಿರುಗಿ ಅವರು ಶಿಶುವಿನ ಬಳಿಗೆ ಬಂದರು. "ಏನಾಗಲಾರದು. ಫ್ಲೂ ಇರಬಹುದು. ಮೂರು ದಿವಸಗಳಲ್ಲಿ ಬಿಟ್ಟೇ ಬಿಡುತ್ತೆ" ಎಂದು ಹೊರಡಲು ಆತುರ ತೋರಿಸಿಕೊಂಡು ಹೋದರು. ಆ ಯಾವ ಸಂದರ್ಭದಲ್ಲೂ, ಆ ಕೂಸಿನ ಇತಿವೃತ್ತಗಳನ್ನು ಕೇಳುವ ಬಯಕೆ ಅವರಿಗಾಗಲಿಲ್ಲ. ಮಾತಿಗೆ ಬಿಡುವಿಲ್ಲದ ಅವರನ್ನು, ಇವನಾದರೂ ಎಷ್ಟು ಕೆಣಕಿ ಕೇಳಬಹುದು?

ಶ್ಯಾಮನನ್ನು ಹೊರಗೆ ಹೊಟೇಲಿಗೆ ತಿಂಡಿಯನ್ನು ತರಲು ಕಳುಹಿಸಿ ಕೊಟ್ಟು, ಅದನ್ನು ತಂದು ತಿಂದು, ನೀರು ಕುಡಿದು, ಆಸ್ಪತ್ರೆಯಲ್ಲಿಯೇ ಅವರಿಬ್ಬರೂ ದಿನ ಬೆಳಗು ಮಾಡಿದರು. ಮೂರನೆಯ ದಿವಸವೂ ಹಾಗೆಯೇ ಸರಿಯಿತು. ದಾದಿ ಅವನೊಡನೆ "ನನಗೇನೂ ಧೈರ್ಯ ಕಾಣುವುದಿಲ್ಲ. ಡಾಕ್ಟರರ ಹತ್ತಿರ ಏನಾದರೂ ಇಂಜಕ್ಷನ್ ಕೊಡಲು ಹೇಳಿ" ಎಂದು ಗಾಬರಿಯನ್ನು ಹುಟ್ಟಿಸಿದಳು. ಆತ ನಂದರ ಮನೆಗೇನೇ ಓಡಿದನು. ಅವರು ಬಂದರು. ಇಂಜಕ್ಷನಿನ ಸೇವೆಯಂತೂ ನಡೆಯಿತು. ಏನು ಕೊಟ್ಟರೋ ಯಾರು ಬಲ್ಲರು? ಅಂತು ಆ ರಾತ್ರಿ ಮಗುವಿನ ಸ್ಥಿತಿ ತುಂಬ ಶೋಚನೀಯವಾಗಿತ್ತು. ಜ್ವರ ಇಳಿಯುತ್ತ ಬಂದಿತು. ಅದರ ಜತೆಗೆ ಅದರ ಕಣ್ಣಾಲಿಗಳು ಹೊಳಪುಗೆಟ್ಟವು. ರಾಧಾಕೃಷ್ಣ ಅದರ ಕಪೋಲವನ್ನು ಸವರುತ್ತಿದ್ದ, ಕೂದಲನ್ನು ನೇವರಿಸುತ್ತಿದ್ದ. ಸೋತ

ದೃಷ್ಟಿಯಿಂದ ಅದು ಅವನನ್ನೇ ನೋಡುವಂತಿತ್ತು. ಕಪೋಲಗಳಿಂದ ಬೆರಳು ತುಟಿಗೆ ತಗಲುತ್ತಲೇ, ಈತ ಬಳಿಯಿದ್ದ ಗ್ಲೂಕೋಸ್ ನೀರನ್ನು ಅದರ ತುಟಿಯೊಳಕ್ಕೆ ಹಾಕಿದನು. ಒಂದೆರಡು ತುಟುಕು ನೀರು ಕುಡಿಯಿತು. ಅಷ್ಟರ ತನಕ ಏನನ್ನೂ ಮುಟ್ಟದ ಕೂಸು, ಆಹಾರ ಸೇವಿಸಿದುದಕ್ಕಾಗಿ ಹರ್ಷ ತಾಳಿದನು. ಮಗುವಿನ ಮಂಚದ ಕೆಳಗೆ ಶ್ಯಾಮನು ಮಲಗಿ ನಿದ್ದೆ ಹೋಗಿದ್ದ. ಅದರ ಬಳಿ ಆರಾಮ ಕುರ್ಚಿಯೊಂದರಲ್ಲಿ ಈತ ಮಲಗಿದ್ದನು. ಹಾಗೆ ಎಷ್ಟು ಸಮಯ ನಿದ್ರಿಸಿದ್ದರೊ. ಬೆಳಗಿನ ಜಾವಕ್ಕೆ ಅಲ್ಲಿಗೆ ಬಂದ ದಾದಿ, ರಾಧಾಕೃಷ್ಣನ ಮೈಯನ್ನು ಅಲುಗಿಸಿ ಎಚ್ಚರಗೊಳಿಸಿದಳು. "ಏನು" ಎಂದು ಕೇಳಿದ. ಅವಳು ಮಗುವನ್ನು ತೋರಿಸಿ "ಎಲ್ಲ ಮುಗಿಯಿತು" ಎಂದಳು.

ರಾಧಾಕೃಷ್ಣನಿಗೆ ಎದೆ ಒಡೆದಂತಾಯಿತು. ಮಗುವನ್ನು ನೋಡುತ್ತಾನೆ, ಅದರ ಕಣ್ಣುಗಳು ಆ ಪುಟ್ಟ ಜೀವನ ಯಾತ್ರೆಯ ಕಟ್ಟಕಡೆಯ ಅನುಭವವನ್ನು ಹೇಳುತ್ತಿದ್ದುವು. ಅದರ ಮೈ ಮುಟ್ಟುವುದಕ್ಕೆ ನಡುಕು ಉಂಟಾಯಿತು. ಹಸುಗೂಸಿನಂತೆ ಅಳುತ್ತ ಕುಳಿತನು. ಶ್ಯಾಮ ಎಚ್ಚರಗೊಂಡು "ಏನು, ಏನು" ಎಂದು ಕೇಳಿದ. ಒಂದು ಕೊರಳಿನ ಜತೆಗೆ ಇನ್ನೊಂದು ಸೇರಬೇಕಾಯಿತು. ಬೆಳಕು ಹರಿಯುತ್ತಲೇ, ಆತ ನಂದರ ಮನೆಗೆ ಓಡಿದನು, ಅವರು "ಏನು ಮಾಡಲಿಕ್ಕೆ ಬರುತ್ತದೆ? ಅದು ಬಂದಾಗಲೇ ನನಗೆ ಅನುಮಾನವಿತ್ತು" ಎಂದರು. ಯಾಕೋ, ಅವನಿಗೆ ಮುಂದೆ ಮಾತನಾಡಲು ಮನಸ್ಸಾಗಲಿಲ್ಲ. "ಆಗಲಿ, ಇನ್ನು ಹೋಗುತ್ತೇವೆ"

"ಶವ ಕೂಡಲೇ ಸಾಗಿಸುವ ಏರ್ಪಾಡು ಮಾಡುತ್ತೀರಲ್ಲಾ?"

"ಅದನ್ನು ಹೇಳಬೇಕೇ?" ಎಂದು ಧಾವಿಸಿ ತಿರುಗಿ ಬಂದನು.

ಮಗುವನ್ನು ಹೊತ್ತುತಂದ ಹಾಳೆಯಲ್ಲಿಯೇ ಇರಿಸಿ, ಅದನ್ನು ಸುತ್ತಿಕೊಂಡು ಇಬ್ಬರೂ ಹೊರಟರು. ಈಗ ಅದೊಂದು ಅರಿವೆಯ ಗಂಟು ಮಾತ್ರ. ರಾಧಾಕೃಷ್ಣ ಬರಿಯ ಭ್ರಾಂತನಂತೆ ಅಲ್ಲಿಂದ ಓಟಕಿತ್ತನು. ಶ್ಯಾಮ ಕಣ್ಣಿಂದ ಹನಿ ಸುರಿಸುತ್ತ ಅವನ ಹಿಂದೆ ಸರಿದ. ದಾರಿಯಲ್ಲಿ ಎಷ್ಟು ಬಾರಿ "ನಾನು ಹಿಡಿದುಕೊಳ್ಳುತ್ತೇನೆ ಕೊಡಿ" ಎಂದು ಬೇಡಿದರೂ ಆತನು ಕೊಡಲಾರ. "ಇನ್ನೆಂದಿಗೂ ಅದು ಭಾರವಾಗದು ನನಗೆ" ಎಂದನು. ಯಾವುದೋ ಮಾತಿನ ನೆನಹು ಅವನನ್ನು ಚುಚ್ಚುತ್ತಿತ್ತು.

ಅವರಿಬ್ಬರೂ ಮನೆಯನ್ನು ಸೇರುವಾಗ ಸತ್ಯ, ಅನಂತರಾಮರು ಅವರನ್ನು ಸ್ವಾಗತ ಮಾಡಿದರು. ಆಕೆ ಓಡಿ, ಓಡಿ ಬಂದು "ಆಸ್ಪತ್ರೆಯಲ್ಲಿ ಬಿಟ್ಟು ಬಂದಿರಾ, ಗುಣ ವಿದೆಯೇ, ಅಯ್ಯೋ ಸ್ನಾನಿರದೆ ಹೋದೆನೇ?" ಎಂದಳು. ಹಿಂದಲ ಸಂಜೆಯೇ ಅವರಿಬ್ಬರೂ ಮನೆಗೆ ಬಂದಿದ್ದರು. ಬಿರುಮ ಮರಕಾಲನಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಂಡಿದ್ದರು.

ರಾಧಾಕೃಷ್ಣನು "ಇಲ್ಲ, ಬಿಟ್ಟು ಬರಲಿಲ್ಲ. ಇದೋ, ತಂದಿದ್ದೇನೆ" ಎಂದು ಆ ಅರಿವೆಯ ಗಂಟನ್ನು ತೋರಿಸಿದನು.

ನಿರ್ಗತಿಕ ಕೂಸಿಗಾಗಿ ಅಳುವಿನ ಸಮಾರಾಧನೆ ಜರಗಿತು. ಸತ್ಯಳಂತೂ—ತಾನು ಊರಿಗೆ ಹೋದುದೇ ತಪ್ಪಾಯಿತೆಂದು ರೋದಿಸಿದಳು. ಅವಳ ನಿಷ್ಕಲ್ಮಶ ಹೃದಯದಿಂದ ಅನೇಕ ಪರಿತಾಪದ ನುಡಿಗಳು ಹೊರಬಿದ್ದುವು. ರಾಧಾಕೃಷ್ಣ ಕಣ್ಣೀರನ್ನು ಒರಸಿಕೊಂಡು, ಹಾರೆ ಒಂದನ್ನು ಹಿಡಿದು ಹೊರಟನು.

ಶ್ಯಾಮ ಗದ್ಗದಿಸುತ್ತ "ಮರಕಾಲನನ್ನು ಕರೆಯಲೇ" ಎಂದು ಕೇಳಿದನು.

"ಬೇಡ, ನಮಗೇ ಇರಲಿ ಆ ಎಲ್ಲ ಕೆಲಸ."

ಒಂದು ತಾಸಿನಲ್ಲಿ ಅವನೇ ಆ ಮುದ್ದು ಒಡವೆಯನ್ನು ಮಣ್ಣುಗೂಡಿಸಿ ಬಂದನು. ಶ್ಯಾಮ ಬಳಿಯಲ್ಲಿ ಕುಳಿತು ಕಣ್ಣೀರ ತರ್ಪಣವನ್ನೆರೆದನು.

ಆ ದಿನವೆಲ್ಲ ಯಾರಿಗೂ ಉಣಿಸಿರಲಿಲ್ಲ. "ನೀವು ಊಟ ಮಾಡಿ" ಎಂದು ರಾಧಾಕೃಷ್ಣ ಉಳಿದವರಿಗೆ ಅಪ್ಪಣೆಮಾಡಿ, ಸ್ನಾನಕ್ಕೆ ಹೋಗಿ ಬಂದರೂ, ಅವನು ಉಪವಾಸ ಇರುವುದನ್ನು ಕಂಡು, ಊಟ ಮಾಡುವವರು ಯಾರು? ಪಾಪ, ಅವನ ಹೃದಯಕ್ಕೆ, ತಂದೆಯ ಸಾವಿಗಿಂತ ಹಿರಿದಾದ ಆಘಾತ ಬಡಿದಂತೆ ಕಾಣಿಸಿತು. ಸಂಸಾರವೆಂದ ಮೇಲೆ ತಾನು ಇಂಥ ಪ್ರಸಂಗಗಳನ್ನು ಎದುರಿಸಲೇ ಬೇಕಾಗಬಹುದು. ಈ ಖೇದಕ್ಕಿಂತ ಅದು ಹೆಚ್ಚಿನದೇ? ಯಾಕೆ ಈ ನಿಷ್ಠುರ ಜಗತ್ತು, ಅನ್ಯ ಜೀವಿಗಳ ಮೇಲೆ ಇಂಥ ನಂಜು, ತಿರಸ್ಕಾರಗಳನ್ನು ತೋರಿಸಬೇಕು ಎಂಬುದನ್ನು ಯೋಚಿಸುತ್ತ, ಆತನ ದಿವಸ ನರಕದಂತಾಯಿತು.

# ಒಂಭತ್ತನೆಯ ಅಧ್ಯಾಯ

ಮಂಗಳೂರಿನ ರಾಜಕೀಯ ಆವರಣದಿಂದ ಮುಖ್ಯ ವ್ಯಕ್ತಿಯೊಂದು ಇಂದು ದೂರವಾಗಿದೆ. ಆ ವ್ಯಕ್ತಿಯು ಸರಿದುದರಿಂದ ಅವರಿಗಿದ್ದ ಹೆಸರಿನ ಬೆಂಬಲವೂ, ರಾಧಾಕೃಷ್ಣನಿಗೆ ದೊರೆಯದಾಯಿತು. ಅವರೇ, ಆ ದಲಿತ ವಿದ್ಯಾಪೀಠದ ಪುರಸ್ಕರ್ತರು. ಅವನಿಗಿಂತ ಹೆಚ್ಚಿನ ಆತುರದಿಂದ ಅದಕ್ಕೆ ಜನ್ಮವನ್ನು ನೀಡಿದವರು. ಹಲವು ವರ್ಷಕಾಲ ಮಂಗಳೂರಿನಲ್ಲಿ ಕೊಡುಗೈಯ ವೀರರಾಗಿ ಕೆಲಸ ಮಾಡಿದವರು ಅವರು. ಆದರೆ ಜಗತ್ತು ಅವರ ವಿಷಯದಲ್ಲಿ ನಿರ್ದಯವಾಯಿತು. ಅಥವಾ ಅವರು ನಂಬಿದ ಜಗತ್ತೇ ಅವರನ್ನು ವಂಚಿಸಿತು. ಆ ದಯಾನಂದರಾಯರ ಸರಳತೆಯನ್ನು ಸುಲಿದು ಅನೇಕರು ಲಾಭಗಳಿಸಿಕೊಂಡರು. ರಾಧಾಕೃಷ್ಣ, ಅವರ ಉನ್ನತಿಯ ಕಾಲದಲ್ಲಿ ದೂರದಲ್ಲಿದ್ದವನು. ಕುಂದಾಪುರದ ಹಳ್ಳಿಗಳಲ್ಲಿ ಕುಳಿತು ತನ್ನ ಅದೃಷ್ಟದ ಆಳತೆಯನ್ನು ಕಂಡುಹಿಡಿಯುತ್ತಲಿದ್ದ. ಆ ಊರನ್ನು ಬಿಟ್ಟು ಅವನು ಈ ಪ್ರಾಂತಕ್ಕೆ ಬಂದಾಗಲೇ ಜನರು, ರಾಯರನ್ನು ದೂರ ಮಾಡುತ್ತಿದ್ದ ಬಗೆಯು ಅವನಿಗೆ ಅನುಭವವಾಯಿತು. ತಾವು ತುಂಬ ಸೋತಿದ್ದರೂ, ನೆರೆ ಹಾವಳಿಯ ಸಮಯದಲ್ಲಿ ಅವರು ಜನಕ್ಕಾಗಿ ಒದ್ದಾಡುತ್ತಲೇ ಇದ್ದರು. ಆ ಕೆಲಸವು ಮುಗಿಯುತ್ತಲೇ ಅವರನ್ನು ಸುತ್ತುವರಿಯುತ್ತಿದ್ದ ಅನುಯಾಯಿಗಳು "ದಯಾನಂದರಾಯರ ಕೆಲಸವೇ ಮುಗಿಯಿತು" ಎಂದು ತಿಳಿದಂತೆ ಕಾಣುತ್ತದೆ. ಅವರ ಸಾಲಗಳೆಲ್ಲ ತಲೆಯೆತ್ತಿ ನಿಂತು, ಶೂಲಗಳಾದುವು. ಅವರು ತಮ್ಮ ಸಂಪತ್ತನ್ನು ಸಾಲಕ್ಕಾಗಿ ಸಲ್ಲಿಸಿದರು. ಸಂಪತ್ತು ತೊಲಗುತ್ತಲೇ ಆಪ್ತರು ದೂರವಾದರು. ತೀರ ಕೊನೆಗೆ, ಅವರು-ಹಿಂಡಿದ ಕಬ್ಬಿನ ಜೊಗಟೆಯಾದ ಮೇಲೆ, ಯಾರು ಅವರನ್ನು ಮೂಸಬೇಕು? ತಾವಾಗಿ ಕೇಳಿ ಕೇಳಿ ಕೊಟ್ಟ ಅವರು "ಯಾರನ್ನು ಕೇಳಿದರೆ ಆದೀತು" ಎಂಬ ದಿನವು ಬಂದಿತು. ಹಳೆಯ ಸ್ನೇಹದ ನೆಪದಿಂದ "ಒಂದು ನೂರು ರೂಪಾಯಿ ಕೊಡಿ, ನಾಳೆ ಕೊಡುವ" ಎಂದು ಬೇಡುವ ಗಳಿಗೆ ಬಂದಿತು. ಅವರಿಂದ ಲಾಭ ಪಡೆದವರಿಗೂ ಅವರು ಬೇಡವಾದ ಸಮಯ ಅದು. ಅದನ್ನು ತಿಳಿದು ಕೊಂಡೋ ಏನೋ, ಅವರು ತಮ್ಮ ಹೆಂಡತಿ ಮಕ್ಕಳೊಡನೆ ಮಂಗಳೂರನ್ನು ಬಿಟ್ಟು ತೊಲಗಿದರು. ಅಷ್ಟರೊ

ಳಗಾಗಿ ದಯಾನಂದರಾಯರ ಬದಲಿಗೆ, ಸದಾನಂದರಾಯರು ಕಾಲು ಇರಿಸಿದರೆಂದರೂ ಸರಿಯೇ.

ಡಾ| ನಂದ ಈಗ ಲೌಕಿಕದ ಜತೆಗೆ ರಾಜಕೀಯಕ್ಕೆ ಕಾಲಿಟ್ಟಿದ್ದಾರೆ. ಕಾಂಗ್ರೆಸ್ ಜನರಿಗೂ ಮುಖಂಡರಾದರು. ಊರಿನ ಪರೋಪಕಾರ ಸಂಸ್ಥೆಗಳನ್ನೆಲ್ಲ ಮುಷ್ಟಿಯಿಂದ ಬಾಚಿಹಿಡಿದರು. ಈಗ ಮಂಗಳೂರಿನಲ್ಲಿ ಅವರ ಪರ್ವಕಾಲ ಉದಯಿಸಿದೆ. ಎಲ್ಲಿ ಶಾಲಾವರ್ಧಂತಿಗಳು ಆಗುವುದಿದ್ದರೂ ಅವರೇನೇ ಅಧ್ಯಕ್ಷರು, ಎಲ್ಲಿ ಸಭೆ, ಸಮಿತಿಗಳಾಗುವುದಿದ್ದರೂ ಅವರೇನೇ ನಾಯಕರು. ಎಲ್ಲ ಪರಿಷತ್ತುಗಳಿಗೂ ಅವರೇ ತಾತಂದಿರು. ಒಂದೊಂದು ಊರಿನ ಇತಿಹಾಸದಲ್ಲೂ, ಒಂದೊಂದು ಕಾಲಕ್ಕೆ ಒಂದೊಂದು ಉತ್ಸವ ಮೂರ್ತಿಯು ದೊರಕಿಯೇ ದೊರಕುತ್ತದೆ. ಹಲವರು ಪ್ರಾಯ ನೆರೆತು, ಪೆನ್‌ಶನ್ ಪ್ರಾಪ್ತಿಯಾದ ಮೇಲೆ ಆ ಅದೃಷ್ಟಭಾಜನರಾಗುತ್ತಾರೆ. ಆದರೆ ಡಾ| ನಂದರು ಹಾಗಲ್ಲ. ಹುಟ್ಟು ಹುಟ್ಟುತ್ತಲೇ ಜನತಾಮುಖಂಡರಾಗಿ ಬಂದರು. ಹಳೆಯ ನಾಯಕರಲ್ಲಿ ಜನರಿಗೆ ಬೇಸರ ಬಂದಿದ್ದ ಕಾಲಕ್ಕೆ ಸರಿಯಾಗಿ, ಇವರು ಉದಯಿಸಿದರೆಂದೋ, ಇವರಲ್ಲಿ ತುಂಬ ಹಣವಿದೆಯೆಂದೋ, ಇಲ್ಲವೆ, ಅವರ ಬಾಯಿ ಪರೋಪಕಾರವನ್ನು ಮೆಚ್ಚಿಯೋ-ಜನವಂತು ಮರುಳಾಯಿತು.

ಅವರು ಮಂಗಳೂರಿಗೆ ಬಂದು ತೆರೆದ Lying;-n-hospitalನ ಕೀರ್ತಿ ಹಬ್ಬಿತು. ಅಲ್ಲಿಂದಲೇ ಬುಧನ ದೆಸೆ. ವಾರ್ತಾ ಪತ್ರಿಕೆಯವರನ್ನು ವಿಶೇಷ ಆದರ ಉಪಚಾರಗಳಿಂದ ಒಲಿಸಿಕೊಳ್ಳುವ ಸ್ವಭಾವ ಅವರದು. ಎಂಥ ಬಡ ಪತ್ರಕರ್ತರೇ ಇರಲಿ, ತಾವಾಗಿಯೇ ಅವರಲ್ಲಿಗೆ ಹೋಗುತ್ತಾರೆ, ಅವರೊಡನೆ ಸಮಯವನ್ನು ಕಳೆಯುತ್ತಾರೆ. ಅವರ ಮನೆಯ ಬೇನೆಗಳಿಗೆ ನಂದರೇ ವೈದ್ಯರು. ಧರ್ಮಾರ್ಥವಾದ ಚಿಕಿತ್ಸೆ, ಧರ್ಮಾರ್ಥವಾದ ಸಂದರ್ಶನೆ—ಇಷ್ಟು ಸಾಲದೆಂಬುದಕ್ಕೋ ಏನೋ, ಅವರ ಬೆನ್ನುತಟ್ಟಿ "ಏನಾದರೂ ಸಹಾಯ ಬೇಕಿದ್ದರೆ ಹೇಳಿ"ಎಂದು ತಾವಾಗಿಯೇ ಕೇಳುತ್ತಾರೆ. ಕನ್ನಡದ ಬಡ ಸಂಪಾದಕ, ಪತ್ರಕರ್ತರುಗಳಿಗೆ ಇಂಥ ನೆರವು ಬೇಡವಾದ ದಿನವು ಉಂಟೇ? ಅದರ ಪರಿಣಾಮವಾಗಿ, ಪತ್ರಿಕೆಯ ಹಾಳೆಗಳಲ್ಲಿ ನಂದರ ಆಸ್ಪತ್ರೆಯ ವಿಶೇಷ ಜಾಹಿರಾತು! ಅವುಗಳ ಸುದ್ದಿ ಸಾಲುಗಳಲ್ಲಿ ನಂದರ ಚಿಕಿತ್ಸೆಯಿಂದ ಉದ್ಧಾರ ಹೊಂದಿದವರ ಆತ್ಮವೃತ್ತ. ಆಸ್ಪತ್ರೆಯ ವರ

ಮಾನದ ಒಂದಂಶವನ್ನು ಪತ್ರಿಕೆಗಳ ಸಲುವಾಗಿಯೇ ಮೀಸಲಿಟ್ಟರು ಎಂದರೂ ತಪ್ಪಿಲ್ಲ. ಪತ್ರಕರ್ತರು ದೊರೆತಾಗಲೆಲ್ಲ, ತಮ್ಮ ವಿಶ್ವವ್ಯಾಪ್ತಿಯಾದ ಭಾವಿ ಯೋಜನೆಗಳನ್ನು ಕುರಿತು ಅವರೊಡನೆ ತರ್ಕಿಸುವರು. ಹೀಗಾಗಿ ಡಾ| ನಂದರು ತಮ್ಮ ಮೆಟರ್‌ನಿಟಿ ಹೋಮನ್ನು ತೆರೆಯುವ ಆರು ತಿಂಗಳಿಗೆ ಮೊದಲೇ "ಮಂಗಳೂರಿನಂತಹ ಭಾರೀ ಶಹರಿನಲ್ಲಿ ಸಾಕಷ್ಟು ಹೆರಿಗೆ ಆಸ್ಪತ್ರೆಗಳಿಲ್ಲ" ಎಂದಿತು ಒಂದು ಪತ್ರಿಕೆ. "ಇದ್ದವುಗಳಲ್ಲಿ ಶುಚಿತ್ವ, ಗಮನ ಸಾಲದು" ಎಂದಿತು ಇನ್ನೊಂದು ಪತ್ರಿಕೆ. "ಇಂಥ ಅಮೂಲ್ಯ ಸಾರ್ವಜನಿಕ ಕೆಲಸವನ್ನು ಡಾ| ನಂದರೇನೆ ಕೈಕೊಳ್ಳಬೇಕೆ"ಂದು ಬಿನ್ನವಿಸಿತು--ಇನ್ನೊಂದು ಪತ್ರಿಕೆ. ಸಮನಾಗಿ ತಾಲೀಮು ನಡೆದ ನಾಟಕಾಭಿನಯದಂತೆ, ಡಾ| ನಂದರ ಹೆರಿಗೆಯ ಆಸ್ಪತ್ರೆ ಪ್ರಾರಂಭವಾಯಿತು. ದಯಾನಂದರು ಊರು ಬಿಡುವ ಮೊದಲು ನಂದರು ಅವರಿಂದ ಪತ್ರವೊಂದನ್ನು ಪಡೆದು, ಮುಂಬಾಯಿಯ ತನಕ ಪ್ರವಾಸ ಬೆಳೆಸಿ, ಶ್ರೀಮತಿ. ಅಂಬಿಕಾಲಲು ಬೆನ್ ಎಂಬ ಮಹಾ ಮಹಿಳೆಯನ್ನು, ಅದರ ಪ್ರಾರಂಭೋತ್ಸವಕ್ಕೆ ಕರೆದುತಂದರು. ಒಂದು ತಿಂಗಳ ತನಕ—ಊರಿಗೆ ಬರಲಿರುವ, ಅಂಬಿಕಾಲಲು ಬೆನರವರು ಗುಜರಾಥ್, ಕಾಥಿಯವಾಡ, ಬರೋಡಗಳಲ್ಲಿ ಮಾಡಿದ ಅನೇಕ ಸಾರ್ವಜನಿಕ ಚಟುವಟಿಕೆಗಳ ಗುಣಗಾನವು, ಮಂಗಳೂರಿನ ಪತ್ರಿಕೆಗಳಲ್ಲಿ ಉದಯಿಸಿತು. ಅವರು ಬರುವುದರೊಳಗೆ—ದಯಾನಂದರಾಯರು ಊರನ್ನು ಬಿಟ್ಟಿದ್ದರು. ಆಗಾಗಲೇ, ಕೆಲವು ದುಷ್ಟರು—ರಾಯರನ್ನು ಓಡಿಸಿದವರು ನಂದರೇ-ಎಂದೂ ಎನ್ನತೊಡಗಿದ್ದಾರೆ. ಅದಕ್ಕಾಗಿ 'ಮಂಗಳೂರು ಮಿರರ್' ಸಂಪಾದಕನು ಅವರಿಗೆ ಒಂದು ಸಲಹೆ ಮಾಡಿದನು "ನೋಡಿ ಮಿ| ನಂದ. ದಯಾನಂದರಾಯರು, ಊರಿನಲ್ಲಿರುವಾಗ ಮಾಡಿದ್ದು ಏನಿಲ್ಲವಾದರೂ, ಜನರ ಬಾಯಲ್ಲಿ ಅವರ ಕೀರ್ತಿಯು ತುಂಬ. ಅಂದರೆ ಅವರ ಕೈಯಿಂದ ಆಣೆನಾಲ್ಕಾಣೆ ತಿಂದ ಹಲವು ಮಂದಿ ಇದ್ದಾರೆ. ಅವರಂಥವರು-ರಾಯರಂತೆ ತ್ಯಾಗ ಮಾಡಿದವರು ಇಲ್ಲ-ಎನ್ನುವುದು ಸಹಜ. ಅಂಥ ಜನರಲ್ಲಿ ಕಾಂಗ್ರೆಸ್ಸಿನ ಬಾಲ ಹಿಡಿದವರೇ ಹೆಚ್ಚು. ನೀವು ಅಂಥವರನ್ನು, ಒಲಿಸಿಕೊಳ್ಳಬೇಕು. ಆಗ ಮಾತ್ರ ಕಾಂಗ್ರೆಸ್ ಆವರಣದಲ್ಲಿಯೂ ನಿಮ್ಮ ವರ್ಚಸ್ಸು ಹೆಚ್ಚುತ್ತದೆ" ಎಂದು ಬೋಧಿಸಿದರು.

"ಮಿ| ಪ್ರಭುದೇವ್, ನೀವು ಎನ್ನುವುದು ನನಗೆ ಸರಿಯಾಗಿ ಕಾಣು ತ್ತದೆ. ನನಗೆ, ನಮ್ಮ ಜಿಲ್ಲೆಯ, ಮುಖ್ಯವಾಗಿ ಇಲ್ಲಿಯ ಮುನ್ಸಿಪಾಲಿಟಿಯ ಪ್ರಜಾ ಸೌಕರ್ಯಗಳನ್ನು ಸುಧಾರಿಸುವ ಯೋಚನೆ ಇದೆ. ಅದಕ್ಕೆ ಕಾಂಗ್ರೆಸ್ಸು, ಸ್ಥಳಿಕ ರಾಜಕೀಯಗಳಲ್ಲಿ ಕೈಹಾಕಬೇಕಾಗಿದೆ. ಅಲ್ಲದೆ ಜವಾಬ್ದಾರಿ ತಿಳಿದವರೇ ಆ ಕೆಲಸ ನಡೆಯಿಸಬೇಕು. ಬ್ರಿಟಿಷರಿಗೂ, ನಮಗೂ ಮಾತ್ರ ಜಗಳ ಎಂಬುದು ನಿಜವಾದ ರಾಜಕೀಯವಲ್ಲ. ಮಂಗಳೂರಿನ ಆರೋಗ್ಯ, ನೀರಿನ ಪೂರೈಕೆ, ಸೌಂದರ್ಯ ಹೆಚ್ಚಿಸುವ ಕೆಲಸ-ಪಾರ್ಲಿಮೆಂಟ್ ಮಾಡುವ ಕೆಲಸವಲ್ಲ. ನಾವು ಮಾಡಬೇಕಾದ ಕೆಲಸ."

"ನಾನು ಎನ್ನುವುದೂ ಅದನ್ನೇ. ನಮ್ಮಲ್ಲಿ ರಾಜಕೀಯದಲ್ಲಿ ಚುರುಕಾಗಿ ಕೆಲಸಮಾಡುವ ಜನರು ಇಲ್ಲವೇ ಇಲ್ಲ. ಏನೋ ವರ್ಷದಲ್ಲಿ ಎರಡು ದಿವಸ ಗದ್ದಲ ಎಬ್ಬಿಸಿ, ಗಾಂಧೀಜಿಯವರ ಹೆಸರಿನಲ್ಲಿ ನಾಲ್ಕುನಾಲ್ಕಾಣೆಯ ವಂತಿಗೆ ಎತ್ತಿದರೆ ಆಯಿತು ಎಂದು ತಿಳಿಯುತ್ತಾರೆ. ಅನಂತರ ಮಲಗಿ ನಿದ್ದೆ ಹೋಗುತ್ತಾರೆ. ಅಂಥ ಸ್ಥಿತಿಯಲ್ಲಿ ರಾಯರು ಇದ್ದರೂ ಇಲ್ಲಿ ಏನೂ ಕೆಲಸ ಆಗುತ್ತಿರಲಿಲ್ಲ. ಅವರಂತು ಊರು ಬಿಟ್ಟದ್ದೇ ಒಳ್ಳೆಯದಾಯಿತು. ಆದರೆ, ಅವರ ಹೆಸರು ಹಿಡಿದು ಕೂಗುವುದರಿಂದ ಪ್ರಯೋಜನವಿದೆ."

"ಅದು ಖಂಡಿತವಾದ ಮಾತು. ಅವರು ದೊರಕಿಸಿಕೊಟ್ಟ ಪರಿಚಯದಿಂದಲ್ಲವೇ-ನಾನು ಮುಂಬಯಿಗೆ ಹೋಗಿ ಶ್ರೀಮತಿ ಲಲುಬೆನ್‌ರವರನ್ನು ಕಂಡದ್ದು. ಅವರು ಬರುವ ದಿವಸ, ಒಂದು ಗ್ರೇಂಡ್ ಡಿನ್ನರ್ ಏರ್ಪಡಿಸುತ್ತೇನೆ."

"ಹಾಗೆ ಡಿನ್ನರ್ ಒಂದೇ ಸಾಲದು. ನನ್ನ ಒಂದು ಯೋಚನೆಯನ್ನೂ ತೆಗೆದುಕೊಳ್ಳಿ."

"ಏನದು ಹೇಳಿ?"

"ನಿಮ್ಮ ಈ ಹೆರಿಗೆಯ ಆಸ್ಪತ್ರೆಗೇನೆ 'ದಯಾನಂದ ಮೆಟರ್ನಿಟಿ ಹೋಮ್' ಎಂಬ ಹೆಸರು ಇರಿಸಿರಿ. ಅವರ ಒಂದು ತೈಲ ಚಿತ್ರವನ್ನು ಅನಾವರಣ ಮಾಡಿಸಿ; ಆಗ ಅವರನ್ನು ಓಡಿಸಿದವರೇ ನೀವು-ಎಂಬ ಜನತೆಯ ಅಪಪ್ರಚಾರಕ್ಕೆ ಮದ್ದನ್ನು ಅರೆದ ಹಾಗೆ ಆಗುತ್ತದೆ."

"ನಿಮ್ಮ ಈ ಯೋಚನೆ ಸರಿಯಾದದ್ದೇ. ನನಗೂ ಅಂಥ ಭಾವನೆ ಬಂದಿತ್ತು. ಈಗ ನೀವು ಬೆಂಬಲ ಕೊಟ್ಟಿರಿ. ನಿಮ್ಮ ನಾಳಿನ 'ಮಿರರ್'ನಲ್ಲಿ

ನಮ್ಮ ಆಸ್ಪತ್ರೆಯ ವಿಷಯ ಬರೆಯುತ್ತ "ಮಂಗಳೂರಿಗೆ ದಯಾನಂದ ರಾಯರು ಸಲ್ಲಿಸಿದ ಸೇವೆಯು ಅಮೋಘವಾದದ್ದು. ಅವರ ಸ್ಮಾರಕ ವಾಗಿಯೇ ಈ ಆಸ್ಪತ್ರೆಯನ್ನು ತೆರೆದು ಪ್ರಾರಂಬಿಸುವುದು ಸ್ತುತ್ಯ' ಎಂದು ಬರೆದು ಈ ಹೊಸ ಹೆಸರನ್ನು ಸೂಚಿಸಿರಿ."

"ಬಹಳ ಚೆನ್ನ" ಎಂದರು ಪ್ರಭುದೇವರು. ನಂದರವರು ತಮ್ಮ ಆಸ್ಪತ್ರೆಗೆ ಹೊರಡುವ ಸಮಯವಾಯಿತು. ಕಾರು ಮನೆಯ ಮುಂಗಡೆ ಬಂದು ನಿಂತಿತು. ನಂದರೂ, ಪ್ರಭುದೇವರು, ಸಿಗರೇಟಿನ ನಂದಾದೀಪ ನಡೆಯಿಸುತ್ತಿದ್ದರು. ಪ್ರಭು ಹೊರಡುವ ಸಮಯವಾದರೂ ಏಳದಿದ್ದು ದನ್ನು ಕಂಡು, "ಏನು ವಿಶೇಷ ಇದೆಯೇ" ಎಂದು ಡಾಕ್ಟರರು ಕೇಳಿದರು.

"ಏನಿಲ್ಲ, ಚಿಲ್ಲರೆ ತೊಂದರೆಯಿದೆ. ನಿಮ್ಮ ಮೆಟರ್ನಿಟಿ ಹೋಮಿನ ಫೋಟೊ ಪಡಿಯಚ್ಚು ಇವತ್ತು V.P. ಬರುತ್ತದೆ, ಆ ವಿ. ಪಿ ಬಿಡಿಸಿಕೊಳ್ಳಲು ಹಣ ಬೇಕಾಗಿದೆ"ಎಂದರು. ರಾಯರು ಕೂಡಲೆ ಇಪ್ಪತ್ತು ರೂಪಾಯಿಗಳನ್ನು ಕಸ ಒಗೆಯುವಂತೆ ಒಗೆದು ಬಿಟ್ಟರು. ಅಷ್ಟೇ ನಿರ್ಗಣನೆಯಿಂದ ಪ್ರಭು ದೇವನು ಅದನ್ನು ತನ್ನ ಕಿಸೆಗೆ ತುರುಕುತ್ತಾ "ಅದು ಇರಲಿ, ಈ ವರ್ಷದ ಇಲೆಕ್ಷನಿನ ವಿಷಯ ನೀವು ಯೋಚಿಸಿಯೇ ಇಲ್ಲವೇ" ಎಂದು ಕೇಳಿದನು.

"ನೀವು ಕಾಂಗ್ರೆಸ್ಸಿ ಚುನಾವಣೆಯ ವಿಚಾರ ಕೇಳುತ್ತೀರಾ?"

"ನೀವು ಬರಿಯ ಇಲ್ಲಿಯ ಯೋಚನೆಯಷ್ಟನ್ನೇ ಮಾಡಬಾರದು. ಅದು ಏನೂ ಉಪಯೋಗವಿಲ್ಲ. ನೀವು ಯಾವತ್ತು ಜಿಲ್ಲೆಯ ಬೆಂಬಲವನ್ನು ದೊರಕಿಸಿ ಕೊಳ್ಳಬೇಕು. ಜಿಲ್ಲೆಯ ಹಳ್ಳಿಗಳನ್ನು ಸಮನಾಗಿ ವ್ಯವಸ್ಥೆಗೊಳಿಸಿ, ತಲೆಯಿಂದ ತಲೆತನಕ ನಮ್ಮ ಜನರನ್ನು ಇರಿಸಬೇಕು. ಮಂಗಳೂರಿನ ಬೆಂಬಲ ಇಲ್ಲಿಯ ಕೆಲಸಕ್ಕೆ ಮಾತ್ರ ಬಂದೀತು. ಸಂದರ್ಭವಿದ್ದರೆ ನೀವು ಜಿಲ್ಲಾ ಬೋರ್ಡು ಚುನಾವಣೆಗೂ, ಹಿಂಜರಿಯಬಾರದು."

"ಈಗ ವೇಳೆ ಆಯಿತಲ್ಲ, ಇನ್ನೊಮ್ಮೆ ಬನ್ನಿ, ಮಾತನಾಡುವ" ಎನ್ನುತ್ತಲೇ ಪ್ರಭುದೇವ "ಹೊರಡುತ್ತೇನೆ" ಎಂದು ಎದ್ದು ನಿಂತ. "ಹೋಗುತ್ತ, ನಿಮ್ಮ ಆಫೀಸಿನಲ್ಲಿ ಬಿಟ್ಟು ಹೋಗುತ್ತೇನೆ." ಎಂದು ನಂದರು, ತಮ್ಮ ಕಾರಿನಲ್ಲಿ ಅವನನ್ನು ಕುಳ್ಳಿರಿಸಿಕೊಂಡು ಸರಿದು ಹೋದರು.

ಪ್ರಭುದೇವನು ತರುಣ. S. S. L. C. ಮುಗಿಸಿ ಇಂಟರಿನಲ್ಲಿಯೂ ಕುಳಿತಿದ್ದ ಕೆಲವು ತಿಂಗಳ ಕಾಲ. ಆದರೆ ಆತಗೆ ವಿದ್ಯಾರ್ಥಿ ಜೀವನ ಬಹಳ

ಸಪ್ಪೆ ಆಗಿ ಕಾಣಿಸಿತು. ತಾನು ಮುಂದೆ ಬರಬೇಕೆಂಬ ಹಂಬಲ ತುಂಬ. ವಿಶೇಷ ಶ್ರಮಪಡದೆ, ಬಹಿರಂಗದಲ್ಲಿ ಮೆರೆಯಃ ಬಹುದಾದ ಉದ್ಯೋಗ-ಪತ್ರಿಕೆ ನಡೆಯಿಸುವಿಕೆ. ಹೀಗೆಂದು ಸಂಪಾದಕ ವೃತ್ತಿಯನ್ನು ಆತ ಆರಿಸಿ ಕೊಂಡ. ಆ ಉದ್ದೇಶಕ್ಕೆ ಸಮವಾಗಿ "ಮಂಗಳೂರು ಮಿರರ್" ಎಂಬ ವಾರ ಪತ್ರಿಕೆಯನ್ನು ಹೊರಡಿಸಿದನು. ಅದು ಕನ್ನಡ ಪತ್ರಿಕೆ; ಕೆಲವೊಮ್ಮೆ ತ್ರಿಭಾಷೆಯದೂ ಆಗುತ್ತಿತ್ತು; ಇಂಗ್ಲಿಷು ಕನ್ನಡಗಳ ಜತೆಗೆ ಹಿಂದೀ ಕಾಲಮ್ ಒಂದನ್ನೂ ಸೇರಿಸುತ್ತಿದ್ದ. ಪತ್ರಿಕೆಯು ಹೊರಟು ಇನ್ನು ಬರಿಯ ವರ್ಷಮಾತ್ರ ಸಾಗಿದೆ. ಆದರೆ ನಂದರಂಥ ಮಿತ್ರರ ಬೆಂಬಲದಿಂದ—ಹಲವು ಬ್ಯೇಂಕ್, ಇನ್‌ಶೂರೆನ್ಸ್ ಕಂಪೆನಿಗಳು, ಕಾರ್ಖಾನೆಗಳು, ಬೀಡಿ ಶಾಪು-ಇವುಗಳ ಜಾಹಿರಾತನ್ನು ದೊರಕಿಸಿಕೊಂಡು ನಿಶ್ಚಿಂತವಾಗಿ ಬಾಳಬೇಕಾಗಿದೆ. ಮಂಗಳೂರಿನ ಯಾವುದೋ ಒಂದು ವಾರಪತ್ರಿಕೆಯು 'ಉಜ್ವಲ ರಾಷ್ಟ್ರೀಯ ಪತ್ರಿಕೆ' ಎಂದು ತನಗೆ ತಾನೇ ಅಭಿದಾನ ಇರಿಸಿ ಕೊಂಡುದನ್ನು ಕಂಡು, ಈತ "ಪ್ರಜ್ವಲ ರಾಷ್ಟ್ರೀಯ ಪತ್ರಿಕೆ." ಎಂಬ ಬಿರುದನ್ನು ತನ್ನ ಪತ್ರಿಕೆಗೆ ತೂಗಿಸಿಕೊಂಡಿದ್ದಾನೆ. ಕನ್ನಡದ ಹೆಸರು ಗಳಿಗೆ, ಇಂಗ್ಲಿಷಿನ ಬಿರುಸು ಬರುವುದಿಲ್ಲವೆಂದು, ಪತ್ರಿಕೆಗೆ ಮಂಗಳೂರು ಕನ್ನಡಿ ಎಂಬ ಬದಲು 'ಮೆಂಗಲೂರ್ ಮಿರರ್' ಎಂದು ನಾಮಕರಣ ಮಾಡಿದ್ದಾನೆ. ಪತ್ರಿಕೆಯನ್ನು ಆದಷ್ಟು ಬೇಗ ದಿನವಹಿಯಾಗಿ ಮಾಡಿ, ರಾಯಿಟರ್ ವಾರ್ತೆ ಸೇರಿಸುವ ವರೆಗೂ ಅವನಿಗೆ ಆತುರ. ಡಾ। ನಂದರ ವರನ್ನು ಹಿಡಿದು, ಅಷ್ಟು ಕೆಲಸ ಮಾಡಿಸಿಕೊಳ್ಳುವ ಹಟ ಅವನಿಗಿದೆ.

ಪ್ರಭುದೇವನ ವಯಸ್ಸು ಚಿಕ್ಕದು. ಏನು ಇಪ್ಪತ್ತನಾಲ್ಕು ವಯ ಸ್ಸಿರಬಹುದು. ತೀರ ಹರಿತವಾದ ನಾಲಗೆ ಇದೆ. ಚಲಾಕಿ ಮಾತುಗಳಿದ್ದುವು. ಮೊನೆಯಾದ ಲೇಖನಿಯೂ ಸೇರಿತ್ತು ಅವನಲ್ಲಿ. ನಯ, ಚೆಲುವು ಸರಳತೆಗಳಲ್ಲಿ ಅವನು ನಂಬುಗೆ ಇಲ್ಲದ ತರುಣ. ಆತನ ಶರೀರ ತೆಳ್ಳಗಿನದು, ಕಿರಿಯ ಆಕೃತಿ, ಬಿಳಿಯ ಬಣ್ಣ. ಈಗಾಗಲೇ ಪಕ್ವ ಜ್ಞಾನದ ಸೂಚನೆ ಎಂಬಂತೆ, ಸಾಕಾಗುವಷ್ಟು ಬಿಳಿಕೂದಲುಗಳು ತಲೆಯಲ್ಲಿ ಕಾಣಿಸತೊಡಗಿವೆ. ಡಾ। ನಂದರವರಿಗೆ ಉಳಿದ ಎಲ್ಲ ಪತ್ರಕರ್ತರೊಡನೆ ತುಂಬ ಸ್ನೇಹವಿತ್ತಾದರೂ, ಪ್ರಭುವನ್ನು ತಮ್ಮ ಮುಖ್ಯ ಪ್ರಚಾರಕಾರ್ಯ ಕರ್ತೃವನ್ನಾಗಿ ನೇಮಿಸಿಕೊಂಡಿದ್ದಾರೆ.

ಅವರ ನವೀನ ಸೂತಿಕಾಗೃಹವನ್ನು ಹಳನೀರಿನಲ್ಲಿ ತೆರೆಯುವ ದಿವಸ, ಪ್ರಭುದೇವನ ಕೆಲಸವೇ ಕೆಲಸ. ಅದಕ್ಕಾಗಿಯೇ ಒಂದು ಸ್ವಯಂ ಸೇವಕ ದಳ ಏರ್ಪಡಿಸಿದ್ದ. ಶ್ರೀಮತಿ ಲಲುಬೆನ್‌ರವರು ಎಲ್ಲಿಯೇ ಹೋಗಲಿ, ಮಗ್ಗುಲಲ್ಲಿ ಡಾ। ನಂದ, ತುಸು ಹಿಂದೆ ಪ್ರಭುದೇವರು ಇದ್ದೇ ಇರುತ್ತಿದ್ದರು. ಅವರ ಆಗ್ರಹದಿಂದಲೇ—ಎಂಬಂತೆ ಶ್ರೀಮತಿಯವರು ತಮ್ಮ ಒಂದು ದಿವಸದ ಮಂಗಳೂರಿನ ನಿಲುವಿಕೆಯನ್ನು, ಮೂರು ದಿನಕ್ಕೆ ಬೆಳೆಯಿಸಿದರು. ಶ್ರೀಮತಿಯವರು ಬಂದುದು ಆಸ್ಪತ್ರೆಯ ತೆರೆಯೋಣ ಕ್ಕಾದರೂ, ಅವರು ನಿಂತ ಮೂರು ದಿನವೂ ಬಿಡುವಿಲ್ಲದ ಕಾರ್ಯಕ್ರಮಗಳ ಏರ್ಪಾಡು ಆಯಿತು. ಆ ಎಲ್ಲ ಗದ್ದಲ ಏರ್ಪಡಿಸಿದವರು, ನಂದ ಮತ್ತು ಪ್ರಭು ದೇವರು—ಇಬ್ಬರೇ. ಅದೇ ಸಮಯವನ್ನು ಸಾಧಿಸಿ ಅಷ್ಟು ಅಲ್ಪ ಸಮಯದಲ್ಲಿ ಪ್ರಭುದೇವನು ನಾಲ್ಕು ಪರಿಷತ್ತುಗಳನ್ನು ಏರ್ಪಡಿಸಿದನು. ಅ. ಕ. ನವಜವಾನ ಪರಿಷತ್ತು, ಕಮ್ಯುನಿಸ್ಟು ಪರಿಷತ್ತು, ಜಾಡಮಾಲಿಗಳ ಪರಿಷತ್ತು, ದ. ಕ. ಹಿಂದೀ ಪರಿಷತ್ತು. ಒಂದರ ನಂತರ ಇನ್ನೊಂದು-ಎಲ್ಲವೂ, ಒಂದೇ ಮಂದಿರದಲ್ಲಿ ಏರ್ಪಾಟು ಆದುವು. ಆದುದರಿಂದಲೋ ಏನೋ, ಸಭೆ ಬದಲಾದರೂ ಪ್ರತಿನಿಧಿಗಳು ಬದಲಾಗುತ್ತಿರಲಿಲ್ಲ. ಪ್ರತಿ ಯೊಂದು ಸಭೆಯಲ್ಲಿಯೂ ಉದ್ದಾಮ ಭಾಷಣಗಳಾದುವು. ಶ್ರೀ. ನಂದ ರವರು ಜಾಡಮಾಲಿಗಳ ಪರಿಷತ್ತನ್ನು ಉದ್ಘಾಟಿಸಿದರು. ಅವರನ್ನೂ, ನವಜವಾನರನ್ನೂ ಹೆರಸಿದರು. ಲಲು ಬೆನರವರು ನಾಲ್ಕು ಸಭೆಗಳ ಲ್ಲಿಯೂ ತಮ್ಮ ಕೋಕಿಲ ವಾಣಿಯಿಂದ. ತರುಣ ಜಗತ್ತನ್ನೂ, ಶ್ರಮಗಾ ರರನ್ನೂ, ವಿದ್ಯಾಕಾಂಕ್ಷಿಗಳನ್ನೂ—ಹೆರಸಿದರು.

ಡಾಕ್ಟರವರಿಗೆ ಇದರಿಂದ ಸಾಧಿಸಿದ ಕಾರ್ಯಭಾಗ ಬಹಳ. ಆ ಒಂದು ಸೂತಿಕಾ ಗೃಹವು ಸ್ಥಾಪನೆಯಾದುದರಿಂದ, ಇನ್ನು ಮೂರು ಕಡೆ ಗಳಿಂದ ಅಂತಹ ಬೇಡಿಕೆಗಳು ಬಂದುವು. ಶ್ರೀಮತಿಯವರನ್ನು ತಮ್ಮಲ್ಲಿಗೆ ಕರೆದೊಯ್ಯುವುದಕ್ಕೆ ಮಂಗಳೂರಿನ ಯಾವತ್ತು ಶಾಲೆ, ಅನಾಥಾಲಯ, ವನಿತಾಲಯ ಮೊದಲಾದ ಸಂಸ್ಥೆಗಳ ಟ್ರಸ್ಟಿಗಳು—"ಐದು ನಿಮಿಷವಾ ದರೂ ಸರಿಯೇ, ಒಂದು ನಿಮಿಷವಾದರೂ ಸರಿಯೇ—ನೀವು ಲಲು ಬೆನ್‌ರವರನ್ನು ನಮ್ಮ ಸಂಸ್ಥೆಗೆ ಕರೆದು ತರಬೇಕು" ಎಂದು ಬೇಡಿದರು. ಅದಕ್ಕಾಗಿಯೇ, ಈ ವರೆಗೆ ಬೆಳಕು ಕಾಣದಿದ್ದ ಲೆಕ್ಕಪತ್ರ, ಅಭಿವೃದ್ಧಿಗಳ

ವರದಿಗಳು ಅಚ್ಚಾದುವು. ಶ್ರೀ ನಂದರೇ ಇಂಥ ಭಾರವಾದ ಕಾರ್ಯಕ್ರಮ ಗಳನ್ನು ನಡೆಯಿಸಿಕೊಡಬೇಕಾಯಿತು. ಆ ಮೂರು ದಿವಸಗಳ ಕೊನೆಗೆ ಡಾ| ನಂದರವರ ಕಾರನ್ನು ನೋಡಬೇಕಿತ್ತು. ಅವರ ಕುಣಿಯಲ್ಲಿ ಸಾಮಾನ್ಯ ಮೂವತ್ತು ನಲ್ವತ್ತು ಸಂಸ್ಥೆಗಳ ವರದಿಗಳು ತುಂಬಿದ್ದುವು. ಅದನ್ನು ಕಂಡವರು ಈ ಊರು ಪರೋಪಕಾರಿಗಳಿಗೆ--ಜನ್ಮಭೂಮಿ ಎಂದು ತಿಳಿಯಬೇಕು. ಅಂತು, ಲಲು ಬೆನ್‌ರವರ ಆಗಮನದಿಂದ ಮಂಗಳೂರಿನ ಉದಾರ ಚಕ್ರವರ್ತಿಗಳ ಆತ್ಮಗಳು ತಣಿದುವು. ತಮ್ಮ ಪರೋಪಕಾರ, ಸಾರ್ವಜನಿಕ ಸೇವೆಗಳನ್ನು ಕಂಡು, ಯೋಗ್ಯ ರೀತಿಯಿಂದ ಮೆಚ್ಚುವ ಜನಗಳಿಗಾಗಿ ಅವರು ಇಷ್ಟು ದಿನ ಹಾತೊರೆಯುತ್ತಿದ್ದರು. ಈ ಸಂದರ್ಭದಲ್ಲಿ-ಸಮೀಪರಾಗಿದ್ದರೂ, ತಮಗೆ ದೂರರಾಗಿದ್ದ ಡಾ| ನಂದರ ಸ್ನೇಹ ದೊರಕಿದ್ದಕ್ಕೂ ಸಂತೋಷವಾಯಿತು. ನಂದರವರಂತೂ ಪರೋಪಕಾರಿಗಳ ಸಾಮ್ರಾಟರೇ ಎಂದು ಮೆರೆಯಿಸಿಕೊಂಡರು. ಶ್ರೀಮತಿಯವರನ್ನು ಬೀಳ್ಕೊಡುವಾಗಲೂ, ಕಡಿಮೆ ಇಲ್ಲದ ವೈಭವವನ್ನು ಕಾಣಬಹುದಿತ್ತು. ಹೂವಿನ ಹಾರ, ಖಾದಿ ದಾಗ, ಇವೆಲ್ಲವು ಎಷ್ಟು ಬೇಕೋ ಅಷ್ಟು ಜಮೆಯಾಗಿದ್ದುವು. ಅವರು ಹೋದ ಮೇಲೆಯೂ, ಆ ಬಿಸಿ ತಣಿಯಲಿಲ್ಲ. ಬಹು ದಿನಗಳ ತನಕ ಶ್ರೀಮತಿಯವರ ವಿವಿಧ ಕಾರ್ಯಕ್ರಮಗಳ ಚಿತ್ರಗಳು ಪತ್ರಿಕೆಗಳಲ್ಲಿ ಬರುತ್ತಲೇ ಇದ್ದುವು. ಪ್ರತಿಯೊಂದು ಭಾವಚಿತ್ರದಲ್ಲೂ ನಾಡಿನ ಧುರೀಣರಾದ ಪ್ರಭುದೇವ, ಡಾ| ನಂದರವರ ರೂಪಗಳಂತೂ ಇದ್ದೇ ಇರುತ್ತಿದ್ದುವು.

ಈಗೀಗ ನಂದರವರಿಗೆ, ತಾವು ಮಂಗಳೂರಿನಲ್ಲಿ ವರ್ಷಕ್ಕೆ ಒಂದೆರಡಾವೃತ್ತಿಯಾದರೂ, ಅಂಥ ಒಂದೆರಡು ಕೆಲಸವನ್ನು ಮಾಡದೆ ಹೋದರೆ ವ್ಯರ್ಥವೆಂದು ಕಾಣುತ್ತಿದೆ. ಪ್ರಭುದೇವನ ಮನಸ್ಸಿನಲ್ಲಿ—ತನ್ನ ಪ್ರತಿ ಕೆಲಸವನ್ನೂ ಇದೇ ರೀತಿ ಜರುಗಿಸಬೇಕೆಂದು ಕಂಡಿತು. ಸ್ವಂತ ಮುದ್ರಣಾಲಯವನ್ನು ತೆರೆಯುವ ದಿನ, ಇದೇ ರೀತಿಯ ವೈಭವಶೀಲವಾದ ಸಂಪ್ರದಾಯವನ್ನು ಅನುಸರಿಸಬೇಕೆಂಬ ಬಯಕೆಯಾಯಿತು.

ಕಿರಿಪದವಿನಲ್ಲಿ, ಮಂಗಳೂರಿಗೆ ಬರಿಯ ಆರು ಮೈಲು ದೂರವಿರುವ ರಾಧಾಕೃಷ್ಣನಿಗೆ, ಇವುಗಳ ಸುದ್ದಿ ಬಾರದೆ ಇದ್ದೀತೇ? ಒಂದೆರಡು ಪತ್ರಿಕೆಗಳು ಅವನಿಗೂ ಬರುತ್ತಿವೆ. ಯಾವುದೊಂದು ಪತ್ರಿಕೆಯನ್ನು

ತೆರೆದು ನೋಡಿದರೂ ಡಾ| ಸುಂದರ ಒಂದು ಭಾಷಣವೋ, ಒಂದು ಚಿತ್ರ ವೋ! ಅವರ ಒಂದಾದರೂ ಸುದ್ದಿಯೊ ಇರದೆ ಇರುತ್ತಿರಲಿಲ್ಲ. ತನ್ನ ಹಳೆಯ ಗೆಳೆಯ ಮಂಗಳೂರಿಗೆ ಬಂದ ಕೆಲವು ವರ್ಷಗಳಲ್ಲಿಯೇ, ಇಷ್ಟು ಕೀರ್ತಿ ವಂತನಾದುದನ್ನು ಕಂಡು ಆತನಿಗೆ ತುಂಬ ಆಶ್ಚರ್ಯವೂ, ಸಂತೋಷವೂ ಉಂಟಾಯಿತು. ಸತ್ಯ ಎಷ್ಟೋ ಬಾರಿ 'ಅವರು ನಿಮ್ಮ ಸ್ನೇಹಿತರು ಎನ್ನು ತ್ತೀರಿ, ನಿಮಗೆ ಸಹಾಯ ಮಾಡಬಹುದು ಎಂದು ಹೇಳುತ್ತೀರಿ. ನೀವು ಇಲ್ಲಿ ಬರಿದೆ ಕೈ ಕಟ್ಟಿಕೊಂಡು ಕುಳಿತಿರುವ ಬದಲು, ಒಮ್ಮೆ ಅವರಲ್ಲಿಗೆ ಹೋಗಬಾರದೇ? ಅವರಿಗೆ ಹಣದ ಲಕ್ಷವೇ ಇದ್ದ ಹಾಗಿಲ್ಲ. ಬದಲು, ತಮ್ಮ ನಿಂದ ತಂದ ಹಣದಲ್ಲಿ ಪ್ರತಿಯೊಂದು ಕಾಸೂ ಮುಗಿದ ಮೇಲೆ, ಮುಂದೆ ಯೋಚನೆಮಾಡುವ ಹಾಗಿದೆ" ಎಂದಳು.

ರಾಧಾಕೃಷ್ಣ ನಕ್ಕನು. "ಅವರ ಬಳಿಗೆ ನಾನೇಕೆ ಭಿಕ್ಷೆಗೆ ಹೋಗು ತ್ತೇನೆ? ಅವರ ಯೋಗ್ಯತೆಯನ್ನು ಒಮ್ಮೆ ತೂಗಿ ನೋಡಿದ್ದು ಸಾಕು."

"ಏನು ಅಂಥ ತೂಕ ಮಾಡಿದ್ದು? ಆ ಮಗು ಸತ್ತು ಹೋದುದನ್ನು ನೆನೆದು, ಆದಕ್ಕಾಗಿ ಅವರ ಮೇಲೆ ನೀವು ಸಿಟ್ಟಾದಂತಿದೆ. ಸಾಯುವವ ರನ್ನು ಯಾರೂ ಬದುಕಿಸಲಾರರು. ಮೊದಲು ಆಯುಷ್ಯ ಗಟ್ಟಿ ಇರ ಬೇಕು; ಆಗ ಡಾಕ್ಟರರು, ಮತ್ತೊಬ್ಬರು ಪ್ರಯೋಜನ."

"ಸರಿಯೇ.... ಬಿಡು ಅವರ ಮಾತನ್ನು. ಅವರು ಹೃದಯ ಶೂನ್ಯರು ಎಂದು ನನ್ನ ಖಂಡಿತವಾದ ತೀರ್ಮಾನ. ಬೇಡ, ನನಗೆ ಅವರ ಸಹಾಯ. ಸಹಾಯ ಮಾಡುತ್ತೇನೆ—ಎಂದು ಅಷ್ಟೆಲ್ಲ ಹೇಳಿದಾತ, ನಾಲ್ಕಾರು ಬಾರಿ ಭೇಟಿಯಾದಾಗಲೂ, ಒಂದಾವೃತ್ತಿಯಾದರೂ 'ಏನು ಮಾಡುತ್ತಿದ್ದೀ ಎಂದು ವಿಚಾರಿಸಿದ್ದು ಉಂಟೇ? ಅವರ ಮನಸ್ಸಿನಲ್ಲಿ ತಾನು ಬಹಳ ದೊಡ್ಡ ವ್ಯಕ್ತಿ ಎಂಬ ಹೆಮ್ಮೆ ಅಂಟಿ ಹೋಗಿದೆ. ತನ್ನ ಮುಂದೆ 'ಜೀ' ಹಾಕಿ ಮಾತನಾಡಿದರೆ ಆಗಬಹುದು ಎಂದಿರಬೇಕು. ಎಳೆತನದಿಂದ ಜತೆಯೂ ಸೇರಿ ಆಡಿದ್ದು, ಓಡಿದ್ದು ಎಲ್ಲವೂ ಮರವೆಯಾಗಿದೆ ಅವರಿಗೆ."

"ಆಗಲಿ ಅದರಿಂದ ನನಗೇನಂತೆ; ನಿಮ್ಮ ಹಟವೇ ನಿಮಗೆ. ಮನೆ ಯಿಂದ, ಸಾಲ ತಂದುದನ್ನು ಮುಟ್ಟಿಸಬೇಡವೇ? ಇರುವ ಹಣವಾದರೂ ಎಷ್ಟು ದಿನ ಬಂದೀತು?"

"ಅದೇನು ಒಂದು ನೂರು ರೂಪಾಯಿಗಳೂ ಇರಲಾರದು. ಖರ್ಚು ಮಾಡಹೋದರೆ ಇನ್ನು ಒಂದು ವರ್ಷದಲ್ಲೇ ಖರ್ಚಾದೀತು. ಈ ಚಾವಣಿ, ಈ ಮನೆ, ಜಾನುವಾರು, ಯಾವುದೊಂದಕ್ಕೂ ಯಾರಿಂದ ಸಹಾಯವೂ ಸಿಗಲಿಲ್ಲ. ಅಂಥ ದಯಾನಂದರಾಯರೇ, ಬರಿಯ ಬಾಯಿ ಮಾತಿನಿಂದಲೇ ಎಲ್ಲ ಮುಗಿಸಿದರು. ಅವರ ತಪ್ಪೇನಿಲ್ಲ. ಅವರಲ್ಲಿ ಇದ್ದರೆ ಕೊಡುವವರೇ, ಈಗ ಅವರೂ ಊರನ್ನು ಬಿಟ್ಟರು. ನೆರೆ ಬಂದಾಗ ಇದ್ದ ಸ್ವಲ್ಪ ಹಣ ವ್ಯಯವಾಯಿತು. ಕೈಯಲ್ಲಿ ಕಾಸಿರುವಾಗ—ಬಡವರು ಒಂದು ರೂಪಾಯಿ ಕೊಡಿ, ಅರಿವೆ ಕೊಡಿ ಎಂದರೆ, 'ಫಂಡು ಕೂಡಿ ಬರುತ್ತದೆ; ಆ ಮೇಲೆ ಕೊಡುವ' ಅನ್ನುವುದಕ್ಕಾಗುತ್ತದೆಯೇ? ಹಾಗೆಯೇ ಇದ್ದ ರೂಪಾಯಿಗಳೆಲ್ಲವು ಕರಗುತ್ತ ಬಂದಾಯಿತು. ಈಗೆಲ್ಲಾ ಮುಗಿದು ಬಂದಿದೆ ನಿಜ. ಮನೆಯ ಹಣವಲ್ಲವೆ? ಬೇರೆಯವರ ಸಾಲವಾದರೆ ಅದೊಂದು ಹೆದರಿಕೆ."

ಈ ಬಗೆಯಲ್ಲಿ ಗಂಡಹೆಂಡಿರು ಸ್ವಲ್ಪಕಾಲವಾದರೂ ಸಂಸ್ಥೆಯನ್ನು ಕುರಿತು ಚರ್ಚಿಸದೆ ಬಹಳ ಸಮಯವಾಗಿತ್ತು. ಪತಿಯು ತುಂಬ ಸಪ್ಪೆಯಾಗಿ ಕುಳಿತಿದ್ದರೆ "ಯಾಕೆ ಇಷ್ಟು ಸಪ್ಪಗಿದ್ದೀರಿ?" ಎಂದು ಅವಳು ಬೆನ್ನು ಸವರುತ್ತಾ ಕುಳಿತಿರುತ್ತಾಳೆ.

"ನನ್ನ ತಲೆ ಕುಂಬಾದಂತೆ, ನಿನ್ನದೂ ಆಗಬೇಕೇನು" ಎಂದು ಆತ ಮುಗಿಸಿ ಬಿಡುತ್ತಾನೆ. ಆತನ ಮನಸ್ಸೋ? ಆ ನಿರ್ಗತಿಕ ಶಿಶುವಿನ ಮರಣದಿಂದ ಬಹಳ ಕಲ್ಲೋಲವಾಗಿ ಬಿಟ್ಟಿದೆ. ಅದರ ಅಂತ್ಯಕ್ರಿಯೆ ಮುಗಿಸಿ, ಒಂದು ವಾರದ ತನಕ, ಆತ ಒಟ್ಟಿಗೆ ಹತ್ತು ಮಾತುಗಳನ್ನೂ ಆಡಿರಲಿಲ್ಲ. "ಅಣ್ಣಾ, ಹಾಗೆಲ್ಲ ನೀನು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಅದರ ನೀರಿನ ಋಣ ಮುಗಿಯಿತು. ಅದು ಹೋಯಿತು" ಎಂದು ಮನೆಗೆ ಬಂದ ಅನಂತರಾಮು ಹೇಳಿ, ಹೇಳಿ ದಣಿದನು.

ಆದರೂ ಆತ "ನೋಡು ಅನಂತ, ಅದು ಇಲ್ಲಿಗೆ ಬಂದಿತು, ಇದ್ದಿತು, ಸತ್ತಿತು. ನಮಗೆ ಅದಕ್ಕೊಂದು ಚಂದವಾದ ಹೆಸರನ್ನಿಡುವ ಬುದ್ಧಿ ಬರಬಾರದಿತ್ತೇ? ಅದು, ಇದು—ಎನ್ನುತ್ತಲೇ ಇರಬೇಕಿತ್ತೇ ನಾವು? ಯಾಕೆ ಹೇಳು?."

"ಹೆಸರಿಡದೆ ಹೋದರೆ ಏನಂತೆ? ಎಷ್ಟೋ ಮನೆಗಳಲ್ಲಿ ಮಕ್ಕಳಿಗೆ ಒಂದು ವರ್ಷ ಕಳೆಯುವ ತನಕವೂ ಹೆಸರನ್ನು ಇಡುವುದಿಲ್ಲ."

"ಅದು ಬೇರೆಯೇ ಕಾರಣಕ್ಕೆ. ಮೊದಲಿನ ಮಕ್ಕಳು ಸತ್ತು ಹೋದರೆ ಹೆಸರು ಇರಿಸಲು ಅಂಜುತ್ತಾರೆ. ನಾನೇಕೆ ಇರಿಸಲಿಲ್ಲ? ಅದು ನಮ್ಮದೇ ಮಗುವಾಗಿದ್ದರೆ ಹೆಸರನ್ನಿಡದೆ ಇರುತ್ತಿದ್ದೇವೇ? ನನ್ನ ರಕ್ತಕ್ಕೂ, ಆ ಹೊಲೆತನದ ಅಂಜಿಕೆಯು ಬಂದಂತಿದೆ. ಅದನ್ನು ಕೈಯಿಂದ ಎತ್ತುತ್ತಿದ್ದರೂ, ನನ್ನ ನರಗಳಿಗೆ ಹುಟ್ಟುವಾಗಲೇ ಬಂದು ಅಂಟಿದ್ದ ಅಸಹ್ಯ, ನನ್ನನ್ನು ಬಿಡಲಿಲ್ಲ. ಅದನ್ನೆಲ್ಲ ನೆನೆದರೆ, ನನಗೆ ಯಾವುದಾದರೂ ಪ್ರಾಯಶ್ಚಿತ್ತ ಆಗಬೇಕೆಂದು ಅನಿಸುತ್ತದೆ...........

"ಅದು ಹೀಗೆ ಹೊಲೆಯರ ಇಲ್ಲವೆ ಅನಾಥ ಶಿಶುವಾಗಿರುವ ಬದಲು ಉತ್ತಮರ ಮಗುವಾಗಿದ್ದರೆ, ಹಣಕಾಸು ಇದ್ದವರ ಮಗುವಾಗಿದ್ದರೆ— ಡಾ! ನಂದರು ಇಲ್ಲಿಯ ತನಕ ಬರುತ್ತಿರಲಿಲ್ಲವೇ? ಕಾರು ಪಂಕ್ಚರು ಆಗಿದೆ ಅನ್ನುತ್ತಿದ್ದರೇ? ಅಲ್ಲಿಗೆ ಅದನ್ನು ಒಯ್ದ ಮೇಲೆಯೂ, ಕಾಯಿಲೆ ವಿಷಯ ಒಂದು ಸುದ್ದಿಯನ್ನೂ ಹೇಳದೆ, ಉದಾಸೀನತೆಯಿಂದ ಕಾಣುತ್ತಿದ್ದರೇ? ನನ್ನ ಒತ್ತಾಯಕ್ಕೆಂಬ ಹಾಗೆ ಅದನ್ನು ನೋಡಿದರು."

"ಅದೆಲ್ಲ ನಿಜವೆಂದೇ ತಿಳಿಯುವ. ಶ್ರೀಮಂತರ ಮನೆಯ ಕೂಸಾಗಿದ್ದರೆ ಅದು ಸಾಯುತ್ತಿರಲಿಲ್ಲ ಅನ್ನುತ್ತೀಯಾ? ಸತ್ತಿತು, ಮುಗಿಯಿತು. ಈಗ ಯಾರ ಮೇಲೆ ಸಿಟ್ಟಾಗುತ್ತೀ ನೀನು? ಹೆಸರು ಇರಿಸ ಬಹುದಿತ್ತು, ಇರಿಸಲಿಲ್ಲ. ಅದೇನು ಮಹಾ! ಅದಕ್ಕೆ ಹೆಸರು ಇಟ್ಟಿದ್ದರೆ ತಿಳಿಯುವ ಪ್ರಾಯವೇ? ಹೆಸರು ಹೇಳಿ ಕರೆದರೆ ಸಂತೋಷವಾಗುವ ಪ್ರಾಯವೇ?"

ಏನು ಮಾಡಿದರೇನು? ರಾಧಾಕೃಷ್ಣನ ಹಲುಬಿಗೆ ಕೊನೆಯೇ ಇಲ್ಲ. ಈಗೀಗ ಆತ ಅರೆಮನಸ್ಸಿನಿಂದಾದರೂ, ಶ್ಯಾಮನಿಗೆ ಪಾಠ ಹೇಳುತ್ತಿರುತ್ತಾನೆ. ತನ್ನ ಜತೆಯಲ್ಲಿ ಆತ ಆ ಕೂಸಿಗೆ ಕೊನೆಯ ತನಕ ಸೇವೆ ಸಲ್ಲಿಸಿದ ಮೇಲಂತು, ಅಪಾರ ಮಮತೆ ಉಂಟಾಗಿದೆ. ಬಹು ದಿನ ಆತ, ತನ್ನ ಆಶ್ರಮದ ಭವಿಷ್ಯವನ್ನು ಯೋಚಿಸುವ ಚಿಂತೆಯಲ್ಲಿರಲಿಲ್ಲ. ಸುಮ್ಮನಿದ್ದನು. ಅನಂತರಾಮನನ್ನು, ಹದಿನೈದು ದಿವಸಗಳಕಾಲ ಮನೆಯಲ್ಲಿರಿಸಿಕೊಂಡು, ಕೊನೆಗೆ ಮಂಗಳೂರಿಗೆ ಕರೆದುಕೊಂಡು ಹೋದನು. ಅಲ್ಲಿಂದ ಊರಿಗೆ ಕಳುಹಿಸಿಕೊಟ್ಟು, ತಾನು ಹಿಂದಕ್ಕೆ ಬರುವಾಗ ಕೆಲವು ಅರೆ ಪರಿಚಿತರನ್ನು ಹುಡುಕಿಕೊಂಡು ಹೋಗಿ, ಮೂರು ತಿಂಗಳಿಗೆ ಸಾಕಾಗುವಷ್ಟು ಓದಿನ ಮೇವನ್ನು ತಂದನು. ದಿನ ಬೆಳಗಾದರೆ ಓದುತ್ತಿರುತ್ತಾನೆ. ಯಾವುದೆಂದಿಲ್ಲ.

ಒಂದು ದಿನ, ಹಾಗೆ ಓದಿನಲ್ಲಿ ತಲ್ಲೀನನಾದಾಗ ಸತ್ಯ, ಮರಕಾಲನ ಪರವಾದ ವಕಾಲತ್ತನ್ನು ವಹಿಸಿಕೊಂಡು ಬಂದಳು. "ವಿಷು ಕಳೆಯಿತು. ಮುಂದಿನ ವರ್ಷ ತನಗೆ ಕೆಲವಾದರೂ ಗದ್ದೆಗಳನ್ನು ಬಿಟ್ಟುಕೊಟ್ಟರೆ ಆಗ ಬಹುದಿತ್ತು—ಎಂದು ಮರಕಾಲ ಕೇಳುತ್ತಿದ್ದಾನೆ" ಎಂದಳು ಅವಳು. ಮರಕಾಲನನ್ನು ಕಂಡರೂ ಮಾತನಾಡಿಸುವ ಹುಮ್ಮಸ ಇರಲಿಲ್ಲ ಅವ ನಿಗೆ. ಆ ದಿನ—ಆ ಬಡ ಕೂಸನ್ನು ಆಸ್ಪತ್ರೆಗೆ ಒಯ್ಯಲು ನಿರಾಕರಿಸಿದ ಅವನಲ್ಲಿ ಉಂಟಾದ ಸಿಟ್ಟು ಇನ್ನೂ ಹೋಗಿರಲಿಲ್ಲ. ಅದರಿಂದ "ಈ ಕಾಲ ದಲ್ಲಿ ನಾನು ಯಾರೊಬ್ಬರಿಗೂ ಸಹಾಯ ಮಾಡುವ ಹಾಗಿಲ್ಲ" ಎಂದು ಮಾತು ಮುಗಿಯಿಸಿದನು.

ಇನ್ನೊಮ್ಮೆ ಸತ್ಯ ಎಂದಳು—"ಅವನಿಗೆ ಖಂಡಿತ ಹೇಳಬೇಡವೇ? ಅವನೇ ಇಲ್ಲಿಯ ಮೂಲದ ಒಕ್ಕಲಂತೆ. ನಾವು ಬಂದುದರಿಂದ ಅವನಿಗೆ ತುಂಬ ಕಷ್ಟವಾಗಿದೆಯಂತೆ. ಭೂಮಿಯನ್ನು ನಮ್ಮಿಂದಲೇ ಒಳ ಗೇಣಿಗೆ ಪಡೆಯುವ ಆಸೆ ಅವನದ್ದು. ಅವನ ಹೆಂಡತಿ ದಿನಕ್ಕೆರಡು ಬಾರಿ ಬಂದು ನನ್ನನ್ನು ಪೀಡಿಸುತ್ತಿದ್ದಾಳೆ. "ಎರಡು ಮಕ್ಕಳಿದ್ದಾವೆ, ನಾಲ್ಕು ಹೊಟ್ಟೆ ಗಳನ್ನು ಸಾಕಬೇಡವೇ, ಅನ್ನುತ್ತಿದ್ದಾಳೆ."

"ಸತ್ಯ, ಅವರ ಮನಸ್ಸಿಗೆ-ನಾವು ಕೈ ಬೀಸಿ ಕುಳಿತಿರಬಲ್ಲ ಶ್ರೀಮಂ ತರು-ಎಂದಿರಬೇಕು. ನೆರೆಯ ಸಮಯ ನಾಲ್ಕು ಜನಕ್ಕೆ ಅನ್ನ ಹಾಕಿದ್ದು, ಆಚೀಚೆ ಓಡಾಡಿ ನನ್ನದೂ ಪರರದೂ ಆದ ಹಣದಿಂದ ಜನಕ್ಕೆ ಸಹಾಯ ಕೊಟ್ಟುದನ್ನು ಕಂಡು, 'ಈ ಅಯ್ಯನಿಗೆ ಸ್ವಂತ ಬೇಸಾಯ ಯಾವುದಕ್ಕೆ?' ಎಂದು ಅವನಿಗೆ ಅನಿಸುತ್ತಿರಬೇಕು.

"ಈ ಜಾಗವನ್ನು ಏನಾದರೂ ಮಾಡಿ ಸುಧಾರಿಸಬೇಕು. ಮನೆ ಮತ್ತು ಶಾಲೆಯ ಖರ್ಚಿಗೆ ಸ್ವಲ್ಪವಾದರೂ ಇಲ್ಲಿಂದ ಉತ್ಪನ್ನ ಹೊರಡಿಸ ಬೇಕೆಂದು ಬಂದವನು ನಾನು. ಆ ಆಸೆ ಇನ್ನೂ ಹೋಗಿಲ್ಲ. ಇನ್ನೂ ಇಲ್ಲಿಯೇ ಇದ್ದೇವೆ ಅಲ್ಲವೆ? ಕೊಂಡ ಜಾನುವಾರುಗಳಿವೆ. ಮನೆಯಲ್ಲಿ ಊಟ ಮಾಡಲು ಮೂರು ಮಂದಿಯಾದರೂ ಉಳಿದಿದ್ದೇವೆ."

"ಹಾಗಾದರೆ 'ಆಗದು' ಎಂದು ಹೇಳುವ. ಒಳಗೇಣಿಗೆ ಸ್ವಲ್ಪವಾದರೂ ಕೊಡಬಹುದು ಎಂದು ತೋರಿತು. ಇರುವ ಐದು ಮುಡಿಗಳನ್ನು ನಾವೇ ಸಾಗುವಳಿ ಮಾಡಲು ಬಂದೀತೇ? ಕಳೆದ ವರ್ಷ ನಿಮ್ಮ ಹಾರಾಟದಲ್ಲಿ

ಒಂದೆರಡು ಹುಡುಗರು ಸೇರಿದ್ದರು. ಈಗ ಇದ್ದದ್ದು ಶಾಮನೊಬ್ಬ. ನೀವು ಇಬ್ಬರೇ ಎಷ್ಟೆಂದು ದಣಿಯುತ್ತೀರಿ?"

"ಅಲ್ಲದೆ ಸತ್ಯ—ದಯಾನಂದ ರಾಯರಿಂದ ನಾನು ಅವನ ಕತೆಯನ್ನೆಲ್ಲಾ ಕೇಳಿದ್ದೇನೆ. ಅವನಿಗೆ ಇಷ್ಟೆಲ್ಲ ವರ್ಷವೂ, ಸಮನಾಗಿ ಗೇಣಿಯನ್ನು ಕೊಟ್ಟೇ ಗೊತ್ತಿಲ್ಲವಂತೆ. ಅತ್ತ ಅವನಿಂದಲೂ ಗೇಣಿ ಬಾರದೆ, ಇತ್ತ ನಾವೂ ಬಿತ್ತನೆ ಮಾಡದೆ ಹೋದರೆ ಹೇಗೆ? ಇದು ಈಗ ಸಾಹುಕಾರ ರಂಗಪ್ಪಯ್ಯನವರ ಆಸ್ತಿಯಲ್ಲವೇ. ಅವರಿಗೆ ನಾವು ತುಂಬುವ ಗೇಣಿಯನ್ನು ತುಂಬಲೇ ಬೇಕು. ನೋಡುವ, ಎರಡು ವರ್ಷ ಕಾಲ ಇದ್ದು. ಇಲ್ಲಿದ್ದು ಏನೂ ಸಾಧನೆ ಆಗದೆ ಹೋದರೆ ಆಸ್ತಿಯನ್ನು ಅವರಿಗೇ ಬಿಟ್ಟು ಬಿಡುವ. ನಡುವೆ ಒಳಗೇಣಿಯ ವ್ಯಾಪಾರ ಬೇಡ" ಎಂದು ಬಿಟ್ಟನು

"ಹೌದು, ಹೌದು— ಗೇಣಿ ತಿಂದು ಹಾಕಿದರೆ, ನಾವು ಬೆಳೆದುದ್ದೂ, ಅದಕ್ಕೇನೆ ಹೋದೀತು. ನಮ್ಮ ಪಾಡಿಗೆ ನಾವಿರುವ. ಹೊನ್ನಕ್ಕ ಇನ್ನೊಮ್ಮೆ ಬಂದು ಕೇಳಿದರೆ ಹಾಗೆಯೇ ಅನ್ನುತ್ತೇನೆ" ಎಂದಳು.

ಆ ಸುದ್ದಿಯು ಮರಕಾಲನಿಗೆ ಮುಟ್ಟಿತು. ಮರಕಾಲ ವೀರಾವೇಶಗೊಳ್ಳುವುದಕ್ಕೆ ಬಹಳ ಸಮಯ ಹಿಡಿಯಲಿಲ್ಲ. ಆ ಮುಸ್ಸಂಜೆಯೇ ಅವನು ಕಣ್ಣು ಕೆಂಪುಮಾಡಿಕೊಂಡು ಬಂದನು. "ನನ್ನ ಭೂಮಿಯಲ್ಲಿ, ನೀವು ಬಂದು ಕುಳಿತು, ನನ್ನನ್ನು ಓಡಿಸುತ್ತೀರಂತೇನು? ನೋಡುತ್ತೇನೆ. ನಾನು ಈ ಜಾಗದಿಂದ ಅಲುಗಾಡುವವನಲ್ಲ. ಕಳೆದ ವರ್ಷದ ಹಾಗೆ ನಿಮ್ಮ ಆಳಾಗಿ ಬಿಟ್ಟಿ ಬೇಗಾರು ಮಾಡುವವನೂ ಅಲ್ಲ. ನೀವು ಬೇರೆಯವರನ್ನು ಕರೆಯಿಸಿ, ಈ ಭೂಮಿಯ ಬಿತ್ತನೆಮಾಡುವುದನ್ನು ನೋಡಿಯೇ ನೋಡುತ್ತೇನೆ" ಎಂದು ಬೆದರಿಸಿ ಹೋದನು. ಸತ್ಯಳಿಗೆ, ಕುಡಿದು ಮತ್ತನಾಗಿ ಬಂದ ಮರಕಾಲನ ಮಾತನ್ನು ಕೇಳಿ ಬೆದರಿಕೆಯಾಯಿತು. ಅವಳು ತವರಿನಿಂದ ಬಂದು ನಾಲ್ಕು ತಿಂಗಳಾದುವು. ಆ ದಿನದಿಂದಲೂ ಹೊನ್ನಕ್ಕ, ತಮ್ಮ ಮನೆಯ ಮುಷ್ಟಿಯುದ್ಧಗಳನ್ನು ಕುರಿತು ಹೇಳಿಯೇ ಹೇಳುತ್ತಿದ್ದಳು. ನಮ್ಮ ಮರಕಾಲನು ಬಾಗಿದರೆ ಬಿಲ್ಲು, ಬಿಟ್ಟರೆ ಬಾಣ-ಎಂಬಂಥ ಜಾತಿಯವ. ನಾಳೆ ತಮ್ಮ ಬೇಸಾಯಕ್ಕೆ ಬೈಲಿನವರು ಯಾರೂ ಬಾರದಂತೆ ಬೆದರಿಸಿದರೆ ಏನು ಗತಿ? ಪೈರು ಹಣ್ಣಾದಾಗ ಸಿಟ್ಟಿನಿಂದ, ಸುಟ್ಟುಬಿಟ್ಟರೆ ಏನು ಮಾಡಬೇಕು?—ಎಂಬ ಅಂಜಿಕೆಯನ್ನು ತಾಳಿದಳು. ಆ ಅಂಜಿಕೆ

ಯನ್ನು ತೋರಿಸುತ್ತಲೇ ರಾಧಾಕೃಷ್ಣ ನಕ್ಕನು. "ಅಂಥ ಕಾಲಕ್ಕೆ ಅಲ್ಲವೇ? ಮರಕಾಲನ ಎದುರಿಗೆ ನಾನೊಬ್ಬನು ಸಾಕು. ಅವನದೇ ರಾಜ್ಯ ವಾಗಿಲ್ಲ ಇದು. ಕೆಳಬೈಲಿನಲ್ಲಿ ನಾಲ್ಕಾರು ಮಂದಿಯ ಗುರುತಾದರೂ ನನಗಿದೆ" ಎಂದುಬಿಟ್ಟ.

ಸತ್ಯ ತನ್ನ ಚಾಪಲ್ಯವನ್ನೂ ತೀರಿಸುವ ಸಲುವಾಗಿ ಮರಕಾಲನ ಹೆಂಡತಿಯನ್ನು ಒಲಿಸುವ ಯೋಚನೆಮಾಡಿದಳು. ಅವಳಲ್ಲಿ ತಮ್ಮ ಕಷ್ಟ, ಸುಖಗಳನ್ನು ಹೇಳಿಕೊಂಡಳು. "ನೀವು ತಿಳಿಯುವ ಹಾಗೆ, ನಮ್ಮಲ್ಲಿ ಕೊಪ್ಪರಿಗೆ ಹಣ ತುಂಬಿಸಿ ಇಟ್ಟಿಲ್ಲ. ನೀವು ಆಸೆಯಿಂದ ಕುಳಿತಿರಬೇಡಿ. ತಡವಾದರೆ ತೊಂದರೆ ನಿಮಗೂ ಇದೆ. ಬೇರೆ ಭೂಮಿಯನ್ನಾದರೂ ಹುಡುಕಿ ಕೊಳ್ಳಿರಿ" ಎಂದು ಉಪದೇಶಿಸಿದಳು. ಇತ್ತ—ಮರಕಾಲನು ತಮ್ಮಲ್ಲಿ ಜೀತಮಾಡದೆ ಹೋದರೆ, ತಾವು ಚಾಕರಿಗೆ ಬದಲು ಆಳನ್ನು ಕರೆದು ಕೊಳ್ಳಬೇಕು. ಅವನಿಗೆ ಇನ್ನೊಂದು ಬಿಡಾರದ ಮನೆಯನ್ನು ಒದಗಿಸ ಬೇಕು. ಇದ್ದಮನೆಯಲ್ಲಿ, ತಮ್ಮ ಹಗೆಗೆ ಅವಕಾಶ ಕೊಟ್ಟು, ಬರುವ ಆಳಿಗೆ, ಬೇರೆ ಮನೆ ಕಟ್ಟಿಸಿಕೊಡುವ ಕೆಲಸ ಬಂದೀತೇ-ಎಂದು ರಾಧಾ ಕೃಷ್ಣ ಯೋಚಿಸಿದನು.

ಹೀಗೆ ಸ್ಥಿತಿ, ನಾಳಿನ ಧ್ಯೇಯಕ್ಕೆ ಅವಕಾಶವಾಗುವ ಬದಲು, ಕೃಷಿ ಊಟಗಳ ಪ್ರಶ್ನೆಗಳು ಮುಂದಾದುವು. ಜಮೀನು ಸಾಗುವಳಿಯಾಗಲೇ ಬೇಕು. ಈ ವರ್ಷದಲ್ಲಿ ಅಷ್ಟಾದರೂ ಕೆಲಸವನ್ನು ತಾನು ಮಾಡದಿದ್ದರೆ ಹೇಗೆ? ಮುಂದೆ ಕಾಣಿಸುತ್ತಿರುವುದು ಮಳೆಗಾಲ. ಅದರೊಳಗೇನೋ ಮರಕಾಲನನ್ನು ಒಲಿಸಿ ಅವನು ಸಪತ್ನಿಕನಾಗಿ, ತಮ್ಮಲ್ಲಿ ದುಡಿಯುವಂತೆ ಮಾಡಬೇಕು, ಇಲ್ಲವಾದರೆ ಬದಲಿ ಜನವನ್ನು ಮಾಡಿಕೊಂಡು, ಆತನನ್ನು ಓಡಿಸಬೇಕು-ಎಂಬ ನಿರ್ಣಯಕ್ಕೆ ಬಂದನು. ಇತ್ತ ಮರಕಾಲನು, ಮಾಸ್ತರರ ನಕಾರಕ್ಕೆ ರೇಗಿದ್ದರೂ, ಹೆಂಡತಿಯ ಬಲವಂತಕ್ಕೆ ಇತರ ಭೂಮಾಲಿಕರ ಕಡೆಗೆ ಓಡಬೇಕಾಯಿತು. ಆತನು ಗಂಟು ಮುಳುಗಿಸುವನೆಂಬ ಪ್ರತೀತಿ ಅನಾದಿಯಿಂದ ಆ ಬೈಲಿನಲ್ಲಿ ಕೇಳಿ ಬಂದಿದ್ದುದರಿಂದ, ಅವನಿಗೆ ಅಲ್ಲಿ ತುಣುಕು ಜಾಗವೂ ಗೇಣಿಗೆ ಸಿಗುವಂತಿರಲಿಲ್ಲ. ಅಲ್ಲಿಂದ ಸುಮಾರು ಆರೇಳು ಮೈಲುದೂರ ಹೋಗಿ, ಬೇರೆಯಾವುದಾದರೂ ಹಳ್ಳಿಯಲ್ಲಿ ನೆಲೆಸಬೇಕು. ನಿತ್ಯ-ಸೇಂದಿ ಅಂಗಡಿಗೆ, ಹೆರದಾರಿ ದೂರ ನಡೆಯಬೇಕಾದ

ಯಾವ ಗ್ರಾಮವನ್ನೂ ಅವನು ಆರಿಸುವವನಲ್ಲ. ಅಂಗಡಿಯ ಸಮೀಪ ಯಾವ ಗ್ರಾಮದಲ್ಲೂ, ಅವನಿಗೆ ಭೂಮಿ ಸಿಗುವಂತಿರಲಿಲ್ಲ.

"ಛೀ—ಅವೆಲ್ಲಾ ಒಂದು ಊರುಗಳೇ" ಎಂದು ಕುಳಿತಲ್ಲಿಂದಲೇ ಹೆಂಡತಿಯ ಮಾತನ್ನು ಹಾರಿಸಿಬಿಡುತ್ತಿದ್ದ. ಕೊನೆಗೆ ಆ ಊರಲ್ಲಿಯೇ, ಹಾಳುಬಿದ್ದ ಒಂದು ಮನೆಯನ್ನು ಸರಿಮಾಡಿಕೊಂಡು ಇರುವ ಏರ್ಪಾಡಾಯಿತು. ಮನೆಯ ಒಡೆಯರಿಗೆ, ಗುಡಿ, ದುರಸ್ತು ಆಗುವ ಆವಶ್ಯಕತೆ ಮೊದಲು ಇತ್ತು. ಅವರು "ನೀನು ಒಂದು ವರ್ಷ ಹೀಗೆಯೇ, ಕೂಲಿ ನಾಲಿ ಮಾಡಿಕೊಂಡಿರು. ಮುಂದಿನ ವರ್ಷ ಭೂಮಿ ಕೊಡುವ" ಎಂದುದರಿಂದ, ಆ ಆಸೆಯ ಮಾತಿಗೆ ತೂಗಿಕೊಂಡು, ಕಿರಿಪದವಿನ ಮನೆಯನ್ನು ಬಿಟ್ಟು ಬಿಟ್ಟನು. ಹೊರಡುವಾಗ ಹೇಳಲೂ ಇಲ್ಲ. ಮನೆಯ ಕದ, ಕಿಟಕಿಗಳನ್ನು ಕಿತ್ತು, ರಾತಾರಾತ್ರಿಯೇ ಸಾಗಿಸಿಬಿಟ್ಟನು. ರಾಧಾಕೃಷ್ಣ, ಅದು ತಿಳಿದು ಬರುತ್ತಲೇ ಅವನಲ್ಲಿಗೆ ಹೋಗಿ ವಿಚಾರಿಸಿದರೆ "ಹತ್ತು ವರ್ಷಗಳ ಹಿಂದೆ ರಟ್ಟೆ ಬೆವರು ಸುರಿಸಿ ಅದನ್ನು ಕಟ್ಟಿದವನೇ ನಾನು. ಅದರ ಮಡಲು, ಮಾಡಿನ ಹುಲ್ಲನ್ನು ಸಹ ಬಿಡದಂತೆ ಸಾಗಿಸುತ್ತೇನೆ. ಗಟ್ಟಿ ಮಾತನಾಡಿದರೆ, ಕಿಚ್ಚುಕೊಟ್ಟು ಬೂದಿಮಾಡಿ, ನಾನು ಆ ಬೂದಿಯನ್ನಾದರೂ ಒಯ್ಯುತ್ತೇನೆ" ಎಂದು ಉಡಾಪಿಮಾತಾಡಿದನು.

ಅಂಥ ಮತ್ತನನ್ನು ಮಾತನಾಡಿಸುವುದರಲ್ಲಿ ಸುಖವಿಲ್ಲವೆಂದು ರಾಧಾಕೃಷ್ಣನು ಸುಮ್ಮನಾದನು. ಆದರೆ ಬರಿದೆ ಕುಳಿತಿರಲು ಆಗುತ್ತದೆಯೇ? ಅದಷ್ಟು ತೀವ್ರ ಬೇರೊಬ್ಬ ಕೆಲಸದ ಆಳನ್ನು ಆತ ಹುಡುಕಬೇಕು. ಅದಕ್ಕೆಂದು ಗ್ರಾಮ ಸಂಚಾರಕ್ಕೆ ಹೊರಟನು. ಅವನಿಗೆ ತುಂಬ ಪರಿಚಯವಾದದ್ದೆಂದರೆ, ಸುಬ್ಬ ಪೂಜಾರಿಯ ಮನೆ. ಅವನ ಮಗ ರಾಮಣ್ಣನಿಗೆ ಈತನಲ್ಲಿ ಹೆಚ್ಚಿನ ಅಭಿಮಾನ. ರಾಧಾಕೃಷ್ಣನ ಉದಾರ ಬುದ್ಧಿಯಿಂದ ತನ್ನ ತಂದೆಯ ಪ್ರಾಣ ಉಳಿದದ್ದು—ಎಂದು ಆತ ನಂಬಿದ್ದನು. ತಂದೆ ಮಕ್ಕಳಿಬ್ಬರೂ ಸೇರಿ, ಹೊಸ ಮನೆಯನ್ನು ಕಟ್ಟುವ ಕೆಲಸದಲ್ಲಿದ್ದಾಗಲೇ ಈತ ಅಲ್ಲಿಗೆ ಹೋದ. ದೂರದಿಂದಲೇ ಅವರ ಬರವನ್ನು ಕಂಡ ರಾಮಣ್ಣ "ಅಪ್ಪಾ, ಮಾಸ್ತರರು ಬರುವ ಹಾಗಿದೆ, ನಮ್ಮ ಮನೆಗೆ. ಬಹಳ ದಿವಸವಾಯಿತು ಅವರನ್ನು ಕಾಣದೆ. ಅವರೆಂದರೆ ಒಂದು ನಿಜವಾದ ಜನ. ಆ ದಿನ ಅವರು ಆ ಹೊಲೆಯರ ಮಗುವಿಗಾಗಿ ಪಟ್ಟಪಚೀತಿ ಎಷ್ಟುಗೊತ್ತೇ?

ಕೊನೆಗೆ ಅದು ಮಾತ್ರ ಸತ್ತು ಹೋಯಿತು. ಆದರೂ ಅಂಥ ಬ್ರಾಹ್ಮಣರನ್ನು ಈ ವರೆಗೆ ನಾನು ಕಂಡಿಲ್ಲ" ಎಂದು ಹೇಳುತ್ತಿರುವಾಗಲೇ,ರಾಧಾಕೃಷ್ಣ ಅಲ್ಲಿಗೆ ಕಾಲಿರಿಸಿದನು. "ಹೋ, ಮನೆಯ ಕೆಲಸ ನಡೆಯುತ್ತಾ ಇದೆಯೋ? ಸರಕಾರದಿಂದ ಮಾಫಿಯಾಗಿ ಮರ, ಬಿದಿರು ಏನಾದರೂ ಸಿಕ್ಕಿತೇ? ಪಟೇಲರ ಮುಖಾಂತರ, ತಹಶಿಲ್ದಾರರಿಗೆ ಅರ್ಜಿ ಮಾಡಿ ಎಂದಿದ್ದೆನಲ್ಲ?" ಎಂದು ಕೇಳಿದನು. ಸುಬ್ಬ ಪೂಜಾರಿಯು–"ಅರ್ಜಿ ಮಾಡಿ, ಆ ಮರ ಅವರು ಕೊಡಿಸುವುದರೊಳಗೆ, ಹತ್ತು ಮಳೆಗಾಲವೇ ಕಳೆದೀತು. ಮೊದಲಿಗೆ ನೋಡಿ-ನಮ್ಮ ಊರಿನ ದೈವ ಒಲಿಯ ಬೇಕಲ್ಲ? ಪಟೇಲರ ಕಾಲು ಹಿಡಿದು, ಮನೆಯು ಮುಳುಗಿದ್ದು ಹೌದು–ಎಂದು ಬರೆಯಿಸಿಕೊಳ್ಳಲಿಕ್ಕೆ ಕುತ್ತಿಗೆಗೆ ಬಂತು. ಅವರೋ, ಏನಾದರೂ ಕೈಗೆ ತಗಲುತ್ತದೆಯೇ ಎಂದು ನೋಡುವವರು. ನನ್ನದು ಆರು ಅಂಕಣದ ಮನೆ ಹೋದದ್ದು ಎಂದರೆ, 'ಎರಡಲ್ಲವೇ ಹೋದದ್ದು?' ಎನ್ನುತ್ತಾರೆ. ಹಟ್ಟಿ, ಕೊಟ್ಟಗೆ ಎರಡೂ ಉಳಿದಿವೆಯಲ್ಲ ಎಂದು ಅವರಿಗೆ ಹೊಟ್ಟೆ ಸಂಕಟ. ಕೊನೆಗೆ ನಾನು ಸಿಟ್ಟಾಗಿ 'ನಿಮಗೆ ದೇವರು ಬುದ್ಧಿ ಕೊಟ್ಟ ಹಾಗೆ ಬರೆಯಿರಿ' ಎಂದೆ. ಒಟ್ಟಾರೆ ನೂರು ಬಿದಿರಿಗೆ ಶಿಫಾರಸಿ ಆಯಿತು." ಎಂದನು.

"ಅಷ್ಟಾದರೂ ಸಿಕ್ಕಿತಲ್ಲವೆ."

"ಅದು ಸಿಗುವುದು ಇನ್ನೊಂದು ಜನ್ಮಕ್ಕೆ. ನೋಡಿ, ಬಂದರಕ್ಕೆ ಹೋಗಿ ನೂರಕ್ಕೆ ಮೂವತ್ತು ರೂಪಾಯಿಗಳ ಹಾಗೆ ದಂಡಕೊಟ್ಟು ತಂದ ಬಿದಿರು ಇದು."

"ಅದೇಕೆ ಹಾಗಾಯಿತು!"

"ಹೌದೇ? ಮಣೆಗಾರರು, ತಹಶಿಲ್ದಾರರು ಇವರ ಹಿಂದೆ ಸಲಾಮು ಹಾಕಿ ತಿರುಗುವವರು ಯಾರು? ಸಾವಿರ ಸಾರಿ ಸ್ಥಳ ತನಿಖಿ ಆಗಬೇಕು. ಊರಿಗೆ ಒಂದು ಬಿಡುಗಾಸು ಉಪಕಾರ ಮಾಡುವುದಾದರೂ ಸರಿಯೇ—ತನಿಖಿಯ ಮೇಲೆ ತನಿಖಿಯೇ. ಅದು ಮುಗಿಯುವುದರೊಳಗೆ ಯಾರು ಉಳಿಯಬೇಕು? ಇಡಿಯ ಕೆಳಬೈಲಿನವರ ಅವಸ್ಥೆಯೆಲ್ಲವೂ ಹೀಗಾಗಿದೆ. ಏನೋ, ಆ ದಿವಸ ನೀವೆಲ್ಲ ಗಡಿಬಿಡಿ ಮಾಡಿ, ಕೊಡಿಸಿದ ಗಂಜಿ, ಅಕ್ಕಿ, ಅರಿವೆ, ಇಷ್ಟು ಮಾತ್ರ ನಮಗೆ ದಕ್ಕಿತು."

"ಹೋಗಲಿ ಸುಬ್ಬ. ದೇವರು ನಿನಗೆ ಕೈತುಂಬ ದುಡ್ಡು ಕೊಟ್ಟಿದ್ದಾನೆ —ಮಾಡಿದೆ. ಉಪ್ಪರಿಗೆ ಮನೆಯನ್ನೇ ಕಟ್ಟುತ್ತಾ ಇದ್ದೀಯ. ಉಳಿದವರ ಸಂಗತಿ ಏನು ಹೇಳು—ಪಾಪದ ಬಡವರದ್ದು."

"ಅವರ ಕತೆ ಮತ್ತೂ ಕೇಡು. ನಿಮ್ಮ ಭೂಮಿಯ ಧನಿಗಳಿಲ್ಲವೇ, ಸಾಹುಕಾರರು—ಹೆತ್ತು ಹೆತ್ತು ಮಡಲಿನ ಖರ್ಚನ್ನೂ ಕೊಡಲಿಲ್ಲ. ಒಕ್ಕಲುಗಳು ಹೋಗಿ ಅವರ ಮುಂದೆ ಕಣ್ಣೀರು ಇಟ್ಟರೆ—"ನೆರೆಯನ್ನು ನಾವೇನು ಹೇಳಿ ಕರೆಯಿಸಿದೆವೆಯೋ" ಎಂದು ಹೇಳಿದರಂತೆ.

ಹೀಗೆ ಲೋಕಾಭಿರಾಮವಾಗಿ ಅವರ ಮಾತುಗಳು, ಊರಿನ ತಾಪತ್ರಯ,ಅವರ ಮನೆ,ಅದನ್ನು ತಿರುಗಿ ಮಣ್ಣಿನಿಂದಲೇ ಕಟ್ಟಿದ ಬಗ್ಗೆ ಆಕ್ಷೇಪ, —ಇವೆಲ್ಲವುಗಳ ಕಡೆಗೆ ಹರಿದು, ಕೊನೆಗೆ ರಾಮಣ್ಣನು, "ಅದೆಲ್ಲ ಬಿಡಿ, ನೀವು ಸುಮ್ಮನೆ ತಿರುಗಾಡಲು ಬರುವವರಲ್ಲ; ಏನು ಕೆಲಸದ ಮೇಲೆ ಬಂದಿರಿ ಹೇಳಿ?" ಎಂದು ಕೇಳಿದನು. ರಾಧಾಕೃಷ್ಣ ಬಂದ ಸಂಗತಿಯನ್ನು ವಿವರಿಸಿದ.

"ಹೋ, ಹಾಗಾದರೆ ಮರಕಾಲ ನಿಮಗೂ ಕೊಟ್ಟದ್ದು ದಗೆಯೇ? ಯಾವ ಮರಕಾಲ? ಆ ದಿನ ದೋಣಿ ತೆಗೆದವನೇ? ಅವನು ಶುದ್ಧ ಫಟಿಂಗನಲ್ಲವೇ? ಅವನ ಆಡವಿನ ಎಂಟು ರೂಪಾಯಿ ಹೋಗಿಯೇ ಹೋಯಿತು. ನೀವು ಎಂದಿರಂತೆ—ಹಾಗೇನೆ ರಾಮಣ್ಣ ಹೇಳಿದ—ಅವನ ಹೆಂಡತಿ ಸಿಟ್ಟುಗೊಂಡು ಹೋಗಿದ್ದಾಳೆ, ಬಳಿ ತೋರಿಸಿ ಕರಕೊಂಡು ಬರುತ್ತಾನೆ, ಕೊಡು-ಎಂದ. ಕೊಟ್ಟೆನು. ಈಗ ಅವನು ಮೋಸವೇ" ಅನ್ನುತ್ತಲೇ; ರಾಧಾಕೃಷ್ಣನಿಗೆ ಹಿಂದಿನ ಘಟನೆಯ ನೆನಪಾಯಿತು. ಜಿಪುಣ ತಂದೆಯಿಂದ, ಸುಳ್ಳು ನೆಪ ಹೇಳಿ ಮರಕಾಲನ ಋಣ ಸಲ್ಲಿಸಲು, ನಡುವೆ ಏನೋ ತಾರೀಪು ನಡೆದಿದೆ ಎಂದು ಊಹಿಸಿ ನಕ್ಕನು. "ಅವನ ಹಣೆಯ ಬರಹವೇ ಹಾಗೆ. ಈಗ ನನಗೆ ಒಳ್ಳೆಯ ಒಬ್ಬ ಆಳನ್ನು ಕೊಡಿಸಬೇಕಲ್ಲ. ಎರಡು ಮೂರು ಮಂದಿಯಾದರೂ ಮನೆಯಲ್ಲಿರುವವರು ಆಗಬೇಕು. ಇಲ್ಲವಾದರೆ ಈ ವರ್ಷದ ಬೇಸಾಯ ಬೇಸಾಯವೇ."

"ಅದೇನು ಮಾಸ್ತರರೇ? ಮೂರು ಮಂದಿ ಯಾಕೆ? ಕಳೆದ ವರ್ಷ, ನೀವು, ಮರಕಾಲ ಇಬ್ಬರೇ ಪೂರೈಸಿಬಿಟ್ಟಿರಿ."

ಕಳೆದ ವರ್ಷ, ಹಾಗೆ ಸಣ್ಣ ಪುಟ್ಟ ಓಡಾಟಕ್ಕೆ ಶಾಲೆಯ ನಾಲ್ಕಾರು ಮಕ್ಕಳು ಇದ್ದುವು."

"ಈಗ ಅವು ಇಲ್ಲವೋ?"

"ಇಲ್ಲ."

"ಅಲ್ಲ ಮಾಸ್ತರರೇ, ನೀವು ಪ್ರಾಕಿನ ಐಗಳ ಮಠದ ಹಾಗೆ ಮಕ್ಕಳ ಕೈಯಿಂದ ಬೇಸಾಯ ಮಾಡಿಸುತ್ತೇನೆ, ನಟ್ಟಿಕಾಯಿ ಬೆಳೆಯಿಸುತ್ತೇನೆ— ಎಂದರೆ ಹೇಗೆ ಹೇಳಿ? ಈಗಿನ ಮಕ್ಕಳೆಂದರೆ ಶಾಲೆಗೆ ಹೋಗಲಿಕ್ಕೂ ಮೋಟಾರು ಬರಲಿ ಎಂಬವು"

ರಾಮಣ್ಣನು ಆಗ "ಅಪ್ಪಾ, ಎಲ್ಲಿಂದ ಎಲ್ಲಿಗೆ ಹೋಗುತ್ತೀ ನೀನು. ಅವರು ಬಂದದ್ದು-ಯಾರಾದರೂ ಸಮನಾದ ಆಳು, ಅಸಾಮಿ, ಸಿಕ್ಕೀತೇ ಎಂದು ವಿಚಾರಿಸಲಿಕ್ಕೆ. ನೀನು ಅವರಿಗೆ ಪಂಚವಟಿ, ಸುಧಾಮನ ಕಾಳಗ ಎಲ್ಲಾ ಹೇಳುತ್ತಿದ್ದೀಯಾ"

ಸುಬ್ಬ ಪೂಜಾರಿ "ನೋಡಿದಿರಲ್ಲಾ ಮಾಸ್ತರರೇ, ಈಗಿನ ಕಾಲದ ಮಕ್ಕಳು ಅಪ್ಪನಿಗೆ ಬುದ್ಧಿ ಹೇಳುವುದನ್ನು. ನಾವು ಕೇಳಬೇಕು ಬೇಕಾದರೆ. ಏನಂದಿರಿ ನೀವು? ಒಕ್ಕಲು ಬೇಕೆಂದೇ? ನೋಡುವ. ವಿಚಾರಿಸಿ ಹೇಳುತ್ತೇನೆ. ಅದಕ್ಕೆ ಯಾರೂ ಸಿಕ್ಕಿಯಾರು. ನೀವು ಏನು ಧರ್ಮಕ್ಕೆ ದುಡಿಸುತ್ತೀರಾ? ಕೊಚ್ಚು ಕೊಡಿಸುವುದಿಲ್ಲವೇ? ನಮ್ಮ ಕಾಫಿ ತೋಟದಿಂದ ಘಟ್ಟದ ಜನರ ಪೈರು ಬಂದರೆ, ಸುಲಭದಲ್ಲಿ ನಿಮಗೆ ಜನ ಕೊಡಿಸಬಹುದು. ಇನ್ನೂ ಯಾರು ಬಂದಿಲ್ಲ, ತೋಟಕ್ಕೆ ಹೋದವರು."

"ನೋಡು, ಯಾರಾದರೂ ಗುರುತಿದ್ದು, ನಂಬಿಗಸ್ತರಾದವರನ್ನು ಕಂಡು ಹೇಳು."

"ಆಗಲಿ ನೋಡುವ; ಅಷ್ಟೇ ಅಲ್ಲವೇ;" ಎಂದು ಭರವಸೆ ಇತ್ತನು. ರಾಮಣ್ಣನು "ಸಿಕ್ಕಿಯಾರು; ನೀವು ಹುಡುಕಾಡುವುದು ಬೇಡ. ನಾನು ಕರೆದುಕೊಂಡು ಬರುತ್ತೇನೆ" ಎಂದು ಆಶ್ವಾಸನ ಕೊಟ್ಟನು. ರಾಧಾಕೃಷ್ಣ ಧೈರ್ಯಗೊಂಡು ತನ್ನ ಮನೆಯನ್ನು ಸೇರಿದ್ದೂ ಆಯಿತು.

ಒಂದು ವಾರಕಾಲ ಹೀಗೇನೇ ಸರಿಯಿತು. ಇನ್ನು ಹೊಲವನ್ನು ಉತ್ತು, ಬಿತ್ತನೆ ಮಾಡಿ, ನೀರು ಮೊಗೆದು, ಅಗೆಯನ್ನು ತಯಾರಿಸಬೇಕು. ಆಳುಗಳೆಲ್ಲರು ಊರಲ್ಲಿ ನೆರೆಗೆ ನಷ್ಟವಾದ, ಗುಡಿಸಲು ಮನೆ

ಕಟ್ಟುವುದರಲ್ಲೂ, ಒಡ್ಡು, ತೋಡುಗಳ ಕೆಲಸದಲ್ಲಿಯೂ, ಗದ್ದೆಯಲ್ಲಿ ತುಂಬಿದ ಮಣ್ಣು ಹೊತ್ತು ಸಾಗಿಸುವುದರಲ್ಲಿಯೂ ನಿರತರಾಗಿದ್ದರು. ಮೊದಲೇ ಆಗಿದ್ದರೆ, ಮನೆಯಿಲ್ಲದೆ ಕಂಗಾಲಾದ ಯಾರಾದರೂ ಒಬ್ಬ ಅವನಿಗೆ ಸಿಗುತ್ತಿದ್ದ. ಈಗ ಮಳೆಗಾಲ ಕಳೆದು ಆರು ತಿಂಗಳು ಸಂದಿದೆ. ಅಲ್ಲಿಯ ತನಕವೂ ಮನೆ ಮಠವಿಲ್ಲದೆ ಜನರು ತಿರುಗಾಡುತ್ತಾರೆಯೇ? ಮಳೆ ಕಳೆಯುತ್ತಲೇ, ಮಾಡಿನ ಕೆಲಸ ಮುಗಿಸಿದರು. ಬೇಸಾಯ ಕಳೆಯುತ್ತಲೇ, ಹಟ್ಟಿ ಕೊಟ್ಟಿಗೆಗಳ ನಿರ್ಮಾಣಕ್ಕೆ ಕುಳಿತರು. ರಾಮಣ್ಣ ಮಾಡುತ್ತಿದ್ದ ಕೆಲಸ ಅದೇನೆ. ಅವರ ಒಕ್ಕಲೆಲ್ಲ ಆ ಕೆಲಸದಲ್ಲಿ ಸೇರಿಕೊಂಡಿದ್ದರು. ಪೂಜಾರಿಗೆ—ಬಿದ್ದ ಮನೆಯನ್ನು ಎಬ್ಬಿಸುವ ಹುರುಪು. ಆದರೂ ತಂದೆ ಮಕ್ಕಳಿಬ್ಬರೂ ರಾಧಾಕೃಷ್ಣನಿಗೆ ವಚನಕೊಟ್ಟಿದ್ದಾರೆ. ವಿಚಾರಿಸಿದ್ದಲ್ಲಿ ಆಸುಪಾಸಿನ ಯಾವನೊಬ್ಬ ಬಿಡು ಕೂಲಿಯೂ ಕಾಣಿಸಲಿಲ್ಲ. ಘಟ್ಟದವರ ಬರವನ್ನೇ ಅವರು ಕಾಯಬೇಕಾಯಿತು.

ಇನ್ನು ಎಂಟು ದಿವಸಗಳ ಬಳಿಕ, ರಾಮಣ್ಣ, ಮಾಸ್ತರರ ಮನೆಗೆ ಬಂದು, ಸಂಗತಿಯನ್ನು ವಿವರಿಸಿದ "ಈ ವರ್ಷ ಆಳುಗಳೆಲ್ಲಾ ಎಲ್ಲಿಗೆ ಸತ್ತುವೋ. ಊರಲ್ಲಿ ಮೊಗೇರರ ಹುಳು ಒಂದೂ ಇಲ್ಲ. ಅವರಿಗೇನು-ಬೇಸಾಯವೇ ಆಗಬೇಕೆಂದಿದೆಯೇ! ದೋಣಿ ಹಾಕಿಕೊಂಡು ಕಡಲಿಗೆ ಹೋದರೆ, ನಾಲ್ಕು ದಿವಸದ ಕೂಳು ಒಂದೇ ದಿವಸಕ್ಕೆ ಬರುತ್ತದೆ. ನಮ್ಮವರಿಗೆ,—ಮೂರ್ತೆ ಆಯಿತು, ಅವರಾಯಿತು. ಘಟ್ಟದಿಂದ ಯಾರಾದರೂ ಹೊಲೆಯರು ಬರುತ್ತಾರೆಯೇ, ಎಂದು ನೋಡಿದರೆ ಅವರೂ ಇಲ್ಲ. ಮನೆ ಗುಡಿಸಲು ಹೋದ ಮೇಲೆ, ಇನ್ನು ಊರಿಗೆ ಯಾಕೆ ಬರುವುದೆಂದು ತಿಳಿದಂತೆ ಕಾಣುತ್ತದೆ." ಎಂದು ಹೇಳಿದನು. ಪೂಜಾರಿಯ ಭರವಸೆಯನ್ನು ನಂಬಿದರೆ, ತನ್ನ ಬೇಸಾಯ ಕೆಟ್ಟಂತೆಯೇ ಸರಿ ಎಂದು ರಾಧಾಕೃಷ್ಣನು ತಿಳಿದ. ಆದರೂ ರಾಮಣ್ಣ "ಅಂಥದ್ದಾದರೆ ಮಾಸ್ತರರೇ, ನಾನು ಅಗೆಯನ್ನೇ ಕೊಡುತ್ತೇನೆ. ನಮ್ಮ ಒಕ್ಕಲನ್ನು ಕೊಟ್ಟು ನಿಮ್ಮ ಈ ವರ್ಷದ ಬೇಸಾಯ ತಳ್ಳಿ ಕೊಟ್ಟರೆ ಸಾಕಲ್ಲ?" ಎಂದನು. ರಾಮಣ್ಣ ಮಾತು ಮುರಿಯಲಾರನು—ಎಂದು ನಂಬಿದನು. ಆತನಿಗೆ ಅವನ ವಿಷಯದಲ್ಲಿ ಅಷ್ಟೊಂದು ಗೌರವವೂ ಇತ್ತು.

ಈ ಎಡೆಯಲ್ಲಿ ಬೇರೊಂದು ತಾಪತ್ರಯವೂ ರಾಧಾಕೃಷ್ಣನಿಗೆ ಗುರಿಯಾಯಿತು. "ಮುಂದಿನ ಶುಕ್ರವಾರವೇ ನಮ್ಮ ವಾಗ್ದೇವಿಗೆ ಲಗ್ನ. ಸತ್ಯಳನ್ನು ಕರೆದುಕೊಂಡು ನೀನು ಬಂದೇ ತೀರಬೇಕು. ಕೂಡಲೇ ಉತ್ತರ ಬರೆ." ಎಂದು ಮಾವರಾಯರ ಪತ್ರ ಬಂತು. ಲಗ್ನಕ್ಕೆ ಹೋಗದೆ ಇರುವ ಹಾಗಿಲ್ಲ; ಹಾಗೆ ಹೊರಟರೆ, ಹತ್ತೆಂಟು ದಿವಸಗಳ ತನಕ ಎಲ್ಲ ಕಜ್ಜಗಳು ಕೆಟ್ಟಂತೆಯೇ—ಎಂದು ಆತನ ತಲೆ ಬಿಸಿಯಾಗಲಾರಂಭಿಸಿತು. ತನ್ನ ಮುಖ್ಯ ಹೇತುವಾದ ಶಾಲೆಯನ್ನು, ರೂಪುಗೊಳಿಸಲು ಯೋಚಿಸುತ್ತಿರುವಾಗಲೆಲ್ಲ, ಹೀಗೆ ವಿಘ್ನಗಳ ಮೇಲೆ ವಿಘ್ನಗಳು ಬಂದು ಕಲೆಯುತ್ತವೆಯಲ್ಲ—ಎಂದು ಚಿಂತಿಸುತ್ತಾನೆ. ಆದರಿಂದ ಯಾವ ಕೆಲಸಕ್ಕೂ ಮನಸ್ಸು ಓಡುವುದಿಲ್ಲ. ಮಂಕನಂತೆ ಪುಸ್ತಕ ಹಿಡಿದು ಓದುವುದು, ಉಸಿರುಗರೆಯುವುದು—ಇಷ್ಟೇ ಅವನ ಕೆಲಸವಾಗಿದೆ. ಪ್ರತಿ ಗಳಿಗೆಗೂ "ದೊಡ್ಡ ಮಾತನಾಡುವುದಾಗಲೀ, ಹಿರಿಯ ಕನಸನ್ನು ಕಟ್ಟುವುದಾಗಲೀ ಮಹಾ ಕೆಲಸವಲ್ಲ. ಅವನ್ನು ಕಾರ್ಯಕ್ಕೆ ತರಲು ಯತ್ನಿಸಿದಾಗಲೆಲ್ಲ ಎಲ್ಲ ಕಷ್ಟ ತಿಳಿಯುತ್ತದೆ. "ತಾನು ಸಾಯಬೇಕು, ಸ್ವರ್ಗ ಪಡೆಯಬೇಕು; ಎಂಬ ಹಳ್ಳಿಯ ಗಾದೆ ಸುಳ್ಳಲ್ಲ" ಎಂದುಕೊಳ್ಳತೊಡಗಿದನು.

*   *   *   *

ದಿನ ಸರಿದಿದೆ, ಇದು ಆದಿತ್ಯವಾರ. ವಾರದ ಮುಂದಿನ ಶುಕ್ರವಾರವೇ ವಾಗ್ದೇವಿಯ ವಿವಾಹದ ದಿನ. ಹಿಂದೆ ಬಂದಾಗ ಮಗಳಿಂದ ಅಳಿಯನ ಪುರಾಣ ಕೇಳಿದ ಮಂಜಯ್ಯನವರಿಗೆ, ಆತ ಮನೆಗೆ ಬರುತ್ತಾನೆ, ಎನ್ನುವ ಧೈರ್ಯವಿರಲಿಲ್ಲ. ಹಿರಿಯ ಅಳಿಯ ಮನೆಯಲ್ಲಿಲ್ಲದೆ ಮದುವೆಯೇ-ಎಂದು ತೋರುತಿತ್ತು. ಅವನಿಗೆ ಅನುಕೂಲವಿಲ್ಲವಾದರೆ ಹೋಗಲಿ, ಸತ್ಯಳನ್ನು ಕಳುಹಿಸಬಹುದಲ್ಲಾ ಎಂದು ಬಯಸುತ್ತಿದ್ದರು. ಆತನ ಬಲವಂತಕ್ಕೆ ಸತ್ಯಳ ಲಗ್ನವನ್ನು ಬಡತನದಲ್ಲಿ ಮಾಡಿದ್ದರು. ಈ ಬಾರಿಯಾದರೂ, ಮಗಳ ಲಗ್ನವನ್ನು, ವಿಜೃಂಭಣೆಯಿಂದ ಜರಗಿಸುವ ಆತುರ ಅವರಿಗೆ. ಆಗ ಅಳಿಯ ಮನೆಯಲ್ಲಿಲ್ಲದೆ ಹೋಗಬಾರದು ಎಂಬ ಆಸೆ. ಪತ್ರ ಬರೆದುದರಿಂದ ತೃಪ್ತಿಯಾಗದೆ, ತಾವು ಹೋಗಿ ಕರೆದುಕೊಂಡು ಬರುವುದೇ ಲೇಸೆಂದು, ಮಂಳೂರಿಗೆ ಹೊರಟರು.

ಮುಸ್ಸಂಜೆಯ ವೇಳೆಯಲ್ಲಿ ರಾಧಾಕೃಷ್ಣನು ಕಿರಿಪದವಿನ ಮೇಲೆ ಕುಳಿತು, ಪಡುವಣ ಬಾನನ್ನು ನಿರೀಕ್ಷಿಸುತ್ತಿದ್ದ. ನೆಪಕ್ಕೆ ಕೈಯಲ್ಲೊಂದು ಪುಸ್ತಕವಿತ್ತು; ಬೆರಳುಗಳು ಅದರ ಹಾಳೆಯನ್ನು ಬಿಡಿಸಿ ಹಿಡಿದಿದ್ದುವು. ಮನಸ್ಸು ಮಾತ್ರ ಬಾನಲ್ಲಿ ಅಲೆದಾಡುತ್ತಿತ್ತು. ಸೂರ್ಯ ಕೆಂಪಾಗಿ ಮುಗಿಲ ಎಡೆಗಳಲ್ಲಿ ಮರೆಯಾಗುತಿದ್ದ. ದೃಷ್ಟಿಯೇನೋ ಅವನ ಕಡೆಗೆ ನಟ್ಟಿತ್ತು. ಮನಸ್ಸು ಒಮ್ಮೊಮ್ಮೆ ನಾಳಿನ ಬೇಸಾಯದ ಕಡೆಗೂ, ಸತ್ಯಳನ್ನು ಕರೆದೊಯ್ಯುವ ವಿಚಾರದ-ಕಡೆಗೂ ಓಡುತ್ತಿದೆ. ತಾನು ಊರನ್ನು ಬಿಟ್ಟರೆ ಬೇಸಾಯದ ಪಾಡು ಹೇಗಾಗುತ್ತದೆಯೋ? ಮಳೆ ಬಂದೀತೆಂದು ಹೇಳುವುದಕ್ಕಾಗುವುದಿಲ್ಲ. ಸತ್ಯಳನ್ನು ಶ್ಯಾಮನ ಜತೆಗೆ ಊರಿಗೆ ಕಳುಹಿಸಿದರೆ ಆಗದೇ?-ಆ ವಿಚಾರವನ್ನು ಅವಳೊಡನೆ ತರ್ಕಿಸಿಲ್ಲ. ನೀನು 'ಹೋಗಲೇಬೇಕೆಂದು' ಇಷ್ಟೇ ಹೇಳಿ ಬಂದಿದ್ದ. ಆಕೆ ಅನುಮಾನಿಸಿ "ನಾನು ಹೋಗುವುದೇ, ನಾನು ಒಂದು ಸಾರಿ ಹೋಗಿ ಬಂದೇ ನಿಮ್ಮ ಅವಸ್ಥೆ ಹೀಗಾಗಿದೆ. ಇನ್ನೊಮ್ಮೆ ಹೋದರೆ, ಬರುವಾಗ ನಿಮಗೆ ಹುಚ್ಚೇ ಹಿಡಿದಿರುತ್ತದೆ" ಎಂದಿದ್ದಳು. ರಾಧಾಕೃಷ್ಣ ತುಂಬ ಯೋಚನಾಪರನಾದಂತೆ, ನೊಂದಂತೆ, ಬೇಗುದಿಗೊಂಡಂತೆ ಅವಳಿಗೆ ಕಂಡಿದೆ. ಆದರೆ—'ಏನು' ಎಂದು ಕೇಳಿದರೆ "ಇಲ್ಲ, ಅದು ಮುಗಿಯಿತಲ್ಲಾ" ಎನ್ನುತ್ತಾನೆ.- ಆದರಿಂದ ಅವಳು:- "ಹೋಗುವುದಾದರೆ ಇಬ್ಬರೂ ಜತೆಗೆ ಹೋಗುವ. ನಾಲ್ಕು ದಿನಕ್ಕಾದರೂ ಇಲ್ಲಿಯ ಚಿಂತೆ ಮರೆಯುತಿತ್ತು" ಎಂದಿದ್ದಳು. ಅವನ ಮನಸ್ಸು ಮಾತ್ರ ಆ ನೆಲವನ್ನು ಬಿಟ್ಟು ಕದಲಲು ಇಷ್ಟಗೊಳ್ಳುತ್ತಲಿಲ್ಲ. ಅದಕ್ಕೂ ಮೇಲಾಗಿ, ಆ ನೆಲವನ್ನು ನಂಬಿ ಬಂದ ತನ್ನ ಕಾರ್ಯರಂಗದ ಭವಿಷ್ಯ ನಿರ್ಧಾರವಾಗದೆ, ಏನು ಮಾಡುವುದಕ್ಕೂ ಮನಸ್ಸಿಲ್ಲ. ಈ ನಾಲ್ಕೈದು ವರ್ಷಗಳ ದೀರ್ಘಕಾಲದಲ್ಲಿ ತಾನೇನು ಸಾಧಿಸಿದಂತಾಯಿತು? ಬರಿಯ ಕಷ್ಟ, ನಿಷ್ಠುರಗಳನ್ನು ಸಹಿಸಿದ್ದಲ್ಲದೆ, ಜನರ ಮುಂದೆ ಹೆಮ್ಮೆಯಿಂದ ತಲೆಯೆತ್ತಿ ತೋರಿಸುವ ಪುರುಷಾರ್ಥವೇನಾಯಿತು? ಎಂಥ ಶ್ರಮ ಪಟ್ಟೆನೆಂದು ಈ ವಿಶ್ರಾಂತಿಗೋ, ಆನಂದಕ್ಕೋ, ವಿಲಾಸಕ್ಕೋ, ತಾನು ಹೋಗಬೇಕು—ಎಂದು ತೋರುತಿತ್ತು.

ಒಂದು ಗಳಿಗೆಯ ಕಾಲ ಅವನ ಮನಸ್ಸು ಹಾಗೆ ಮೆಲುಕಾಡುತ್ತಿರುವಾಗಲೇ, ಒಮ್ಮಿಂದೊಮ್ಮೆಗೆ ಯಾರೋ ಅವನ ಎದುರಿಗೆ ಬಂದು ನಿಂತು

ಕೊಂಡರು. ತನ್ನ ಕಣ್ಣನ್ನೇ ಅವನು ನಂಬಲಿಲ್ಲ. ಮಂಜಯ್ಯನವರೇ ಬಂದಿದ್ದಾರೆ. ಪ್ರವಾಸದಿಂದ ಧೂಳು ಹಿಡಿಸಿಕೊಂಡಿದ್ದರೂ ಉಡುಗೆಯ ಠಾಕು ಠೀಕು ಹಾಗೆಯೇ ಇದೆ. ಆರು ಮೈಲು ನಡೆದು ಬಂದಿದ್ದರೂ, ಎಂಜಲು ತುಪ್ಪುತ್ತ, ಮುಗುಳು ನಗೆ ನಗುತ್ತಲೇ ಇದ್ದರು. "ಏನು—ಬಹಳ ಯೋಚನೆ ಹಿಡಿದು ಕುಳಿತ ಹಾಗಿದೆ. ಮನೆಯೆಲ್ಲಿ?" ಎಂದು ಕೇಳಿದರು. ಒಂದು ಬಾರಿಗೆ ಅವನ ಮುಖ ಅರಳಿತು. "ನೀವೇ! ಇಲ್ಲಿಗೆ ಬರಬೇಕಿತ್ತೇ? ಕಾಗದ ಸಾಲದೆ? ಸತ್ಯಳನ್ನು ಕಳುಹಿಸದೇ ಇರುತ್ತಿದ್ದೆನೇ? ಮದುವೆಯ ಕೆಲಸ ನೂರಾರು ಇರುವಾಗ ಹೇಗೆ ಮನೆ ಬಿಟ್ಟು ಬರಲಿಕ್ಕೆ ಆಯಿತು?" ಎಂದ. ಅವರನ್ನು ಕರೆದುಕೊಂಡು ಮನೆಯ ಹಾದಿಗೆ ಇಳಿದನು. ದಾರಿಯಲ್ಲಿ ಅವರು "ಮಹಾರಾಯ, ನಿನ್ನನ್ನು ನೋಡುವ ಆಸೆ ಆಯಿತು, ಬಂದೆ. ಅಮ್ಮ ಸತ್ತಾಗಲೂ ನೀನು ಬರಲಿಲ್ಲ. ನಿನ್ನ ಪುರಾಣವನ್ನೆಲ್ಲಾ ಕೇಳಿದ್ದೆ. ಹೀಗಾಗಿ, ಈ ಬಾರಿಯೂ ನೀನು ತಪ್ಪಿಸಿಕೊಂಡರೆ-ಎಂದು ಹೆದರಿ ಬಂದೆ" ಎಂದು ಹೇಳಿದರು.

"ಆಯಿತು, ನೀವೇ ಬಂದಿರಿ. ಇನ್ನು ತಪ್ಪಿಸಿಕೊಳ್ಳುವ ಹಾಗಿಲ್ಲವಲ್ಲ" ಎಂದು ನಕ್ಕು ನುಡಿದ.

ಸತ್ಯಳಿಗೆ ತಂದೆಯ ಆಗಮನದಿಂದ ಮನಸ್ಸು ಉಬ್ಬಿ, ಉಕ್ಕಿ ಹರಿಯಿತು. ಅವರು—ಯಾವ ಯುಗದಲ್ಲಿಯೂ, ಇಂತಹ ಕೊಂಪೆಗೆ ಬರುವವರಲ್ಲ ಎಂದು ತಿಳಿದಿದ್ದಳು. ತಂದೆಗೆ ನೀರು ಕೊಟ್ಟು, ಉಪಚರಿಸುವಾಗಲೇ ಅವಳ ಮನಸ್ಸು, ತಾವಾಗಿ ತಂದುಕೊಂಡ ಬಡತನದಿಂದ ಅಳುಕುತಿತ್ತು. "ತನ್ನನ್ನು ಗಂಡ ಬೇಕೆಂದೇ ಇಂತಹ ಕಷ್ಟದಲ್ಲಿ ತಳ್ಳಿದ್ದಾನಲ್ಲ?" ಎಂದು ತಿಳಿದು ಅವರು ಸಿಟ್ಟಾಗುವರೋ-ಎಂಬ ಅಳುಕು ಬೇರೆ. ಬಂದವರಿಗೆ ಊಟ ಮುಗಿಯಿತು. ಸತ್ಯ, ತಂದೆಯೊಡನೆ ಸರಸವಾಗಿ ಮಾತನಾಡುತ್ತಿದ್ದಳು. ರಾಧಾಕೃಷ್ಣ "ಮಾವ, ಈಗ ಬರುತ್ತೇನೆ. ಇಲ್ಲೇ ಬಯಲಿಗೆ ಹೋಗಿ ಬರುತ್ತೇನೆ. ಹೊರಡುವ ಏರ್ಪಾಡು ಮಾಡಬೇಕಲ್ಲ, ಮನೆಯ ಕಾವಲಿಗೆ ಒಂದು ಜನ ಕಂಡು ಬರುತ್ತೇನೆ." ಎಂದು ಕೆಳಬೈಲಿನ ರಾಮಣ್ಣನ ಮನೆಗೆ ಹೋದನು.

"ರಾಮಣ್ಣ, ಇವತ್ತು ಏಕಾದಶಿಯಲ್ಲಿ ಉಪರಿ ಬಂದಹಾಗಾಯಿತು. ನಾನು ಸಾಗುವಳಿಯ ದಾರಿ ಏನು ಎಂದು ಯೋಚಿಸಿಕೊಂಡಿರುವಾಗ,

ನಮ್ಮ ಮಾವನವರ ಸವಾರಿ ಬಂದು ಬಿಟ್ಟಿದೆ. ನನ್ನ ನಾದಿನಿಯ ಲಗ್ನಕ್ಕೆ ಕರೆಯಲು ಬಂದಿದ್ದಾರೆ. ಮನೆಯಲ್ಲಿ ಶ್ಯಾಮನು ಒಬ್ಬನೇ ಇರಬೇಕಾಗುತ್ತದೆ. ಅವನನ್ನು ಬಿಟ್ಟು ಹೋಗಲು ಮನಸ್ಸಿಲ್ಲ. ಕರೆದುಕೊಂಡು ಹೋದರೆ ಜಾನುವಾರು ನೋಡುವವರಿಲ್ಲ" ಎಂದು ಹೇಳಿದ.

"ಆ ಯೋಚನೆ ಬೇಡ. ನಾನು ಈ ರಾತ್ರಿಯೇ ಬರುತ್ತೇನೆ. ನೀವು ಬರುವ ವರೆಗೆ ಮನೆಯ ಕಾವಲಿಗೆ ನಾನು ಇದ್ದರಾಯಿತಲ್ಲಾ? ಬೇಸಾಯ, ಹೊಟಿ, ಏನಿದ್ದರೂ ಹೇಳಿ ಹೋಗಿ-ಎಲ್ಲ ಪೂರೈಸಿ ಇಡುತ್ತೇನೆ. ನಿಮಗೆ ಯಾವ ಚಿಂತೆಯೂ ಬೇಡ" ಎಂದನು. ಆತ ಹರ್ಷಚಿತ್ತನಾಗಿ ಮನೆಗೆ ಬಂದನು. ಮಂಜಯ್ಯನವರು ಅಳಿಯ ಬರುವ ತನಕ ಕುಳಿತೇ ಇದ್ದರು. ಸತ್ಯ ತಂದೆಯೊಡನೆ, 'ಅವರೇನು ಮಾಡುತ್ತಾರೆ ಎಂದು ಗಟ್ಟಿಯಾಗಿ ಕೇಳಿ' ಎಂದಳು. ರಾಧಾಕೃಷ್ಣ ನಗುತ್ತ, "ಏನು? ನಾನು ಕಳಪುಹಾಕುತ್ತೇನೆ ಎಂದು ತಿಳಿದೆಯಾ? ಅವರೇ ಬಂದಿದ್ದಾರಂತೆ. ನಮ್ಮದೇನು ದೊಡ್ಡದು; ಶ್ಯಾಮು ಇಲ್ಲಿರುತ್ತಾನೆ. ಇಷ್ಟವಾದರೆ ನಮ್ಮ ಜತೆಗೆ ಬರುತ್ತಾನೆ. ರಾಮಣ್ಣನನ್ನು ಇಲ್ಲಿಯ ರಖೋಲೆಗೆ ಹೇಳಿದ್ದೇನೆ. ಬರುತ್ತೇನೆ-ಎಂದಿದ್ದಾನೆ" ಎಂದು ನಗುತ್ತ ನುಡಿದನು. ಸತ್ಯ, ಪತಿಯ ಮುಖದಲ್ಲಿನ ತೀರ ಆಕಸ್ಮಿಕವಾದ ನಗುವನ್ನು ಕಂಡು ಪ್ರಪಂಚವನ್ನೇ ಮರೆತಳು. ತುಸು ಸಮಯವಾದರೂ ಆತ ಆ ಸ್ಥಳದಿಂದ ದೂರವಾಗಿದ್ದರೆ, ಮನಸ್ಸು ನೆಮ್ಮದಿಗೊಳ್ಳುತ್ತಲಿತ್ತೋ ಏನೋ ಎಂದು ಅವಳು ತಿಳಿದುದಕ್ಕೂ, ಈಗ ಹೊರಡುವ ವಿಚಾರದಲ್ಲಿ ಆತ ತೋರಿದ ನಗುವಿಗೂ, ಹೊಂದಿಕೆಯಾಯಿತು. ರಾತ್ರಿ ಮಂಜಯ್ಯನವರು ಮಲಗಿದಲ್ಲಿಂದಲೇ, ಅಳಿಯ ರಾಯರ ಶಾಲೆ, ಬೇಸಾಯಗಳ ವಿಚಾರವನ್ನೆಲ್ಲ ಒಂದೊಂದಾಗಿ ಕೇಳಿದರು. ಸಂಗತಿಯನ್ನು ಕೇಳಿ ತಿಳಿದು, "ಈ ನಾಲ್ಕು ಮುಡಿ ಬೇಸಾಯಕ್ಕೆ ನಿಮ್ಮದೇ ಜಮೀನು ಇಲ್ಲವೇ? ಒಬ್ಬ ಹುಡುಗನನ್ನು ಕಟ್ಟಿಕೊಂಡು ಅದನ್ನು ಶಾಲೆ ಅನ್ನುವುದಕ್ಕಿಂತ ನಮ್ಮ ಮನೆಯ ಶಾಲೆಯನ್ನು ನಡೆಯಿಸಬಹುದಿತ್ತಲ್ಲಾ?" ಎಂದರು. ತಂದೆಯ ಆ ಮಾತು ಸತ್ಯಳಿಗೆ ರುಚಿಸಲಿಲ್ಲ. ಅದು ಅವನನ್ನು ಪರಿಹಾಸ್ಯಗೊಳಿಸಿದಂತೆ ಎಂದು ತಿಳಿದಳು. "ಅಪ್ಪಾ, ಅವರು ಏನೇನೋ ಯೋಚನೆ ಮಾಡಿ ಇಲ್ಲಿಗೆ ಬಂದರು. ಸಮನಾದ ಜನಸಹಾಯ ಸಿಗದೆ, ಯಾವುದೂ ಕೈಗೂಡಲಿಲ್ಲ. ಅದು ಹೋಗಲಿ, ನೀನು ವಾಗ್ದೇವಿಗೆ ಏನೇನು

ಚಿನ್ನ ಮಾಡಿಸಿದ್ದೀಯಾ, ಹೇಳು. ಮನೆಯಲ್ಲಿ ಅಮ್ಮ ಹೇಗಿದ್ದಾಳೆ?" ಎಂದು ವಿವಾಹ ಪ್ರಪಂಚಕ್ಕೆ ಮಾತನ್ನು ಹಾರಿಸಿದಳು. ರಾತ್ರಿ ಎರಡು ತಾಸಿನ ತನಕ, ತಂದೆ ಮಗಳು ಮಾತನಾಡುತ್ತಲೇ ಇದ್ದರು. ರಾತ್ರಿ ಬಂದ ರಾಮಣ್ಣನೊಡನೆ, ರಾಧಾಕೃಷ್ಣ ಎಲ್ಲ ಬಗೆಯ ಮನೆ ಸಾಲಜೋಡುಗಳನ್ನು ಹೇಳಿ ಮಲಗಿಕೊಂಡನು. ಶ್ಯಾಮು ಅಲ್ಲಿಯೇ ಇರುತ್ತೇನೆಂದನು. ರಾಧಾ ಕೃಷ್ಣ ಮಲಗಿ ನಿದ್ದೆಹೋದರೂ, ಅವನನ್ನು ಕೊರೆಯುತ್ತಿದ್ದುದು "ಇಷ್ಟು ಕೆಲಸಕ್ಕಾಗಿ ಈ ದೂರದಲ್ಲಿ ನರಳಾಡಬೇಕೇ" ಎಂದ ಮಾವನ ಮಾತು! 'ಸರಿಯಲ್ಲವೇ ಅದು' ಎಂದು ಅದನ್ನು ಆತ ತಿರುತಿರುಗಿ ತೂಗುತ್ತಿದ್ದಾನೆ.

ಬೆಳಕು ಹರಿಯುವ ಮೊದಲೇ, ಆ ಮೂವರು ಎದ್ದು ಹೊರಟರು. ದೊಡ್ಡ ಹಾಸಿಗೆ, ಪೆಟ್ಟಿಗೆಗಳ ಸಂಭ್ರಮ ಇರಲಿಲ್ಲ. ಮೂವರಿಗೆ ಮೂರು ಕೈಗಂಟುಗಳು ಮಾತ್ರ. ಶ್ಯಾಮು ರಾಧಾಕೃಷ್ಣನನ್ನು ಕುರಿತು "ನೀವು ಏನೂ ಯೋಚನೆ ಮಾಡಬೇಡಿ. ಎಂಟು ದಿನವಲ್ಲ, ಹದಿನೈದು ದಿನವಾದರೂ ನಾನು ನೋಡಿಕೊಂಡೇನು. ಬೇಸಾಯದ ಸುದ್ದಿ ರಾಮಣ್ಣನಿಗೆ ಹೇಳಿದ್ದೀರಲ್ಲಾ? ನನಗೆ ತಿಳಿವಷ್ಟು ಮಾಡುತ್ತೇನೆ. ನೀವು ಎಲ್ಲಾ ಯೋಚನೆ ಬಿಟ್ಟು ಹೋಗಿ ಬನ್ನಿ" ಎಂದು ಬೀಳ್ಕೊಟ್ಟ. ದಾರಿಯಲ್ಲಿ ಅವನನ್ನು ನೆನೆಯುತ್ತ ರಾಧಾಕೃಷ್ಣ ಸತ್ಯಳೊಡನೆ "ಹತ್ತು ಕುಂಬಳಕಾಯಿಗೆ ಒಂದು ಮುತ್ತಿನ ಬೆಲೆ ಬಂದೀತೇ? ಶ್ಯಾಮುನೆಂದರೆ ಒಂದು ಮುತ್ತು. ಒಂದು ರತ್ನ." ಎಂದು ಹೇಳಿದನು. "ಇಲ್ಲ ನಾನು ತಿರುಗಿ ಬರುವ ತನಕ ಕಿರಿಪದವಿನ ಯೋಚನೆಯನ್ನು ಮಾಡುವುದೇ ಇಲ್ಲ." ಎಂದು ನಿರ್ಧರಿಸಿ ನಡೆದನು. ಆತನ ಜತೆಯಲ್ಲಿ ನಡೆದುಹೋಗುವಾಗ ಸತ್ಯಳಿಗೆ ಬಹುದಿನದಲ್ಲಿ ಕಾಣದ ಚೆಲುವು, ಆ ದಿನ ಜೀವನದಲ್ಲಿ ಉದಯಿಸಿದಂತೆ ಕಂಡಿತು.

* * * *

ಮದುವೆಗೆ ಹೋದವರು ಹೋದರೇ. ಯೋಚನೆಯ ಭಾರ ಶ್ಯಾಮುನಿಗೆ ಬಂದಿತು. ಆತ ಅಡುಗೆಯನ್ನು ಮಾಡುತ್ತಾನೆ. ಜಾನುವಾರುಗಳನ್ನು ಬಿಚ್ಚಿ ಮೇಯಿಸುತ್ತಾನೆ, ಕಟ್ಟುತ್ತಾನೆ. ಬಿದ್ದ ತೆಂಗಿನ ಗರಿಗಳನ್ನು ಹೆಣೆದು ಮಡಲು ಮಾಡುತ್ತಾನೆ. ವಿರಾಮದ ವೇಳೆಯಲ್ಲಿ ಕೈಗೆ ಬಂದ ಪುಸ್ತಕಗಳನ್ನು ಓದುತ್ತಾನೆ. ನೆನಪು ಬಂದಾಗ ರಾಮಣ್ಣನಲ್ಲಿಗೆ ಹೋಗಿ

'ಆಳು ದೊರೆತನೇ' ಎಂದು ಕೇಳುತ್ತಾನೆ. ರಾತ್ರಿ ರಾಮಣ್ಣ ಬಂದರೆ ಬೇಸಾಯದ್ದೇ ಕತೆ ಮಾತನಾಡುತ್ತಾನೆ. ಸಮಯಕ್ಕೆ ಸರಿಯಾಗಿ ನಾಲ್ಕಾರು ಮಳೆಗಳು ಬಡಿದುವು. ರಾಮಣ್ಣ ಸಾಹಸಮಾಡಿ, ಬಂದು ಮೇರಠ ಒಕ್ಕಲನ್ನು ಮರಕಾಲನಿದ್ದ ಮನೆಗೆ ತುಂಬು ಹೊಗ್ಗಿಸಿದನು. ಅವನಿಗೆ ಸಾಗುವಳಿಯ ವಿವರ ಹೇಳಿ, ಗದ್ದೆಗಳನ್ನೂ, ಹೂಡಿಸಿಯಾಯಿತು. ಹುಡಿ ಬೀಜ ಬಿತ್ತಿಸಿ ಆಯಿತು. ಕಟ್ಟೆಗೆಯನ್ನು ಕೂಡಿಸಿ ಆಯಿತು. ಮಾಡುಗಳ ಚಾವಣಿಯೂ ಆಯಿತು.

ಸತ್ಯ, ರಾಧಾಕೃಷ್ಣರು ತೆರಳಿ ವಾರವೊಂದು ಕಳೆಯಿತು. ಇನ್ನೂ ನಾಲ್ಕು ದಿನಗಳಾದುವು. ಪ್ರತಿ ಸಂಜೆಯು ಶ್ಯಾಮು ಪದವನ್ನು ಏರಿ ಹಿಗ್ಗಿನಿಂದ ಅವರನ್ನು ನಿರೀಕ್ಷಿಸುತ್ತಿದ್ದಾನೆ. ಹದಿನೈದು ದಿನಗಳೇ ಕಳೆದುವು. ಒಂಟಿ ಜೀವನದಿಂದ ಅವನಿಗೆ ಬೇಸರ ಬಂದಿದ್ದರೂ, ಗುರುವಿಗೆ ತಾನು ಮಾಡಿದಕೆಲಸ ತೋರಿಸುವ ಹಿಗ್ಗಿನಲ್ಲಿ ಗಳಿಗೆ ಕಳೆಯುತ್ತಿದ್ದಾನೆ. ಹದಿನೈದನೆಯ ದಿನಕ್ಕೆ ಅವರಿಬ್ಬರು ಬಂದರೇ ಬಂದರು. ಮೊದಲ ದರ್ಶನವೇ ಹಸುರು ಒಡೆದು, ನೆಲದಲ್ಲಿ ಸೂಜಿಗಳಂತೆ ನಿಂತ ಅಗೆಯದು. ಎರಡನೆಯ ದರ್ಶನ—ಅಷ್ಟೇ ಆತುರದಿಂದ ನಿರೀಕ್ಷಿಸುತ್ತಿದ್ದ ಶ್ಯಾಮುನದು.



# ಹತ್ತನೆಯ ಅಧ್ಯಾಯ

ಮಂಗಳೂರು ಮಿಃರಿನ ಪ್ರಭುದೇವನಿಗೆ, ಉದ್ಧಾಮ ಧುರೀಣನಾಗುವ ಹೆಂಬಲ. ಜನತೆಯು ತನಗೆ ಸಮನಾದ ಮುಖಂಡರನ್ನು ಆರಿಸುವುದೆಂಬುದು ಎಷ್ಟು ಸತ್ಯವೋ, ಮುಖಂಡನು ತನಗೆ ಒಪ್ಪುವ ಜನವನ್ನು ಕೂಡಿಸಿಕೊಳ್ಳುತ್ತಾನೆಂದು ಅಷ್ಟೇ ಸತ್ಯ. ಜನ ಎಂಥವರನ್ನೂ ಮುಂದಾಳಾಗಿ ಆರಿಸುವುದೂ ಉಂಟು. ಜನತೆ ಆರಿಸುವುದು ಎನ್ನುವುದಕ್ಕಿಂತ—ಒಪ್ಪುವುದು ಎನ್ನಬಹುದು. ಮನುಷ್ಯನ ಶೀಲ, ಸ್ವಭಾವಗಳನ್ನು ನೋಡಿ ಸಮಾಜದ ಆಗ್ರಪಟ್ಟವು ಹೋಗುವುದಿಲ್ಲ ಅವನ ಚೀಲ ಬರಿದೋ, ಹಿರಿದೋ-ಎನ್ನುವುದರ ಮೇಲೆಯೇ ಎಲ್ಲವೂ ಹೊಂದಿಕೊಂಡಿದೆ. ಎಲ್ಲ ಬಗೆಯ ಸಾಮಾಜಿಕ ಜೀವನದಲ್ಲಿಯೂ ಹಣವಿದ್ದಲ್ಲಿ ಹಿರಿತನ ಸಲ್ಲುತ್ತದೆ. ಅದರ ವರ್ಚಸ್ಸಿನಿಂದಲೇ, ಎಲ್ಲ ಕೆಲಸಗಳೂ ನಡೆಯಬೇಕು. ಬ್ರಹ್ಮಜ್ಞಾನದಿಂದ ಹಿಡಿದು, ಪರೋಪಕಾರದ ವರೆಗೂ ಅದರ ವ್ಯಾಪ್ತಿಯಿದೆ. ಮಂಗಳೂರಿನಂಥ ಊರಿನಲ್ಲಿ ಯಾವುದೇ ಒಂದು ವ್ಯಕ್ತಿ, ಮಾನ್ಯತೆಯನ್ನು ಗಳಿಸಬೇಕಾದರೆ—ಬರಿಯ ಹಣವಿದ್ದರೂ ಸಾಲದು. ಅತ ಗಣ್ಯಜಾತಿಯೊಂದರ ಪ್ರಮುಖ ಅಸಾಮಿಯಾಗಿರುವುದೂ ಅವಶ್ಯ. ಪ್ರಭುದೇವ ಮೊದಲನೆಯ ಲೆಕ್ಕಾಚಾರದಿಂದ ಸ್ಥಾನ ಶೂನ್ಯ, ಎರಡನೆಯ ಲೆಕ್ಕದಂತೆ, ಪ್ರಬಲ ಜಾತಿಯ ಗುಂಪಿಗೆ ಸೇರಿದವನು. ಆ ಒಂದು ಎಣಿಕೆಯಿಂದಲೇ ತನ್ನ ಆಸೆಗಳು ಫಲಿಸವು ಎಂಬುದನ್ನು ಬಲ್ಲನು. ಅವನನ್ನು ಮೀರಿಸುವ ಮಹಾನುಭಾವರು ಅವನ ಸಮಾಜದಲ್ಲಿದ್ದಾರೆ. ಆದುದರಿಂದ, ಜನ ತನ್ನನ್ನು ಮುಂದಾಳಾಗಿ ಆರಿಸುವ ಮೊದಲೇ, ತನಗೆ ಒಪ್ಪುವ ಜನಗಳನ್ನು ಕೂಡಿಸಿ, ಪಂಗಡ ಹೂಡುವ ತಯಾರಿಕೆ ಅವನದು. ಎಳೆಯನಾದರೂ, ಜನಸಾಮಾನ್ಯರ ಮೂಗುದಾರವನ್ನು ಹಿಡಿಯಲು ಬೇಕಾಗುವ ಎಲ್ಲ ಚಮತ್ಕೃತಿ ತಿಳಿದಿದ್ದಾನೆ. ತನ್ನ ವ್ಯಕ್ತಿತ್ವವನ್ನು ಜನತೆಯ ಮುಂದೆ ಒಪ್ಪಿಸಿ ತೋರಿಸುವುದಕ್ಕೆ ಅವನದೇ ಪತ್ರಿಕೆಯೂ ಇದೆ. ಆದರೂ ಸಾರ್ವಜನಿಕ ಜೀವನದಲ್ಲಿ ಒಮ್ಮೆಗೆ ಧುಮ್ಮಿಕ್ಕಲು ತನ್ನ ಕಿರಿತನದ ಕಲ್ಪನೆಯು ಅವನನ್ನು ಬಾಧಿಸುತ್ತದೆ. ತೀರ ಮುಂದಕ್ಕೆ ಹೋಗಲು ಹಣದ ಬಡತನವಿದೆ. ಆದುದರಿಂದಲೇ ಸಿಂಹನ ಹಿಂದೆ ಅಂಡಲೆಯುದ ನರಿ

ಯಂತೆ, ಡಾ। ನಂದರ ಹಿಂದೆ ಅಲೆಯುತ್ತಿರುತ್ತಾನೆ. ಅಂಥ ಆಶ್ರಯ ಪ್ರಾರಂಭದಲ್ಲಿಯಾದರೂ ತೀರ ಅವಶ್ಯವೆಂದು ಅವನ ನಂಬಿಕೆ. ಈಚೀಚೆಗೆ ನಂದರೊಡನೆ ಸ್ನೇಹ ಬೆಳೆಯಿಸಲು ಬಯಸುವವರಿಗೆ, ಅವನೊಬ್ಬ ರಾಯಭಾರಿಯೂ ಅಹುದು. ಡಾ। ಸಾಹೇಬರಿಗೆ ಅವನಂತಹ ಕೆಲವು ರಾಯಭಾರಿಗಳಿದ್ದಾರೆ. ಪತ್ರಿಕೆಯ ಬೆಂಬಲಕ್ಕಾಗಿ ಅವನು; ಉಳಿದ ಕೆಲಸಕ್ಕಾಗಿ ಇತರರು.

ಪ್ರಭುದೇವನ ಆತ್ಮವಿಶ್ವಾಸವೆಂಬುದು ಅನಂತವಾದದ್ದು. ಒಂದಲ್ಲ ಒಂದು ದಿನ, ತಾನು ನವಜವಾನರ ಮುಖಂಡನಾಗಿ ಮೆರೆಯಬೇಕೆಂಬುದು ಅವನ ಸಂಕಲ್ಪ. ಈಗಾಗಲೇ ಅವನ ವಾಗ್ಝರಿಗೆ ಮರುಳಾಗಿ ಎಷ್ಟೋ ಜನ ಕಾಲೇಜು ವಿದ್ಯಾರ್ಥಿಗಳು, ಅವನಲ್ಲಿಗೆ ಬಂದು ಹೋಗುತ್ತಾರೆ. ಆತ ಯಾವ ಗಳಿಗೆಯಲ್ಲಿ ಬೇಕಾದರೂ ಕಾಫಿ ಹೋಟೇಲಿನಲ್ಲಿ ಕಾಲಿರಿಸಲಿ, ಅಲ್ಲಿನ ಹತ್ತು ಮಂದಿ ತರುಣ ಪೂಜಾರಿಗಳಿಗೆ, ಉಪದೇಶ ಮಾಡುತ್ತ, ಅವರಿಂದಲೇ ಬಿಲ್ಲನ್ನು ಕಕ್ಕಿಸಿ ಹೊರಟು ಬರುವಂಥ ಶಕ್ತಿಯಿದೆ. "ನಾಳಿನ ಹಿಂದುಸ್ಥಾನಕ್ಕೆ, ನಮ್ಮಂತಹ ತರುಣರೇ ಜೀವಾಳ" ಎಂದು ಅವನು ಸಾರುವವನು. ಆತ ನವಯುವಕರ ಮುಂದಾಳುತನಕ್ಕೆ ಒಪ್ಪುವ ಉಡುಗೆ ತೊಡುಗೆಗಳನ್ನು ಧರಿಸುತ್ತಾನೆ. ಉಡಲು ಖಾದಿಯ ಸುರುವಾಲಿದೆ; ಮೈಗೆ ತೆಳ್ಳಗಿನ ಮುಸಲೀನ್ ಷರಾಯಿ. ಅದೂ ಖಾದಿಯದೇ. ಅದರ ಮೇಲೆ ಜವಾಹಿರ ಜರ್ಸಿ. ತಲೆಯಲ್ಲಿ ಹೊಸತಾಗಿ ಮಡಿಯಾಗಿ ಬಂದ ಬಿಳಿಯ ಟೋಪಿ. ಅವನನ್ನು ಕಂಡವರು ಇವನು 'ಇಮ್ಮಡಿ ಜವಾಹಿರ'ನೆಂದರೂ ಸಲ್ಲಬೇಕು. ಆತ ಮಾತಿಗೆ ನಿಂತರೆ—ನಮ್ಮೂರಿನ ಮುಂದಾಳುಗಳೆಲ್ಲ ಈ ಗಜದ ಮುಂದೆ ಅಜಗಳು. ಬಲು ಧೈರ್ಯವಾಗಿ ಅಂದು ಬಿಡುತ್ತಾನೆ—"ನನಗೆ ಈಗೀಗ ಜವಾಹರಲಾಲರ ಮರ್ಜಿ ಸರಿ ಕಾಣುವುದಿಲ್ಲ. ಅವರು ಈ ಗಾಂಧೀ ಮುದುಕನಿಗೆ ಶರಣುಹೋಗಿ ತಮ್ಮ ವ್ಯಕ್ತಿತ್ವವನ್ನು ಕಳೆದು ಕೊಂಡಿದ್ದಾರೆ" ಎಂದು ಹಲವು ಬಾರಿ ಆತ ರೇಗಿದ್ದೂ ಉಂಟು. ಒಂದೆರಡು ಬಾರಿ ಇಂಥ ಉಪದೇಶವನ್ನು ಅವರಿಗೇನೇ ಬರೆದು ತಿಳಿಸಿ, ಉತ್ತರವನ್ನು ಕಾದು, ಅದು ಬಾರದುದರಿಂದ ಇನ್ನಷ್ಟು ಸಿಟ್ಟುಗೊಂಡುದೂ ಉಂಟು. ಒಮ್ಮೆ ಸ್ವರಾಜ್ಯ ಬಂತಾದರೆ, ಅನಂತರ ತರುಣರು ಒಕ್ಕೂಟವಾಗಿ ಸೇರಿ, ಗಾಂಧೀಜಿಯವರನ್ನು ಪದಚ್ಯು

ತರನ್ನಾಗಿ ಮಾಡಬೇಕೆಂದು ಅವನ ತೀರ್ಮಾನ. 'ಹಾಗೆ ಮಾಡದೆ ಹೋದರೆ ಕಾರ್ಲ್ ಮಾರ್ಕ್ಸನ ತತ್ವಗಳನ್ನು ಪ್ರಚಾರಮಾಡಬರುವುದಿಲ್ಲ, ಎಂದು ತಿಳಿಯುತ್ತಾನೆ. "ಗಾಂಧೀಜಿ ಶ್ರೀಮಂತರ ಕೈಯ ಸೂತ್ರದ ಗೊಂಬೆ" ಅನ್ನುತ್ತಾನೆ. ಆದರೂ ಅವನಿಗೆ ಕಾಂಗ್ರೆಸ್ಸಿನಲ್ಲಿ ತುಂಬಾ ಮನ್ನಣೆ ಯಿದೆ." "ಈ ಬಾರಿಯ ರಾಷ್ಟ್ರೀಯ ಚಳವಳದಲ್ಲಿ ಹೊಸ ಹುರುಪನ್ನು ದೇಶದಲ್ಲಿ ತುಂಬಿಸಲೇಬೇಕು. ಗ್ರಾಮ ಪಂಚಾಯತುಗಳಿಂದ ಹಿಡಿದು, ತುತ್ತುದಿಯ ಕೌನ್ಸಿಲ್ ಒಫ್ ಸ್ಟೇಟ್ ತನಕ ನಾವು ನಮ್ಮ ಸ್ವಾಧೀನ ಗೊಳಿಸಿ ಕೊಳ್ಳಬೇಕು" ಎಂದು ಹೇಳುತ್ತಾನೆ. ಆ ತರ್ಕಕ್ಕೆ ಡಾ| ನಂದ ರವರ ಬೆಂಬಲ ದೊರಕಿದೆ. "ಈ ಸಂದರ್ಭದಲ್ಲಿ ಒಂದು ಜಿಲ್ಲಾ ಬೋರ್ಡು ಮೆಂಬರಿಕೆಯನ್ನಾದರೂ ತನ್ನ ಕಿಸೆಗೆ ತುರುಕಿಸಿ ಕೊಳ್ಳಬಾರದೇ" ಎಂದು ಕೆಲವೊಮ್ಮೆ ಯೋಚಿಸುತ್ತಿದ್ದಾನೆ.

ಒಮ್ಮೊಮ್ಮೆ ಅವನ ಮನಸ್ಸು ವಸ್ತು ಪ್ರಪಂಚದ ನಿಜವಾದ ತಿಳಿ ವಿನ ನೆಲಗಟ್ಟಿನ ಮೇಲೆ ಬಂದು ನಿಲ್ಲುತ್ತದೆ. "ಕನ್ನಡ ದೇಶದ ಒಬ್ಬ ಬಡ ಸಂಪಾದಕನಿಗೆ, ಏನು ಮರ್ಯಾದೆ ಬಂದೀತು"? ಎಂದು ಯೋಚ ನಾಪರನಾಗುತ್ತಾನೆ. ಡಾ| ನಂದರು ಈಗಾಗಲೇ ಸ್ಥಾಪಿಸಿರುವ ಹತ್ತೆಂಟು ಕಾರ್ಮಿಕ ಸಂಸ್ಥೆಗಳಲ್ಲಿ, ತಾನೂ ಒಬ್ಬ ಡೈರೆಕ್ಟರ್‌ನಾದರೆ ಹೇಗೆ? ಆಗ ಹಲವಾರು ಓಟುಗಳು ತನ್ನ ಆಧೀನವಾದಾವು-ಎಂದು ಯೋಚಿಸುತ್ತಾನೆ. ಅದಕ್ಕೂ ಸುಲಭವಾಗಿ, ತಾನು ಕಾರ್ಮಿಕರ ಮುಂದಾಳು ಆಗಬಹುದ ಲ್ಲವೇ?—ಎಂದೂ ಮನಸ್ಸು ಹೇಳುತ್ತದೆ. ಅವನ ಮನಸ್ಸು—ಅನುಕೂಲ ಕ್ಕಾಗಿ ಶ್ರೀಮಂತಿಕೆಯನ್ನು ಬಯಸಿದಂತೆ, ಸುಲಭ ಮುಂದಾಳುತನಕ್ಕಾಗಿ ಕಾರ್ಮಿಕರ ಹಿತವನ್ನೂ ಬಯಸುತ್ತದೆ. ಈ ಎರಡನ್ನು ಒಂದೇ ಬಾರಿಗೆ ನುಂಗುವ ಮನಸ್ಸು ಅವನದು. ಮೊನ್ನೆ ಮೊನ್ನೆ, ಕಾಂಗ್ರೆಸ್ಸು—ಒಂದು ಕೋಟಿ ಸದಸ್ಯರನ್ನು ಕೊಡಿಸಬೇಕೆಂದು ಸಾರಿದೆ. ಅದರಿಂದ ಅವನಿಗೆ ಹೆಚ್ಚಿನ ಆಸೆಯುಂಟಾಗಿದೆ. ತನ್ನ ಪತ್ರಿಕೆಯ ಪರವಾಗಿ, ಮೊನ್ನೆ ಜರುಗಿದ ಕರ್ಣಾಟಕ ರಾಷ್ಟ್ರೀಯ ಪರಿಷತ್ತಿಗೆ ಹೋದವನು, ಅಲ್ಲಿಯ ಜನಗಳನ್ನು ಕಂಡು, 'ಅವರೆಲ್ಲರಿಗಿಂತ ನಾನೇ ಹಿರಿಯ ಮುಖಂಡನಾಗಿ ಮೇರೆದೇನು!' ಎಂಬ ವಿಶ್ವಾಸವನ್ನು ತಾಳಿಬಂದಿದ್ದಾನೆ.

ಅವನ ತಲೆಯ ತುಂಬ, ಇಂಥ ನೂರಾರು ಕನಸುಗಳಿವೆ. ಒಮ್ಮೊಮ್ಮೆ ಮೇಜಿನ ಮೇಲೆ ಕಾಲಿರಿಸಿಕೊಂಡು, ತುಟಿಯಲ್ಲಿ ಹೊಗೆಬತ್ತಿಯನ್ನು ಕಚ್ಚಿಕೊಂಡು, ಉಸಿರಾಡುತ್ತ, ಹೊಗೆಯು ಅಂತರಿಕ್ಷದಲ್ಲಿ ಸುರುಳಿ ಸುತ್ತಿ, ಮೇಲೇರುವಾಗ ಅವನ ಮನಸ್ಸು ಅದೇ ತೆರನಾಗಿ, ಸುತ್ತಿ ಸುತ್ತಿ, ಆಸೆಯ ನಭೋ ಮಂಡಲವನ್ನು ಏರುತ್ತದೆ. 'ತನ್ನ ದೇಶವು ಜಗತ್ತಿನಲ್ಲಿಯೇ ಮಾನ್ಯತೆಯನ್ನು ಪಡೆಯಲು ಏನು ಮಾಡಬೇಕು?' 'ನಮ್ಮ ಮುನ್ನಡೆಗೆ ಯಾರು ವೈರಿಗಳು?' ಎಂದು ಯೋಚಿಸುತ್ತಿರುವ ಇಂಥ ವೇಳೆಗಳಲ್ಲಿ ಮಾನಸಿಕ ದ್ವಂದ್ವಕ್ಕೆ ನಿಂತು ಕಾಳಗವೆಸಗುತ್ತಾನೆ. ಮರುದಿನವೇ ಅವನ ಮಂಗಳೂರು ಮಿರರಿನಲ್ಲಿ "ಜಂಗೀ ಕುಸ್ತಿ— ಜಗತ್ತಿನ ಜಗಜಟ್ಟಿಗಳೊಡನೆ" ಎಂಬ ಲೇಖಮಾಲೆ ಉದಯವಾಗುತ್ತದೆ. ಇನ್ನೊಮ್ಮೆ ಗಾಂಧೀಜಿಯವರಿಗೂ ಇವನಿಗೂ ಮಾನಸಿಕ ದ್ವಂದ್ವವಾಗುತ್ತದೆ. "ನಿಮ್ಮ ಹೋರಾಟದ ನೀತಿ ಶೀಲಾಯುಗಕ್ಕೆ ಒಪ್ಪುವಂಥಾದ್ದು" ಎಂದು ಅವರಿಗೆ ಇವನು ತನ್ನ ಖಂಡಿತವಾದ ತೀರ್ಮಾನವನ್ನು ಹೇಳುತ್ತಾನೆ. ಇನ್ನೊಮ್ಮೆ ತನ್ನ ಪತ್ರಿಕೆಯ ಲೇಖನದ ಬಿಲ್ಗಣೆಗಳನ್ನು ದೇಶದ ಶ್ರೀಮಂತರಾದ, ಬಿರ್ಲಾ, ತಾತಾ, ಸಿಂಘಾನಿಯ, ಮೊದಲಾದವರುಗಳ ಮೇಲೆ ಎಸೆಯುತ್ತಾನೆ. ಅವರೆಲ್ಲರಿಗೂ ಬಹಿರಂಗ ಪತ್ರಗಳೇ! ಅವನ ಬಹಿರಂಗ ಪತ್ರದ ಯುದ್ಧಾಮಂತ್ರಣವು ಬಾಲ್ಡ್ವಿನ್, ಮೆಕ್‌ಡೊನಾಲ್ಡ್, ಅರ್ವಿನ್, ಇಂಥ ಯಾರಿಗೂ ತಪ್ಪಿದ್ದಲ್ಲ. ಅವನ ಪತ್ರಿಕೆಯು, ವಾರಕ್ಕೆ ನೂರು ಪ್ರತಿ ಕಾಣದೆ ಹೋದರೂ, ತನ್ನ ಬರವಣಿಗೆಯ ರೀತಿಯನ್ನು ನೋಡಿ, ಸಾವಿರಾರು ಜನ ಓದಿ, ತಲೆತೂಗಿದಂತೆ ಎಣಿಸಿಕೊಳ್ಳುತ್ತಾನೆ. ಅಂಥ ಸಮಯಗಳಲ್ಲಿ ಭೇಟಿಯಾಗುವ ತರುಣ ಆರಾಧಕರೊಡನೆ, ತನ್ನ "ಚೆಲೇಂಜಿನ" ವಿಷಯವಾಗಿ 'ಉದ್ಘೋಷಣೆ' ಮಾಡುತ್ತಾನೆ. "ಮಿ! ಸಾಣೆಕಲ್, ಹೇಗಿದೆ, ಈ ಬಾರಿಯ ನನ್ನ ರಾಮಬಾಣ?" ಎನ್ನುತ್ತಾನೆ. ರಾಜಕೀಯದಿಂದ ಮನಸ್ಸು ಬೇಸರಿಸಿ ಒಮ್ಮೆಗೆ ಹೊರಳಿದರೆ ಮುಗಿಯಿತು— ಅವನ ಬಹಿರಂಗ ಬಾಣಗಳು ಮಠಾಧಿಪರ ಕಡೆಗೆ ಚಿಮ್ಮುತ್ತವೆ. ಮೊದಲನೆಯ ಬಿಲ್ಗಣೆಯೇ ಶಾಸ್ತ್ರಕಾರನಾದ ಮನುವಿಗೆ. ಅದರ ಬೆನ್ನ ಹಿಂದೆ ರಾಮಕೃಷ್ಣ, ವಿವೇಕಾನಂದರಿಗೆ. ಆತ ಚಿಕ್ಕ ಪುಟ್ಟ ಸಾಧು ಸಂತರ ಕಿವಿಯನ್ನು ಹಿಂಡಿದುದಕ್ಕಂತು ಮಿತಿಯೇ ಇಲ್ಲ. "ಭರತಖಂಡವು ಉದ್ಧಾರ

ವಾಗಲು, ಮಠಗಳನ್ನು 'ಲಿಕ್ವಿಡೇಟ್' ಮಾಡದೆ ಸಾಧ್ಯವೇ ಇಲ್ಲ" ಎಂದು ಸಾರುತ್ತಾನೆ. ಹಾಗೆಂದು ಅವನ ಅಂತಃಕರಣವು ಕ್ರೂರವಾಗಿದೆ-ಎಂದು ತಿಳಿಯಬೇಡಿ. ಇತ್ತೀಚೆಗೆ ಡಾ| ನಂದರವರು, ಶ್ರೀಮದ್ ಜಯಭಾರತೀ ಪರಮಹಂಸ ಪರಿವ್ರಾಜಕಾಚಾರ್ಯ ಸ್ವಾಮಿಜೀಯವರಿಗೆ ಅರ್ಪಿಸಿದ ಮಾನಪತ್ರವನ್ನು, ಆತ ತನ್ನ ಪತ್ರಿಕೆಯಲ್ಲಿಯೂ ಪ್ರಕಟಿಸಿದ್ದಾನೆ. ಆ ಪತ್ರವನ್ನು ಬರೆದುಕೊಟ್ಟವನೂ ಅವನೇ. ಸ್ವಾಮಿಜೀಯವರ ಭಾವ ಚಿತ್ರವನ್ನು ಪತ್ರಿಕೆಯಲ್ಲಿ ಪ್ರಕಟಿಸಿದ್ದಾನೆ. ಪ್ರಾಯಶಃ ಮಗ್ಗುಲಲ್ಲಿ, ತನ್ನ ಮತ್ತು ಡಾ| ನಂದರವರ ಬಿಂಬಗಳು ಅದರಲ್ಲಿ ಮೂಡಿದ್ದರಿಂದಲೋ ಏನೋ.

ಕೆಲವು ವಾರವೋ, ತಿಂಗಳೋ, ಹೀಗೆ ಅವನ ಮನಸ್ಸು ವಿಶಾಲ ಜಗತ್ತಿನ ಭಾವನಾ ರಾಜ್ಯಕ್ಕೆ ಓಡಿತೆಂದರೆ, ಮರುದಿನ ಮುನ್ಸಿಪಲ್ ರಾಜ್ಯಕ್ಕೆ ಅದು ಕಾಲಿರಿಸುವುದು ಖಂಡಿತ. "ಧರ್ಮಾಸ್ಪತ್ರೆಗಳ ದಾರಿದ್ರ್ಯ" "ಡಸ್ಟ್‌ಬಿನ್ನುಗಳ ದುರ್ಗತಿ" "ತೋಟಗಳ ಮೇಲೆ ಹತೋಟಿ" ಎಂದು ಒಂದೊಂದರ ಮೇಲೆ ಒಂದೊಂದಾಗಿ ಅಗ್ರ ಲೇಖಗಳನ್ನು ಬರೆಯುತ್ತಾನೆ. ಅಂತು ನಾಲ್ಕು ಜನರನ್ನು ತಾನು ಚೆನ್ನಾಗಿ ಹಳಿದು ಬರೆದರೆ, ಪತ್ರಿಕೆಯನ್ನು ಜನ ಓದುತ್ತಾರೆ ಎಂಬುದನ್ನು ಆತ ತಿಳಿದು ಕೊಂಡಿದ್ದಾನೆ. ಹಣಕೊಟ್ಟು ಅವನ ಪತ್ರಿಕೆಯನ್ನು ಕೊಳ್ಳದವರೂ, ಇತರರಿಂದ ಕೇಳಿಕೊಂಡು ಓದುತ್ತಾರೆ. ಕೆಲವೊಂದು ಮಂದಿ ಅವನ ಕಚೇರಿಗೇನೇ ಬಂದು, 'ಮಿ| ನಿಮ್ಮ ಆ ಲೇಖವನ್ನು ಓದಿಯೇ ಇಲ್ಲ. ಅದು ಇದೆಯೋ' ಎಂದು ಕೇಳುತ್ತಾರೆ. ಈತ ಉದಾರವಾಗಿ, ಆ ಪತ್ರಿಕೆಗಳ ಕಟ್ಟನ್ನೇ ಅವರ ಮುಂದೆ ಇರಿಸಿ, ತನ್ನ ಹೊಟ್ಟೆಯಲ್ಲಿ ಹುದುಗಿರುವ ನೂರಾರು ಸೂಚನೆಗಳನ್ನು ಹೊರಗೆಡವುತ್ತಾನೆ.

ಬಂದ ಜನರು ಅವನ ಎದುರಿಗಾದರೂ "mirror is mirror" ಎಂದು ಅಂದು ಹೋದರೆ, ತಾನು ಎಷ್ಟೋ ಕಾರ್ಯಸಾಧನೆ ಮಾಡಿದ್ದೇನೆ- ಎಂಬ ಸಂತೋಷವುಂಟಾಗುತ್ತದೆ ಪ್ರಭುದೇವನಿಗೆ.

* * * *

ಅವನೀಗ ಪ್ರತ್ಯಕ್ಷ ಕಾರ್ಯಕ್ಕೆ ಧುಮುಕುವವನಿದ್ದಾನೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಒಂದು ವಿಶೇಷವಾದ "ಬಿರುಗಾಳಿ ಭ್ರಮಣ" ಮಾಡು

ವವನಿದ್ದಾನೆ. 'ಬಿರುಗಾಳಿ ಭ್ರಮಣ'ವೆಂದೇನೆ ಅಗ್ರಲೇಖವನ್ನು ಬರೆದು, ಕಂಸದಲ್ಲಿ, whirl-wind tour, ಎಂದು ತರ್ಜುಮಿಸಿ, ಕನ್ನಡ ನುಡಿ ಕಟ್ಟನ್ನು ಬೆಳೆಯಿಸಿ ಬಿಟ್ಟಿದ್ದಾನೆ.

ಡಾ। ನಂದರವರ ಮೋಟರು ಕಾರಿದೆ; "ಕರ್ಣನ ಬಳಿಯ ಶಲ್ಯ ನಂತೆ, ಅರ್ಜುನನ ಮುಂದಿನ ಕೃಷ್ಣನಂತೆ" ಈತ ಸಾರಥಿಯಾಗಿ ಕಾರ್ಯ ರಂಗಕ್ಕೆ ಇಳಿದಿದ್ದಾನೆ. ಉದ್ದೇಶ—ಅವನ ಅಗ್ರಲೇಖದಲ್ಲಿ ಬರೆದಂತೆ, ದಕ್ಷಿಣ ಕನ್ನಡದಲ್ಲಿ ಕನಿಷ್ಠ ಐದು ಲಕ್ಷ ಕಾಂಗ್ರೆಸ್ಸು ಸದಸ್ಯರನ್ನು ಕೂಡಿ ಸುವುದರ ಸಲುವಾಗಿ. ಈ ಕೆಲಸಕ್ಕಾಗಿ ಡಾ। ನಂದರವರೂ ಅವನೂ ಬಂದು ಸುಮುಹೂರ್ತದಲ್ಲಿ ಹೊರಟಾಯಿತು. ದಾರಿಯಲ್ಲಿ ಹೋಗುತ್ತ ಅವನ ಪತ್ರಿಕೆಯ ಲೇಖವನ್ನು ಓದುತ್ತಿದ್ದ ಡಾ। ನಂದರು "ಅಹುದೇ ಪ್ರಭುದೇವ, ನಮ್ಮ ಜಿಲ್ಲೆಯ ಜನ ಸಂಖ್ಯೆ ಹದಿನೆರಡು ಲಕ್ಷವಲ್ಲವೇ" ಎಂದು ಕೇಳಿದರು.

"ಯಾಕೆ? ನಾನು 'ಐದು ಲಕ್ಷ ಸದಸ್ಯರು' ಎಂದುದು ತಪ್ಪಾ ಯಿತೇ? ಅದರಲ್ಲೇನು? ಅಷ್ಟು ನಮ್ಮ ಗುರಿಯಾಗಿರಬೇಕು. ಹಾಗಿದ್ದರೆ ಒಂದು ಸೊನ್ನೆ ಹೋಗಿ ಐವತ್ತು ಸಾವಿರ ಜನರಾದರೂ ಸಿಗಬಹುದಲ್ಲ. ಆತನ ಈ ಆಶೆಯೂ ನಿರಾಶೆಯಾಗಲಿಲ್ಲ. ೧೯೨೧ ರ ರಾಷ್ಟ್ರೀಯ ಕುಂಭ ಮೇಳದಲ್ಲಿ ಕಾಣಿಸದಷ್ಟು ಜನ ಸಂಖ್ಯೆಯು, ಈಗ ಅವರ ಉಪನ್ಯಾಸ ಕಾಲ ದಲ್ಲಿ ಬಂದು ಕಲೆಯುತ್ತಿದ್ದಾರೆ. ಕಳೆದ ಅಸಹಕಾರ ಚಳವಳಕ್ಕೆ ಕಿವಿ ಗೊಡದವರು ಈಗ ಕಿವಿಗೊಡುತ್ತಿದ್ದಾರೆ. ಈಗ ಅವರು ಸಂಚಾರಕ್ಕೆ ಹೊರ ಡುವ ಮುನ್ನ, ಪ್ರಭುದೇವನು ಪೂರ್ವಭಾವಿಯಾಗಿ, ಜಿಲ್ಲೆಯ ತನ್ನ ಅನೇಕ ತರುಣ ಮಿತ್ರರಿಗೆ ಪತ್ರಗಳನ್ನು ಬರೆದು, ತನ್ನ ಮತ್ತು ಡಾ। ನಂದರವರ ಅಭೂತಪೂರ್ವ ಸ್ವಾಗತಕ್ಕೆ ಏರ್ಪಾಡು ಮಾಡಿದ್ದಾನೆ. ಶಿರೂ ರಿನಿಂದ ಹೊಸದುರ್ಗದ ತನಕ, ಮಂಗೂಳೂರಿನಿಂದ ಚಾರ್ಮಾ ಡಿಯ ತನಕ—ರಾಯರ ಮೋಟರು ತ್ರಿವರ್ಣರಂಜಿತ ಪತಾಕೆಯನ್ನು ಹೊತ್ತು ಓಡಿತು. ಅಂಥ ವೈಭವದ ಸ್ವಾಗತಗಳೇ ಅವರಿಗೆ ದೊರೆತಿವೆ. ಸ್ವಾಗತಕ್ಕೆ ಮೇಳವಿಸಿದವರಲ್ಲಿ— ಹಲವರು — ಹಲವರೇನು — ಬಹು ಸಂಖ್ಯಾಕರು, ತರುಣರು. ಅವರೊಡನೆ ನಾಲ್ಕಾರು ಭಾಷೆಗಳಲ್ಲಿ ಪ್ರಭು ದೇವ ಆಪ್ತ ವಚನಗಳನ್ನು ಆಡಿ, ಅವರನ್ನು ಹುರಿದುಂಬಿಸುತ್ತಿದ್ದಾನೆ.

ಅವರ ಒಂದು ತಿಂಗಳ ಸಂಚಾರದ ಕಾರ್ಯಕ್ರಮದಲ್ಲಿ, ಅವರಿಗೆ ದಿಗ್ವಿಜಯವೇ ಆಯಿತೆಂದರೂ ತಪ್ಪಲ್ಲ. ತಮ್ಮ ಜಿಲ್ಲೆಯಲ್ಲಿ ಹುಟ್ಟಿ, ಅಳಿದ ನೂರಾರು ಕಾಂಗ್ರೆಸ್ಸು ಕಮಿಟಿಗಳು ಪುನರುಜ್ಜೀವನಗೊಂಡುವು. ಪ್ರತಿಯೊಂದು ಪೇಟೆಯಲ್ಲಿಯೂ, ಒಂದೊಂದು ಸಮಿತಿಯು ಉದ್ಭವಿಸಿತು. "ಹಳ್ಳಿಯ ಪ್ರಾಂತಗಳನ್ನು ನಾವು ನೋಡಬೇಕಾಗಿಲ್ಲ. ಮೋಟರು ಚಲಿಸದ ಊರುಗಳಲ್ಲಿ ಕಾರ್ಯಕ್ರಮಗಳನ್ನಿಟ್ಟುಕೊಂಡರೆ ಇಷ್ಟೊಂದು ಸದಸ್ಯರನ್ನು ಕೂಡಿಸಲು ಆರು ತಿಂಗಳು ಬೇಕು" ಎಂದು ಆತ ನುಡಿದುದರಿಂದ —ಸಮಯಾಭಾವಪೀಡಿತರಾದ ಡಾ॥ ನಂದರವರೂ ಒಪ್ಪಿದರು. ಒಟ್ಟಿನಲ್ಲಿ ಎಲ್ಲಿ ನೋಡಿದರೂ ಅಲ್ಲಿ, ನವಯುವಕರಿಂದ ತುಂಬಿದ ರಾಷ್ಟ್ರೀಯ ಸಂಸ್ಥೆಗಳು ಜಿಲ್ಲೆಯಲ್ಲಿ ಜನ್ಮತಾಳಿದುವು.

ಮುಂದೆ ಬರುವುದೇ ಜಿಲ್ಲಾ ಬೋರ್ಡಿನ ಚುನಾವಣೆ. ಚುನಾವಣೆಯ ಕಾಲಕ್ಕೆ ಕಾಂಗ್ರೆಸ್ಸು ಸ್ಪರ್ಧಿಸಬೇಕೆಂಬ ತೀರ್ಮಾನಮಾಡಿತು. ಆಗ, ನೂರಾರು ಹಳೆಯ ಹುಲಿಗಳು ಕಣ್ತೆರೆದರು. ಕಾಂಗ್ರೆಸ್ಸು ಸದಸ್ಯತನದ ಬಗ್ಗೆ ಉದಾಸೀನರಾಗಿ ಕುಳಿತ, ಅಂತಹ ಹಲವು ಹಿರಿಯರನ್ನು ಬಿಟ್ಟೇನೆ, ಈ ಎಲ್ಲ ಸಮಿತಿಗಳು ನಿರ್ಮಾಣವಾಗಿದ್ದುವು. ಅನೇಕರು "ನಮ್ಮನ್ನು ಜಿಲ್ಲಾ ಬೋರ್ಡಿನ ಸೇವೆಗಾಗಿ ಸ್ವೀಕರಿಸಿ" ಎಂದು ಮುಂದುವರಿದು ಬಂದರೆ, ಆಗ ಪ್ರಮುಖ ಸೂತ್ರಧಾರಿಗಳಿಗೆ ಅವರನ್ನು ನಿರಾಕರಿಸುವ ಧೈರ್ಯ ಉಂಟಾಯಿತು. ಪಾಪ! "ನಾವು ನಿದ್ರಿಸಿದ ಗಳಿಗೆಯಲ್ಲಿ ಇವರು ಇಂಥ ಹಂಚಿಕೆಯನ್ನು ತೆಗೆದರಲ್ಲ" ಎಂದು ಈ ತನಕ ಬೋರ್ಡಿನ ಕುರ್ಚಿಗಳಿಗೆ ಅಂಟಿದ್ದ ಸದಸ್ಯರು ಭ್ರಾಂತರಾದರು. "ಎಳೆಯ ಹುಡುಗರ ಮುಂದೆ ತಾವು ನಾಮಪತ್ರ ಹಾಕಿ, ಸ್ಪರ್ಧಿಸುವಂತಹ ಕಾಲ ಬಂದಿತೇ?" ಎಂದು ಬೇಗುದಿಗೊಂಡರು.

ಡಾ॥ ನಂದರು ಜಿಲ್ಲೆಯ ಮುಖ್ಯ ವ್ಯಕ್ತಿಗಳಲ್ಲಿ ಒಬ್ಬರಾದರು. ಅವರ ಇಬ್ಬರು ಮಹಾಕಾರ್ಯದರ್ಶಿಗಳಲ್ಲಿ—ಶ್ರೀಯುತ ಪ್ರಭುದೇವನು ಒಬ್ಬ. ಇದರಿಂದ ಅನ್ಯ ಮುತ್ಸದ್ದಿಗಳ ಅಸೂಯೆ ಕೆರಳುತ್ತ ಬಂದಿತು. ಮೇಲಿನ ತನಕ ದೂರು ಹೋಯಿತು. "ಈ ಸಂಸ್ಥೆಗಳಲ್ಲಿ ಗ್ರಾಮದ ಪ್ರತಿನಿಧಿಗಳೇ ಇಲ್ಲ; ಒಬ್ಬಿಬ್ಬರು ಜಾತೀಯ ಮುಖಂಡರ ಒಲೆಯಲ್ಲಿ ಕಾಂಗ್ರೆಸ್ಸು ಬಿದ್ದಿದೆ"

ಎಂಬ ವಿರುದ್ಧ ಪ್ರಚಾರವೂ ನಡೆಯಿತು. ನಂದರವರ ತಂತ್ರಗಳಿಗೆ ಪ್ರತಿ ತಂತ್ರಗಳೂ ಹೂಡಲ್ಪಟ್ಟುವು.

* * * * *

ಜಿಲ್ಲೆಯಲ್ಲಿ ಚುನಾವಣೆಯ ಕಾಲ ಬರುತ್ತಲೇ—ಕಾಂಗ್ರೆಸ್ ಪತಾಕೆಯನ್ನು ಹಿಡಿದು "ಇಂಥವರಿಗೇನೇ ಓಟು ಕೊಡಿ" ಎಂದು ಸಾರಿದಾಗ, "ತಮಗೆ ಕಂಡವರಿಗೇನೆ ಓಟುಕೊಡುವ" ಸಂಭವವೂ ಜನರಲ್ಲಿ ಉಂಟಾಗ ಬಹುದಾಯಿತು. ಡಾ| ನಂದರೂ, ಪ್ರಭುದೇವರೂ ಎತ್ತಿ ಹಿಡಿದ ಹುರಿಯಾಳುಗಳಿಗೆ ಸಾರ್ವಜನಿಕರ ಓಟಿನ ಬೆಂಬಲ ಸಿಗುವಂತೆ ಕಾಣಿಸಲಿಲ್ಲ. ಆದರಿಂದ ಅವರು ಬೇರೆಯೇ ತಂತ್ರವನ್ನು ಹೂಡಿದರು. ಅನೇಕ ಸ್ವತಂತ್ರ ಮುಂದಾಳುಗಳನ್ನು ತಮ್ಮ ಪಂಗಡಕ್ಕೆ ಸೆಳೆದುಕೊಂಡರು. ಅಲ್ಪಾಕು ಕೋಟಿನವರನ್ನು, 1002ನೇ ನಂಬರ್ ಮಲ್ಲಿನವರನ್ನು-ಕಾಂಗ್ರೆಸ್ಸು ತನ್ನ ಪ್ರತಿನಿಧಿಯಾಗಿ ಚುನಾವಣೆಗೆ ನಿಲ್ಲಿಸಿ ಕೊನೆಗೂ ಗೆದ್ದು ಬಂದಿತು.

ಮಿರರಿನ ಪ್ರಭುದೇವನು, "ಕಾಂಗ್ರೆಸ್ಸಿನ ಮಹಾ ವಿಜಯ" ಎಂದು ಅಗ್ರಲೇಖವನ್ನು ಬರೆದಾಯಿತು. ಆದರೂ ನಂದರಂತೆ ಅವನಿಗೂ ಈ ವಿಷಯದಲ್ಲಿ ಹೊಟ್ಟೆಯ ಕಡಿತವಿತ್ತು. ಅವನೂ ಪ್ರತಿನಿಧಿಯಾಗಿ ನಾಮ ಪತ್ರವನ್ನು ಹಾಕಿದ್ದ. ಈಗ ಆ ಪ್ರಾತಿನಿಧ್ಯವನ್ನು ಮಾತಿಲ್ಲದೆ, ಮರ್ಯಾದೆಗಾಗಿ ಕಾರ್ಕಳದ ಶಾಂತಿರಾಜ ಹೆಗ್ಗಡೆಯವರಿಗೆ ದಾನಮಾಡಬೇಕಾಯಿತು. ಜಿಲ್ಲಾ ಅಧ್ಯಕ್ಷ ಪದವಿಗೆ ಹವಣಿಸಿದಂಥ ಡಾ| ನಂದರವರು ತೆರೆಯ ಹಿಂದೆಯೇ ನಿಲ್ಲಲು ಬಯಸಿದರು. "ಮುಂದೆ ಬಿದ್ದ ಮೇಲೆ ಸೋಲುವಂತಿರಬಾರದು" ಎಂಬ ತತ್ವ ಅವರದ್ದು. ಅಂದಿನಿಂದ ಪ್ರಭುದೇವನಿಗೆ, ಶ್ರೀಮಂತರ, ಜಮೀನುದಾರರುಗಳ ವಿಷಯದಲ್ಲಿ ಕೋಪವುಂಟಾಯಿತು. "ಈ ನಮ್ಮ ಜನಕ್ಕೆ ರಾಷ್ಟ್ರೀಯತ್ವದ ತತ್ವವೇ ತಿಳಿದಿಲ್ಲ" ಎಂದು ಹೇಳಿದನು. "ಜನ ಎಲ್ಲಿಯ ತನಕ ಚುನಾವಣೆಯಲ್ಲಿ—ಹುಟ್ಟುವಳಿ, ಸಾಲ ಕೊಡುವ ಶಕ್ತಿ, ಇವನ್ನೇ ನೋಡಿ ಮತ ಕೊಡುತ್ತಾರೆಯೋ, ಅಲ್ಲಿನ ತನಕ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಗಲಾರದು." ಎಂದು ಹೇಳುವಂತಾಯಿತು. ತಾನು ಸೋತೆನೆಂದೂ ಆತ ಒಪ್ಪಲಾರನು. ಆಧರೆ ಚುನಾವಣೆಯ ಕಾಲದಲ್ಲಿ ಮಾತ್ರ, ಇನ್ನು ಮುಂದೆ ಜಿಲ್ಲೆಯ ಮಹಾಜನರನ್ನು, ಆತ ನಂಬಲಾರ. ಚುನಾವಣೆಯಲ್ಲಿ ಸ್ಪರ್ಧೆ ನಡೆದ ಊರುಗಳಲ್ಲಿಯೂ ಆತ ನೋಡಿ

ದ್ದಾನೆ; ಹೆಸರೇನೋ ಕಾಂಗ್ರೆಸ್ಸಿನದು-ತಲೆ ಚೀಟಿ ಜಾತಿಯದು; ಪ್ರಭಾವ ಕರೆನ್ಸಿ ನೋಟಿನದು. ಸಾಕಷ್ಟು ದಕ್ಷಿಣೆ ಕೊಡಲಾರದವನು ಅಲ್ಲಿಯೂ ಜಯಿಸಲಿಲ್ಲ. ಬಲಿಷ್ಟ ವ್ಯಕ್ತಿಯನ್ನು ನಿಲ್ಲಿಸಿ, ಅವನೆಂಥವನಾದರೂ, ಅವನಿಗೆ ಗಾಂಧೀ ಟೊಪ್ಪಿಗೆ ಹೊರಿಸಿದರೆ ಬರುವ ಜಯ, ಆ ಟೊಪ್ಪಿ ಇರಿಸಿದ್ದರೂ, ದುಡ್ಡಿಲ್ಲದ ಜನಕ್ಕೆ ಸಿಗಲಾರದೆಂಬುದನ್ನು ಆತ ಮನಗಂಡನು.

ಆದರೂ ಅವನ ಬಯಕೆಯು ವ್ಯರ್ಥವಾಗದು; ಆಸೆ ತಣಿಯದು. ಬೋರ್ಡಿಗೆ ಹೋಗಲಾರೆನೆಂದರೂ, ರಾಷ್ಟ್ರೀಯ ಕ್ಷೇತ್ರದಲ್ಲಿ ಮುಂದಾಳಾಗಲು ಸಾಧ್ಯವಿದೆ. ಜಿಲ್ಲೆಯಿಂದ ಕರ್ಣಾಟಕಕ್ಕೂ, ಅಲ್ಲಿಂದ ಎ. ಐ. ಸಿ. ಸಿ. ತನಕ ಏರಿ, ತಾನೇಕೆ ಹೋಗಬಾರದು? ಒಂದು ಬಾರಿಗೆ ಜವಾಹರ್, ಗಾಂಧೀ, ಗಡಿನಾಡ ಗಾಂಧೀ, ಇವರ ಎಡಬಲದಲ್ಲಿ ಕುಳಿತು ಮೆರೆಯಬಾರದು——ಎಂಬ ಆಸೆಯು ಬಲವಾಗತೊಡಗಿತು.

ಚುನಾವಣೆ ಕಳೆಯುತ್ತಲೇ, ಈತ, ಜಿಲ್ಲಾ ಬೋರ್ಡಿನ ಕಾಂಗ್ರೆಸ್ಸಿನ ಸದಸ್ಯರ ಮುಂದೆ "ತನ್ನದಾದ" ಹದಿನಾಲ್ಕು ಸೂತ್ರಗಳ ಯೋಜನೆಯೊಂದನ್ನು ಜಿಲ್ಲೆಯ ಸುಧಾರಣೆಗಾಗಿ, ತನ್ನ ಪತ್ರಿಕೆಯಲ್ಲಿ ದಯಪಾಲಿಸಿದನು. ಹಿಂದಿನಿಂದಲೇ ತನ್ನನ್ನು ಜಗ್ಗಿ ಎಳೆದು, ತಾವು ಮುಂದೆಬಂದ ಕಾರ್ಕಳದ ಶಾಂತಿರಾಜರನ್ನು ಉಗುಳಿದ್ದಾಯಿತು. ಪತ್ರಿಕೆಯಲ್ಲಿ, ಆ ವಿಷಯವಾಗಿ ಬರೆದು ಬರೆದು ಬೇಸರಬಂದಿತು. ವಿಷಯಕ್ಕೆ ಬರಗಾಲ ಇಲ್ಲದಿದ್ದರೂ, ಆವೇಶಕ್ಕೆ ತಕ್ಕ ವಿಷಯಗಳು ಅವನಿಗೆ ಕಾಣಿಸಲಿಲ್ಲ. ಆಗ ಆತ, ತನ್ನ ಗಮನವನ್ನು ಚಲಚ್ಚಿತ್ರ ಪ್ರಪಂಚದ ಸುಧಾರಣೆಗೆ ಹರಿಯಗೊಟ್ಟನು.

ಅವನ ಮನಸ್ಸು ತುಂಬ ಅಸ್ಥಿರವಾಗಿತ್ತು. ಚುನಾವಣೆಯಲ್ಲಿನ ಪತನ ಇನ್ನೂ ಅವನನ್ನು ಕಾಡುತ್ತಲೇ ಇತ್ತು. ಆ ವೇಳೆಯಲ್ಲಿ ಮುಂಬಯಿಯಲ್ಲಿ ಒಂದು ಸೋಶಲಿಸ್ಟ್ ಕಾಂಗ್ರೆಸ್ಸ್ ಜರಗುವುದೆಂದು ತಿಳಿಯಿತು. ಅದನ್ನು ಕೇಳುತ್ತಲೇ ಅವನಿಗೆ ಆವೇಶ ಮೈದೋರಿತು. ತನ್ನ ತರುಣ ಮಿತ್ರರನ್ನೆಲ್ಲ ಕೂಡಿಕೊಂಡು ಆ ವಿಷಯವಾಗಿ ಹರಟತೊಡಗಿದನು.

"ಮಿ! ಬಾಲಚಂದ್ರ, ಮೇ ತಿಂಗಳಿನಲ್ಲಿ ಸೋಶಲಿಸ್ಟ್ ಪರಿಷತ್ತು ಕೂಡುತ್ತದೆ. ಸಮಾಜವಾದಿಗಳ ವರ್ಕಿಂಗ್ ಕಮಿಟಿಯಲ್ಲಿ ಶ್ರೀಮತಿ ಲಲು ಬೆನ್‌ರವರು ಇದ್ದಾರೆ. ನನ್ನ ಅತೀವ ಸ್ನೇಹಿತರು. ನ್ನಾನಂತೂ

ಹೋಗಲೇ ಬೇಕೆಂದಿದ್ದೇನೆ. ರಜೆಯಲ್ಲಿ ನೀನು ಊರಿನಲ್ಲಿದ್ದು ಏನು ಮಾಡುತ್ತೀಯಾ? ಬಾ, ಜತೆಗೆ ಹೋಗುವ" ಎಂದನು.

ಬಾಲಚಂದ್ರನು ವಿದ್ಯಾರ್ಥಿ. ಇಂಟರ್ ಪರೀಕ್ಷೆ ಮುಗಿಸಿ ಬಿ. ಎ. ಗೆ ಕುಳಿತಿದ್ದಾನೆ. ಅವನಿಗೂ ಕೆಂಪು ನಿಶಾನಿ ಎಂದರೆ ಜೀವ. ಆದರೇನು ಮಾಡುವುದು? ಮನೆಯಲ್ಲಿ ಅವನು ಒಬ್ಬನೇ ಅಲ್ಲ; ಅಣ್ಣ ತಮ್ಮಂದಿರು ಇದ್ದಾರೆ. ತಂದೆ ಅನುಕೂಲವಂತರಾದ ವ್ಯಾಪಾರಿಗಳು. ಆದರೆ ಇವನ ಮುಂಬಯಿಯ ಪಯಣಕ್ಕೆ ಹಣ ಕೊಡಲಾರರು ಎಂದು ಬಲ್ಲ. ಆದುದರಿಂದ "ಪ್ರಭುದೇವ, ಹೋಗುವ ಆಸೆ ನಿಮಗಿಂತ ಹತ್ತುಪಾಲು ಹೆಚ್ಚಿಗೆ ನನಗಿದೆ. ಆದರೆ ಕಾಸು ಕೊಡುವವರು ಯಾರು? ಮುಂಬಯಿಗೆ ಹೋಗಬೇಕಲ್ಲವೆ. ಇಲ್ಲಿಯೇ ಸಮೀಪದಲ್ಲಿ ಎಲ್ಲಿಯಾದರೂ ಆಗಿದ್ದರೆ ಹೋಗಿ ಪ್ರಾಮುಖ್ಯ ಭಾಗ ವಹಿಸುತ್ತಿದ್ದೆ" ಎಂದನು.

"ಹಣ ಹಾಗೆ ನನ್ನಲ್ಲಿ ಇದೆಯೇ? ಅದು ಎಲ್ಲಿಂದಾದರೂ ಬರುತ್ತದೆ. ನಾನು ಹಣದ ವಿಚಾರವನ್ನು ಯಾವಾಗಲೂ ಯೋಚಿಸುವುದಿಲ್ಲ. ಬರಲು ಮನಸ್ಸಿದ್ದಲ್ಲಿ ಹಾದಿಯಿದೆ. ನನಗೆ ಹೋಗುವುದರಲ್ಲಿ ಇನ್ನೊಂದು ಯೋಚನೆಯೂ ಇದೆ. ನಮ್ಮ ಮಂಗಳೂರಿನ ರಾಜಕೀಯವನ್ನು ಕಂಡು ಬೇಸರ ಬಂದಿದೆ. ಅದು ತೀರ ಹಳಸಿ ನಾರುತ್ತಿದೆ. ಚುನಾವಣೆಯ ತನಕ ಎಲ್ಲರಿಗೂ ಕಾಂಗ್ರೆಸ್ಸ್ ಬೇಕಿತ್ತು ಆ ಮೇಲೆ ಅದನ್ನು ಮೂಸಿ ನೋಡುವವರೂ ಇಲ್ಲ. ನಮ್ಮ ಜನಜೀವನದಲ್ಲಿ ಹೊಸ ಹುರುಪನ್ನು ನಾವು ತುಂಬಬೇಕು. ಜನರಲ್ಲಿ ಕ್ರಾಂತಿಕಾರಕ ವಿಚಾರಗಳನ್ನು ಬಿತ್ತಬೇಕು. ನಮ್ಮ ಜಿಲ್ಲಾ ಬೋರ್ಡನ್ನು ನುಗ್ಗಿದ—ಶಾಂತಿರಾಜ, ತಿಮ್ಮರಸ, ಮಂಗಣ್ಣಭಟ್ಟ—ಇವರಿಂದ ಆ ಕೆಲಸವಾದೀತೇ? ಇಂಥ ಶ್ರೀಮಂತರಲ್ಲಿ ಒಬ್ಬರೇ ಒಬ್ಬರು ಆಕ್ಷೇಪವೆಂದರೆ ಮಿ! ನಂದ್. ಉಳಿದವರೆಲ್ಲಿರೂ 'ಕಜಾವು'ಗಳು. ಅದಕ್ಕೇನೇ ನನ್ನ ಯೋಚನೆ—ಮುಂದಲ ಬಾರಿಯ ಅಖಿಲ ಭಾರತ ಸೋಶಲಿಸ್ಟ್ ಕಾಂಗ್ರೆಸ್ಸನ್ನು ಮಂಗಳೂರಿಗೇನೇ ಕರೆಯಬೇಕೆಂದು ಇದೆ. ನಾನು ಮುಂಬಯಿಗೆ ಹೋದರೆ ಆ ಕೆಲಸವಾಗುತ್ತದೆ. ಅವರೂ ಇಲ್ಲಿಗೆ ಬರಲಿ. ಇಲ್ಲಿನ ರಾಜಕೀಯ ಜೀವನದಲ್ಲಿ "who is who" ಎಂದು ತಿಳಿಯಲಿ.

"ಅಂದರೆ ಇದಕ್ಕೆ ಡಾ! ನಂದರವರ ಒಪ್ಪಿಗೆಯೇ?"

"ನಾನು ಅವರ ಕನ್ನಡಿ; ನನಗೂ ನಾನೇ ಕನ್ನಡಿ"

"ಮಿ| ದೇವ್ ನನಗೆ ಬರುವ ಆಸೆ ಕುತ್ತಿಗೆಯ ತನಕವಿದೆ. ಏನು ಮಾಡಲಿ, ನಮ್ಮ ಅಪ್ಪ ಬಿಡಬೇಕಲ್ಲ?"

ಹಾಗೆಯೇ ಹಲವು ತರುಣರನ್ನು ಪ್ರೋತ್ಸಾಹಿಸಿ, ಜತೆಗೆ ಕರೆದೊಯ್ದರೆ, ಒಂದು ಗುಂಪಾಗಿ ಹೋಗಿ, ತಮ್ಮ ಆಸಕ್ತಿಯನ್ನು ಮುಂಬಯಿಯಲ್ಲಿ ನೆರೆದ ಸಮಾಜವಾದಿ ಮುಖಂಡರ ಮುಂದೆ ಪ್ರದರ್ಶಿಸಿದರೆ, ತನ್ನ ಕಾರ್ಯವಾದೀತು ಎಂದು ಅವನಿಗೆ ಆಸೆ. ಆ ಯೋಚನೆ ಹೊಳೆದ ಕ್ಷಣವೇ ಡಾ| ನಂದರನ್ನೂ ಭೇಟಿಯಾದನು. ಅವರು—'ಬಹು ಯೋಗ್ಯ ವಿಚಾರ' ಎಂದು ಸಮರ್ಥಿಸಿದರು. ಡಾಕ್ಟರರು ಬರುವಂತಿದ್ದರೆ, ಇವನಿಗೆ ಯಾವ ಚಿಂತೆಯೂ ಇರಲಿಲ್ಲ. ಆದರೆ ಅನೇ ವೇಳೆಗೆ ಜಿಲ್ಲಾ ಸಮಿತಿಯಿಂದ ಪ್ರಾಂತ ಸಮಿತಿಗೆ ಪ್ರತಿನಿಧಿಗಳನ್ನು ಆರಿಸುವ ಕೆಲಸವಿತ್ತು. ಆದುದರಿಂದ ಅವರು ಮುಂಬಯಿಗೆ ಬರಲಾರರು; ಬಂದರೆ 'ನನಗೂ ಒಂದು ರಾಶಿ ಔಷಧ ಸಾಮಾನುಗಳನ್ನು ಕೊಂಡುಬರುವುದಿದೆ. ಆದರೆ ಈ ಊರು ಬಿಟ್ಟಲ್ಲಿ ನಮ್ಮ ಇಲ್ಲಿನ ಕೆಲಸ ತಲೆಕೆಳಗಾದೀತು" ಎಂದು ನಂದರ ತಳಮಳ.

"ಹೋ, ಅದೊಂದು ಮಾರಿ ಇದೆಯಲ್ಲವೇ? ನೀವು ಇಲ್ಲಿಂದ ಕದಲಲೇ ಕೂಡದು. ಪ್ರಾಂತ ಸಮಿತಿಗೆ ನಾನು ಹೇಳಿದ ಆ ಐದು ಮಂದಿಯೂ ಆರಿಸಿ ಬರುವಂಥ ಹಿಕ್‌ಮತ್ ಮಾಡಬೇಕು. ನಾನಿದ್ದೇ ತೀರಬೇಕಲ್ಲವಷ್ಟೇ?" ಎಂದು ತನ್ನ ಆಸೆ ಅನುಮಾನಗಳೆರಡನ್ನೂ ಪ್ರಭುದೇವ ಹೇಳಿದನು. ತಾನು ಇಲ್ಲದಾಗ ತನ್ನನ್ನು ಆರಿಸದೆ ಕುಳಿತಾರು ಎಂಬ ಅನುಮಾನ ಅವನಿಗಿದೆ. ಅದಕ್ಕೆ ಡಾ| ನಂದರವರು "ನಿಮ್ಮ ಮಟ್ಟಿಗೆ "no fear; ಇನ್ನೊಂದು ಸ್ಥಾನ ನನಗೆ. ಉಳಿದ ಮೂರರಲ್ಲಿ ಏನಾದರೂ ಸ್ವಲ್ಪ ಹೆಚ್ಚು ಕಡಮೆ ಮಾಡಬೇಕಾದೀತು" ಎಂದರು.

"ಆದರೂ, ನಾನು ಕೊಟ್ಟ ಪಟ್ಟಿಯಿಂದ ಹೊರಕ್ಕೆ ಹೋಗಬೇಡಿ" ಎಂದನು. ಚುನಾವಣೆಯ ಇಂದ್ರಜಾಲವನ್ನು ಬಲ್ಲವರಿಗೆ ಅಷ್ಟೆಲ್ಲ ಹೇಳಬೇಕಿರಲಿಲ್ಲ. ಅನಂತರ ಅವರಿಬ್ಬರ ಮಾತು, ಸಮಾಜವಾದಿ ಪರಿಷತ್ತನ್ನು ಮಂಗಳೂರಿಗೆ ಕರೆಯುವ ವಿಚಾರದಲ್ಲಿ ಹರಿಯಿತು. ಅದಕ್ಕೆ ಯಾರನ್ನು ಅಧ್ಯಕ್ಷರನ್ನಾಗಿ ಮಾಡಬಹುದು—ಎಂದು ಬಹಳ ಹೊತ್ತು ತರ್ಕಿಸಿದರು. "ಯಾಕೆ ಈಗಲೇ ಆ ವಿಚಾರ? ಮೊದಲು ಸಮ್ಮೇಳನ ಇಲ್ಲಿ

ಕೊಡುವುದು ಖಂಡಿತವಾಗಲಿ. ನೀವು ಲಲು ಬೆನ್‌ರವರಿಗೆ ಒಂದು ಪರಿಚಯ ಪತ್ರಕೊಡಿ. ನಾನು ಅವರನ್ನು ಕಂಡು, ಮುಖತಃ ಎಲ್ಲವನ್ನೂ ಹೇಳುತ್ತೇನೆ" ಎಂದು ಪ್ರಭುದೇವ ನುಡಿದನು.

"ಅಷ್ಟು ಮಾಡದೆ ಇರುತ್ತೇನೆಯೇ? ಆದರೂ, ಅಧ್ಯಕ್ಷತೆಗೆ ಯಾರು ಆಗಬಹುದು ಎಂಬುದನ್ನು ಮೊದಲಿನಿಂದಲೇ ನಾವು ಯೋಚಿಸಬೇಕು. ಪರಿಷತ್ತಿನ ಯಶಸ್ಸು ಅವರನ್ನು ಹೊಂದಿಕೊಂಡಿದೆ."

"ನೋಡುವ, ಅದಕ್ಕೆ, ಹೊರಡುವ ತನಕ ವಾಯಿದೆ ಇದೆಯಲ್ಲ" ಎಂದು ನುಡಿದು ಪ್ರಭು ಅಲ್ಲಿಂದ ಹೊರಟನು.

ಇನ್ನು ಉಳಿದ ಹದಿನೈದು ದಿನಗಳಲ್ಲಿ, ಆರೇಳು ದಿನ ಕಾಲ, ಹೋಗ ಬೇಕೆಂಬ ವಿಚಾರದಲ್ಲೇ ಕಳೆಯಿತು. ಹೊರಡುವ ಸಲುವಾಗಿ ಯಾವ ಹೆಚ್ಚಿನ ತಯಾರಿಯೂ ನಡೆಯಲೇ ಇಲ್ಲ. ತಯಾರಿಗೆ ಹಣ ಬೇಡವೇ? ಅದಕ್ಕೆಂದು ಕೆಲವೊಂದು ಮಂದಿ ಪ್ರಮುಖ ವ್ಯಾಪಾರಿಗಳನ್ನು ಭೇಟಿಯಾದನು. ಅವರಲ್ಲಿ "ನಾನು ಈ ಬಾರಿ ದಸರೆಗೆ ನನ್ನ ಪತ್ರಿಕೆಯ ಒಂದು ವಿಶೇಷ ಸಂಚಿಕೆ ಹೊರಡಿಸಬೇಕೆಂದಿದ್ದೇನೆ. ನಿಮ್ಮದೊಂದು ಪೂರ್ಣ ಪುಟದ ಜಾಹಿರಾತು ಬೇಕು. ನಿಮ್ಮ ಒಂದು ಫೊಟೋವನ್ನು, ಜೀವನ ಚರಿತ್ರೆಯನ್ನೂ ಸಂಗ್ರಹಿಸಿ ಕೊಡಬೇಕು. ಪ್ರಪಂಚದ ವ್ಯಾಪಾರದಲ್ಲಿ, ಮಂಗಳೂರು ಎಲ್ಲಿದೆಯೆಂಬುದಾದರೂ ಜನರಿಗೆ ತಿಳಿಯಲಿ. ಆ ವಿಶೇಷ ಸಂಚಿಕೆ ಐನೂರು ಪುಟಗಳ ಹೆಚ್ಚೊತ್ತಿಗೆ ಆಗುತ್ತದೆ. ಮುದ್ರಣಕ್ಕೆ ಎಷ್ಟು ದಿವಸ ಹಿಡಿಯುತ್ತದೆಯೋ" ಎಂದು ಬಿನ್ನವಿಸಿದನು. 'ಆಗಲಿ' ಎಂದು ಕೆಲವರು ಒಪ್ಪಿದರೂ, ಈತ ಬಯಸಿ ಬೇಡಿದ ಮುಂಗಡ ದೊರೆಯಲಿಲ್ಲ. ಒಬ್ಬಿಬ್ಬರು "ನೀವು ಕಳೆದ ಬಾರಿ ಹೊರಡಿಸುತ್ತೇನೆಂದ ಪರ್ಯಾಯ ಸಂಚಿಕೆಗೆ ಕೊಟ್ಟ ಮುಂಗಡವನ್ನು ಇದಕ್ಕೇನೆ ಬಳಸಿಕೊಳ್ಳಿ" ಎಂದು ಅವನನ್ನು ನಿವಾರಿಸಿಕೊಂಡರು. ಅವರ ಅಂಗಡಿಗಳನ್ನು ದಾಟಿ ಹೋಗುತ್ತ, ಈತನ ಮನಸ್ಸಿನಲ್ಲಿ "ಸಮತಾವಾದ ನಮ್ಮ ಊರಿಗೆ ಬಾರದೆ ಗತಿಯಿಲ್ಲ. ಇವರ ದುಡ್ಡಿನ ಸೊಕ್ಕು ಅಡಗುವುದಕ್ಕೆ ಅದು ಬಂದೇ ತೀರಬೇಕು. ರಶ್ಯಾದೇಶದಂತೆ ನಮ್ಮ ದೇಶದಲ್ಲಿಯೂ, ಈ ಮಧ್ಯವರ್ತಿಗಳ ಗುಂಪು ನಿರ್ನಾಮವಾಗಲೇ ಬೇಕು" ಎಂದು ಶಪಿಸಿ ಮುಂದುವರಿದನು.

ಆ ಸಂಜೆ ರಮಾವಿಲಾಸ ಕಾಫಿ ಕ್ಲಬ್ಬಿನಲ್ಲಿ ಅವನೂ, ಮಿತ್ರ ಬಾಲಚಂದ್ರ, ರಮಾನಾಥ, ಸಾಣೆಕಲ್—ಇಷ್ಟು ಜನರು ಸೇರಿದ್ದರು. ಸಮತಾವಾದ, ಸಿನೆಮ ಇವುಗಳ ವಿಚಾರಗಳಲ್ಲಿ ಚರ್ಚೆ ನಡೆಯಿತು. 'ಯಾವ ಹೋಟೆಲಿನಲ್ಲಿ ಉತ್ಕೃಷ್ಟ ಬಿಸ್ಕುಟು ರೊಟ್ಟಿ ತಯಾರಿಸುತ್ತಾರೆ' ಎಂಬ ವಿಷಯವಲ್ಲಿಯೂ ಚರ್ಚೆಯಾಯಿತು. ಪ್ರಭುದೇವನಿಗೆ ರಮಾನಾಥನ ಮುಖವನ್ನೇ ನೋಡಿ ಸ್ಫೂರ್ತಿಯುಂಟಾಗುತ್ತದೆ. ಆ ಸ್ಫೂರ್ತಿಯಿಂದ, ಅವನನ್ನು ಗುಟ್ಟಾಗಿ ಕರೆದು "ರಮಾನಾಥ, ನಿನ್ನ ತಂಗಿಗೆ ಲಗ್ನ ನಿಶ್ಚಯ ಆಗಲೇ ಇಲ್ಲ ಅಲ್ಲವೇ? ನಿನ್ನ ತಂದೆಗೆ ಹೇಳು—ನನ್ನ ದೂರದ ಒಬ್ಬ ಬಂಧು ಇದ್ದಾನೆ. ಆತ I. C. S. ಆಗಿ ವೊನ್ನೆ ಮುಂಬಾಯಿಗೆ ಬಂದು ಕುಳಿತಿದ್ದಾನೆ. ಯು. ಪಿಯಲ್ಲಿ ಸಿವಿಲ್ ಸರ್ವಿಸಿಗೆ ಸೇರುವ ಸಂಭವವಿದೆ. ನಾನು ಮುಂಬಯಿಗೆ ಹೋಗುತ್ತೇನೆ. ಹಾಗೆ ಬೇಕಾದರೆ ನಿಮ್ಮ ಬಗ್ಗೆ ಅವನನ್ನು ಮಾತನಾಡಿಸುವ. ಅಂದರೆ ನೋಡು—ನಾನೂ, ಅವನೂ ಹೈಸ್ಕೂಲಿನಲ್ಲಿ ಸಹಪಾಠಿಗಳು. ಅವನ ಅದೃಷ್ಟವನ್ನು ನೋಡು; I. C. S ಆಗಿ ಬಂದಿದ್ದಾನೆ. ಸಾವಿರ ರೂಪಾಯಿಯ ಸಂಬಳ ಕಾದಿದೆ. ನಾವು ಇಲ್ಲಿ ಯಾವ ಸಂದರ್ಭವೂ ಇಲ್ಲದೆ ಕೊಳೆಯುತ್ತಿದ್ದೇವೆ" ಎಂದನು.

ರಮಾನಾಥ ಈತನ ಮತ್ತೊಬ್ಬ ಆರಾಧಕ. ಅವನೂ ಒಬ್ಬ ಸಮತಾವಾದಿಯೇ. ಸಾಹುಕಾರ ರಂಗಪ್ಪಯ್ಯನವರ ನಾಲ್ಕು ಮಕ್ಕಳಲ್ಲಿ ಅವನು ಎರಡನೆಯವನು. ಅವನ ಹಿರಿಯ ಅಣ್ಣ ಮೆಡಿಕಲ್ ಓದುತ್ತಿದ್ದಾನೆ. ರಂಗಪ್ಪಯ್ಯನವರಿಗೆ ತುಂಬ ದೊಡ್ಡ ಸಂಸಾರವಿದೆ. ನಾಲ್ವರು ಗಂಡು ಮಕ್ಕಳಾದರೆ, ಆರು ಮಂದಿ ಹುಡುಗಿಯರು. ಹಿರಿಯ ಹುಡುಗಿ ಕಲಾವತಿ; ಇಂಟರ್ ಮುಗಿಸಿ ಕುಳಿತಿದ್ದಾಳೆ. ರಮಾನಾಥನ ಒತ್ತಿನವಳು ಅವಳು. ಅವಳ ಸಲುವಾಗಿ ಸಾಹುಕಾರರು ತಮ್ಮ ಅಂತಸ್ತಿಗೆ ಸಮನಾದ ಬಲೆಯನ್ನು ಬೀಸುತ್ತಿದ್ದಾರೆ. ಆದರೂ ಇನ್ನೂ ಸಮನಾದ ಸಂಬಂಧ ದೊರೆತಿಲ್ಲ. ಸಮನಾದ ಸಂಬಂಧವೆಂದರೆ—ರೂ. ಆ. ಪೈಗಳಲ್ಲಿ. ಲಕ್ಷಕ್ಕೆ ಕಡಿಮೆಯುಳ್ಳ ಕುಳವಾರುಗಳು ಅವರ ದೃಷ್ಟಿಗೆ ಬರುವುದಿಲ್ಲ. ಅದು ಇಲ್ಲದೆ ಹೋದರೆ ಕಡಿಮೆ, ಕಡಿಮೆ ಐ. ಸಿ. ಯಸ್ ಆದವನೇ ಅಳಿಯನಾಗಬೇಕು. ಸಂಜೆ ಪ್ರಭುದೇವನೊಡನೆ ಮಾತನಾಡಿದ ರಮಾನಾಥ, ತನ್ನ ತಂದೆಯೊಡನೆ "ಹೀಗೊಂದು ಸೂಚನೆ ಕೊಟ್ಟ ನಮ್ಮ ಪ್ರಭುದೇವ"

ಎಂದದನ್ನು ಕೇಳಿ, ಅವರ ಕಿವಿ ನೆಟ್ಟಗಾಯಿತು. “ಆ ಹುಡುಗ ಐ. ಸಿ. ಯಸ್ ಹುಡುಗನಲ್ಲವೇ! ನನ್ನ ತಲೆಗೂ ಬರಲಿಲ್ಲ. ಅವನು ಎಲ್ಲಿದ್ದಾನೆಂದು ವಿಳಾಸ ಹೇಳಿದನೇ? ಅಂದರೆ ಅವನ ತಂದೆಯನ್ನು ಕೇಳಿ ಉಪಯೋಗವಿಲ್ಲ. ಅವರು ಕುಮುಟಿ, ಕಾರವಾರದವರು. ಯಾರಿಗೆ ಅವರ ಪರಿಚಯವಿದೆ? ನಾವೇ ಅವನನ್ನು ನೇರವಾಗಿ ಭೇಟಿಯಾಗಬೇಕು. ನೀನು ಹೋಗಿ ಅವನ ವಿಳಾಸವನ್ನು ತಾ” ಎಂದು ಹೇಳಿದರು.

ಮರುದಿನ ಬೆಳಿಗ್ಗೆ ಪ್ರಭುದೇವನಲ್ಲಿಗೆ ರಮಾನಾಥ ವಿಳಾಸಕ್ಕಾಗಿ ಬಂದನು. ಈತನಿಗೆ ವಾಸ್ತವವಾಗಿ ಅದು ತಿಳಿದಿತ್ತಾದರೂ “ನನಗೆ ಸ್ಪಷ್ಟವಾಗಿ ಗೊತ್ತಿಲ್ಲ. ಮುಂಬಯಿಯಲ್ಲಿ ಇದ್ದಾನೆ ಎಂಬುದು ಖಂಡಿತ. ನನ್ನ ಸ್ನೇಹಿತ ದೇವರಾಯ ಬರೆದ ಪತ್ರದಿಂದ ‘ಇಲ್ಲಿಯೇ ಇನ್ನೂ ಒಂದು ತಿಂಗಳು ಕಾಲ ಇರುತ್ತಾನೆ; ನಾವಿಬ್ಬರೂ ಆಗಾಗ ಭೇಟಿಯಾಗುತ್ತೇವೆ’—ಎಂದು ತಿಳಿಯುತ್ತದೆ. ನಾನು ಮುಂಬಯಿ ಪರಿಷತ್ತಿಗೆ ಹೋಗುತ್ತೇನಲ್ಲ? ಹೋದವನು ಅವನ ವಿಳಾಸ ತರುತ್ತೇನೆ” ಎಂದನು. ಆ ವಾರ್ತೆಯಿಂದ ರಂಗಪ್ಪಯ್ಯನವರ ಆತುರ ತೃಪ್ತಿ ಪಡೆಯಲಿಲ್ಲ. ಅವರೇನೆ ಪ್ರಭುದೇವನ ಕಚೇರಿಗೆ ಬಂದರು. “ಪಕ್ಕನೆ ಅವನ ಎಡ್ರೆಸ್ಸು ತರಿಸಲು ಬರಲಿಕ್ಕಿಲ್ಲವೇ?” ಎಂದು ಅವನನ್ನು ಕೇಳಿದನು.

“ಪಕ್ಕನೆ ಹೇಗಾದೀತು? ಕಾಗದ ಬರೆದು ಉತ್ತರ ಬರಲಿಕ್ಕೆ ಎಂಟು ದಿವಸಗಳಾಗುತ್ತವೆ. ಅಷ್ಟರೊಳಗೆ ನಾನೇ ಅಲ್ಲಿಗೆ ಹೋಗುತ್ತೇನಲ್ಲ! ನಾನು ಹೋಗುವುದು ಖಂಡಿತ. ಅವರನ್ನು ಭೇಟಿಯಾಗುವುದೂ ಖಂಡಿತ. ನನ್ನ ಬಹಳ ಆಪ್ತ ಸ್ನೇಹಿತರು ಅವರು” ಎಂದು ತನ್ನ ಅವರ ಬಾಲ್ಯದ ಹಲವು ನಿಜವಾದ ಕತೆಗಳಿಗೆ, ಕಲ್ಪನೆಯ ಮಿರುಗನ್ನು ಕೊಟ್ಟು ಬಣ್ಣಿಸಿದನು. “ನಾನೆನ್ನುತ್ತೇನೆ, ನಿಮ್ಮ ಹುಡುಗನನ್ನು ನನ್ನ ಜತೆಯಲ್ಲಿ ಕಳುಹಿಸಿ. ಅವನು ಮುಂಬಯಿಯನ್ನು ನೋಡಿ ಬಂದ ಹಾಗೂ ಆಯಿತು. ಅವರ ಪರಿಚಯವನ್ನು ಮಾಡಿಸಿಕೊಡುತ್ತೇನೆ. ಮೆಲ್ಲಗೆ ಅಪರೋಕ್ಷವಾಗಿ ನಿಮ್ಮ ಮಗಳ ವಿಚಾರವನ್ನು ಹೊಗಳಿ ಹೇಳುತ್ತೇನೆ. ನಾವು ಪೀಠಿಕೆ ಹಾಕಿ ಬಂದ ಮೇಲೆ, ನೀವು ಹುಡುಗಿಯನ್ನು ಕರೆದುಕೊಂಡು ಹೋದರೆ ಸರಿಯಾಗುತ್ತದೆ. ಈಗಲೇ ಬನ್ನಿ ಅನ್ನುವವನು ನಾನು, ಆದರೂ ಅದು ಸಮನಲ್ಲ. ಅವರನ್ನು ನಾನು ನೋಡದೆ ಆರು ವರ್ಷಗಳಾದುವು. ನೀವಾ

ದರೂ ಆತುರಪಟ್ಟು ಕೆಲಸ ಹಾಳು ಮಾಡಿಕೊಳ್ಳಬಾರದು. ಇಷ್ಟು ಖಂಡಿತ ಹೇಳಬಲ್ಲೆ—ಅವರಿಗೆ ಇನ್ನೂ ಲಗ್ನವಾಗಿಲ್ಲ." ಎಂದು ನುಡಿದ ಬಳಿಕ ವಿಚಾರಗಳನ್ನು ಬೇರೆ ಕಡೆಗೆ ಹರಿಯಗೊಟ್ಟನು.

ರಂಗಪ್ಪಯ್ಯನವರು "ನೀವು ಹೊರಡುವ ದಿವಸ ಯಾವುದೆಂದು ಹೇಳಿ" ಎಂದು ಕೇಳುತ್ತಲೇ "ನನಗೇನಾಗಬೇಕು? ನಾಳೆ ಹೊರಟೆನೇ, ನಾಡಿದ್ದು ಹೊರಟರೂ ಹೊರಟೆನೇ" ಎಂದನು. "ಹಾಗಾದರೆ ನಮ್ಮ ರಮಾನಾಥನು ನಿಮ್ಮ ಜತೆಯಲ್ಲಿ ಬರುತ್ತಾನೆ. ಅವನು ಮುಂಬಯಿಗೆ ಹೊಸಬನು. ಈ ಒಂದು ಸಹಾಯವನ್ನು ನೀವು ಮಾಡಿದ್ದರೆ ನಿಮ್ಮನ್ನು ನಾನು ಮರೆಯುವವನೇ ಅಲ್ಲ" ಎಂದು ಹೇಳಿ, ತೆರಳಿದನು.

ರಮಾನಾಥ ಬರುವೆನೆಂದ ಮೇಲೆ ಪ್ರಭುದೇವನ ಪ್ರಯಾಣ ನಿಶ್ಚಿಂತೆಯಾಯಿತು; ಅವನ ಕಿಸೆಗೆ ಕೈ ತುರುಕಿ, ಸಿಗರೇಟು ಕಿತ್ತು ಎಳೆದಂತೆ, ಪ್ರಯಾಣದ ವೆಚ್ಚವನ್ನೂ ಗಳಿಸಬಹುದು. ಅಷ್ಟನ್ನು ಅವನು ತಿಳಿದೇ ಇದ್ದನು. ಅದಕ್ಕಾಗಿಯೇ ಅಷ್ಟೆಲ್ಲ ಸಾಹಸ. ಅದನ್ನು ತೀರ ಸಾಧ್ಯವಾಗಿ ಮಾಡಿಕೊಳ್ಳಲು, ಆ ಸಂಜೆ ಬಂದ ರಮಾನಾಥನೊಡನೆ, ಸಮತಾವಾದಿ ಪರಿಷತ್ತನ್ನು ಮುಂದಣ ವರ್ಷ ಮಂಗಳೂರಿಗೆ ಕರೆಯುವ ವಿಚಾರ ಮಾತನಾಡಿದನು. "ನಾವು ಈ ಪಂಗಡದ ಶಾಶ್ವತ ಶಾಖೆಯೊಂದನ್ನು ಮಂಗಳೂರಿನಲ್ಲಿ ತೆರೆಯುವ ಏರ್ಪಾಡು ಮಾಡಬೇಕು" ಎಂಬ ಹುಚ್ಚು ಹಿಡಿಸಲು ಪ್ರಯತ್ನಮಾಡಿದನು. ಮರುದಿನದ ಮಿರರ್ ಪತ್ರಿಕೆಯಲ್ಲಿ—ಈ 'ಪತ್ರಿಕೆಯ ಸಂಪಾದಕರಾದ ಪ್ರಭುದೇವರು, ತರುಣ ಮುಂದಾಳು ಶ್ರೀ ರಮಾನಾಥರೊಡನೆ ಮುಂಬಯಿಯಲ್ಲಿ ಸೇರಲಿರುವ ಸಮಾಜವಾದಿ ಪರಿಷತ್ತಿಗೆ ತೆರಳುವರು, ಎಂದೂ "ಮುಂದಣ ಅಧಿವೇಶನವನ್ನು ಮಂಗಳೂರಿಗೆ ಕರೆಯಿಸುವ ಬಲವಾದ ತಯಾರಿ ನಡೆದಿದೆ" ಎಂದೂ ವಾರ್ತೆ ಪ್ರಕಟಿಸಿದ್ದಲ್ಲದೆ, ಆ ವಿಷಯದ ಶಿರೋನಾಮೆಯುಳ್ಳ ಅಗ್ರಲೇಖನವನ್ನು ಬರೆದನು. ಅಗ್ರಲೇಖದ ಬೆನ್ನಿಗೇನೇ, ಅವರಿಬ್ಬರು ಮುಂಬಯಿಗೆ ಪ್ರಯಾಣ ಬೆಳೆಯಿಸಿಯೂ ಆಯಿತು.

ಮುಂಬಯಿಯನ್ನು ಸೇರಿದ ತಕ್ಷಣವೇ ಸಮಾಜವಾದಿ ಮುಖಂಡರ ದರ್ಶನ ಮಾಡಿ, ತಮ್ಮ ಊರಿಗೆ ಬಿಜಮಾಡಿಸಬೇಕೆಂದು ಕೇಳಲು, ಅಲೆಯುವುದು, ಪ್ರಭುದೇವನ ಮುಖ್ಯ ಕೆಲಸ. ರಮಾನಾಥನು ಊರಿಗೆ

ಹೊಸಬ. "ಮಾತನ್ನೆಲ್ಲ ಪರಿಷತ್ತಿನ ದಿನವೇ ಮುಗಿಸುವ. ಒಮ್ಮೆ ಪರಿಷತ್ತು ಶುರುವಾಯಿತೆಂದರೆ ನಮ್ಮ ಕೆಲಸಕ್ಕೆ ವೇಳೆ ಸಿಗಲಾರದು. ಬಂದುದಕ್ಕೆ ಮುಂಬಯಿಯನ್ನೆಲ್ಲಾ ನೋಡಬೇಡವೆ? ಮಜಾ ಮಾಡಬೇಕು. ಒಳ್ಳೊಳ್ಳೆಯ ಸಿನೆಮ ನೋಡಬೇಕು; ಇಲ್ಲಿ ಬಂದ ಗುರುತಿಗಾಗಿ ಪ್ರಸಿದ್ಧ ಸಿನೆಮಾ ತಾರೆಯರನ್ನು ಭೇಟಿಯಾಗಿ ಅವರ ಸಹಿಗಳನ್ನು ಸಂಗ್ರಹಿಸಬೇಕು. ಪರಿಷತ್ತು ಮುಗಿದ ಮೇಲೆ ಊರಿಗೆ ಹೋಗುವ ಗಡಿಬಿಡಿಯಾಗುತ್ತದೆ" ಎನ್ನುತ್ತಾನೆ ರಮಾನಾಥ. ಸುಲೋಚನಾ, ಚಂದ್ರರಾಜ, ಇವರೆಲ್ಲರ ದರ್ಶನವನ್ನು ಆತ ಮಾಡಬೇಕೆಂದಿದ್ದಾನೆ. ಅವರೊಡನೆ ಹಸ್ತಲಾಘವ ಮಾಡಿದೆ. ಭೇಟಿ ಪಡೆದೆ, ಚಾ ಕುಡಿದೆ ಎಂದರೆ—ಆರು ತಿಂಗಳಷ್ಟು ಕಾಲ ಮಿರರಿನಲ್ಲಿ ಬರೆಯುವ ವಿಷಯ ಸಂಗ್ರಹವಾಗುತ್ತದೆ ಎಂದು ಪ್ರಭುದೇವನ ಮನಸ್ಸೂ ಹೇಳುತಿತ್ತು.

ಈ ನಡುವೆ ರಮಾನಾಥನು 'ಮಹಾರಾಯ, ಅದಕ್ಕೂ ಮೊದಲು ನಿನ್ನ ಐ. ಸಿ. ಯಸ್ ಸ್ನೇಹಿತನ ಪರಿಚಯ ಮಾಡಿಕೊಡು. ಇಲ್ಲಿಗೆ ನಾವು ಬಂದು ಈಗಲೇ ಮೂರು ದಿನಗಳಾದುವು. ತಂದೆಗೆ ಏನಾದರೊಂದು ಕಾಗದ ಬರೆಯಬೇಡವೇ" ಎಂದು ಕೇಳುತ್ತಾನೆ.

ಪ್ರಭುದೇವನಿಗೆ ಐ. ಸಿ. ಯಸ್. ಮಿತ್ರನಿದ್ದುದೂ ನಿಜವೇ; ಅವನ ವಿಷಯವಾಗಿ ಉಭಯತರ ಸ್ನೇಹಿತ ದೇವರಾಯ ಪತ್ರ ಬರೆದುದೂ ನಿಜವೇ. ಆದರೆ ಆ ಮಿತ್ರ, ಮಿ। ಶಿವಸುಂದರನು ಈತನ ಭೇಟಿಗೆ ಆತುರನಾಗಿದ್ದಾನೆಂದು ತಿಳಿಯಬೇಡವೇ? ಹಾಗೂ ಹೀಗೂ ಇರಾಣಿ ಹೊಟೇಲು ಒಂದನ್ನು ನುಗ್ಗಿ, ಫೋನಿನ ಮೂಲಕವಾಗಿ ಬೇಂಕಿನ ಕೆಲಸದಲ್ಲಿ ನಿರತನಾಗಿದ್ದ ದೇವರಾಯನೊಡನೆ, "ಹುಲೋ, ಹುಲೋ ಮಿಸ್ಟರ್" ಎಂಬ ಸಂಭಾಷಣೆಯನ್ನು ಪ್ರಭುದೇವ ನಡೆಯಿಸಿದನು. "ಶಿವಸುಂದರನು ಮುಂಬಾಯಿಯಲ್ಲಿಯೇ ಇದ್ದಾನೆ. ಅವನ ಭೇಟಿಯು ನನಗೇ ಆಗುವುದು ದುರ್ಲಭವಾಗಿದೆ. ಅಗತ್ಯ ಕೆಲಸವಿದ್ದರೆ ಹೇಳು; ನೀನು ಹದಿನೈದು ದಿನವಾದರೂ ನಿಲ್ಲಲು ಅವಕಾಶಮಾಡಿಕೊಂಡು ಬಂದದ್ದಾದರೆ, ಒಂದು ಆದಿತ್ಯವಾರ ಅವನನ್ನು ಮನೆಗೆ 'ಟೀ'ಗೆ ಕರೆಯುತ್ತೇನೆ. ನೀನೂ ಬಾ" ಎಂದು ದೇವರಾಯ ಹೇಳಿದನು. ಈತ ವಿಚಾರಿಸಿದ ಉದ್ದೇಶವನ್ನೂ ತಿಳಿಸಿದನು. ಆಗ ಅವನು "ಅದೊಂದು ಸಂಗತಿಯನ್ನು ಕುರಿತು ಅವ

ನೊಡನೆ ಮಾತನಾಡುವುದು ನನಗೇನೂ ಯುಕ್ತವೆನಿಸುವುದಿಲ್ಲ. ಇನ್ನು ನಿಮ್ಮ ಅವನ ಪರಿಚಯಗಳು, ಅಷ್ಟು ಹೆಚ್ಚಿಗೆ ಇರುವುದಾದರೆ ನೀನೇ ಪ್ರಸ್ತಾಪಿಸು" ಎಂದನು ದೇವರಾಯ. ಹೀಗೆ ಟೆಲಿಫೋನ್ ಸಂಭಾಷಣೆ ಬೇಗನೆ ಮುಗಿಯಿತು. 'ಏನು? ಏನು?' ಎಂದು ರಮಾನಾಥ ಆತುರ ದಿಂದ ಕೇಳಿದರೆ "ಹೇಳುತ್ತೇನೆ, ಹೇಳುತ್ತೇನೆ" ಎಂದು ತಡೆದು, ತಾವು ಆ ಇರಾಣಿಯ ಹೋಟೆಲನ್ನು ಪ್ರವೇಶಿಸಿದುದಕ್ಕೆ ಬೇಸರವಾಗಬಾರದೆಂದು ಚಾ ತರಿಸಿದನು. ಅನಾಯಾಸವಾಗಿ ಮೇಜಿನ ಮೇಲೆಯೇ ಇರಿಸಿದ್ದ ಬಿಸ್ಕಿಟ್, ಪುಡ್ಡಿಂಗ್‌ಗಳನ್ನು ಎತ್ತಿ ತಿನ್ನಲಾರಂಭಿಸಿದರು. ಬಿಲ್ಲನ್ನು ರೂಢಿಯಂತೆ ರಮಾನಾಥ ತೆತ್ತನು. ರಮಾನಾಥನಿಗೆ ಆತುರ; "ಎಂದು ಅವರ ಮನೆಗೆ ಹೋಗುವುದಂತೆ?" ಎಂದು ಕೇಳಿದನು. ಈ ಪ್ರಶ್ನೆಯನ್ನು ಸಮನಾಗಿ ಮುಂದುವರಿಸಿದ್ದಲ್ಲಿ ತನಗೆ ತೊಂದರೆಯಾದೀತು ಎಂಬು ತಿಳಿದ ಪ್ರಭುದೇವನು "ನನಗೆ ತಿಳಿದೇ ಇರಲಿಲ್ಲ ರಮಾನಾಥ, ಅವ ನಿಗೆ ಕಾರವಾರದ ಒಂದು ಹುಡುಗಿಯು ನಿಶ್ಚಯವಾಗಿದೆಯಂತೆ. ಬರಿದೆ ಅವನ ಭೇಟಿಗೆ ಹೋಗುವುದಾದರೆ ಹೋಗಬಹುದು. ಅವನು ಎಲ್ಲಿದ್ದಾ ನೆಂದು ತಿಳಿಸು, ಆ ಭೇಟಿ ನಿಶ್ಚಯಿಸುವುದಕ್ಕೂ, ಹದಿನೈದು ದಿನಗಳು ಬೇಕೆಂದು ದೇವರಾಯನು ಹೇಳಿದನು"—ಎಂದನು. ದೇವರಾಯ ನೊಡನೆ, ಫೋನ್ ಮೂಲಕ ಮಾತನಾಡುವಾಗ, 'ಹದಿನೈದು ದಿನಗಳ ಮಾತು' ಬಂದುದನ್ನು ಆತ ಕೇಳಿದ್ದನು. ಅದರ ಮೇಲಿಂದ ಆತನೆಂದು ದೆಲ್ಲವನ್ನೂ ರಮಾನಾಥ ಒಪ್ಪಬೇಕಾಯಿತು.

* * * * *

"ಸಮ್ಮೇಳನಕ್ಕೆ ಇನ್ನು ಎರಡು ದಿನಗಳ ಬಿಡುವಿದೆ. ಆ ಎರಡು ದಿನವೂ ಚೆನ್ನಾಗಿ ತಿರುಗಾಡುವ. ಆ ಮೇಲೆ ಮೂರು ದಿನ ಸಮ್ಮೇಳನ. ಅದು ಮುಗಿದ ಮೇಲೆ ಎಂಟು ದಿನವಾದರೂ ಇಲ್ಲಿದ್ದು ಹೋಗಬೇಕು. ನನಗೆ ಮುಂಬಯಿ ಕಂಡು ಹುಚ್ಚು ಹಿಡಿದಿದೆ. ಪೂರ್ಣ ತೃಪ್ತಿಯಾಗುವ ತನಕ ಇರಬೇಕು. ಈಗಲೇ ತಂದೆಯವರಿಗೆ—ಒಂದ ಕೆಲಸ ಪೂರ್ಣ ವಾಗದೆಂದು ಒರೆದರೆ— ಅಷ್ಟು ದಿವಸ ಮುಂಬಯಿಯಲ್ಲಿ ಖರ್ಚು ಮಾಡಲು ಯಾಕೆ ಕುಳಿತೆ—ಎಂದು ಕೇಳಿಯಾರು. ಹಿಂದೆ ಹೊರಟು ಬರುವುದಕ್ಕೆ ತಂತಿಯನ್ನು ಕೊಟ್ಟಾರು. ಆ ರಗಳೆಯೇ ಬೇಡ. ಅವರನ್ನು

ಕಾಣುವ ಏರ್ಪಾಟು ಆಗಿದೆ ಎಂದು ಬರೆಯುತ್ತೇನೆ” ಎಂದು ರಮಾನಾಥ ತೀರ್ಮಾನಮಾಡಿದನು.

ಸರಿ, ಮುಂಬಯಿಯಲ್ಲಿ ಬಂದವರಿಗೆ ಸಮಯ ಕಳೆಯುವುದು ಕಷ್ಟವೇ? ಅದೂ ಬಹುಮುಖವಾದ ಅಭಿರುಚಿಯುಳ್ಳ ಪ್ರಭುದೇವನಂತಹ ಗೆಳೆಯರಿರುವಾಗ? ಆತ—ಎಪ್ಪೊಲೋ ಬಂದರಿಗೆ ಹೋದಾಗ ಅಲ್ಲೊಂದು ಉಪನ್ಯಾಸ ಮಾಡುತ್ತಾನೆ; ಚೌಪಾಟಿಯ ಜನಸಂದಣಿ ನೋಡಿದರೆ ಮತ್ತೂ ಒಂದು ಉಪನ್ಯಾಸ ಬಿಗಿಯುತ್ತಾನೆ. ಮಲಬಾರುಹಿಲ್ಲಿನ ಶ್ರೀಮಂತರ ಮನೆಗಳನ್ನು ತೋರಿಸಿ “ಇವು ನಾಳೆ, ಗಿರಣಿ ಕೂಲಿಗಳ ನಿವಾಸಗಳಾಗುತ್ತವೆ. ಈ ಜನ ಸೊಕ್ಕಿ ಮಹಾಲಕ್ಷ್ಮಿ ಕುದುರೆ ಪಂದ್ಯಕ್ಕೆ ಹೋಗುತ್ತಾರಲ್ಲ; ದೇಶದಲ್ಲಿ ಸೋಶಲಿಸ್ಟ್ ಸರಕಾರ ಬಂದರೆ ಆ ಕುದುರೆ ಗಳನ್ನೆಲ್ಲ ಜಟ್ಕಾ ಗಾಡಿಗೆ ಕಟ್ಟುತ್ತಾರೆ. ಈ ಅಗಾಖಾನರ ಕುದುರೆ ಗಳನ್ನೂ, ಬಡೋದೆ ಮಹಾರಾಜರ ಕುದುರೆಗಳನ್ನೂ ನಮ್ಮ ಪಾಸ್ಕಲ್ಲನ ಜಟ್ಕಾ ಬಂಡಿಗೆ ಕಟ್ಟಿಸಿ, ನಾವು ಸವಾರಿ ಮಾಡುವ ದಿವಸಗಳೂ ಬರು ತ್ತವೆ” ಎನ್ನುತ್ತಾನೆ. ಪ್ರಭುದೇವನಿಗೆ ತನ್ನ ಇಂಥ ಭಾವನೆಗಳ ಸೊಗಸು ಗಳನ್ನು ಕಂಡು ತನಗೇನೇ ಆನಂದವಾಗುತ್ತದೆ.

ಹಾ, ಹೊಂ,—ಎನ್ನುವುದರಲ್ಲಿ ಸಮತಾವಾದಿ ಪರಿಷತ್ ಬಂದಿತು. ಫೋರ್ಟಿನ ವಿಶಾಲವಾದ ಒಂದು ಭವನದಲ್ಲಿ ಹಲವು ಪ್ರತಿನಿಧಿಗಳೂ, ಉತ್ಸಾಹಿಗಳೂ ಸೇರಿದರು. ನಾಡಿನ ಸಾಮ್ಯವಾದಿ ಮುಖಂಡರಲ್ಲಿ ಹೆಸ ರಾದವರೂ ಅನೇಕರು ಬಂದರು. ಆ ಮುಖಂಡರಷ್ಟೇ ಠೀವಿಯಿಂದ ಪ್ರಭುದೇವ, ರಮಾನಾಥನನ್ನು ಬೆಂಗಾವಲಿಗೆ ಇರಿಸಿಕೊಂಡು, ಪ್ರತಿನಿಧಿ ಟಿಕೇಟನ್ನು ಪಡೆದು, ಒಳಕ್ಕೆ ನುಗ್ಗಿದನು. ದಾರಿಯಲ್ಲಿ, ಲಲು ಜೆನರ ವರು ನೋಡಲು ಸಿಕ್ಕಿದರು. ಈತ ವಂದಿಸಿ, ನಕ್ಕನು. ಅವರಿಗೆ ಇವನ ಗಮನವೇ ಆಗದೆ, ಇತರ ಉದ್ದಾಮರ ಜತೆಗೆ ವೇದಿಕೆಯ ಮೇಲೆ ಹೋಗಿ ಕುಳಿತರು. ಎದುರಿಗೆ ಅಲ್ಲವಾದರೂ, ಕಾಣಿಸುವಷ್ಟು, ಕೇಳಿ ಸುವಷ್ಟು, ದೂರದಲ್ಲಿ ಈತ ತನ್ನ ಗೆಳೆಯನೊಂದಿಗೆ ಹೋಗಿ ಕುಳಿತನು. ಶ್ರೀಮಂತರಂತೆ—ಐವತ್ತು ನೂರು ರೂಪಾಯಿಗಳ ದಂಡತೆತ್ತು, ಮುಂದಿನ ಸಾಲಿನಲ್ಲಿ ಈತ ಕುಳಿತುಕೊಳ್ಳದೆ, ಹಿಂದೆ ಕುಳಿತಿದ್ದರೂ, ಹಲವು ಬಾರಿ, ಲಲು ಜೆನರವರ ಗಮನವನ್ನು ಸೆಳೆಯಲು ನಗುವನ್ನು ಬೀರುತ್ತಿದ್ದನು. ಕೈ

ಯನ್ನು ಎತ್ತಿದನು. ಅವನದ್ದು ವ್ಯರ್ಥ ಸಾಹಸವಾಯಿತು. ಬೆಳಗಿನ ಹತ್ತು ಘಂಟೆಗೆ ಪ್ರಾರಂಭವಾಗಬೇಕಾಗಿದ್ದ ಅಧಿವೇಶನವು, ನಿಯೋಜಿತ ಅಧ್ಯಕ್ಷರು ಬಾರದೆ, ತೊಡಗುವುದು ತುಸು ವೇಳೆಯಾಯಿತು. ಈತ ಅಶಾಂತಿಯಿಂದ ನಿಮಿಷ ನಿಮಿಷಕ್ಕೂ ಗಡಿಯಾರವನ್ನು ನೋಡುತ್ತಿದ್ದಾನೆ. "ಘಂಟೆ ಹತ್ತುಕಾಲು ಆಯಿತು. ಸಮಾಜವಾದಿಗಳು ವೇಳೆ ತಪ್ಪುತ್ತಾರೆಯೋ; ನನ್ನ ಗಡಿಯಾರವೇ ಸಮವಿರಲಾರದು" ಎಂದು ಅದರ ಮುಳ್ಳುಗಳನ್ನು ಹಿಂದಕ್ಕೆ ತಳ್ಳಿದನು. ಬಹು ಹೊತ್ತು ಕಳೆದ ಮೇಲೆ ಅಧ್ಯಕ್ಷ ನಿಯೋಜಿತರಾದ ಶ್ರೀ ಸರ್ವ ಪ್ರಸನ್ನರವರು ಬಂದರು. ಜಯಘೋಷವಾಯಿತು. ಎಲ್ಲರಿಗೂ ಸ್ವಾಗತ ಭಾಷಣದ ಪ್ರತಿಗಳನ್ನು ಹಂಚಿದರು. ಶ್ರೀಮತಿ ಲಲು ಬೆನರವರೇ ಸ್ವಾಗತ ಭಾಷಣವನ್ನು ಮಾಡಿದವರು. ಅನಂತರ ಅಧ್ಯಕ್ಷರ ಭಾಷಣವಾಯಿತು. ಮೂರು ತಾಸು ಕಾಲ ಹೀಗೆ ಅವರಿಬ್ಬರ ಉಪನ್ಯಾಸಗಳ ಸುರಿ ಮಳೆಯಾಯಿತು. ಪ್ರಭುದೇವನು ಬೇಸರವಿಲ್ಲದೆ ಕಿವಿಗೊಡುತ್ತಿದ್ದು, ಅಲ್ಲಲ್ಲಿ, 'ಹಿಯರ್' 'ಹಿಯರ್' ಅನ್ನುತ್ತಲೇ ಇದ್ದ. ಆ ಪ್ರಶಂಸೆಯಿಂದ ಆಚೀಚಿನವರು ತನ್ನನ್ನು ಗಮನಿಸಲೆಂಬುದು ಅವನ ಇಷ್ಟ. ಆ ಕೆಲಸವೇನೋ ಆಯಿತು.

ಸಭೆ ಮುಕ್ತಾಯವಾಗುವ ಗಳಿಗೆಗೆ ಆತನೆದ್ದು ವೇದಿಕೆಯ ಬಳಿಗೆ ಓಡಿ, ಅಧ್ಯಕ್ಷರೊಡನೆ ಕರಲಾಘವ ಮಾಡಲು ಮುಂದುವರಿದನು. ಆದರೆ ಇವನಿಗಿಂತ ಮುಂಚಿತವಾಗಿ ಅನೇಕ ಅಭಿನಂದಕರು ವೇದಿಕೆಯನ್ನು ಮುತ್ತಿದ್ದರು. ಎರಡು ದಿವಸಗಳ ಭರ್ತಿ ಕಾರ್ಯಕ್ರಮದಲ್ಲಿ ತಾನೂ ಸೇರಿಕೊಳ್ಳಬೇಕೆಂದರೆ, ಅವನಿಗೆ ಅವಕಾಶವೇ ಸಿಗಲಿಲ್ಲ. ಕರ್ನಾಟಕದ ಪ್ರಾತಿನಿಧ್ಯವೂ ಮುಂಬಯಿಯಲ್ಲಿದ್ದ ಕನ್ನಡಿಗರಿಗೇ ಹೋಗಿತ್ತು. ಅದರಿಂದ ತುಂಬ ಸಿಡಿಮಿಡಿಗೊಂಡನು. ಲಲು ಬೆನರವರನ್ನು ಕಾಣುವುದಕ್ಕೂ ಅವಕಾಶವಾಗಲಿಲ್ಲ. ಅಂತೂ ತನ್ನ ಉದ್ದೇಶವನ್ನು ಪೂರೈಸಲು— ಇರಾಣಿ ಚಾದುಕಾನದಲ್ಲೇ ಕುಳಿತು, ಟೆಲಿಫೋನ ಡೈರೆಕ್ಟರಿ ತೆರೆದು, ಲಲು ಬೆನರವರ ನಂಬರನ್ನು ತಿರುಗಿಸಿದನು. ಆ ನಾಲ್ಕು ದಿನಗಳಲ್ಲಿ, ಹದಿನೈದು ಸಾರಿ, ಆ ರೀತಿ ಪ್ರಯತ್ನಿಸಿದನು. ಹಲವು ಬಾರಿ 'ಅವರು ಮನೆಯಲ್ಲಿ ಇಲ್ಲ' ಎಂಬ ಉತ್ತರ ಬಂದಿತು. ಇನ್ನಷ್ಟು ಬಾರಿ "ರಾಂಗ್ ನಂಬರ್"ನಲ್ಲಿ ಕರೆಯು ಮುಕ್ತಾಯವಾಯಿತು. ಕೊನೆಗೂ ಒಮ್ಮೆ ಅವರನ್ನು ಹಿಡಿದು

ತುಳ್ಳಿರಿಸಲು ಶಕ್ತನಾದನು. "very busy. ಯಾರು ನೀವು? ಚುಟು ಕಿನಲ್ಲಿ ಹೇಳಿ" ಎಂದು ಅವರಿಂದಮಾತು ಬಂದಿತು. "ಮಂಗಳೂರು ನನ್ನದು ತಮಗೆ ಡಾ। ನಂದರವರ ಪತ್ರ ತಂದಿದ್ದೇನೆ. ತಮ್ಮನ್ನು ಕಾಣಬೇಕಾ ಗಿದೆ" ಎಂದು ಬಿನ್ನವಿಸಿದ. "Hello is it you? Good morning: ಈಗ ನಾನು busy ಇದ್ದೇನೆ. ನಿಮ್ಮ ಫೋನ್ ನಂಬರನ್ನು ತಿಳಿಸಿ. ಅವಕಾಶವಾದಾಗ ನಾನೇ ring up ಮಾಡುತ್ತೇನೆ" ಎಂದರು. ಅವರು ಅಲ್ಲಿಗೆ ಅಂದಿನ ಮಾತು ಮುಗಿಯಿತು. ಕಾರಣ ಇವನ ಫೋನ್ ನಂಬರು ಇರಾಣಿ ಹೊಟೇಲಿನದೇ ಸರಿ. ಅಷ್ಟರಿಂದಲೇ ತನಗೆ ನಿರಾಶೆಯಾಗಿದೆ ಎಂದು ರಮಾನಾಥನೆದುರಿಗೆ ತೋರಿಸಿಕೊಳ್ಳದಿರುವುದು ಅವನ ಉದ್ದೇಶ. "ಮುಂಬಯಿಯ ಜನ, ಅದರಲ್ಲಿಯೂ ಮುಂಬಯಿಯ ಮುಖಂಡರು. ಅದರಲ್ಲಿಯೂ ತಮ್ಮ ಸೋಶಲಿಷ್ಟ ಮುಂದಾಳುಗಳು--ತುಂಬ ಉದ್ಯೋಗ ಶೀಲ ಜನರು. ಅವರಿಗೆ ಒಂದಿಷ್ಟೂ ಬಿಡುವಿರುವುದಿಲ್ಲ, ಗಾಂಧೀಜಿಯವ ರಾಗಿದ್ದರೆ ಇಷ್ಟರೊಳಗೆ ಭೇಟಿ ಪಡೆಯಬಹುದಿತ್ತು" ಎಂದು ರಮಾನಾಥ ನಿಗೆ ಈಪ್ರಸಂಗವನ್ನು ಆತವಿವರಿಸಿ ಹೇಳಿದನು. ಪರಿಷತ್ತು ಏನೋ ಮುಗಿ ಯಿತು. ಲಲು ಜಿನರವರನ್ನು ನೋಡದೆ ಹೋಗಲು ಇಷ್ಟವಿಲ್ಲ. ಅಲ್ಲಿಯ ತನಕ ಏನು ಮಾಡಬೇಕೆಂಬ ಕಾರ್ಯಕ್ರಮ ನಿಶ್ಚಯಿಸಬೇಕಷ್ಟೆ. ಚಾ ಕುಡಿಯುವ ನೆಪದಿಂದ ಹೊಟೇಲಿಗೆ ಹೋಗುವುದು, ಇರಾಣಿಯ ಫೋ ನನ್ನು ತೆಗೆದು, ಸಿನೇಮ ತಾರೆಯರನ್ನು ಕೂಗುವುದು—ಅವನ ಮುಂದಿನ ಉದ್ಯೋಗವಾಯಿತು. ತೆಗೆದ ಬಾಯಿಗೇ "ಆರ್ಟ್ ಎಡಿಟರ್ ಒಫ್ ಮೆಂಗಲೂರ್ ಮಿರರ್" ಎಂದು ತನ್ನ ಪರಿಚಯ ಹೇಳುವುದು. ಆಗ ಸುಲ ಭವಾಗಿ, ಸ್ತುತಿಪಾಠಕ್ಕಾಗಿ ಹಾತೊರೆಯುತ್ತಿರುವ ಸಿನೇಮಾ ತಾರೆಯ ರೊಡನೆ ಭೇಟಿ ನಿಶ್ಚಯವಾಗುತ್ತದೆ. ಅಂಥ ಅನೇಕ ಭೇಟಿಗಳನ್ನು ಗೊತ್ತು ಮಾಡಿಕೊಂಡು, ತನ್ನ ವಿರಾಮಕ್ಕೆ ಅವಕಾಶ ಮಾಡಿಕೊಂಡನು. ಎಂಟು ದಿನಗಳ ತನಕ ಅವರಿಬ್ಬರೂ ಸೇರಿ ಎಲ್ಲಾ ಸ್ಟುಡಿಯೋಗಳ ಸಂಧರ್ಶನ ಮಾಡಿದರು. ಅಲ್ಲಿನ ಗಂಡು ಹೆಣ್ಣು ತಾರೆಯರನ್ನೆಲ್ಲಾ ಒಲಿಸಿಕೊಂಡರು. ಅವರ ಭಾವಚಿತ್ರ, ಸಹಿ, ಜೀವನ ಚರಿತ್ರೆ, ನಾಳಿನ ಯೋಜನೆ,— ಯಾವುವು ಬೇಕೋ ಅವೆಲ್ಲವೂದೊರೆತುವು. "ಭಾರತೀಯ ನಾರಿಯರ ಪಾವಿತ್ರ್ಯವನ್ನು ಪಾಶ್ಚಾತ್ಯ ಜಗತ್ತಿಗೆ ತೋರಿಸುವುದಕ್ಕೇನೇ, ನಾನು

ಓದನ್ನು ನಿಲ್ಲಿಸಿ ಕಲಾ ಪ್ರಪಂಚಕ್ಕೆ ಇಳಿದಿದ್ದೇನೆ" ಎಂದಳು ಚಂದ್ರ ಪ್ರಭಾದೇವಿ. "ನನ್ನ ಅಭಿಲಾಷೆಯೆಂದರೆ ನನ್ನ ಆದಾಯದಲ್ಲಿ ಅರೆವಾಸಿಯನ್ನಾದರೂ, ಸ್ತ್ರೀಯರ ಉನ್ನತಿಗಾಗಿ ವ್ಯಯಿಸುವುದು" ಎಂದಳು ತಾರಾ ರಾಣಿ. "ನನಗೆ ದಿನಕ್ಕೆ ನಾಲ್ಕಾವೃತ್ತಿಯಾದರೂ ಬಸಂತ ರಾಗವನ್ನು ಹಾಡದೆ ಹೋದರೆ ಅನ್ನವೇ ಪಕ್ವವಾಗುವುದಿಲ್ಲ" ಎಂದಳು ಕೋಕಿಲ ಕಂಠೆ ನಿರ್ಮಲ. ಹೀಗೆ ಎಂಥೆಂಥವರನ್ನೆಲ್ಲ ಕಾಣಬೇಕು? ಭಗವದ್ಗೀತೆಯಲ್ಲೇ ತೇಲಾಡುವ ತಾರೆಯರು; ಕಲಾ ಸೇವೆಗಾಗಿ ಕಾರಿನಲ್ಲೇ ಮನೆ ಮಾಡಿದವರು, ಅಭಿನಯದ ಮೇಲೆ ಮೂರು ತಾಸು ಮಾತನಾಡಿ, ಚಿತ್ರಗಳಲ್ಲಿ ಮೂಕರಾಗಬಲ್ಲ ಸ್ಥಿತ ಪ್ರಜ್ಞರು—ಇಂಥ ಹಲವಾರು ನಟನಟಿಯರೊಡನೆ ಪರಿಚಯ, ಭೇಟಿಗಳನ್ನು ಪ್ರಭು ರಮಾನಾಥರು ನಡೆಯಿಸಿದರು.

ತಮ್ಮ ನಿವಾಸದ ಮನೆಗೆ ಬರುತ್ತ ಪ್ರಭುದೇವನ ಮನಸ್ಸಿನಲ್ಲಿ—ಈ ತಾರಾನಿವಹವನ್ನು ಕುರಿತು ಅವನಿಗಿದ್ದ ಅಭಿಪ್ರಾಯವೇ ಬದಲಾಯಿತು. ಅಭಿಪ್ರಾಯವಿದ್ದದ್ದು ಹೋಗಿ ಅಭಿಮಾನದ ರೂಪವನ್ನು ತಾಳಿತು. 'ಇಂತಹರು ರಸ್ಯಾದಂತಹ ದೇಶದಲ್ಲಿದ್ದರೆ ಕ್ರಾಂತಿ ಪುರುಷರಾಗುತ್ತಿದ್ದರು. ಧನಸತ್ತೆಯ ಹಿಂದುಸ್ಥಾನದಲ್ಲಿ ಹುಟ್ಟಿ ಈಗ ಶಕ್ತಿ ಹೀನರಾಗಿದ್ದಾರೆ' ಎಂದು ಆತ ತರ್ಕಿಸಿದನು. ರಮಾನಾಥನಿಗೆ ಇನ್ನೂ ಊರಿಗೆ ಹೊರಡುವ ಮನಸ್ಸಿಲ್ಲ. ಅವನ ಮೆಚ್ಚಿಕೆಯ ಕೆಲವು ನಟಿಯರು, ಚಲಚ್ಚಿತ್ರ ನಿರ್ಮಾಣಕ್ಕೋಸ್ಕರ ದೇಹಲಿ, ಆಗ್ರಾ, ಕಾಶ್ಮೀರಗಳಿಗೆ ಪ್ರವಾಸಬೆಳೆಸಿದ್ದಾರೆ. ಅವರು ಮರಳಿ ಬರುವ ತನಕ ತಾನು ಮುಂಬಯಿಯಲ್ಲಿ ಇದ್ದರಾಗದೇ—ಎಂದು ಅವನ ಮನಸ್ಸು ಹೇಳುತ್ತಿತ್ತು. ಪ್ರಭುದೇವನಿಗೆ ಭಾವೀ ಸಮಾಜವಾದಿ ಪರಿಷತ್ತಿನ ಪೀಠಿಕೆಯನ್ನು ಹಾಕುವುದಕ್ಕೆ ಆಗಲಿಲ್ಲ. ಹಾಗು ಹೀಗೂ, ಶ್ರೀಮತಿ ಲಲುಬೆನ್‌ರವರ ಮಲಬಾರು ಹಿಲ್ ಬಂಗಲೆಗೆ ಒಂದು ದಿನ ಭೇಟಿಕೊಟ್ಟನು. ತನ್ನ ಕಾರ್ಡನ್ನೂ ಡಾ। ನಂದರವರ ಪತ್ರವನ್ನೂ ಒಳಕ್ಕೆ ಕಳುಹಿಸಿದನು. ಬರಲು ಆಮಂತ್ರಣವಾಯಿತು. ಲಲುಬೆನ್‌ರವರೊಡನೆ "ನಾನು ಮುಂದಿನ ವರ್ಷದ ಪರಿಷತ್ತನ್ನು ಕರೆಯಲು ಬಂದಿದ್ದೇನೆ, ತಾವು ಆ ವಿಷಯವಾದ ತೀರ್ಮಾನವನ್ನು ಇನ್ನೂ ಮಾಡಿಲ್ಲ; ಮಂಗಳೂರಿನ ನಮ್ಮ ಹೃತ್ಪೂರ್ವಕ ಆಹ್ವಾನವನ್ನು ಸ್ವೀಕರಿಸಲೇ ಬೇಕು" ಎಂದು ಬಿನ್ನವಿಸಿದ. ಅವರು ನಗುತ್ತ "ನೋಡುವ, ಕಮಿಟಿಯ ಮುಂದೆ

ನಿಮ್ಮ ಬಿನ್ನಹ ಇರಿಸುತ್ತೇನೆ. ಮಿ। ನಂದರವರಿಗೆ ನನ್ನ ವಂದನೆಯನ್ನು ತಿಳಿಸಿ" ಎಂದರು. ಆ ಸಮಯಕ್ಕೆ ಸರಿಯಾಗಿ, ಡವಾಲಿ ಬಿಲ್ಲೆಗಳನ್ನು ತೊಟ್ಟ ಒಬ್ಬ ಚಾಕರ, ಇಬ್ಬರ ಮುಂದೆಯೂ, ಸೊಗಸಾದ ಕಟ್‌ಗ್ಲಾಸ್ ಬಟ್ಟಲುಗಳಲ್ಲಿ ಹಣ್ಣಿನ ಶರಬತ್ತು ತಂದಿರಿಸಿದನು. ಅವರು ಕುಡಿಯುವ ರೀತಿಯನ್ನು ನೋಡನೋಡುತ್ತ, ಅನುಕರಿಸಿ, ಈತನೂ ಕುಡಿದು ಮುಗಿಸಿದನು. ಮೇಜಿನ ಮೇಲೆ ಸ್ಟೇಟ್ ಎಕ್ಸ್‌ಪ್ರೆಸ್ಸ್ ಹೊಗೆ ಬತ್ತಿಯಿತ್ತು. ಅದನ್ನು ಅರ್ಪಿಸಿದರು—ಈತ ಸೇವಿಸಿದ್ದೂ ಆಯಿತು. ಅಷ್ಟರಲ್ಲಿ ಅವರ ಕಾರ್ಯದರ್ಶಿಯು ಬಂದು "ಮೇಡಮ್, ಕಾರು ಸಿದ್ಧವಾಗಿದೆ" ಎಂದನು. ಲಲುಬೆನರವರು ಎದ್ದು, ಈತನೊಡನೆ ಕರಲಾಘವ ಮಾಡಿ, ತಮ್ಮ ತೀರ ಹೊಸ ಮಾದರಿಯ ಕಾರಿನಲ್ಲಿ ಕುಳಿತು ಅಂತರ್ಧಾನರಾದರು. ಈತ, ಈ ತನಕ ಪಟ್ಟ ಸಂತೋಷಕ್ಕೆ ಕೊನೆಯನ್ನು ತಂದುಕೊಂಡು, ಹೊರಕ್ಕೆ ಬಂದನು. ರಮಾನಾಥನು ಗೇಟಿನ ಹೊರಗಡೆ ನಿಂತು ಕಾಯುತ್ತಿದ್ದ. ಅವನನ್ನು ನೋಡಿ ಪ್ರಭುದೇವ ಹಸನ್ಮುಖಿಯಾದನು, "ಏನಾಯಿತು?" ಎಂದು ಕೇಳಿದನು.ಅವನು. "ಖಂಡಿತ ಪ್ರಯತ್ನ ಮಾಡುವೆ ಎಂದಿದ್ದಾರೆ. ಅವರಿಗಂತೂ ಮಂಗಳೂರಿಗೆ ಬರಲು ಬಹಳ ಉತ್ಸಾಹವಿದ್ದಂತೆ ಕಾಣು ತ್ತದೆ. ಹಾರಿಸಿ ಬಿಡುವ--ಗ್ರೇಂಡ್ ಆಗಿ ಒಂದು ಪರಿಷತ್ತನ್ನು" ಎಂದನು.

ಮರುದಿನ ಮುಂಬಯಿ ಪ್ರವಾಸ ಮುಗಿಸಿ ಊರಿಗೆ ಹೊರಡಬೇಕೆಂಬ ನಿಶ್ಚಯವಾಯಿತು. ಊರುಬಿಟ್ಟು ಬಂದು ಹದಿನೆಂಟು ದಿನಗಳಾಗಿವೆ. ಈ ಪರಿಷತ್ತಿನ ದೆಸೆಯಿಂದ, ಮಿರರ್ ಪತ್ರಿಕೆಯೇ ಹೊರಡದೆ ಎರಡು ವಾರಗಳಾಗಿದ್ದುವು. ಅದರ ಏಕತಂತ್ರ ಸ್ವತಂತ್ರನಾದ ಪ್ರಭುದೇವನೇ ಮುಂಬಯಿಯಲ್ಲಿರುವಾಗ ಅದನ್ನು—ಮೊಳೆ ಜೋಡಿಸುವವರು ನಡೆಯಿಸುವುದೇ?

ಊರಿಗೆ ಬಂದವನೇ, ಈ ಉಪವಾಸದ ಬಡ್ಡಿಯನ್ನು ತೀರಿಸುವುದಕ್ಕಾಗಿ, ಸಮಾಜವಾದಿ ಪರಿಷತ್ತಿನ ವಿಶೇಷಾಂಕ ಒಂದನ್ನು ಹೊರಡಿಸಿದ್ದೂ ಆಯಿತು. ಅಲ್ಲಿಂದ ಆರುತಿಂಗಳ ತನಕ ಮುಂಬಯಿ ಸ್ಫೂರ್ತಿಯಿಂದಲೇ ಅವನ ಪತ್ರಿಕೆ ಹಾರಾಡಿತು. ಅಲ್ಲಿನ ತಾರಾನಿವಹದ ಕಹಳೆಯನ್ನು ಊದದ್ದವಾರವೇ ಇರಲಿಲ್ಲ. ಮುಂಬಯಿಯಲ್ಲಿ ತಾನು—ಹೆಸರು ಕೇಳಿ ಬಂದ, ಕೆಲವಾರು ಶ್ರೀಮಂತರನ್ನು ಉದ್ದೇಶಿಸಿ ಬಹಿರಂಗ ಪತ್ರ

ವನ್ನು ಬರೆದಾಯಿತು. ಪುಣ್ಯಕ್ಕೆ ಮಂಗಳೂರಿನಲ್ಲಿ, ಕನ್ನಡ ಬರುವ ಮಾರವಾಡಿಗಳು, ಖೋಜಾ ಜನ, ಫಾರ್ಸಿಯರು—ಇಲ್ಲದೇ ಹೋಯಿತು. ಇದ್ದರೆ ಅವರಿಗೂ ಈತ ಬಹಿರಂಗ ಪತ್ರ ಬರೆಯುತ್ತಿದ್ದ. ಆದುದರಿಂದ ಅವನ ಮನಸ್ಸಿಗೆ—ತನ್ನ ಲೇಖನಿಯ ಏಟನ್ನು ಚೆನ್ನಾಗಿ ತೋರಿಸುವುದರ ಸಲುವಾಗಿ, ಮಂಗಳೂರಿನ ಶ್ರೀಮಂತರಿಗೆ ಬೊಟ್ಟುಮಾಡಬಾರದೇಕೆ—ಎಂದು ತೋರುತ್ತಿತ್ತು. "ಹೀಗೆ ನಾನು ಅವರ ವಿಷಯದಲ್ಲಿಯೂ ಬರೆದರೆ, ಹಾ-ಹಾಕಾರವೆದ್ದೀತು. ಅಂಥ ದಿನಗಳು ಬೇಗನೆ ಬಂದಾವು" ಎಂದು ತನ್ನ ತರುಣ ಮಿತ್ರರ ಮುಂದೆ ಬಡಾಯಿಕೊಚ್ಚಿದನು.

ಕಾಲವು ಯಾರ ಕನಸಿಗಾಗಿಯೂ ಕಾಯುವುದಿಲ್ಲ. ಪ್ರಭುದೇವನೊಂದು ಅಕ್ಷೇಪವೇ? ಮೂರು ತಿಂಗಳು ಕಳೆದುವು; ಆರು ತಿಂಗಳೂ ಆಯಿತು. ಇನ್ನೊಮ್ಮೆ ಕಾಂಗ್ರೆಸ್ ಸದಸ್ಯರನ್ನು ಕೂಡಿಸುವ ವೇಳೆಯೂ ಬಂದಿತು. ಸಮಾಜವಾದಿ ಪರಿಷತ್ತನ್ನು ಕರೆಯಿಸಿಕೊಳ್ಳುವ ಅವನ ಆತುರ ಮತ್ತೂ ಹೆಚ್ಚಾಯಿತು. ಜಿಲ್ಲೆಯಲ್ಲೆಲ್ಲಾ ಅದಕ್ಕಾಗಿ ಓಡಾಡಿದನು. ಕಾಂಗ್ರೆಸ್ಸ್ ಸಮಿತಿಗಳ ಪುನರುತ್ಥಾನವನ್ನು ಮಾಡಿದನು. ಡಾ| ನಂದರೊಡನೆ ಸಂಚಾರ ಮಾಡಿ ಹಿರಿಯಾಳೆನಿಸಿದನು. ಅವರ ಕೃಪೆ, ನೆರವುಗಳಿಂದ ಕರ್ನಾಟಕ ಪ್ರಾಂತ ಸಮಿತಿಯ ಮೆಂಬರನೂ ಆದನು. ಕಾಂಗ್ರೆಸ್ಸಿನೊಳಗೇನೇ ಸಮಾಜವಾದಿ ಎಡ ಪಕ್ಷವನ್ನು ಕಲ್ಪಿಸಲು ಹವಣಿಸಿದನು. ಆ ಯೋಚನೆಗೆ ಪುಷ್ಟಿ ದೊರೆಯುವಂತೆ, ಡಾ| ನಂದರನ್ನು ಹಿಡಿದು, ಲಲು ಬೆನರವರಿಗೆ ತಂತಿ ಕಳುಹಿಸಿದನು. ಅಲ್ಲಿಂದ "ವಿಷಾದ ಪಡುತ್ತೇವೆ. ಈ ವರ್ಷದ ಸಮ್ಮೇಳನ ಖಾನಪುರದಲ್ಲಿ ಎಂದು ತೀರ್ಮಾನವಾಗಿದೆ" ಎಂಬ ಉತ್ತರ ಬಂದಿತು.

ಆ ದಿನ ನಂದರೂ, ಇವನೂ ಕೂಡಿ ಪಟ್ಟಂತಹ ಸಿಟ್ಟು ಅಷ್ಟಿಷ್ಟಲ್ಲ. ಅವರಿಗೆ ಇಲ್ಲಿ ಬಂದಾಗ ಮಾತ್ರ ನಮ್ಮ ಗುರುತು. ಅಲ್ಲಿಗೆ ಹೋದ ಮೇಲೆ ಯಾರ ನೆನಪೂ ಉಳಿಯುವುದಿಲ್ಲ. ಮುಂಬಯಿ, ಖಾನಪುರಗಳಂತಹ ದೊಡ್ಡ ಊರುಗಳೇ ಹೊರತು, ಮಂಗಳೂರಿನಂತಹ ಚಿಕ್ಕ ಶಹೆರು ಅವರಿಗೆ ಕಾಣಿಸುವುದೇ ಇಲ್ಲ" ಎಂದು ಇಬ್ಬರೂ ರೇಗಿದರು. ಪ್ರಭುದೇವನಿಗೆ, ಶ್ರೀಮತಿಯವರನ್ನೇ ಗುರಿಯಾಗಿಟ್ಟುಕೊಂಡು ಇಂಗ್ಲಿಷಿನಲ್ಲಿ ಒಂದು ಬಹಿರಂಗ ಪತ್ರವನ್ನು ಬರೆಯುವ ಮನಸ್ಸಾಯಿತು. "ಬರೆದು ಪ್ರಕಟಿಸಿ

"ಅದನ್ನು ಅವರಿಗೇ ಕಳುಹಿಸುತ್ತೇನೆ"ಎಂದುಕೊಂಡ. ಅನಂತರ ಒಮ್ಮೆಗೇ ಹಾಗೆ ದುಡುಕಬಾರದು. ಮುಖಂಡರೆಂದ ಮೇಲೆ, ಮುಂಕಾಗಿ ಅವರನ್ನು ಹಿಂಬಾಲಿಸುವ ಜನರು ಸಮಾಜವಾದಿಗಳಲ್ಲಿಯೂ ಇಲ್ಲ ಎಂದು ಹೇಗೆ ಗೊತ್ತು? ಮುಂದಾದರೂ, ಪರಿಷತ್ತು ಇಲ್ಲಿಗೆ ಬರುವ ಸಂದರ್ಭವನ್ನು ಕಳೆದುಕೊಳ್ಳಬಾರದು" ಎಂದು ತೀರ್ಮಾನಿಸಿದನು. ಆದರೂ ಅವನ ಆತುರ ಉತ್ಸಾಹ ತಣಿಯುವಂತಿಲ್ಲ. "ಏನಾಯಿತು? ಅಖಿಲ ಭಾರತ ಪರಿಷತ್ತನ್ನು ಕೂಡಿಸಲಾಗದೆ ಹೋದರೆ, ಅಖಿಲ ಕರ್ನಾಟಕದ ಪ್ರಥಮ ಸಮಾಜವಾದಿ ಪರಿಷತ್ತನ್ನು ಕರೆಯುವುದೆಂದು ನಿಶ್ಚಯ ಮಾಡಿಬಿಟ್ಟನು. ಅಲ್ಲಿಂದಲೇ, ಪತ್ರಿಕೆಯಲ್ಲಿ ಲೇಖನ ಪ್ರಾರಂಭವಾಯಿತು. ಸೇರದ ಸಭೆ ಯೊಂದನ್ನು ಕಾಗದದಲ್ಲಿ ಸೇರಿಸಿ, ರಮಾನಾಥ, ಬಾಲಚಂದ್ರರಂತಹ ತರುಣರ ಹೆಸರುಗಳನ್ನು ಪ್ರಸಿದ್ಧಿಸಿ, ಡಾ| ನಂದರನ್ನು ಸ್ವಾಗತಾಧ್ಯಕ್ಷರ ನ್ನಾಗಿಯೂ, ತನ್ನನ್ನು ಪ್ರಧಾನಕಾರ್ಯದರ್ಶಿಯನ್ನಾಗಿಯೂ ಮಾಡಿ ಕೊಂಡು ಅಖಿಲ ಕನ್ನಡ ನಾಡಿಗೆ ವಿನಂತಿ ಪತ್ರಗಳನ್ನು ಕಳುಹಿಸಿಬಿಟ್ಟನು. ಪತ್ರ ಹೋದ ಮರುದಿವಸ ಪ್ರತ್ಯುತ್ತರಗಳೂ ಬಂದುವು. "ಇದು ಪ್ರಥಮ ಪರಿಷತ್ತಲ್ಲ. ಅವನ್ನು 1924ರಲ್ಲಿ ನಾವು ನಮ್ಮ ಧಾರವಾಡ ದಲ್ಲಿ ಜರುಗಿಸಿದ್ದೇವೆ" ಎಂದು ಒಂದು ಕಾಗದ ಬಂದಿತು. "1923ರಲ್ಲಿ ಬಾಗಿಲುಕೋಟೆಯಲ್ಲಿ ಆದದ್ದೇ ಪ್ರಥಮ ಪರಿಷತ್ತು." ಎಂದು ಅಲ್ಲಿಂ ದೊಂದು ಕಾಗದ; "ಇಪ್ಪತ್ತೇಳರಲ್ಲಿ ಉಡುಪಿಯಲ್ಲಿ ಆದದ್ದೇ ಪ್ರಥಮದ್ದು" ಎಂದು ಆಕ್ಷೇಪದ ಪತ್ರಗಳು ಬಂದುವು. ಇದಕ್ಕೆ ಧೀರನಾದ ಪ್ರಭುದೇ ವನು ಬೆದರುವನೇ? ಆತ ಯಾವ ಪ್ರತಿಭಟಿಯನ್ನೂ ಗಮನಕ್ಕೆ ತಾರದೆ, ತನ್ನದೇ ಪ್ರಥಮ ಪರಿಷತ್ತೆಂದು ಸಾರುತ್ತ ಪ್ರಚಾರಕಾರ್ಯ ನಡೆಯಿಸಿ ದರು. ಆಗಾಗ ಡಾ| ನಂದರೂ, ಅವನೂ ಸೇರಿ ಅದಕ್ಕೆ ಯಾರನ್ನು ಅಧ್ಯಕ್ಷರನ್ನಾಗಿ ಮಾಡಲಿ ಎಂದು ಆಲೋಚಿಸತೊಡಗಿದರು.

ಅವರ ಮನಸ್ಸಿನಲ್ಲಿ ಇನ್ನೊಂದು ಅನುಮಾನ ಉಳಿದಿದೆ. ಬರಿಯ ಸಮಾಜವಾದಿ ಪರಿಷತ್ತೆಂದರೆ ಕೆಲವೇ ಜನರು ಬಂದಾರು. ಎಲ್ಲ ಬಗೆಯ ಜನರನ್ನು ಆ ಸಮಯದಲ್ಲಿ ಕೂಡಿಸಬೇಕಾದುದು ಅವಶ್ಯ. ಆದುದರಿಂದ ಅದನ್ನು ಜರಗಿಸುವುದರ ಜತೆಗೆ ಜಿಲ್ಲಾ ಕಾಂಗ್ರೆಸ್ಸಿನ ಅಧಿವೇಶನ; ಪ್ರಾಂತೀಯ ಯುವಜನ ಸಮ್ಮೇಳನ, ದಕ್ಷಿಣ ಭಾರತ ವಿದ್ಯಾರ್ಥಿ ಫಡರೇ

ಶನ್, ಮೊದಲಾದುವುಗಳನ್ನು ಜರುಗಿಸುವ ಸಲುವಾಗಿ ತಯಾರಿ ನಡೆ ಯಿಸಿದರು. ಯಾವನಾದರೂ ಒಬ್ಬ ಸ್ನೇಹಿತನು ಪ್ರಭುದೇವನನ್ನು "ಯಾಕೆ ಮಹಾರಾಯ—ಇಷ್ಟೆಲ್ಲವನ್ನು ಒಂದೇ ಸಾರಿ ಹೊರುತ್ತೀಯಾ" ಎಂದು ಕೇಳಿದರೆ, ಆತನ ಉತ್ತರ ಹೀಗೆ, "ಈ ಪರಿಷತ್ತುಗಳನ್ನೆಲ್ಲ ಬೇರೆ ಬೇರೆಯಾಗಿ ಮಾಡುವುದಾದರೆ, ಐದೈದು ಸಾರಿ ಜನರು ಬರಬೇಕು. ನಾವು ಅಷ್ಟು ಸಾರಿ ಹಣ ಖರ್ಚು ಮಾಡಬೇಕು. ಬಂದು ಹೋಗುವ ವರು, ಒಂದೊಂದು ಪರಿಷತ್ತಿಗೆ ಹತ್ತು ರೂಪಾಯಿ ಖರ್ಚು ಮಾಡುವು ದಿದ್ದರೂ ಒಬ್ಬೊಬ್ಬರಿಗೇ ಮೂವತ್ತು ರೂಪಾಯಿ ಖರ್ಚಾಗುತ್ತದೆ."— ಎಂದನು.

ಈ ಐದು ಪರಿಷತ್ತುಗಳಿಗೆ ಹೊಂದುವಂತೆ, ಡಾ| ನಂದರವರು "ಸೌತ್ ಇಂಡಿಯನ್ ಡ್ರಗಿಸ್ಟ್ಸ್ ಕೆಮಿಸ್ಟ್ಸ್" ಇವರ ಸಮ್ಮೇಳನವನ್ನು ಕರೆಯಿಸುವ ಏರ್ಪಾಡು ಮಾಡಿದರು. ಆಗಲೇನೇ, ಅವರ ನವೀನ ಪಾಲು ಬಂಡವಳು ಸಂಸ್ಥೆಯಾದ 'ದಿ ಯುನೈಟೆಡ್ ಫಾರ್ಮೆಸ್ಯೂಟಿಕಲ್ಸ್' ಎಂಬ ಸಂಸ್ಥೆಯ ಪ್ರಾರಂಭೋತ್ಸವವನ್ನು ಮಾಡಲು ಅವರು ನಿಶ್ಚಯಿಸಿ ದರು. ಇಂಥ ಮಹಾ ಸಭೆಗಳನ್ನು ನಡೆಯಿಸಿಕೊಂಡು ಹೋಗಲು, ಅವುಗಳ ಯಶಸ್ಸು, ಅಧ್ಯಕ್ಷರ ವ್ಯಕ್ತಿತ್ವದಿಂದ ಸಾಧಿಸಬೇಕೆಂಬುದರಿಂದ, ತಕ್ಕ ಅಧ್ಯಕ್ಷರನ್ನು ದೊರಕಿಸಬೇಡವೇ? 'ಪಿ. ಸಿ. ರೇ, ಯವರನ್ನು ಕರೆದರೆ ಆಗದೇ?' ಎಂದು ತೋರಿತು. ಯೋಚನೆ ಹೊರಟ ಒಂದು ವಾರದೊಳ ಗಾಗಿ ಅವರ ಪಾಲು ಬಂಡವಳ ಸಂಸ್ಥೆಯು ರಿಜಿಸ್ಟರ್ ಆಯಿತು. ಅದಕ್ಕೆ ಮೆನೇಜಿಂಗ್ ಡೈರಕ್ಟರರ್ ಅವರು. ಆ ಪದವಿ, ಸ್ವಾಗತಾಧ್ಯಕ್ಷಪದವಿ ಇವೆರ ಡನ್ನೂ ಸೇರಿಸಿ, ಆಚಾರ್ಯರವರಿಗೆ ಅವರಿಂದ ಆಮಂತ್ರಣ ಹೋಯಿತು.

ಡಾ| ನಂದರವರು ಈಗಾಗಲೇ ಆರೆಂಟು ಪಾಲು ಬಂಡವಳು ಸಂಸ್ಥೆ ಗಳ ಜನ್ಮದಾತರು. ಅದನ್ನು ಕಂಡು ಪ್ರಭುದೇವನಿಗೆ ತುಸು ಅಸೂಯೆ ಅಂತರಂಗದಲ್ಲಿ. ಅವರ ಹೆಸರನ್ನು ಕೇಳಿ ಲಕ್ಷಾವಧಿ ಬಂಡವಳು ಕೂಡು ತ್ತಿರುವುದು ಆಶ್ಚರ್ಯ. ಇದ್ದ ಸಂಸ್ಥೆಗಳ ಜತೆಗೆ ಇನ್ನೂ ಒಂದು ಸೇರಿಸಿ ಮದನ್ನು ಕಂಡು, ತಾನೂ ಏಕೆ ಅಂಥ ಒಂದು ಸಂಸ್ಥೆಯನ್ನು ತೊಡಗು ಬಾರದು—ಎಂಬ ಹೆಂಬಲ ಅವನಲ್ಲಿ ಸ್ವಾಭಾವಿಕವಾಗಿ ಉಂಟಾಯಿತು. ಸಾಧ್ಯವಾದರೆ ಅದನ್ನು ಆದಷ್ಟು ತೀವ್ರವಾಗಿ ಮಾಡಬೇಕೆಂದುಕೊಂಡನು.

ಒಂದು ಛಾಪಖಾನೆ—ಲಿಮಿಟೆಡ್; ಒಂದು ಸೀನೇಮಾ ಸ್ಟುಡಿಯೋ —ಲಿಮಿಟೆಡ್, ಒಂದು ಇನ್ನೇನಾದರೂ ಲಿಮಿಟೆಡ್-ಮಾಡಲೇ ಬೇಕು. ಕೊನೆಗೆ ಸಾಯುವುದರೊಳಗಾದರೂ, ಡಾ। ನಂದರಂತೆ ತಾನೂ ಹಣ ವಂತ ವ್ಯಕ್ತಿಯಾಗಿ, ಸದಾ ಮೋಟರಿನಲ್ಲಿಯೇ ಸಂಚರಿಸಬೇಕು—ಎಂಬ ಹಂಬಲ ತಲೆದೋರಿತು. ಈ ಹಂಬಲಗಳು ನಂದರ ಮೇಲಿನ, ಅಸೂಯೆಯನ್ನೊಡಗೂಡಿ ಬೆಳೆದುದೊಂದು ಸೋಜಿಗವಲ್ಲ.



# ಹನ್ನೊಂದನೆಯ ಅಧ್ಯಾಯ

"ಪ್ರಥಮ" ಸಮಾಜವಾದಿ ಸಮ್ಮೇಲನವೇ ಮಂಗಳೂರಿನಲ್ಲಿ ಜರಗಿತು. ಅದಕ್ಕೆ ಅಖಿಲ ಕರ್ನಾಟಕದಿಂದಲೂ ಪ್ರತಿನಿಧಿಗಳು ಬಂದಿದ್ದರು. ಕೊಡಗು, ಮೈಸೂರು, ಧಾರವಾಡಗಳಿಂದ ಡಜನಿಗಿಂತ ಮಿಕ್ಕಿ ಜನರು ಸೇರಿದ್ದರು. ಅವರನ್ನು ಮುಳುಗಿಸುವಷ್ಟು ಪ್ರಮಾಣದಿಂದ, ಮಂಗಳೂರಿನ ಜನರು ಕಿಕ್ಕಿರಿದರು. ಅಧ್ಯಕ್ಷರಾಗಿ, ಯಾರೂ ಈ ತನಕ ಹೆಸರು ಕೇಳದ, ಡಾ। ನಾರಿಯಲ್ ವಾಲ ಎಂಬವರು ಬಂದಿದ್ದರು. ಅಂಥವರನ್ನು ನೋಡಿ ಪರಿಚಯ ಬೆಳೆಯಿಸುವ ಸಲುವಾಗಿಯಾದರೂ, ತಾವು ಸಮಾಜವಾದಿ ಪ್ರತಿನಿಧಿಗಳು ಆಗುವುದು ಅವಶ್ಯವೆಂದು ಹಲವು ಶ್ರೀಮಂತರು ಬೆಂಬಲಕೊಟ್ಟರು. ಡಾ। ನಾರಿಯಲ್‌ವಾಲರು ಚೀನಾ, ಜಪಾನು, ರಸ್ಯಾ ದೇಶಗಳ ಸಂಚಾರ ಮುಗಿಸಿ, ಆರು ತಿಂಗಳು ಪೂರ್ಣ ಕಳೆದಿರಲಿಲ್ಲ. ಅವರನ್ನು ಕರೆಯಲು ಹಲವಾರು ತಂತಿಗಳು ಓಡಾಡಬೇಕಾಯಿತು. ಆದರೆ ಮಾತ್ರ ಅವರು ಲಲುಬೆನ್‌ರವರಂತೆ ಮಾಡಲಿಲ್ಲ. ಕರೆದೊಡನೆಯೆ ಬಂದುಬಿಟ್ಟರು. ಅವರಿಗಿರುವ ವೈದ್ಯಪದವಿಯಿಂದಾಗಿ ಡಾ। ನಂದರವರ ಫಾರ್ಮಸೂಟಿಕಲ್ಸ್ ಕಾರ್ಖಾನೆಯನ್ನು ತೆರೆಯಲು ಅವರೇ ತಕ್ಕವರೆಂದು ನಿರ್ಣಯವಾಯಿತು. ಡಾ। ನಂದರು, ಅವರನ್ನು ತಮ್ಮ ಕಾರ್ಖಾನೆಗೆ ಸ್ವಾಗತಿಸುತ್ತ, ಬಂದು ತಾಸಿನ ಸ್ವಾಗತ ಭಾಷಣ ಮಾಡಿ, ಅವರ ಪಾಲಿನ ಮಾತಿನ ಶ್ರಮವನ್ನು ಉಳಿಸಿದರು. "ಭರತ ಖಂಡದಲ್ಲಿ—ಜಗತ್ತನ್ನು ಸ್ಪರ್ಧಿಸಬಲ್ಲ ಉತ್ತಮ ಔಷಧ ತಯಾರಾಗಬೇಕು. ಶಾಸ್ತ್ರೀಯ ಸಂಶೋಧನೆಯಾಗಬೇಕು. ಬಡಜನರ ಎಟುಕಿಗೆ ಸಿಗುವಷ್ಟು ಅಗ್ಗವಾಗಿ, ಧಾರಾಳವಾಗಿ ಔಷಧಗಳ ಪೂರೈಕೆಯಾಗಬೇಕೆಂಬ ಹಂಬಲದಿಂದ ನಾವು ಈ ಸಂಸ್ಥೆಯನ್ನು ತೆರೆದುದಾಗಿದೆ" ಎಂದರು. ಅನಂತರ ಅದರ ಪ್ರಾರಂಭೋತ್ಸವ. ಅದಾದೊಡನೆಯೇ ಉಪಹಾರ; ಅದರೊಡನೆಯೇ ಭಾವಚಿತ್ರ. ಈ ಕಾರ್ಯಕ್ರಮಗಳಲ್ಲಿ ಅನಿವಾರ್ಯವಾಗಿರಬೇಕಾಗಿದ್ದ ಪ್ರಭುದೇವನು ಮಾತ್ರ ಅಲ್ಲಿ ಕಾಣಿಸದಿದ್ದುದು ಒಂದು ಸೋಜಿಗದ ಸಂಗತಿಯಾಗಿತ್ತು.

ಡಾ| ನಾರಿಯಲ್‌ವಾಲರನ್ನು ಕರೆದುದು, ಮುಖ್ಯತಃ ಸಮಾಜವಾದಿ ಪರಿಷತ್ತಿನ ಅಧ್ಯಕ್ಷತೆಗಾದರೂ, ಅವರು ಮಾಡಿದ ಮೊದಲ ಕೆಲಸವೆಂದರೆ ನಂದರ ಈ ಸಂಸ್ಥೆಯ ಉದ್ಘಾಟನೆ. ಅವರು, ಡಾ| ನಂದರ ಸಾರಥಿತ್ವದಲ್ಲಿ ಮಂಗಳೂರಿನ ಹಲವು ಸಂಸ್ಥೆಗಳನ್ನು ಸಂದರ್ಶಿಸಿ, ತಮ್ಮ ಪರಿಷತ್ತಿನ ಕೆಲಸವನ್ನು ಮುಗಿಸಿಕೊಂಡು ಅಹಮ್ಮದಾಬಾದಿಗೆ ತೆರಳಿದರು. ಉಳಿದೆಲ್ಲ ಕಡೆಗಳಲ್ಲಿ, ಪರಿಷತ್ತುಗಳಲ್ಲಿ, ಕೂಟಗಳಲ್ಲಿ, ಮುಖ್ಯ ಭಾಗವಹಿಸಿದ ಪ್ರಭುದೇವನಿಗೆ, ಈ ಸಂಸ್ಥೆಯ ಪ್ರವೇಶೋತ್ಸವದಲ್ಲಿ ಮಾತ್ರ ಎಡೆಯು ದೊರೆಯಲಿಲ್ಲ. ಏನು ಮಾಡಬೇಕು? ಡಾ| ನಂದರ ಶ್ರೀಮಂತ ಸ್ನೇಹಿತರೊಬ್ಬರಿಗೆ ಪ್ರಭುವನ್ನು ಕಂಡರಾಗದು. ಅವರು ಈ ಸಂಸ್ಥೆಯ ಅಧ್ಯಕ್ಷರು. ಅವರು, ಸ್ಪಷ್ಟವಾಗಿ, ಪ್ರಭುದೇವನಿಗೆ ಅಲ್ಲಿ ಅವಕಾಶಕೊಡಬಾರದೆಂದು, ಹೇಳಿದ್ದರು. ಆದುದರಿಂದ ನಂದರು ಅವನ ವಿಷಯದಲ್ಲಿ ತಣ್ಣಗಾಗಿದ್ದರು. ಅಲ್ಲಿಗೆ ಬರಹೇಳಲು ಮರೆತವರಂತೆ ನಟಿಸುತ್ತಿದ್ದರು. ಇವನೂ, ವಿಸ್ಮೃತಿಯನ್ನು ನಟಿಸುತ್ತಿದ್ದನು. ಅಂತೂ ಮಂಗಳೂರ್ ಮಿರರಿನಲ್ಲಿ ಬರೆಯುವಾಗ "ಡಾ| ನಾರಿಯಲ್‌ವಾಲರು, ಡಾ| ನಂದರವರು ಫಾರ್ಮಸೂಟಿಕಲ್ ಸಂಸ್ಥೆಯನ್ನು ತೆರೆದರೆಂದು ಕೇಳುತ್ತೇವೆ" ಎಂದು ಬರೆದನು. ಇದನ್ನು ಓದಿದ ಒಬ್ಬ ಗೆಳೆಯನು "ಏನು ಅಂತೆ, ಗಿಂತೆ ಎಂದು ಬರೆದಿದ್ದೀಯ—ಆ ವಿಷಯದಲ್ಲಿ, ಅವರ ಮುಖ್ಯ ಕಾರ್ಯಕ್ರಮದ ವಿಚಾರವನ್ನೇ ತೇಲಿಸಿ ಬರೆದಿದ್ದೀಯ. ಕಾಫಿ ಕುಡಿದ ಮೇಲೆ ಎಲ್ಲಾ ಮರೆತುಹೋಗಿರಬೇಕು—ನಿನಗೆ" ಎಂದು ಪರಿಹಾಸ್ಯಮಾಡಿದನು.

ಅವನ ಮುಂದೆಯೂ, ಮರವೆಯನ್ನು ನಟಿಸಲಾರದೆ ಪ್ರಭುದೇವ ಮನಬಿಚ್ಚಿ ಮಾತನಾಡಿದ: "ನಾನು ಈ ಪ್ರಾಣಿಗಳಿಗೆ ಹೆದರುವವನೇ? ಆ ಸಮಾರಂಭಕ್ಕೆ ನನ್ನನ್ನು ಕರೆಯಲು ಅವರಿಗೆ ಮರವೆಯಾಯಿತಂತೆ. ಅದರಿಂದ ನಾನು ಅದನ್ನು ಗಾಳಿ ಸುದ್ದಿಯಾಗಿ ತಿಳಿಸಿದ್ದೇನೆ. ಅವರು ಬಂದುದು ಸಮಾಜವಾದಿ ಪರಿಷತ್ತಿಗೆ. ಅದು ಯಶಸ್ವಿಯಾಯಿತೇ, ಇಲ್ಲವೇ? ಅದನ್ನು ಸರಿಯಾಗಿ ವರದಿ ಮಾಡಿದ್ದೇನೆ. ಅಲ್ಲವೇ? ಡಾ| ನಾರಿಯಲ್‌ವಾಲರು ನಾನು ನೋಡಿದ ಜನರಲ್ಲಿ ಅದ್ವಿತೀಯ ಮೇಧಾವಿ. ಏನು ವಿಚಾರಗಳು ಅವರವು! ಅವರು ಹೇಳುವ ಕ್ರಾಂತಿ ಮಾರ್ಗವನ್ನು ಹಿಡಿದರೆ ನಮಗೆ ಮೂರೇ ಮೂರು ದಿನಗಳಲ್ಲಿ ಸ್ವಾತಂತ್ರ್ಯ ಖಂಡಿತ.

ಅದರ ಬದಲು ಗಾಂಧೀಜಿಯವರ ದಾರಿ ಹಿಡಿದರೆ ಒಂದು ಶತಮಾನ ವಾದೀತು.

"ಗಾಂಧಿಯವರು ಇನ್ನೊಮ್ಮೆ ಸತ್ಯಾಗ್ರಹ ತೊಡಗುವ ಸಂದರ್ಭ ಉಂಟೆಂದು ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಬಂತಂತೆ; ಅಹುದೇ?"

"ನಾನು ಆ ಯಂಗ್ ಇಂಡಿಯವನ್ನೇ ತರಿಸುವುದಿಲ್ಲ; ಓದುವುದೂ ಇಲ್ಲ."

"ಈ ಬದಲಾವಣೆ ಯಾವಂದಿನಿಂದ?"

"ಮೊದಲಿನಿಂದಲೂ ನಾನು ಒಂದೇನೆ. ಖಾದಿ ಹಾಕುತ್ತಾ ಇದ್ದೇನಷ್ಟೆ. ಅದರಿಂದ ನಿನಗೆ ಅನುಮಾನ ಬಂದಿತೇ? ಖಾದಿ ಹಾಕಿದರೆ ಯಂಗ್ ಇಂಡಿಯಾ ಓದಬೇಕೆಂಬ ಒತ್ತಾಯ ಇದೆಯೇ? ಅಥವಾ ಗಾಂಧೀಯವರು ಹೇಳಿದ್ದಕ್ಕೆಲ್ಲಾ ಸಹಿಹಾಕುವವನೆಂದು ಅರ್ಥವಾಗುತ್ತದೆಯೋ? ಖಾದಿ ಹಾಕುತ್ತಿದ್ದೇನೆ ಒಂದೇ ಕಾರಣದಿಂದ—ಬೇರೆ ಬಟ್ಟೆ ಹಾಕುವುದಾದರೆ ಲೇಟೆಸ್ಟ್ ಮಾದರಿಯ ಉಡುಗೆಯಾಗಬೇಕು. ಸೂಟ್ ಆಗಬೇಕು. ಅದಕ್ಕೆಲ್ಲಾ ಹಣ ಬೇಡವೇ? ಖಾದಿ ಬಟ್ಟೆ ಅಗ್ಗವಲ್ಲವಾದರೂ, ಖಾದಿ ಫ್ಯಾಶನ್ ಅಗ್ಗ. ನಿನ್ನ ತಂದೆಯಲ್ಲಿರುವ ಹಣದ ಅರೆವಾಸಿಯಾದರೂ ನನ್ನಲ್ಲಿದ್ದರೆ, ಇವರ ಹೆತ್ತು ಪಾಲಿನ ಶೋಕಿ ಮಾಡುತ್ತಿದ್ದೆ."

"ಹಾಗಾದರೆ ಈಗ ನಿನಗೆ ಗಾಂಧಿಯವರ ಶಾಂತಿ ಮಾರ್ಗ ಹಿಡಿಯುವುದಿಲ್ಲ ಅಲ್ಲವೇ?." "ಒಂದು ದಿನವಾದರೂ ಅವನ್ನು ನಾನು ಒಪ್ಪುವುದಿಲ್ಲ. ನಮ್ಮ ದೇಶದ ಪರಿಸ್ಥಿತಿಗೆ ತೀಕ್ಷ್ಣ ಕ್ರಾಂತಿಯು ಒಂದೇ ದಾರಿ. ಅದೂ 'ಬ್ಲಡಿ' ಕ್ರಾಂತಿ. ಈ ಬ್ಲಡ್‌ಲೆಸ್ ರೆವೊಲೂಷನ್, ರಕ್ತವಿಲ್ಲದೆ, ಎನಿಮಿಯಾ ಹಿಡಿದವರಿಗೆ! ಸಮಾಜವಾದಿಯಾದ ನಾನು ಅದನ್ನು ನಂಬುವುದಿಲ್ಲ."

"ಅಹುದು, ನೀನೂ ಸಮಜಾವಾದಿ, ನಾನೂ ಹಾಗೇನೇ. ಆದರೆ ನೋಡು, ನಮ್ಮ ಜನಕ್ಕೆ ಏನೇನೂ ಬುದ್ಧಿಯಿಲ್ಲ; ವಿಚಾರವಿಲ್ಲ. ನಾವು ನಮ್ಮ ಜನರಲ್ಲಿ ಮೊದಲು ವಿಚಾರ ಕ್ರಾಂತಿಯನ್ನು ಹೂಡಬೇಕು. ದೇಶವನ್ನು ಕ್ರಾಂತಿಕಾರಕ ಗ್ರಂಥಗಳಿಂದ ತುಂಬಬೇಕು. ಮಾರ್ಕ್ಸ್, ಲೆನಿನ್, ಟ್ರಾಟ್‌ಸ್ಕಿ, ನಿಮ್ಮನಾರಿಯಲ್‌ವಾಲ-ಇಂತಹರ ಬರಹಗಳನ್ನು ಕನ್ನಡಿಸಿ, ಜನರ ಮಿದುಳಿನಲ್ಲಿ ತುರುಕಬೇಕು.

"ಅದಕ್ಕೆಲ್ಲಾ, ಮಿಸ್ಟರ್, ಹಣಬೇಕು. ಕಾಸಿಲ್ಲದೆ ನಾವು ಬಾಯಿ ತೆರೆದರೆ ಏನೂ ಆಗುವಂತಿಲ್ಲ. ನನ್ನಲ್ಲಿಯೇ ಬೇಕೆನ್ನುವಷ್ಟು ವಿಚಾರಗಳಿವೆ. ಕ್ರಾಂತಿಗಾಗಿ ಒಂದಲ್ಲ, ನಾನು ಹತ್ತು ಪತ್ರಿಕೆಗಳನ್ನು ಹೊರಡಿಸಿಯೇನು! ಈಗ ಸದ್ಯಕ್ಕೆ ಏನಾಗಿದೆ ಬಲ್ಲೆಯಾ? ಎಲ್ಲ ನನ್ನ ವಿಚಾರಗಳನ್ನು ಒಂದೇ ಪತ್ರಿಕೆಯಲ್ಲೇ ತುರುಕ ಬೇಕಾಗಿದೆ. ಅಲ್ಲದೆ ವರ್ಗಣಿದಾರರಿಲ್ಲದೆ ಪತ್ರಿಕೆಯನ್ನು ನಡೆಯಿಸುವುದು ಕಷ್ಟವಾಗಿದೆ. ನಾನೆಂದೆ; ನಮ್ಮ ನಂದ ಸಾಹೇಬರಿಗೆ—'ಒಂದು ಪ್ರೆಸ್ ನಮ್ಮದೇ ತೆರೆಯುವ. ಆ ಮೇಲೆ ಒಂದು ವೀಕ್ಲಿ, ಒಂದು ಡೈಲಿ, ಒಂದೆರಡು ಮಾಸ ಪತ್ರಿಕೆಗಳನ್ನು ಹೊರಡಿಸಿ—ನಾಲ್ಕಾರು ಮುಖಗಳಿಂದ ಪ್ರಚಾರ ಮಾಡಬೇಕು. ನೀವು ನಿಮ್ಮ ಸಂಸ್ಥೆಗಳ ಜಾಹೀರಾತಿಗಾಗಿ ವ್ಯಯಿಸುತ್ತಿರುವ ಹಣದಿಂದಲೇ ಅಷ್ಟನ್ನೂ ಸಾಧಿಸಬಹುದು' ಎಂದೆ. ಆದರೆ ಅವರೋ! ಮುಷ್ಟಿಯಲ್ಲಿ ಬಿಮ್ಮಗೆ."

"ನನಗೆ ಪ್ರಭುದೇವ, ಈ ನವೀನ ವಿಚಾರಗಳನ್ನು ಜನರಲ್ಲಿ ಪ್ರಚಾರಿಸುವುದಕ್ಕೆ ತುಂಬ ಆಸಕ್ತಿಯಿದೆ. ಈ ವರ್ಷಕ್ಕೆ ನನ್ನ ಬಿ. ಎ. ಮುಗಿಯಿತು. ಒಂದು ಛಾಪಖಾನೆಯನ್ನು ತೆರೆಯಲು ಹಣಕೊಡು, ಎಂದು ತಂದೆಯವರನ್ನು ಕೇಳಿದರೆ ಕೊಟ್ಟಾರು. ನಾಲ್ಕಾರು ಸಾವಿರವನ್ನಾದರೂ ಹಾಕಿಯೇನು. ಇಬ್ಬರೂ ಕೂಡಿ ಯಾಕೆ ಕೆಲಸ ಮಾಡಬಾರದು?"

"ಅಂಥ ಯೋಚನೆ ನನಗೂ ಒಪ್ಪಿದ್ದೇ. ಈಗ ನನಗಂತೂ ಛಾಪಖಾನೆಯವರಿಗೆ ಸಲಾಮು ಹಾಕಿ ಸಾಕಾಯಿತು. ನಮ್ಮ ಸಮಯಕ್ಕೆ ಸರಿಯಾಗಿ ಒಂದೇ ಒಂದು ಸಂಚಿಕೆಯನ್ನು ಹೊರಡಿಸಲಿಕ್ಕಾಗುವುದಿಲ್ಲ. ನೀನು ಮನಸ್ಸನ್ನು ಗಟ್ಟಿಮಾಡಿದರೆ, ಒಂದು ದಿವಸ ನಾವು ಮುಂಬಯಿಗೆ ಹೋಗಿ, ಪ್ರೆಸ್ಸಿಗೆ ಬೇಕಾಗುವ ಯಾವತ್ತು ಸಾಮಾನುಗಳನ್ನು ಖರೀದಿ ಮಾಡುವ. ನಿನ್ನ ಹಣ, ನನ್ನ ಬ್ರೈನು—ಇವೆರಡೂ ಸೇರಿದರೆ ನಮ್ಮ ಜಿಲ್ಲೆಯ ಮಟ್ಟಿಗೆ ಕ್ರಾಂತಿ ಎಬ್ಬಿಸುವುದಕ್ಕೆ ಸಾಕು."

ಈ ವರೆಗೆ ಪ್ರಭುದೇವನೊಡನೆ ಮಾತನಾಡುತ್ತಿದ್ದ ಗೆಳೆಯ ಮಿ! ಸಾಣೆಕಲ್ ಎಂಬವನು ತುಂಬ ಉತ್ಸಾಹಿ ತರುಣ. ನಾಡಿನ ಸಲುವಾಗಿ ಏನಾದರೂ ಮಾಡಬೇಕೆಂಬ ಹಂಬಲ ಅವನಿಗೆ. ಸಾರಿಯಲ್ ವಾಲರಉಪನ್ಯಾಸ ಕೇಳಿದ ಮೇಲಂತೂ, ತಮ್ಮಂತಹ ವಿದ್ಯಾವಂತರು ಮುಂದುವ

ರಿದು ಬಂದರೆ, ಮಂಗಳೂರನ್ನು ಮೊಸ್ಕೋ ನಗರ ಮಾಡಬಹುದು ಎಂಬಷ್ಟು ಸ್ಫೂರ್ತಿಯಾಗಿದೆ. ಹಿಂದಲ ಬಾರಿಯ ಅಸಹಕಾರ ಚಳವಳದಲ್ಲಿ ಅವನು ಇನ್ನೂ ಹುಡುಗನಾಗಿದ್ದ. ಆದುದರಿಂದ, ಗಾಂಧಿ ತತ್ವದ ಆಸಕ್ತಿ ಅಮರುವ ಮುಂಚೆಯೇ, ಈ ಸಾಮಾಜಿಕ ಕ್ರಾಂತಿಯ ಹುರುಪು ಹುಟ್ಟಿದೆ. ತಮ್ಮ ಕೆಲವೊಂದು ಮಂದಿ ಮುಖಂಡರು, ಕಾಂಗ್ರೆಸ್ಸಿನಲ್ಲಿದ್ದು, ಎಡಬಲವಾಗಿ ಕೆಲಸ ಮಾಡುವುದು ಅವನಿಗೆ ಸಮಾಧಾನವಿಲ್ಲ. ಅದನ್ನು ಹಲವೊಮ್ಮೆ ಆತ ಪ್ರಭುದೇವನೊಂದಿಗೆ ಚರ್ಚಿಸಿದ್ದಾನೆ, ಅವರಿಂದಾಗಿ ಈಗ "ಮಿ। ಪ್ರಭು, ಈಗ ನೋಡಹೋದರೆ ನನ್ನ ನಿಮ್ಮ ಅಭಿಪ್ರಾಯಗಳಲ್ಲಿ ಯಾವ ಭೇದವೂ ಕಾಣುವುದಿಲ್ಲ. ಆದರೆ ನೀವು ಜಿಲ್ಲಾ ಕಾಂಗ್ರೆಸ್ಸನ್ನು ಹಿಡಿದು ಓಡಾಡುವುದೇತಕ್ಕೆ? ಮೇಲೆ ಕೆ. ಪಿ. ಸಿ. ಸಿ, ಮೆಂಬರರೂ ಅಹುದು. ನಾವು ನಮ್ಮ ಮುಖಂಡರು ಮಾಡಿದಂತೆ ಮಾಡದೆ, ಕಾಂಗ್ರೆಸ್ಸಿನಿಂದ ಬೇರೆಯಾಗಿ ಕುಳಿತು, ವರ್ತಿಸುವಂತಹ ಆವಶ್ಯಕತೆ ಕಾಣಿಸುವುದಿಲ್ಲವೇ ನಿಮಗೆ?" ಎಂದು ಕೇಳಿದ. "ಅದು ನನ್ನ ಮುಂದಿನ ಗುರಿ. ನಾನೀಗ ಆದಷ್ಟು ಎಳೆಯರನ್ನು ಕಾಂಗ್ರೆಸ್ಸಿಗೆ ತಂದು ತುರುಕುವುದೇಕೆ? ಅದಕ್ಕೇನೆ. ನಮ್ಮ ಜಿಲ್ಲಾ ಕಮಿಟಿಯನ್ನು ಸಮಾಜವಾದಿಗಳ ಕಮಿಟಿಯನ್ನಾಗಿ ಮಾಡುವುದು ನನ್ನ ಉದ್ದೇಶ ಇದ್ದ ಸಂಸ್ಥೆಯನ್ನು ಆಕ್ರಮಣ ಮಾಡುವಷ್ಟು ಸುಲಭ, ಹೊಸ ಸಂಸ್ಥೆಯನ್ನು ನಿರ್ಮಿಸುವುದಲ್ಲ."

ಈ ಮಾತನ್ನು ಸಾಣೆಕಲ್ ಒಪ್ಪಿದಂತೆಯೂ ಕಂಡಿತು. ಅಲ್ಲಿಂದ ಮುಂದೆ ಬಹುದಿನಗಳ ತನಕ ಆತನನ್ನು 'ಛಾಪಖಾನೆಯ ವಿಷಯದಲ್ಲಿ ಹುರಿದುಂಬಿಸಲು ಪ್ರಭುದೇವ ಪ್ರಯತ್ನಮಾಡಿದನು. ಇದೇ ವೇಳೆಯಲ್ಲಿ ಒಂದು ದಿನ, ಡಾ। ನಂದರ ಸವಾರಿ ಅಲ್ಲಿಗೆ ಅಕಸ್ಮಿಕವಾಗಿಯೋ, ಉದ್ದೇಶಪಟ್ಟೋ, ಬಂದು ಇಳಿಯಿತು.

"ಏನು ಪ್ರಭು, ನಿನ್ನನ್ನು ನೋಡುವುದೇ ಅಪೂರ್ವವಾಗಿಬಿಟ್ಟಿದೆ, ನನ್ನನ್ನು ಬಾಯ್‌ಕಾಟ್ ಮಾಡಿದ್ದೀಯೋ ಹೇಗೆ?" ಎಂದು ಕೇಳಿದರು.

"ಹಾಗೆ ತಿಳಿದರೆ ಹೇಗೆ? ತುಂಬ ಕೆಲಸದಲ್ಲಿದ್ದೇನೆ. ಅಷ್ಟೆ, ಸಮಾಜವಾದದ ಪ್ರಕಟನೆ ನಡೆಯಿಸಲು ಸಿದ್ಧತೆಮಾಡುತ್ತಿದ್ದೇನೆ. ಈ ಬಾರಿ ಜಿಲ್ಲೆಯಲ್ಲಿ ಕಾಂಗ್ರೆಸ್ ಮೆಂಬರರನ್ನು ಕೂಡಿಸುವುದರ ಜತೆಗೆ ಆ ಕೆಲಸ

ವನ್ನೂ ಇರಿಸಿಕೊಳ್ಳಬೇಕೆಂದಿದೆ. ಜನಗಳಲ್ಲಿ ಕ್ರಾಂತಿಯನ್ನು ಬಿತ್ತದೆ ಹೋದರೆ, ನಮ್ಮ ಮುಂದಿನ ಆಶೆ ಫಲಿಸಲಾರದು" ಎಂದನು.

"ನಾನು ಬಂದುದಾದರೂ ಆದಕ್ಕೇನೆ. ಈ ಸಾರಿ ಜಿಲ್ಲಾ ಬೋರ್ಡು ಚುನಾವಣೆ ಇಲ್ಲವಾದರೂ ನಾವು ಹಳ್ಳಿಗಳಿಗೂ ಹೋಗಿ ನಮ್ಮ ಸಂಸ್ಥೆಗಳನ್ನು ಬಲಪಡಿಸಬೇಕು. ಹಾಗಿಲ್ಲದೆ ಹೋದರೆ ಈ ಎಲ್ಲ ಸಂಸ್ಥೆಗಳನ್ನು ಹದ್ದಿನಲ್ಲಿಟ್ಟುಕೊಳ್ಳಲಾರೆವು. ಎಲ್ಲಾ ತೆರನ ಜನರು ಒಳಕ್ಕೆ ಬಂದಾರು. ಈಗಾಗಲೇ ನಮಗೆ ಒಪ್ಪದ ಹಲವರು ಬಂದಿದ್ದಾರೆ. ಮುಂದೆಯಾದರೂ ನಾವು ಸರಿಯಾಗಿ ಕೆಲಸಮಾಡಿ, ನಮ್ಮ ಪಕ್ಷವನ್ನು ಬಲಗೊಳಿಸಬೇಕು" ಎಂದರು. ಆಲ್ಲಿಗೇನೆ ಕಾಫಿಯನ್ನು ತರಿಸಿಕೊಂಡರು, ತಿಂಡಿಯನ್ನು ತರಿಸಿದರು; ಉಪಹಾರ ಮುಗಿಸಿದರು. ಪ್ರಭುದೇವ ತನ್ನ ಪ್ರಚಾರಕ ಬುಲೆಟಿನುಗಳಿಗೆ "ಕಾಗದಕ್ಕೆ ಒಂದು ನೂರು ರೂಪಾಯಿಯಾದರೂ ಬೇಕಾದೀತು" ಎಂದನು. ಅಷ್ಟನ್ನು ಕೊಡುವೆನೆಂದು ನಂದರು ಒಪ್ಪಿದರು. ಮೇಲೆ, "ಆಗಾಗ ಬಂದು ಹೋಗಯ್ಯಾ, ಮನೆಗೆ" ಎಂದೂ ಹೇಳಿ ಹೋದರು.

ಡಾ| ನಂದರ ಗರ್ವವನ್ನು ಮುರಿದು, ಅವರನ್ನು ತನ್ನ ಕಾಲಬುಡಕ್ಕೆ ಕರೆಯಿಸಿಕೊಂಡೆನಲ್ಲಾ ಎಂಬ ಹಿಗ್ಗು ಪ್ರಭುದೇವನಿಗೆ ಉಂಟಾಯಿತು. ನೂರು ರೂಪಾಯಿಗಳನ್ನು ಕೊಡುತ್ತೇನೆಂದಮೇಲೆ, ಅವರೊಂದಿಗೆ ಸೇರಿ, ಇನ್ನೊಂದು ಭಾರಿಯ ಬಿರುಗಾಳಿ ಭ್ರಮಣವನ್ನು ಮಾಡುವ ಅಭಿಲಾಷೆಯುಂಟಾಯಿತು. ಡಾ| ನಂದರವರಿಗೆ ಈ ಬಾರಿ ಮುನ್ಸಿಪಲ್ ಅಧ್ಯಕ್ಷತೆಗೆ ನಿಲ್ಲಬೇಕೆಂಬ ಆಸೆಯಾಗಿದೆ. ಪ್ರಭುದೇವನಿಗೆ, ಕಳೆದ ಬಾರಿ ಜಿಲ್ಲಾ ಬೋರ್ಡಿನಲ್ಲಿ ಆದ ಸೋಲನ್ನು ಮರೆಯುವುದಕ್ಕೆ ಈ ಬಾರಿ ಮುನ್ಸಿಪಲ್ ಮೆಂಬರನಾದರೆ ಸಂತೋಷ. ಬೆಳೆಯುತ್ತಿರುವ ನಂದರ ಸಂಪತ್ತು, ವರ್ಚಸ್ಸುಗಳಿಗಾಗಿ ಆತನಲ್ಲಿ ಅಸೂಯೆ ಬೆಳೆಯುತ್ತಿದ್ದರೂ, ತಮ್ಮಿಬ್ಬರಿಗೂ ಲಾಭದಾಯಕವಾದ ಉದ್ಯೋಗದಲ್ಲಿ ಏಕೆ ಸಹಕಾರ ಮಾಡಬಾರದು—ಎಂಬುದು ಅವನ ತರ್ಕಸರಣಿ. ಆದರೂ ನಂದರ ನೀತಿಯಲ್ಲಿ ಅವನಿಗೆ ಅಷ್ಟೊಂದು ಧೈರ್ಯವಿಲ್ಲ. ಈ ಬಾರಿಯೂ ಅವರ ಡೈರೆಕ್ಟರ್ ಮಿತ್ರರೊಬ್ಬರು ಮುನ್ಸಿಪಲ್ ಚುನಾವಣೆಗೆ ನಿಲ್ಲುತ್ತೇನೆಂದರೆ, ತನ್ನನ್ನು ಬಿಟ್ಟು ಅವರನ್ನು ಹಿಡಿದಾರು—ಎಂಬ ಅನುಮಾನವಿದೆ. ಆದುದರಿಂದ ಈ ಬಾರಿ ಅವರೊಬ್ಬರನ್ನು ನಂಬಿಯೇ, ಚುನಾವಣೆಗೆ ಇಳಿಯುವುದಿಲ್ಲ;

ಒಳಗಿಂದೊಳಗೆ ತನ್ನ ಪಕ್ಷವನ್ನು ಬೆಳೆಯಿಸಿಕೊಳ್ಳುವುದಕ್ಕೆ ಬೇರೆಯವರ ಸ್ನೇಹಮಾಡುತ್ತೇನೆ—ಎಂದು ಯೋಚಿಸಿದನು.

ಈ ಬಾರಿ ಜಿಲ್ಲೆಯ ಸಂಚಾರಕ್ಕೆ ಹೊರಟಾಗ, ಅವರಿಬ್ಬರೇ ಅಲ್ಲ, ಜತೆಯಲ್ಲಿ ಅವನ ಗೆಳೆಯ ಸಾಣೆಕಲನನ್ನು ಕರೆದುಕೊಂಡನು. ಮೊದಲ ಬಾರಿಗೆ ಪೇಟೆಪಟ್ಟಣಗಳಲ್ಲಿ ಮಿ। ಸಾಣೆಕಲ್‍ನ ಉಪನ್ಯಾಸದ ಪ್ರಯೋಗ ನಡೆಯುವಂತಾಯಿತು. ಈ ಬಾರಿ ಪೇಟೆಗಳನ್ನು ಬಿಟ್ಟು ಹಳ್ಳಿಗಳಿಗೆ ಹೋಗಲು ಅವರಿಗೆ ಮನಸ್ಸಿತ್ತಾದರೂ, ಅವಕಾಶ ಸಾಕಾಗಲಿಲ್ಲ. ಇದ್ದ ಅವಕಾಶದಲ್ಲಿ ಹಲವು ಮಿತ್ರರ ಮಕ್ಕಳನ್ನು ಆರಿಸಿಕೊಂಡು, ತಮ್ಮ ಸಂಘ ಸಂಸ್ಥೆಗಳಲ್ಲಿನ ಮುಖ್ಯ ಸ್ಥಾನಗಳಿಗೆ ತುರುಕುವ ಏರ್ಪಾಡು ಮಾಡಿದರು. ಇದು ಅವರದೊಂದು ಒಳಸಂಚು. ಹಿಂದಿನ ಬಾರಿ ಹಳ್ಳಿಯ ಶ್ರೀಮಂತರು ಹಲವರು ಬೋರ್ಡ್ ಚುನಾವಣೆಗೆ ನಿಂತು, ತಮಗೆ ತೊಡಕು ತಂದುದನ್ನು ಅವರು ಬಲ್ಲರು. ಇನ್ನು ಮುಂದೆ ತಾವು ಅಂಥ ಹಳ್ಳಿಯ ಹುಲಿಗಳಿಗೆ ಇದಿರಾಗಿ, ಪೇಟೆಯ ಶ್ರೀಮಂತರ ಮರಿಗಳನ್ನು ಒಡ್ಡುವುದು ಅವರ ಉಪಾಯ. ಡಾಕ್ಟರವರು ಹೋದಲ್ಲಿ—ಜನಗಳಿಗೆ, ಮುಂದೆ ಬರಲಿರುವ ಕಾಳಗಕ್ಕಾಗಿ ಸನ್ನದ್ಧರಾಗಲು ಹೇಳುತ್ತಿದ್ದಾರೆ; ಕಾಂಗ್ರೆಸ್ ಸಂಸ್ಥೆಗಳನ್ನು ಬಲಪಡಿಸಲು ಹೇಳುತ್ತಾರೆ. ಅದೇ ಸಭೆಯಲ್ಲಿ--ಪ್ರಭುದೇವ, ಸಾಣೆಕಲರವರು ಒಂದೇ ಉಸಿರಿಗೆ, ಸಮತಾವಾದವನ್ನು ಇರಿಸುತ್ತಿದ್ದಾರೆ. 'ನಮ್ಮ ಸರಕಾರವಾದರೆ, ಬಡಜನಗಳ ಮೇಲೆ ತೆರಿಗೆ,ಸುಂಕಗಳ ಬಾಧೆ ತಪ್ಪುತ್ತದೆ' —ಎನ್ನುತ್ತಾರೆ. ಕಳೆದ ಬಾರಿ, ಪ್ರಭು, ನಂದರಿಬ್ಬರೂ ಬಂದಾಗ ಜನರು "ಒಂದೇ ಜಾತಿಗೆ ಸೇರಿದ್ದವರ ಆಟವಿದು" ಎಂದಿದ್ದರು. ಈಗ ಹಾಗೆ ಜನರು ಹೇಳುವಂತಿಲ್ಲ. ಸಾಣೆಕಲ್—ಬೇರೊಂದು ಜಾತಿಗೆ ಸೇರಿದವನು. ಅವರ ಜತೆಯಲ್ಲಿ ಒಯ್ಯುತ್ತಿದ್ದ ಅನೇಕ ತರುಣರು, ಹೆತ್ತೆಂಟು ಕೋಮುಗಳ ಜನರು. ಜನಗಳ ಎದುರಿಗೆ, ತಮ್ಮಲ್ಲಿ ಜಾತೀಯತೆಯ ಲವಲೇಶವಿಲ್ಲ—ಎಂಬುವುದನ್ನು ತೋರಿಸುವುದಕ್ಕೂ ಅದು ಅನುಕೂಲ ಸಂಧಿಯಾಯಿತು. ಅವರ ಉಪನ್ಯಾಸದ ಕಾರ್ಯಕ್ರಮಕ್ಕೆ ಒಂದು ದಿನ ರಾಧಾಕೃಷ್ಣನಿಗೆ ಬರುವ ಅವಕಾಶವು ದೊರಕಿತು. ಕಿರಿಪದವಿಗೆ ಸಮೀಪದ ಪೇಟೆಯೊಂದರಲ್ಲಿ, ಮುಖಂಡರ ಉಪನ್ಯಾಸವಿದೆ—ಎಂದು ಕೇಳಿ, ಆತ ಆ ಸಭೆಗೆ ಹೋಗಿದ್ದನು. ಅಲ್ಲಿ ನೆರೆದಿರುವ ಪೇಟೆಯ ಜನರ ಉತ್ಸಾಹ

ವನ್ನು ಕಂಡು ಅವನಿಗೆ ಸಂತೋಷವಾಯಿತು. ಹತ್ತು ವರ್ಷಗಳ ಹಿಂದೆ, ತಾನು ಊರೂರು ತಿರುಗಿದಾಗ, ದೊರೆತ ಜನರ ಮನ್ನಣೆಗೂ, ಇಂದಿಗೂ, ಉಂಟಾಗಿರುವ ತಾರತಮ್ಯ ಕಾಣಿಸಿತು. ಅದರಿಂದ ಮನಸ್ಸು ಹುರುಪು ಗೊಂಡಿತು. ಆತ ಡಾ। ನಂದರವರನ್ನು ಭೇಟಿಯಾಗದೆ ಮೂರು ವರ್ಷ ಗಳಾಗಿರಬೇಕು. ನೋಡುವ ಮನಸ್ಸೂ ಉಂಟಾಗಲಿಲ್ಲಿ. "ಕಿರಿಪದವೇ ತನ್ನ ಗೋರಿ" ಎಂದು ತಿಳಿದು ನಿರಾಶೆಯ ಸಮಾಧಿಯಲ್ಲಿ ತಪಿಸುತ್ತಿದ್ದ. ವಾರಕ್ಕೆ ಒಂದೆರಡು ಬಾರಿ ಬರುತ್ತಿದ್ದ ಕನ್ನಡ ಪತ್ರಿಕೆಗಳನ್ನು ನೋಡಿಯೇ ಅವನಿಗೆ ಬಾಹ್ಯ ಪ್ರಪಂಚದ ಸಂದು ಕುಣಿಕೆಗಳು ಸಿಗಬೇಕು. ಈ ದಿನ ಸಭೆಗೆ ಹೋದಾಗ ನಂದರನ್ನು ನೋಡಿ ಮಾತನಾಡಿಸುವ ಆಸೆಯಾ ಯಿತು. ಹಾಗೆ ಹೋಗಿ, ಸಮೀಪ ನಿಂತಾಗ ಅವರು ತನ್ನ ಗುರುತಿಲ್ಲದವ ರಂತೆ ನಟಿಸಿದರೆ ಏನು ಗತಿ—ಎಂದೂ ತೋರಿತು. ಒಂದೆರಡು ಬಾರಿ, ಅವರ ದೃಷ್ಟಿಗೆ ಸಿಗುವ ಸ್ಥಳದಲ್ಲಿ ಈತ ಹೋಗಿ ನಿಂತುಕೊಂಡನು. ಅವರು ಕಂಡೂ ಕಾಣದಂತಿದ್ದರು. ಆತನ ಮನಸ್ಸಿನಲ್ಲಿ "ಹಿಂದೆ ನನ್ನ— ಜತೆಯಲ್ಲಿ ನಾಲ್ಕು ದಿನ ಹಳ್ಳಿಯಲ್ಲಿ ಹೆಜ್ಜೆಯನ್ನಿಡಲು ಅಂಜಿದ ಈ ವ್ಯಕ್ತಿ, ಇಂದು ಮೋಟಾರಿನ ಮೇಲೆ ಕುಳಿತಾದರೂ ಸಂಚರಿಸಿ, ಆ ಕೆಲಸವನ್ನು ಮಾಡುತ್ತಿದ್ದಾನಲ್ಲ, ಅಷ್ಟೇ—ಸಂತೋಷ. ಈ ತನಕ ಯಾರನ್ನೂ ಕೇಳದ ಹಳ್ಳಿಯ ಜನರು ಈಗ ಸಭೆಗೆ ಬಂದು ಕೇಳುತ್ತಿದ್ದಾರಲ್ಲಾ" ಎಂದೆನಿಸಿತು. ಆದಿನದಉಪನ್ಯಾಸಕರಲ್ಲಿ ಮತ್ತಿಬ್ಬರೆಂದರೆ ಪ್ರಭುದೇವ,ಸಾಣೆಕಲರವರು- ಅವರಿಬ್ಬರು ಅವನಿಗೆ ಹೊಸಬರು. ಪ್ರಭುದೇವ ಪತ್ರಕರ್ತನೆಂಬುದನ್ನು ತಿಳಿದಿದ್ದ; ಈಗ ಅವನನ್ನು ಪ್ರತ್ಯಕ್ಷ ಕಂಡಂತಾಯಿತು.

ಉಪನ್ಯಾಸವನ್ನು ಕೇಳಿ, ಕಿರಿಪದವಿಗೆ ಮರಳಿ ಹೋಗುವಾಗ, ರಾಧಾಕೃಷ್ಣನ ಮನಸ್ಸು ಹಿಂದಿನ ಕಾಲದ ಸ್ವಾತಂತ್ರ್ಯ ಯುದ್ಧದ ದಿನ ಗಳನ್ನು ನೆನೆಯುತ್ತಿದೆ. ಅಂದಿಗೂ, ಇಂದಿಗೂ, ಜನತೆಯಲ್ಲಿ ಉಂಟಾದ ಸಂಸ್ಕಾರವನ್ನು ಯೋಚಿಸುತ್ತಿದ್ದಾನೆ. ಆಗಿನ ದಿನಗಳಲ್ಲಿ ಕಾಂಗ್ರೆಸ್ಸು ಶ್ರೀಮಂತರಿಗೂ ಬೇಡವಾಗಿತ್ತು, ಬಡವರಿಗೂ ಬೇಡವಾಗಿತ್ತು. ಈಗ ಜನಗಳು ಉಪನ್ಯಾಸವನ್ನು ಕೇಳಲು ಬರುತ್ತಾರೆ, ಅಂಜುತ್ತಲಿಲ್ಲ. ನಂದ ರಂಥವರು, ಶ್ರೀಮಂತರಾದರೂ, ನಿರ್ಭೀತಿಯಿಂದ ರಾಜಕೀಯಕ್ಕೆ ಕಾಲಿ ಡುವುದು ಸಾಧ್ಯವಾಗಿದೆ.

ನಂದರನ್ನು ಕುರಿತು ನೆನೆಯುತ್ತಿರುವಾಗಲೇ, ಹಳೆಯ ಅಳುಕುಗಳು ಬಂದು ಕಲೆಯುತ್ತವೆ. ಅಷ್ಟು ವರ್ಷಗಳ ಹಿಂದೆ—ವಂಡಸೆಯಲ್ಲಿ ಹೇಳದೆ ಓಡಿ ಹೋದ ವೀರ ಡಾ| ನಂದ. ಆಶ್ರಮಕ್ಕೆ ಸಹಾಯಮಾಡುವೆನೆಂದು, ಮುಂದೆ ಮಾತು ಬರಡನಾದ ಉದಾರಿಯು. ಈತ ದೇಶಸೇವೆಗೆ ಹೊರಟರೆ ಹೇಗೆ? ಇದು ಸ್ವಾರ್ಥತ್ಯಾಗವೇ ಅಥವಾ ಇನ್ನೂ ಹೆಚ್ಚಿನ ಕೀರ್ತಿಯ ಬೇಟೆಯೇ—ಎಂಬ ಅನುಮಾನಗಳು ಮೂಡಿದುವು. ಈಗ ಅವನಲ್ಲಿ ಸಿರಿಯು ಕಲೆತಿದೆ. ಅದಕ್ಕೆ ಅಂಟಿ ಕೀರ್ತಿಯೂ ಬಂದಿದೆ. ದಯಾನಂದರಾಯರಂಥವರು—ಇದ್ದ ಶ್ರೀಮಂತಿಕೆಯನ್ನು ಚೆಲ್ಲಿಕೊಟ್ಟು, ತಮ್ಮ ವರ್ಚಸ್ಸನ್ನು ಕಳೆದುಕೊಂಡರು. ಈತ ಹಣಗಳಿಸಿಕೊಂಡಷ್ಟೇ ತೀವ್ರವಾಗಿ ಪ್ರಭಾವವನ್ನೂ ಗಳಿಸಿಕೊಳ್ಳುತ್ತಿದ್ದಾನೆ. ವ್ಯವಹಾರ ಬಲ್ಲವರ ರೀತಿ ಅದು; ವ್ಯವಹಾರ ಇಲ್ಲದವರ ರೀತಿ ಇದು--ಎಂದು ತೋರಿತು.

ಮನೆಗೆ ಹೋಗಿ ಸೇರಿದನು. ಆಗಂತೂ ಒಮ್ಮಿಂದೊಮ್ಮೆಗೆ ತನ್ನ ಹಿಂದಣ ಹಲವು ವರ್ಷಗಳ ಜೀವನವನ್ನು ಕುರಿತು ಅವನಿಗೆ ಎಲ್ಲಿಲ್ಲದ ಬೇಸರ ಬಂದಿತು. ತಾನು ಎಲ್ಲಿಂದ ಎಲ್ಲಿಗೆ ಬಂದು ಕುಳಿತೆ? ಆಶ್ರಮವೆಂಬ ದೊಡ್ಡ ಹೆಸರಿಟ್ಟುಕೊಂಡು, ಬರಿಯ ಒಬ್ಬ ಹುಡುಗನನ್ನು ಸಾಕಿಕೊಂಡು, ತೀರ ಸಂಸಾರಿಯಾಗಿ ಕೂತಿದ್ದೇನೆ. ನಾಲ್ಕೈದು ಮುಡಿ ಗದ್ದೆ ಬೇಸಾಯ ಮಾಡುತ್ತಿದ್ದೇನೆ. ಯಾರಿಗೆ ಏನು ಆದಂತಾಯಿತು? ಶ್ಯಾಮನಂತಹ ಒಬ್ಬ ಹುಡುಗನಿಗೆ ಅನ್ನ ನೀಡಿದರೆ ದೇಶಸೇವೆಯಾಯಿತೇ? ಅವನು ತನ್ನ ಅನ್ನವನ್ನು ತಾನು ದುಡಿಯುತ್ತಲಿಲ್ಲವೇ—ಎಂಬ ಅಸಮಾಧಾನವಾಯಿತು. ತಾನು ಕುಳಿತ ಊರಿನಲ್ಲಿ, ಜನತೆಯಲ್ಲಿ ತನ್ನ ವರ್ಚಸ್ಸು ಹೆಚ್ಚಿದೆ ಎಂಬ ವಿಶ್ವಾಸವೇ? ಅದೂ ಇಲ್ಲ. ನಾಲ್ಕು ಜನರಿಗೆ ಅನ್ನ ನೀಡಿಯೇನು ಎಂಬ ವಿಶ್ವಾಸವೇ—ಅದಿನ್ನೂ ಬಂದಿಲ್ಲ. ಪಟ್ಟಣದಲ್ಲಿ ಕುಳಿತಿದ್ದರೆ, ನಾಲ್ವರು ವಿದ್ಯಾವಂತರ ದೆಸೆಯಿಂದ ಬರಬಹುದಾದ ಗೆಳೆತನವಿದೆಯೋ—ಇಲ್ಲ. ಬದಲು ಕುಳಿತಲ್ಲಿಯೇ ತನ್ನ ಹೊರೆಯನ್ನು ಬೆಳೆಯಿಸಿ, ಕಾಲಿನ ಸಂಕೋಲೆಯನ್ನು ಹೆಚ್ಚಿಸಿಕೊಂಡಿದ್ದೇನೆ. ಯಾರು ಮುಂದುವರಿದಿಲ್ಲ—ತಾನೇ ಇಲ್ಲವೆ? ಜನರೇ? ಜನ ಮೊದಲಿಗಿಂತ ಎಷ್ಟೋ ಸುಧಾರಿಸಿದ್ದಾರೆಂದು ಆ ದಿನ ಅವನು ಸಭೆಯಲ್ಲಿ ಕಾಣಲಿಲ್ಲವೇ, ಕಾಂಗ್ರೆಸ್ ಸದಸ್ಯತ್ವಕ್ಕೆ ಎಷ್ಟು ಜನ ಮುಂದೆ ಬರಲಿಲ್ಲ? ಜನ ಮುಂದು

ವರಿಯುತ್ತಿದ್ದಾರೆ. ಆದರೆ, ಬಸ್ಸು ಸಂಚಾರದ ಆ ದಿನಗಳಲ್ಲಿ ದಾರಿಯಲ್ಲಿ ಹಳೆಯ ಅರವಟ್ಟಿಗೆಯನ್ನು ಕಟ್ಟಿ ಕುಳಿತವನು ತಾನು, ಎಂದು ತಿಳಿದನು.

*　　*　　*　　*　　*

ಹೀಗೆ ದಿನಗಳಿಂದು, ವಾರಗಳಿಂದು, ವರ್ಷಗಳಿಂದು ಮಂಕು ಗಟ್ಟಿ ದಾರಿಗಾಣದೆ ಕುಳಿತಿದ್ದಾನೆ. ಪ್ರಪಂಚದಿಂದ ಕಡಿದು, ಬೇರೆ ಯಾಗಿ ಕುಳಿತುದರಿಂದ ಹಾಗೆ ಆಗಿರಬಹುದೇ—ಎಂಬ ಅನುಮಾನ ಅವನಿಗೆ. ಈ ಎಲ್ಲ ಬೇಸರಗಳಲ್ಲಿ, ಅವನ ಜೀವನದಲ್ಲಿ ತುಸುವಾದರೂ ಹುಮ್ಮಸ ಹುಟ್ಟುತ್ತಿದೆಯಾದರೆ, ಅದು ಅವನದ್ದೆಂಬ ಸಂಸಾರದಿಂದ, ತಮ್ಮನ್ನೇ ನಂಬಿ ಕುಳಿತ ಶ್ಯಾಮ—ಅವನ ಗುಣ, ಕೆಲಸದ ಉತ್ಸಾಹ, ವಿಶ್ವಾಸಗಳಿಂದ; ಇತ್ತ ಸತ್ಯ ತಾನೆಷ್ಟು ಪತಿಗೆ ಅನುಕೂಲಳಾಗಿರ ಬಹುದೋ, ಅಷ್ಟೆಲ್ಲವನ್ನು ಮಾಡಿಕೊಂಡಿದ್ದಾಳೆ. ಈಗ ಇನ್ನೂ ಒಂದು ಸೊಗಸು ಉಂಟಾಗಿದೆ ಅವರ ಮನೆಯಲ್ಲಿ. ಸತ್ಯ, ತಾಯಿಯಾಗಿದ್ದಾಳೆ. ಮಗು ಹುಟ್ಟಿದ ಮೊದಲಿಗೇ, ರಾಧಾಕೃಷ್ಣನಿಗೆ ಹಿಂದೆ ಅಳಿದ ಕೂಸಿನ ನೆನಪು ಹುಟ್ಟಿ ವ್ಯಥೆ ಉಂಟಾಗುತ್ತಿತ್ತಾದರೂ, ತನ್ನ ಮಗುವು ನಗಲು, ತೊದಲು ನುಡಿಯಲು, ಅಂಬೆಗಾಲಿಕ್ಕಲು, 'ಅಪ್ಪಾ, ಅಮ್ಮಾ' ಎನಲು ಕಲಿತ ಮೇಲೆಲ್ಲಾ ಅವನ ಎದೆಯ ಭಾರವು ಎಷ್ಟೋ ಕಡಿಮೆಯಾಗಿದೆ. ಬದುಕು, ತನಗೆ ಈ ತನಕ ಒಪ್ಪಿಸಿಲ್ಲದ ಹರ್ಷವನ್ನು, ಈ ಕೂಸೊಂದೇ ಕೊಟ್ಟಿದೆ—ಎನ್ನುತ್ತಿದ್ದಾನೆ. ಜಗತ್ತಿನಿಂದ ತಾನು ಪಡೆದಷ್ಟು ಸೊಗ, ಸಂತೋಷಗಳನ್ನು ತಾನು ಜಗತ್ತಿಗೆ ಮರಳಿ ಸಲ್ಲಿಸಿಲ್ಲ ಎಂಬ ಚಿಂತೆಯೇ ಅವನ ಮುಖ್ಯವಾದ ಚಿಂತೆಯು. ಯಾವುದೇ ಚಿಂತೆ ತಲೆದೋರಲಿ, ಆ ಮಗುವಿನ ಮುಖ, ತತ್ಕಾಲಿಕವಾಗಿಯಾದರೂ ಆ ಚಿಂತೆಗಳನ್ನು ಕೊಲ್ಲುತ್ತದೆ. ಇಂದು ಆ ಕೂಸಿಗೆ ಎರಡೂವರೆ ವಯಸ್ಸು. ಮುಖದ ಚೆಲುವಿಗೆ ಒಪ್ಪುವ ಹೆಸರಿಟ್ಟಿದ್ದಾನೆ—ಚಂದ್ರನೆಂದು. ಅದು ಅತ್ತುದೂ ಕಡಿಮೆ. ಅತ್ತಾಗ ಇವನು ಸುತ್ತ ನಿಂತು ನೋಡಿದರೂ ಕಡಿಮೆ. ಶ್ಯಾಮ ಕೆಲಸಕ್ಕೆ ಹೋಗುವಾಗ ತಂದೆ ಓಡಾಡುವಾಗ, ತಾಯಿ, ಮನೆಗೆಲಸದಲ್ಲಿರುವಾಗ—ಸರ್ವತ್ರ ಚಂದ್ರನೇ. ಚಂದ್ರನೇನೋ, ರಾಧಾಕೃಷ್ಣನ ಜೀವನದ ಬೆಳಕು. ಉಳಿದುದೆಲ್ಲ ಕಗ್ಗತ್ತಲೆಯಲ್ಲದಿದ್ದರೂ, ಮಂಜು, ಮುಸುಕು.

ನಂದರ ಉಪನ್ಯಾಸವನ್ನು ಕೇಳಿ ಬಂದ ಕೆಲವೊಂದು ತಿಂಗಳಲ್ಲಿಯೇ, ಮೈ ಮೇಲೆ ಚೇಳು ಹರಿದಂತಾಯಿತು— ಅವನಿಗೆ. ಒಮ್ಮೆಗೇ ಹೆಂಡತಿಯನ್ನು ಕರೆದು, "ಇಲ್ಲಿ ಬರಿದೆ ಉಂಡು ತಿಂದು ಕುಳಿತಿದ್ದೇನೆ. ಬೇಸಾಯದ ಕೆಲಸವೆಲ್ಲಾ ಮುಗಿದಿದೆ. ಇನ್ನೊಮ್ಮೆ ಇಷ್ಟು ವರ್ಷಗಳ ಅನಂತರವಾದರೂ, ಕಾಂಗ್ರೆಸ್ಸಿನ ಹೆಸರು ಹೇಳಿ, ಗ್ರಾಮ ಸಂಚಾರ ಮಾಡಿ ಬರುತ್ತೇನೆ . ಈ ಪ್ರಾಂತದ ಜನಗಳ ಪರಿಚಯವಾದರೂ ಆಗಲಿ" ಎಂದನು.

"ಹಾಗಾದರೆ ಮಂಗಳೂರಿಗೆ ಹೋಗಿ ಬರುತ್ತೀರಾ?"

"ಮಂಗಳೂರೇಕೆ?"

"ಅಲ್ಲಿ ಕಾಂಗ್ರೆಸ್ಸು ಅಧ್ಯಕ್ಷರನ್ನೋ, ಇತರರನ್ನೋ ಕಂಡು ವಿಚಾರ ಮಾಡುವುದಕ್ಕೆ" .

"ಹೊಂ, ಅವರೆಲ್ಲಿ ಇರುತ್ತಾರೋ; ಸಂಚಾರದಲ್ಲಿರಬೇಕು, ಪೇಟೆ ಪಟ್ಟಣ ಸುತ್ತುತ್ತಿರಬೇಕು. ಅವರಿಗೆ ಮೋಟಾರಿದೆ; ನನಗಿಲ್ಲ. ಅಲ್ಲದೆ ಪೇಟೆಯವರಲ್ಲಿ ನನಗೆ ಅಷ್ಟು ನಂಬಿಗೆಯೂ ಇಲ್ಲ. ಒಳ ಪ್ರಾಂತದ ಹಳ್ಳಿಗಳನ್ನಾದರೂ ತಿರುಗಾಡಿ ಬರೋಣವೇ—ಎಂದೆನಿಸುತ್ತದೆ. ಶ್ಯಾಮು ನನ್ನು ಕಳುಹಿಸಿ, ಅಲ್ಲಿಂದ ಸದಸ್ಯತನದ ರಶೀದಿ ಪುಸ್ತಕಗಳನ್ನು ತರಿಸಿಕೊಳ್ಳುತ್ತೇನೆ. ಕೊಟ್ಟಾರು; ಅಷ್ಟು ಗುರುತು ಪರಿಚಯ ಇಲ್ಲದವನೂ ಅಲ್ಲ. ಈ ಹೊತ್ತು—ಹಳ್ಳಿಗಳಿಗೆ ಹೋಗಿ, ನಾಲ್ಕು ಕಾಂಗ್ರೆಸ್ಸು ಸಮಿತಿಗಳನ್ನು ಮಾಡುವುದು ಸಾಧ್ಯವಾದರೆ, ಅದರ ಮೂಲಕವಾಗಿಯಾದರೂ, ಯೋಗ್ಯ ಸದಸ್ಯರನ್ನು ಮುಂದಿನ ಚುನಾವಣೆಯಲ್ಲಿ ಆರಿಸಬಹುದು. ಸುಮ್ಮನೆ ತೂಕಡಿಸುವ ಬೊಂಬೆಗಳನ್ನು ಕಳುಹಿಸಿ ಏನು ಪ್ರಯೋಜನ? ಆದೀತು ಎಂಬ ಧೈರ್ಯವಿಲ್ಲ. ಆದರೆ ಆಗಲಿ!—ಎಂಬ ಆಸೆಯಿದೆ.

"ಅಂತೂ ಹೀಗೇನೆ ಇಲ್ಲಿ ನಾನು ಬಹಳ ದಿನ ಕುಳಿತಿರಲು ಸಾಧ್ಯವಿಲ್ಲ. ಒಮ್ಮೆಯಾದರೂ, ನನ್ನ ಮೈಗೆ ಅಂಟಿದ ಜಡತ್ವವನ್ನು ಜಾರಿಸುವುದಕ್ಕೆ ಸಂಚಾರಮಾಡಿ ಬರಬೇಕು. ಬಹಳ ದೂರ ಹೋಗುವುದಿಲ್ಲ. ಒಂದೆರಡು ದಿನಗಳ ಕಾಲುಹಾದಿಯ ಒಳಗಣ ಊರುಗಳನ್ನು ನೋಡಿ ಬರುತ್ತೇನೆ. ಹಿಂದೆ, ನೆರೆಯ ಕಾಲದಲ್ಲಿ, ಬಂಟ್ವಾಳ, ಗುರುಪುರ, ವೇಣೂರು— ಈ ಆಸುಪಾಸುಗಳ ಊರಿಗೆ ಹೋಗಿದ್ದೆ. ಇನ್ನೊಮ್ಮೆ ಹೋಗುವ ಎಂದಿದೆ" ಎಂದು ಹೇಳಿ ಆಕೆಯ ಸಮ್ಮತಿಪಡೆದು ಬಗಲುಚೀಲವೊಂದನ್ನು

ಹಿಡಿದು ಹೊರಟೇ ಬಿಟ್ಟನು. ಹೋಗುವಾಗ ಚಂದ್ರ ಬಂದನು. "ಅಪ್ಪಾ ಎಲ್ಲಿ?" ಎಂದು ತೊದಲಿದನು. "ಬೇಗ ಬರುತ್ತೇನೆ. ನಿನಗೆ ಆಟದ ಸಾಮಾನು ತರುವುದಕ್ಕೆ ಹೋಗುತ್ತೇನೆ." ಎಂದು ಅವರ ಕವುಳನ್ನು ಚಿವುಟಿ, ಸತ್ಯಳನ್ನು ಕಂಡು, ಸತ್ಯ, "ಬೇಸರವಾದೀತೆ? ಏನಾದರೂ ಓದುತ್ತಿರು. ಗಾಂಧಿಯವರ ಜೀವನ ಚರಿತ್ರೆಯಿದೆಯಲ್ಲ—ಅದನ್ನು ಓದು" ಎಂದು ಹೇಳಿ ಹೊರಟನು. ಒಂದೆರಡು ಮೈಲು ದೂರ ಶ್ಯಾಮನೂ ಅವನ ಜತೆಯಲ್ಲಿ ಹೋದನು. ಆತ, ಆ ಸುತ್ತಲಿನ ಗ್ರಾಮಗಳಿಗೆ ಹೊಸಬನಲ್ಲ. ಅಚೀಚೆನವರೂ ಅವನನ್ನು ಸ್ವಲ್ಪವಾದರೂ ಕೇಳಿಬಲ್ಲರು. ಹಿಂದೆ ನೆರೆಯ ಕಾಲದಲ್ಲಿ ಹೋದಾಗ ಇವನನ್ನು ಕಂಡು "ಯಾವುದೋ ಒಂದು ಕಸ ತೇಲಿಕೊಂಡು ಬಂದಿದೆ. ಮಧ್ಯಾಹ್ನದ ಗ್ರಾಸಕ್ಕೆಂದು ಕಾಣುತ್ತದೆ. ನಂಟರು ಹೆಚ್ಚುತ್ತಾ ಇದ್ದಾರೆ" ಎಂದವರೂ ಉಂಟು. ಅಂಥ ಜನರಿರುವ ಊರುಗಳಿಗೆ ಈಗ ಹೋದಾಗ, ಚೆನ್ನಾದ ಸ್ಮರಣ ಶಕ್ತಿಯುಳ್ಳವರು— "ಆ ದಿನ ನೆರೆಯ ಸಮಯ ಬಂದವರು ನೀವಲ್ಲವೇ? ನೋಡಿ, ಈ ಮನೆ ಅನಂತಗ ಮಾಡಿದ್ದು. ಹೇಗೋ ಸಾಲಮಾಡಿ, ಕಲ್ಲು ಕಟ್ಟಿ ಮಾಡಿನ ಕೆಲಸ ಮುಗಿಸುವುದಕ್ಕೆ ಎರಡು ವರ್ಷ ಹಿಡಿಯಿತು. ಈಗಿನ ಕಾಲದಲ್ಲಿ ಅದನ್ನು ಯೋಚಿಸುವ ಹಾಗೆಯೇ ಇಲ್ಲ. ಹೇಗೆ ಸಾಧ್ಯ? ಇಷ್ಟೆಲ್ಲಾ ಬೆವರು ಸುರಿಸಿ, ಒಂದು ಮುಡಿ ಅಕ್ಕಿಯನ್ನು ಬೆಳೆದು, ಸಾಹುಕಾರರ ಹತ್ತಿರ ಮಾರಾಟಕ್ಕೆ ಹೋದರೆ, 'ಮೂರೂವರೆ ರೂಪಾಯಿ ದರ' ಅನ್ನುತ್ತಿದ್ದಾರೆ. ಆದರಿಂದ ಕಂದಾಯ ಕಟ್ಟುವುದು ಹೇಗೆ? ನಾವು ಉಣ್ಣುವುದು ಹೇಗೆ?" ಎಂದರು ಒಬ್ಬರು. ಇನ್ನೊಬ್ಬರು ಹೇಳಲು ಸಂಗತಿ ಇಲ್ಲದಂತೆ ಹಳೆಯ ಸುದ್ದಿಯನ್ನು ತೆಗೆದು "ನೆರೆಯಲ್ಲಿ ನಷ್ಟಪಾದವರಿಗೆ, ಸರಕಾರ ಉದ್ಧಾರ ಮಾಡುತ್ತದೆ ಎಂದಿರಿ. ಕೊನೆಗೆ ಮಾಡಿದ್ದೇನು? ನೀವು ಬಂದು ಬಿದ್ದ ಗೋಡೆಯನ್ನು ಲೆಕ್ಕಮಾಡಿ ಹೋದಿರಿ. ಆ ಮೇಲೆ ನಮ್ಮನ್ನು ಕೇಳಿದವರಿಲ್ಲ. ಕೆಲವು ಕಡೆ ಅಕ್ಕಿ, ಕಾಸು ಕೊಟ್ಟರಂತೆ. ನಮ್ಮ ಊರಿಗೆ ಯಾರೂ ಕೊಡಲಿಲ್ಲ ಎಂದರು." ಈತ ಅದಕ್ಕೆ ಉತ್ತರವಾಗಿ "ಮಾಡುವುದೇನು ಹೇಳಿ? ನಾನು ಇಲ್ಲಿಗೆ ಬಂದು ನಿಮ್ಮ ಸ್ಥಿತಿಗತಿಗಳನ್ನು ಅವರಿಗೆ ತಿಳಿಸಿದೆ. ಆಯಿತು. ಯಾವಾವಲ್ಲಿ ಜನ ತಾವಾಗಿ ಮೇಲಿಂದ ಮೇಲೆ ಹೋಗಿದೂರುಕೊಟ್ಟರೋ, ಅಲ್ಲಿಗೆ ಸ್ವಲ್ಪವಾದರೂ ಸಹಾಯಹೋಯಿತು.

ಕೆಲಸಗಾರರು ಇಲ್ಲದಲ್ಲಿ ಏನು ಮಾಡಲಿಕ್ಕೂ ಆಗಲಿಲ್ಲ. ಬಂದ ಸಾಮಾನನ್ನು ಸಮನಾಗಿ ಹಂಚಲಿಕ್ಕಾಗುತ್ತದೆಯೇ?, ಇದ್ದುದರಲ್ಲಿ, ಬಡವರನ್ನು ಆರಿಸಿ ಸಹಾಯಕೊಡಬೇಕಾಯಿತು" ಎಂದು ಆ ಹಳೆಯ ನೆನಪನ್ನು ತಳ್ಳಿಹಾಕಿದನು; ವಿಷಯವನ್ನು ಬದಲಿಸುತ್ತ—

"ನಮ್ಮ ಹಳ್ಳಿಗಳೆಲ್ಲ ಹೀಗೇಯೇ ಇದ್ದರೆ ಇನ್ನಿನ್ನು ಮೋಕ್ಷವಿಲ್ಲ. ಏನಾದರೊಂದು ವಿಪತ್ತು ಬಂತೆಂದು ತಿಳಿಯಿರಿ—ಒಂದು ನೆರೆ, ಒಂದು ರೋಗರುಜೆ, ಒಂದು ಬೆಳೆನಷ್ಟ— ಯಾವುದೇ ಆಗಲಿ, ಅದೂ ಅಲ್ಲ,— ನಿಮ್ಮ ಊರಿಗೆ ಒಂದು ಗಾಡಿದಾರಿಯಾದರೂ ಬೇಡವೇ? ನಿಮ್ಮ ಸ್ಥಿತಿಗತಿಗಳನ್ನು ಮೇಲಿನವರಿಗೆ ಹೇಳಿಕೊಳ್ಳುವುದಕ್ಕೆ ಜನಬೇಕು. ಪರವೂರಿನವರು ಬಂದು, ನಿಮ್ಮ ಕಾಯಿಲೆ ಏನೆಂದು ತಿಳಿದು ಮದ್ದು ಕೊಟ್ಟಾರೆಯೇ? ಅದಕ್ಕೆ ನೀವೆಲ್ಲರು ಒಂದುಗೂಡಿ, ಊರಲ್ಲಿ ಒಂದು ಸಂಸ್ಥೆಯನ್ನು ಬೆಳೆಯಿಸಬೇಕು. ಕಾಂಗ್ರೆಸ್ಸು ಅಂಥ ಕೆಲಸಮಾಡುತ್ತಾ ಇದೆ; ನೀವೀಗ ಅದಕ್ಕೆ ಸಹಾಯ ಮಾಡಬೇಕು, ಅದಕ್ಕೆ ಬಲಕೊಡಬೇಕು. ದೇಶಸ್ವತಂತ್ರವಾದರೆ ಹಳ್ಳಿಯ ಅಭಿವೃದ್ಧಿಯಾಗುತ್ತದೆ. ಗಾಂಧೀಜಿಯೇ ಹೇಳಿಲ್ಲವೇ, ಹಳ್ಳಿಯೇ ಹಿಂದುಸ್ಥಾನವೆಂದು?" ಎಂದನು.

"ಹೌದು ಹಳ್ಳಿ ಹಿಂದುಸ್ಥಾನವೇ? ಈ ಪೇಟೆಯವರು ಅದನ್ನು ಹೆರಿದು ತಿನ್ನದೇ ಹೋದರೆ ಮಾತ್ರ. ನಿಮಗೆ ನಮ್ಮ ಹಳ್ಳಿಯ ಸ್ಥಿತಿ ಗೊತ್ತಿಲ್ಲ. ನಮ್ಮ ಗ್ರಾಮವನ್ನೇ ನೋಡಿ—ಇಲ್ಲಿ ಒಬ್ಬನೇ ಒಬ್ಬ ಗಟ್ಟಿಯಾದ ಕುಳುವಾರು ಉಳಿದಿಲ್ಲ. ಇರುವವರೆಲ್ಲರೂ ಗೇಣಿ ಒಕ್ಕಲುಗಳು. ಒಂದು ಹತ್ತೆಂಟು ಮಂದಿ ತೀರಾ ಕಂಗಾಲಾದ ವರ್ಗದಾರರು. ಊರಿನ ಭೂಮಿಗಳೆಲ್ಲ ಮಂಗಳೂರು ಬಂದರದ ಸಾಹುಕಾರರಿಗೆ, ಅಡವೋ, ಇಲ್ಲವೇ ಕ್ರಯ. ಇನ್ನು ಊರಲ್ಲಿರುವ ನಾಲ್ಕು ಮಂದಿ ಬುದ್ಧಿವಂತರು, ಊರಲ್ಲಿಯೇ ಸಣ್ಣ ಪುಟ್ಟ ಜಗಳ ಮಾಡಿ, ನಿತ್ಯ, ಸಿವಿಲ್, ಕ್ರಿಮಿನಲ್ ಲೇವಾದೇವಿ ಹೂಡಿ, ಜೀವನ ಕಳೆಯುತ್ತಾರೆ" ಎಂದು ಬಹಳ ಬಣ್ಣವಾಗಿ ಮಾತನಾಡುತ್ತ, ಆ ಊರಲ್ಲಿ ತಮಗಾಗದಿದ್ದವರ ಮೇಲೆ ತಮ್ಮ ವೈರವನ್ನು ಕಕ್ಕಿದರು. ಆದರೆ, ಅಂತಹ ಜನರಿರುವ ಹಳ್ಳಿ ಹಳ್ಳಿಗೂ ಆತ ಹೋಗಿ ಬರುತ್ತಿದ್ದಾನೆ. ಹಿಂದಲ ಬಾರಿ ಬಂದಾಗ, ನೆರೆಯಿಂದ ಜನ ಹಣ್ಣಾಪುದನ್ನು ಕಂಡಿದ್ದ. ಈ ಬಾರಿ ಅದಕ್ಕೂ ಹೆಚ್ಚಿಗೆ ಹಣ್ಣಾದಂತೆ ಕಾಣುತ್ತದೆ. ಅದು ದುಡ್ಡಿನ ಬರಗಾಲದಿಂದ.

'ದುಡ್ಡಿಗೆ ಪಂಛೇರಿನಂತೆ, ಸಾಹುಕಾರರು ಆಸ್ತಿ ಕೊಳ್ಳುತ್ತಿದ್ದಾರೆ'ಂದು ಕಾನೂನು ನಾರಾಯಣಪ್ಪಯ್ಯನವರು ಹೇಳುತ್ತಿದ್ದಾರೆ. ಒಬ್ಬಿಬ್ಬರು, "ಅಯ್ಯಾ ನೀವು ಹೀಗೆ ಹಳ್ಳಿಗಳಿಗೆ ಬಂದು ಕಾಂಗ್ರೆಸ್ಸಿಗೆ ಮೆಂಬರರಾಗಬೇಕೆಂದು ಹೇಳಿದರೆ ಯಾರು ಸೇರುತ್ತಾರೆ?"

"ಯ್ಯಾಕೆ?"

"ನೋಡಿ, ಹೋದರೆ-ಪೇಟೆಗೆ ಹೋಗಬೇಕು. ಕಳೆದ ತಿಂಗಳಲ್ಲೋ, ಅದರ ಹಿಂದಿನ ತಿಂಗಳಿನಲ್ಲಿಯೋ, ಮೋಟಾರಿನಲ್ಲಿ ಎರಡು ಮೂರು ಮಂದಿ ಬಂದರು ನೋಡಿ—ಏನು ಗದ್ದಲ ಆ ದಿವಸ. ಪೇಟೆ ಜನಗಳ ಉಮೇದೇ ಉಮೇದು. ಅವರಿಗೆ ಹಾರ ಹಾಕಿದರು, ಕಾಫಿ ಕೊಟ್ಟರು, ಜಯಕಾರದ ಮೇಲೆ ಜಯಕಾರ ಹಾಕಿದರು. ನನಗೆ ಒಂದು ಪಂಛೇರು ಪುಡಿ ಹೊಗೆಸೊಪ್ಪು ಬೇಕಾಗಿತ್ತು. ಅದಕ್ಕೆಂದು ಪೇಟೆಗೆ ಹೋಗಿದ್ದೆ. ಯಾರೋ ಗಾಂಧಿಯವರು ಬಂದಿದ್ದಾರೆಂದು ಹೇಳಿದ ಹಾಗಾಯಿತು. ಅಂಗಡಿಯವರನ್ನು ಕೇಳಿದೆ. ಅಂಗಡಿಯವರಿಗಂತು ಆ ದಿನ ಪುರುಸೊತ್ತೇ ಇಲ್ಲ. "ಹೊಗೆಸೊಪ್ಪೆಲ್ಲಾ ನಾಳೆಗೆ; ಈಗ ಪುರುಸೊತ್ತೇ ಇಲ್ಲ" ಎಂದರು. ನಾನು ಅವರ ಜತೆಗೆ ಬರುವ ತನಕವೂ ಬಿಡಲಿಲ್ಲ. ಆ ದಿನ ನೋಡಿ, ನಿಮ್ಮಂಥ ಹುಡುಗ ಪ್ರಾಯದವರು, ಲೆಕ್ಚರು ಕೊಟ್ಟರು—ಹೇಗೆ ಅನ್ನುತ್ತೀರಿ? ರಪ ರಪ ಬೀಸಿದ ಹಾಗಾಯಿತು ಕೆನ್ನೆಗೆ. ಎಲ್ಲರೂ ಠಣ ಠಣ ನಾಲ್ಕುನಾಲ್ಕಾಣೆ ಪಂತಿಗೆ ಕೊಟ್ಟರು. ನಾನೂ ನಾಲ್ಕಾಣೆ ಬಿನಾಡಿ, ಹೆಸರು ಬರೆಯಿಸಿಕೊಂಡು ಬಂದೆ. ರಶೀದಿ ನಾಳೆಗೆ ಕಳುಹಿಸುವ ಅಂದರು.

"ನೀವು ಹೀಗೆ ಮನೆ ಮನೆಗೆ ಬಂದು ದಮ್ಮಯ್ಯ ಹಾಕಿ ಮೆಂಬರರಾಗಿ ಅಂದರೆ—ಗಾಂಧಿಯವರ ಭರವು ಕಳೆದ ಹಾಗೆಯೇ"

"ಹೋ—ನೀವೀಗ ಮೆಂಬರರಾಗಿಯಾಯಿತು. ಒಳ್ಳೆಯ ಕೆಲಸ ಮಾಡಿದಿರಿ. ಪೇಟೆಗೆ ಹೋದುದರಿಂದ ಮೆಂಬರರಾದಿರಿ; ಆದರೆ ಗ್ರಾಮದಲ್ಲೇ ಉಳಿದವರು ಏನು ಮಾಡಬೇಕು? ಅವರಿಗೆ ನನ್ನಂಥವರೇ ಬಂದು ಹೇಳಬೇಡವೇ? ಪೇಟೆಯಲ್ಲಿ 'ಚೂ' ಎಂದರೆ ಜನ ಜಮಾಯಿಸುತ್ತಾರೆ. ಹಾವಾಡಿಗರು ಬಂದರೂ ಜನ ಸೇರುತ್ತಾರೆ. ಲೆಕ್ಚರ್ ಕೊಡುವವರು ಬಂದರೂ ಜನರು ಸೇರುತ್ತಾರೆ. ಅಲ್ಲಿ ಮನೆಗಳೂ-ಹತ್ತಿರ ಹತ್ತಿರ. ಜನರಲ್ಲಿ

ಒಗ್ಗಟ್ಟೊ ಸ್ವಲ್ಪ ಹೆಚ್ಚು. ಹಳ್ಳಿಯಲ್ಲಿ ಅವು ಎರಡೂ ಕಡಿಮೆ. ನೀವು ಒಕ್ಕೂಟವಾಗದೇನೆ ಹೋದರೆ, ನಾಳೆ ಪೇಟೆಯವರೇ ನಿಮ್ಮನ್ನು ಆಳುತ್ತಾರೆ."

"ನಮ್ಮನ್ನು ಆಳುವವರೇ ಅವರು. ನಾಲ್ಕು ಮಣ ಅಡಿಕೆಯನ್ನು ತೆಗೆದುಕೊಂಡು ಹೋಗಿ ಅವರ ಅಂಗಡಿಗೆ ಹಾಕಿದರೆ, ನೂರು ಸಾರಿ ಕುಣಿಸುತ್ತಾರೆ. ಬೆಲೆ ತೀರಾ ತಗ್ಗಿದಾಗ ನಮ್ಮ ಲೆಕ್ಕಕ್ಕೆ ಬರೆದು, ಮಣಕ್ಕೆ ಮೂರು ರೂಪಾಯಿ ಕೊಟ್ಟು ಕಳುಹಿಸುತ್ತಾರೆ. ಬೇಡ ಅಂದರೆ ಅದೂ ಇಲ್ಲ."

"ಅದಕ್ಕೇ ಅನ್ನುವುದು-ನೀವು ಒಕ್ಕಟ್ಟು ಆಗಬೇಕೆಂದು. ನಿಮ್ಮದೇ ಸಂಘ, ಸಂಸ್ಥೆ ಮಾಡಿಕೊಳ್ಳಬೇಕು. ಸಹಕಾರಿ ಸಂಘದಂತಹ ಸಂಸ್ಥೆ ಮಾಡಿಕೊಂಡರೆ, ನೀವು ಬೇಕಾದುದನ್ನು ಒಟ್ಟಿಗೆ, ಕೊಳ್ಳಬಹುದು. ಒಟ್ಟಿಗೆ ಮಾರಬಹುದು."

ಹೀಗೆ ನಾನಾ ಹಳ್ಳಿಗಳಲ್ಲಿ ತಿರುಗಾಡಿ, ಜನಗಳೊಡನೆ ಸಂಭಾಷಣೆ ಮಾಡಿ, ಅತಿ ಕಷ್ಟದಿಂದ, ಸುಮಾರು ಹತ್ತು ಸಮಿತಿಗಳನ್ನು ಮಾಡಿ ಬಂದನು. ಸುಮಾರು ಮುನ್ನೂರು ಮಂದಿ ಸದಸ್ಯರೂ ಕಲೆತರು. ಆದರೆ ಅವನ ಅವಿಶ್ವಾಸ ಮಾತ್ರ ಇನ್ನೂ ಹೋಗಲಿಲ್ಲ. ಮನೆಗೆ ಬಂದು-ಹೆಂಡತಿಯೊಡನೆ ಹೇಳುತ್ತಾನೆ "ಕಮಿಟಿಗಳನ್ನೇನೋ ಮಾಡಿ ಬಂದೆ, ಆದರೆ ಆ ಕಮಿಟಿಯವರು ತಿರುಗಿ ಸಭೆ ಕೂಡುತ್ತಾರೋ, ಇಲ್ಲವೊ ಎಂದು ನೋಡುವುದಕ್ಕೆ ನಾನೇ ಹೋಗಬೇಕಾದೀತು."

ಈಗ ಅವನ ಪ್ರಪಂಚವು ಮಿತವಾದುದು. ತೀರ ಮಿತವಾಗಿದುದಾಗಿದೆ. ಶ್ಯಾಮು, ಸತ್ಯ, ಚೆಲುವಿನ ಕೂಸು ಚಂದ್ರ, ಆತ--ಇಷ್ಟು ಮಂದಿಯ ಜತೆಗೆ ಕೆಲಸಕ್ಕೆ ಬಂದು ಸೇರಿಕೊಂಡ ಆಳು ಕಲಲ; ಅವನ ಕುಟುಂಬ. ಅವನ ಸಂಸಾರದಲ್ಲೇನೇ ಚೆಲುವು ತುಂಬಿದೆ. ತನ್ನ ಒಲುಮೆಗೆ ಸತ್ಯಳು ದಿನ ದಿನ ಹೆಚ್ಚೆಚ್ಚು ಕೂಡಿ ಬರುತ್ತಿ-ದ್ದಾಳೆ. ಅವಳಿಗೂ ತಮ್ಮ ಮಿತ ಜೀವನದಲ್ಲಿ ಉದ್ವಿಗ್ನತೆ ಉಂಟಾಗುತ್ತಿದೆ. "ಹೀಗಿದ್ದರಾಗದು. ಏನಾದರೂ ಮಾಡಬೇಕು" ಎನ್ನುತ್ತಿದ್ದಾಳೆ ಅವಳು ಸಹ. ಮಗು ಚಂದ್ರನಂತೂ ಹುಣ್ಣಿಮೆಯಂತೆ ಅವರ ಜೀವನವನ್ನು ಬೆಳಗುತ್ತಿದ್ದಾನೆ. ಅವನನ್ನು ಹೊತ್ತು ತಿರುಗುವುದರಲ್ಲಿ, ಶ್ಯಾಮು, ಸತ್ಯ ಎಲ್ಲರೂ ಸ್ಪರ್ಧಿಗಳೇ. ಮಕ್ಕ

ಳಿರುವ ಮನೆಯಲ್ಲಿ ವಿರಾಮ ಉಳಿಯದು. ಏನಿಲ್ಲವಾದರೆ, ಬಿಡುವಿನ ಗಳಿಗೆಯಲ್ಲಿ ಮನಸ್ಸನ್ನು ಅದು ರಮಿಸಬಲ್ಲುದು. ಬದುಕನ್ನು ನಿತ್ಯದ, ಗೊಂದಲ ಅಶಾಂತಿ ಬೇಸರಗಳಿಂದ ಎತ್ತಿ ತೆಗೆದು ನಗಿಸಬಲ್ಲವು."

"ಆದರೂ ಸತ್ಯ, ಇಷ್ಟು ಸಮಯದ ವರೆಗೂ ನಮಗೆ ನಮ್ಮ ಮಗು, ನಮ್ಮ ಸಂಸಾರದ್ದೇ ಹಾಡಾಯಿತು. ದೊಡ್ಡವರು ದೇಶದ ಕೀರ್ತನ, ಬಡತನಗಳನ್ನು ಹೋಗಲಾಡಿಸಲು ಹಂಬಲಿಸುತ್ತಿರುವಾಗ, ನಾವಿಲ್ಲಿ ಕೆಸರಿನಲ್ಲಿ ಹೂತುನಿಂತಿದ್ದೇವೆ" ಎನ್ನುತ್ತಾನೆ ಆತ.

"ನಿಮ್ಮಿಂದಾಗುವುದನ್ನು ನೀವು ಮಾಡಿಲ್ಲವೇ?" ಎಂದು ಅವಳ ಉತ್ತರ.

"ನಮ್ಮಿಂದ ಇನ್ನೇನೂ ಆಗದು—ಎಂದು ಸಮಾಧಾನ ತೆಗೆದುಕೊಂಡರಲ್ಲವೇ ಈ ಮಾತು?" ಎಂಬುದು ಅವನ ಪ್ರತಿಕ್ರಿಯೆ.

* * * * *

ದೇಶದ ಉಳಿದ ಕಡೆಗಳಲ್ಲಿ ಸ್ವಾತಂತ್ರ್ಯ ಚಳವಳಿಯು, ಇನ್ನೊಮ್ಮೆ ಉಕ್ಕಿ ಚೆಲ್ಲುತ್ತಿದೆ ಎಂದು ಆತ ಪತ್ರಿಕೆಗಳಲ್ಲಿ ಓದಿದ್ದಾನೆ. ಹಿಂದೊಮ್ಮೆ ನೊಂದಿ ಶಾಂತವಾದರೂ, ಈಗ ತಿರುಗಿ ಚೇತನಗೊಂಡು ದೇಶದಲ್ಲೆಲ್ಲ ಕಲ್ಲೋಲ ಉಂಟಾಗಿದೆ. "ನಮ್ಮ ಜಿಲ್ಲೆಯಲ್ಲಿ ಮಾತ್ರ ಎಲ್ಲವೂ ಹಿಮಗಟ್ಟಿದೆಯಲ್ಲಾ?" ಎನ್ನುತ್ತಾನೆ ಆತ. ಸತ್ಯ "ಕೆಲವು ಸಮಯದ ಹಿಂದೆ ಮಂಗಳೂರಿನಲ್ಲಿ ನಾಲ್ಕಾರು ಪರಿಷತ್ತುಗಳು ಆಗಲಿಲ್ಲವೇ? ಹೋಗಿ ಬನ್ನಿ ಅಂದೆ. ಸ್ಥಾವಿರಾರು ಜನ ಸೇರಿದ್ದರಂತೆ. ಜನರ ಜೀವನವೇ ಹೆಪ್ಪುಗಟ್ಟಿದ್ದರೆ ಅದನ್ನೆಲ್ಲಾ ನಡೆಸುವುದು ಸಾಧ್ಯವೇ?"

"ಅದು ನಮ್ಮ ಜೀವನದ ನಿಜ--ಚಿತ್ರವೂ ಅಲ್ಲ. ಕಾರ್ಯ ಶಕ್ತಿಯೂ ಅಲ್ಲ. ಅಲ್ಲಲ್ಲಿ ನಾಲ್ಕು ಜನರು ಕಟ್ಟಿ ಕುಣಿಯುವ ಆಟ. ಜನಕ್ಕೆ ಅದು ರುಚಿಸುತ್ತದೆ. ತುಂಬ ಬೇಸರ ಬಂದ ಜೀವನಕ್ಕೆ ಒಂದು ವಿನೋದವಾಗಿ ಕಾಣಿಸುತ್ತದೆ. ಕೆಲಸಮಾಡಲು ಹುಟ್ಟಿದ ತಳಮಳಗಳು ಬೇರೆ ಜಾತಿಯವು; ಇದು ಬೇರೆ ಬಗೆಯದು. ನೀರಿನ ಮೇಲೆ ನೊರೆ ತೇಲಿ ನಕ್ಕಂತೆ —ಆಳವಿಲ್ಲ; ಗಾತ್ರವಿದ್ದರೂ ಸತ್ವವಿಲ್ಲ. ಉಪನ್ಯಾಸ ಕೇಳುವುದಕ್ಕೆ ಬರುವುದು ದೊಡ್ಡ ಕೆಲಸವೇ? ಹಿಂದೆ ಇಷ್ಟೊಂದು ಜನ ಕಲೆಯುತ್ತಿದ್ದಿಲ್ಲ ನಿಜ. ಈಗ ಬರುತ್ತಿದ್ದಾರೆ. ಅದರಿಂದೇನಾಯಿತು?"

"ಏನಿಲ್ಲದೆ ಇರುವುದಕ್ಕಿಂತ ಇದು ವಾಸಿಯಲ್ಲವೇ?"

"ಅಹುದು. ಅಲ್ಲವೆನ್ನಲಾರೆ. ನನಗೂ ಹಲವಾರು ಬಾರಿ, ಮುಖಂಡರ ಮಾತನ್ನು ಕೇಳಿ, ಗ್ರಾಮುಗಳಲ್ಲಿ ತುಂಬ ಸಂಚಾರವಾಡಿ ಜನರನ್ನು ಎಚ್ಚರಿಸುವ ಆಸೆಯಾಗುತ್ತದೆ."

"ಅಹುದು, ನಮ್ಮ ಜನ ಹೆಡ್ಡು ಜನ."

"ಜನ ಹೆಡ್ಡರೋ, ಬುದ್ಧಿವಂತರೋ—ತಿಳಿಯದಾಗಿದೆ. ನಾವು ಹೋಗಿ ಅವರನ್ನು ಕಾಡಿದರೆ—ನಿಮ್ಮಂಥವರು ಮನೆಗೆ ಬಂದಿದ್ದೀರಿ. ಮೆಂಬರರಾಗಲು ಬಾರದೆ ಇರುತ್ತದೆಯೇ ಎನ್ನುತ್ತಾರೆ. ಇನ್ನು ಕೆಲವರು 'ಇದರಿಂದೇನೂ ಆಗದು' ಎನ್ನುತ್ತಾರೆ. ಮತ್ತಷ್ಟು ಮಂದಿ 'ಹತ್ತು ವರ್ಷಗಳ ಹಿಂದೆ ಕೂಗಿದರಲ್ಲಾ, ಅಷ್ಟೇ ಫಲ ಇದಕ್ಕೂ' ಎನ್ನುತ್ತಾರೆ. ಗ್ರಾಮದ ಪ್ರತಿನಿಧಿಗಳನ್ನೂ ಆರಿಸಿ, ತಾಲೂಕು, ಜಿಲ್ಲಾ ಸಂಘಗಳಿಗೆ ಕಳುಹಿಸಬೇಕೆಂದರೆ—'ಅದೆಲ್ಲಾ ಮಾಡಿ ಆಗುವುದೇನು' ಎಂದು ಬಿಡುತ್ತಾರೆ. ನನಗೆ ಅನಿಸುತ್ತದೆ—ನಮ್ಮ ಜನಕ್ಕೆ ಬುದ್ಧಿ ಕಡಿಮೆಯಾಗಿಲ್ಲ, ಸಾಕಷ್ಟು ಇದೆ. ಆದರೆ ಆಲಸ್ಯ ಮಾತ್ರ ತುಂಬಿ ಹೋಗಿದ್ದೆ. ಅವರು ಒಟ್ಟುಕೂಡಿ ಕೆಲಸ ಮಾಡುವ ಹಾಗೆಯೇ ಇಲ್ಲ. ಒಬ್ಬನನ್ನು ನೋಡಿದರೆ ಇನ್ನೊಬ್ಬನಿಗೆ ಆಗದು. ಹಳ್ಳಿಗೆ ಹೋಗಿ ಮಾತನಾಡಿದಾಗಲೆಲ್ಲ, ಊರ ಕಲಹಗಳ ಪುರಾಣ, ದೂರುಗಳ ಸಂತೆಗಳನ್ನು ನಮ್ಮ ಮುಂದಕ್ಕೆ ಇಡುತ್ತಾರೆ. ಇಂಥ ಜನಗಳನ್ನು ಕೂಡಿಕೊಂಡು, ಗಾಂಧಿಯವರು ಹೇಗೆ ಕಾಯಿದೆಭಂಗ ಹೂಡುತ್ತಾರೋ, ಹೇಗೆ ಸತ್ಯಾಗ್ರಹ ಹೂಡುತ್ತಾರೋ, ನನಗೆ ತಿಳಿಯದಾಗಿದೆ"

ಅವನು ಈ ಮಾತುಗಳನ್ನು ಸತ್ಯಳಿಗೆ ಹೇಳಿ ಒಂದು ವಾರ ಪೂರ್ಣ ಕಳೆಯಲಿಲ್ಲ. ಗಾಂಧೀಜಿಯವರು ದಾಂಡೀ ಯಾತ್ರೆಯನ್ನು ಕೈ ಕೊಳ್ಳುವರು ಎಂದಾಯಿತು. ಉಪ್ಪಿನ ಸತ್ಯಾಗ್ರಹವನ್ನು ಮಾಡುವಂತೆ ಜನಕ್ಕೆ ಸಂದೇಶ ಹೋಯಿತು. ಈ ರಣಗಹಳೆಯನ್ನು ಕೇಳಿದ ಕ್ಷಣವೇ, ರಾಧಾಕೃಷ್ಣನ ಜಡ ಜೀವನದಲ್ಲಿ ಆವೇಶ ತುಂಬಿತು. ಸುಮ್ಮನೆ ಕುಳಿತಿರಲು ಮನಸ್ಸಿಲ್ಲ. ಯಾವ ಕೆಲಸ ಮಾಡಹೋದರೂ ನಿರುತ್ಸಾಹದಲ್ಲಿ ಕೊನೆಗಾಣುತ್ತದೆ. ನಮ್ಮ ಕನ್ನಡ ಜಿಲ್ಲೆ ತನ್ನ ಆಲಸ್ಯವನ್ನು ಕಳಚಿ, ಚೇತನಗೊಂಡೀತೇ—ಎಂದು ಹಾತೊರೆದನು. "ನನ್ನ ಜನದ ಪರಿಚಯ ನನ

ಗಿಲ್ಲವೇ? ಮುಂಬಯಿ ಗುಜರಾತುಗಳಲ್ಲಿ, ಗಾಂಧೀಯವರ ಮಾತುಗಳನ್ನು ಸಾವಿರಾರು ಜನರು ಸ್ವಾಗತಿಸಬಹುದು. ನಮ್ಮೂರು ಗುಜರಾತಲ್ಲ. ಜನಕ್ಕೆ ಬ್ರಿಟಿಷ್ ಸರಕಾರದ ಮೇಲಿನ ಭ್ರಮೆ ಹೋಗಿಲ್ಲ ನಿಜ; ಅದರ ಮೇಲಿನ ಪ್ರೀತಿಯೂ ಉಳಿದಿಲ್ಲ. ಆದರೆ ಬಲಶಾಲಿ ಸರಕಾರ ವನ್ನು ಇದುರಿಸಲು ಮುಂದೆ ಹೋಗುವ ಧೈರ್ಯ ಈ ಜನಕ್ಕೆ ಇದೆಯೇ? ಬೀದಿಗಳಲ್ಲಿ ಕೂಗು ಎಬ್ಬಿಸಿ ಮೆರವಣಿಗೆ ಹೋಗುವುದು, ಚಪ್ಪರ ತುಂಬಿ ಸುವುದು—ಇವು ಸ್ವಾರ್ಥ ತ್ಯಾಗದ ಕೆಲಸಗಳೇ? ಧೈರ್ಯದ ತೂಕ ಇಲ್ಲಿ ಆಗುವುದಿಲ್ಲ ಸ್ಥೈರ್ಯವೂ ಇದಕ್ಕೆ ಬೇಕಾಗಿಲ್ಲ ಪ್ರತಿಭಟಿ ಇಲ್ಲದಿರು ವಷ್ಟು ದಿನ, ಯಾರೂ ವೀರರಾಗಬಹುದು. ಇದುರಾಳಿಯು ಎದುರಿಗೆ ನಿಂತಾಗ ಮಾತ್ರ, ಕಾದಲು ಸಿದ್ಧವಾದರೆ ಮಾತ್ರ, ಅದರ ತೂಕವಾಗು ತ್ತದೆ." ಎಂಬದೇನೇನೋ ತರ್ಕ ಮಾಡಿದನು. ಮನಸ್ಸು ವಿಚಾರಶೀಲವಾ ದಂತೆ ಅಶಾಂತಿಗೂ ಗುರಿಯಾಯಿತು. ಗಾಂಧೀಜಿಯವರು ಬಹಿರಂಗ ವಾಗಿ ದಂಗೆ ಮಾಡಲು ಹೇಳಿದರೆ,—ಸರಕಾರ ಅವರ ಯಂಗ್ ಇಂಡಿಯ, ನವಜೀವನ ಪತ್ರಿಕೆಗಳನ್ನು ನಿಲ್ಲಿಸದೆ ಇದ್ದೀತೇ? ವರ್ತಮಾನ, ಸಂದೇಶ, ಮಾರ್ಗದರ್ಶಿತ್ವಗಳನ್ನು ಹೀಗೆ ಸರಕಾರ ತಡೆದರೆ, ಜನ ಮುಂದುವರಿಯು ವುದು ಕಷ್ಟವಲ್ಲವೇ—ಎಂದುಕೊಂಡನು. ಕೊನೆಗೆ "ಯಾರು ಏನೇ ಮಾಡಲಿ, ನನ್ನ ಕೆಲಸ ನಾನು ಮಾಡುತ್ತೇನೆ. ಈ ಬಾರಿಯ ಕಾದಾಟ ದಲ್ಲಿ ಧುಮುಕುತ್ತೇನೆ, ಸೆರೆಮನೆಗೆ ಒಯ್ದರೂ ಚಿಂತಿಸಬೇಕಿಲ್ಲ. ಈ ಜಡ ಜೀವನಕ್ಕಿಂತ ಅದು ಲೇಸು. ನಿರುತ್ಸಾಹ, ನಿಸ್ಸಹಾಯಕತೆಯಿಂದ ಬದು ಕುವ ಜೀವನವೇ ಸೆರೆ. ಅದನ್ನು ಮುರಿಯುವುದೇ ಸ್ವಾತಂತ್ರ್ಯ." ಎಂದು ತರ್ಕಿಸಿದನು. ಅವನ ಮನಸ್ಸು ಮುಂದಿನ ದಾರಿಯನ್ನು ಸಿದ್ಧಮಾಡಿತು. ತಾನು ಸೆರೆಮನೆಯ ಯಾತ್ರೆಗೆ ಹೊರಟು ನಿಂತಾಗ, ಸತ್ಯಳನ್ನೂ, ಕೂ ಸನ್ನೂ, ತವರು ಮನೆಗೆ ಕಳುಹಿಸುವುದು ಲೇಸೆಂದು ತೋರಿತು. ಶ್ಯಾಮ ನೀಗ ಪ್ರಾಯ ಬಂದವ. ಕಾದಾಟದಲ್ಲಿ ತನಗೆ ಜತೆಗಾರನಾಗಬಲ್ಲವನು. ಹಾಗೆಂದು ತಾವಿಬ್ಬರೇ ಸತ್ಯಾಗ್ರಹ ಕೈಕೊಳ್ಳುವುದೇ?

ತಾವು ಮುಂದುವರಿದು, ಜನ ತಮ್ಮ ಹಿಂದೆ ಬಾರದೆ ಹೋದರೆ ಹೇಗಾದೀತು? ಕಾದಾಟದಲ್ಲಿ ವೈರಿಯನ್ನು ಕೆಣಕುವ ಕೆಲಸ ಮುಖ್ಯವಾ ದುದಲ್ಲವೇ; ತನ್ನ ಹಿಂದೆ ಜನಗಳನ್ನು ಕಟ್ಟಿಕೊಂಡು, ಈ ಕೆಲಸಮಾಡ

ಬೇಕೆಂದು ತೋರಿತು. ಆ ದಿನವೇ ಮಂಗಳೂರಿಗೆ ಓಡಿದನು. ಶಹೆರ ಲ್ಲವೇ ಅದು? ದೇಶದ ನಾಲ್ಕು ಕಡೆಯ ಸುದ್ದಿಗಳೂ ಕ್ಷಣಕ್ಷಣಕ್ಕೆ ಬರುತ್ತವೆ. ಮಂಗಳೂರು ಕ್ರಾಂತಿಯ ಸುದ್ದಿಯಿಂದ ತುಂಬಿ ಹೋಗಿತ್ತು. ಎಂದೂ ಕಾಣದ ಆವೇಶ ಕಿರಿಯರಲ್ಲಿ ತುಂಬಿತ್ತು. ಹಲವು ಹಿರಿಯರಿಗೆ ತಮ್ಮ ಮಕ್ಕಳ ಮೇಲೆಯೇ ಕಣ್ಣು. ಎಲ್ಲಿ ಶಾಲೆಗೆ ಶರಣು ಹೊಡೆದು, ತಮ್ಮ ಕಷ್ಟಾರ್ಜಿತ ಹಣವನ್ನು ಹಾಳುಮಾಡುತ್ತಾರೆಯೋ? ಓದನ್ನು ಕೆಡಿಸಿ, ಭವಿಷ್ಯವನ್ನು ಕೆಡಿಸಿಕೊಳ್ಳುತ್ತಾರೆಯೋ—ಎಂದು ಹಲವರ ಹಲುಬು. ಬೀದಿಯಲ್ಲಿ ದೊಣ್ಣೆಗಳನ್ನು ಹಿಡಿದು ಅಲೆದಾಡುವ ಪೋಲೀಸರ ಕೈಗೆ ಸಿಕ್ಕಿ, ತಮ್ಮ ಮಕ್ಕಳುಮರಿಗಳ ತಲೆ ಉಳಿಯುತ್ತದೆಯೋ—ಎಂಬ ಭೀತಿ. ರಾಧಾಕೃಷ್ಣ ಪೇಟೆಗೆ ಹೋದದ್ದೇನೋ ಸರಿಯೇ—ಯಾರ ಮನೆಗೆ ಹೋಗಬೇಕೆಂದು ತೋಚದಾಯಿತು. "ರಾಯರು ಊರಲ್ಲಿ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು! ಇಂಥ ಕೆಲಸಗಳಲ್ಲಿ ಅವರಿಗೆ ಎಷ್ಟು ಶ್ರದ್ಧೆ" ಎಂದೂ ತೋರಿತು. ಈಗ ಆತ ಹೋಗಿ ಯಾರೊಡನೆ ವಿಚಾರ ಮಾಡಬೇಕು? ಡಾ! ಸಂಪತ್ತಲ್ಲೇ? ಮೊದಲಿನಿಂದಲೂ ವಿಶ್ವಾಸಬಾರದ ವ್ಯಕ್ತಿ. ಹೀಗಾಗಿ ಒಂದು ಹೋಟೆಲಿನಲ್ಲಿಯೇ ಬಿಡಾರ ಮಾಡಿಕೊಂಡನು. ಮಂಗಳೂರು ಮಿರರಿನ ಆಫೀಸಿಗೆ ಹೋಗಿ, ಪ್ರಭುದೇವನ ಪರಿಚಯ ಮಾಡಿಕೊಂಡನು. ಪ್ರಭುದೇವನು ಉತ್ಸಾಹದಿಂದ ಕುಣಿದಾಡುತ್ತಿದ್ದ. ಅವನ ಸುತ್ತ ತರುಣರ ಒಂದು ಪಡೆಯೇ ಕಲೆತಿತ್ತು. ಉಪ್ಪಿನ ಸತ್ಯಾಗ್ರಹ, ಕಂದಾಯ ನಿರಾಕರಣೆ, ಕಾಯಿದೆಭಂಗ ಎಲ್ಲವನ್ನೂ ಮಾಡುವಂತೆ ತನ್ನ ಗೆಳೆಯರಿಗೆ ಆತ ಪ್ರೋತ್ಸಾಹಕೊಡುತ್ತಿದ್ದನು. ಇನ್ನು ಒಂದೆರಡು ದಿವಸಗಳಲ್ಲಿ ಜಿಲ್ಲೆಯಲ್ಲಿ ಎಲ್ಲೆಲ್ಲೂ ಉಪ್ಪಿನ ಸತ್ಯಾಗ್ರಹ ತೊಡಗುವುದೆಂದು ಸುದ್ದಿ ಹಬ್ಬಿತು. ಪ್ರಭುದೇವನ ಕಚೇರಿಯಲ್ಲಿ ರಾಧಾಕೃಷ್ಣ ಮೌನ ಶ್ರೋತೃ ಆಗಿದ್ದ. ಪ್ರಭುವಿಗೆ—ಕೇಳುವವರೆಷ್ಟು ಮಂದಿ ಇದ್ದಾರೋ, ಹೇಳುವುದಕ್ಕೆ ಅಷ್ಟು ಹುರುಪು. ಅವನು ಮಾತನಾಡುವುದನ್ನು ನೋಡಿ, "ಆಡುವುದೆಲ್ಲವನ್ನೂ ಮಾಡುವಂತೆ ಬರುತ್ತಿದ್ದರೆ?" ಎಂದು ತೋರಿತು ರಾಧಾಕೃಷ್ಣಗೆ; ಅವನ ಸ್ಫೂರ್ತಿಯೇನೋ ಕೆರಳಿತು.

ಆತ ಅಲ್ಲಿರುವಾಗ ಕಂಡ ಇನ್ನೊಂದು ವಿಷಯವೆಂದರೆ, ಅನುಮಾನಾಸ್ಪದವಾದ ರೀತಿಯಿಂದ ಬಂದು ಹೋಗುತ್ತಿದ್ದ ಕೆಲವು ಜನರನ್ನು,

ಅವರು ಸರಕಾರದ ಗುಪ್ತಚಾರರು ಎಂಬ ಅನುಮಾನ ಹೊಳೆಯಿತು. ಅಂಥವರ ಎದುರಿಗೆ ಮಾತನಾಡಿ, ನಮ್ಮ ಕಾರ್ಯಕ್ರಮವನ್ನೆಲ್ಲ ಗೊತ್ತು ಪಡಿಸಿದರೆ, ಚಳವಳ ಬಹು ದಿನ ಸಾಗಲಾರದು ಎಂದು ಅವನಿಗೆ ತೋರಿತು. ಅಷ್ಟರಲ್ಲಿಯೇ, ಗಾಂಧೀಜಿಯವರ ಪತ್ರಿಕೆಗಳನ್ನು ನಿಲ್ಲಿಸಿದ ವಾರ್ತೆ, ಅವರ ಬಂಧನದ ವಾರ್ತೆಗಳು ಊರಿಗೆ ಬಂದುವು. ಪ್ರಭು ಹೀಗೆ ಬಡಾಯಿ ಕೊಚ್ಚುತ್ತ ಹೋದರೆ ಆಗ ಅವನ ಪತ್ರಿಕೆಗೂ ಇದೇ ಗತಿ, ಅವನಿಗೂ ಇದೇ ಗತಿ—ಎಂದು ತೋರಿತು. ಅಂಥ ವೇಳೆಯಲ್ಲಿ ಮಾರ್ಗದರ್ಶಕರಾಗುವ ನಾಲ್ಕು ಮಂದಿಯೂ ಇಲ್ಲದೆ ಹೋಗುತ್ತಾರೆ. ಈ ಕೆಲಸವನ್ನು ಚಾಣಾಕ್ಷತೆಯಿಂದ ನಡೆಯಿಸಬೇಕು. ಪ್ರಭುದೇವನ ಹಾದಿ ಅವನಿಗಿರಲಿ; ತನ್ನ ಹಾದಿ ಬೇರೆಯೇ ಆಗಬೇಕು—ಎಂದು ನಿರ್ಧರಿಸಿದನು. ಊರಿಗೆ ಮರಳಿ ಬಂದನು. ಅಷ್ಟರಲ್ಲಿ ಮಂಗಳೂರಲ್ಲಿ ಉಪ್ಪಿನ ತಯಾರಿ, ಮೆರವಣಿಗೆ, ಬಂಧನಗಳು, ಮೇಲಿಂದ ಮೇಲೆ ಆಗ ತೊಡಗಿದುವು.

ಆತ ಮರಳಿ ಬಂದುದು ಹಣಕ್ಕಾಗಿ. ತಾನು ಮರೆಯಲ್ಲಿದ್ದು ಆದಷ್ಟು ಗುಪ್ತವಾಗಿ ಚಳವಳವನ್ನು ಸಾಗಿಸಿಕೊಂಡು ಹೋಗಬೇಕೆಂದು ನಿಶ್ಚಯ ಮಾಡಿದ್ದ. ಪತ್ರಿಕೆಗಳು ಚಳವಳದ ವಾರ್ತೆಯನ್ನು ಪ್ರಕಟಿಸುವಂತಿರಲಿಲ್ಲ. ಜನಕ್ಕೆ ಬಹಿರಂಗವಾಗಿ ಮಾರ್ಗದರ್ಶನ ಮಾಡುವಂತಿರಲಿಲ್ಲ. ಅದಕ್ಕಾಗಿ ತಾನು ಗುಪ್ತ ಪ್ರಚಾರ ಮಾಡಬೇಕು. ಒಂದು ಡುಪ್ಲಿಕೇಟರ್ ಯಂತ್ರವನ್ನು ಕೊಂಡು, ಕಾಗದ ಸಂಗ್ರಹಿಸಿ, ಕರಪತ್ರಗಳ ರೂಪದಿಂದ, ಗುಟ್ಟಿನಲ್ಲಿ ಜನಕ್ಕೆ ಸೂಚನೆ ಕೊಡುವ ಕೆಲಸ ಅಗತ್ಯವೆಂದು ನಿರ್ಧರಿಸಿದನು. ಯಾವ ಕೆಲಸ ಮಾಡುವುದಾದರೂ, ಗೆಳೆಯ ಗೆಳತಿಯರನ್ನು ಕೇಳದೆ ಮಾಡುವವನಲ್ಲ. ಸತ್ಯ, ಶ್ಯಾಮ ಇಬ್ಬರೂ ಅದಕ್ಕೆ ಸಮ್ಮತಿಸಿದರು. ಈಗ ಬೇಕಾದುದು ಹಣ. ಅವನಲ್ಲಿದ್ದುದೆಲ್ಲಾ ಮುಗಿದು ಹೋಗಿತ್ತು. ಸತ್ಯ—ಸಂತೋಷದಿಂದ ತನ್ನ ಚಿನ್ನದ ಒಡವೆಗಳನ್ನು ಕಳಚಿ ಕೊಟ್ಟಳು. ಅವನ್ನು ಒತ್ತೆ ಇರಿಸಿ ಹಳೆಯ ಒಂದು ಡುಪ್ಲಿಕೇಟರ್ ಯಂತ್ರವನ್ನೂ, ಕಾಗದವನ್ನೂ ಮನೆಗೆ ಕೊಂಡು ಬಂದನು. ಜಿಲ್ಲೆಯ ಕೆಲವೊಂದು ಪಟ್ಟಣಗಳಿಗೆ ಆಗಂತುಕವಾಗಿ ಹೋಗಿ, ಕೆಲವೊಂದು ಮಿತ್ರರ ಪರಿಚಯ ಮಾಡಿಕೊಂಡು ಬಂದನು. ಅಲ್ಲಿಂದ ಅವನ ಕೆಲಸ ತೊಡಗಿತು. ಆ ಕೆಲಸವೆಲ್ಲ ನಿಶಾಚರನ ಕೆಲಸವಾಗಿತ್ತು.

ತೀರ ಚಿಕ್ಕ ಪ್ರಮಾಣದ ಪತ್ರಿಕೆಯೊಂದನ್ನು ಹೊರಡಿಸಿದನು. ದೈನಂದಿನ ಪತ್ರಿಕೆಯದು. ಮುಷ್ಟಿಯೊಳಗೆ ಹಿಡಿಯುವಷ್ಟು ಚಿಕ್ಕ ಆಯ. ಜನತೆಯನ್ನು ಸತ್ಯಾಗ್ರಹಕ್ಕೆ ಸಿದ್ಧಮಾಡುವುದು ಗುರಿ. 'ವೀರ ವಾಣಿ' ಎಂಬುದು ಹೆಸರು. ರಾತ್ರಿಯೇ ಅದರ ಮುದ್ರಣ. ಮನೆಯ ಅಟ್ಟವೇ ಅದರ ಛಾಪಖಾನೆ. ತಾಳೆ ಬೆಲ್ಲದ, ತಲೆಹೊರೆಗಳಲ್ಲಿ ಅದರ ಸಂಚಾರ. ಪೇಟೆ, ಶಹರುಗಳ ಮುಖ್ಯ ಬೀದಿಗಳಲ್ಲಿ ಅದರ ಲೇಪನ, ಪ್ರಸಾರ.

ಅವನ ಈ ಮುಂದಾಲೋಚನೆ ಮಾತ್ರ ಸಫಲವಾಯಿತು. ಸರಕಾರದ ದಬ್ಬಾಳಿಕೆಯಿಂದ ಮಂಗಳೂರಿನ ಪತ್ರಗಳು ಮೂಕವಾದುವು. ತೀರ ಮೊದಲ ಸತ್ಯಾಗ್ರಹಿಯಾಗಬೇಕೆಂದು ಬಯಸಿದ ಪ್ರಭುದೇವ ತನ್ನ ನಾಲ್ವರು ಗೆಳೆಯರೊಡನೆ, ಸತ್ಯಾಗ್ರಹವನ್ನು ಹೂಡಿ, ಸೆರೆಮನೆಯನ್ನು ಸೇರಿದ್ದಾಯಿತು. ಬಹಿರಂಗದಲ್ಲಿ ಚಳವಳವನ್ನು ಕೆರಳಿಸಲು ಬರುವಂತಿರಲಿಲ್ಲ ಎಂಬುದು ರಾಧಾಕೃಷ್ಣನ ನಂಬಿಕೆಯು ಆ ಊರಿನ ಮಟ್ಟಿಗಾದರೂ ನಿಜವಾಯಿತು. ಈತ ಮರೆಯಲ್ಲಿ ಕುಳಿತು, ಪ್ರತಿ ದಿನವು, ಹತ್ತೆಂಟು ಮಾತುಗಳಲ್ಲಿ, ಸೂತ್ರಗಳಂತೆ ಸರಕಾರವನ್ನು ಇದಿರಿಸುವ ಕ್ರಮವನ್ನು ಹೇಳುತ್ತ ಬಂದನು. ಅವನ ಮೇಲು ಪಂಕ್ತಿಯನ್ನು ಅನುಸರಿಸಿ ಅಲ್ಲಲ್ಲಿ ಇಂತಹ ಗುಪ್ತ ಪತ್ರಿಕೆಗಳು ಬೆಳೆದುವು.

ಈ ಬಾರಿ ರಾಧಾಕೃಷ್ಣನ ಊಹೆಯನ್ನು ಮೀರುವ ಉತ್ಸಾಹ ದೇಶದಲ್ಲೆಲ್ಲ ಕಾಣಿಸಿತು. ಉಪ್ಪಿನ ಸತ್ಯಾಗ್ರಹ ಕಡಲು ಕರಾವಳಿಯ ಎಲ್ಲೆಡೆಗಳಲ್ಲಿಯೂ ಹಬ್ಬಿತು. ತರುಣರು ನೂರರ ಸಂಖ್ಯೆಯಿಂದ ಮಂಗಳೂರಲ್ಲಿ ಸತ್ಯಾಗ್ರಹ ಮಾಡಿ ಸೆರೆಮನೆಗೆ ಹೋದರು. ಜೈಲುಗಳು ತುಂಬಿದುವು. ಇನ್ನು ಅಂಥವರನ್ನು ಹಿಡಿದು ಉಪಯೋಗವಿಲ್ಲವೆಂದು ಸರಕಾರ ಪ್ರತ್ಯಕ್ಷ ಗದೆಯನ್ನೇ ಹಿಡಿಯಿತು. ಉಪ್ಪು ಮಾಡಿದರೆ ಮಾತನಾಡದವರಿಲ್ಲದಾಯಿತು. ಆಗ ಸಭೆ ಮೆರವಣಿಗೆಗಳ ಮೇಲಿನ ಆತಂಕ ಹೊರಟಿತು. ಮಂಗಳೂರು ಸತ್ಯಾಗ್ರಹದ ಕೇಂದ್ರವಾಗುತ್ತಿರುವುದನ್ನು ಕಂಡು, ಅಲ್ಲಿಗೆ ಜಿಲ್ಲೆಯ ಸತ್ಯಾಗ್ರಹಿಗಳು ಬರುವುದನ್ನು ತಡೆಗಟ್ಟಿದರು. ಅವರನ್ನು ತರುವ ಬಸ್ಸಿನವರಿಗೂ, ಅವರಿಗೆ ಅನ್ನ ಹಾಕುವ ಹೊಟೇಲಿನವರಿಗೂ ಬೆದರಿಕೆ ಹುಟ್ಟಿಸಿದರು. ಆದರೂ ತರುಣರ ಉತ್ಸಾಹ ತಗ್ಗಲಿಲ್ಲ. ಜೀವದ ಹಿಂದು ಮುಂದು ನೋಡದೆ ಅವರು ಮೆರವಣಿಗೆ ಹೊರಡಿಸಿದರು. ಈ

ತೆರನ ಪ್ರತ್ಯಕ್ಷ ಪ್ರತಿಭಟಿಯು ಸರಕಾರದ ಪ್ರತಿಷ್ಠೆಗೆ ಕುಂದು ಎಂದು ತಿಳಿದು, ಖಾದಿ ಧರಿಸಿದವರ ಮೇಲೆಲ್ಲ ಪೋಲಿಸರು ದೊಣ್ಣೆ ಬೀಸಿದರು. ಈ ತೆರನ ಲಾಟೀ ಸಾಮ್ರಾಜ್ಯ ನಡೆಯಿಸುವುದರಲ್ಲಿಯೇ ಮಂಗಳೂರು, ಮಲಬಾರ್ ಪೋಲೀಸ್ ದಳಗಳು ತಮ್ಮ ಹಿಗ್ಗಿ ಹಿರಿತನಗಳನ್ನು ತಿಳಿದರು. ಮಂಗಳೂರಿನ ಬೀದಿಗಳು ನಿತ್ಯವೂ ನೆತ್ತರಿನ ಬೀದಿಗಳಾಗತೊಡಗಿದವು.

ಒಂದು ದಿನ ಶ್ಯಾಮು, ಮಂಗಳೂರಿಗೆ ಬಂದಿದ್ದ. ಅವನು ಕುಳಿತಿದ್ದ ಅಂಗಡಿಯೊಂದರ ಮುಂದೆಯೇ, ಸ್ವಯಂ ಸೇವಕ ದಳದ ಮೆರವಣಿಗೆ ಹೊರಟಿತು. ಈತ-ಏನೆಂದು ನೋಡುವುದರೊಳಗಾಗಿ, ಪೋಲೀಸರ ಲಾಟೀ ಮಳೆಯು ಜನರ ಮೇಲೆ ಸುರಿಯಿತು. ಸತ್ಯಾಗ್ರಹಿಗಳು, ದಾರಿಗರು, ಪ್ರೇಕ್ಷಕರು, ತಮ್ಮ ಅಂಗಡಿ ಮನೆಗಳಲ್ಲೇ ಕುಳಿತವರು,-ಪೋಲೀಸು ಉಡಿಗೆಯಲ್ಲಿಲ್ಲದ ಯಾರಾದರೂ ಸರಿಯೇ, ಅವರ ಮೇಲೆ ಲಾಟೀ ಪ್ರಹಾರ ಮಾಡಿದರು. ತಲೆಯೊಡೆದು ಬಿದ್ದವರ ಮೇಲೆಯೂ ಶೌರ್ಯ ತೋರಿಸಿದರು; ಬೂಟಿನ ಒದೆತದಿಂದಲೂ ಪರಾಕ್ರಮ ಬೀರಿದರು. ಗುಲಾಮನಾದವನಿಗೆ ಸ್ವಂತವಾದ ಒಂದು ಹೃದಯವೇ ಇಲ್ಲ—ಎಂಬುದನ್ನು ಚೆನ್ನಾಗಿ ಪ್ರದರ್ಶಿಸಿದರು. ಇದಕ್ಕೆ ಸಾಮಾನ್ಯ ಜನ ಬೆದರದೆ ಉಂಟೇ? ಅಪರಾಧಿಗಳೂ, ನಿರಪರಾಧಿಗಳೂ, ಒಂದೇ ಎಂದು ತಿಳಿದು ವರ್ತಿಸುವಾಗ! ಶ್ಯಾಮನ ಪಾಲಿನ ಪಂಚಾಮೃತವೂ ಅಲ್ಲಿಯೇ ದೊರೆಯಿತು. ಅವನ ಅಂಗಡಿಕಾರನಿಗೂ ಏಟು ಬಿತ್ತು. ಅವನಿಗೂ, ಬಿತ್ತು. ತಲೆಗೆ ಪೆಟ್ಟಾಗಿ, ಅಂಗಡಿಯ ಮುಂದೆಯೇ ಶ್ಯಾಮು ಉರುಳಿ ಬಿದ್ದನು.

ಕತ್ತಲಾಯಿತು. ಬಿದ್ದ ದ್ರೋಹಿಗಳನ್ನು ಉಪಚರಿಸುವ ಕೆಲಸ ಪೋಲೀಸರದ್ದಲ್ಲ. ಆದರೂ, ಅವರ ಹೃದಯದಲ್ಲಿ ಕರುಣೆ ಬತ್ತಿಹೋಗಿದ್ದಂತೆ, ಊರಿನ ಜನದಿಂದಲೂ ಅದು ಮಾಯವಾಗಿರಲಿಲ್ಲ. ಯಾರೋ ಶ್ಯಾಮುನನ್ನು ಎತ್ತಿದರು. ಮೂರ್ಛಾವಸ್ಥೆಯಲ್ಲಿದ್ದ ಅವನನ್ನು ಎಲ್ಲಿಗೋ ಒಯ್ದು ಉಪಚರಿಸಿದರು. ಆತ ಎಚ್ಚರ ತಿಳಿಯುವಾಗ, ಕತ್ತಲಾಗಿತ್ತು; ಮಧ್ಯರಾತ್ರಿಯೇ ಸರಿದಿತ್ತು. ಅವನಂತೆಯೆ ಗಾಯಗೊಂಡು ನರಳುತ್ತಿರುವವರು ಸುತ್ತ ಕಾಣಿಸಿದರು. ಆ ಅರೆ ಸ್ಮರಣೆಯಲ್ಲಿ ಅವನಿಗೆ ಅದೆಲ್ಲ ಬರಿಯ ಕನಸಾಗಿ ಕಾಣಿಸಿತು. .ಬೆಳಗಾಗುವಾಗ ಆತ ಪೂರ್ಣ ಪ್ರಜ್ಞನು. ಅವನಂತೆ ಆರೇಳು ಮಂದಿ, ಕೈಕಾಲು, ತಲೆಗಳಿಗೆ ಅರಿವೆ ಸುತ್ತಿಕೊಂಡು

ಮಲಗಿದ್ದಾರೆ. 'ತಾನು ಎಲ್ಲಿದ್ದೇನೆ, ಯಾರ ಮನೆ ಅದು' ಎಂದು ವಿಚಾರಿಸುವ ಮನಸ್ಸಾಯಿತು. ಅವನಂತೆಯೆ ಇರುವ ಗಾಯಗೊಂಡವರನ್ನು ಕೇಳಬೇಕಷ್ಟೆ. ಸ್ವಯಂ ಸೇವಕರು ಯಾರೂ ಇದ್ದಿರಲಿಲ್ಲ. ಉಪಚರಿಸುವವರೂ ಇದ್ದಿರಲಿಲ್ಲ. ಬೆಳಕು ಹರಿಯುತ್ತಲೆ ಈತ ಎದ್ದು ತಡವರಿಸುತ್ತ ಹೊರಬಾಗಿಲಿಗೆ ಬಂದನು. ಅವನಿಗೆ ಮೊದಲಾದ ದರ್ಶನ—ಸ್ವಯಂ ಸೇವಕರದ್ದಲ್ಲ; ಬದಲು ಪೋಲೀಸರದು. ಅವರೆಲ್ಲರನ್ನು ಬಲವಂತದಿಂದ ಎಳೆದು, ಒಂದು ಮೋಟಾರಿನಲ್ಲಿ ತುಂಬಿಸಿ ಪೋಲೀಸರು ಸಾಗಿಸಿಬಿಟ್ಟರು.

ಸಂಜೆ ಮಂಗಳೂರಿಗೆ ಹೋದ ಶ್ಯಾಮು, ರಾತ್ರಿಯೇ ಬರಬೇಕಿದ್ದವನು, ಬಾರದೆ ಹೋದುದನ್ನು ಕಂಡು, ರಾಧಾಕೃಷ್ಣ ವಿಚಾರಕ್ಕೆ ಗುರಿಯಾದನು. ಮರುದಿನ, ಬೇರೆ ಬಗೆ ಕಾಣದೆ ತಾನೂ ಮಂಗಳೂರಿಗೆ ಹೋದನು. ಅಲ್ಲಿ, ಹಿಂದಿನ ದಿನದ ನರಬೇಟೆಯ ವರ್ತಮಾನವು ಅವನ ಕಿವಿಗೆ ಮುಟ್ಟಿತು. 'ಶ್ಯಾಮು ಹೋದುದು ಸ್ವಂತ ಕೆಲಸಕ್ಕೆ. ಮೆರವಣಿಗೆಯಲ್ಲಿ ಏಕೆ ಸೇರಿಕೊಳ್ಳುತ್ತಾನೆ?' ಎಂದು ಆತನಿಗೆ ತೋರಿತು. ಎಷ್ಟು ವಿಚಾರಿಸಿದರೂ ಅವನ ವಾರ್ತೆಯು ದೊರೆಯಲಿಲ್ಲ; ನಿರಾಶನಾದ. "ಏನೋ ಜನಸಂದಣಿಯಲ್ಲಿ ಆತ ಸಿಕ್ಕಿಕೊಂಡಿರಬೇಕು. ಅವನನ್ನು ಸೆರೆಮನೆಗೆ ಒಯ್ದಿರಬೇಕು. ಅವರೆಲ್ಲರ ಕೇಸಿನ ತನಿಖೆ ನಡೆದು ಪತ್ರಿಕೆಗಳಲ್ಲಿ ಅವರ ಹೆಸರು ಪ್ರಕಟವಾಗಬಹುದು. ಇಲ್ಲದೆ ಹೋದರೆ—ತಾನು ಕೋರ್ಟು ಕಛೇರಿಗಳನ್ನು ಸುತ್ತಾಡಿ, ಅಲ್ಲಿ ಯಾರಿದ್ದಾರೆ, ಯಾರು ಇಲ್ಲ—ಎಂದು ತಿಳಿದುಕೊಂಡು ಬರಬೇಕು" ಎಂದು ತರ್ಕ ಮಾಡಿದನು. ಅವನ ಖಾದಿ ಉಡುಗೆಯನ್ನು ಕಂಡು ಅವನನ್ನೂ ನಿಷ್ಕಾರಣವಾಗಿ ಸೆರೆಗೆ ಒಯ್ಯಬಹುದಲ್ಲಾ ಎಂದು ಅನುಮಾನವಾಯಿತು. ಆ ಯೋಚನೆಯನ್ನು ಬಿಟ್ಟನು.

ರಾಧಾಕೃಷ್ಣ ಇದಕ್ಕೂ ಹೆಚ್ಚಿನ ಹಾನಿಗೆ ತಲೆಯೊಡ್ಡುವವನು. ಆದರೆ ಜನತೆಯ ಮನಸ್ಸನ್ನು ಆದಷ್ಟು ಕ್ರಾಂತಿಮಯವಾಗಿ ಮಾಡಿ, ತಾನು ಸೆರೆಯಾದರೆ ಒಂದು ಫಲ-ಎಂದು ಅವನ ಮನಸ್ಸು ಹೇಳುತ್ತಿದೆ. ಅಲ್ಲಿಯ ತನಕ ತಾನು ಹಿಂದುಳಿಯಬೇಕೆಂಬ ಬಯಕೆ. ಆದರೆ ಬಹು ದಿನ ಕಾದಿರುವುದು ಸಾಧ್ಯವಿಲ್ಲ. ಅಷ್ಟರಲ್ಲಿ ಶ್ಯಾಮನು ಗಾಯಗೊಂಡುದೂ, ಸೆರೆಮನೆಗೆ ಹೋದುದೂ, ಜನರಿಂದ ತಿಳಿದು ಬಂದಿತು. ಆಗ ರಾಧಾಕೃ

ಷ್ಣನಿಗೆ ಪ್ರಜ್ಞೆಯಾಯಿತು. ಶ್ಯಾಮನ ಕಿಸೆಯಲ್ಲಿ ಇವನ ಗುಪ್ತ ಕರಪತ್ರ ವಿತ್ತು. ಅದು ಪೋಲೀಸರಿಗೆ ಸಿಕ್ಕಿರಬೇಕು. 'ಅದೇನು? ಎಲ್ಲಿಯದು?' ಎಂಬುದನ್ನು, ಅವರು ಅವನಿಂದ ಬಲವಂತದಿಂದಾದರೂ ಹೊರಡಿಸು ವವರು. ಬಹು ಬೇಗನೇ ಪೋಲೀಸರ ಉರುಳು ತನ್ನ ಕಡೆಗೆ ಬರುವುದಿದೆ ಎಂಬ ಊಹೆಯಾಯಿತು. ತನ್ನ ಯಾವತ್ತೂ ಮುದ್ರಣ ಸಲಕರಣೆಗಳನ್ನು ಬೇರೆ ಕಡೆಗೆ ಒಯ್ಯಬೇಕು. ತಾನು, ಕಿರಿಪದವನ್ನು ಬಿಟ್ಟುಬಿಡಬೇಕೆಂದೂ ತೋರಿತು. ಊರನ್ನು ಬಿಡುವುದೇ? ಯಾರೆಲ್ಲ? ಸತ್ಯ, ತಾನು, ಮಗು. ಹೋಗುವುದೆಲ್ಲಿಗೆ? ಮಿತ್ರರಲ್ಲಿಗೇನು? ನಾಳೆ ಅವರಿಗೂ ಈ ಕಾರಣದಿಂದ ಹಿಂಸೆಬಂದೀತು. ಅದು ಬೇಡವೆಂದುಕೊಂಡನು. ಮನೆ ಬಿಡುವ ಕಾರಣ ವಿಲ್ಲ; ತಾನೊಬ್ಬನೇ ಹೋದರಾಯಿತು. ಆದರೂ ಎಚ್ಚರಬೇಕೆಂದು— ಮನೆಯಲ್ಲಿರುವ ಕಾಗದ ಪತ್ರಗಳನ್ನೆಲ್ಲ ಸುಟ್ಟು ಹಾಕಿದನು. ಮುದ್ರಣ ಯಂತ್ರಕ್ಕೆ, ಬಟ್ಟೆಸುತ್ತಿ, ದೂರದ ಹೊಂಡವೊಂದರಲ್ಲಿ ಹೂತಿಟ್ಟನು. ಅವನ ಎಣಿಕೆ ಸಮನಾಯಿತು. ಮರುದಿನವೇ ಸುಳಿವು ಹಿಡಿದು, ಅವನ ಶಾಲೆ ಮನೆಗಳೆಲ್ಲವೂ ಜಡತಿಯಾದುವು. ಯಾವ ಚಹರೆಯೂ ಕಾಣಸಿಗದೆ, ಬಂದ ಪೋಲೀಸರು ನಿರಾಶೆಗೊಂಡು, ಮಂಗಳೂರನ್ನು ಸೇರಿದರು.

ಹೂತಿಟ್ಟ ಯಂತ್ರವನ್ನು ಮೇಲಕ್ಕೆತ್ತಿ-ಉಜ್ಜಿ ತೆಗೆದು, ಇನ್ನೊಮ್ಮೆ ಕೆಲಸಕ್ಕೆ ಸಿದ್ಧಮಾಡಬೇಕು. ಅದನ್ನು ಇನ್ನೆಲ್ಲಿಗಾದರೂ ಸಾಗಿಸಬೇಕು. ಬೇರೆಯೆಲ್ಲಾದರೂ ಮರೆಯಲ್ಲಿದ್ದು, ತನ್ನ ಕೆಲಸವನ್ನು ಮುಂದುವರಿಸ ಬೇಕು. ಸಂಚಾರದಿಂದ, ತನ್ನ ಪತ್ರಿಕೆಗೆ ಸುದ್ದಿಯನ್ನೂ ದೊರಕಿಸಬೇಕು. ಇಂಥ ಕೆಲಸಗಳಲ್ಲಿ ಸಹಾಯನಾಗುತ್ತಿದ್ದ ಶ್ಯಾಮ ದೂರನಾಗಿದ್ದಾನೆ. ಆ ಕೆಲಸವೆಲ್ಲ, ಬೇರೆಲ್ಲಿಯಾದರೂ ನಡೆಯಬೇಕಾದುದರಿಂದ, ಆತ ಮನೆ ಯನ್ನು ಬಿಡಬೇಕಾಯಿತು. "ಸತ್ಯ, ನಾನು ಮೂಡುಬಿದ್ರೆಯನ್ನೋ, ಬಂಟ್ವಾಳವನ್ನೋ ಸೇರುತ್ತೇನೆ. ಅಲ್ಲಿಂದ ಈ ಕೆಲಸಮಾಡುತ್ತೇನೆ. ಹಾಗೆ ಸ್ವಲ್ಪವಾದರೂ ಸ್ಪರ್ಧೆಯನ್ನು ಕಟ್ಟಿಕೊಂಡು ಜೈಲಿಗೆ ಹೋಗುವುದರಲ್ಲಿ ನನಗೆ ಬೇಸರವಿಲ್ಲ. ಹೋಗುವ ಪಾಡಂತೂ ಇದ್ದೇ ಇದೆ; ತಪ್ಪಿದ್ದಲ್ಲ. ಆದರೆ ನೀನು ಒಬ್ಬಳೇ ಒಂಟಿಯಾಗಿದ್ದು, ಮನೆಯನ್ನು ನೋಡಿಕೊಳ್ಳು ತ್ತೀಯಾ ಇಲ್ಲವೇ ನಿನ್ನನ್ನು ತವರು ಮನೆಗೋ, ಕುಂದಾಪುರಕ್ಕೋ, ಕರೆದುಕೊಂಡು ಹೋಗಿ ಬಿಟ್ಟು ಬರಲೇ" ಎಂದು ಕೇಳಿದನು.

"ಯಾಕೆ ನಿಮ್ಮ ಜತೆಯಲ್ಲಿ ನಾನೂ ಬರಬಾರದು?"

"ಅದನ್ನೂ ಬೇಡವೆನ್ನುತ್ತಿದ್ದಿಲ್ಲ. ಮುಂಬಯಿಯಲ್ಲಿ ಸಾವಿರಾರು ಜನ ಹೆಂಗಸರು, ಸತ್ಯಾಗ್ರಹಿಗಳಾಗಿದ್ದಾರೆ; ಸೆರೆಮನೆಗೆ ಹೋಗಿದ್ದಾರೆ. ಆದರೆ ಮನೆಯಲ್ಲಿ ಮಗು, ಚಂದ್ರ, ಇದ್ದಾನೆಂದು ಮರೆಯಬಾರದಲ್ಲ. ನಮ್ಮ ಪಾಲಿಗೆ ನಾವು ಏನೂ ಮಾಡಬಹುದು; ಮಗುವಿನ ಹೊಣೆಯನ್ನು ಮರೆಯಬಾರದಷ್ಟೆ."

ಅಂತೂ ಅವಳನ್ನು ಸಮಾಧಾನ ಪಡಿಸಿ, ಕೆಲವು ಕಾಲವಾದರೂ ಒಂಟಿ ಜೀವನಕ್ಕೆ ಸಿದ್ಧಳಾಗಿರಲು ಬೋಧಿಸಿದನು. ಶ್ಯಾಮನಿಗೆ ಆರು ತಿಂಗಳ ಸೆರೆಮನೆ ಪ್ರಾಪ್ತಿಯಾದುದರಿಂದ, ಅವನು ಬರುವಾಗ ಅವನಿಗೆ ಮನೆ ಇಲ್ಲದಂತಾಗಬಾರದು; ತಾನೂ ಮನೆಗೆ ಆಗಾಗ ಬಂದು ಹೋಗುತ್ತೇನೆ—ಎಂದು ನಿಶ್ಚಯಿಸಿದನು. ಯಂತ್ರ ಸಲಕರಣೆಗಳನ್ನು ಬಂಟ್ವಾಳಕ್ಕೆ ಸಾಗಿಸಿದನು. ಅಲ್ಲಿ ಒಬ್ಬ ಮಿತ್ರರ ಸಹಾಯದಿಂದ ಕೆಲವು ಕಾಲ ಪತ್ರಿಕೆಯನ್ನು ಹೊರಡಿಸುವುದು ಸಾಧ್ಯವಾಯಿತು. ಒಂದು ದಿನ ಆತ ಊರಿಗೆ ಬಂದಾಗ, ಆ ಮಿತ್ರ ಯಂತ್ರದೊಡನೆ ಪೋಲೀಸರ ಕೈವಶವಾದನು. 'ಅಯ್ಯೋ' ಎಂದು ಆತ ಬೆರಳು ಕಚ್ಚುವಂತಾಯಿತು. ಯಂತ್ರವಿಲ್ಲದೆ ಅವನ ಕೆಲಸ ಮುಂದೆ ಸಾಗದು. ಹಾಗೆಂದು ನಿರಾಶೆಗೊಂಡ ವೇಳೆಯಲ್ಲಿ, ಮೆಲ್ಲಗೆ ಒಂದರ ಮೇಲೊಂದು ನಿರಾಶೆಯ ಸುದ್ದಿಗಳೂ ಬಂದು ಸೇರಿದುವು. ಮಂಗಳೂರಲ್ಲಿ ಒಮ್ಮೆಗೆ ಬೃಹದಾಕಾರ ತಾಳಿದ ಚಳವಳವು ಜನರ ಉತ್ಸಾಹವು, ಪೋಲೀಸರ ಹಿಂಸೆಯಿಂದ ಸ್ತಬ್ಧವಾಯಿತೆಂದು. ಸತ್ಯಾಗ್ರಹಿಗಳನ್ನು ಕಂಡಲ್ಲಿ ದಂಡಿಸುವ ಇಲ್ಲವೆ ಸೆರೆಮನೆಗೊಯ್ಯುವ ರೀತಿಯನ್ನು ಪೋಲೀಸರೂ ಬದಲಿಸಿದರು. ಮೋಟರುಗಳಲ್ಲಿ ಅವರನ್ನು ಸಾಗಿಸಕೂಡದೆಂದು ಆಜ್ಞೆ ಹೊರಡಿಸಿದರು. ಎಷ್ಟೋ ಜನ ಮಂಗಳೂರಿಗೆ ನಡೆದೇ ಬಂದರು. ಅವರನ್ನು ಬಂಧಿಸ ಹೋಗದಿದ್ದುದರಿಂದ, ಅವರೂ ನಿರಾಶೆಗೊಂಡು ಮರಳಿದರು. ಕಡು ಹಿಂಸೆ, ಕಡು ತಾತ್ಸಾರಗಳ, ಹೊಸ ನೀತಿಯಿಂದ ಮಂಗಳೂರಿನ ಪ್ರಕ್ಷುಬ್ಧ ವಾತಾವರಣವು ನಿರುತ್ಸಾಹದಲ್ಲಿ ಸಮಾಪ್ತಿಯಾಯಿತು. "ಚಳವಳವನ್ನು ನಾಲ್ಕು ಮೂಲೆಗಳಲ್ಲಿಯೂ, ವಿಸ್ತರಿಸಿ, ಜೀವ ಹಿಡಿಯುವಂತೆ ಮಾಡುವುದರ ಬದಲು, ಮುಖ್ಯ ನಗರವಾದ ಮಂಗಳೂರಿನಲ್ಲಿ ಕೇಂದ್ರೀಕರಿಸಿ ವೈರಿಯ, ಪೆಟ್ಟಿಗೆ ಸೋಲುವಂತೆ

ಮಾಡಿದರು. ಇನ್ನು ನನ್ನ ಜಿಲ್ಲೆಯೇ ಪ್ರಯೋಜನವಿಲ್ಲ ಎಂದೆನಿಸಿತು" ರಾಧಾಕೃಷ್ಣನಿಗೆ.

ಆದರೆ ಹೊರಗಿನ ಸುದ್ದಿಗಳು ಅಷ್ಟೊಂದು ನಿರಾಶಾಜನಕವಾಗಿರಲಿಲ್ಲ. ನೆರೆಯ ಜಿಲ್ಲೆಯಾದ ಉತ್ತರಕನ್ನಡದಲ್ಲಿ ಚಳವಳ ಹಳ್ಳಿ ಹಳ್ಳಿಗೂ ಪಸರಿಸಿ ಅಲ್ಲಿ ಅದು ವಿವಿಧ ಬಗೆಯ ಕಾಯಿದೆಗಳ—ಭಂಗದ ಸ್ವರೂಪವನ್ನು ತಾಳಿದೆ. ಕಾಡಿನ ಸತ್ಯಾಗ್ರಹ, ಕರನಿರಾಕರಣೆ ಮೊದಲಾದ ಸ್ವರೂಪಗಳು ಅದಕ್ಕೆ ಬಂದು—ಚಳವಳವು ಅಲ್ಲಿ ಯಶಸ್ವಿಯಾಗಿ ನಡೆಯುತ್ತಿದೆ-ಎಂಬ ವರ್ತಮಾನ ಅವನಿಗೆ ದೊರೆಯಿತು. ಆತ ಒಂದು ದಿನ ಸತ್ಯಳೊಡನೆ "ನನಗೆ ಊರೇನು; ಕಾಡೇನು? ನಾನು ಉತ್ತರಕನ್ನಡಕ್ಕೆ ಹೋಗುತ್ತೇನೆ. ಅಲ್ಲಿ ನನ್ನ ಭಾಗ್ಯವನ್ನು ಅರಸುತ್ತೇನೆ. ನಾನು ಬರುವ ತನಕ ನೀನು ಇಲ್ಲಿಯೇ ಅಜ್ಞಾತವಾಸ ಮಾಡುತ್ತೀಯಾ? ಇಲ್ಲವಾದರೆ ತವರುಮನೆಗೆ ಹೋಗುತ್ತೀಯಾ" ಎಂದು ಕೇಳಿದನು.

"ಯಾಕೆ?"

"ನನಗೆ ಈ ಊರಲ್ಲಿ ನಿರಾಶೆಯಾಗಿದೆ ಈ ಬಾರಿಯದು ಕೊನೆಯ ಕದನವಾಗಬೇಕು. ಎಷ್ಟು ವರ್ಷಗಳಿಂದ, ಸ್ವಾತಂತ್ರ್ಯ, ಸ್ವಾತಂತ್ರ್ಯವೆಂದು ಕೂಗಿಕೊಳ್ಳುತ್ತಿದ್ದೇವೆ. ಆದರೆ ನಮ್ಮೆಲ್ಲರ ಉತ್ಸಾಹ ನೊರೆಗುಳ್ಳೆಯಂತಿದೆ. ನಾನು ಈ ತನಕ ದಣಿದು ಕುಳಿತ ತಪ್ಪಿಗಾದರೂ, ಇನ್ನು ಮುಂದೆ ಕೈ ಕಟ್ಟಿಕೊಂಡು ಕುಳಿತಿರಬಾರದು. ನನ್ನ ಆಸೆ, ಉತ್ಸಾಹ ಕರಗಿ ಹೋಗಿವೆ. ಎಲ್ಲಿ ನನ್ನ ಉಪಯೋಗವಿದೆಯೋ, ಅಲ್ಲಿಗೆ ಹೋಗುತ್ತೇನೆ. ಈಗಲೇ ಎಲ್ಲಿಗೆಂದು ಹೇಳಲಾರೆ. ಯಾವ ಊರು ನನ್ನನ್ನು ಬರಮಾಡಿಕೊಳ್ಳುವುದೋ ಅಲ್ಲಿಗೆ."

"ಆಗಲಿ, ನನಗೆ ಅದರಿಂದ ವ್ಯಥೆಯಿಲ್ಲ. ಸಂತೋಷವೇ."

"ನಾನು ತಿರುಗಿ ಬರುವುದೆಂದು, ನಿನ್ನನ್ನು ಕಾಣುವುದೆಂದು, ಎಂದು ಹೇಳಲಾರೆ. ಅಷ್ಟರೊಳಗೆ ನಿನಗೆ ಬೇಸರ ಬರಬಾರದಲ್ಲ, ಅದರಿಂದ— ನೀನು ತವರಿಗಾದರೂ ಹೋಗು. ಇಲ್ಲಿ ಕಲಲ ಇದ್ದಾನೆ. ಈ ಮನೆಯನ್ನು ತಿಳಿದಂತೆ ನೋಡಿಕೊಳ್ಳುತ್ತಾನೆ."

"ಸರಿ, ನಾನೂ ಇಲ್ಲಿಂದ ಹೊರಟರೆ, ನೀವೂ ಹೊರಟರೆ, ಜೈಲಿಂದ ಹಿಂದೆ ಬರುವ ಶ್ಯಾಮು ಎಲ್ಲಿಗೆ ಹೋಗಬೇಕು?"

"ಅದು ನಿಜ. ಆದರೆ ಅವನು ಬರಲು ಇನ್ನೂ ನಾಲ್ಕೈದು ತಿಂಗಳು ಬೇಕು. ಅಲ್ಲಿಯ ತನಕ ಹೇಗೆ ಒಂಟಿಯಾಗಿರುತ್ತೀ?"

"ನೀವು ನನ್ನ ಯೋಚನೆಯನ್ನು ಬಿಟ್ಟುಹೋಗಿ. ಅಷ್ಟು ಬೇಸರವಾದರೆ, ಆ ಮೇಲೆ ಯೋಚಿಸುತ್ತೇನೆ. ಆಗಾಗ ಕಾಗದವನ್ನು ಮಾತ್ರ ಬರೆಯುತ್ತಿರಿ."

ಯಾಕೋ ಆ ರಾತ್ರಿ ರಾಧಾಕೃಷ್ಣನ ಮೈಯು ಜ್ವರದಿಂದ ಕುದಿಯುತ್ತಿತ್ತು. ಅವನ ಮೈ ಮನಗಳೆಲ್ಲವೂ ನಡುಗುತ್ತಿದ್ದುವು. ತುಂಬ ಅಶಾಂತಿ, ಆವೇಶಗಳಿಂದ ಮನಸ್ಸು ಅಸ್ಥಿರವಾಗಿತ್ತು. ಮುಂದಿನ ಕಲಹದ ರೂಪವನ್ನು ತಾನೇ ಚಿತ್ರಿಸಿಕೊಳ್ಳುತ್ತಿದ್ದಾನೆ—ತಾನೊಮ್ಮೆ ಹಿಂದೆ ಬರಲು ಅಸಾಧ್ಯವಾಗಿ ಹೋದರೆ... ಎಂದೂ ತೋರುತ್ತದೆ. ಮನೆಯ ವಿಚಾರಗಳೂ ಮನಸ್ಸಿನಲ್ಲಿ ಮೂಡತೊಡಗಿದುವು. ಬಳಿಯಲ್ಲಿ ಮಲಗಿದ ಕೂಸಿನ ಮೇಲೆ ಕೈ ಇಟಿಸಿ, ಸವರುತ್ತ ಯೋಚಿಸುತ್ತಿದ್ದಾನೆ, ಮನೆಯಲ್ಲಿ ನಗದು ಹಣ ಉಳಿದಿಲ್ಲ ಎಂದು ನೆನಪಾಯಿತು. ಅಕ್ಕಿ, ತೆಂಗಿನ ಕಾಯಿಗಳಷ್ಟಿವೆ. ಆದರೆ ಒಮ್ಮೆ ಆಪತ್ತಿಗೆ ಹತ್ತು ರೂಪಾಯಿ ಬೇಕೆಂದರೆ ಇದ್ದಿರಲಿಲ್ಲ. ತಮ್ಮನಿಗೆ ಪತ್ರ ಬರೆದು, ತಿಂಗಳಿಗೆ ಹತ್ತು ರೂಪಾಯಿಗಳಂತೆ ಮನೆಗೆ ಒದಗಿಸುವ ಯೋಚನೆ ಮಾಡಿ, ನಿದ್ದೆ ಹೋದನು. ಬರಿಯ ತಾಸು ಎರಡುತಾಸಿನ ನಿದ್ದೆ ಅದು. ಬೆಳಗಿನ ಜಾವಕ್ಕೆ ಒಂದು ಸಣ್ಣ ಚೀಲವನ್ನು ಹಿಡಿದುಕೊಂಡು ಅಲ್ಲಿಂದ ಪಯಣ ಹೊರಟನು. ಅವನ ಹೆಸರು, ಪೋಲಿಸರ ಪಟ್ಟಿಯಲ್ಲಿ ಬಿದ್ದಿರಬೇಕು ಎಂಬ ಅನುಮಾನದಿಂದ, ಖಾದಿಯನ್ನು ಬಿಟ್ಟು ಬೇರೆ ಬಟ್ಟೆಯನ್ನು ತೊಟ್ಟು, ಹಳ್ಳಿಯ ಹಾದಿಯನ್ನು ಹಿಡಿದ. ಹೋಗುವಾಗ ಸತ್ಯಳನ್ನು ಎಬ್ಬಿಸಿ, ಮೈಮೇಲೆ ಕೈಯಿರಿಸಿ, ನೋವಿನ ಮನಸ್ಸಿನಿಂದ ಬೀಳ್ಕೊಡುವಂತಾಯಿತು. ಆಕೆಯು ಬೆಳಗಾಗುವ ತನಕ ಮಗುವನ್ನು ನೋಡುತ್ತ, ಮರೆಯಾದ ತನ್ನ ಸೂರ್ಯನನ್ನು ನೆನೆಯುತ್ತ, ಬೆಳಗಾದೊಡನೆಯೇ ದಿನದ ಕೆಲಸವನ್ನು ತೊಡಗಿದಳು.

ಅವಳಿಗೆ ಈಗ ಉತ್ಸಾಹ, ನಗುಗಳೇ. ಪತಿಯ ವಿಹರಕ್ಕಾಗಿ ಬೇಸರವಿಲ್ಲ. ಎಷ್ಟು ದಿನಗಳಿಂದ ಹತಾಶನಾಗಿ, ವ್ಯರ್ಥವಾಗಿ ಬದುಕನ್ನು ಕಳೆಯುತ್ತಿದ್ದೇನಲ್ಲಾ, ಎಂದು ಚಿಂತಿಸುತ್ತಿದ್ದ ಪತಿಗೆ, ಸಮನಾದ ಉದ್ಯೋಗವಾದರೂ ದೊರೆಯಿತಲ್ಲ ಎಂದು ಹರ್ಷವಾಯಿತು. ತಾನೂ ಅವನ

ಜತೆ ಸೇರುತ್ತಿದ್ದರೆ—ಎಂಬ ಬಯಕೆಯಾಯಿತು. ಹಾಗೆ ಮಾಡಲು, ತಮ್ಮ ಕೂಸನ್ನು ಇನ್ನಾರಲ್ಲಾದರೂ ಬಿಟ್ಟು ಹೋಗಬೇಕು.' ಅದು ಮನ್ಸಿಗೆ ಒಪ್ಪುವ ಕೆಲಸವಲ್ಲ. ಆ ಯೋಚನೆ ಹೊಳೆಯುತ್ತಲೇ, "ಎಷ್ಟೋ ಜನ ಸಂಸಾರಿಗರು ಸೆರೆಮನೆಯನ್ನು ಸೇರಿಲ್ಲವೇ? ಅವರ ಮಕ್ಕಳ ಪಾಡೇನು?" ಎಂಬ ವಿಚಾರ ಹೊಳೆಯಿತು.

* * * * *

ರಾಧಾಕೃಷ್ಣ ಹೋಗಿ, ಎರಡು ತಿಂಗಳ ಮೇಲಾಯಿತು. ಈ ತನಕ ಅವನಿಂದ ಸುದ್ದಿ ಸಮಾಚಾರಗಳಿಲ್ಲ. ಅದರಿಂದ ಅವಳ ಮನಸ್ಸು ಚಂಚಲವಾಯಿತು. 'ಕಾಗದವನ್ನಾದರೂ ಬರೆಯ ಬಾರದಿತ್ತೇ? ಎಲ್ಲಿದ್ದಾರೆಂದು ತಿಳಿಸಬಾರದಿತ್ತೇ? ತನಗೆ ಏನಾದರೂ ತಿಳಿಸಬೇಕಾಗಿದ್ದಲ್ಲಿ, ಯಾರಿಗೆ ಬರೆಯಬೇಕು, ಯಾರಲ್ಲಿಗೆ ಬರೆಯಬೇಕು? ಅಥವಾ ಇದರೊಳಗಾಗಿಯೇ, ಸೆರೆಮನೆಯ ದರ್ಶನವಾಯಿತೋ, ಹೇಗೆ? ಅದಕ್ಕೊಂದು ಅಂಜಿಕೆಯಲ್ಲ. ಆದರೆ ಶ್ಯಾಮನಿಗಾದಂತೆ, ಗಾಯ, ನೋವುಗಳಾದರೆ ಏನು ಮಾಡುತ್ತಾರೋ!' ಅದನ್ನು ನೆನೆಯುವುದು ಅವಳಿಂದಾಗಲಿಲ್ಲ. ಅಂಥ ವೇಳೆಯಲ್ಲಿ ತಾನು ಬಳಿಯಲ್ಲಿದ್ದು ಉಪಚರಿಸುತ್ತಿದ್ದೆನಲ್ಲಾ, ಎಂಬ ಆಸೆ ತಲೆದೋರಿತು. ಅಂಥ ಯೋಚನೆಗಳಿಂದ ಮನಸ್ಸು ತೀರ ಅಶಾಂತವಾಯಿತು.

ಕೊನೆಗೆ ತನ್ನ ಸಮಾಧಾನಕ್ಕೆಂದು — "ಅಣ್ಣನ ಸಮಾಚಾರ ವಿದೆಯೇ?" ಎಂದು ಕೇಳಿ, ಅನಂತರಾಮನಿಗೆ ಪತ್ರ ಬರೆದಳು. ಅಲ್ಲಿಂದ ಉತ್ತರವೂ ಬಂದಿತು. ಅಣ್ಣನ ಹೇಳಿಕೆಯಂತೆ ಹತ್ತು ರೂಪಾಯಿಗಳೂ ಬಂದುವು. "ಮೊನ್ನೆ ಮೊನ್ನೆ ನಿನಗೆ ತಿಂಗಳ ಹತ್ತು ರೂಪಾಯಿ ಕಳುಹಿಸುವಂತೆ ಬರೆದಿದ್ದಾನೆ. ಈ ತಿಂಗಳು ಕಳುಹಿಸಿದ್ದೇನೆ. ಆತ ಊರಲ್ಲಿಲ್ಲವೆಂಬುದು ನನಗೆ ಈಗ ತಾನೇ ತಿಳಿಯಿತು" ಎಂದು ತನ್ನ ಆಶ್ಚರ್ಯವನ್ನು ಸೂಚಿಸಿದ್ದನು. ಅನಂತರಾಮನಿಂದ ಸುದ್ದಿಯು ಹೇಗೋ, ಮಂಜಯ್ಯನವರಿಗೂ ತಲಪಿತು. ಅವರು ಕೂಡಲೆ ಹೊರಡಲು ಗಾಡಿಯನ್ನು ಕಟ್ಟಿಸಿದರು. ಕುಂದಾಪುರದಿಂದ ಮಂಗಳೂರಿಗೆ ಓಡಿ ಹೋಗಿ, ಮಗಳ ಮನೆಯನ್ನು ಸೇರಿದರು. ತಮ್ಮ ಮಗಳನ್ನು ಇಷ್ಟು ನಿಷ್ಕರುಣೆಯಿಂದ ಬಿಟ್ಟು ಹೋದ ಅಳಿಯನ ಮೇಲೆ ತಮ್ಮ ಕೋಪವನ್ನೂ ಪ್ರಕಟಿಸಿದರು.

ತಂದೆಗೆ ಯಾವ ಸಂಗತಿಯನ್ನೂ ತಿಳಿಸುವ ಇಷ್ಟ ಆಕೆಗೆ ಇದ್ದಿರಲಿಲ್ಲ. ಉಪಾಯವಿಲ್ಲದೆ ಈಗ ಎಲ್ಲ ವಿಷಯಗಳನ್ನು ತಿಳಿಸಬೇಕಾಯಿತು. ನಿಷ್ಠುರವಾಗಿಯೇ ಉತ್ತರ ದೊರೆಯಿತು. "ದೇಶಸೇವೆ, ಸತ್ಯಾಗ್ರಹ, ಹೆಂಡತಿ ಮಕ್ಕಳಿರುವ ಸಂಸಾರಿಗಳಿಗಲ್ಲ. ತನ್ನ ಜವಾಬ್ದಾರಿಯನ್ನು ಸ್ವಲ್ಪವಾದರೂ ತಿಳಿಯಬಾರದೇ—ಇಷ್ಟು ಪ್ರಾಯದವನು" ಎಂದು ಗದರಿಸಿದರು. ಸಿಟ್ಟಿನಿಂದ ಮೈಮರೆತು ಏನೇನೋ ಅಂದುಬಿಟ್ಟರು. ಕಂದಿದ ಮುಖದಿಂದ ಆಕೆ ಎಲ್ಲವನ್ನು ಕೇಳಬೇಕಾಯಿತು.

"ಅಪ್ಪಾ, ನೀನೇಕೆ ಅವರನ್ನು ಬಯ್ಯುವುದು? ಮಗುವನ್ನೂ ನನ್ನನ್ನೂ ಅವರು ಹೊಂಡಕ್ಕೆ ತಳ್ಳಿಹೋಗಲಿಲ್ಲ. ನನ್ನನ್ನು ಕೇಳಿಯೇ ಹೋದರು. ನಾನು ಒಪ್ಪದಿದ್ದರೆ ಅವರು ಹೋಗುತ್ತಿರಲಿಲ್ಲ. ಈಗ ನೋಡುವಾಗ, ನಾನೇ ಮೂರ್ಖೆ. ಆತುರದಿಂದ ನಾನು ಅನಂತರಾಮನಿಗೆ ಕಾಗದ ಬರೆದುದೇ ತಪ್ಪಾಯಿತು" ಎಂದು ಅತ್ತಳು.

ಮಂಜಯ್ಯನವರು ಮಾತನಾಡಲಿಲ್ಲ. ಮಗಳ ದುಃಖವನ್ನು ತನ್ನ ರೌದ್ರಾವೇಶದಿಂದ ಹೆಚ್ಚಿಸುವುದು, ತಪ್ಪೆಂದು ಸುಮ್ಮನಾದರು. ಆದರೂ ಹೆತ್ತ ಕರುಳದು. ಸುಮ್ಮನಿರಲಾರದೆ, "ಸತ್ಯ, ಅವನ ಸುದ್ದಿ ತಿಳಿಯುವ ವರೆಗೆ, ಅವನು ತಿರುಗಿ ಬರುವ ವರೆಗೆ, ನಿನ್ನ ತಂದೆ ತಾಯಿ ಬದುಕಿರುತ್ತ, ನೀನು ವನವಾಸ ಮಾಡುತ್ತಿರುವುದು ಸಮನಲ್ಲ" ಎಂದರು.

"ನನಗೆ ಇದು ವನವಾಸವಲ್ಲ."

"ಅಲ್ಲ, ನನಗೆ ಗೊತ್ತು. ಇಲ್ಲಿ ನೀನು ಅರಮನೆಯ ಸುಖ ಅನುಭವಿಸುತ್ತೀಯ. ಏನು ಮಾಡಲಿ, ಹೇಳು—ಮೊದಲನೆಯ ತಪ್ಪು ನನ್ನದು. ಈ ಗಾಂಧೀ ಮರುಳು ಹಿಡಿದವನಿಗೆ ಮಗಳನ್ನು ಕೊಡುವ ತಪ್ಪು ಮಾಡಿದವನು ನಾನು. ನನ್ನ ತಪ್ಪಿಗೆ ನೀನು ನರಳುವ ಹಾಗಾಯಿತಷ್ಟೆ. ಮನೆಯಲ್ಲಿ ಉಡಲುಣಲಿಕ್ಕಿದ್ದೂ, ಈ ಊರಿಗೆ ಬಂದು, ನೆಂಟರು, ಇಷ್ಟರು, ಯಾರೂ ಇಲ್ಲದ ಮೂಲೆಯಲ್ಲಿ ಹೀಗೆ ಕಷ್ಟದ ಬಾಳು ಮಾಡಬೇಕೆಂದಿತ್ತೇ? ನರಕ ಅನುಭವಿಸಬೇಕಿತ್ತೇ?"

"ಅಪ್ಪಾ, ನೀನು ಹಾಗೆಲ್ಲಾ ಹೇಳಬಾರದು. ನನಗೆ ಇದು ನರಕವೆಂದು ಅನಿಸುವುದಿಲ್ಲ. ನಾನು ಅದಷ್ಟು ಸುಖದಲ್ಲಿದ್ದೇನೆ. ಏನು ಮಾಡುವುದು—ಅವರದ್ದೊಂದು ದಾರಿ, ನಿಮ್ಮದೊಂದು ದಾರಿ. ಪ್ರಪಂಚದಲ್ಲಿ

ಎಲ್ಲರೂ ಒಂದೇ ರೀತಿಯಾಗಿರುತ್ತಾರೆಯೇ? ಆದರೆ ಇಷ್ಟೊಂದು ಮಾತು ನಿಜ, ಅವರು ನನ್ನ ಯಾವ ಸುಖಕ್ಕೂ ಕೊರತೆ ಮಾಡಿದ್ದಿಲ್ಲ."

"ಹೌದು, ನಿನ್ನ ಹತ್ತಿರ ಮಾತನಾಡಿ ಉಪಯೋಗವಿಲ್ಲವೆಂದು ನನಗೆ ಗೊತ್ತು" ಎಂದು ಸುಮ್ಮನಾದರು. ರಾತ್ರಿ, ಸತ್ಯ ಅನ್ನ ಬಡಿಸುವಾಗ ಅವರ ಗಮನವು ಅವಳ ಕೈ, ಕೊರಳುಗಳ ಕಡೆಗೆ ಹರಿಯಿತು. ಆಗ ಅನುಮಾನ ಉಂಟಾಯಿತು. "ಸತ್ಯ, ಯಾಕೆ ಕೈ ಮೈ ಬೋಳಾಗಿದೆ.? ನಿತ್ಯಕ್ಕೆ ಹಾಕಲು ಮಾಡಿದ್ದಲ್ಲವೇ ಆ ಸರ, ಬಳೆಗಳನ್ನು" ಎಂದರು.

"ತೆಗೆದು ಇರಿಸಿದ್ದೇನೆ" ಎಂದಳು ಅವಳು.

ರಾತ್ರಿ ಊಟ ಮುಗಿದ ಮೇಲೆ, ತಿರುಗಿ ಅದೇ ಮಾತುಗಳು ಬಂದುವು. "ಮಗು, ಅವನ್ನು ನನಗೆ ಕೊಡು. ಇನ್ನೂ ಸ್ವಲ್ಪ ಚಿನ್ನ ಹಾಕಿ, ದೊಡ್ಡದು ಮಾಡಿ ಕಳುಹಿಸುತ್ತೇನೆ. ಮಗುವಿನ ಮೈಯೂ ಬರಿದಾಗಿದೆ. ಒಂದು ಚಿನ್ನದ ನೇವಳ, ಒಂದು ಸರವನ್ನಾದರೂ ಮಾಡಿಸಬಹುದಿತ್ತು" ಎಂದರು. ತನ್ನನ್ನು ಕರೆಯಲು ಬಂದ ಅವರು ಹೀಗೆ ಮಾತನಾಡಿದುದನ್ನು ಕಂಡು, ಇದು ತನಿಖಿಯ ಕಾರ್ಯಕ್ರಮವೆಂದು ತೋರಿತು. ಇದ್ದ ಸಂಗತಿಯನ್ನು ಮರೆಮಾಚುವುದು ತಪ್ಪೆಂದು, ಆಕೆ, ಅವುಗಳನ್ನು ಒತ್ತೆಯಿರಿಸಬೇಕಾಗಿ ಬಂದ ಸಂದರ್ಭವನ್ನು ತಿಳಿಸಿದಳು. ಕಟುವಾದ ಉತ್ತರವೇ ದೊರೆಯಿತು "ಹೌದು, ಅವನೇನು ಮಾಡಿದರೂ ನಿನಗೆ ಸರಿಯಾಗಿ ಕಾಣಬಹುದು. ಸ್ವತಃ ದುಡಿಯುವ ಚೇತನವಿಲ್ಲದೆ, ಹೆಂಡತಿಯ ಆಭರಣ ಒತ್ತೆ ಇಡುವವರಿಗೂ ಸತ್ಯಾಗ್ರಹ ಬೇಕು" ಎಂದರು. ಸತ್ಯಳಿಗೆ ಚೂರಿಯಿಂದ ತಿವಿದಷ್ಟು ನೋವಾಯಿತು. ಪ್ರತ್ಯುತ್ತರ ಕೊಡುವುದಕ್ಕಿಲ್ಲ. ತನ್ನ ಪತಿಯ ದುಡಿತ ಏನೆಂದು ಬಣ್ಣಿಸುವುದಕ್ಕಿಲ್ಲ. ಮೂಕಳಾದಳು. ನೆಟ್ಟಗೆ ಹಾಸುಗೆಗೆ ಹೋಗಿ, ತನ್ನ ವಿಧಿಯನ್ನು ಹಳಿದುಕೊಂಡು ಅಳುತ್ತ ಮಲಗಿಕೊಂಡಳು. ಮರುದಿನ ಮಂಜಯ್ಯನವರು ಮಗಳನ್ನು ಊರಿಗೆ ಕರೆದೊಯ್ಯಲು ಶತಪ್ರಯತ್ನ ಮಾಡಿದರು. ಸತ್ಯ ಇಷ್ಟಿಷ್ಟೂ ಒಡಂಬಡಲಿಲ್ಲ. "ಅವರು ಊರಿಗೆ ಹಿಂದಿರುಗಿ ಬರುವ ತನಕ ಈ ಸ್ಥಳವನ್ನು ಬಿಟ್ಟು ಏಳುವುದಿಲ್ಲ" ಎಂದಳು. "ಅಬ್ಬಾ, ನಿನಗೆ ನನ್ನ ಮಾತೂ ಸದರವಾಯಿತಲ್ಲವೆ!" ಎಂದು ಮಗಳ ಮೇಲೆಯೂ ಕುಪಿತರಾಗಿ ಮಂಜಯ್ಯನವರು ಊರಿಗೆ ಮರಳಿದರು. ತನ್ನ ಪತಿ ಯಾವುದೋ, ಹಿರಿಯ ಹಿತ ಸಾಧನೆ

ಯಲ್ಲಿ ಶ್ರಮಿಸುತ್ತಿದ್ದಾನೆ ಎಂಬ ಆಕೆಯ ಊಹೆಯ ಸವಿಗನಸುಗಳು ತಂದೆಯ ಆಗಮನದಿಂದ ಚದರಿ ಹೋದುವು. ತಂದೆ ಹೋದಂದಿನಿಂದ ಅವಳ ಮನಸ್ಸಿನಲ್ಲಿ "ಅವರ ಜೀವಕ್ಕೇನಾದರೂ ಅಪಾಯ ಬಂದಿರಬಹುದೇ," ಎಂಬ ಹಾಳು ಕನಸುಗಳು ಕವಿಯತೊಡಗಿದುವು. ತನ್ನ ಮನಸ್ಸೇ ತನಗೆ ನರಕವಾಗಿ, ಇನ್ನೂ ಒಂದು ತಿಂಗಳ ಕಾಲ ಸರಿಯಿತು.

ಒಂದು ದಿನ ಪತ್ರವೊಂದು ಅವಳ ಕೈಸೇರಿತು. ಉತ್ತರ ಕನ್ನಡ ಜಿಲ್ಲೆಯ ಒಂದು ಅಂಚೆ ಮುದ್ರೆ ಅದಕ್ಕಿತ್ತು. ಅದನ್ನು ಒಡೆದಳು. ಒಳಗಡೆ ವಿಳಾಸ, ಸಹಿ ಎರಡೂ ಇಲ್ಲದ ಪತಿಯ ಬರಹವಿತ್ತು. ಕೊಳೆಯಾದ ಆ ಕಾಗದದ ತುಣುಕಿನಲ್ಲಿ—ತಾನು ಉತ್ತರಕನ್ನಡದಲ್ಲಿ ಅಲೆಯುತ್ತಿದ್ದೇನೆಂದೂ, ಒಂದೇ ಊರಿಗೆ ಅಂಟಿ ಕುಳಿತಿಲ್ಲವೆಂದೂ, ಮರೆಯಲ್ಲಿದ್ದು ಮನಸ್ಸಿಗೆ ತೃಪ್ತಿಯಾಗುವ ಬಗೆಯಲ್ಲಿ ಕೆಲಸ ಮಾಡುತ್ತಿದ್ದೇನೆಂದೂ, ತಿಳಿಸಿ ಬರೆದಿದ್ದನು.

ಆ ಪತ್ರವನ್ನೋದುತ್ತಲೇ ಅವಳಿಗೆ ಸ್ವರ್ಗ ದೊರೆತಷ್ಟು ಆನಂದವಾಯಿತು. ಒಂದು ದಿನವಾದರೂ, ಅವರ ಆಸೆಯು ಪೂರ್ಣವಾಗಿ ತೃಪ್ತಿ ಹೊಂದುವ ಮುಹೂರ್ತ ಒದಗಿತಲ್ಲಾ ಎಂದೆನಿಸಿತು. ಅವರಿಗೆ ತನ್ನ ಸಂತೋಷವನ್ನು ತಿಳಿಸಲು—ವಿಳಾಸವಿರಲಿಲ್ಲ. ಪತ್ರ ಬರೆಯಬೇಕೆಂಬ ಲವಲವಿಕೆಯನ್ನು ತೀರಿಸಿಕೊಳ್ಳಲು, ತಂದೆಗೂ ಮೈದುನನಿಗೂ ಪತ್ರ ಬರೆದಳು. "ಅವರಿಂದ ಕಾಗದ ಬಂದಿದೆ. ಸುಖವಾಗಿದ್ದೇನೆಂದು ತಿಳಿಸಿದ್ದಾರೆ. ನನಗೆ ಬೇಕಾದ ಸಂತೋಷ ಅದು ಒಂದೇನೆ. ಅವರು ಸಂತೋಷವಾಗಿದ್ದಾರೆಂದು ಕೇಳಿ, ನನ್ನ ಚಿಂತೆಗಳೆಲ್ಲಾ ತೊಲಗಿವೆ" ಎಂದು ಬರೆದಳು. ಮುಂದಿನ ತಿಂಗಳು ಇನ್ನೊಂದು ಪತ್ರ ಬಂದಿತು. ಅದು ತೀರ ಚುಟುಕಿನದು—"ಆರೋಗ್ಯವಾಗಿದ್ದೇನೆ. ಚಂದ್ರ, ನೀನು, ಹೇಗಿದ್ದೀರೆಂದು ತಿಳಿಯಲು ಆಶೆಯಾಗುತ್ತದೆ. ನಿನಗೆ ಬೇಸರವಾಗುತ್ತಲಿಲ್ಲವಷ್ಟೇ! ಆ ಕಡೆಗೆ ಬರುವ ಒಬ್ಬ ಸ್ನೇಹಿತರಿದ್ದಾರೆ; ಅವರಿಂದ ಎಲ್ಲಾ ಸಂಗತಿಗಳನ್ನೂ ತಿಳಿಯಬಹುದು."

# ಹದಿನೆರಡನೆಯ ಅಧ್ಯಾಯ

ಇನ್ನು ಎರಡು ತಿಂಗಳು ಸರಿಯುವ ಹೊತ್ತಿಗೆ ಅಂಥ ಇನ್ನೂ ಒಂದೆರಡು ಪತ್ರಗಳು ಬಂದು ಹೋಗಿದ್ದುವು. ಒಂದು ದಿನ ಆಕೆ ಚಂದ್ರನನ್ನು ಆಡಿಸುತ್ತ ಜಗುಲಿಯಲ್ಲಿ ಕುಳಿತಿದ್ದಳು. ಆಗ ಯಾರೋ ಎದುರಿನ ಪದವು ಗುಡ್ಡದಿಂದ ಮನೆ ಕಡೆಗೆ ಬರುವುದು ಕಂಡಿತು. "ಯಾರೋ ಬರುವವರಿದ್ದಾರೆ—ಎಂದು ಬರೆದಿದ್ದಾರಲ್ಲಾ, ಇವರೇ ಇರಬಹುದೇ?" ಎಂಬ ಊಹೆ ಉಂಟಾಯಿತು. ಆದರೆ ಎದುರಿಗೆ ಬಂದು ನಿಂತ ಮೂರ್ತಿಯು "ಅಮ್ಮಾ, ನಾನು ಯಾತ್ರೆ ಮುಗಿಸಿ ಬಂದೆ; ಅಣ್ಣನೆಲ್ಲಿ" ಎಂದು ಕೇಳುತ್ತಲೇ, ಅವಳು ಚಕಿತಳಾದಳು. "ಯಾರು ಶ್ಯಾಮನೇ? ಬಂದೆಯಾ ಮಗು? ಎಷ್ಟು ಕಂಗಾಲಾಗಿದ್ದೀಯ. ಗುರುತೇ ಸಿಗುವುದಿಲ್ಲ" ಎಂದಳು.

"ಅಣ್ಣ?"

"ಅವರು ಹೋಗಿ ಐದು ತಿಂಗಳಾಯಿತು."

"ಎಲ್ಲಿಗೆ? ಜೈಲಿಗೆ! ಯಾವ ಜೈಲು? ನಾವಿದ್ದಲ್ಲಿಗೆ ಬರಲಿಲ್ಲ."

"ಇನ್ನೆಲ್ಲಿಗೋ, ಆ ಮೇಲೆ ಹೇಳುತ್ತೇನೆ. ಮೊದಲು ಕಾಲು ತೊಳೆ; ದಣಿದು ಬಂದಿದ್ದೀ. ಬಾಯಾರಿಕೆ ಕುಡಿದ ಮೇಲೆ ವಿರಾಮವಾಗಿ ಮಾತನಾಡುವ" ಎಂದಳು.

ಶ್ಯಾಮನಿಗೆ ಸತ್ಯಮ್ಮನ ಮುಖವನ್ನು ಕಂಡು, ಅಷ್ಟೊಂದು ಹರ್ಷವಾಯಿತು. ಕಾಲು ತೊಳೆಯುವಾಗ, ಒಳಗೆ ಬರುವಾಗ, ಬಾಯಾರಿಕೆಗೆ ಕುಳಿತಾಗ, ಹೆಜ್ಜೆಹೆಜ್ಜೆಗೂ ಮಾತನಾಡುತ್ತಲೇ ಇದ್ದ; ಮಾತು ಕೇಳುತ್ತಲೇ ಇದ್ದ. ಅದು ಮುಗಿದ ಗಳಿಗೆಗೇನೇ ಅವಳಿಂದ ಚಂದ್ರನನ್ನು ಕಿತ್ತುಕೊಂಡು, ಆ ಗುಡ್ಡ ಬಯಲುಗಳನ್ನು ಸುತ್ತಿಯೂ ಆಯಿತು. ಬಯಲನ್ನು ಕಂಡು ಅವನಿಗೆ ಎಷ್ಟೋ ಸಂತೋಷ. ಆ ವರ್ಷದ ಬೇಸಾಯದ ಸಮಯಕ್ಕೆ ಸಮನಾಗಿ, ತನಗೆ ಬಿಡುಗಡೆಯಾಯಿತಲ್ಲಾ ಎಂದು. ಸೆರೆಮನೆಯಿಂದ ಬರುವಾಗ, ಇನ್ನೊಮ್ಮೆ ಹೋಗುವೆನೆಂದು ಎಣಿಸಿಕೊಂಡಿದ್ದರೂ, ಈಗ ಅಣ್ಣನಿಲ್ಲದ ವೇಳೆಯಲ್ಲಿ ತಾನು ಮನೆಗೆ ಬಂದುದೇ ಒಳಿತಾಯಿತೆಂದು ತೋರಿತು. ಅವನ ಮುಂದಕ್ಕೆ ಸತ್ಯ—ತಾನು ಕಳೆದ ಆ ಐದು

ತಿಂಗಳನ್ನು ದಿನ ಎಣಿಕೆ ಮಾಡಿದಂತೆ, ಬಿಡಿ ಬಿಡಿಸಿ ಹೇಳಿದಳು. "ಏನು ಮಾಡಲಿ, ಶ್ಯಾಮ! ನಮ್ಮ ಚಂದ್ರನಲ್ಲದಿದ್ದರೆ ಅವರ ಹಿಂದೆ ನಾನೂ ಹೋಗಬೇಕೆಂದಿದ್ದೆ. ಮುಂಬಯಿಯಂತಹ ಊರಿನಲ್ಲಿ ಇನ್ನೂ ಸತ್ಯಾಗ್ರಹ ನಡೆಯುತ್ತಿದೆಯಂತೆ. ನಮ್ಮ ಊರಿನಲ್ಲಿ ಎಲ್ಲವೂ ತಣ್ಣಗಾಯಿತು. ಹೆಚ್ಚಿನ ಕೆಲಸವಿಲ್ಲವಾದರೂ ಅಷ್ಟನ್ನಾದರೂ ಮಾಡಬಹುದಿತ್ತು" ಎಂದಳು.

"ಅದೇನು ದೊಡ್ಡ ಕೆಲಸ! ಅಮ್ಮಾ, ನಾನೇ ಈಗ ಜೈಲಿಗೆ ಹೋಗಿ ಬಂದವನಲ್ಲವೇ? ನಾನು ಹೋದದ್ದು ಎನ್ನುವುದಕ್ಕಿಂತಲೂ, ಸುಳ್ಳು ನೆಪದಿಂದ ನನ್ನನ್ನು ಜೈಲಿಗೆ ಸಾಗಿಸಿದರು-ಎನ್ನಬಹುದು. ನಾನು ಕಾಯಿದೆ ಮುರಿದವನೇ? ನಾನು ಮುರಿದದ್ದು ಪ್ರೆಸ್ಸ್ ಕಾಯಿದೆ; ಅವರು ದಂಡಿಸಿದ್ದು ಅನಾವಶ್ಯಕವಾಗಿ. ನನ್ನಂತೆ ಸೆರೆಗೆ ಅನೇಕರು ಹೋಗಿದ್ದಾರೆ. ಆದರೂ ಹೋಗಿ ಬಂದ ಮೇಲೆ-ಏನು ಮಾಡಿದ ಹಾಗಾಯಿತು—ಎಂದು ಅನಿಸುತ್ತದೆ, ಕಟುಕನ ಕೈಗೆ ಕುರಿಯು ತಲೆ ಒಡ್ಡಿದಂದಾಯಿತಷ್ಟೆ. ಅಣ್ಣನ ದಾರಿಯಾದರೆ ಸಮ. ಯುದ್ಧಕ್ಕೆ ಪ್ರತಿ ಯುದ್ಧ ಹೂಡುತ್ತಲೇ ಇದ್ದಾನೆ. ಜೈಲಿಗೆ ಹೋಗುವ ಕೆಲಸ ಕಷ್ಟದ್ದಲ್ಲ. ಆದರೆ ಸರಕಾರವನ್ನು ಕಾಡಿ, ದಣಿಸಿ, ನಮ್ಮ ಶಕ್ತಿಯ ಅಳವನ್ನು ತೋರಿಸದೇ ಹೋದರೆ ಅವರು ಬಗ್ಗುವ ಹಾಗಿದೆಯೇ?"

"ಅದೆಲ್ಲಾ ನನಗೆ ತಿಳಿಯದು, ಶ್ಯಾಮ, ಆದರೆ ಇಂಥ ಸಮಯಗಳಲ್ಲಿ ನನ್ನ ಹಾಗೆ ತಣ್ಣಗೆ ಕುಳಿತಿರುವುದು ಸಮನೆಂದು ನನಗೆ ತೋರುತ್ತಲಿಲ್ಲ"

"ಅದು ನನಗೂ ಸಮನೆಂದು ತೋರುವುದಿಲ್ಲ. ತಿರುಗಿ, ತಿರುಗಿ ಕಾಯಿದೆ ಮುರಿದು ನಮ್ಮ ಹಟ ನಿಂತಿಲ್ಲ ಎಂದು ಅವರಿಗೆ ತೋರಿಸಬೇಕು. ನಮ್ಮ ಸಹಾಯವಿಲ್ಲದೆ, ಅವರ ಸರಕಾರ ಒಂದು ದಿನವಾದರೂ ನಡೆಯಲಾರದೆಂದು ತೋರಿಸಬೇಕು. ನಿನ್ನೆ ದಿನ, ನನ್ನ ಜತೆಯಲ್ಲೇ ಜೈಲಿನಿಂದ ಬಿಡುಗಡೆಯಾದ ಮೂವತ್ತು ಮಂದಿ ಬಂದಿದ್ದರು. ಅವರಲ್ಲಿ ಇನ್ನೊಮ್ಮೆ ಜೈಲಿಗೆ ಹೋಗುವ ಆಸಕ್ತಿ ಬಹಳ ಜನರಿಗೆ ಉಳಿದಿಲ್ಲ. ಯಾವುದೋ ಒಂದು ಗಳಿಗೆಯ ಉತ್ಸಾಹದಿಂದ ಅವರು ಸತ್ಯಾಗ್ರಹಿಗಳಾಗಿ ಜೈಲಿಗೆ ಹೋದರು. ಇನ್ನು ತಿರುಗಿ ಹೋಗುವುದಕ್ಕೆ ಮನಸ್ಸಿಲ್ಲ. ಜೈಲಿನ ಆವರಣ ಹಾಗಿದೆ. ಸೆರೆಮನೆಯಲ್ಲಿ ನಾವು ನೂರಾರು ಮಂದಿ ಸೇರಿದ್ದೆವು. ಎಲ್ಲರೂ ಸತ್ಯಾಗ್ರಹಿಗಳೇ. ಆದರೆ ಅದು ಒಂದು ಸಂತೆಯಂತಿತ್ತು. ನಮ್ಮಲ್ಲಿ

ಯಾವ ಶಿಸ್ತೂ ಇದ್ದಂತೆ ಕಾಣಿಸಲಿಲ್ಲ. ಸದಾ ಗದ್ದಲವೇ ಗದ್ದಲ! ಹಬ್ಬಕ್ಕೆ ಬಂದವರೆಂಧು ಹಲವರು ತಿಳಿದಿದ್ದರು. ಕೆಲವರು ತಮ್ಮ ಮನೆಯ ತಾಪ ತ್ರಯಗಳನ್ನು ನೆನೆದು, ಕ್ಷಮೆಬೇಡಿ ಹೊರಗೂ ಬಂದರು. ಕೆಲವರು ಹಿಂಸೆಗೆ ಹೆದರಿ ಕ್ಷಮೆ ಬೇಡಿದರು. ಜೈಲಿನಲ್ಲಿಯೂ ಸತ್ಯಾಗ್ರಹದ ಪ್ರಕ ರಣಗಳಾದುವು. ಕಾರಣಗಳು ಕ್ಷುದ್ರವಾಗಿದ್ದರೂ, ಸಂಖ್ಯಾಬಲದಿಂದ ನಮಗೆನೇ ಜಯವಾಯಿತು." ಎಂದು ತನ್ನ ಅಲ್ಲಿನ ಹಲವು ಅನುಭವ ಗಳನ್ನು ಹೇಳಿದನು.

"ಶ್ಯಾಮು, ಜೈಲಿನಲ್ಲಿ ಹೇಗೆ ಸಮಯ ಹೋಗುತ್ತಿತ್ತು? ನಿಮ್ಮಿಂದ ಕೆಲಸ ಮಾಡಿಸುತ್ತಿದ್ದರೇ? ಎಂಥ ಕೆಲಸ ಅದು" ಎಂದು ಆಕೆ ಕೇಳಿದಳು. ಅದಕ್ಕೆ ಶ್ಯಾಮು "ಮೊದಲು ಮೊದಲು ಚೆನ್ನಾಗಿಯೇ ಕೆಲಸಮಾಡಿಸುತ್ತಿ ದ್ದರು. ಇಲ್ಲಿ ಮಾಡಿದಂತೆ ತೋಟದ ಕೆಲಸವಿತ್ತು; ಕತ್ತಗುದ್ದುವ ಕೆಲಸ ವಿತ್ತು. ಆದರೆ ನಮ್ಮ ಜನರ ಹಿಂಡು ಹೆಚ್ಚಿಗೆ ಆದಂತೆ, ಕೆಲಸ ಹೆಸರಿಗೆ ಮಾತ್ರ ಉಳಿಯಿತು. ನಾವು ಯಾವ ಕಾಯಿದೆಯೂ ಇಲ್ಲದವರಂತೆ ವರ್ತಿಸುತ್ತಿದ್ದೆವು. ಬೇಸರವಾದರೆ ಸಂಗೀತ, ಉಪನ್ಯಾಸ ಎಲ್ಲವನ್ನೂ ನಡೆಯಿಸುತ್ತಿದ್ದೆವು. ಅಲ್ಲಿಗೆ ಮಂಗಳೂರಿನ ಪತ್ರಕರ್ತರಾದ ಪ್ರಭುದೇವ ಎಂಬವರು ಬಂದಿದ್ದಾರೆ. ಮೊದಲು ಜೈಲಿಗೆ ಹೋದವರಲ್ಲಿ ಅವರು. ಮುಂದಿನ ತಿಂಗಳಿನಲ್ಲಿ ಅವರ ಬಿಡುಗಡೆಯಾಗಬೇಕು. ಅವರ ಕಂಠ ವಂತು ಕಂಚಿನದ್ದಿರಬೇಕು. ನಮ್ಮ ಜಿಲ್ಲೆಯ ಗುಂಪಿಗೆ ಅವರೇನೇ ಮುಖಂಡರು. ನಿತ್ಯವೂ ನಮಗೆ ಅವರ ಉಪನ್ಯಾಸ. ರಸ್ಯಾದೇಶದ ಪರಿಸ್ಥಿತಿಯು ನಾಳೆ ದಿನವೇ ನಮ್ಮ ಊರಿಗೆ ಬರುತ್ತದೆ— ಎನ್ನುತ್ತಾರೆ ಅವರು. ಅವರ ಮಾತು ಸತ್ಯವಿರಲಿ, ಸುಳ್ಳಿರಲಿ, ಮಾತು ಕೇಳುವಾಗ ಕಿವಿಗೆ ತುಂಬ ರಂಗಾಗುತ್ತಿತ್ತು. ಸಮಯ ಕಳೆಯುವುದಕ್ಕೆ ಅದೂ ಒಂದು ದಾರಿ. ಆದರೂ ಒಟ್ಟಿಂದ ಹೇಳುವುದಾದರೆ, ಅಲ್ಲಿನದು ಬರಿಯ ಜಡಜೀವನ."

ಆತ ಬಂದ ಆರೆಂಟು ದಿನಗಳಲ್ಲಿ ಮನೆಯ ಸುತ್ತು ಮುತ್ತುಗಳನ್ನು ನೋಡಿಕೊಂಡು, ಒಂದೊಂದೇ ಕೆಲಸವನ್ನು ಪ್ರಾರಂಭಿಸಿದನು. ತೆಂಗು ಗಳಿಗೆ ನೀರೆರೆಯುವುದು, ತರಕಾರಿ ಬಿತ್ತುಗಳ ಮಡಿಯನ್ನು ತಯಾರಿಸು ವುದು, ಬತ್ತದ ಸಾಗುವಳಿಗೆ ಸಿದ್ಧತೆ ಮಾಡುವುದು— ಅವನ ಸಮಯ

ಇವುಗಳಲ್ಲಿ ಹೋಯಿತು. ವಿನೋದಕ್ಕೆಂತೂ ಚಂದ್ರ ತೊದಲುತ್ತ ಬೆನ್ನ ಹಿಂದೆ, ಇದ್ದೇ ಇದ್ದಾನೆ. ಈ ಮಧ್ಯೆ, ಸತ್ಯ ತನ್ನ ತಂದೆ ಬಂದಾಗ ನಡೆದ ಪ್ರಕರಣವನ್ನು ಅವನಿಗೆ ಹೇಳಿದಳು. ಆತ ಪ್ರತಿಯಾಗಿ, "ಅಮ್ಮಾ, ಈ ಐದು ತಿಂಗಳು ನೀವು ಒಬ್ಬರೇ ಹೇಗೆ ದಿವಸ ಕಳೆದರೋ! ತವರಿಗೆ ಹೋಗುವ ಆಸೆ ನಿಮಗೂ ಇದ್ದಿರಬಹುದು. ಅವರಿಗಂತೂ, ನೀವು ಬರಬೇಕೆಂಬ ಇಚ್ಛೆ ತುಂಬ ಇದ್ದಿರಬೇಕು. ಇಷ್ಟರ ತನಕ ಇಲ್ಲಿ ಯಾರೂ ಇರಲಿಲ್ಲ. ಈಗ ನಾನು ಬಂದಿದ್ದೇನಲ್ಲ. ನೀವು ಒಂದು ತಿಂಗಳ ಮಟ್ಟಿಗಾದರೂ ಊರಿಗೆ ಹೋಗಿ ಬನ್ನಿ" ಎಂದನು.

ಸತ್ಯ ನಕ್ಕಳು. "ಇನ್ನು ಹೋಗುವ ಅವಸರವಿಲ್ಲ. ಬೇಸರದ ದಿವಸ ಹೇಗೂ ಕಳೆಯಿತು. ಈಗ ನೀನು ಬಂದಿದ್ದೀಯ, ಇನ್ನೇನು ಬೇಸರ? ಹಾಗೆ ಹೋಗಲು ಧೈರ್ಯವೂ ಇಲ್ಲ. ಉತ್ತರ ಕನ್ನಡದಿಂದ ಯಾರೋ ಬರುವವರಿದ್ದಾರೆಂದು, ಎರಡೆರಡು ಬಾರಿ ಬರೆದಿದ್ದಾರೆ. ಅವರು ಬರುವ ತನಕ ನಾನು ಇಲ್ಲಿ ಕಾದಿರಬೇಡವೇ? ಏನಾದರೂ ಕೆಲಸದ ಸಲುವಾಗಿ ಅವರನ್ನು ಕಳುಹಿಸುತ್ತಿರಬಹುದು" ಎಂದಳು. ಅದರಿಂದಾಗಿ ಅವಳು ಊರಿಗೆ ಹೋಗುವ ಆಸೆಯನ್ನು ಬಿಟ್ಟಿದ್ದಳು. ತವರುಮನೆಯನ್ನು ನೋಡುವ ಆತುರ ಇದ್ದಿಲ್ಲವೆಂದಲ್ಲ. ಇತ್ತು, ತುಂಬಾ ಇತ್ತು. ಆದರೆ ಈಗ ಅವಳು ನಿಂತುದೇ ಒಳಿತಾಯಿತು. ಆ ನಾಲ್ಕಾರು ದಿವಸಗಳೊಳಗಾಗಿ ಉತ್ತರ ಕನ್ನಡದಿಂದ ಒಬ್ಬರು ಮುದುಕರು ಬಂದರು. ಆರು ಮಂದಿ ಮಕ್ಕಳನ್ನು ಕಟ್ಟಿಕೊಂಡು ಅಲ್ಲಿಗೇನೆ ಬಂದರು. ರಾಧಾಕೃಷ್ಣ ಒಂದು ಪತ್ರವನ್ನು ಅವರೊಡನೆ ಕಳುಹಿಸಿದ್ದ. ಆ ಪತ್ರವನ್ನು ಸತ್ಯ ಓದುತ್ತಿರುವಾಗ, ಶ್ಯಾಮ ಆತುರದಿಂದ "ಏನಮ್ಮಾ, ಏನು ಬರೆದಿದ್ದಾರೆ, ಬರುತ್ತಾರೇನು? ನಾವೇ ಬರಬೇಕಂತೇನು?" ಎಂದು ಕೇಳಿದ. ಆಕೆ ಪತ್ರವನ್ನೇ ದಿಟ್ಟಿಸಿ ನೋಡುತ್ತ ಯೋಚನೆಗೊಳಗಾದಳು. ರಾಧಾಕೃಷ್ಣ ಹೀಗೆ ಬರದಿದ್ದನು! "ಈ ಮಕ್ಕಳನ್ನು ಎರಡು ತಿಂಗಳ ಹಿಂದೆಯೇ ಕಳುಹಿಸಬೇಕೆಂದಿದ್ದೆ. ಶ್ಯಾಮನ ಬರಕ್ಕಾಗಿ ಕಾದು ಕುಳಿತಿದ್ದೆ. ಈಗ ಅವನು ಬಂದಿರಬೇಕು. ಈ ಮಕ್ಕಳು ಈ ಊರಿನವರು. ಇಲ್ಲಿ ಸೆರೆಗೊಳಗಾದ ತಂದೆ ತಾಯಿಗಳ ಅನಾಥ ಬಾಲಕರು. ಅವರನ್ನು ಸಾಕುವ ಹೊಣೆ ನಿಮ್ಮದು" ಎಂದಿತ್ತು.

ಆಕೆಯ ಅನುಜ್ಞೆಯಂತೆ ಶ್ಯಾಮ ಅವರನ್ನು ಕಾಲು ತೊಳೆಯಲು ಕರೆದುಕೊಂಡು ಹೋದನು. ಆ ಮುದುಕರೂ ಹೋಗಿ ಬಂದರು. ಅವರೆಲ್ಲರಿಗೂ ಬಾಯಾರಿಕೆಗೆ ಬೆಲ್ಲ, ನೀರನ್ನು ಕೊಟ್ಟನು. ಬಾಲಕರೆಲ್ಲ ಪ್ರಯಾಣದಿಂದ ದಣಿದು ಬಂದಿದ್ದರು. ಉತ್ತರ ಕನ್ನಡದ ಯಾವುದೋ ಮೂಲೆಯಿಂದ, ಎರಡು ಮೂರು ದಿವಸಗಳ ಪ್ರವಾಸ ಮಾಡಿ, ಕಂಗಾಲಾಗಿ ಬಂದಿದ್ದರು. ಅವರಲ್ಲಿ ನಾಲ್ವರು ಗಂಡು ಹುಡುಗರು; ಇಬ್ಬರು ಹುಡುಗಿಯರು. ಮಕ್ಕಳಲ್ಲಿ ತೀರ ಹಿರಿಯನಿಗೆ ಹನ್ನೆರಡು ವರ್ಷವಾದರೆ, ತೀರ ಕಿರಿಯನಿಗೆ ನಾಲ್ಕು ವರ್ಷ ಪ್ರಾಯ. ಅವರನ್ನು ಕುಳ್ಳಿರಿಸಿಕೊಂಡು ಆ ಮುದುಕರೊಡನೆ ಸತ್ಯ, "ಎಲ್ಲಿನ ಮಕ್ಕಳಿವರು? ಏನು ಕತೆ?" ಎಂದು ವಿವರವನ್ನು ಕೇಳಿದಳು. ಆ ಮುದುಕರೆಂದರು-"ಈ ಸಣ್ಣದು ಉಂಟಲ್ಲ, ಇದು ನನ್ನ ಮಗು, ಕಿಟ್ಟಣ್ಣ. ಇದರ ತಾಯಿ ಈಗ ಜೈಲಿನಲ್ಲಿದ್ದಾಳೆ. ನನ್ನ ಎರಡನೇ ಹೆಂಡತಿಯವಳು. ಇದು ಒಂದೇ ಮಗು ನಮಗೆ. ನಮ್ಮ ಊರಲ್ಲಿ ಹಲವರ ಆಸ್ತಿ ಮನೆ ಮಾರುಗಳನ್ನು ಸರಕಾರ ಸ್ವಾಧೀನ ಪಡಿಸಿಕೊಂಡಿದೆ. ಈ ಎಲ್ಲ ಮಕ್ಕಳೂ ಹಾಗೆ ತಬ್ಬಲಿ ಆದುವು. ಈ ಹುಡುಗ ಮಹಾದೇವ, ಈತ ನಾಗಪ್ಪ—ಇಬ್ಬರೂ ತುಂಬ ಅನುಕೂಲವಂತರ ಮಕ್ಕಳು. ಇವರೆಲ್ಲರು ನಮ್ಮ ಗ್ರಾಮದವರೇನೆ. ನಮ್ಮ ಊರಿನವರೆಲ್ಲರು ಸೇರಿ, ಕಾಡಿನ ಸತ್ಯಾಗ್ರಹ ಮಾಡಿದರು. ಸರಕಾರದವರು ಹಲವರನ್ನು ಬಂಧಿಸಿ ಸಾಗಿಸಿದರು. ದಂಡ ಹೊರಿಸಿದರು. ದಂಡ ಕೊಡದಿದ್ದುದನ್ನು ಕಂಡು, ಜನರ ಮನೆಮಾರುಗಳನ್ನು ಹರಾಜು ಮಾಡಿದರು. ನಮ್ಮ ಊರಲ್ಲಿ ಎಷ್ಟೋ ಜನ ಗಂಡಸರು, ಹೆಂಗಸರು, ಹೀಗೆ ಮನೆ ಮಾರುಗಳನ್ನು ಕಳೆದುಕೊಂಡು, ಅಂತರಪಿಶಾಚಿಗಳಾಗಿದ್ದಾರೆ. ಪ್ರಾಯ ಬಂದ ನಮಗೆ ಯಾವ ಹೆದರಿಕೆಯೂ ಇಲ್ಲ. ನಾಲ್ಕು ದಿವಸ ಉಪವಾಸವಿರಬೇಕಾದೀತು; ಇದ್ದೇವು. ಇಂದಲ್ಲ, ನಾಳೆಯಾದರೂ ಈ ಸರಕಾರ ಬಗ್ಗೀತು. ಆದರೆ ಮನೆಯಲ್ಲಿರವ ಹಾಗೆ ಸರಕಾರ ಕಾಡಿ ದಣಿಸುವಾಗ ಈ ಮಕ್ಕಳ ಗತಿ ಏನು? ಕೆಲವರು ಎಲ್ಲೆಲ್ಲೋ ಚದರಿ ಹೋದರು. ಈ ಮಕ್ಕಳೆಲ್ಲ ನಮ್ಮ ಒಂದೇ ಹಳ್ಳಿಯವರೇ. ನಮ್ಮ ಹಳ್ಳಿ ಇರುವುದು ಸಿದ್ಧಾಪುರಕ್ಕೆ ಸ್ವಲ್ಪ ದೂರದಲ್ಲಿ; ನಾಗೇಸ ಹಳ್ಳಿ ಎಂದು. ನಿಮ್ಮ ಯಜಮಾನರು ಅಲ್ಲಿಯೇ ನಿಂತು ಬಹಳ ಕೆಲಸ ಮಾಡಿಸುತ್ತಿದ್ದಾರೆ. ಎಷ್ಟೋ

ದಿನದಿಂದ ಪೋಲೀಸರು ಅವರನ್ನು ಹುಡುಕುತ್ತಿದ್ದಾರೆ. ಆದರೆ ಇನ್ನೂ ಯಾರ ಕೈಗೂ ಅವರು ಸಿಕ್ಕಿಲ್ಲ. ನಮ್ಮ ಪಜೀತಿಯನ್ನು ಕಂಡು ಮಕ್ಕಳನ್ನು ಊರೂರು ಅಲೆಯಿಸುವ ಬದಲು ಇಲ್ಲಿಗೆ ಕರೆದುಕೊಂಡುಹೋಗಿ ಎಂದರು. ಅದಕ್ಕಾಗಿ ಬಂದಿದ್ದೇವೆ. ಚಳವಳವೆಲ್ಲಾ ಶಾಂತವಾಗಿ, ಊರು ಒಂದು ಸಮಾಧಾನಕ್ಕೆ ಬಂದ ಮೇಲೆ, ಹಿಂದಕ್ಕೆ ಕರೆದುಕೊಂಡು ಹೋಗಬೇಕು. ಅಲ್ಲಿಯ ತನಕ ಅವರನ್ನು ಕಾಯುವ ಭಾರ ನಿಮ್ಮದು" ಎಂದರು.

ಎಲ್ಲ ಮಕ್ಕಳಿಗೂ, ಅವರಿಗೂ ಸ್ನಾನವಾಗಿ ಊಟವಾಯಿತು. ಮರುದಿನ ಆ ಮುದುಕರು ತಮ್ಮ ಊರಿಗೆ ಹೊರಡುವುದಕ್ಕೆ ಸಿದ್ಧರಾದರು. ಮಕ್ಕಳನ್ನು ಬಿಟ್ಟು ಹೋಗುವ ಸಂದರ್ಭವನ್ನು ನೆನೆದುಕೊಂಡು ಅವರ ಕಣ್ಣಿನಲ್ಲಿ ನೀರು ಹನಿಯಿತು. "ಇನ್ನೆಂದು ಬರುತ್ತೀರಿ" ಎಂದು ಕೇಳಿದುದಕ್ಕೆ "ಎಂದು ದೇವರು ಕಳುಹಿಸುತ್ತಾರೋ ಆಗ" ಎಂದರು. ಸತ್ಯಳಿಗೂ ಆ ಮಾತುಗಳನ್ನು ಕೇಳಿ ವ್ಯಥೆಯಾಯಿತು. ಆಗ ಅವಳು ತೀರ ಕಿರಿಯ ಕಿಟ್ಟಣ್ಣನನ್ನು ತಾಲಮೇಲೆ ಕುಳ್ಳಿರಿಸಿಕೊಂಡಿದ್ದಳು. ಆ ಮುದುಕರ ಹೆಸರು ಈಚಣ್ಣಯ್ಯ ಎಂದು. ಅವರು ಹೊರಡುತ್ತಾ "ಅದು ಯಾರು ಬಲ್ಲೆಯಾ! ನಿನ್ನ ಮಾವಿ. ನಿನಗೆ ಓದಲಿಕ್ಕೆ, ಬರೆಯಲಿಕ್ಕೆ ಹೇಳಿಕೊಡುತ್ತಾರೆ. ನೀವೆಲ್ಲರೂ ಇಲ್ಲಿರಬೇಕು. ಬೇಗನೇ ಬಂದು ಕರೆದುಕೊಂಡು ಹೋಗುತ್ತೇನೆ" ಎಂದರು. ಹುಡುಗ ಅಳುತ್ತಾ ಎದ್ದು ನಿಂತ. "ನಾನು ನಿನ್ನೊಟ್ಟಿಗೆ ಬರುತ್ತೇನೆ. ನನ್ನ ಅಮ್ಮನಿದ್ದಲ್ಲಿಗೆ ಕರೆದುಕೊಂಡು ಹೋಗು" ಎಂದು ಅಳತೊಡಗಿದನು.

"ಅಮ್ಮನನ್ನು ಪೋಲೀಸರು ಜೈಲಿಗೆ ಹಾಕಿದರಲ್ಲಾ ಮಗು."

"ಅವರನ್ನು ನೀನು ಜೈಲಿಗೆ ಹಾಕಲಿಲ್ಲವೇಕೆ?"

ಅವರು ನಕ್ಕರು. ಮಗುವನ್ನು ಉದ್ದೇಶಿಸಿ, "ಈ ಅಮ್ಮ ನಿನ್ನನ್ನು ತುಂಬ ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ನಿನ್ನ ಅಮ್ಮ ಜೈಲಿನಿಂದ ಬರುವ ತನಕ ನೀನು ಇಲ್ಲೇ ಇರು. ಇವರಲ್ಲ ಇಲ್ಲೇ ಇರುತ್ತಾರೆ" ಎಂದರು. ಮಗುವಿಗೆ ಸಮಾಧಾನ ಹೇಳುವುದಕ್ಕೆ ಮನಸ್ಸು ತಬ್ಬಿಬ್ಬಾಯಿತು. ಒದಲು ಸತ್ಯಳನ್ನು ಉದ್ದೇಶಿಸಿ "ಏನು ಮಾಡುತ್ತೀರಿ ಅಮ್ಮ, ನನಗೆ ಯಾವುದೂ ಕಷ್ಟ ಕಾಣುವುದಿಲ್ಲ. ಆಸ್ತಿ ಮನೆಗಳು ಹೋದರೆ ಹೋಗಲಿ. ಅಂಥ ಜವಾಹರಲಾಲರಿಗಿಂತ ನಾವು ಶ್ರೀಮಂತರೇ? ಇಂದು ಹೋದೀತು,

ನಾಳೆ ಬಂದೀತು. ಬಾರದಿದ್ದರೆ ಇಲ್ಲ; ನಮ್ಮ ಅದೃಷ್ಟ. ಆದರೆ ಈ ಮಕ್ಕಳನ್ನು ಬಿಟ್ಟಿರುವುದೆಂದರೆ ತುಂಬಾ ಕಷ್ಟ. ಈ ಮಗುವಿನ ತಾಯಿಗೆ ಸತ್ಯಾಗ್ರಹದ ಆವೇಶ. ಆ ಮಗುವಿಗೋಸ್ಕರ ನಾನೇ ಮನೆಯಲ್ಲಿ ಉಳಿದುಕೊಂಡು, ಅವಳನ್ನು ಹೋಗಲಿಕ್ಕೆ ಬಿಟ್ಟೆ. ಅವಳಿಲ್ಲದೆ ನನ್ನ ಪಾಡು ತುಂಬ ಅತಂತ್ರವಾಗಿದೆ" ಎಂದು ನುಡಿದರು. ಆ ದಿನವಂತು ಕಿಟ್ಟಣ್ಣ ಅವರನ್ನು ಬಿಡಲಾರನೆಂದು ಕಂಡಿತು. ಅಂದರಿಂದ "ಅಮ್ಮಾ, ನಾಳೆ ಹೋಗುತ್ತೇನೆ; ಈ ಮಕ್ಕಳ ವಿಷಯ ನಾನು ಹೇಳುವ ವಿಳಾಸಕ್ಕೆ ಕಾಗದ ಬರೆಯುತ್ತಿರಬೇಕು" ಎಂದರು. ಆಕೆ ವಿಳಾಸ ಬರೆದುಕೊಂಡಳು. ತನ್ನ ಪತಿಯ ವಿಳಾಸವೂ ಅದೇನೆ ಎಂಬುದು ಸ್ಪಷ್ಟವಾಯಿತು. ತುಂಬ ದುಃಖದಿಂದ ಊರಿಗೆ ಹೊರಟ ಈಚಣ್ಣಯ್ಯನವರನ್ನು ಸಮಾಧಾನಗೊಳಿಸಲು ಸತ್ಯ "ನೀವೇನೂ ಯೋಚನೆ ಮಾಡಬೇಡಿ. ನನ್ನ ಮಗುವಿನಂತೆ ಇವರನ್ನು ನೋಡುತ್ತೇನೆ. ಈ ಶ್ಯಾಮನೂ ಇಲ್ಲಿಗೆ ಅನಾಥನಾಗಿ ಬಂದವ. ಕೆಲವು ಸಮಯದ ಹಿಂದೆ ಇಲ್ಲಿ ಒಂದು ಆಶ್ರಮವೇ ಇತ್ತು. ಆದರೆ ನಾವು, ಒಂದು ಹೊಲೆಯರ ಮಗುವನ್ನು ಸಾಕಿದೆವೆಂದು ಎಲ್ಲರೂ ಅದನ್ನು ಬಿಟ್ಟು ದೂರಸರಿದರು."

"ನಮ್ಮ ಊರಿನಲ್ಲಿ ಅಮ್ಮ, ಹೊಲೆಯರು ಬ್ರಾಹ್ಮಣರು, ಆ ಜಾತಿ ಈ ಜಾತಿ ಎಂದಿಲ್ಲ. ಪ್ರತಿಯೊಬ್ಬರೂ ಕಾಡಿನ ಸತ್ಯಾಗ್ರಹಕ್ಕೆ ಹೋಗಿದ್ದಾರೆ.

"ನೀವು ಇವತ್ತು ಊರಿಗೆ ಹೊರಡುವುದು ಬೇಡ. ಒಂದು ಸಂಜೆಯಾದರೂ ಇದ್ದು ಹೋಗಿ" ಎಂದು ಅವಳು ಬಲವಂತಮಾಡಿದಳು. ಸತ್ಯ, ಅವರನ್ನು ಬಿಟ್ಟು ತನ್ನ ಕೆಲಸಗಳಿಗೆ ತೆರಳಿದಳು. ಶ್ಯಾಮ ಚಂದ್ರನನ್ನು ಸಮೀಪ ಕುಳ್ಳಿರಿಸಿಕೊಂಡು, ಬಾಲಕರ ಇತಿವೃತ್ತವನ್ನು ಕೇಳುತ್ತಿದ್ದನು. ಆತ ಅಲ್ಲಿಂದೆದ್ದು ತೀರ ಕಿರಿಯ ಕಿಟ್ಟಣ್ಣನ ಜತೆಗೆ ಕುಣಿದು ಓಡುವುದಕ್ಕೂ ತೊಡಗಿಯಾಯಿತು. ನಾಗಪ್ಪ, ಮಹಾದೇವ, ಕಿಟ್ಟಣ್ಣ, ಇವರ ವಿಚಾರ ಇನ್ನೊಮ್ಮೆ ಕೇಳಿದ. ಶಾರದೆ, ಗಂಗೆ ಇಬ್ಬರು ಹೆಣ್ಣು ಹುಡುಗಿಯರೂ ಈ ಹುಡುಗರಿಗೆ ಸಮೀಪದ ಬಂಧುಗಳೆಂದು ತಿಳಿದುಕೊಂಡ. ಇನ್ನೊಬ್ಬ ಉಳಿದವನೆಂದರೆ ಚಂದಪ್ಪ. ಆತ ಹತ್ತು ವರ್ಷದವ: ಗುಡಿ

ಗಾರರ ಹುಡುಗ. "ಅವನ ತಂದೆ ಗುಡಿಗಾರ" ಎಂದು ಮಹಾದೇವ ಶ್ಯಾಮನಿಗೆ ಹೇಳಿದ.

"ಗುಡಿಗಾರ ಅಂದರೆ?"

"ಬಾಸಿಗ, ಕೆತ್ತನೆ ಕೆಲಸ, ಗೊಂಬೆ ಮಾಡುತ್ತಾರಲ್ಲಾ ಅವರು."

"ನಿನಗೆ ಬರುತ್ತದೆಯೇ ಆ ಕೆಲಸ"? ಎಂದು ಶ್ಯಾಮ ಚಂದಪ್ಪನನ್ನು ಕೇಳಿದನು.

"ಉಳಿ, ಚೂರಿ, ಬೆಂಡು, ಕಡಚಲು ಕೊಟ್ಟರೆ ಏನಾದರೂ ಮಾಡಿ ಯೇನು.?

"ಒಳ್ಳೆಯದಾಯಿತು. ನನಗೆ ಅಂಥ ಕೆಲಸ ಕಲಿಯ ಬೇಕೆಂದಿದೆ. ಎಲ್ಲ ಸಾಮಾನುಗಳನ್ನು ಒದಗಿಸುತ್ತೇನೆ. ಬಾಸಿಗ ಗೀಸಿಗವನ್ನಲ್ಲ, ಆಟದ ಸಾಮಾನನ್ನು ಮಾಡಬೇಕೆಂದಿದೆ ನನಗೆ. ಅದರಿಂದ ಕೊನೆಗೆ ಏನೂ ಇಲ್ಲದೆ ಹೋದಾಗ, ಬೇಸರ ಕಳೆಯುವುದಕ್ಕಾದರೂ ಒಂದು ಉದ್ಯೋಗ ವಾಗುತ್ತದೆ. ನಮ್ಮ ಕಿಟ್ಟಣ್ಣನಿಗೊಂದು ಗೊಂಬೆ, ಚಂದ್ರನಿಗೊಂದು ಗೊಂಬೆ ಮಾಡಿಕೊಡಬಹುದಲ್ಲ."

ಶ್ಯಾಮ ಮಕ್ಕಳೊಡನೆ ತುಂಬ ಪರಿಚಯ ಬೆಳೆಯಿಸಿಕೊಂಡನು. ಈಚಣ್ಣಯ್ಯನವರು ಅವರ ಜತೆಯಲ್ಲಿ ಸೇರಿ ತುಂಬ ಓಡಾಡಿದರು. ಆತ ಅವ ರೆಲ್ಲರನ್ನೂ ಕರೆದುಕೊಂಡು, ಆಶ್ರಮದ ಹೊಲ, ಹಳ್ಳ, ಗುಡ್ಡಗಳನ್ನು ತಿರು ಗಾಡಿಸಿಕೊಂಡು ಬರಲು ಹೊರಟ. ಜತೆಗೆ ಈಚಣ್ಣಯ್ಯನವರೂ ಹೋ ದರು. ಶ್ಯಾಮ ಚಂದ್ರನನ್ನು ಹೆಗಲ ಮೇಲಿರಿಸಿಕೊಂಡು "ನೋಡು, ನಿನಗೆ ಗಮ್ಮತ್ತು, ಒಂದು ರಾಶಿ ಅಣ್ಣ, ಅಕ್ಕ ಎಲ್ಲರೂ ಸಿಕ್ಕಿದ್ದಾರೆ" ಎಂದು ಚೇಷ್ಟೆ ಮಾಡುತ್ತಾ ಕರೆದುಕೊಂಡು ಹೋದನು. ಈಗ ಸತ್ಯ ಒಬ್ಬಳೇ ಮನೆಯಲ್ಲಿ. ಅವಳಿಗೆ ಒಂದೊಂದಾಗಿ ತನ್ನ ಹೊಣೆಯ ಅರಿವು ಆಗುತ್ತಿದೆ. ಗಂಡನೇನೋ ತನ್ನನ್ನು ನಂಬಿ ಆ ಮಕ್ಕಳನ್ನು ಕಳುಹಿಸಿದ್ದಾನೆ. ಅವರಿಗೆ ದೂರದಲ್ಲಿರುವ ತಾಯಿ ತಂದೆಗಳ ನೆನಪಾದರೆ, ಅವು ಆ ನೆನಪಿಂದ ಅತ್ತು ಕಾಡಿದರೆ—ಏನುಮಾಡಬೇಕು? ಅವರನ್ನು ಹೇಗೆ ಸಮಾಧಾನಪಡಿಸ ಬೇಕು? ಒಬ್ಬಿಬ್ಬರಲ್ಲ; ಆರು ಮಂದಿ ಬಂದಿದ್ದಾರೆ. ಅವರಿಗೆ ಸಮನಾದ ಉಡುಗೆಯೂ ಇಲ್ಲ. ಅರಿವೆಗಳೂ ಇಲ್ಲ; ಇಷ್ಟೊಂದು ಮಂದಿಗೆ ಅನ್ನ

ಹಾಕಿ ಸಾಕುವ ಕೆಲಸವೂ ಸುಲಭವಲ್ಲ. ತಾನೂ ಶ್ಯಾಮನೂ ದುಡಿದು ಅನ್ನ ಬೇಯಿಸಬಹುದು. ಆದರೆ ಬೇಕಾದ ಕಾಳನ್ನು ಎಲ್ಲಿಂದ ತರಬೇಕು?

ರಾತ್ರಿ ಊಟ ಮುಗಿದು ಮಲಗುವ ವೇಳೆ ಬರುತ್ತಲೇ ಆಕೆ ತನ್ನ ಮತ್ತು ಪತಿಯ ಚಾಪೆ ಹಾಸುಗೆಗಳ ಅರಿವೆಗಳನ್ನು ತೆಗೆದು ಮಕ್ಕಳಿಗೆ ಹಂಚಿಕೊಟ್ಟಳು. ಮಕ್ಕಳಿಗೆ ಮಲಗುವುದಕ್ಕಂತು ಬೇಕಷ್ಟು ಜಾಗವಿದೆ. ಆಡುವುದಕ್ಕೂ ಜಾಗವಿದೆ. ಆಕೆ ತನ್ನ ಒಂದು ಮಗ್ಗುಲಲ್ಲಿ ಗಂಗೆ, ಶಾರದೆಯನ್ನು ಮಲಗಿಸಿಕೊಂಡಳು. "ಕಿಟ್ಟಣ್ಣ ನೀನು ನನ್ನ ಹತ್ತಿರ ಬರುತ್ತೀಯ. ಚಂದ್ರನ ಸಂಗಡ ಮಲಗಿಕೊ" ಎಂದರೆ, ಆತ "ನಾನು ಅಪ್ಪನ ಸಂಗಡವೇ ಮಲಗಿಕೊಳ್ಳುತ್ತೇನೆ. ಅಪ್ಪ ಓಡಿಹೋದರೆ!" ಎನ್ನುತ್ತಾನೆ. ಆ ಮಾತು ಕೇಳಿ ನಗುಬಂದರೂ ಈಚಣ್ಣಯ್ಯನವರ ಮುಖ ಮಾತ್ರ ಸಪ್ಪಗಾಯಿತು. ಅವಳಿಗೂ ತನ್ನ ಹೊಣೆಯು ಮತ್ತಷ್ಟು ವಿಶದವಾಯಿತು. ಈಚಣ್ಣನವರು "ಕೊನೆಗೆ ಇದೊಂದನ್ನು ವಾಪಾಸು ಹೊರಬೇಕಾಗುತ್ತದೆಯೋ, ಏನೋ; ಹೊತ್ತುಕೊಂಡು ಎಲ್ಲಿಗೆ ಹೋಗಲಿ; ತಾಯಿಗೆ ವರ್ಷದ ಶಿಕ್ಷೆಯಾಗಿದೆ. ಹೊರಕ್ಕೆ ಬರಲು ಇನ್ನೂ ಹತ್ತು ತಿಂಗಳು ಉಂಟು. ನನಗೆ ಊರಿನ ನೂರಾರು ತಾಪತ್ರಯಗಳಿವೆ. ಬಹುದಿನ ಪೋಲಿಸರ ಹಿಂಸೆಗೆ ಊರೂರು ಕದ್ದು ಅಲೆದಾಡುವ ಪಾಡೂ ಬಂದಿತ್ತು ನಮಗೆ. ಗುರುತಿನವರ ಮನೆಗೆ ಹೋಗಿ ತಿಂಗಳುಗಟ್ಟಲೆ ಇರಲಿಕ್ಕೆ ಬರುತ್ತದೆಯೇ? ಹೊತ್ತಿಗೆ ಊಟವಿದ್ದರಾಯಿತು. ಇಲ್ಲದಿದ್ದರೂ ಆಯಿತು. ಇದು ತಾಯಿಯನ್ನು ಒಂದು ಗಳಿಗೆಯೂ ಬಿಟ್ಟಿರದ ಕೂಸು. ಈಗ ನನ್ನ ಜತೆಯಲ್ಲಿ ಇರುವುದೇ ದೊಡ್ಡದು" ಎಂದು ವಿಚಾರಕ್ಕೊಳಗಾದರು.

ಆಕೆ ಅವರನ್ನು ಸಮಾಧಾನಗೊಳಿಸುತ್ತ "ನೋಡುವ, ನಾವು ಇಬ್ಬರು ಇದ್ದೇವಲ್ಲ, ನೀವು ಬೆಳಗಿನ ಮುಂಚೆಯೇ ಹೊರಟು ಹೋಗಿ; ದೇವರಿದ್ದಾನೆ" ಎಂದಳು.

ರಾತ್ರಿ ಮಲಗುವ ಮುಂಚೆ ಈಚಣ್ಣಯ್ಯನವರು ಹಿರಿಮಕ್ಕಳನ್ನು ಕರೆದು, "ಮಕ್ಕಳೇ, ಜಗಳಮಾಡಬಾರದು; ಈ ಅಮ್ಮನಿಗೂ ಅಣ್ಣನಿಗೂ ತ್ರಾಸ ಕೊಡಬಾರದು. ಸಣ್ಣವರನ್ನು ಸುಧಾರಿಸಿಕೊಂಡು ಹೋಗಬೇಕು. ಅವರು ಹೇಳಿದ ಕೆಲಸ ಮಾಡಬೇಕು. ಊರಿನ ಸುದ್ದಿಯನ್ನು ಆಗಾಗ ಬರೆದು ತಿಳಿಸುತ್ತೇವೆ. ನೀವು ಏನೇನೂ ಯೋಚನೆ ಮಾಡಬಾರದು"

ಎಂದೆಲ್ಲಾ ಉಪದೇಶಿಸಿದರು. ಎಲ್ಲರಿಗೂ ಹಿರಿಯನಾದ ಮಹಾದೇವನು, "ಅಜ್ಜ, ನೀವು ನಮ್ಮ ಚಿಂತೆಯನ್ನು ಕಟ್ಟಿಕೊಳ್ಳಬೇಡಿ. ನಾವಿಲ್ಲಿ ಸುಖವಾಗಿ ಓದಿಕೊಂಡಿರುತ್ತೇವೆ"ಎಂದನು. ಆ ಮಕ್ಕಳು ಮಲಗಿ ನಿದ್ದೆಹೋದ ಬಳಿಕ, ಈಚಣ್ಣಯ್ಯನವರು ತಮ್ಮ ಸಂಚಿಯಿಂದ ಕೆಲವು ಆಭರಣಗಳನ್ನು ಹೊರಕ್ಕೆ ತೆಗೆದರು. "ಅಮ್ಮಾ, ಇವು ನಿಮ್ಮಲ್ಲಿ ಇರಲಿ. ಅವರು ನಗದಿಯಾಗಿ ಐವತ್ತು ರೂಪಾಯಿಯನ್ನು ಕೊಟ್ಟಿದ್ದಾರೆ. ಈ ಚಿನ್ನ ನಮ್ಮ ಮನೆಯದೇ. ಇದನ್ನು ನಿಮ್ಮದು ಎಂದೇ ನೀವು ತಿಳಿಯಬೇಕು. ಹಣಕ್ಕೆ ತೊಂದರೆಯಾದ ಕಾಲಕ್ಕೆ ಇದು ಇರಲಿ; ಅವರು ಮತ್ತೇನಾದರೂ ಹಣ ಆಗಾಗ ಕಳುಹಿಸಬಹುದು. ಕಾಗದದಲ್ಲಿ ಎಲ್ಲ ಸಂಗತಿಯನ್ನು ತಿಳಿಸಿದ್ದಾರಲ್ಲ. ನಾನೇನು ಹೆಚ್ಚಿಗೆ ಹೇಳುವುದು" ಎಂದರು.

ಸತ್ಯ ಹಣವನ್ನು ತೆಗೆದುಕೊಂಡಳು. ಚಿನ್ನಾಭರಣಗಳನ್ನು ಮುಟ್ಟುವುದಕ್ಕೆ ಮನಸ್ಸಾಗಲಿಲ್ಲ. "ಇವು ಯಾವುವೂ ಬೇಡ. ಇವು ನಿಮ್ಮವಳದ್ದಿರಬೇಕು. ಅದನ್ನು ಯಾರೂ ಮುಟ್ಟಬಾರದು" ಎಂದಳು.

"ಅವಳ ಮಗುವನ್ನೇ ಇಲ್ಲಿ ಬಿಟ್ಟು ಹೋಗುತ್ತಿದ್ದೇನಲ್ಲವೆ? ನಮಗೆ ತೊಂದರೆಯಾಗಿ ಸಮನಾಗಿ ಹಣ ಕಳುಹಿಸಲಿಕ್ಕಾಗದೆ ಹೋದರೆ, ನಿಮಗೂ ತೊಂದರೆಯಾಗಬಾರದು. ಮಕ್ಕಳ ಗಂಜಿಗಾಗಿ ನಿಮ್ಮ ಕೈ ಕಟ್ಟಬಾರದಲ್ಲ, ನೀವು ಅದನ್ನು ಉಪಯೋಗಿಸಿ, ಇಲ್ಲವೇ ಬಿಡಿ. ಧೈರ್ಯಕ್ಕಾದರೂ ಅವು ನಿಮ್ಮ ಹತ್ತಿರ ಇರಲಿ" ಎಂದು ಒತ್ತಾಯದಿಂದ ಅವಳ ಕೈಗೆ ಅವುಗಳನ್ನು ಕೊಟ್ಟು, ಮಲಗಿ ನಿದ್ದೆಹೋದರು. ಬೆಳಗಿನ ಜಾವಕ್ಕೆ ಅವಳೇ ಅವರನ್ನು ಎಚ್ಚರಿಸಿದಳು. ಕಿಟ್ಟಣ್ಣ ಅವರ ಬಳಿಯಲ್ಲಿ ನಿಶ್ಚಿಂತೆಯಿಂದ ಮಲಗಿದ್ದ. ಈಚಣ್ಣಯ್ಯ ಅನ್ನನ ಮುಖವನ್ನು ದೀಪದ ಬೆಳಕಿನಲ್ಲಿ ನೋಡಿದರು; ಮಗುವನ್ನು ಮುಟ್ಟುವುದಕ್ಕೂ ಅಂಜಿಕೆಯಾಯಿತು. "ಅಮ್ಮಾ, ನನ್ನ ಹಿರಿಯ ಹೆಂಡತಿಯಲ್ಲಿ ಮೂರು ಮಕ್ಕಳಿದ್ದುವು. ಅವಳೂ ಹೋದಳು. ಅವೂ ಹೋದುವು. ಇವಳು ಇದೊಂದನ್ನು ಕೊಟ್ಟಿದ್ದಾಳೆ. ದೇವರು ಕೊಟ್ಟ ಬದುಕು. ಉಳಿಸಿಕೊಳ್ಳಬೇಕೆಂಬ ಇಚ್ಛೆ. ಇನ್ನು ವರ್ಷವೋ! ಎರಡು ವರ್ಷವೋ. ಅದಲ್ಲಿಯ ತನಕ ನೀವು ಕಾಯ್ದುಕೊಳ್ಳಬೇಕು" ಎಂದರು. ಉಳಿದ ಕೂಸುಗಳನ್ನು ಅವರು ಮರೆಯಲಿಲ್ಲ. ಅವರ ಹಿರಿಯರ ವಿಚಾರಗಳನ್ನು ಇನ್ನಷ್ಟು ಹೇಳಿದರು. "ಎಲ್ಲ ತಮ್ಮ ರಕ್ಷಣೆ" ಎಂದರು

ಅವರು. "ಎಲ್ಲ ದೇವರ ರಕ್ಷಣೆ; ಮನುಷ್ಯರು ಏನುಮಾಡುತ್ತಾರೆ?" ಎಂದಳು. ಈಚಣ್ಣಯ್ಯ ಹೊರಡಲು ಎದ್ದು ನಿಂತರು. "ಅಮ್ಮಾ, ನಿಮ್ಮ ಯಜಮಾನರಿಗೇನಾದರೂ ಹೇಳಬೇಕೆ?" ಎಂದರು. ಆಕೆ ರಾತ್ರೆ ಕುಳಿತು ತಾನೂ ಶ್ಯಾಮನೂ ಬರೆದ ಎರಡು ಪತ್ರಗಳನ್ನು ಮಡಚಿ ಅವರ ಕೈಯಲ್ಲಿ ಕೊಟ್ಟು "ಅವರಿಗನ್ನಿ—ಯೋಚನೆ ಮಾಡುವುದು ಬೇಡ ಎಂದು. ಇವರನ್ನು ಹೇಗಾದರೂ ಮಾಡಿ ನೋಡಿಕೊಂಡೇವು. ಶ್ಯಾಮ ಬಂದಿದ್ದಾನೆ. ಯಾವುದಕ್ಕೂ 'ತೊಂದರೆಯಾಗದು" ಎಂದಳು.

ಈಚಣ್ಣಯ್ಯನವರು ನಸು ಕತ್ತಲಲ್ಲಿ ಕಿರಿಪದವನ್ನು ಬಿಟ್ಟರು. ಸಮನಾದ ಹಾದಿ ಸಿಗುವ ತನಕ ಶ್ಯಾಮ ಅವರ ಜತೆಗೆ ಹೋದ. ಅವರು ಮಂಗಳೂರನ್ನು ಸೇರಿ ಮುಂದೆ ಸಾಗರಕ್ಕೆ ಹೊರಟರು. ಇತ್ತ ಸತ್ಯಳ, ಅಸಂತೃಪ್ತಿಗೆ ಕೊನೆ ಬಂದಿತು. "ಅಯ್ಯೋ, ಅವರೆಲ್ಲರೂ ದೇಶಕ್ಕಾಗಿ ಕಷ್ಟಪಡುತ್ತಿರುವಾಗ, ತಾನು ಬರಿದೆ ಆಯುಷ್ಯ ಕಳೆಯುತ್ತಿದ್ದೆನಲ್ಲಾ" ಎಂಬ ಅವಳ ಚಿಂತೆಗೆ ಕೊನೆ ಬಂದಿತು. ಇನ್ನೇನು, ಕೈ ತುಂಬ ಕೆಲಸವಾಗಿದೆ. ಅವಳ ಮೈಗೂ ಕೆಲಸವೇ, ಮನಸ್ಸಿಗೂ ಕೆಲಸವೇ. ಅದಕ್ಕೆ ಪ್ರಥಮ ನಿದರ್ಶನವಾಗಿ ಬೆಳಕು ಹರಿಯುತ್ತಲೇ "ಅಪ್ಪಾ" ಎಂದು ಕಿಟ್ಟಣ್ಣ ಮಲಗಿದಲ್ಲಿಂದಲೇ ಕಿರುಚಿದನು. ಸತ್ಯ, ತನ್ನ ಮಗುವಿನ ಮೇಲಣ ಮೋಹಕ್ಕಿಂತ ಹೆಚ್ಚಿನ ಮೋಹದಿಂದ, ಅದರ ಬಳಿಗೆ ಹೋಗಿ ಅದನ್ನು ತಟ್ಟಿ ಮಲಗಿಸಿದಳು. ಶ್ಯಾಮ ಇನ್ನೂ ಬಂದಿರಲಿಲ್ಲ. ಶ್ಯಾಮ ಬಂದಾಗ ಮಕ್ಕಳು ಒಂದೊಂದಾಗಿ ಎದ್ದಿದ್ದುವು. ಕಿಟ್ಟಣ್ಣನಿಗೂ ಎಚ್ಚರವಾಯಿತು. ಆತನನ್ನು ಎತ್ತಿಕೊಂಡೇ ಶ್ಯಾಮ ಹೊರಕ್ಕೆ ಬಂದನು. "ನೋಡು, ಇಲ್ಲಿ ಚಂದ ಚಂದದ ಹಕ್ಕಿಗಳಿವೆ. ಅವು ಹಾಡುವುದು ಕೇಳುವುದಿಲ್ಲವೇ? ಗುಡ್ಡಕ್ಕೆ ಹೋಗುವ; ಅಲ್ಲಿ ದೊಡ್ಡ ಹೊಳೆ ಕಾಣಿಸುತ್ತದೆ. ಸಣ್ಣ ಸಣ್ಣ ದೋಣಿಗಳಿವೆ" ಎಂದು ಹಲವಾರು ಬಗೆಯಿಂದ ಅವನ ಮನಸ್ಸನ್ನು ಸೆಳೆಯಲು ಪ್ರಯತ್ನ ಮಾಡಿದನು. ಆದರೂ ಕಿಟ್ಟಣ್ಣ, ಆಚೀಚೆ ಏನೋ ಮರೆತವನಂತೆ, ಅರಸುತ್ತಿದ್ದ. ಬೆಳಗಿನ ಗಂಜಿಯ ಊಟದ ವೇಳೆಗೆ, "ಅಪ್ಪಾ" ಎಂದು ಇನ್ನೊಮ್ಮೆ ಧ್ವನಿ ಹೊಡಿದ. ಆ ಧ್ವನಿಯು ಸತ್ಯಳನ್ನು ಇರಿದಂತಾಯಿತು. ಮಹಾದೇವ ಮಗುವಿನ ಬಳಿಗೆ ಬಂದು "ಕಿಟ್ಟಣ್ಣ, ಅಪ್ಪ ನಿನಗೆ ಹೊಸ ಅಂಗಿಯನ್ನು ತರುವುದಕ್ಕೆ ಹೋಗಿದ್ದಾರೆ. ಈಗ ಬರು

ತ್ತಾರೆ. ತಡವಾಗಿ ಬಂದರೂ ಬರಲಿ, ನಾವು ಆಟವಾಡುವ” ಎಂದು ಹೇಳಿ ಹೇಗೋ ಅವನ ಮನಸ್ಸನ್ನು ಸೆಳೆದನು.

ಶ್ಯಾಮನೂ, ಸತ್ಯಳೂ ಸೇರಿ, “ಈ ಮಕ್ಕಳ ಬಿಡುವನ್ನು ತುಂಬಿಸುವುದರ ಸಲುವಾಗಿ ಏನಾದರೂ ಆಟವನ್ನೋ, ಉದ್ಯೋಗವನ್ನೋ ಕಲ್ಪಿಸಬೇಕು. ಇಲ್ಲವಾದರೆ ಅವರಿಗೆ ಮನೆಯ ಯೋಚನೆ ಮೇಲಿಂದ ಮೇಲೆ ಉಂಟಾದೀತು” ಎಂದುಕೊಂಡರು. ಗಂಗೆ ಶಾರದೆಯರು ಸೇರಿ ಸತ್ಯಳ ಬೆನ್ನ ಹಿಂದೆಯೇ ಸುಳಿದಾಡಿದರು. ತರಕಾರಿ ಹೆಚ್ಚುವುದಕ್ಕೆ, ಕಾಯಿ ತುರಿಯುವುದಕ್ಕೆ, ಒಲೆ ಉರಿಸುವುದಕ್ಕೆ ಅವಳಿಗೆ ನೆರವಾದರು. ಚಂದಪ್ಪ ಶ್ಯಾಮಣ್ಣನನ್ನು—ಉಳಿ, ಚೂರಿ, ಕಡಚಲು ತರಿಸಿಕೊಡಲು ಕೇಳಿದ. ಶ್ಯಾಮ “ಈಗ ನಾವು ಹೊಳೆಯ ಬುಡಕ್ಕೆ ಹೋಗಿ ಬರುವ. ಅಲ್ಲಿ ತುಂಬ ದೋರೆಯ ಹುಲ್ಲಿದೆ. ಅದನ್ನು ಕತ್ತರಿಸಿ ತಂದು, ಬಿಸಿಲಿಗೆ ಹಾಕಿದರೆ ಚಾಪೆ ಮಾಡಲು ಬರುತ್ತದೆ” ಎಂದು ಅವರಲ್ಲಿ ಹಿರಿಯರನ್ನು ಕರೆದುಕೊಂಡು ಹೊರಟನು. ಜತೆಗೇನೆ ಇರಲೆಂದು, ಶ್ಯಾಮ ಚಂದ್ರನನ್ನು ಎತ್ತಿಕೊಂಡ. ಮಹಾದೇವ ಕಿಟ್ಟಣ್ಣನನ್ನು ಎತ್ತಿಕೊಂಡನು. ಅವರೆಲ್ಲರು ನಗು ನಗುತ್ತ ಹೊಳೆಯ ಬುಡಕ್ಕೆ ಹೋಗಿ ಬಂದರು. ದೋರೆಯ ಹುಲ್ಲನ್ನು ಕತ್ತರಿಸಿ ತಂದರು. ಬಿಸಿಲಿಗೆ ಅದನ್ನು ಹರವಿದರು.

ಹೀಗೆ ಮೂರು ನಾಲ್ಕು ದಿವಸಗಳಲ್ಲಿ-ಚಾಪೆ ಮಾಡುವ ಕೆಲಸ, ತೋಟಕ್ಕೆ ಹೋಗಿಬರುವ ಕೆಲಸ, ಸ್ವಲ್ಪ, ಸ್ವಲ್ಪ ಓದು ಬರಹ, ಮಕ್ಕಳೊಡನೆ ಮಣ್ಣಿನ ಆಟ, ಮನೆ ಕಟ್ಟುವ ಆಟ ಇಂಥವುಗಳಿಂದ ಅವರ ಬಿಡುವನ್ನು ತುಂಬಿಸಿದನು. ಸಂಜೆಯಾಗುತ್ತಲೇ ಅವರಿಬ್ಬರು ಮಕ್ಕಳಿಗೆ ಹಾಡು ಹೇಳಿ ಕೊಡುತ್ತಾರೆ, ಒಗಟನ್ನು ಕೇಳುತ್ತಾರೆ, ಕತೆಗಳನ್ನು ಹೇಳುತ್ತಾರೆ. ಮಕ್ಕಳಿಗೆ ಮನೆಯ ನೆನಪು ಆಗದಂತೆ ತುಂಬ ಎಚ್ಚರ ವಹಿಸುತ್ತಾರೆ. ಕಿಟ್ಟಣ್ಣ ಮಾತ್ರ, ಸಂಜೆ ದೀಪ ಹೊತ್ತಿಸುವ ವೇಳೆ ಬಂತೆಂದರೆ; ಗೂಡು ಸೇರುವ ಹಕ್ಕಿಯಂತೆ, ಮನೆಯ ನೆನಪಾಗಿ “ಅಪ್ಪಾ, ಅಮ್ಮಾ” ಎಂದು ಅಳುತ್ತಾನೆ. ಅವನಿಗೆ ಊಟಮಾಡಿಸಿ, ಸವಿಕತೆಗಳಿಂದ ಅವನ ಮನಸ್ಸನ್ನು ರಂಜಿಸಿ, ಮಗ್ಗುಲಲ್ಲಿ ಮಲಗಿಸಿಕೊಂಡು ನಿದ್ರೆ ಮಾಡಿಸುವ ಕೆಲಸ ಶ್ಯಾಮನದು. ಆ ವಾರದಲ್ಲೇ ಒಂದು ದಿನ ಶ್ಯಾಮ ಮಹಾದೇವನನ್ನು ಕರೆದುಕೊಂಡು ಮಂಗಳೂರಿಗೆ ಹೋಗಬೇಕಾಯಿತು. ಮಕ್ಕಳ

ಸಲುವಾಗಿ ಅಗ್ಗದ ಅರಿವೆಗಳನ್ನು ತರುವುದಕ್ಕೆಂದು. ಅಂದಾಜಿನ ಮೇಲೆ ಅಂಗಿ ಹೊಲಿಸಿ ತೆಗೆದುಕೊಂಡು ಬಾ ಎಂದು ಸತ್ಯ ಹೇಳಿದ್ದಳು.

"ಖಾದಿಯಿಂದಲ್ಲವೇ?"

"ಖಾದಿಗೆ ಕೊಡುವಷ್ಟು ದುಡ್ಡು ಇದೆಯೇ ಮಗು? ಕಡಿಮೆ ಕ್ರಯದ ಮಿಲ್ ಬಟ್ಟೆ ಸಾಕು. ಸ್ವದೇಶಿಯಾದರೆ ಸಾಕು" ಎಂದಳು ಸತ್ಯ. ಮಂಗಳೂರಿಗೆ ಹೋಗುವಾಗ ಹಾದಿಯಲ್ಲಿ ಉತ್ಸಾಹಿ ಮಹಾದೇವನಿಗೂ, ಶ್ಯಾಮನಿಗೂ ಬಟ್ಟೆಯ ವಿಷಯದಲ್ಲಿ ಚರ್ಚೆಯಾಯಿತು. ಆತ-ತನಗೆ ಎರಡು ಮಿಲ್ ಅಂಗಿಗಳ ಬದಲು, ಒಂದೇ ಖಾದಿ ಅಂಗಿ ಸಾಕು ಎಂದು ಹಟ ಹಿಡಿದನು. ಬಟ್ಟೆಯನ್ನು ಕೊಂಡಾಯಿತು. ಬೇರೆ ಬಟ್ಟೆಗಳನ್ನು ಕೊಂಡು ಅಲ್ಲಿಯೇ ನಿಂತು, ಅಂದಾಜಿನ ಅಳತೆಯ ಮೇಲೆ, ಅವನ್ನು ಹೊಲಿಸಿಕೊಂಡು ಸಂಜೆಯಾಗುವಾಗ ಮನೆಗೆ ಬಂದರು. ಅವು ಅಂದಾಜಿನ ಅಳತೆಯಾದುದರಿಂದ ಮಕ್ಕಳಿಗೆ ಅಷ್ಟು ಒಪ್ಪುತ್ತಿದ್ದವೋ, ಇಲ್ಲವೋ ಯಾರು ಬಲ್ಲ? ಕಿಟ್ಟಣ್ಣನಿಗೆ ಒಂದು ನಿಲುವಂಗಿ ಮಾಡಿಸಿ ತಂದಿದ್ದರು. ಅದನ್ನು ತೊಟ್ಟು ಆತ ಕುಣಿದಾಡಿದ. "ನನಗೆ ಎಲ್ಲರಿಗಿಂತ ದೊಡ್ಡ ಅಂಗಿ" ಎಂದು ಹಿಗ್ಗಿ ಓಡಾಡಿದ. ಒಂದು ವಾರದ ತನಕ ಅವನಿಗೆ ತುಂಬ ಕಷ್ಟವಾಯಿತು. ತಾಯಿಯ ನೆನಪು ಆಗಾಗ ಆಗುತ್ತಲಿತ್ತು. ಬಲು ಪ್ರಯಾಸದಿಂದ ಅದನ್ನು ಮರೆಯುವಂತೆ ಮಾಡಿದರು. ನಿಜಕ್ಕೂ ಮರವೆ ಆಯಿತೋ, ಇಲ್ಲವೋ, ಯಾರು ಬಲ್ಲರು? ತಂದೆತಾಯಿಗಳಿಬ್ಬರೂ ತನ್ನನ್ನು ವಂಚಿಸಿ ಹೋದರು-ಎಂದು ಆತ ತಿಳಿದಿರಲೂಬಹುದು. ಅವರ ನೆನಪು ಬಂದಾಗ ಮೂಕನಾಗುತ್ತಾನೆ; ಒಮ್ಮೊಮ್ಮೆ ಹಟಮಾರಿಯಾಗುತ್ತಾನೆ. ನೆನಪು ಮರವೆಯಾದರೆ ಎಲ್ಲರೊಡನೆ ಸೇರಿ ಆಟವಾಡುತ್ತಾನೆ. ಸಮವಯಸ್ಸಿನ ಚಂದ್ರನಿಗೂ ಅವನಿಗೂ ತುಂಬ ಗೆಳೆತನ. ಅವರಿಬ್ಬರ ಎಣೆ ತಪ್ಪುವುದೇ ಇಲ್ಲ.

ಹುಡುಗರು ತಾವು ತಂದು ಒಣಗಿಸಿದ ದೋರೆ ಹುಲ್ಲನ್ನು ನೆಯಿದು ಚಾಪೆ ಮಾಡಿದರು. ಹೊತ್ತು ಕಳೆಯುವುದಕ್ಕೆಂದು ಮುಂಡಕದ ಓಲೆಯನ್ನು ತಂದು ಸೀಳಿ ಚಾಪೆ ಹೆಣೆದರು. ಅದರದೇ ದಿಂಬನ್ನು ಮಾಡಿಕೊಂಡರು. ಚಂದಪ್ಪ ಶ್ಯಾಮನನ್ನು ಕಾಡಿ, ಬೇಡಿ—ಸಣ್ಣ ಕಡಚಲು, ಕವಾನು, ಉಳಿ ಎಲ್ಲವನ್ನು ಮಾಡಿಸಿಕೊಂಡು ಬಂದ. ಅಲ್ಲಿಂದ ರಂಗಾಣಿ, ಗಿರಿಕಿಟ್ಟಿ,

ಬೊಗರಿ, ಒಂದಲ್ಲೊಂದು ಆಟದ ಒಡವೆಯನ್ನು ಆತ ಮಾಡತೊಡಗಿದ. ಅವನ ಗೆಳೆಯರು ಆ ಕೆಲಸವನ್ನು ಕಲಿತರು. ಅಟ್ಟದಿಂದ ಆಶ್ರಮದ ರಾಟೆಗಳು ಕೆಳಕ್ಕಿಳಿದುವು. ಮನೆಯಲ್ಲಿ ನೂಲುವ ರಾಟೆ ಸದಾ ಸಪ್ಪು ಮಾಡುವಂತಾಯಿತು. ಹುಡುಗರು ಶ್ಯಾಮನ ಹಿಂದೆ ಗಿಡಕ್ಕೆ ನೀರು ಹೊರುತ್ತಾರೆ, ತರಗೆಲೆ ಗುಡಿಸುತ್ತಾರೆ, ಕಟ್ಟಿಗೆ ಶೇಖರಿಸುತ್ತಾರೆ; ಎಲ್ಲ ಬಗೆಯ ಕೆಲಸಗಳಲ್ಲೂ ನೆರವಾಗುತ್ತಾರೆ. ಗಂಗೆ ಶಾರದೆಯರಿಗೆ ಅಕ್ಕ ಸತ್ಯ ಸಿಕ್ಕಿದ್ದು ಒಂದು ಗಂಟು ಸಿಕ್ಕಿದಂತಾಯಿತು. ಸತ್ಯಳ ಪಾಲಿಗೆ—ಮನೆಯಲ್ಲಿ ಬಿಟ್ಟು ಬಂದ ತಂಗಿಯರನ್ನು ಕೂಡಿದಂತಾಯಿತು. ಅವಳ ಬಳಗ ಬೆಳೆಯಿತು; ಮನಸ್ಸೂ ತುಂಬಿತು. ಜತೆಗೆ ಹೊಣೆಗಾರಿಕೆಯ ಭಾರ ಹೊಳೆಯುತ್ತ ಬಂದಿತು. "ಇಷ್ಟೊಂದು ಮಕ್ಕಳಿದ್ದಾರೆ—ಒಂದಾದರೂ ಹಸುವನ್ನಾಗಲಿ ಒಳ್ಳೆಯ ಒಂದು ಎಮ್ಮೆಯನ್ನಾಗಲೀ ಕೊಳ್ಳಬೇಡವೇ? ಅನುಕೂಲವಂತರ ಮಕ್ಕಳು, ದುರದೃಷ್ಟದಿಂದ ಇಲ್ಲಿಗೆ ಬಂದಿರುತ್ತಾರೆ. ಹಾಲು ಮಜ್ಜಿಗೆಯಿಲ್ಲದೆ ಒಣಗಬಾರದಲ್ಲ" ಎಂದು ಯೋಚಿಸುತ್ತಾಳೆ. ಇತ್ತ ಒಂದೊಂದು ಹನಿ ಮಳೆಯೂ ಬರತೊಡಗಿತು. ಬೇಸಾಯ ಪ್ರಾರಂಭವಾಗಬೇಕು. ಆಳು, ಕಲಲನ ಪರಿವಾರ ಕೆಲಸಕ್ಕಿದೆ. ಬೀಜಕ್ಕೆ ಇರಿಸಿದ ಬತ್ತವಿದೆ. ಆದರೆ ಕೂಲಿಗಿಟ್ಟ ಅಕ್ಕಿಯು ಮಾತ್ರ ಉಂಡು ಮುಗಿಯಿತು. ಮಳೆಗಾಲ ಇಷ್ಟೆಲ್ಲ ಹೊಟ್ಟೆಗಳಿಗೂ, ಕೂಲಿಗೂ, ಅಕ್ಕಿಯನ್ನು ತರಬೇಕು. ಅವರು ಕೊಟ್ಟ ಐವತ್ತು ರೂಪಾಯಿಗಳಲ್ಲಿ ಅರಿವೆ, ಹೊಲಿಗೆ ಪುಸ್ತಕ, ಸ್ಲೇಟು, ಸಾಬೂನುಗಳೆಂದು, ಇಪ್ಪತ್ತು ರೂಪಾಯಿಗಳೇ ಹೋದುವು. ಉಳಿದ ರೂಪಾಯಿಗಳಿಂದ ಆರೆಂಟು ಮುಡಿ ಅಕ್ಕಿ ದೊರೆಯಬಹುದಷ್ಟೆ. 'ಅನಂತರಾಮುನಿಗೆ ಪತ್ರ ಬರೆದು ಹಣ ತರಿಸಿಕೊಳ್ಳಲೇ' ಎಂಬ ಯೋಚನೆ ಸತ್ಯಳಿಗುಂಟಾಯಿತು.

ಇತ್ತ ರಾಧಾಕೃಷ್ಣನಿಂದ ಅವಳಿಗೆ ಪತ್ರಗಳೇನೂ ಬಂದಿರಲಿಲ್ಲ. ಹಿಂದೆ ಬಂದ ಕಾಗದಗಳನ್ನೇ ಓದುವುದು ಒಂದು ಸಂತೋಷ. ಊರು ಸೇರಿದ ಮೇಲೆ ಈಚಣ್ಣಯ್ಯನವರೂ ಒಂದು ಪತ್ರ ಬರೆದಿದ್ದಾರೆ: "ಮಕ್ಕಳ ಕ್ಷೇಮಕ್ಕೆ ಬರೆಯಿರಿ. ನಿಮ್ಮ ಯಜಮಾನರು ಇನ್ನೂ ಕಾಣಸಿಗಬೇಕಷ್ಟೆ. ನಿಮ್ಮ ಉಪಕಾರ, ಋಣಗಳನ್ನು ನಾನು ಎಂದಿಗೂ ಮರೆಯುವಂತಿಲ್ಲ." ಎಂದು ಬರೆದಿದ್ದರು. ಅವರಂತೆ ತನ್ನ ಪತಿಯಾದರೂ ಕಾಲ ಕಾಲಕ್ಕೆ ಪತ್ರ

ಬರೆಯುತ್ತಿದ್ದರೆ, ಅವಳ ಯೋಚನೆಗಳಾದರೂ ಕಡಿಮೆಯಾಗುತ್ತಿದ್ದುವು. ಹಿಂದೆ ಬಂದ ಪತ್ರದಲ್ಲಿ ಸಹಾಯ ಬೇಕಾದರೆ ಇಂತಿಂಥವರನ್ನು ಕೇಳು ಎಂದು ಬರೆದ ನೆನಪಾಯಿತು. ಆ ಪಟ್ಟಿಯನ್ನು ಶ್ಯಾಮನ ಕೈಮೇಲಿರಿಸಿದಳು. ಮಂಗಳೂರಿನ ಕೆಲವೊಂದು ಜನರ ಹೆಸರು ಅದರಲ್ಲಿತ್ತು. ಶ್ಯಾಮು ಅದನ್ನು ಓದಿ "ಹಣ ಇಲ್ಲದೇ ಹೋದರೂ ಚಿಂತೆ ಇಲ್ಲ, ಎಮ್ಮೆ ಬತ್ತಿ ಹೋಗಿ ಮೋಸವಾಗಿದೆ. ಯಾರಾದರೂ ಧರ್ಮಾರ್ಥವಾಗಿ ಒಂದು ಎಮ್ಮೆ ಕೊಟ್ಟಿದ್ದರೆ ತುಂಬಾ ಉಪಕಾರವಾಗುತ್ತಿತ್ತು" ಎಂದನು.

ಆ ಮಾತು ಮುಂದುವರಿಯುತ್ತ "ಅಮ್ಮಾ, ಈ ಹೆಸರಿನವರೆಲ್ಲರನ್ನು ನೋಡಿ ಬರುತ್ತೇನೆ. ನನಗೆ ಯಾರ ಗುರುತವೂ ಇಲ್ಲ. ಆನರೆ ಜೈಲಿನಿಂದ ಪ್ರಭುದೇವರು ಹಿಂದಿರುಗಿರಬೇಕು. ಅವರನ್ನು ಕರೆದುಕೊಂಡು ಎಲ್ಲರನ್ನೂ ನೋಡುತ್ತೇನೆ. ಇವುಗಳ ಪೈಕಿ ಒಂದು ಹೆಸರು ಮಾತ್ರ ಗೊತ್ತಿದೆ—ನಂದ ಡಾಕ್ಟರರದ್ದು. ಆ ಮಗು ಸತ್ತದ್ದು ಅವರ ಆಸ್ಪತ್ರೆಯಲ್ಲಿ ಅಲ್ಲವೇ? ಅಣ್ಣ ಆಗ ಅವರ ಮೇಲೆ ಕಾದು ಕೆಂಡವಾಗಿದ್ದ. ಈಗೇತಕ್ಕೆ ಅವರನ್ನು ಕಾಣು ಎಂದು ಬರೆದನೋ ತಿಳಿಯದು" ಎಂದ.

ಮರುದಿನ ಶ್ಯಾಮು ಮನೆಯ ಕೆಲಸವನ್ನು ಒಬ್ಬೊಬ್ಬರಿಗೆ ಹಂಚಿ ಕೊಟ್ಟನು. "ಅಮ್ಮಾ, ಇವತ್ತು ರಾತ್ರಿಯೇ ಬರಲಿಕ್ಕೆ ಆಗುತ್ತದೆಯೋ ಇಲ್ಲವೋ, ಅವರೆಲ್ಲರನ್ನೂ ಒಂದು ಸಾರಿ ಕಂಡು ಬರುವುದು ಒಳ್ಳೆಯದು. ಹಾಗೆ ಕಂಡು, ನಾಳೆ ಸಂಜೆ ಬಂದೇ ಬರುತ್ತೇನೆ" ಎಂದನು. "ಹೌದು ಮಗು, ಮಳೆ ಬಿದ್ದ ಮೇಲೆ ಓಡಾಟ ಕಷ್ಟ. ಮಳೆ ಎಂದೂ ಶುರುವಾಗಬಹುದು" ಎಂದಳು. ಮಳೆಯ ನೆನಪಾಗಲು ಮಕ್ಕಳ ವಿಚಾರ ಹೊಳೆದು "ಮಗು ನೀನು ಬರುವಾಗ ಒಂದು ಸೀಸೆ ಅಮೃತಾಂಜನ, ನೀಲಗಿರಿ ಎಣ್ಣೆ, ಸ್ವಲ್ಪ ಕ್ವಿನಿನ್ ಮಾತ್ರೆ ಮರೆಯದೆ ತಾ. ನೆಗಡಿ ದಿವಸಗಳು ಬರಬಹುದು. ಅಲ್ಲದೆ ಈ ಮಕ್ಕಳು ಘಟ್ಟದ ಪ್ರಾಂತದವು. ಚಳಿಜ್ವರ ಕಟ್ಟಿಕೊಂಡು ಬಂದಿರಲೂ ಬಹುದು. ನಮ್ಮಿಂದಾದ ಮುಂಜಾಗ್ರತೆ ಮಾಡುವುದು ಒಳ್ಳೆಯದು" ಎಂದು ಹೇಳಿ ಕಳುಹಿಸಿದಳು.

ಶ್ಯಾಮು ಬಹಳ ಉತ್ಸಾಹದಿಂದಲೇ ಹೊರಟ. ಮೊದಲಿಗೆ ಡಾ॥ ನಂದರ ದರ್ಶನ ಮಾಡುತ್ತೇನೆಂದುಕೊಂಡನು. ಈ ಚಳವಳದ ವೇಳೆಯಲ್ಲಿ, ಮುಂದಾಳಾಗಿ ಅಲ್ಲವಾದರೂ, ಬೆಂಗಡೆಯಿಂದ ಅವರು ತುಂಬು

ಕೆಲಸ ಮಾಡಿದ್ದಾರೆ, ಸೆರೆ ಮನೆ ಸೇರಿದ ಜನರಿಗೆ ನೆರವು ಕೊಟ್ಟಿದ್ದಾರೆ— ಎಂಬ ವದಂತಿಯನ್ನು ಕೇಳಿದ್ದ. ಹೀಗೆಂದು ಅವರನ್ನು ಕಾಣಲು ತುಂಬ ಆಸೆಯಿಂದ ಹೊರಟನು. ಈತ ಅವರ ಮನೆಯನ್ನು ಸೇರುವಾಗ, ಅವರು ಆಸ್ಪತ್ರೆಗೆ ಹೋಗಿದ್ದರು. ಅಲ್ಲಿಗೆ ಹೋದಾಗ, ಮದ್ದಿನ ಕಾರ್ಖಾನೆಗೆ ಹೋಗಿದ್ದರು. ಅಲ್ಲಿಗೆ ಹೋದರೆ, ಹೆರಿಗೆ ಆಸ್ಪತ್ರೆಯಲ್ಲಿದ್ದಾರೆಂಬ ವಾರ್ತೆ ಸಿಕ್ಕಿತು. ಹೀಗೆ ದಿನವನ್ನೆಲ್ಲ ಓಡಾಟದಲ್ಲಿ ಕಳೆದು, ಹಸಿದು, ಕತ್ತಲೆಯ ವೇಳೆಗೆ ಅವರ ಮನೆಯ ಜಗುಲಿಯನ್ನು ಸೇರಿದನು. ರಾತ್ರಿ ಒಂಬತ್ತು ಗಂಟೆಗೆ ಅವರ ಕಾರು ಬಂದಿತು. ಅವರು ಮನೆಯೊಳಕ್ಕೆ ಹೋದರು. ಊಟಮಾಡಿ ಹೊರಕ್ಕೆ ಬಂದ ಮೇಲೆ "ಯಾರು ನೀನು, ಏಕೆ ಬಂದೆ"? ಎಂಬುದನ್ನು ವಿಚಾರಿಸಿದರು. ಶ್ಯಾಮು, ರಾಧಾಕೃಷ್ಣನ ಪತ್ರವನ್ನು ತೋರಿಸಿದನು. ಅವರು ಅವರಿಗೆ, ಆ ಕಾಗದವೇ ಅರ್ಥವಾಗದಂತೆ ತೋರಿಸಿಕೊಂಡರು. ಈತ ಮೊದಲಿನಿಂದ ಪ್ರಾರಂಭಿಸಬೇಕಾಯಿತು— 'ನಾನೂ ಸೆರೆ ಮನೆಯಿಂದ ಮರಳಿದವನು—ರಾಧಾಕೃಷ್ಣ ಉತ್ತರ ಕನ್ನಡ ಜಿಲ್ಲೆಯಲ್ಲಿ ಸತ್ಯಾಗ್ರಹ ನಡೆಯಿಸುತ್ತಿದ್ದಾನೆ, ಅಲ್ಲಿಂದ ಕೆಲವು ನಿರಾಶ್ರಿತರ ಮಕ್ಕಳನ್ನು ಇಲ್ಲಿಗೆ ಕಳುಹಿದ್ದಾನೆ, ನಿಮ್ಮಂತಹ ಶ್ರೀಮಂತರು, ಅವರ ಪಾಲಿಗೆ ಸಹಾಯರಾಗಬೇಕು' ಎಂದು ಅರ್ಧ ತಾಸು ಬಿನ್ನವಿಸಿಕೊಂಡ. ಅವರು "ಅದಕ್ಕೆಲ್ಲ ಫಂಡ್ಸ್ ಕಾಂಗ್ರೆಸ್ಸಿನಲ್ಲಿಲ್ಲ. ಧನಾಭಾವದಿಂದ ನಮ್ಮ ಜಿಲ್ಲೆಯಿಂದ ಜೈಲಿಗೆ ಹೋದವರ ಕುಟುಂಬಕ್ಕೇನೇ ನಮ್ಮಿಂದ ಸಹಾಯ ಮಾಡುವುದಾಗಲಿಲ್ಲ. ಹಾಗಾಗಿ ಇಲ್ಲಿನ ಚಳವಳವೇ ನಿಂತಿತು. ಇದೋ ಐದು ರೂಪಾಯಿ ಕೊಡುತ್ತಿದ್ದೇನೆ. ಇದು ನನ್ನ ಸ್ವಂತದ ಹಣ. ನನ್ನಲ್ಲಿ ಯಾವ ಫಂಡೂ ಇಲ್ಲ. ಎಲ್ಲ ಕರಕರೆಯಿಂದ ನಾನು ದೂರವಾಗಿದ್ದೇನೆ. ಇಷ್ಟನ್ನು ತೆಗೆದುಕೋ, ಅದನ್ನು ಕಾಫಿ ಹೊಟೇಲಿಗೆ ಕೊಡದೆ............" ಎಂದು ನುಡಿದು ಒಳಕ್ಕೆ ಹೋದರು. ಶ್ಯಾಮುನ ಮುಖ ಸಪ್ಪಗಾಯಿತು. "ನಾನು ನನಗಾಗಿ ಕೇಳುತ್ತಲಿಲ್ಲ. ತಮ್ಮಂತಹ ದೊಡ್ಡವರು ಹಾಗೆನ್ನಬಾರದು. ತಮಗೆ ನಂಬುಗೆ ಇಲ್ಲವಾದರೆ ಕೊಡಬೇಕಿಲ್ಲ. ಸಂತೋಷವಿದ್ದಲ್ಲಿ ಮಾತ್ರ" ಎಂದು ಹೇಳಬೇಕೆನ್ನುವಷ್ಟರಲ್ಲಿ, "ಆಗಲಿ, ನೀನು ಹೋಗು. ನನಗೆ ಬಹಳ ಕೆಲಸವಿದೆ" ಎಂದು ಹೇಳಿ, ಒಂದು ಉಪದ್ವ್ಯಾಪನಿವಾರಿಸಿಕೊಂಡವರಂತೆ ಒಳಕ್ಕೆ ಹೋದರು. ಶ್ಯಾಮು ಮನೆಯ ಗೇಟಿನಿಂದ

ಹೊರಕ್ಕೆ ಬಂದನು; ಕತ್ತಲು ಏರಿತ್ತು. ಅವನ ಊಟ ಆಗಿರಲಿಲ್ಲ. ಏನು ಮಾಡಲಿ—ಎಂದು ಒಂದು ಹೊಟೇಲಿಗೆ ಹೋದ. ಒಳಕ್ಕೆ ಹೊಗ್ಗಲು ನಾಚಿಕೆಯಾಯಿತು. "ಕಾಫಿ ಹೊಟೇಲಿಗೆ ಹಾಕದೆ...." ಎಂದ ಅವರ ಮಾತುಗಳು ನೆನಪಾದುವು. ಅಲ್ಲಿಂದ ಹಿಂದೆ ಬಂದು, ಒಂದಾಣೆಯ ಬಾಳೆ ಹಣ್ಣುಗಳನ್ನು ಕೊಂಡು, ಯಾವುದೋ ಒಂದು ಅಂಗಡಿಯ ಜಗುಲಿಯ ಮೇಲೆ ಕುಳಿತು ತಿಂದನು. ಅಲ್ಲಿಯೇ ಸೊಳ್ಳೆಗಳ ಕಡಿತ ಅನುಭವಿಸುತ್ತ, ರಾತ್ರಿಯನ್ನು ಕಳೆದನು. ಬೆಳಕು ಹರಿಯುವ ಮುಂಚೆ ಎದ್ದು ಕದ್ರಿಗೆ ಹೋಗಿ, ಮುಖಮಜ್ಜನಗಳನ್ನು ಮುಗಿಸಿಕೊಂಡು, ಸ್ನಾನವನ್ನು ಮಾಡಿ, ತಿರುಗಿ ಪೇಟೆಗೆ ಭಿಕ್ಷಾಟನೆಗೆ ಹೊರಟನು. ಬರಿದೆ ಗೊತ್ತು ಗುರುತಿಲ್ಲದೆ ಅಲೆಯುವುದಕ್ಕಿಂತ, ಇಷ್ಟರಲ್ಲಿ ಮರಳಿ ಬಂದಿರಬೇಕಾದ, ಪ್ರಭುದೇವನನ್ನು ಹುಡುಕಿ ಹೋಗುವುದು ಒಳ್ಳೆಯದೆಂದು ಯೋಚಿಸಿ, ಅವನ ಕಚೇರಿಯನ್ನು ವಿಚಾರಿಸಿಕೊಂಡು ಹೋದನು.

ಕಚೇರಿಯಲ್ಲಿ ಪ್ರಭುದೇವ ಕುಳಿತಿದ್ದ. ಸುತ್ತಲೂ ನಾಲ್ಕಾರು ಗೆಳೆಯರು ಕುಳಿತಿದ್ದರು. ಒಂಟಿಯಾಗಿರುವುದಕ್ಕೆ ಅವನಿಗೆ ಸಾಧ್ಯವೇ ಇರಲಿಲ್ಲ. ಆ ಗೆಳೆಯರೊಡನೆ "ಜೈಲಿನಲ್ಲಿ ಹಾಗೆ ಮಾಡಿದೆವು, ಹೀಗೆ ಮಾಡಿದೆವು—ಜೈಲುವಾರ್ಡರರು ನಮ್ಮನ್ನು ನೋಡಿ ಹೆದರಿ ಸಾಯುತ್ತಿದ್ದರು" ಎಂದು ಹೆಗ್ಗಳಿಕೆ ಕೊಚ್ಚುತ್ತಿದ್ದ. ಆಗ ಶ್ಯಾಮ ಅಲ್ಲಿಗೆ ಕಾಲಿರಿಸಿದ. ಅವನನ್ನು ಕಾಣುತ್ತಲೇ, "ಹುಲೋ, ಎಲ್ಲೋ ಕಂಡ ನೆನಪು. ಎಲ್ಲಿ?" ಎಂದು ಕೇಳುತ್ತಲೇ ಈತ "ಕನ್ನಾನೂರಿನಲ್ಲಿ" ಎಂದ. "ರೈಟ್" ಎಂದು ಅವನನ್ನು ಕುಳಿತಿರಲು ಹೇಳಿ, ತಿರುಗಿ, ಬಾಯ ಬಾಡಾಯಿಗಳಿಗೆ ಆರಂಭ ಮಾಡಿದನು. ಈತ "ನಾನು ನಿಮ್ಮ ಹತ್ತಿರವೇ ಒಂದು ಕೆಲಸಕ್ಕೆ ಬಂದಿದ್ದೇನೆ" ಎಂದನು.

"ಹೇಳಿ ಬಿಡಿರಲ್ಲಾ"

"ಇಲ್ಲ; ಸ್ವಲ್ಪ, ಖಾಸಗಿಯಿಂದ ಆಡಬೇಕಾದ ಮಾತು" ಎಂದುವರಿಂದ, ಅವನನ್ನು ಕರೆದುಕೊಂಡು ಅಲ್ಲಿಯೇ ಒಂದು ಮೂಲೆಯನ್ನು ಸೇರಿದನು. ಟೆಲಿಫೋನ್ ಸಂಭಾಷಣೆಯಂತಿತ್ತು ಅದರ ನೋಟ. ಅಳುಕಿ, ಅಳುಕಿ ರಹಸ್ಯ ಕಾದಿಡಲು, ಶ್ಯಾಮ ಕಿವಿಯಲ್ಲಿ ಮಾತಾಡಿದರೆ, ಇವನು ಸ್ಫೂರ್ತಿಯಿಂದ ಗಟ್ಟಿಯಾಗಿ "ಹಾಗೋ, ಓ. ಯಸ್. ಡಾ। ನಂದ

ರಲ್ಲಿ ಹೋಗುವ" ಎಂದು ದಬಾಯಿಸುತ್ತಲೇ ಇದ್ದನು. ನಂದರ ವಿಚಾರವನ್ನು ಶ್ಯಾಮ ತಿಳಿಸುತ್ತಲೇ "ಹಾಗಂದರೇ ಅವರು? ಅನ್ನುವ ಜನವೇ; ಅಂದಾರು" ಎಂದು ಈಚೆಗೆ ಸರಿದು ಬಂದನು. ಆ ಮೇಲೆ ಎಲ್ಲರನ್ನೂ ಉದ್ದೇಶಿಸುತ್ತ:

"ಇದು ಎರಡನೆಯ ನಿದರ್ಶನ. ನನ್ನ ಮೊದಲಿನ ಅನುಭವವು ಹಾಗೇನೇ ಇತ್ತು. ನಂದರು ಮರೆಯಲ್ಲಿದ್ದು, ಜನಗಳ-ಬೆನ್ನು ಚಪ್ಪರಿಸಿ ನೀವು ಮುಂದೆ ಹೋಗಿ, ನಾನು ಸಹಾಯಕ್ಕೆ ಇದ್ದೇನೆ" ಎಂದು ಜನರ ಉದ್ಯೋಗ ತಪ್ಪಿಸಿ ಜೈಲಿಗೆ ಕಳುಹಿಸಿದ್ದೇನೋ ಸರಿಯೆ. ಆದರೆ ಹೋದವರ ಕುಟುಂಬಕ್ಕೆ ಒಂದು ಬಿಡುಗಾಸನ್ನೂ ಸಹಾಯ ಮಾಡಲಿಲ್ಲ. ನನಗೇನೇ ಅಂದರಲ್ಲ—ನನ್ನ ಪತ್ರಿಕೆಯನ್ನು ತಿರುಗಿ ಹೊರಡಿಸಬೇಕೆಂದಾಗ-ನನ್ನ ಹಣವೆಲ್ಲ ಇದರಲ್ಲಿ, ಅದರಲ್ಲಿ ಸಿಕ್ಕಿಬಿದ್ದಿದೆ-ಎಂದು. ನಾನು ಇವರ ತಂದೆಗೆ ಬುದ್ಧಿ ಕಲಿಸಿಯೇನು" ಎಂದು ನಂದರ ಮೇಲಿನ ಸಿಟ್ಟನ್ನು ಎಲ್ಲರ ಮುಂದೆಯೂ ಕಾರಿದನು. ಆದರೆ ಅದರಿಂದ ಶ್ಯಾಮನ ಕೆಲಸವಾಯಿತೇ? ಶ್ಯಾಮ ತನ್ನ ಕತೆಯನ್ನು ವಿಸ್ತರಿಸಿ ಹೇಳಿದ. "ನನಗೆ ಇಲ್ಲಿ ಯಾರ ಗುರುತೂ ಇಲ್ಲ. ಇಂಥಿಂಥವರ ಬಳಿಗೆ ಕರೆದುಕೊಂಡು ಹೋಗುತ್ತೀರಾ?" ಎಂದು ಪಟ್ಟಿಯನ್ನು ತೋರಿಸಿ ಕೇಳಿದ.

"ಈ ಮಾಗಳೂರಿನಲ್ಲಿಯೇ? ಅದು ಹಿಂದಿನ ಕಾಲಕ್ಕಾಯಿತು. ಈಗ ಖಾದೀ ಹಾಕಿದವರನ್ನು ಕಂಡು, ದೂರ ನಿಲ್ಲಿಸಿ ಸಲಾಂ ಹಾಕುವ ಯುಗ ಬಂದಿದೆ. ವಂತಿಗೆ ಪಟ್ಟಿಯಲ್ಲಿ ಹೆಸರು ಬಿದ್ದದ್ದು ಗೊತ್ತಾದರೆ ತಮ್ಮನ್ನು ಜೈಲಿಗೆ ಒಯ್ಯುತ್ತಾರೆ ಎಂಬ ಭೀತಿ ಹುಟ್ಟಿದೆ.

"ಈ ಜನರಿಗೆ ನಾನು ಅನ್ನುತ್ತೇನಲ್ಲಾ—ಬೋಲ್‌ಶೇವಿಸಂ" ಬರಬೇಕು. ಹಿಂದೆ ಸರ್ವಾಧಿಕಾರಿಗಳೂ ಇರಬೇಕು. ಚಾಟಿ ಹಿಡಿದು ಕುಣಿಸುವವರು ಬೇಕು.

"ಅಂತೂ, ನಾನು ಇವರ್‍ಯಾರಲ್ಲಿಗೂ ಬರುವುದಿಲ್ಲ. ನೀವೇ ಹೋಗಿ ನೋಡಿ. ಅವರ ಮನೆಗಳು ಎಲ್ಲಿ ಏನೆಂದು ಹೇಳುತ್ತೇನೆ. ನನ್ನ ಲೆಕ್ಕಕ್ಕೆ ಆದಷ್ಟು ಸಹಾಯ ಮಾಡುತ್ತೇನೆ. ತಿಂಗಳ ಹತ್ತು ರೂಪಾಯಿ ನನ್ನದು" ಎಂದು ಆಗಲೇ ಅಲ್ಲಿ ಕುಳಿತ ಮಿತ್ರನೊಬ್ಬನಿಂದ ಹತ್ತು ರೂಪಾಯಿಗಳನ್ನು ಇಸುಕೊಂಡು ಕೊಟ್ಟೂ ಆಯಿತು. "ನನಗೆ ಈ ಒಬ್ಬ ಕಳ್ಳರಲ್ಲೊ

ವಿಶ್ವಾಸವಿಲ್ಲ. ಅಲ್ಲವಾದರೆ ಬರುತ್ತಿದ್ದೆ. ಇನ್ನು ಆ ಸಾಹುಕಾರ ರಂಗಪ್ಪಯ್ಯನೇ? ಅವರು ಕಾಸನ್ನು ಕೊಟ್ಟಾರೆಂದು ನಾನು ನಂಬುವುದಿಲ್ಲ. ಸರಕಾರಕ್ಕೆ ಹೆದರಿ ಸಾಯುತ್ತದೆ ಆ ಮೃಗ. ಮಗ ರಮಾನಾಥ ಜೈಲಿಗೆ ಹೋದನೆಂದು, ಹದಿನೈದು ದಿವಸ ಚಳಿ ಜ್ವರದಿಂದಲೇ ಮಲಗಿದರು. ಕೊನೆಗೆ ಅಲ್ಲಿಗೂ ಬಂದು ಕ್ಷಮೆ ಬೇಡೆಂದು ಮಗನನ್ನು ಒತ್ತಾಯಿಸಿದರು. ಅವನು ಗಟ್ಟಿನಿಂತು ತನ್ನ ಮರ್ಯಾದೆಯನ್ನು ಉಳಿಸಿಕೊಂಡ. ನನಗೆ ಅಧಿಕಾರ ದೊರೆತರೆ ಇಂಥ ಪ್ರಾಣಿಗಳನ್ನೆಲ್ಲ ತೋಫಿನ ಬಾಯಿಗೆ ಕೊಟ್ಟೇನು" ಎಂದ.

ಶ್ಯಾಮು ತೀರ ನಿರಾಶೆಯಿಂದ ಹೊರಟು ಹೋದನು. ಅನಂತರ ಒಂದು ತಾಸಿನ ಕಾಲ, ಪ್ರಭುದೇವ, ರಾಧಾಕೃಷ್ಣನ ವಿಚಾರವನ್ನು ಮಾತನಾಡಿದನು. "ನಾನು ಅವರ ವೀರವಾಣಿ ಬುಲಟಿನ್ ನೋಡಿದ್ದೆ. ಎಂಥ ಜೋರಿನ ಮಾತುಗಳು! ನಮ್ಮ ಸಮಾಜವಾದದ ವಿಷಯ ಹಾಗೆ ಬರೆಯಬೇಕು. ಅವನನ್ನು ನಮ್ಮ ಗ್ರೂಪಿಗೆ ಖಂಡಿತವಾಗಿ ಸೇರಿಸಿಕೊಳ್ಳಬೇಕು. ನೋಡಿ, ಆತ ಈಗ ಉತ್ತರ ಕನ್ನಡದಲ್ಲಿ ಬಹಳ ಕೆಲಸ ಮಾಡುತ್ತಿದ್ದಾನಂತೆ. ಕಿರಿಪದವಿನ ಆಶ್ರಮದಲ್ಲಿ ಹೆತ್ತೆಂಟು ಅನಾಥರನ್ನು ಸಾಕುತ್ತಿದ್ದಾನಂತೆ. ಆ ಆಶ್ರಮ ಯಾವುದೆಂಬುದು ಗೊತ್ತಾಯಿತೇ? ನಮ್ಮ ಮಾಜ ಕಾಂಗ್ರೆಸ್ಸಿ ಅಧ್ಯಕ್ಷರು, ದಯಾನಂದರಾಯರು ಹೊರಡಿಸಿದ ಆಶ್ರಮ. ಹೊರಡಿಸಿದಾಗ ನನಗೆ ಗೊತ್ತು. ಆ ಮೇಲೆ ಅದರ ಸುದ್ದಿಯನ್ನೇ ಕೇಳಲಿಲ್ಲ.

"ನನಗೆ ಒಂದು ಸಂಗತಿ ತೋರುತ್ತದೆ--ಯಾವ ಕಾರ್ಯಕ್ರಮವೇ ಆಗಲಿ, ಪೇಟೆ, ಸಿಟಿಗಳಿಗೆ ಸಮೀಪವಾಗಿ ನಡೆಯಬೇಕು. ಇಲ್ಲವಾದರೆ ಹೇಳ ಹೆಸರಿಲ್ಲದೆ ಅವು ಸತ್ತು ಹೋಗುತ್ತವೆ. ನಿಜಕ್ಕೂ ನನ್ನಲ್ಲಿ ಹಣ ಇಲ್ಲದೇನೆ ಹೋಯಿತು. ಇಲ್ಲವಾದರೆ ಇಂಥ ಸಂದರ್ಭದಲ್ಲಿ ನಾನು ಒಬ್ಬನೇ ಅವನ್ನು ನಡೆಯಿಸುತ್ತಿದ್ದೆ. ನನಗೆ ಡಾ| ನಂದರ ಹಣ, ವರ್ಚಸ್ಸು ಇದ್ದಿದ್ದರೆ ಏನೇನು ಮಾಡಿ ಬಿಡುತ್ತಿದ್ದೆ ಗೊತ್ತೇ? ಆ ಪ್ರಾಣಿಯಲ್ಲಿ ತನಗೆ ಯಾವ ವಿಶ್ವಾಸವೂ ಉಳಿದಿಲ್ಲ."

ಇಂದಿನ ತನಕ ಇಷ್ಟೊಂದು ಬಹಿರಂಗವಾಗಿ, ತೀಕ್ಷ್ಣವಾಗಿ ಪ್ರಭುದೇವ ನಂದರನ್ನು ದೂರಿರಲಿಲ್ಲ. ತನ್ನ ನಿಂತ ಪತ್ರಿಕೆಯನ್ನು ಪುನರು

ಜ್ಜೀವನ ಗೊಳಿಸಲು ಸಹಾಯ ಮಾಡದಿದ್ದುದೇ, ಈ ರೇಗಾಟದ ಕಾರಣ. ಆದರೆ ಈಗ ಅವನಿಗೆ ಸ್ವಲ್ಪ ಸಮಾಧಾನ. ಅಲ್ಲೇ ಕುಳಿತಿದ್ದ ಮಿ। ಸಾಣೆ ಕಲ್ ಸಹಾಯ ಮಾಡಲು ಒಪ್ಪಿದ್ದಾನೆ. ಸಾಣೆಕಲ್ ಮತ್ತು ಪ್ರಭು ದೇವ, ಇಬ್ಬರೂ ಸೇರಿ ಸ್ವತಂತ್ರವಾದ ಮುದ್ರಣಾಲಯ ತೆರೆದು, ನಾಡಿನಲ್ಲಿ ಕ್ರಾಂತಿಕಾರಕ ಸಾಹಿತ್ಯವನ್ನು ಹಬ್ಬಿಸುವುದೆಂಬ ನಿರ್ಣಯವಾಗಿದೆ. ಮುದ್ರ ಣಾಲಯಕ್ಕೆ ಬೇಕಾದ ಹಣವನ್ನು ಸಾಣೆಕಲ್ ಒದಗಿಸುತ್ತಾರೆ. ಆದರೆ ಪ್ರಚಾರಕ್ಕೆ ಬೇಕಾಗುವ ಹಣವನ್ನು ಪ್ರಭುದೇವನೇ ಕೂಡಿಸಬೇಕು. ಅದೇ ಸ್ವಲ್ಪ ತಲೆ ತುರಿಕೆಯ ವಿಷಯವಾಗಿದೆ. ಆದರೂ ಅವನ ಮನ ಸ್ಸಿನಲ್ಲಿ ಕ್ರಾಂತಿಯ ಕೋಲಾಹಲವೇ ಕಾಣುತ್ತಿದೆ. "ಈ ಹಿಂಸೆಯನ್ನು ಅಹಿಂಸೆಯಿಂದ ಇದಿರಿಸುವ ತತ್ವ—ನಮ್ಮ ತಲೆಗಳನ್ನು ಲಾಟಿಯಿಂದ ಒಡೆಯುವ ಮಕ್ಕಳಿಗೆ ಹೇಳಿಮದಲ್ಲ. ಯಾವ ದೇಶದ ಇತಿಹಾಸದಲ್ಲೂ ಕೈಕಟ್ಟಿ ಕುಳಿತವರಿಗೆ ಸ್ವಾತಂತ್ರ್ಯ ದೊರಕಿಲ್ಲ. ಅಹಿಂಸೆಯಿಂದಂತೂ ಬಂದೇ ಇಲ್ಲ. ಶಕ್ತಿಯುತರಿಗೇನೇ ರಾಜ್ಯ. ಬಲವೇ ಗೆಲ. ಹೀಗಿರು ವಾಗ—ಇನ್ನೂ, ಇನ್ನೂ ಗಾಂಧೀಜಿಯವರ ಮಾತನ್ನು ಕೇಳುತ್ತ ಹೋ ದರೆ, ಜೈಲು ತುಂಬಿಸಿದ್ದು ಮಾತ್ರ ಬಂದೀತು. ಮತ್ತೇನೂ ಆಗಲಾರದು. ತಾಡನಂ ಪ್ರತಿ ತಾಡನಂ" ಎಂದು ಸತ್ಯಾಗ್ರಹಿಯಾಗಿದ್ದ ಆತನು ತನ್ನ ನಿರಾಶೆಯನ್ನು ಪ್ರಕಟಿಸುತ್ತಾನೆ. ಆದರೆ ತನ್ನಂತೆ ಬಾಯಿ ಬಡಕರಾದ ವರಿಂದ ಹಿಂಸಾತ್ಮಕ ಸಮರ ನಡೆದೀತೇ—ಎಂದು ಆತ ವಿಚಾರ ಮಾಡ ಲಾರನು. ಅವನ ಒಂದು ಗುಣವೆಂದರೆ, ಮನಸ್ಸಿಗಿಂತ ಮುಂಚಿತವಾಗಿ, ನಾಲಗೆಯಲ್ಲಿ ಮಾತನ್ನು ಹರಿಯಗೊಡುವುದು. ಆದುದರಿಂದಲೇ ಸಾಣೆ ಕಲ್ ವಾದ ಮಾಡಿದನು! "ಪ್ರಭು, ನಿಮ್ಮ ಮಾತೇನೋ ಸರಿಯೆ. ಹಿಂಸೆಯಿಲ್ಲದೆ ನಮ್ಮ ಕೆಲಸವಾಗಲಾರದು. ಆದರೆ ಮಾತ್ರ ಒಂದು ತಪ್ಪನ್ನು ನೀವು ಮಾಡುತ್ತಿದ್ದೀರಿ. ಕ್ರಾಂತಿ ಗೀಂತಿ-ಅನ್ನುವವದು ಬಾಯಿಬಡಕ ರಾಗಬಾರದು. ನಮ್ಮ ಕೆಲಸವು ವ್ಯವಸ್ಥಿತವಾಗಿ, ರಹಸ್ಯವಾಗಿ ಆಗ ಬೇಡವೇ? ಆ ವೀರವಾಣಿ ಪತ್ರಿಕೆಯವನು ಮರೆಯಲ್ಲಿ ಕುಳಿತು, ತೀರ ಗುಟ್ಟಿನಿಂದ ಆತ ನಡೆಯಿಸಿದ ಹಾಗೆ ನಡೆಯಿಸಬೇಕು" ಎಂದನು.

"ನಾನೇನು ಬರಿಯ ಹುಚ್ಚನೆಂದು ತಿಳಿದಿರಾ? ಮಾತನ್ನೂ ಆಡ ಬಲ್ಲೆ, ಮೌನವನ್ನೂ ತಾಳಬಲ್ಲೆ. ಈಗ ನನ್ನ ತಲೆಯಲ್ಲಿಯೇ ನೂರಾರು

ಹಂಚಿಕೆಗಳಿವೆ. ಇಲ್ಲಿ ಇದ್ದವರೆಲ್ಲ ಸ್ನೇಹಿತರೇ, ನೀವೂ ಇದ್ದೀರಿ. ನಮ್ಮ ಕೆಲಸಕ್ಕೆ ಸಂಬಂಧಪಟ್ಟಂತೆ ನಾಲ್ಕು ಮಾತುಗಳನ್ನು ಆಡಿದೆ. ಉಳಿದ ನನ್ನ ಅಷ್ಟೊಂದು ವಿಚಾರಗಳಲ್ಲಿ, ನಿಮಗೂ ನಾನು ಹೇಳಲಿಲ್ಲ ಯಾವುದನ್ನೂ-ಯೋಗ್ಯ ಸಮಯವನ್ನು ಹೊಂಚು ಹಾಕುತ್ತಿದ್ದೇನೆ. ಮೀನುಚುಳ್ಳಿ ಹಕ್ಕಿಯಂತೆ ನಾನಿರುವವ. ಕೆಲಸ ಮಾಡುವ ಕಾಲಕ್ಕೆ ಬಾಯಿಬಿಗಿಹಿಡಿದು, ರೆಕ್ಕೆ ಬಡಿಯುವ ಸ್ವಭಾವ ನನ್ನದು. ನನ್ನ ಧ್ಯಾನ ಎಲ್ಲಿ, ಕಾರ್ಯಕ್ರಮ ಏನು-ಎಂದು ಸಾಧಿಸಿದ ಮೇಲೆಯೇ ನಿಮಗೆಲ್ಲ ತಿಳಿಯಬೇಕು" ಎಂದು ಹೇಳಿದನು. ಆವನ ಗೆಳೆಯನ ಆತುರ ಹೆಚ್ಚಿತು. ಆತ "ಹಾಗಾದರೆ ನಾವು ಪ್ರೆಸ್ ಖರೀದಿಗೆ ಯಾವಾಗ ಮುಂಬಯಿಗೆ ಹೋಗುವುದು?" ಎಂದು ಕೇಳಿದ.

"ಇಷ್ಟು ಬೇಗನೆ ಹೋಗುವುದಲ್ಲ. ಇನ್ನೂ ಚಳವಳದ ಗದ್ದಲ ಮುಗಿಯಲಿಲ್ಲ. ದೇಶದ ರಾಜಕೀಯ ಗದ್ದಲ ಪೂರ್ಣ ಶಾಂತವಾಗಬೇಕು. ಇನ್ನೂ ಶಾಂತವಾಗಿಲ್ಲ. ನಾವು ತಂದ ಛಾಪಖಾನೆ, ಮರುದಿನವೇ ಸರಕಾರದ ಕೈಗೆ ಬೀಳಬಾರದು. ನಮ್ಮಿಬ್ಬರ ಹೆಸರೂ ತತ್ಕಾಲ ಎದುರಿಗೆ ಬೀಳಬಾರದು. ಮೂರನೆಯವರ ಹೆಸರಿಗೆ ಛಾಪಖಾನೆ ಇರಿಸಿ, ಪತ್ರಿಕೆಗೆ ಅನುಮತಿ ದೊರಕಿಸಿಕೊಂಡು ನಾವು ತಣ್ಣನೆ ಕುಳಿತಿರಬೇಕು. ಕೆಲಸದ ದಿನ ಬಹಳ ದೂರವಿಲ್ಲ. ಗಾಂಧಿಯವರಿಗೂ, ಸರಕಾರಕ್ಕೂ ಸಂಧಾನವಾದೀತು ಎಂದು ನನಗೆ ಅನಿಸುತ್ತದೆ. ಕ್ರಮೇಣ ಡೊಮಿನಿಯನ್ ಸ್ಟೇಟಸ್ ಆದರೂ ಕೊಟ್ಟಾರೆಂದು ತೋರುತ್ತದೆ" ಎಂದನು.

"ಹಾಗಿದ್ದರೆ ನಮ್ಮ ಕೆಲಸವೇ ಮುಗಿಯಿತಲ್ಲ."

"ಆಗ ನಮ್ಮಂತಹ ಪಕ್ಕಾ ಸಮತಾವಾದಿಗಳ ಕೆಲಸ ಶುರುವಷ್ಟೆ. ನಮ್ಮಲ್ಲಿಯ ಶ್ರಮಗಾರರನ್ನು ಕೂಡಿಸಿ, ಬಂಡವಳಗಾರರ ತಲೆಕೆಳಗೆ ಮಾಡುವ ಕೆಲಸ ಮುಖ್ಯ. ಶ್ರಮಗಾರರ ಕೈಗೆ ಸ್ವಾತಂತ್ರ್ಯ ದೊರೆಯದೆ ಹೋದರೆ, ಹತ್ತು ಶತಮಾನ ಹೋದರೂ ನಮ್ಮ ದೇಶಕ್ಕೆ ಸುಖವಿಲ್ಲ."

ಅಲ್ಲಿಂದ ಒಬ್ಬೊಬ್ಬರೇ ಗೆಳೆಯರು ಸರಿದು ಹೋದರು. ಸಾಣೆಕಲ್ ಮತ್ತು ಪ್ರಭುದೇವರು ಇಬ್ಬರೇನೆ ಉಳಿದರು. ಪ್ರಭುದೇವ ಅವನೊಡನೆ-ಎಲ್ಲ ಬಗೆಯ ಕಾರ್ಖಾನೆ ಕೆಲಸಗಾರರ, ಕೂಲಿಗಾರರ, ನಿರಾಧಾರಿ ರೈತರ ಪಂಗಡಗಳನ್ನು ಬೆಳೆಯಿಸಿ, ಚುನಾವಣೆಯಲ್ಲಿ ತಮ್ಮ ವರ್ಚಸ್ಸು ಹೆಚ್ಚು

ವಂತೆ ಮಾಡುವ ಯೋಜನೆಯನ್ನು ಹೇಳಿದ. "ಜನ ನಮ್ಮ ಕೈಯಲ್ಲಿರದೆ ಯಾವ ಕೆಲಸವೂ ಆಗಲಾರದು. ನಮ್ಮ ಡಾ| ಸಾಹೇಬರ ಪ್ರಭಾವ ನಡೆಯುತ್ತಿರುವುದೇಕೆ? ಅವರ ಮಾತಿಗೆ ಸಾಹುಕಾರರ ಹಿಂಡು ತಲೆತೂಗುತ್ತಿರುವುದರಿಂದ. ಆ ವರ್ಚಸ್ಸಿನ ಹಿಂದುಗಡೆ ಕೆಲಸಮಾಡುವ ಶಕ್ತಿಯೆಂದರೆ ಹಣ. ನಮ್ಮ ಕಿಸೆಯಲ್ಲಿಯೂ ಲಕ್ಷರೂಪಾಯಿಗಳು ಬರುವ ತನಕ ಆ ಶಕ್ತಿ ಬರುವುದಿಲ್ಲ. ಶ್ರಮಗಾರರನ್ನು ಕೂಡಿಸುವುದಕ್ಕೂ ಹಣಬೇಕು. ಪ್ರಚಾರಮಾಡುವುದಕ್ಕೂ ಹಣಬೇಕು. ಅವರು ಸಂಪು ಹೂಡಿದರೆ, ಅವರ ಉಪವಾಸದ ಕಾಲದಲ್ಲಿ ಊಟಕ್ಕೆ ಕೊಡದೆ ಹೋದರೆ, ಡಾ| ನಂದರು ಜೈಲಿಗೆ ತಯಾರಿಸಿ ಕಳುಹಿಸಿದ ಸತ್ಯಾಗ್ರಹಿಗಳ ಪಾಡೇ ಬಂದೀತು."

ಈ ವಿಚಾರದಲ್ಲಿ ಅವರು ಬಹುಹೊತ್ತಿನ ತನಕ ಮಾತುಕತೆ ಮುಂದುವರಿಸಿದರು.

ಇತ್ತ ನಿರಾಶೆಯಿಂದಲೇ ಶ್ಯಾಮ ತನ್ನ ಮನೆಗೆ ಬಂದನೆನ್ನಬೇಕು. ನಾಲ್ಕೆಂಟು ಕಡೆಗಳಿಗೆ ಹೋಗಿ ಯಾಚಿಸಿದನು. ಈ ಯಾಚನೆಯ ಒಟ್ಟು ಫಲ ಮೂವತ್ತೈದು ರೂಪಾಯಿಗಳು. "ಹೂಂ, ಬಂದದ್ದು ಬಂತು." ಎಂದು ಮನೆಗೆ ಹಿಂದಿರುಗಿದ. ಸತ್ಯಳಿಗೆ ನಿರಾಶೆಯಾಯಿತು. ಸ್ವಲ್ಪ ಹೆಚ್ಚಾಗಿ ಹಣಕೂಡಿದ್ದರೆ, ಮಕ್ಕಳಿಗಾಗಿ ಒಂದು ಎಮ್ಮೆಯನ್ನು ಕೊಳ್ಳಬೇಕೆಂದು ಅವಳಿಗೆ ಆಸೆಯಿತ್ತು. ಹೆಚ್ಚಿನ ಶಿಕ್ಷಣ, ಉಪಚಾರ ತಮ್ಮಿಂದ ಆಗದೆಹೋದರೂ ಅವರ ಹಾಲು ಮೊಸರಿಗೆ ಕೊರತೆಯಾಗಬಾರದೆಂದು ಮನಸ್ಸು ಹೇಳುತ್ತಿತ್ತು. ಅವರಿಗೆ ಪಾಠ ಕಲಿಸುವವನು ಶ್ಯಾಮನೊಬ್ಬ. ಅವನಿಗೆ ಏನು ಗೊತ್ತು? ಅಲ್ಲದೆ ಮನೆಕೆಲಸಗಳು ಸ್ವಲ್ಪ ಇವೆಯೇ— ಎಂದು ಕೊಂಡಳು. ತನ್ನ ನಿಸ್ಸಹಾಯತೆಯನ್ನು ನೆನೆದುಕೊಂಡು, ವ್ಯಥೆಯಾಯಿತು. ತನ್ನ ಗಂಡ ದೂರದ ಊರಿನಲ್ಲಿ ಎಷ್ಟೆಲ್ಲ ತೊಳಲಾಡುತ್ತಿದ್ದಾನೆಯೋ ಏನೋ. ತಮ್ಮದು ಇನ್ನೂ ಮಿತ ಜೀವನವಾಗಬೇಕು.— ಮಳೆಗಾಲಕ್ಕೆ ತುಂಬ ಕಷ್ಟವಾಗಬಹುದು — ನಾಳೆನಿಂದಲೇ ಮೂರು ಊಟದ ಪರಿಪಾಠವನ್ನು ಎರಡಕ್ಕೇ ಇಳಿಸಬೇಕು—ಎಂದುಕೊಂಡಳು. ಆ ವಿಷಯವನ್ನು ಶ್ಯಾಮನೊಡನೆ ಹೇಳುತ್ತಲೇ, ಆತನೆಂದ "ಅಮ್ಮಾ, ನಾನೂ ನೀವೂ, ಎರಡಲ್ಲ ಒಂದೇ ಊಟದಲ್ಲಿರಬಹುದು. ಆದರೆ ಈ

ಮಕ್ಕಳನ್ನು ಹಾಗೆ ಸಾಕಲು ಬಂದೀತೇ? ಅಲ್ಲದೆ ಸಂಜೆಯ ವೇಳೆ ಅವಕ್ಕೆ ಸ್ವಲ್ಪವಾದರೂ ತಿಂಡಿಯನ್ನು ಕೊಡಬೇಡವೇ? ನೀವು ಯೋಚನೆಮಾಡ ಬೇಡಿ. ಅವರಿಗೂ ಇಲ್ಲಿನ ಸಂಗತಿಗಳು ತಿಳಿಯದೆ ಇಲ್ಲ. ಇಲ್ಲಿನ ಸಂಗತಿ ಯನ್ನು ವಿವರಿಸಿ ಈಚಣ್ಣ ಭಟ್ಟರಿಗೆ ಒಂದು ಕಾಗದ ಬರೆಯುವ. ಅವರು ಅಣ್ಣನಿಗೆ ಸಂಗತಿಯನ್ನು ತಿಳಿಸುತ್ತಾರೆ" ಎಂದನು.

"ಏನು, ಈಚಣ್ಣ ಭಟ್ಟರಿಗೆ ಬರೆಯುವುದೇ? ನಾವು ಮಕ್ಕಳಿಗೆ ಅನ್ನ ಹಾಕುವ ಸ್ಥಿತಿಯಲ್ಲಿಲ್ಲವೆಂದು ಇಷ್ಟು ಬೇಗನೇ ಅವರಿಗೆ ಬರೆದರೆ, ಅವರು ಏನೆಂದು ತಿಳಿಯಬೇಕು? ತಾಯಿತಂದೆಗಳ ಕಷ್ಟ, ಮಕ್ಕಳಿಗೆ ಬೇಡವೆಂದು ಇಲ್ಲಿಗೆ ಅವರನ್ನು ಕಳುಹಿಸಿದ್ದಾರೆ. ನಾವು ಅವರ ಕಾತರ ಹೆಚ್ಚಿಸುವುದೇ? ಆ ಕೆಲಸ ಬೇಡ"

"ಮತ್ತೇನು ಮಾಡಲಿ? ಅವರಿಂದಲೇ ಕಾಗದ ಬರುವ ತನಕ ಸುಮ್ಮನಿರಬೇಕು. ಬರೆಯುವುದಾದರೆ ಅಣ್ಣನ ವಿಳಾಸಕ್ಕೇನೆ ಬರೆಯ ಬೇಕು. ಈಗ ತತ್ಕಾಲದ ಯೋಚನೆ ಅಷ್ಟಲ್ಲ. ಇದ್ದ ಹಣದಿಂದ ಬರುವಷ್ಟು ಅಕ್ಕಿಯನ್ನು ಕೊಂಡು ಇಡುವ" ಎಂದನು.

ರಾಮಣ್ಣ ಪೂಜಾರಿಯಲ್ಲಿಗೆ ಹೋಗಿ ಇರುವ ಹಣಕ್ಕೆ ಬರುವಷ್ಟು ಅಕ್ಕಿಯನ್ನು ಕೊಳ್ಳುವುದೆಂದು, ಅವರಿಬ್ಬರ ನಿರ್ಣಯವಾಯಿತು.

ರಾತ್ರಿ ಮಲಗುವಾಗ ಅವಳ ಮನಸ್ಸಿನಲ್ಲಿ ಬೇರೆಯದೇ ಆದ ಒಂದು ಧೈರ್ಯ ಮೂಡಿತು. ತನ್ನ ತಂದೆ ತನ್ನೊಡನೆ ಎಷ್ಟು ನಿಷ್ಠುರ ಮಾಡಿ ಕೊಂಡು ಊರಿಗೆ ಹೋಗಿದ್ದರೂ, ಅಲ್ಲಿಗೆ ಹೋಗಿ ಕಣ್ಣೀರು ಕರೆದರೆ ಸಹಾಯ ಮಾಡಿಯಾರು ಎಂದು. ಇನ್ನಷ್ಟು ಬೈದಾರು, ಕೆಲ ಸವಾಗಬೇಕಾದರೆ, ಬೈಗಳನ್ನು ಕೇಳಬೇಕು. ಸ್ವಾರ್ಥದ ಕೆಲಸವೇನೂ ಅಲ್ಲ. ತನಗೆ ಬೇಕಾದುದೇನೂ ಅಲ್ಲ. ನಾಲ್ಕು ಮಂದಿ ಅನಾಥರನ್ನು ಸಾಕುವು ದಕ್ಕಲ್ಲವೇ—ಎಂದು ಯೋಚಿಸುತ್ತ ಮಲಗಿದಳು. ಮರುದಿನ ಬೆಳಿಗ್ಗೆ "ನೋಡು ಶ್ಯಾಮ, ಎಮ್ಮೆಗೆ ತೌಡನ್ನು ಇರಿಸಿಬಿಟ್ಟು, ರಾಮಣ್ಣನ ಮನೆಗೆ ಹೋಗಿ ಬಾ; ಅವನಂತು ಮನೆಯ ಕಡೆಗೆ ಬಾರದೆ ವರ್ಷವೊಂದಾ ಯಿತು. ಅವರಿದ್ದಾಗಲಾದರೂ ಆಗಾಗ ಬರುತ್ತಿದ್ದ. ಈಗ ಬರುವುದನ್ನೇ ಬಿಟ್ಟಿದ್ದಾನೆ"— ಎಂದಳು.

ಶ್ಯಾಮಣ್ಣ ಹಿಂದಿನ ದಿವಸ ಗಳಿಸಿದ ರೂಪಾಯಿಗಳನ್ನು ಹಿಡಿದು ಕೊಂಡು ರಾಮಣ್ಣನ ಮನೆಗೆ ಹೋದ. "ರಾಮಣ್ಣ, ಒಂದು ಕೆಲಸ ಆಗ ಬೇಕಲ್ಲ; ಅಮ್ಮ ಹೇಳಿದ್ದಾರೆ" ಎಂದ.

"ಅರೇ ಶ್ಯಾಮಣ್ಣನೇ, ನೀನು ಎಂದು ಬಂದುದು? ಜೈಲಿಗೆ ಹೋ ಗಿದ್ದೀ ಎಂಬ ವರ್ತಮಾನವಿತ್ತು. ಈಗ ಚಳವಳದ ಸ್ಥಿತಿ ಹೇಗೆ ನಿಂತಿದೆ? ಮಂಗಳೂರಿನಲ್ಲಿ ನಾಲ್ಕು ದಿನ ಬಹಳ ಗದ್ದಲವಾಯಿತು. ಈಗೆಲ್ಲವೂ ಸಪ್ಪೆ. ನಮ್ಮ ಊರವರೇ ಹಾಗೆ. ನೀನು ಬಂದೆಷ್ಟು ದಿವಸಗಳಾದುವು?"

"ಒಂದು ತಿಂಗಳಾಗುತ್ತಾ ಬಂತು"

"ರಾಯರು ಊರಲ್ಲಿ ಇಲ್ಲವಂತೆ. ಎಲ್ಲಿಗೆ ಹೋಗಿದ್ದಾರೆ? ಏನು ಕತೆ?"

"ಎಲ್ಲಿದ್ದಾರೆಯೋ ಏನೋ. ಅವರು ಶಿರ್ಶಿಯೋ, ಸಿದ್ಧಾಪುರವೋ, ಎಲ್ಲಿಯೋ ಇದ್ದಾರೆ."

"ಚಳವಳದ ಕೆಲಸದಲ್ಲಿಯೋ?"

"ಹೌದೆಂದು ಕಾಣುತ್ತದೆ"

"ಹೋಗಲಿ, ನೀನೇನು ಬಂದೆ?"

"ಅಮ್ಮ ಹೇಳಿದ್ದಾರೆ--ಒಂದು ಹತ್ತು ಮುಡಿ ಅಕ್ಕಿಯನ್ನು ತೆಗೆಯಿಸಿ ಕೊಡಬೇಕೆಂದು. ಆದಷ್ಟು ಕಡಿಮೆದರದಲ್ಲಿ—ನೋಡಿ, ರಾಮಣ್ಣ ತೆಗೆ ಯಿಸಿ ಕೊಟ್ಟಾನು, ಎಂದರು. ಈಗ ಮೂವತ್ತು ರೂಪಾಯಿ ಕೊಟ್ಟಿದ್ದಾರೆ."

"ಅಕ್ಕಿ ನಿಮಗೆ ಏತಕ್ಕೆ? ಕಳೆದ ವರ್ಷದ ಸಾಗುವಳಿ ಚೆನ್ನಾಗಿತ್ತು. ಮಕರ ಸಂಕ್ರಾಂತಿ ವೇಳೆಗೆ ಮನೆಗೆ ಬಂದಾಗ, ಮಳೆಗಾಲಕ್ಕೆಲ್ಲ ಅಕ್ಕಿ ಸಾಕು ಎಂದಿದ್ದರು."

"ಅದು ಆಗ ಅಂದಾಜಿನಲ್ಲಿ ಹೇಳಿದ್ದು. ಈಗ ನೋಡು, ಮನೆಯಲ್ಲಿ ಜನ ಮೊದಲಿನಂತಲ್ಲ. ನಾನು ಬಂದಿದ್ದೇನೆ. ಅಲ್ಲದೆ ಅಣ್ಣ ಆ ಕಡೆಯಿಂದ ಆರು ಮಂದಿ ಮಕ್ಕಳನ್ನು ಕಳುಹಿಸಿ ಕೊಟ್ಟಿದ್ದಾನೆ. ಅವರನ್ನೆಲ್ಲ ಇಲ್ಲಿ ಯೇ ಇರಿಸಿಕೊಂಡು ಸಾಕಬೇಕು—ಎಂದು ತಿಳಿಸಿದ್ದಾರೆ. ಉತ್ತರ ಕನ್ನ ಡದಲ್ಲಿ ಚಳವಳದಲ್ಲಿ ಜೈಲಿಗೆ ಹೋದವರ, ಆಸ್ತಿ ಕಳೆದುಕೊಂಡವರ ಮಕ್ಕಳು ಅವರಂತೆ. ಬಂದು ಒಂದು ತಿಂಗಳಾಗುತ್ತ ಬಂತು; ಅವರನ್ನು ಅಣ್ಣ ಕಳುಹಿಸಿಕೊಟ್ಟ. ಆ ಮಕ್ಕಳು ಎಲ್ಲಿಯವರು, ಏನೆಂದು ಯಾರಿಗೂ ಹೇಳಬೇಡ. ನಾಳೆ ಯಾರಾದರೂ ಬಂದು ಹಿಂಸೆ ಮಾಡಿಯಾರು."

"ಹೌದಪ್ಪಾ, ಈಗೆಲ್ಲ ರಾವಣಾಸುರನ ದರ್ಬಾರವಾಗಿದೆ. ಅಲ್ಲದಿದ್ದರೆ ಅಂಗಡಿಯಲ್ಲಿ ಕುಳಿತ ನಿನ್ನನ್ನು ಹೊಡೆದು ಜೈಲಿಗೆ ಕಳುಹಿಸುತ್ತಿದ್ದರೇ? ನೂರಾರು ಜನರಿಗೆ ಹಾಗೆ ಮಾಡಿದರಂತಲ್ಲ. ಅದನ್ನೆಲ್ಲ ನೋಡಿ ಈ ವರ್ಷ ಸೇಂದಿ ಏಲಮಿಗೆ ನಿಲ್ಲಬಾರದೆಂದು ಮನಸ್ಸಿತ್ತು. ಆದರೆ ನಮ್ಮ ಅಪ್ಪನಿಗೆ ಅದು ಹಿಡಿಸಲಿಲ್ಲ. ನಾವು ತಕ್ಕೊಳ್ಳದಿದ್ದರೆ, ಇನ್ನೊಬ್ಬರು ತಕ್ಕೊಳ್ಳುವುದಿಲ್ಲವೇ ಎಂದು ವಹಿಸಿಕೊಂಡರು. ಮೇಲೆ ಬಿದ್ದೇ ವಹಿಸಿಕೊಳ್ಳಬೇಕಾಯಿತು. ಈ ವರ್ಷ ಏಲಮಿನ ಹಣ ಹುಟ್ಟುವುದು ಕಷ್ಟವಾಗಿದೆ"

"ಆ ವಿಚಾರ ಇರಲಿ. ಅಕ್ಕಿಯನ್ನು ಎಲ್ಲಿಂದಾದರೂ ಕೊಡಿಸುತ್ತಿಯಾ? ಪೂರ್ಣ ಹಣ ನನ್ನ ಕೈಯಲ್ಲಿಲ್ಲ"

"ಅಕ್ಕಿಗೇನು ಬರಗಾಲ? ನಮ್ಮದೇ ಅಕ್ಕಿ ಇದೆ. ಈ ವರ್ಷ ಹೆಚ್ಚಿನ ದರವೂ ಇಲ್ಲ. ದರ ಬಂದರೆ ಬಂಡಸಾಲೆಗೆ ಹಾಕುವ ಎಂದು ಅಪ್ಪ ಕಾದಿದ್ದಾನೆ. ದರ ನಾಲ್ಕೂವರೆಗೆ ಹೋದದ್ದು, ನಾಲ್ಕಕ್ಕೆ ಬಂದಿದೆ. ನಿಮ್ಮ ಮಟ್ಟಿಗಲ್ಲವೇ—ಹೇಗೂ ಮಾಡುವ. ಹಣದ ಗರ್ಜಿಯೂ ಇಲ್ಲ. ಮಾಸ್ತರರು ಬಂದ ಮೇಲೆ ಕೊಟ್ಟರೆ ಸಾಕು. ಕಲಲನನ್ನು ಮನೆಗೆ ಕಳುಹಿಸಿ, ಹೊರಿಸಿಕೊಂಡು ಹೋಗಿ."

"ಈಗ ತಂದ ರೂಪಾಯಿಗಳನ್ನು ತೆಗೆದುಕೋ. ಅದು ನಮ್ಮ ಕೈಯಲ್ಲೇ ಖರ್ಚಾಗ ಬಾರದಲ್ಲಾ. ಇನ್ನೂ ನಾಲ್ಕೈದು ಮುಡಿ ಅಕ್ಕಿ ಬೇಕಾದೀತು. ಒಂದೇ ಸಾರಿ ಕೊಡುವುದಕ್ಕೆ ಉಳಿಯಲಿಕ್ಕಿಲ್ಲ."

"ನೀನೀಗ ಹೋಗು, ರೂಪಾಯಿ ಈಗ ಇರಲಿ ನಿನ್ನ ಕೈಯಲ್ಲಿ. ಅಮ್ಮನನ್ನು ಕಾಣದೆ ತಿಂಗಳು ನಾಲ್ಕಾಯಿತು. ಸಾಯಂಕಾಲ ಬರುತ್ತೇನೆ" ಎಂದು ಶ್ಯಾಮನನ್ನು ಕಳುಹಿಸಿಕೊಟ್ಟ. ಶ್ಯಾಮ ಮನೆಗೆ ಬಂದು ನಡೆದ ಸಂಗತಿಯನ್ನು ಹೇಳಿದನು. "ಅವನೇ ಬರುತ್ತಾನಂತೇನು? ಒಳ್ಳೆಯದಾಯಿತು. ಎಮ್ಮೆಯ ಸುದ್ದಿಯನ್ನೂ ಅವನ ಹತ್ತಿರ ಮಾತನಾಡಬಹುದು. ಈ ಬತ್ತಲು ಎಮ್ಮೆಯನ್ನು ಮಾರಾಟಮಾಡಿ, ಕರೆಯುವ ಎಮ್ಮೆ ಒಂದನ್ನು ಕೊಂಡರಾಗುತ್ತಿತ್ತು. ಆದರೆ ಅಷ್ಟೆಲ್ಲ ಹಣ ಎಲ್ಲಿಂದ ತರಲಿ?" ಎಂಬ ಯೋಚನೆ ಬಂದಿತು.

ಆಕೆ ಆಳನ್ನು ರಾಮಣ್ಣನಲ್ಲಿಗೆ ಕಳುಹಿಸಲಿಲ್ಲ. 'ಅವನೇ ಬರುತ್ತಾ

ನಲ್ಲ? ಆ ಮೇಲೆ ವಿಚಾರಿಸಿ ಕಳುಹಿಸಿದರಾಯಿತು' ಎಂದುಕೊಂಡಳು. ಇತ್ತ ಶ್ಯಾಮನನ್ನು ಕರೆದು, ನೀನು ಆ ಸಣ್ಣ ಮಕ್ಕಳಿಗೆ ಏನಾದರೂ ಒಂದಿಷ್ಟು ಓದಲು, ಬರೆಯಲು ಹೇಳಿಕೊಡು. ಒಂದು ಗಳಿಗೆಯಾದರೂ ಸಾಕು." ಎಂದು ಉಪದೇಶಮಾಡಿದಳು.

ಆಕೆ ಮಧ್ಯಾಹ್ನ ಊಟ ಮುಗಿಸಿ, ತುಸು ವಿಶ್ರಾಂತಿಗೆಂದು ಮಲಗಿಕೊಂಡಿದ್ದಳು. ಒಂದು ಮಗ್ಗುಲಿಂದ ಚಂದ್ರನು ಅವಳ ಜುಟ್ಟನ್ನು ಎಳೆಯುತ್ತಿದ್ದ. ಇನ್ನೊಂದು ಬದಿಯಿಂದ ಕಿಟ್ಟಣ್ಣ ಅವಳ ಕಾಲ ಬೆರಳನ್ನು ಹಿಡಿದು ಆಟವಾಡಿ ನಗಿಸುತ್ತಿದ್ದ. ಇತರ ಬಾಲಕರು ಶಾಲೆಯ ಚಾವಡಿಯಲ್ಲಿ ಕುಳಿತು, ನೆಲದಲ್ಲಿ ಸೀಮೆ ಸುಣ್ಣದ ಗೆರೆ ಹಾಕಿ, ಕಲ್ಲುಗಳನ್ನಿರಿಸಿ, ಹುಲಿ, ದನ ಆಟವಾಡುತ್ತಿದ್ದರು. ಆಗ ರಾಮಣ್ಣನ ಸವಾರಿ ಆಗಮಿಸಿತು. ಆತ ಪದವಿನಿಂದಲೇ ಇಳಿದು ಬಂದ. ಇಳಿದು ಬಂದಾಗ ಮೊದಲು ಸಿಗುವುದು ಶಾಲೆ. ಅಲ್ಲಿ ಕುಳಿತಿರುವ ಮಕ್ಕಳನ್ನು ಕಂಡು, ಅದರ ಅರ್ಧ ಪೂರೈಸಿದ ಗೋಡೆಯ ಮೇಲೆ ಕುಳಿತು ಅವರ ಆಟ ನೋಡುತ್ತ ಕುಳಿತ. ಆ ವೇಳೆಗೆ ಪಾಠ ಕಲಿಸಲು ಶ್ಯಾಮಣ್ಣ ಬಂದ. ಶ್ಯಾಮಣ್ಣ ಬಂದು ಅವನನ್ನು ನೋಡಿದ, ಅಮ್ಮ ಮಲಗಿದ್ದಾರೆಯೋ, ಏನೆಂದು ನೋಡಿಕೊಂಡು ಬರಲು ಹೋದನು. ರಾಮಣ್ಣನನ್ನು ಅಲ್ಲಿಗೆ ಕರೆದುಕೊಂಡು ಹೋದ. ಅಲ್ಲಿ ಚಂದ್ರನ ಜತೆಯಲ್ಲಿ ಆಡುತ್ತಿದ್ದ ಕಿಟ್ಟಣ್ಣನನ್ನು ಕಂಡು "ಅಮ್ಮಾ ಈ ಮಗು, ಆ ಹೆಣ್ಣು ಮಕ್ಕಳು ಇವೆಲ್ಲ, ಅಪ್ಪಬ್ಬೆ ಇಲ್ಲದುವೇ" ಎಂಬು ರಾಮಣ್ಣ ಕೇಳಿದ.

"ಇದ್ದವರೂ ಇದ್ದಾರೆ. ಇಲ್ಲದವರೂ ಇದ್ದಾರೆ. ಅದರಲ್ಲಿ ಒಬ್ಬರು ತುಂಬಾ ಅನುಕೂಲಸ್ಥರ ಮನೆಯವರಂತೆ. ಅವರ ಆಸ್ತಿ ಮನೆಯೆಲ್ಲ ಸರಕಾರದ ಸ್ವಾಧೀನವಾಗಿ ಇವಕ್ಕೆ ಇರಲು ಠಾವಿಲ್ಲದೆ ಹೋಗಿದೆ. ಇವರ ಮನೆಯವರಲ್ಲಿ ಕೆಲವರು ಜೈಲಿಗೆ ಹೋಗಿದ್ದಾರೆ. ಮಾಸ್ತರರೀಗ ಅಲ್ಲಿದ್ದಾರೆ. ಅವರೇ ಇವರನ್ನೆಲ್ಲ ಒಟ್ಟುಮಾಡಿ ಕಳುಹಿಸಿಕೊಟ್ಟರು. ಇಲ್ಲಿ ಮಾತ್ರ ಇವಕ್ಕೆ, ನಮ್ಮ ಕೈಯಿಂದ ದೇವರು ಅನ್ನ ಹಾಕಿಸುತ್ತಾನೆಯೋ, ಏಕಾದಶಿ ಮಾಡಿಸುತ್ತಾನೋ ಎಂಬ ಹೆದರಿಕೆ ನನಗೆ."

"ಹಾಗೇನು ಆಗಲಾರದು. ದೇವರು ಈ ಮಕ್ಕಳ ಬಾಯಿಯ ಅನ್ನ ತಪ್ಪಿಸಲಿಕ್ಕಿಲ್ಲ. ಈ ಸಣ್ಣ ಮಗುವಿಗೆ ನಿಮ್ಮ ಚಂದ್ರನ ಪ್ರಾಯವಾ

ಗಬಹುದು. ಅಲ್ಲವೇ?"

"ಈ ಮಗುವಿನ ಅಪ್ಪನೇ, ಇವರನ್ನೆಲ್ಲ ಕರೆದು ಇಲ್ಲಿಗೆ ತಂದು ಬಿಟ್ಟು ಹೋದರು. ಅದರ ಅಮ್ಮನನ್ನು ಸಹ ಜೈಲಿಗೆ ಹಾಕಿದ್ದಾರಂತೆ. ಬಿಟ್ಟು ಹೋಗುತ್ತ, ಈ ಮಗುವಿನ ತಂದೆ ಕಣ್ಣೀರು ಸುರಿಸಿದರು. ಮಗು ಹೆತ್ತು ದಿನ ಅಪ್ಪನನ್ನು ಜ್ಞಾಪಿಸಿ ಜ್ಞಾಪಿಸಿ ಅತ್ತಿತು. ಈಗೇಕೋ, ಸಮಾಧಾನವಾಗಿದೆ. ಪಾಪ, ಏನು ಮಾಡೀತು?"

"ನಮ್ಮ ಮಾಸ್ತರರಿಗೆ ಇಂಥದ್ದೇ ಸಾಟಿ. ಕಳೆದಾವೃತ್ತಿ ಆ ಹೊಲೆಯರ ಮಗುವನ್ನು ತಂದು ಪಟ್ಟ ಒದ್ದಾಟ ಬೇಡ; ಈಗ ಈ ಮಕ್ಕಳು."

"ನಮ್ಮಿಂದ ಹಿಂದಿನ ಜನ್ಮದಲ್ಲಿ ಯಾರಾರಿಗೆ ಏನೇನು ಸಲುವುದಕ್ಕಿತ್ತೋ—ಅದನ್ನು ಸಲಿಸುವ ದಾರಿ ಇದು. ಅವಕ್ಕೂ ಇಲ್ಲಿನ ಅನ್ನ, ನೀರಿನ ಋಣ ಇರಬೇಕು; ಅಷ್ಟಕ್ಕೆ ಅವಕ್ಕೆ ತೊಂದರೆಬಾರದಿದ್ದರೆ ಸಾಕು"

"ಅನ್ನ ನೀರು—ಅನ್ನುತ್ತೀರಿ ನೀವು. ಅಷ್ಟು ಸಾಕೇ? ಈ ಮಕ್ಕಳಿಗೆ ವಸ್ತ್ರ, ಒಡವೆ, ಹಾಲು ಹೆಯನು ಇಲ್ಲದೆ ಅವು ಬೆಳೆದಾವೆಯೇ? ನಾಳೆ ಅವುಗಳ ಹಿರಿಯರು ಬಂದು, ಅವನ್ನು ಕರೆದುಕೊಂಡು ಹೋಗುವಾಗ ನಮ್ಮ ಮಕ್ಕಳನ್ನು, ಹೊಟ್ಟೆ ಬಟ್ಟೆಗೆ ಕೊಡದೆ ದಣಿಸಿದರು ಎನ್ನಬಾರದಲ್ಲ."

"ಅದೇ ಯೋಚನೆ ನನಗೆ. ಹಾಲು ಹೆಯನ ಅನ್ನುತ್ತೀಯ ನೀನು. ಏನು ಮಾಡಬೇಕೋ ತಿಳಿಯುವುದಿಲ್ಲ. ಮನೆ ಎಮ್ಮೆ ಬತ್ತಿದೆ. ಇವತ್ತು ಬೆಳಿಗ್ಗೆ ಕೊಟ್ಟದ್ದು ಒಂದು ಕುಡ್ತೆ ಹಾಲು. ಅದರಿಂದೇನು ಮಾಡಲಿ? ದುಡ್ಡು ಕೊಟ್ಟು ಪೂರೈಸಿತೇ? ಮಳೆಗಾಲದ ಮಟ್ಟಿಗೆ ಬೇಕೆನ್ನುವಷ್ಟು ಅಕ್ಕಿಯನ್ನು ಕೂಡಿಟ್ಟರೆ ಒಂದು ಧೈರ್ಯ, ಇನ್ನು ಯಾರದ್ದಾದರೂ ಕಾಲು ಹಿಡಿದು, ಈ ಬತ್ತಲು ಎಮ್ಮೆಯನ್ನು ಮಾರಾಟಮಾಡಿಸಿ ಒಂದು ಒಳ್ಳೆಯ ಎಮ್ಮೆಕೊಂಡರಾದೀತು—ಎಂದಿದೆ ಮನಸ್ಸಿನಲ್ಲಿ. ನಿನ್ನನ್ನೇ ನೆನೆಯುತ್ತಿದ್ದೆ. ಈಗ ನೀನೇ ಬಂದಿದ್ದಿ! ಏನು ಮಾಡುತ್ತೀಯೊ ಮಾಡು. ನನಗೆ ಹೆಚ್ಚಿಗೆ ಸಾಲಮಾಡುವ ಧೈರ್ಯವಿಲ್ಲ. ನಾಳೆ ಅವರೇನ ಬಂದು ತೀರಿಸಬೇಕಲ್ಲ. ಆವರಿದ್ದರೆ ಬೇರೆಯೇ ಮಾತಿತ್ತು. ಈಗ ಇಲ್ಲಿ ನಾನೂ ಶ್ಯಾಮು ಇಬ್ಬರೇ ಒದ್ದಾಡುವವರಾಗಿದ್ದೇವೆ."

ಸತ್ಯಳ ಮಾತನ್ನು ಕೇಳಿ ರಾಮಣ್ಣ ಯೋಚನೆಗೀಡಾದ. ಆತ ಎಲ್ಲ ಕೆಲಸಗಳಲ್ಲಿಯೂ ಉತ್ಸಾಹಿಯೇ. ತಮ್ಮ ಊರಿಗೆ ಮಾಸ್ತರರು ಬಂದ

ವಿಷಯದಲ್ಲಿ ಅವನಿಗೆ ತುಂಬ ಅಭಿಮಾನವಿತ್ತು. ಆದರೆ ಅವರ ಅನು ಕೂಲತೆಯ ವಿಷಯದಲ್ಲಿ ಅವನ ಅಭಿಪ್ರಾಯ ಬೇರೆ ತೆರನಾಗಿತ್ತು. ಅವರು ತುಂಬ ಶ್ರೀಮಂತರಿರಬೇಕು ಎಂದು ತೋರುತ್ತಿತ್ತು. ಹಾಗೆ ಅನುಕೂ ಲತೆಯಲ್ಲದೆ, ಅಷ್ಟೆಲ್ಲ ಪರೋಪಕಾರ ಮಾಡುವುದು ಸಾಧ್ಯವೇ ಎಂಬ ಅನುಮಾನ ಅವನದು. ತನ್ನ ಮನೆ ನೆರೆಯಲ್ಲಿ ಬಿದ್ದಾಗ ಅವರು ಮಾಡಿದ ಸಹಾಯ, ಊರವರ ಸಲುವಾಗಿ ಪಟ್ಟ ಶ್ರಮ, ಆ ಹೊಲೆಯರ ಕೂಸಿಗಾಗಿ ತೋರಿದ ಆಸಕ್ತಿ—ಇವೆಲ್ಲ ಅವನಲ್ಲಿ ಆಶ್ಚರ್ಯವನ್ನೇ ಹುಟ್ಟಿಸಿದ್ದುವು. ಈಗೀಗ ಅವನಿಗೆ ಅವರು ತಮ್ಮ ಸ್ವಂತ ಕಷ್ಟಗಳನ್ನು ಲೆಕ್ಕಿಸದೆ ಮಾಡು ತ್ತಿದ್ದ ಪರೋಪಕಾರಗಳು ಇವು ಎಂಬ ನೆನವರಿಕೆಯಾಗತೊಡಗಿತು.

"ಅಮ್ಮಾ, ನಿಮ್ಮ ಕಷ್ಟವೊಂದು ಬೇರೆಯಲ್ಲ; ನನ್ನದು ಬೇರೆಯಲ್ಲ. ನನ್ನಿಂದಾದ ಸಹಾಯ ಮಾಡುತ್ತೇನೆ. ಹಣದ ಲೆಕ್ಕಾಚಾರ ಈಗ ಬೇಡ. ಕಲಲನನ್ನು ಕಳುಹಿಸಿ ಅಕ್ಕಿ ತರಿಸಿಕೊಳ್ಳಿ. ಆ ಮೂವತ್ತು ರೂಪಾಯಿಯನ್ನು ಕೊಟ್ಟು, ನಿಮ್ಮ ಹಳೆಯ ಎಮ್ಮೆಯನ್ನು ಕೊಟ್ಟರೆ, ಹತ್ತು ಹದಿನೈದು ಕುಡ್ತೆ ಹಾಲು ಕೊಡುವ ಎಮ್ಮೆ ಸಿಕ್ಕೀತು. ತೆಗೆದುಕೊಂಡರೆ ಒಳ್ಳೆಯ ದನ್ನು ನೋಡಿ ತೆಗೆದು ಕೊಳ್ಳಬೇಡವೆ? ಇಷ್ಟೆಲ್ಲ ಮಕ್ಕಳಿರುವಾಗ ಅವ ಕ್ಕೊಂದು ಮಜ್ಜಿಗೆ ನೀರನ್ನಾದರೂ ಕಾಣಿಸಬೇಡವೇ? ಈ ಸಣ್ಣವಕ್ಕೆ ಒಂದಿಷ್ಟು ಹಾಲಾದರೂ ಕೊಡಬೇಡವೇ" ಎಂದನು. ಈ ಮಾತುಗ ಳಾಗುವಾಗ ಶ್ಯಾಮನು ಅಲ್ಲಿಯೇ ಇದ್ದ. ಅವನ ಹಿಂದೆ, ಮರೆಯಲ್ಲಿ, ಆಟವನ್ನು ಬಿಟ್ಟು ಮಹಾದೇವ ನಿಂತು ಕೇಳುತ್ತಿದ್ದ. ಅವನಿಗೆ ಆಗ ತಾನೇ ಅಲ್ಲಿನ ಕತೆ ಹೀಗಿದೆ ಎಂದು ತಿಳಿಯಿತು. ಅದು ಶ್ಯಾಮನ ಕಣ್ಣಿಗೆ ಬಿದ್ದುದರಿಂದ "ಹಾಗೆಲ್ಲ ದೊಡ್ಡವರ ಮಾತು ಕೇಳುತ್ತ ನಿಲ್ಲಬಾ ರದು ಮಗು" ಎನ್ನಬೇಕಾಯಿತು. "ನಾನು ಯಾರಿಗೂ ಹೇಳುವುದಿಲ್ಲ" ಎಂದು ಹೇಳಿ, ಮಹಾದೇವನು ಅಲ್ಲಿಂದ ಹೊರಟುಹೋದ.

ಹಾಗೆಯೇ ಸತ್ಯಮ್ಮ, ರಾಮಣ್ಣನವರ ಸಂಭಾಷಣೆಯು ಮುಂದು ವರಿಯಿತು.

"ಹೌದು, ಎಮ್ಮೆ ಒಂದನ್ನು ತರಿಸಿಕೊಟ್ಟರೆ ತುಂಬ ಉಪಕಾರ ವಾಗುತ್ತಿತ್ತು ನಿಜ. ಆದರೆ ಅಕ್ಕಿಗೆ ಹಣ ಬಾಕಿ ಮಾಡಿಕೊಂಡರೆ, ನಾಳೆ ನಮಗೆ ಕೊಡುವುದಕ್ಕೇ ಕಷ್ಟವಾದರೆ, ನಿನಗೂ ಮನೆಯಲ್ಲಿ ಕೇಳು

ವವರಿದ್ದಾರಲ್ಲವೆ? ನಿನ್ನ ಅಪ್ಪ ಸುಮ್ಮನೆ ಕುಳಿತಾನೆಯೆ?

"ಬಾಕಿಯಾದರೆ ನನಗಲ್ಲವೇ? ಸಾಲದ ಹಣಕ್ಕೆ ನಾನು ಜೋರು ಮಾಡಿಯೇನು ಎಂಬ ಹೆದರಿಕೆಯೇ ನಿಮಗೆ?" ಎಂದು ನಗುತ್ತ ನುಡಿದನು. "ಅಮ್ಮಾ, ನೆರೆ ಬಂದ ಕಾಲದಲ್ಲಿ ಮಾಸ್ತರರು ಸ್ವಂತ ಖರ್ಚಿನಿಂದ ಎಷ್ಟು ಜನರನ್ನು ಸಾಕಿದ್ದರೆಂಬುದು ನೆನಪಿಲ್ಲವೇ ನನಗೆ? ನಾನೂ ಬಂದು ಊಟಮಾಡ್ದೇನೆ. ಇರಲಿ, ಈಗ ನಾನು ನಿಮಗೆ ಹತ್ತು ಮುಡಿ ಅಕ್ಕಿಯನ್ನು ಕಳುಹಿಸುತ್ತೇನೆ. ಆದರೆ ಹತ್ತು ಮುಡಿ, ನಿಮ್ಮ ಊಟಕ್ಕೂ, ಬೇಸಾಯದ ಖರ್ಚಿಗೂ ಸಾಕಾದೀತೇ?"

"ಕೊಚ್ಚು ಕೊಡುವ ಮಟ್ಟಿಗೆ ಅಕ್ಕಿ ಇದೆ. ಅದನ್ನು ತೆಗೆದರೆ ಮಾತ್ರ ಅಕ್ಕಿ ಉಳಿಯದು. ಗೇಣಿಯ ಅಕ್ಕಿಯನ್ನೆಲ್ಲ ಕೊಟ್ಟಾಯಿತು. ಅದನ್ನು ಬಾಕಿಮಾಡಿಕೊಂಡರೆ ಆಗುತ್ತದೆಯೇ, ಹಾಗೆ ಗೇಣಿ ಕೊಟ್ಟ ಮೇಲೆ ಉಳಿಯುವುದೆಷ್ಟು"?

"ಗೇಣಿ ಬಾಕಿಯೇ? ರಂಗಪ್ಪಸಾಹುಕಾರರವರು, ಮರುದಿನ ಗದ್ದೆ ಬಿಡಬೇಕೆಂದು ಹೇಳಿಯಾರು........ಏನೋ ಮಾತಿಗೆ ಬಂದೆ. ಮಳೆಗಾಲದಲ್ಲಿ ಅಕ್ಕಿ ಕಡಿಮೆ ಬಿದ್ದರೆ ಹೇಳಿಕಳುಹಿಸಿ. ದಾಕ್ಷಿಣ್ಯ ಮಾಡಬೇಡಿ. ಲೆಕ್ಕಾಚಾರ ಮಾಡಬಹುದು, ಹಿಂದಿನಿಂದ."

"ಆಗಲಿ, ನಿನ್ನ ಉಪಕಾರ. ಎಮ್ಮೆ ವಿಚಾರ ನೆನಪಿರಲಿ. ಸಣ್ಣದು ಸಾಕು. ಸಾಕುವುದಕ್ಕೆ ಹೊರೆಯಾಗಬಾರದಲ್ಲ."

"ಹಾಗೆ ಸಣ್ಣದನ್ನು ತೆಗೆದುಕೊಂಡರೆ, ಇಷ್ಟೆಲ್ಲ ಮಕ್ಕಳಿರುವ ಮನೆಗೆ ಸಾಲದು. ನನಗೆ ಹೀಗೂ ಕಾಣಿಸುತ್ತದೆ—ನೋಡಿಕೊಳ್ಳಲಿಕ್ಕೆ ಬಂದರೆ, ಒಂದಲ್ಲ ಮೂರು ಎಮ್ಮೆಗಳನ್ನು ಕಟ್ಟಬಹುದು. ಮೇವಿಗೆ ಇಲ್ಲಿ ಜಾಗವೂ ಇದೆ."

"ಹೊಂ, ನೀನು ತಮಾಷೆಗೇನೇ ಹೊರಟೆ."

"ನಿಮ್ಮ ಕೊರಳಾಣೆಯಮ್ಮ, ತಮಾಷೆಯಲ್ಲ. ನಿಮ್ಮಂಥವರ ಹತ್ತಿರ ತಮಾಷೆಯೇ! ನಿಮ್ಮ ಈ ಸಂಸಾರ ನಡೆಯುವುದಕ್ಕೆ, ಬರಿಯ ಅಕ್ಕಿ, ಒಂದು ಎಮ್ಮೆ ಇದ್ದರೆ ಸಾಕೇ? ಮೇಲು ಖರ್ಚಿಗೆ ಎಷ್ಟು ಹಣ ಬೇಡ, ನನಗೆ ತೋರಿದ್ದು ಹೀಗೆ—ಜನಮಾಡಿ ಮಂಗಳೂರಿಗೆ ಕಳುಹಿಸುವುದಕ್ಕೆ ಬಂದರೆ, ಮೂರು ನಾಲ್ಕು ಎಮ್ಮೆಗಳನ್ನು ಕಟ್ಟಿ, ಅವುಗಳ ಹಾಲನ್ನು ಮಂಗ

ಳೂರಿಗೆ ಕಳುಹಿಸಬಹುದು. ಒಂದರ ಹಾಲು ಮನೆಗಿರಲಿ. ನಾನು ಹೇಳು ವುದರಲ್ಲಿ ತಪ್ಪೇನಿದೆ?

"ಎರಡು ಹರದಾರಿ ದೂರದ ಮಂಗಳೂರಿಗೆ?"

ಈಗ ಮಂಗಳೂರು ಪೇಟೆಗೆ ಎಂಟು ಹತ್ತು ಮೈಲು ದೂರದಿಂದ ಹಾಲು ಬರುತ್ತಿದೆ. ನಮ್ಮ ಗ್ರಾಮದಿಂದಲೂ ಹೋಗುತ್ತಾ ಇದೆ. ಅದ ರಿಂದ ನಿಮ್ಮ ಖರ್ಚಿಗೆ ಅರೆವಾಸಿಯಾದರೂ ಸಹಾಯವಾದೀತು. ನೀವು ಯಾರನ್ನಾದರೂ ನಂಬಿ ಈ ಮಕ್ಕಳನ್ನು ಸಾಕುವುದಕ್ಕುಂಟೆ? ನೋಡಿ, ಯೋಚನೆಮಾಡಿ, ಒಂದು ಎಮ್ಮೆಯನ್ನು ನಾನು ತಂದುಕೊಡುತ್ತೇನೆ. ಸಾಲದ ಮಾತು ಹಾಗಿರಲಿ" ಎಂದು ಹೇಳಿ ಹೊರಟುಹೋದನು. ಶ್ಯಾಮ ಮಕ್ಕಳಿಗೆ ಪಾಠ ಹೇಳುವುದಕ್ಕೆಂದು ನಡೆದನು. ಅವರು ಹೋದದ್ದೇ ತಡ,—"ಅಕ್ಕ, ಹೊಸ ಎಮ್ಮೆ ಬರುತ್ತದೆಯೇ? ನನಗೆ ತುಂಬ ಹಾಲು ಕೊಡುತ್ತೀಯಾ" ಎಂದನು ಕಿಟ್ಟಣ್ಣ.

"ದೇವರು ಒಳ್ಳೆ ಎಮ್ಮೆಯನ್ನು ಕೊಟ್ಟರೆ ಹಾಲು ಮೊಸರು ಎಲ್ಲಾ ಬರುತ್ತದೆ" ಎಂದಳು. ಆ ದೇವರು ಮಾತ್ರ ತಮ್ಮ ಕೈಯಿಂದ ಈ ಮಕ್ಕ ಳಿಗೆ ಯಾವ ಬಗೆಯ ಅನ್ನದ ಋಣ ಬರೆದಿದ್ದಾನೆಯೋ ಎಂಬ ಯೋಚನೆ ತಪ್ಪಲಿಲ್ಲ. ಕಿಟ್ಟಣ್ಣನ ಮುಖವನ್ನು ನೋಡಿ ಅವಳಿಗೆ ದುಃಖವಾಯಿತು. "ಕಿಟ್ಟಣ್ಣ, ನೀನು ಶಾಲೆಗೆ ಹೋಗು ಪುಟ್ಟು, ಚಂದ್ರನನ್ನೂ ಕರಕೊಂಡು ಹೋಗು. ಅಲ್ಲಿ ಅಣ್ಣ ಬರೆಯುವುದಕ್ಕೆ ಹೇಳಿ ಕೊಡುತ್ತಾನೆ"

"ಅಕ್ಕ ಹೋಗುತ್ತೇನೆ: ಒಂದು ಮಾತು ಹೇಳು—ದೇವರ ಮನೆ ಯಲ್ಲಿ ಎಮ್ಮೆ ಇದೆಯೇ, ತರುತ್ತೀಯಾ ನೀನು?"

"ಅವನ ಮನೆಯಲ್ಲಿ ಎಲ್ಲವೂ ಇದೆ; ಇಲ್ಲದ್ದೇನು?" ಎಂದು ನಕ್ಕಳು.

"ಹಾಗಾದರೆ ತುಂಬ ಎಮ್ಮೆ ತರುವ."

"ಅವನು ಕೊಟ್ಟರೆ"

"ನಾನೂ ನೀನೂ ಹೋಗಿ ಕೇಳುವ. ಅವನ ಹಟ್ಟಿಯಿಂದ ಬಿಡಿಸಿ ಕೊಂಡು ಬರುವ. ನಮ್ಮ ಮನೆಯಲ್ಲಿ ಎಷ್ಟು ದನ, ಎಮ್ಮೆ ಇದೆ ಗೊತ್ತಿ ದೆಯೇ ನಿನಗೆ? ನೂರು ಸಾವಿರ ಇದೆ. ಅಲ್ಲಿಗೆ ಹೋಗಿ ತರುವ" ಎಂದನು ಕಿಟ್ಟಣ್ಣ.

ಮಾತಿಂದ ಹುಡುಗನ ಆಲೋಚನೆ ಊರಿಗೆ ಹೊರಳಿತೆಂದು ವ್ಯಥೆಯಾಯಿತು. ಅದನ್ನು ತಪ್ಪಿಸಲು "ಕಿಟ್ಟಣ್ಣಾ, ನೋಡಿದೆಯಾ? ತೆಂಗಿನ ಮರದ ಮೇಲೆ ಹಸುರು ಹಕ್ಕಿ ಕೂತದ್ದು. ಅದು ಎಷ್ಟು ಚಂದವಿದೆ" ಎಂದು ಅವರಿಬ್ಬರನ್ನು ಹೊರಕ್ಕೆ ಕರೆದುಕೊಂಡು ಬಂದು ತೋರಿಸಿದಳು. ಅಲ್ಲಿಂದ ಅವರಿಬ್ಬರನ್ನು ಕೂಡಿಯೇ ಶಾಲೆಗೆ ಹೋದಳು. ಅಲ್ಲಿ ಕಿಟ್ಟಣ್ಣ, "ನನಗೆ ನೀನೇ ಪಾಠ ಹೇಳಿಕೊಡು" ಎಂದು ಸತ್ಯಳನ್ನು ಕೇಳಿದನು. ಶ್ಯಾಮಣ್ಣ ಉಳಿದವರಿಗೆ ಪಾಠ ಹೇಳಿ ಕೊಡುತ್ತಿದ್ದುದರಿಂದ, ಮಗುವಿನ ಸಂತೋಷಕ್ಕಾಗಿ ಆಕೆ ಹಾಗೆಯೇ ಮಾಡಿದಳು.

ಶ್ಯಾಮು ಶಾಲೆಯನ್ನು ಮುಗಿಸಿ-ಕಲಲನನ್ನೂ ಅವನ ಹೆಂಡತಿಯನ್ನೂ ರಾಮಣ್ಣನ ಮನೆಗೆ ಅಕ್ಕಿ ತರುವುದಕ್ಕೆ ಕಳುಹಿಸಿದನು. ಆ ದಿವಸ ಸಂಜೆಯೊಳಗೆ, ಆರು ಮುಡಿಗಳು ಮನೆಗೆ ಬಂದುವು. ಮರುದಿನ ಸಂಜೆ ಉಳಿದ ನಾಲ್ಕು ಬಂದುವು. ಅವುಗಳ ಹಿಂದೆ ರಾಮಣ್ಣ, ತಾನೇ ಒಂದು ಭಾರಿಯ ಎಮ್ಮೆಯನ್ನು ಅಟ್ಟಿಕೊಂಡು ಬಂದನು. ಒಬ್ಬ ಆಳಿನಿಂದ, ಅದರ ಕರುವನ್ನು ಎತ್ತಿಸಿಕೊಂಡೂ ತಂದಿದ್ದ. ಎಮ್ಮೆಯ ಯಜಮಾನನೂ ಅಲ್ಲಿಗೆ ಬಂದನು. ಹಟ್ಟಿಯಿಂದ ಅವರ ಮನೆಯ ಎಮ್ಮೆಯನ್ನು ಅವನಿಗೆ ಬಿಚ್ಚಿಸಿಕೊಟ್ಟನು. ಸತ್ಯಳಿಂದ ಅವನಿಗೆ ಮೇಲುವಾಸಿಯಾಗಿ ಮೂವತ್ತು ರೂಪಾಯಿಗಳನ್ನು ಕೊಡಿಸಿದನು. "ರಾಮಣ್ಣಾ, ನಿನ್ನನ್ನು ನೆನೆದಷ್ಟು ಸಾಲದು" ಎಂದಳು ಸತ್ಯ. "ಅಮ್ಮಾ, ಮನುಷ್ಯರನ್ನು ನೆನೆಯಬೇಕೆಂದಿಲ್ಲ. ದೇವರನ್ನು ನೆನೆಯಿರಿ. ಎಲ್ಲವನ್ನೂ ನಡೆಯಿಸುವವ ಅವನು" ಎಂದು ರಾಮಣ್ಣ ಉತ್ತರಿಸಿ, ಸ್ವಲ್ಪ ಹೊತ್ತು ಅಲ್ಲಿ ಮಾತನಾಡುತ್ತ ಕುಳಿತಿದ್ದು, ತನ್ನ ಮನೆಗೆ ಹೊರಟು ಹೋದನು. "ಆ ಸಂಜೆ ಕಿಟ್ಟಣ್ಣನ ಆನಂದಕ್ಕೆ ಪಾರವೇ ಇರಲಿಲ್ಲ." 'ಆಲೂ, ಹಾಲು' ಎಂದು ಆತ ಚಂದ್ರನನ್ನು ಕಟ್ಟಿಕೊಂಡು ಕುಣಿದಾಡಿದನು.



# ಹದಿಮೂರನೆಯ ಅಧ್ಯಾಯ

ರಾಧಾಕೃಷ್ಣ ಊರಿಂದ ಕಣ್ಮರೆಯಾಗಿ ಕೆಲವೇ ತಿಂಗಳು ಕಳೆದಿವೆ. ಆತನ ಕಾಗದ ಪತ್ರಗಳು ಮನೆಗೆ ಬರುತ್ತಲಿಲ್ಲವಾದರೂ ಅವನು ಪಡ್ಡನಾಗಿ ಕುಳಿತಿರಲಿಲ್ಲ. ದಿನವೆಲ್ಲ ಶ್ರಮಿಸುತ್ತಲಿದ್ದಾನೆ. ಆತ ಕಾಲುದಾರಿಯಿಂದಲೇ ಜಿಲ್ಲೆಯ ಗಡಿಯನ್ನು ದಾಟಿ ಉತ್ತರ ಕನ್ನಡವನ್ನು ಸೇರಿದ ಮೇಲೆ, ಬಿಡುವಿಲ್ಲದೆ ಶ್ರಮಿಸುತ್ತಿದ್ದಾನೆ. ಉತ್ತರ ಕನ್ನಡ ಜಿಲ್ಲೆಯ ತೀರ ದೊಡ್ಡ ಪ್ರಮಾಣದಲ್ಲಿ ಸತ್ಯಾಗ್ರಹ ಚಳವಳ ಹಬ್ಬಿಕೊಂಡಿತ್ತು. ಜನಗಳು ಗುಂಪಾಗಿ ಉಪ್ಪಿನ ಸತ್ಯಾಗ್ರಹ ಮಾಡಿದರು. ಅರಣ್ಯ ಸತ್ಯಾಗ್ರಹ ಹೂಡಿದರು; ಕರನಿರಾಕರಣೆ ಎಂದೂ ಧುಮುಕಿದರು. ರಾಜಕೀಯ ಅವ್ಯವಸ್ಥೆಯು ಆ ಪ್ರದೇಶದಲ್ಲೆಲ್ಲ ತಲೆದೋರಿತು. ಆತ ಮೊದಲು ಅಂಕೋಲೆಯನ್ನು ಸೇರಿದನು. ಅಲ್ಲಿನ ಹಲವು ಕೆಲಸಗಾರರ ಪರಿಚಯ ಅವನಿಗಾಯಿತು. ಆ ಪ್ರಾಂತ, ಕರ್ನಾಟಕದ ಯುದ್ಧಭೂಮಿಯೆಂದು ತೋರಿತು. ಹೆಂಗಸರು, ಗಂಡಸರು, ಮಕ್ಕಳು ಎಲ್ಲರೂ ಸತ್ಯಾಗ್ರಹಕ್ಕೆ ಧುಮುಕುತ್ತಿದ್ದುದನ್ನು ಕಂಡು ಆತ ಉತ್ಸಾಹಗೊಂಡನು. ತಾನು ಯುದ್ಧರಂಗದ ಮುಂದೆ ನಿಂತುಕೊಂಡು ಕೆಲಸಮಾಡಬೇಕೆಂದು ಹವಣಿಸಿದ ಆದರೆ ತಾಳ್ಮೆಗೆಟ್ಟು ಯಾವ ಕೆಲಸವನ್ನೂ ಮಾಡಬಾರದೆಂದು ತೋರಿತು. ಆ ಊರಿನಲ್ಲಿ ಮುಂದಾಳುಗಳಿಗೂ ಕಡಿಮೆ ಇರಲಿಲ್ಲ. ತನ್ನದೊಂದು ಹೆಚ್ಚು ಏನು-ಎಂದು ತೋರಿತು. ಅದರಿಂದ, ಕೆಲವು ಪರಿಚಯ ಪತ್ರಗಳನ್ನು ತೆಗೆದುಕೊಂಡು ಒಳಪ್ರಾಂತಗಳಾದ, ತೀರ ಮಲೆನಾಡಾದ ಶಿರ್ಶಿ, ಸಿದ್ದಾಪುರಗಳನ್ನು ಸೇರಿದನು. ಅಲ್ಲಿಯೂ, ಜನರ ಉತ್ಸಾಹ ಅಷ್ಟಿಷ್ಟಲ್ಲ. ಅವನಿಗೆ ಆಶ್ಚರ್ಯವಾಯಿತು. ತನ್ನ ಜಿಲ್ಲೆಯಷ್ಟು ವಿದ್ಯೆಯಲ್ಲಿ ಮುಂದುವರಿದ ಪ್ರಾಂತ ಅದಲ್ಲ. ಆದರೂ ಜನರು ತ್ಯಾಗಕ್ಕೆ ಮುಂದುವರಿದಿದ್ದಾರೆ. ಈ ಓದಿದ ಜನಗಳೇ ತ್ಯಾಗಕ್ಕೆ ಹಿಂದೆ ಎಂದು ಅವನಿಗೆನಿಸಿತು. ಓದದವರು ಹೇಳಿದ್ದನ್ನಾದರೂ ಕೇಳುತ್ತಾರೆ. ಯಾವ ಕೆಲಸಕ್ಕೂ ಸರಿಯೆ-ಎಂದೆನಿಸಿತು. ತನ್ನ ದಾರಿಯನ್ನು ನಿರ್ಧಾರ ಮಾಡುವ ಮೊದಲು, ಆ ಪ್ರದೇಶದ ಹಳ್ಳಿಪಳ್ಳಿಗಳನ್ನೆಲ್ಲ ಸಂಚರಿಸಿದನು. ಸರಕಾರದ ಅನುಮಾನಕ್ಕೆ ಗುರಿಯಾಗದ ರೀತಿಯಲ್ಲಿ ಮುಂದುವರಿದನು.

ಆತ ಹೊಗ್ಗಿದ ಒಂದೊಂದು ಮನೆಯೂ, ಒಂದೊಂದು ಕತೆಯನ್ನು ಹೇಳುತ್ತಿತ್ತು. ಬಂಧುಗಳನ್ನು ಸೆರೆಮನೆಗೆ ಕಳುಹಿಸಿದವರು ಕೆಲವರು; ಪೋಲೀಸರ ದಬ್ಬಾಳಿಕೆಗೆ ಗುರಿಯಾದವರು ಕೆಲವರು; ತಮ್ಮ ಆಸ್ತಿ ಮನೆಗಳನ್ನು ದಂಡ ತೆತ್ತು ಕಂಗಾಲಾದವರು ಕೆಲವರು. ಆದರೂ ಜನ ರಲ್ಲಿ ನಿರಾಶೆ ಉಂಟಾಗಲಿಲ್ಲ. ನಾಳಿನ ಗೆಲವನ್ನು ಇದಿರು ಕಾದಿದ್ದಾರೆ. ತಮಗೆ ಜಯವಿದೆ ಎಂದು ನಂಬಿ ಕುಳಿತಿದ್ದಾರೆ. ಒಂದು ವ್ಯಥೆ ಮಾತ್ರ ಅವರನ್ನು ಕೊರೆಯದೆ ಇಲ್ಲ. ಅದು ನಾಳಿನ ಚಿಂತೆಯಲ್ಲ. ಅಂದಿನ ಚಿಂತೆ ಹೊಲಮನೆಗಳನ್ನು ಕಳೆದುಕೊಂಡು ನಿರ್ಗತಿಕರಾಗಿ, ತಮ್ಮವ ರನ್ನು ಸಾಕುವ ಹೊಣೆಗಾರಿಕೆ ಅವರನ್ನು ಹೆದರಿಸುತ್ತಿದೆ. ದನಕರು ಗಳನ್ನು ಕಳೆದುಕೊಂಡುದರಿಂದ ಇದ್ದ ಹೊಲಗದ್ದೆಗಳನ್ನು ಉತ್ತುಬಿತ್ತುವ ವಿಚಾರ ಅವರನ್ನು ಕಂಗಾಲಾಗಿ ಮಾಡಿದೆ. ಬೆಳೆದ ಬೆಳೆಯನ್ನು ಕತ್ತರಿ ಸುವುದೇ, ಬಿಡುವುದೇ-ಎಂದು ಹಲವರಿಗೆ ಯೋಚನೆಯಾಗಿದೆ ಅದನ್ನು ಮನೆಗೆ ತಂದು, ರಾಶಿ ಒಟ್ಟಿದ ಮರುದಿನವೇ, ವಿಧಿಸಿದ ದಂಡಕ್ಕಾಗಿ ಸರಕಾರವು ಅದನ್ನು ಹರಾಜು ಮಾಡಿದರೆ ಗತಿಯೇನು—ಎಂಬ ಭೀತಿ. ಯಾವ ಕದನವೇ ಆಗಲಿ, ಬರಿಯ ಹೊಟ್ಟೆಯಲ್ಲಿ ಅದು ನಡೆಯಲಾರ ದಷ್ಟೆ! ಅಲ್ಲಲ್ಲಿ ತಮ್ಮ ಮತ್ತು ಗೆಳೆಯರ ಆಸ್ತಿಮನೆಗಳು ಹರಾಜಾಗುವು ದನ್ನು ಕಾಣುತ್ತಿದ್ದಾರೆ. ಕೊಳ್ಳುವವರಿಲ್ಲದೆ ಹೋದರೆ, ದೂರದ ಗಿರಾಕಿ ಗಳನ್ನು ಹಿಡಿದು ತಂದು, ಸಾವಿರಾರು ರೂಪಾಯಿ ಬೆಳೆಬಾಳುವ ಭೂಮಿ ಗಳನ್ನು, ನೂರು ಇನ್ನೂರಕ್ಕೆ ಹರಾಜು ಮಾಡಿ, ಜನರ ಮೇಲಿನ ಸೇಡು ತೀರಿಸುವುದನ್ನು ನೋಡುತ್ತಿದ್ದಾರೆ. ನಿನ್ನೆ ದಿನವಷ್ಟೇ, ನೂರು ರೂಪಾ ಯಿಗಳನ್ನು ಕೊಟ್ಟು ಕೊಂಡ ಕೋಣಗಳ ಜತೆಯನ್ನು ತಮ್ಮ ಕಣ್ಣ ಮುಂದೆಯೇ ಇಪ್ಪತ್ತು ರೂಪಾಯಿಗಳಿಗೆ ಲಿಲಾವು ಮಾಡಿ, ಅವನ್ನು ಕೊಂಡ ಸ್ವಾರ್ಥಿಗಳಾದ ಯಾರೋ ಅಟ್ಟಿಕೊಂಡು ಹೋಗುವುದನ್ನೂ ಕಾಣುತ್ತಿದ್ದಾರೆ. ಆಗ ಮನಸ್ಸು ಉರಿಯುತ್ತದೆ; ರಟ್ಟೆ ಸಿಟ್ಟಿನಿಂದ ಕುಣಿ ಯುತ್ತದೆ. ಬಡವನ ಸಿಟ್ಟಿನಂತೆ ಉಗುಳನ್ನು ನುಂಗಿ ಕುಳಿತಿದ್ದಾರೆ ಜನ. ಅಂಥವರ ಎಡೆಯಲ್ಲಿ ಕುಳಿತು, ತನ್ನ ಕರ್ತವ್ಯದ ದಾರಿಯನ್ನು ಕಾಣುತ್ತಿದ್ದಾನೆ ರಾಧಾಕೃಷ್ಣ.

ಅವರನ್ನು ಇನ್ನೂ ಹೆಚ್ಚಿನ ತ್ಯಾಗಕ್ಕೆ ಹುರಿದುಂಬಿಸುವ ಜನರಿದ್ದಾರೆ ಆದರೆ ಆತನಿಗೆ ಮನಸ್ಸು ಬರಲಾರದು. ತನ್ನ ದಾರಿ ತಪ್ಪೋ, ಸರಿಯೋ ಅವನಿಗೂ ತಿಳಿದಿಲ್ಲ. ಅವನ ಮನಸ್ಸನ್ನು ಸಂಕಷ್ಟಕ್ಕೊಳಗಾದವರ ಪಾಲಿನ ಕನಿಕರವು ಆಳುತ್ತಿದೆ. ಅವನಿಗೆ ಅನಿಸಿತು-ಸಂಗ್ರಾಮದಲ್ಲಿ ಮದ್ದುಗುಂಡುಗಳನ್ನು ಒದಗಿಸುವವರು ಇರುವಂತೆಯೇ, ಅಡುಗೆ ಮಾಡುವವರು, ಬಡಿಸುವವರು, ಗಾಯಗೊಂಡವರನ್ನು ಉಪಚರಿಸುವವರು, ಶವ ಸಾಗಿಸುವವರು ಇರಬೇಡವೇ ಎಂದು. ಅಹಿಂಸೆಯ ಯುದ್ಧ ಇದಾದರೂ, ತಮ್ಮ ವೈರಿಯು ಆ ಪಂಥದವನಲ್ಲ. ಗಾಯಗೊಳಿಸುವುದಕ್ಕೆ ಕ್ಷಣಕಾಲ ಸಾಕು. ಅದು ಮಾಯುವುದಕ್ಕೆ ಬಲು ದಿನ ಬೇಕು. ಈ ನಷ್ಟದಿಂದ ಜನತೆ ಪಡುತ್ತಿರುವ ಕಷ್ಟ, ನೋವುಗಳು ಮಾಯಲು ವರ್ಷ ವರ್ಷ ಹಿಡಿದೀತು ಎಂದು ಅವನ ಮನವು ಹೇಳುತ್ತಿದೆ. ಜೈಲಿಗೆ ಹೋಗಲು ಅಂಜಿಕೆ ಆತಗೆ ಇಲ್ಲವಾದರೂ, ನೇತಾರನಾಗುವ ಬಯಕೆ ಹೋಯಿತು. ಹಿಂಗಾವಲು ನನಗೆ—ಹಸಿದ ನಾಲ್ವರಿಗೆ ಅನ್ನ ಹುಡುಕಿ ಕೊಡುವ ಕೆಲಸ ತನ್ನದು. ಉಕ್ಕು ಆವೇಶಗಳ ಕಾಲದಲ್ಲಿ ಸಲಿಸಿದ ತ್ಯಾಗಕ್ಕಾಗಿ, ಮರುಗಳಿಗೆ ಪಶ್ಚಾತ್ತಾಪ ಪಡದಂತೆ, ಹಿತವಚನ ಹೇಳುವುದು ತನ್ನ ಕೆಲಸ ಎಂದು ನಿರ್ಧರಿಸಿದನು. ಇಂಥ ಕೆಲಸ ಮಾಡುವವನು ತಾನೊಬ್ಬನೇ ಎಂದು ಅವನು ತಿಳಿದಿರಲಿಲ್ಲ. ತನಗದು ಒಪ್ಪಿತವಾದ ಕೆಲಸ; ಇಷ್ಟೆ. ಈ ಕೆಲಸದ ವಿಸ್ತಾರ ಅವನಿಗೆ ತಿಳಿದಿತ್ತು. ಅದರಿಂದ, ನಾಡಿನ ನಾಯಕನಾಗಲು ಹವಣಿಸದೆ ಆ ಮಲೆನಾಡಿನ ಕೊಂಪೆಯಲ್ಲಿ ವಾಸಿಸಲು ನಿಶ್ಚಯಿಸಿದ. ಘಟ್ಟದ ತೀರ ಮಗ್ಗುಲಿನ ನಾಗೇನಹಳ್ಳಿ ಎಂಬಲ್ಲಿ ಬಿಡಾರ ಮಾಡಿದ. ನಾಗೇನಹಳ್ಳಿಯು ಕಾಡು ಗುಡ್ಡಗಳಿಂದ ಸುತ್ತುವರಿದ ಊರು. ಬಂದು ಹೋಗವುದಕ್ಕೆ ಒಂದೆರಡು ಕಾಡುದಾರಿಗಳು ಮಾತ್ರ. ಸಮನಾದ ರಸ್ತೆಗೆ ಹತ್ತು ಮೈಲು ದೂರ ನಡೆಯಬೇಕು. ಆ ಘಟ್ಟದ ಸೆರಗಿನಲ್ಲಿ ಊರಿಗೆ ಮುಂಚೆಯೇ ಮಳೆಗಾಲ. ಹೆಜ್ಜೆ ಹೆಜ್ಜೆಗೂ ಜಿಗಣೆಗಳ ಉಪದ್ರ. ಅಂಥ ಮೂಲೆಯಲ್ಲಿಯೂ ಜನ ತಮ್ಮ ಪಾಲಿನ ಕರ್ತವ್ಯ ಸಲಿಸಿದ್ದರು. ಕೊಡಲಿರಾಮರಾಗಿ ಅರಣ್ಯಗಳಿಗೆ ನುಗ್ಗಿ, ಮರಮುಟ್ಟುಗಳನ್ನು ಕಡಿದು, ಸರಕಾರದ ಕೋಪಕ್ಕೆ ಬಲಿಯಾಗಿದ್ದರು.

ನಾಗೇನಹಳ್ಳಿ ದೊಡ್ಡದಾದ ಗ್ರಾಮ. ಅಂದರೆ ವಿಶಾಲವಾದ ಗ್ರಾಮ. ಮನೆಗಳಿರುವುದು ನಲ್ವತ್ತೋ, ಐವತ್ತೋ; ಒಂದೊಂದು ಮೂಲೆಯಲ್ಲಿ. ಅಲ್ಲಿನವರು ಆರಾರು ಮಂದಿ ಪಂಗಡವಾಗಿ ಸತ್ಯಾಗ್ರಹ ಆರ್ಪಿಸಿದರು. ಕೊನೆ ಕೊನೆಗೆ ಕೊಡಲಿ ಹಿಡಿದು ಹೊರಟಾಗಲೇ ಜನರನ್ನು ಸೆರೆಗೆ ಒಯ್ದರು. ಈತ ಆ ಊರನ್ನು ಸೇರುವಾಗ ಅಲ್ಲಿ ಚಳವಳದ ಪ್ರಕರಣ ಮುಗಿದಿತ್ತು. ಮೊದಲು ಆತ ಹೋದುದು ಈಚಣ್ಣಭಟ್ಟರ ಮನೆಗೆ. ಈಚಣ್ಣನವರಿಗೆ ಎರಡನೆಯ ಮದುವೆ ಆಗಿತ್ತು. ಮೊದಲಿನ ಹೆಂಡತಿ ಉಳಿದಿಲ್ಲ. ಈಗಿನ ವಳು ಸುಬ್ಬಮ್ಮ; ಆಕೆ ಅರಣ್ಯ ಸತ್ಯಾಗ್ರಹ ಒಡ್ಡಿ ಸೆರೆಗೆ ಗುರಿಯಾದಳು. ಪ್ರಥಮದ ಹತ್ತು ದಿನಗಳಲ್ಲಿಯೇ ನಾಲ್ಕಾರು ಹಳ್ಳಿಗಳಿಂದ ಅರುವತ್ತು, ಎಪ್ಪತ್ತು ಮಂದಿಗೂ ಹೆಚ್ಚಿಗೆ ಜನ ಬಂಧನಕ್ಕೊಳಗಾದರು. ಪೋಲೀಸರ ಪ್ರತಿಭಟಿ ಭರದಿಂದ ನಡೆದು, ಚಳವಳ ನಿಂತಿತು. ಎಲ್ಲರೂ ಜೈಲಿಗೆ ಹೋ ಗುವಂತಿಲ್ಲವಷ್ಟೆ. ಹೋಗುವವರೆಲ್ಲರೂ ಹೋಗಿ ಮುಗಿಯಿತು. ಈಗ ಉಳಿ ದವರ ಪಾಡನ್ನು ಯೋಚಿಸುವ ಕಾಲ ಬಂದಿದೆ. ಅಲ್ಲಿನ ಒಬ್ಬನೇ ವ್ಯಾಪಾರಿ ಆನಂದ ನಾಯಕ ಎಂಬವನೂ ಬಂಧನಕ್ಕೊಳಗಾದನು. ಅವನ ಅಂಗಡಿ ಜಪ್ತಾಯಿತು. ಅವನ ಮನೆಯಲ್ಲಿ ಹೆಂಡತಿ, ಮೂವರು ಮಕ್ಕಳು ಮಾತ್ರ ಉಳಿದರು. ಉಪ್ಪು, ಮೆಣಸು ಮಾರಿ ಜೀವನ ನಾಗಿಸುತ್ತಿದ್ದ ಅವರ ಮನೆಗೆ ರಕ್ಷಕರಿಲ್ಲದಾಯಿತು ಈಚಣ್ಣ ಭಟ್ಟರ ಮನೆಯಲ್ಲಿದ್ದವರು ಮೂರು ಜನ. ಈಗ ತಂದೆ ಮಕ್ಕಳಿಬ್ಬರೇ ಉಳಿದರು. ಅವರ ಕೊಟ್ಟಿಗೆಯಿಂದ ಜಾನುವಾರುಗಳನ್ನು ಅಟ್ಟಿ, ಎಲ್ಲಿಗೋ ಸಾಗಿಸಿದರು. ಬೇಸಾಯಕ್ಕಿದ್ದ ಊ ರಿನ ಆಳುಗಳು ಬೆದರಿ, ಘಟ್ಟದ ಕೆಳಗೆ ತಮ್ಮ ನೆಂಟರ ಮನೆಯನ್ನು ಸೇರಿ ದರು. ಇನ್ನು ಅಲ್ಲಿನ ಮೂರು ಅನುಕೂಲವಂತ ಬ್ರಾಹ್ಮಣರ ಮನೆಗಳಿಂದ ಹಿರಿಯರೆಂಬವರು ಆರು ಮಂದಿ ಹೋಗಿದ್ದಾರೆ. ಅವರ ಆಸ್ತಿಪಾಸ್ತಿಗಳು ಹರಾಜಾದುವು. ಆ ಆಸ್ತಿಯನ್ನು ಬೆಲೆಗೆ ಕೊಂಡಾತ ಬಂದು ಮನೆಗೆ ಇನ್ನೂ ಬಂದಿರಲಿಲ್ಲ. ಮನೆಯ ಅಕ್ಕಿ, ಪಾತ್ರೆ, ಪರಡಿಗಳನ್ನು ನಾಗಿಸಿದ್ದಾ ಗಿದೆ. ಆ ಊರಲ್ಲಿ ಇನ್ನೊಂದು ಗುಡಿಗಾರರ ಮನೆಯಿದೆ. ಆ ಮನೆಯವ ನಿಗೂ ಉತ್ಸಾಹ ತುಂಬಬೇಕೇ? ಅವನೂ ಸತ್ಯಾಗ್ರಹಕ್ಕೆ ಹೋದ. ಮನೆ ಯಲ್ಲಿ ಉಳಿದುದು ಅವನ ಮುದುಕಿ ತಾಯಿ, ಹತ್ತು ವರ್ಷದ ಚಂದಪ್ಪ ನೆಂಬ ಹುಡುಗ. ಅವನಿರುವಾಗ, ಬೇಸಾಯ, ಗುಡಿಗಾರಿಕೆಗಳಿಂದ

ಹೇಗೋ ಅವನ ಜೀವನ ಸಾಗುತ್ತಿತ್ತು. ಅವನು ಕಡಚಲು ನೇಗಿಲುಗಳನ್ನು ಬಿಟ್ಟು ಕಾಡು ಕಡಿಯಲು ಹೋಗಬೇಕೇ? ಈಗ ಮನೆಯಲ್ಲಿ ಉಳಿದುದು ಅಳುತ್ತಿರುವ ಮುದುಕಿ, ಮಗ. ಆಚೀಚೆ ಹೋಗಲು ಆಕೆಗೆ ಕೋಲು ಬೇಕು, ಜನಬೇಕು.

ರಾಧಾಕೃಷ್ಣ ಆ ಊರನ್ನು ಸೇರಿದ ಮರುದಿನವೇ, ಹರಾಜಿನಲ್ಲಿ ಭೂಮಿಯನ್ನು ಕೊಂಡ ಒಬ್ಬಾತ ಕೂಲಿಗಳನ್ನು ಕರೆದುಕೊಂಡು ಪೋಲೀಸ್ ಬೆಂಬಲದೊಡನೆ ನಾಗೇನಹಳ್ಳಿಗೆ ಬಂದನು. ಅವರಿಗೆ ಆ ಊರಿನ ದಾಂಧಲೆಗೆ ಅಲ್ಲಿನ ಮಹಾಬಲ ಭಟ್ಟರು, ಗೋಪೀ ಭಟ್ಟರು—ಮುಖ್ಯ ಕಾರಣರೆಂದು ಯಾರೋ ಹೇಳಿದ್ದರಂತೆ. ಅವರನ್ನು ಹಿಡಿದು ಸೆರೆಮನೆಗೆ ಒಯ್ದಾಗಿತ್ತು. ಆದರೆ ಮನೆಯ ಜನ ಇನ್ನೂ ಅಲ್ಲೇನೇ ಇದ್ದಾರೆ. ಪೋಲೀಸಿನವರು ಬಂದು "ಈ ಮನೆ ಯಲ್ಲಾಪುರದ ಸುಲೇಮಾನ್ ಸಾಹೇಬರಿಗೆ ಆಗಿದೆ. ನೀವು ಕೂಡಲೇ ಬಿಟ್ಟು, ಹೊರಡಬೇಕು" ಎಂದು ಮಹಾಬಲ ಭಟ್ಟರ ಮನೆಯವರಿಗೆ ಆಜ್ಞೆ ಮಾಡಿದರು. ಬೆದರಿಕೆಯಿಂದ ಆ ಮನೆಯ ಹೆಂಗಸರು ಮಕ್ಕಳನ್ನು ಸ್ಥಳದಿಂದ ಹೊರಡಿಸಿಯೇ ಬಿಟ್ಟರು.

ಅವರೆಲ್ಲ ಈಚಣ್ಣ ಭಟ್ಟರಲ್ಲಿಗೆ ಪಡೆಯಾಗಿ ಬಂದರು. ರಾಧಾಕೃಷ್ಣ ಅವರಿಗೆ ಧೈರ್ಯ ಹೇಳುತ್ತಿದ್ದ. "ನಿಮ್ಮ ಆಸ್ತಿ ಮನೆಯನ್ನು ಬಿಟ್ಟದ್ದಾರಲ್ಲ. ಜಾನುವಾರಗಳನ್ನೆನೋ ಸಾಗಿಸಿದರು. ಇವರಿಗೆ ನಿಲ್ಲುವುದಕ್ಕೂ ತಾವಿಲ್ಲದಂತೆ ಮಾಡಿದ್ದಾರೆ. ನೀವು ಅವರೆಲ್ಲರಿಗೂ ಇಲ್ಲೇನೆ ಆಶ್ರಯ ಕೊಡಬೇಕು" ಎಂದು ಹೇಳಿದ. ಈಚಣ್ಣ ಭಟ್ಟರು ಅದಕ್ಕೂ ಹೆಚ್ಚಿನ ತ್ಯಾಗಕ್ಕೆ ಸಿದ್ಧರು. ಅಲ್ಲಿಂದ ಮುಂದಕ್ಕೆ ರಾಧಾಕೃಷ್ಣನಿಗೆ ಆ ಹಳ್ಳಿಯಲ್ಲಿ ಕಂಗಾಲಾದವರ ಮನೆಗಳಿಗೆ ಭೇಟಿ ಕೊಟ್ಟು, ಸಮಾಧಾನ ಹೇಳುವ ಕೆಲಸ. ಈಚಣ್ಣ ಭಟ್ಟರ ಮನೆಯು ನಿರಾಶ್ರಿತರಿಗೆ ಒಂದು ಛತ್ರವಾಯಿತು. ಮಹಾಬಲ, ಗೋಪಿ ಭಟ್ಟರುಗಳ ಮನೆಯ ನಾಲ್ಕಾರು ಹೆಂಗಸರು ಮಕ್ಕಳು ಅಲ್ಲಿಗೆ ಬಂದರು. ಗುಡಿಗಾರನ ಮನೆಯ ಮುದುಕಿ, ಮಗು ಅಲ್ಲೇನೆ ಬಂದು ಸೇರಿದರು. ಹಿಂದೆ ಹೇಳಿದ ಗಂಗೆ, ಶಾರದೆಯರು ಗೋಪಿ ಭಟ್ಟರ ಮಕ್ಕಳು; ಮಹಾದೇವ ಅವರ ಸೋದರ ಮಹಾಬಲ ಭಟ್ಟರ ಮಗನು. ಈಚಣ್ಣಯ್ಯ "ಎಷ್ಟು ಇದ್ದರೇನು? ರಾಮನೇ ಅರಣ್ಯಕ್ಕೆ ಹೊರಡಲಿಲ್ಲವೇ" ಎನ್ನುವಂತಾಯಿತು. ಇಷ್ಟೊಂದು ಮಂದಿ ಕುಳಿತರೆ ಮನೆಯ

ಅಕ್ಕಿ ಸಾಲದೆಂದು ಅವರಿಗೆ ಗೊತ್ತು. ಅದಕ್ಕಾಗಿ ರಾಧಾಕೃಷ್ಣ "ಇಲ್ಲಿ ಮುಂದಿನ ಪಾಡು ಹೇಗೆ ಬರುತ್ತದೆಯೋ, ಹೇಳುವುದಕ್ಕಿಲ್ಲ. ಪೋಲೀಸರ ಹಾವಳಿಯಿಂದ ಮತ್ತೂ ಕಷ್ಟ ದಿವಸಗಳು ಬರಬಹುದು" ಎಂದು ಎಚ್ಚರಿಸಿ ಅಲ್ಲಿರುವ ಆರು ಮಂದಿ ಮಕ್ಕಳನ್ನು ಮೊದಲು ಕಿರಿಪದವಿಗೆ ಸಾಗಿಸಿ ಬಿಟ್ಟನು.

ಈಚಣ್ಣಯ್ಯನವರು ಹೋಗಿ, ಅವರನ್ನೆಲ್ಲ ಬಿಟ್ಟುಬರುವ ತನಕ, ಹೊಸಬನಾದರೂ, ಅವನೇ ಆ ಊರಿನ ನಾಯಕ. ಅವರೆಲ್ಲರನ್ನು ಕೂಡಿಸಿ ಸಂದರ್ಭ ಬಂದರೆ, ಆ ಸ್ಥಳ ಬಿಡುವುದಕ್ಕೂ ಸಿದ್ಧಗೊಳಿಸಬೇಕು. ಅವರು ಅಲ್ಲಿಯೇ ಇರುವುದಾದರೂ ಅವರೆಲ್ಲರಿಗೆ ಹೊತ್ತಿಗೆ ಒಮ್ಮೆಯಾದರೂ ಊಟಕ್ಕೆ ಒದಗಿಸಬೇಕು. ಆ ಚಿಕ್ಕ ಹಳ್ಳಿಯ ಸಂಪತ್ತು, ಸುಲಿದು ಸೂರೆಯಾಗಿತ್ತು. ಅದಕ್ಕಾಗಿ ಆತ ಸುತ್ತು ಮುತ್ತಲಿನ ಪಟ್ಟಣಗಳಿಗೆ, ಹಾನಿತಟ್ಟದ ಹಳ್ಳಿಗಳಿಗೆ ಪ್ರವಾಸಮಾಡಿ, ನಾಗೇನಹಳ್ಳಿಯವರ ಗೋಳನ್ನು ಹೇಳಿ, ಅಂಥವರ ಕೈಯನ್ನು ಬಿಡಬಾರದೆಂದು ಅಂಗಲಾಚಿ ಸಹಾಯವನ್ನು ಬೇಡಬೇಕಾಯಿತು. ಅವನ ಕಾರ್ಯವು ತೀರ ನಿರಾಶೆಯಾಗಲಿಲ್ಲ. ಸ್ವಲ್ಪ ಹಣ ಸಿಕ್ಕಿತು. ಅದರಿಂದ ಅಕ್ಕಿಯನ್ನು ಬೆಲೆಗೆ ಕೊಂಡು, ಗಾಡಿ ಸಂಚಾರವಿಲ್ಲದ ಆ ಊರಿಗೆ, ತಲೆ ಹೊರೆಯಿಂದ ಸಾಗಿಸಿ ತರಬೇಕಾಯಿತು.

ಹೀಗೆ ಸಂಚಾರಕ್ಕೆ ಆತ ಹೋಗುವಾಗಲೆಲ್ಲ, 'ನೋಗು ಮರೆಯಿಸಿ ಕೊಂಡು ಹೋಗುವುದು ಅವನ ಪರಿಪಾಠ ನಿಜ ವೇಷದಲ್ಲಿಯೇ ಅಲೆದಾಡಿದರೆ, ತನ್ನನ್ನು ಅರಿಸಿ, ಸೆರೆಮನೆ ಒಯ್ಯಬಹುದು ಎಂಬುದು ಅವನ ಅನುಮಾನ. ಈಚಣ್ಣ ಭಟ್ಟರು ಮಕ್ಕಳನ್ನು ಮಂಗಳೂರಿಗೆ ಬಿಟ್ಟುಬಂದು, ತಮ್ಮ ಊರನ್ನು ಸೇರುವಾಗ, ರಾಧಾಕೃಷ್ಣ ದಾಡಿ ಮೀಸೆಯನ್ನು ಬೆಳೆಯ ತೊಡಗಿದ್ದ.

ಆ ಸ್ವಲ್ಪ ದಿವಸಗಳಲ್ಲಿ ಆ ಗ್ರಾಮದಲ್ಲಿ ತುಂಬ ವಿಪ್ಲವವಾಯಿತು. ಗೋಪೀ ಭಟ್ಟರ ಮತ್ತು ಅವರ ತಮ್ಮ ಮಹಾಬಲ ಭಟ್ಟರ ಭೂಮಿ ಮನೆಯನ್ನು ಕ್ರಯಕ್ಕೆ ಕೊಂಡ ಸುಲೇಮಾನ್ ಸಾಹೇಬರು ಅಲ್ಲಿಗೆ ಬರಲಿಲ್ಲವಾದರೂ, ಅವರ ಪ್ರತಿನಿಧಿಗಳು ಆ ಸ್ಥಳದಲ್ಲಿ ಬಂದು ಕುಳಿತರು. ಅವರ ತೋಟ, ಮನೆಯ ರಖೋಲೆಗೆ, ನಾಲ್ಕು ನಾಲ್ಕು ಆಳನ್ನು ಕಳುಹಿಸಿದ್ದರು. ಆ ಆಳುಗಳನ್ನು ಓಡಿಸದೆ ಹೋದರೆ, ಮುಂದಿನ ವರ್ಷ, ಜನ ಸಾಗುವಳಿಮಾ

ಡುವಂತಿಲ್ಲ. ಇನ್ನೂ ಹೆಚ್ಚಿಗೆ ಅವರ ಆಳುಗಳು ಬಂದು, ತೋಟದ ಕೆಲಸ, ಭೂಮಿಯ ಕೆಲಸ ತೊಡಗಿದರೆ, ಭೂಮಿ ಊರವರ ಕೈಬಿಟ್ಟಂತಯೇ. ಈತ ಬಂದ ಆಳುಗಳ ಸ್ನೇಹವನ್ನು ಮಾಡಿದ ಅವರ ಮನಸ್ಸಿನಲ್ಲಿ ಊರಿನ ಭೂತ ಪ್ರೇತಗಳ ಬೆದರಿಕೆಯನ್ನು ಹುಟ್ಟಿಸಿದ. ಬಂದ ಆಳುಗಳು ತಾವಾಗಿ ಏನು ಮಾಡಲೂ ಸಾಧ್ಯವಿರಲಿಲ್ಲ. ಜ್ವರದಿಂದ ಆಗಾಗ ಮಲಗಿಕೊಳ್ಳಬೇಕಾಗಿತ್ತು. ಅವರನ್ನು ಓಡಿಸುವ ಸಲುವಾಗಿ ರಾತ್ರಿ ಮನೆಯ ಸುತ್ತು, ಕೂಗು, ಕಿರುಚುಗಳನ್ನು ಹಾಕಿಸಿದ ಕೋಳಿ ದೈವಗಳನ್ನು ಸಿರ್ಮಿಸಿದ. ಈ ಎಲ್ಲ ಬೆದರಿಕೆಗಳಿಂದ ಹೆಚ್ಚಿನ ಆಳುಗಳು ಓಡಿದರು

ಊರಿನ ಗದ್ದೆಗಳಲ್ಲಿ ಎರಡನೆಯ ಒಂದು ಬೆಳೆ ಬಲಿತು ನಿಂತಿತ್ತು. ಬೆಳೆದವರು ಭಟ್ಟರ ಮನೆಯವರಾದರೂ ಸಾಹೇಬರಿಗೆ ಅದನ್ನು ಬಿಟ್ಟು ಬಿಡುವ ಮನಸ್ಸಾದೀತೇ? ಅವರು ಯಲ್ಲಾಪುರದಿಂದ ತಮ್ಮ ನ್ನಂತ ಆಳುಗಳನ್ನು ಅದಕ್ಕೆ ಕಳುಹಿಸಿಕೊಟ್ಟರು. ಈಚಣ್ಣ ಬಟ್ಟರ ಮನಸ್ಸಿನಲ್ಲಿ ತಮ್ಮ ಹೊಲದ ಬತ್ತ ಹೋಗದೆಂದು ಗೊತ್ತಿದ್ದರೂ, ತಮ್ಮ ಗೆಳೆಯರ ಬೆಳೆಯೂ ತಪ್ಪುವುದೆಂದು ಖಂಡಿತವಾಯಿತು. ಆ ಬತ್ತ ಉಳಿದಿದ್ದರೆ, ಊರ ಜನ, ಮಳೆಗಾಲವನ್ನು ಹೇಗಾದರೂ ನಿಶ್ಚಿಂತೆಯಿಂದ ಕಳೆಯಬಹುದು. ಇಲ್ಲವಾದರೆ ಮಳೆಗಾಲ ಕಳೆಯುವುದು ಕಷ್ಟ. ಮುಂದೆ ಆಳಿದುಳಿದ ಗದ್ದೆಗಳನ್ನಾದರೂ ಸಾಗುವಳಿ ಮಾಡಬೇಕು. ರಾಧಾಕೃಷ್ಣ ಬೇಡಿ ತರುತ್ತಿದ್ದ ದವಸ, ಧಾನ್ಯ ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆಯಾಗಿತ್ತು. ಸಾಹೇಬರ ಆಳುಗಳು ಸಾಕಷ್ಟು ಬತ್ತ ಸಾಗಿಸಿಬಿಟ್ಟರು, ಮಳೆಗಾಲದ ಪ್ರಶ್ನೆ ಬಹು ದೊಡ್ಡದಾಗಿ ಊರವರವರ ಮುಂದೆ ನಿಂತಿತು.

ರಾಧಾಕೃಷ್ಣ ಅವರಿಗೆ, ಹೇಗಾದರೂ ಉಳಿದ ಭೂಮಿಯ ಸಾಗುವಳಿ ಮಾಡಲು ಹೇಳಿದ. ಗುಡ್ಡದಲ್ಲಿ ಗೆಣಸು, ರಾಗಿ ಬೆಳೆಯಲು ಹೇಳಿದ. ಮೊದಲೇ ಆಳುಗಳ ಅನುಕೂಲತೆ ಕಡಿಮೆಯಿರುವ ಗ್ರಾಮ. ಈಗ ಇದ್ದವರೂ ಹೋಗಿದ್ದಾರೆ. ಜಾನುವಾರುಗಳು ಇಲ್ಲದೆ, ಆಳುಗಳು ಇಲ್ಲದೆ, ಜಮೀನನ್ನು ಎಷ್ಟೆಂದು ಸಾಗುವಮಾಡಬಹುದು? ಮಳೆಗಾಲದಲ್ಲಿ ಹಸಿವೆಗೆ ಕಾಡು ಗೆಣಸನ್ನೂ ತಂದು ತಿಂದರು. ಬಯನಿ ತಿರುಳಿನ ಅಂಬಲಿಯನ್ನು ಉಂಡರು. ದಿನ ದಿನದ ಬೇಗೆಯಿಂದ ಅವರ ಧೈರ್ಯ ಕುಸಿಯಿತು. ರಾಧಾಕೃಷ್ಣ ಅದೊಂದೇ ಹಳ್ಳಿಯಲ್ಲಿ ಇರಲಾರ. ಇನ್ನೂ ಹತ್ತೆಂಟು

ಗ್ರಾಮಗಳಿಗೆ ಹೋಗಬೇಕು. ಅಲ್ಲಿಯೂ ತನ್ನಿಂದಾದ ಸಹಾಯ ಒದಗಿಸ ಬೇಕು. ಅವನ ಒಂದು ಹೆದರಿಕೆಯೆಂದರೆ ಜನರ ತಾಳ್ಮೆ ಎಷ್ಟು ದಿನಗಳ ತನಕ ಉಳಿಯಬಹುದು—ಎಂದು. ಹೀಗೇನೆ ಚಳವಳ ಮುಂದುವರಿದರೆ ಅವರ ಹೋದ ಬದುಕು ಸಿಕ್ಕೀತೇ? ಸೆರೆಮನೆಗೆ ಹೋದವರು ಮರಳಿಬರು ವಾಗ ಮನೆಮುಂದಿಯ ಪಾಡನ್ನು ಕಂಡು ಹೇಗೆ ಅನಿಸೀತು? ಇಂಥ ಒಂದು ಸಂಗರವನ್ನು ಹೊಡುವಾಗ, ತತ್ಕಾಲಿಕ ಉತ್ಸಾಹ, ತತ್ಕಾಲಿಕ ತಯಾರಿ ಕೆಗಳಿಂದ ಯಶಸ್ಸು ದೊರೆತೀತೇ--ಎಂದೆಲ್ಲ ಆತ ವಿಚಾರ ಮಾಡಬೇಕಾ ಯಿತು.

*　　*　　*　　*　　*

ಒಂದು ದಿನ ಮಹಾಬಲ ಭಟ್ಟರು ತಮ್ಮ ಕಾರಾಗ್ರಹದ ಅವಧಿ ಯನ್ನು ತೀರಿಸಿಕೊಂಡು ಮನೆಗೆ ಹಿಂದಿರುಗಿದರು. ಶಿರ್ಶಿ ಊರಿಗೆ ಬರು ತ್ತಲೇ, ತಮ್ಮ ಆಸ್ತಿ ಮನೆ ಹರಾಜಾದ ವಿಷಯ ತಿಳಿಯಿತು. ಅದರಿಂದ ಮುಖ ಕಳೆಗುಂದಿತು. ಊರಿಗೆ ನಡೆದು ಬಂದು ತಮ್ಮ ಮನೆಗೆ ಕಾಲು ಇರಿ ಸಿದಾಗ, ಅವರ ನಿರಾಶೆಯು ಸಂಪೂರ್ಣವಾಯಿತು. ಮನೆಯಲ್ಲಿ ಕುಳಿತ ವರು ಬೇರೆ ಜನ. ಅವರ ರೌದ್ರ ಕೆರಳಿತು. "ನೋಡುವ, ನನ್ನ ಮನೆ ಯಲ್ಲಿ ಕುಳಿತು, ನನ್ನವರನ್ನು ಓಡಿಸಿ, ದಿಕ್ಕಾಪಾಲು ಮಾಡಿದವರನ್ನು ಉಚ್ಚಾಟಣೆ ಮಾಡಲು ಬರುತ್ತದೆಯೇ, ಇಲ್ಲವೋ ಎಂದು ನೋಡಿಬಿಡು ತ್ತೇನೆ"—ಎಂಬ ಆವೇಶ, ಸೇಡುಗಳು ಮನಸ್ಸಿನಲ್ಲಿ ಮೂಡಿದುವು. ಆದರೆ ಅಲ್ಲಿ ಕುಳಿತಿರುವವರು ಆಳುಗಳು. ತನಗೆ ಅನ್ಯಾಯ ಮಾಡಿದವರು ಬೇರೆ. ಆ ತಿಳಿವಿಲ್ಲದ ಜನರೊಡನೆ ಒದರಿಕೊಂಡು ಪ್ರಯೋಜನವಿಲ್ಲ—ಎಂದು ತೋರಿತು. ಹತ್ತು ನಿಮಿಷ ಕಾಲ, ಎಲ್ಲಿಗೆ ಹೋಗುವುದೆಂದೂ ತೋಚ ಲಿಲ್ಲ. ಅಲ್ಲಿಯೇ ನಿಂತುಕೊಂಡರು. ಅಲ್ಲಿಯ ಒಬ್ಬ ಆಳು, ಅವರ ಮನೆ ಯವರು ಈಚಣ್ಣಯ್ಯನವರಲ್ಲಿ ಇರುವ ವಿಚಾರವನ್ನು ತಿಳಿಸಿದನು. ವಿಚಾರ ಮಗ್ನರಾಗಿ ಅಲ್ಲಿಗೆ ಹೋದರು. ಅಸ್ಥಿರವಾದ ಮನಸ್ಸಿನಿಂದ, ಕುದಿಯು ತ್ತಿದ್ದ ಕೋಪದಿಂದ ಮೈಯೆಲ್ಲ ಬೆವರುತ್ತಿತ್ತು. ಆ ಮನೆಯ ಜಗುಲಿಯ ಮೇಲೆ ಉಸ್ಸೆಂದು ಕುಳಿತುಕೊಳ್ಳುತ್ತಲೇ, ಒಂದಿಷ್ಟು ಸಮಾಧಾನವಾ ಯಿತು. ಮನೆಯವರನ್ನು ಕಂಡು ಅಲ್ಪ ಸ್ವಲ್ಪ ಸಂತೋಷವಾದರೂ,

ಅವರ ಸ್ಥಿತಿಯನ್ನು ಕಂಡು ಸಾಕಷ್ಟು ದುಃಖವೂ ಆಯಿತು. ಆ ನಾಲ್ಕಾರು ದಿವಸಗಳ ಕಾಲ ಅವರ ಮನಸ್ಸಿನ ವಿಪ್ಲವವನ್ನು ಹೇಳಿ ತೀರದು. ದಿನ ವೆಲ್ಲ ಈಚಣ್ಣಯ್ಯನವರೊಡನೆ ತಮ್ಮ ಕೊರಗು, ಸೇಡುಗಳನ್ನು ತೋರಿ ಕೊಳ್ಳುತ್ತಿದ್ದಾರೆ. "ಭಾವ, ಬೇಸಿಗೆಯ ಬತ್ತವನ್ನೆಲ್ಲ ಆ ಸಾಹೇಬನೇ ಸಾಗಿಸಿದನೆಂದು ಹೇಳಿದಿರಿ. ಸಾಗಿಸಿದ್ದಾನೋ, ಇನ್ನೂ ಮನೆಯಲ್ಲೇ ಇರಿಸಿ ದ್ದಾನೋ. ಆದರೆ ಈ ಮೊದಲ ಬೆಳೆಯ ಬತ್ತವನ್ನು ಅವನು ಸಾಗಿಸುವು ದಾದರೆ, ಅದನ್ನು ನಾವು ನೋಡಿಕೊಂಡು ಇರುವುದಕ್ಕಿಂತ ಸಾಯು ವುದು ಮೇಲು" ಎಂದರು. "ಏನು ಮಾಡುವುದು ಮಹಾರಾಯ? ಕಾಲ ಅಂಥದು ಬಂದಿದೆ ಅನುಭವಿಸದೆ ಬೇರೆ ಗತಿ ಇಲ್ಲ" ಎಂದು ನಿಸ್ಸಹಾಯ ರಂತೆ ಅವರು ನುಡಿದರು.

"ನಿನ್ನ ವ್ಯಾಪಾರ ಒಳ್ಳೆ ಚೆನ್ನಾಗಿದೆ! ಹಾಗೆಯೇ ಕುಳಿತಿರುವವನು ನಾನಲ್ಲ: ನಾವು ದೇಶಕ್ಕಾಗಿ ಮನೆಮಾರು ಬಿಟ್ಟದ್ದು, ಈ ಕಳ್ಳನ ಲಾಭ ಕ್ಕಲ್ಲ. ಇಂಥ ಜನರೂ ದೇಶದಲ್ಲಿದ್ದಾರೆಯೇ? ಅವನಂತಹರಿಗೆ ಬುದ್ಧಿ ತಿಳಿಯಬೇಕಾದರೆ, ಬೇರೆಯೇ ದಾರಿ ಇದೆ. ನಮಗಾದ ಹೊಟ್ಟೆಯುರಿ ಅವನಿಗೂ ಆಗಬೇಕು. ಊರಿಗೆ ಸ್ವರಾಜ್ಯ ಬಂದರೆ ನಮಗೆ ಮಾತ್ರ ಬರುವುದು, ಅವನಿಗೆ ಇಲ್ಲ ಎಂದು ತಿಳಿದಿದ್ದಾನೆಯೇನು?" ಎಂದರು. "ಯಾವುದಕ್ಕೂ ಅವರು ಬರಲಿ; ಅವರನ್ನು ಕೇಳುವ" ಎಂದರು ಈಚ ಣ್ಣಯ್ಯ. ಆ "ಅವರೇ" ರಾಧಾಕೃಷ್ಣ. ಮನೆಯಲ್ಲಿ ಶಾರದೆ, ಗಂಗೆ, ಮಹಾದೇವರನ್ನು ಕಾಣದೆ. 'ಮಕ್ಕಳೆಲ್ಲಿ' ಎಂದು ಕೇಳಿದಾಗ ಈಚಣಯ್ಯ ಎಲ್ಲ ಸಂಗತಿಗಳನ್ನು ಹೇಳಿದರು. ಮಕ್ಕಳನ್ನು ಎಲ್ಲಿಗೆ ಕರೆದುಕೊಂಡು ಹೋಗಿ ಬಿಟ್ಟಿದ್ದೇನೆ, ಏತಕ್ಕೆ—ಎಂಬುದನ್ನೆಲ್ಲ ತಿಳಿಸಿದರು. "ನನ್ನ ಮಗು ವನ್ನೂ ಅಲ್ಲಿಯೇ ಬಿಟ್ಟಿದ್ದೇನೆ. ನಿಮಗೆಲ್ಲ ಆರು ತಿಂಗಳಾದರೆ, ನನ್ನವಳಿಗೆ ಒಂದು ವರ್ಷ ಆಯಿತಲ್ಲ" ಬಂದು ಹೇಳಿದರು. ಆಗ ಮಹಾಬಲ ಭಟ್ಟರು "ಹೌದು, ಅದೊಂದು ಕೆಲಸವೇನೋ ಒಳ್ಳೆಯದು ಮಾಡಿದೆ. ನಮ್ಮ ಪಾಡು ಎಷ್ಟು ದಿನ ಹೀಗೆ ಇರುತ್ತದೆಯೋ ತಿಳಿಯುವುದಿಲ್ಲ. ದೊಡ್ಡ ವರು ಹೇಗೂ ದಿವಸಗಳನ್ನು ಕಳೆಯಬಹುದು. ಉಪವಾಸವೋ, ಅರೆ ಹೊಟ್ಟೆಯೋ. ಅಲ್ಲಿಯ ತನಕ ಮಕ್ಕಳ ಯೋಚನೆಯಾದರೂ ನಿಶ್ಚಿಂತೆ ಯಾಯಿತಲ್ಲಾ." ಎಂದು ಸಂತೋಷವನ್ನು ವ್ಯಕ್ತಪಡಿಸಿದರು.

ಇನ್ನೆರಡು ದಿವಸಗಳಲ್ಲಿ ರಾಧಾಕೃಷ್ಣ ಅಲ್ಲಿಗೆ ಬಂದನು. ಈ ಸಾರಿ ಸ್ವಲ್ಪ ಉತ್ಸಾಹದಿಂದಲೇ ಬಂದಿದ್ದ. ಬಂದಾಗ ಬಿಡುಗಡೆಗೊಂಡು ಬಂದ ಮಹಾಬಲ ಭಟ್ಟರ ದರ್ಶನವಾಯಿತು. ಅವರು ಜೈಲಿನ ವಾರ್ತೆಗಳನ್ನೆಲ್ಲ ತಿಳಿಸಿದರು. ಅಲ್ಲಿನ ಕಷ್ಟ, ನೋವುಗಳನ್ನು ಬಣ್ಣಿಸಿದರು. ಆ ಬಳಿಕ ಈತ ಚಳವಳದ ವಾರ್ತೆಯನ್ನೆಲ್ಲ ತರ್ಕಿಸಿ, ಅವರಿಗೆ ಬೇಕಾಗುವ ಉಟದ ಪ್ರಸ್ತಾಪಕ್ಕೆ ಬಂದನು. "ಶಿರ್ಶಿಯ ಒಬ್ಬ ಸ್ನೇಹಿತರು, ತಮ್ಮ ಹೆಸರು ಹೇಳಬಾರದು ಎಂದು ಹೇಳಿ ನೂರು ರೂಪಾಯಿ ಕೊಟ್ಟಿದ್ದಾರೆ. ನಮಗೆ ಜನಸಹಾಯವಿಲ್ಲದಾಗ, ಹೊರಗಿನಿಂದ ಬತ್ತ ತರುವುದು ತುಂಬ ಕಷ್ಟ. ನಾವು ಆ ಸುಲೇಮಾನ್ ಸಾಹೇಬನ ಬತ್ತ ಕೊಂಡರೆ ಹೇಗೆ? ನಮಗೆಂದೇ ಕೇಳಿದರೆ ಏನೂ ಸಿಗಲಿಕ್ಕಿಲ್ಲ ಈಚಣ್ಣ ಭಟ್ಟರ ಮನೆ ಸತ್ಯಾಗ್ರಹಿಗಳ ಒಂದು ಶಿಬಿರವಾಗಿದೆ ಎಂದು ಶಿರ್ಶಿಯಲ್ಲಿಯೂ ವರ್ತಮಾನವಾಗಿದೆ ಇಲ್ಲಿಗೆ ಕಾಳು ಕಡಿ ಬಾರದ ಹಾಗೆ ಮಾಡುತ್ತೇವೆ ಎಂದು ಒಬ್ಬ ಪೋಲಿಸ್ ಇನ್ಸ್ಪೆಕ್ಟರ ಜಂಬ ಕೊಚ್ಚುತ್ತಿದ್ದುದು ನನ್ನ ಕಿವಿಗೆ ಬಿತ್ತು. ಹೊರಗಿನವರನ್ನು ಹೆದರಿಸಿ, ಹಾಗೆ ಮಾಡಲಿಕ್ಕೂ ಸಾಕು. ಅದಕ್ಕೇನೆ, ಊರಿನ ಬತ್ತ ಊರಿನಲ್ಲೇ ಉಳಿಸಿಕೊಳ್ಳಬೇಕು. ಸಾಹೇಬರ ಒಬ್ಬ ಸ್ನೇಹಿತರನ್ನು ಹಿಡಿದು, ಅವರಿಗೆ ಎಂದು ಹೇಳಿ, ಬತ್ತ ಕೊಳ್ಳುವುದು ಸಾಧ್ಯವಿದೆ" ಎಂದನು.

ಮಹಾಬಲ ಭಟ್ಟರು ಕಿಡಿಕಿಡಿಯಾದರು. "ಏನು ನಮ್ಮ ಗದ್ದೆಯಲ್ಲಿ ಬೆಳೆದ ಅಕ್ಕಿಯನ್ನು ನಾವು ದುಡ್ಡುಕೊಟ್ಟು ತೆಗೆದುಕೊಳ್ಳುವುದೇ? ಆ ಅಕ್ಕಿಯನ್ನು ಕೊಂಡು, ಉಂಡು ಬದುಕುವ ಬದಲು ಉಪವಾಸ ಸತ್ತರೆ ಆಗದೇ" ಎಂದರು.

"ಇಷ್ಟು ಜನ ಹೆಂಗಸರು, ಮುದುಕರು ಇರುವಾಗ ಹಾಗೆ ಆವೇಶಗೊಂಡದ್ದರಿಂದ ಏನು ಫಲ?" ಎಂದನು ರಾಧಾಕೃಷ್ಣ.

"ನನಗೆ ಅದು ಯಾವುದೂ ತಿಳಿಯದು. ನಾನು ಆ ಬತ್ತವನ್ನು ನಿರ್ನಾಮ ಮಾಡದೆ ಇರುವವನಲ್ಲ. ನನಗೆ ಜೀವದ ಹೆಂಗೂ ಇಲ್ಲ. ಆ ದಿನ ಮರ ಕಡಿದು ಜೈಲಿಗೆ ಹೋದರೆ, ನಾಳೆ ಇಷ್ಟು ಮಾಡಿ ಹೋಗುತ್ತೇ"ನೆ ಎಂದರು. ಅವರ ಒರಟು ತನ, ಸಿಟ್ಟುಗಳನ್ನು ಕಂಡು ರಾಧಾಕೃಷ್ಣ ಗಾಬರಿಯಾದ. "ಇದು ಸತ್ಯಾಗ್ರಹ; ಶಾಂತಿಯುದ್ಧ. ನಿಮ್ಮದು ಹಿಂಸೆಯ ರೀತಿಯಾಯಿತಲ್ಲ" ಎಂದನು.

"ಸತ್ಯಾಗ್ರಹ ಸರಕಾರದೊಡನೆ; ಸುಲೇಮಾನ ಸಾಹೇಬನಿಗೂ, ಅದಕ್ಕೂ ಸಂಬಂಧವಿಲ್ಲ. ನಮ್ಮ ಮನೆಯನ್ನು ಮುರಿದವನೊಡನೆ ಅದೆಲ್ಲ ಬೇಡ. ಅಲ್ಲದೆ ನಾನು ಯಾರದ್ದಾದರೂ ಪ್ರಾಣ ತೆಗೆಯುತ್ತೇನೆಯೇ? ಯಾರನ್ನೂ ಹೊಡೆಯುವುದಿಲ್ಲ, ಬಡಿಯುವುದಿಲ್ಲ." ಎಂದು ನಮ್ಮದೇ ಆದ ತರ್ಕವನ್ನು ಹೂಡಿದರು. ಆತ ಆಗ ಮಾತನಾಡಲಿಲ್ಲ. 'ಆ ಮೇಲೆ ವಿಚಾರ ಮಾಡುವ, ಎಂದು ಸುಮ್ಮನಾದ.

ಸುಲೇಮಾನ್ ಸಾಹೇಬರಿಗೂ ಊರವರ ಹೆದರಿಕೆ ಇಲ್ಲದೆ ಇಲ್ಲ. ನಾಗೇನಹಳ್ಳಿಯವರು ಬೆಳೆದ ಬತ್ತವನ್ನು, ಇಲ್ಲವೇ ಅಲ್ಲಿ ತಾನೇ ಬೆಳೆಸಿದ ಬತ್ತವನ್ನು ರಾಜಾರೂಢಿಯಿಂದ ತಮ್ಮ ಊರಿಗೆ ಸಾಗಿಸುವ ಧೈರ್ಯ ಅವರಿಗೂ ಇದ್ದಿರಲಿಲ್ಲ. ಅಲ್ಲಿಂದ ಹತ್ತು ಮೈಲಿನ ತನಕ ಬೀಡು ಬಿಡಾರವಿಲ್ಲದ ದಾರಿಯಲ್ಲಿ ಬತ್ತ ಸಾಗಬೇಕು. ಪೈರನ್ನು ಕಟಾವು ಮಾಡಿ ಸಂಗ್ರಹಿಸುವುದೇ ಕಷ್ಟದ ಕೆಲಸವಾಗಿತ್ತು. ಅಗ್ಗಕ್ಕೆ ಸಿಕ್ಕಿದ ಭೂಮಿ ಎಂಬ ಹಿಗ್ಗಿನಿಂದ ದುಬಾರಿ ಮಜೂರಿ ಕೊಟ್ಟು, ಯಲ್ಲಾಪುರದಿಂದ ಆಳುಗಳನ್ನು ಕಳುಹಿಸಿ, ಅಷ್ಟು ಕೆಲಸ ಮಾಡಿಸಿದ್ದರು. ಕೊಯಿಲಿನ ಹಿಂದೆಯೇ ಬತ್ತ ತರಿಸಿದ್ದರೆ ಚೆನ್ನಾಗಿತ್ತು--ಎಂದು ತೋರಿತು. ಆದರೆ ಹಸಿ ಬತ್ತ ಸಾಗಿಸುವುದಕ್ಕಿಂಟೇ? ಈಗ ಬತ್ತದ ಹಿಂದೆ ಅಡಿಕೆಯ ಫಸಲು ಹೊರಡುತ್ತಿದೆ. ಅದನ್ನಂತು ಬಿಟ್ಟು ಬಿಡುವ ಹಾಗೆಯೇ ಇಲ್ಲ. ಹೀಗಾಗಿ ಅವರು ತಮ್ಮ ನಂಬಿಗಸ್ತ ಒಬ್ಬ ಜನವನ್ನು ನಾಗೇನಹಳ್ಳಿಗೆ ಕಳುಹಿಸಿದರು. "ತೊಂದರೆ ಇಲ್ಲದೆ ಹೋದರೆ ಬತ್ತ ಸಾಗಿಸಿಕೊಂಡು ತಾ. ತೊಂದರೆಆಗುವಲ್ಲಿ ಸಮೀಪದವರು ಯಾರಿಗಾದರೂ ಮಾರಿ ಬಿಡು" ಎಂದಿದ್ದರು. ಈ ಚಿಲ್ಲರೆ ಕೆಲಸಕ್ಕಾಗಿ ಅವರೇ ಅಲ್ಲಿಯ ತನಕ ಬರಲಾರರು. ಒಳಗೆ ಜೀವದ ಹೆದರಿಕೆ ಬೇರೆ ಇದೆ. ಅವರ ಈ ಮುಕಾದಮು, ನಾಗೇನಹಳ್ಳಿಯಲ್ಲಿ ಯಾವ ಗಿರಾಕಿಯನ್ನು ಹುಡುಕಲಿ? ಸುಮಾರು ಮುನ್ನೂರು ಮಾನಿಗೆ ಬತ್ತವಾಗಬಹುದು. ಅದೂ ಅವರ ಕಣಜದಲ್ಲಿ ತುಂಬಿತ್ತು. ಕೆಲಸ ಸುಲಭ ಮಾಡಿಕೊಳ್ಳಲು, ಈಚಣ್ಣ ಭಟ್ಟರವರಲ್ಲಿಗೆ ಆತ ಬಂದ. 'ನ್ಯಾಯವಾದ ದರದಲ್ಲಿ ನಿಮಗೇನೇ ಕೊಡಲು ಅಡ್ಡಿಯಿಲ್ಲ'ವೆಂದು ತಿಳಿಸಿದನು. ಈಚಣ್ಣ ಭಟ್ಟರಿಗೆ ಅದನ್ನು ಕೊಂಡರಾಗಬಹುದು ಎಂಬ ಮನಸ್ಸು. ಸಾಕಷ್ಟು ಹಣ ಇಲ್ಲ. ರಾಧಾಕೃಷ್ಣ ತಂದು ಕೊಟ್ಟ ರೂಪಾಯಿಗಳಲ್ಲಿ

ಸ್ವಲ್ಪವನ್ನಾದರೂ ಮಕ್ಕಳ ವೆಚ್ಚಕ್ಕೆ ಕಳುಹಿಸಿಕೊಡಬೇಡವೇ? ಆತನೆನ್ನುತ್ತಾನೆ "ಅಲ್ಲಿಗೆ ಬೇರೆ ಏನಾದರೂ ಏರ್ಪಾಡನ್ನೂ ಮಾಡುವ. ಇಲ್ಲಿ ಒಮ್ಮೆ ಊರಿಂದ ಬತ್ತ ಹೋದ ಮೇಲೆ, ತಿರುಗಿ ತರಿಸಿ ಕೊಳ್ಳುವುದು ಕಷ್ಟ. ನಲ್ವತ್ತು ಮಂದಿ ಜನಗಳಿರುವಾಗ ವರ್ಷಕ್ಕೆ ಗಂಜಿಗೆ ಬೇಕೆನ್ನುವಷ್ಟಾದರೂ ಉಳಿಸಿ ಕೊಳ್ಳಬೇಡವೇ? ಸರಕಾರಕ್ಕೂ, ಗಾಂಧಿಯವರಿಗೂ ಸಂಧಾನವಾಗಿ, ಮುಂದೆ ಹೊಲಗದ್ದೆಗಳು ನಿಮಗೇನೆ ಹಿಂದೆ ದೊರೆತಾವು. ಆ ಸಮಯಕ್ಕೆ ಬತ್ತವಿಲ್ಲದೆ ಹೋಗಬಾರದು" ಅಂದನು. ಮಹಾಬಲ ಭಟ್ಟರಿಗೆ ಆ ಮಾತು ರುಚಿಸಲಿಲ್ಲ. "ನಿಮಗೆ ಬೇಕಾದ ಹಾಗೆ ಮಾಡಿ. ನಾನು, ನನ್ನ ಹೆಂಡತಿಯೂ ಆ ಕಾಳಿನ ಅನ್ನವನ್ನು ಮುಟ್ಟುವವರಲ್ಲ. ಆತ ಮಾಡಿದ್ದೇ ತಪ್ಪುಕೆಲಸ ನಮ್ಮ ಅನ್ನವನ್ನು ಕಿತ್ತದ್ದು ತೀರ ತಪ್ಪುಕೆಲಸ; ಅವನು ಪಾಪ ಪುಣ್ಯ, ನ್ಯಾಯ ನೀತಿ ಇರುವವನಾದರೆ, ಆ ಬತ್ತವನ್ನೆಲ್ಲ ಇಲ್ಲಿ ಧರ್ಮಾರ್ಥಕ್ಕೆ ಬಿಟ್ಟು ಹೋಗಬೇಕು" ಎಂದರು. ಅವರ ಛಲಕ್ಕೆ ಪ್ರತಿಯಾಗಿ ಸಂಧಾನಕ್ಕೆ ಬಂದ ಮುಕಾದಮು, ಮಾಧವಯ್ಯನವರು "ಧರ್ಮಕ್ಕೆ ಯಾರು ಅಕ್ಕಿ ಕೊಡುತ್ತಾರೆ? ಅವರು ನಿಮ್ಮ ಆಸ್ತಿಯನ್ನು ಕೋರ್ಟು ಲಿಲಾವಿನಲ್ಲಿ ಹಣ ತುಂಬಿಸಿಕೊಂಡದ್ದಲ್ಲವೇ? ನಿಮಗಾದ ದಂಡದ ಹಣ ನೀವು ತೆತ್ತಿದ್ದರೆ, ಭೂಮಿ ಹರಾಜಾಗುತ್ತಿರಲಿಲ್ಲ. ಅವರು ಅದನ್ನು ಕೊಳ್ಳುತ್ತಲೂ ಇರಲಿಲ್ಲ. ನೀವು ಮಾಡಿದ ತಪ್ಪಿಗೆ ಅವರ ಮೇಲೆ ಸಿಟ್ಟು ಮಾಡಿದರೇನು ಪ್ರಯೋಜನ? ಅದನ್ನೆಲ್ಲ ನೆನೆದು ಉಪಯೋಗವಿಲ್ಲ. ಸಿದ್ಧಾಪುರದಲ್ಲಿ ಬತ್ತಕ್ಕೆ ಮಾನಿಗೆಗೆ ಎರಡೂವರೆ ರೂಪಾಯಿ ಇದೆ. ನಿಮಗೆ ಬರಿಯ ಎರಡರಂತೆ ಕೊಡಿಸುತ್ತೇನೆ–ಎಲ್ಲವನ್ನು ನೀವು ವಹಿಸಿಕೊಂಡರೆ. ಸಾಹುಕಾರರಿಗೆ ಹೇಳಿ, ಇನ್ನೂ ಒಂದು ಪಾವಲಿ ಬಿಟ್ಟು ಕೊಡುವ ಹಾಗೆ ಮಾಡುತ್ತೇನೆ. ಅವರಿಗೆ ನಿಮ್ಮ ಮೇಲೆ ಸಿಟ್ಟಿಲ್ಲ. ನೀವು ಅವರ ಮೇಲೆ ಸಿಟ್ಟು ಮಾಡಬಾರದು" ಎಂದರು. ಈಚಣ್ಣಯ್ಯ ಅದಕ್ಕೆ "ನಮಲ್ಲಿ ಈಗ ಪೂರಾ ಹಣವಿಲ್ಲ. ತತ್ಕಾಲಕ್ಕೆ ಐವತ್ತು ಮುಡಿ ಕೊಡಿಸಿ. ದರ ಇದೇ ಎಂದು ಖಂಡಿತವಾದರೆ, ಉಳಿದ ಬತ್ತವನ್ನು ಸ್ವಲ್ಪ ಸ್ವಲ್ಪವಾಗಿ ಕೊಂಡುಕೊಳ್ಳುತ್ತೇವೆ" ಎಂದರು. ಮಹಾಬಲ ಭಟ್ಟರು ಮುಖ ತಿರುಗಿಸಿ ಹೊರಟು ಹೋದರು. ಆ ದಿವಸ ಈಚಣ್ಣಯ್ಯನವರ ಮನೆಯ ಅಂಗಳಕ್ಕೆ ಐವತ್ತು ಮಾನಿಗೆ ಬತ್ತವೇನೋ ಬಂದಿತು.

ಕುಪಿತರಾಗಿ ಹೋದ ಮಹಾಬಲಯ್ಯ ನಾಲ್ಕು ದಿನ ಕಾಲ, ತಿರುಗಿ ಆ ಮನೆಗೆ ಕಾಲಿರಿಸಲಿಲ್ಲ. ಮೊದಲ ದಿನ ಊರು, ಮನೆಯಲ್ಲೇ ಅಲೆದಾಡಿದರು. ತಮ್ಮ ಹಳೆಯ ಒಕ್ಕಲು, ಸ್ನೇಹಿತರನ್ನು ನೋಡಿದರು. ಧನಿಯರು ಊರಿಗೆ ಬಂದುದಕ್ಕಾಗಿ ಆ ಜನರಿಗೆ ಹರ್ಷವೇನೋ ಆಯಿತು. ಅವರು ತಮ್ಮ ಕಷ್ಟಗಳನ್ನು, ತೊಂದರೆಗಳನ್ನು ಹೇಳಿಕೊಂಡಾಗ "ನೀವು ಯಾಕೆ ಬೆಪ್ಪರ ಹಾಗೆ ಗೇಣಿಯ ಬತ್ತ ಅವರಿಗೆ ಸುರಿದಿರಿ? ಮನೆಯಲ್ಲಿಟ್ಟು ಕೊಂಡು ಸುಖವಾಗಿ ಊಟ ಮಾಡಬಾರದಿತ್ತೇ? ಇನ್ನಾದರೂ ಹೇಳುತ್ತೇನೆ, ಮುಂದಿನ ಬೆಳೆಯ ಬತ್ತದಲ್ಲಿ ಒಂದು ಕಾಳೂ ಅವರಿಗೆ ಸಿಗಬಾರದು. ನೀವು ಬತ್ತ ಹಾಕಿದರೆ ಶಿರ್ಶಿಯ ಅಮ್ಮನವರ ಆಣೆಯಿದೆ. ಅವರು ಮಾಡುವುದನ್ನು ಮಾಡಲಿ" ಎಂದರು. ಅವರ ವ್ಯವಹಾರದಲ್ಲಿ ನುಣುಪು ನಯ ಇಲ್ಲದೆ ಹೋಯಿತು. ಮತ್ತೊಂದು ಮಾತೆಂದರು "ನಾನು, ನನ್ನ ಬಿಡಾರವನ್ನು ಕರೆದುಕೊಂಡು ಸಾಗರಕ್ಕೆ ಹೋಗುತ್ತೇನೆ. ಅಲ್ಲಿ ನಂಟರ ಮನೆಯಿದೆ. ನಿಮಗೆ ನಾನು ನಿಮ್ಮ ಧನಿ ಎಂಬ ವಿಶ್ವಾಸವಿದ್ದರೆ, ನೀವು ಬೇಸಾಯ ಮಾಡದೆ ಗದ್ದೆ ಹಾಳುಬಿಟ್ಟರೂ ಚಿಂತೆ ಇಲ್ಲ. ಅವರಿಗೆ ಒಂದು ಚೂರೂ ಅಕ್ಕಿ ಕೊಡಬಾರದು. ಅಲ್ಲದೆ ಇನ್ನೊಂದು ವಿಷಯ.—ಅವರು ಇಲ್ಲಿಂದ ಒಯ್ದು ಬತ್ತದಲ್ಲಿ ಒಂದೇ ಒಂದು ಕಾಳು ನಮ್ಮ ನಾಗೇನಹಳ್ಳಿಯಿಂದ ಹೊರಗೆ ಹೋಗದ ಹಾಗೆ ನೋಡುವ ಜವಾಬ್ದಾರಿಯೂ ನಿಮ್ಮದು. ನಮ್ಮ ನಾಗನಿಗೂ, ತಿಮ್ಮನಿಗೂ ಹೇಳಿ. ಇನ್ನು ಹೊರಗಿನ ಆಳು ಜನ, ತಂದು ಸಾಗಿಸುವುದಾದರೆ ಆಗ ಬೇರೆ ಉಪಾಯಮಾಡುವ" ಎಂದರು. ಆ ದಿನ ಸಂಜೆಯೇ ಅವರು ಸಾಗರಕ್ಕೆ ಹೊರಟು ಹೋದರು. ಅವರ ಅವತಾರವನ್ನು ನೋಡಿ ಅವರ ಹೆಂಡತಿ ಮಹಾಂಕಾಳಿಗೆ ತುಂಬ ದುಃಖವಾಯಿತು. ಬಂದ ಒಂದು ವಿಪತ್ತು ನಿವಾರಣೆಯಾಗುವುದರೊಳಗೆ, ಇವರು ಇನ್ನೊಂದನ್ನು ತರುತ್ತಾರಲ್ಲ ಎಂಬ ಭೀತಿಯಾಯಿತು. "ಇವರು ಎಲ್ಲಿಗೆ ಹೋದರೋ, ಏನು ಮಾಡುತ್ತಾರೋ" ಎಂದು ಚಿಂತಿಸುತ್ತಿದ್ದ ಆಕೆಯನ್ನು ಈಚಣ್ಣಯ್ಯನವರಿಗೆ ಸಮಾಧಾನ ಪಡಿಸುವ ಕೆಲಸವಾಯಿತು. "ಬರುತ್ತಾನೆ, ಎಲ್ಲಿಗೂ ಹೋಗಲಾರ. ನಾನು, ಆ ಸಾಹೇಬನಿಂದ, ಬತ್ತವನ್ನು ಕೊಂಡದ್ದು ಅವನಿಗೆ ಸಮಾಧಾನವಿಲ್ಲ. ಅದರಿಂದ ಮಾಡಿದ ಅನ್ನವನ್ನು ನೀನೂ, ಅವನೂ ಊಟ ಮಾಡುವುದಿಲ್ಲವೆಂದು ಆಣೆಯನ್ನೂ ಹಾಕಿಬಿಟ್ಟ.

ಪ್ರಾಯಶಃ ನಿಮ್ಮ ಬಿಡಾರ ಸಾಗಿಸುವ ಯೋಚನೆ ಮಾಡಿರಬೇಕು" ಎಂದರು. ಸರಿ, ಅವರ ಊಹೆಯೇ ಸರಿಯಾಯಿತು. ಮಹಾಬಲ ಭಟ್ಟರು ಸಾಗರಕ್ಕೆ ಹೋಗಿ, ಎರಡು ಮೂರು ದಿವಸ ಸುತ್ತಾಡಿ, ತಮ್ಮ ಬಂಧುಗಳ ಮನೆಯಿಂದ ಬಂಡಿಯನ್ನು ಹೊಡೆಯಿಸಿಕೊಂಡು ಬಂದರು. ಈಚಣ್ಣಯ್ಯನವರ ಒತ್ತಾಯಕ್ಕೆ ಆ ದಿವಸ ಅಲ್ಲೇ ಉಳಿದಿದ್ದು, ಮರುದಿನ ಕುಟುಂಬ ಸಹಿತವಾಗಿ ಹೊರಟು ಹೋದರು. ಅವರು ಹೋದುದರಿಂದ, ಈಚಣ್ಣಯ್ಯನವರ ಮನೆಯಲ್ಲಿ ಜನಸಂಖ್ಯೆ ನಾಲ್ಕು ಮಂದಿಯಷ್ಟು ಕಡಿಮೆಯಾಯಿತು. ಆಗ ರಾಧಾಕೃಷ್ಣ ಬೇರೊಂದು ಗ್ರಾಮಕ್ಕೆ ಹೋಗಿದ್ದ. ಮಹಾಬಲಯ್ಯ ಹೊರಡುವಾಗ "ಈಚಣ್ಣ, ಮಕ್ಕಳಿರುವಲ್ಲಿನ ವಿಳಾಸ ಕೊಡು. ನಾನಿರುವಲ್ಲಿಗೆ ಅವರನ್ನು ಕರೆಯಿಸಿ ಕೊಂಡರೂ ಕೊಂಡೇನೇ" ಎಂದು ಅವರ ವಿಳಾಸವನ್ನು ಕೊಂಡು ಹೋಗಿದ್ದರು.

ಅವರು ಹೊರಟು ಹೋದ ಎರಡನೆಯ ದಿನವೇ, ನಾಗೇನಹಳ್ಳಿಯಲ್ಲಿ ಒಂದು ಅದ್ಭುತವಾದ ಸಂಗತಿ ನಡೆದುಹೋಯಿತು. ಸಂಗತಿ ನಡೆದುದು ರಾತ್ರಿ; ಆದರೆ ರಾತ್ರಿ ಯಾರಿಗೇನೂ ತಿಳಿದಿರಲಿಲ್ಲ. ಬೆಳಗಾಗುತ್ತಲೇ ಮಹಾಬಲ ಭಟ್ಟರ ಒಕ್ಕಲು, ತಿಮ್ಮ ಬಂದು 'ಅಯ್ಯಾ, ರಾತ್ರಿ ಒಂದು ಫಜೀತಿ ಆಯಿತಲ್ಲಾ' ಎಂದನು. "ಏನು"? ಎಂದು ಕೇಳಿದರು. "ರಾತ್ರಿ ನಾನು ಮನೆಯಿಂದ ಹೊರಗೆ ಬಂದು ನೋಡುವಾಗ ನಮ್ಮ ಧನಿಯರ ಹಿತ್ತಿಲಿನಲ್ಲಿ ಬೆಂಕಿ ಕಾಣಿಸಿತು. ಆಗ ಮಧ್ಯರಾತ್ರಿಯಾಗಿರಬೇಕು. ಗಾಬರಿಯಿಂದ ಹೋಗಿ ನೋಡಿದರೆ ಏನು ಹೇಳಲಿ?--ಕುತ್ತರಿ, ಕಣಜ, ಮನೆ ಎಲ್ಲ ಹೊತ್ತಿ ಉರಿಯುತ್ತಿದ್ದುವು" ಎಂದನು. ಅವನ ಗಾಬರಿ ಹೇಳಿ ತೀರದು. ಈಚಣ್ಣಯ್ಯನವರಿಗೂ ಗಾಬರಿಯಾಗಿ. ಉಟ್ಟ ಉಡುಗೆಯಲ್ಲೇ ಹೊರಟರು. ಒಂದೂವರೆ ಮೈಲು ದೂರ ಓಡಿಹೋಗಿ, ಅಲ್ಲಿ ಹೋಗಿ, ನೋಡುವಾಗ, ಕಂಡ ನೋಟವನ್ನು ಏನೆಂದು ಹೇಳಲಿ! ಮಹಾಬಲ ಭಟ್ಟರ ದೊಡ್ಡ ಮಹಡಿ ಮನೆ, ಕೊಟ್ಟಿಗೆ, ಕುತ್ತರಿ, ಯಾವುದೂ ಉಳಿದಿರಲಿಲ್ಲ. ಅಡಕೆ ಸೋಗೆಗಳನ್ನು ಹೊದಿಸಿದ್ದ ಮಾಡಿಗೆ ಬೆಂಕಿ ಹಿಡಿಯಲು ಎಷ್ಟು ಹೊತ್ತು ಬೇಕು? ಎಲ್ಲವೂ ಉರಿದು ಭಸ್ಮವಾಗಿದ್ದುವು. ಅಂಗಳದಲ್ಲಿ ಬತ್ತ ತುಂಬಿಸಿಛ ತಿರಿಯಿತ್ತು. ಅದು ಇನ್ನೂ ಧಗಧಗನೆ ಉರಿಯುತಿತ್ತು. ಆದರ ಗಾವಿಗೆ ಮಗ್ಗುಲಿನ ಅಡಕೆ ತೋಟದ ಮರಗಳು ಹೊತ್ತಿ

ಕೆಂಪಾಗಿದ್ದುವು. ತೋಟವು ಪೂರ್ಣ ಉರಿದು ಹೋಗದಿದ್ದರೂ, ಬದಿಯಲ್ಲಿರುವ ಮರಗಳು ಸುಟ್ಟಂತೆಯೇ. ತೋಟದ ಮಗ್ಗುಲಲ್ಲಿ ತಲೆಗೆ ಕೈ ಬೊಡ್ಡಿ ಕುಳಿತಿದ್ದ ಆಳುಗಳು, ಇವರನ್ನು ಕಂಡು ಎದ್ದುನಿಂತರು. "ಹೀಗಾಯಿತೇ? ಇನ್ನು ಧನಿಯರಿಗೆ ನಮ್ಮ ಮುಖ ತೋರಿಸುವುದಕ್ಕಿಲ್ಲ. ಅವರು ನಮ್ಮನ್ನು ಇರಿಸಲಿಕ್ಕಿಲ್ಲ" ಎಂದರು. 'ಹೇಗೆ ಬೆಂಕಿ ಬಿತ್ತು, ಏನಾಯಿತು?' ಎಂಬುದು ಯಾರಿಗೂ ತಿಳಿದಿರಲಿಲ್ಲ. "ಬಚ್ಚಲಿಂದ ಮಾಡಿಗೆ ಹತ್ತಿಕೊಂಡು ಹೀಗೇನಾಯಿತೋ, ಏನೋ! ಹೇಗೆ ಹೇಳಲಿ? ಬಿದಿರುಗಳು ಚಿಟಿಚಿಟಿಲು ಎಂದು ಒಡೆದ ಸದ್ದಿಗೆ, ನಮಗೆ ಎಚ್ಚರವಾಗಿ ನೋಡುವಾಗ, ನಾಲ್ಕು ಸುತ್ತಲೂ ಬೆಂಕಿಹಿಡಿದಾಗಿತ್ತು. ಪುಣ್ಯಕ್ಕೆ ನಾವು ಹೊರಗಿನ ಜಗುಲಿಯಲ್ಲಿ ಮಲಗಿದ್ದೆವು. ಅದರಿಂದ ನಮ್ಮ ಪ್ರಾಣವೇನೋ ಉಳಿಯಿತು. ಸಮೀಪ ಹೊಂಡದಲ್ಲಿ ನೀರು ಇದ್ದರೂ ಏನೂ ಮಾಡುವ ಹಾಗಿರಲಿಲ್ಲ. ಕತ್ತಲಲ್ಲಿ ಯಾರನ್ನಾದರೂ ಕೂಗುವ ಎಂದರೆ ಸಮೀಪದಲ್ಲಿ ಮನೆಯೇ, ಮಠವೇ? ಹೀಗೆ ಅನ್ಯಾಯವಾದುದನ್ನು ನೋಡುತ್ತ ಕೂತಿರ ಬೇಕಾಯಿತು. ನೋಡಿ-ತಿರಿಯನ್ನು. ಅರ್ಧ ಹೊತ್ತಿಯಾಯಿತು; ಉಳಿದುದನ್ನಾದರೂ ಉಳಿಸುವ-ಎಂದರೆ ಸಮೀಪ ಹೋಗುವ ಹಾಗಿಲ್ಲ. ಬೆಂಕಿಯ ಗಾವು ತಡೆಯಲಾರದ್ದಾಗಿದೆ. ಸಾಹುಕಾರರ ಅಕ್ಕಿ ಹೋಗುತ್ತದೆಂದು ನಮ್ಮ ಪ್ರಾಣಬಿಡುವುದಕ್ಕಾಗುತ್ತದೆಯೇ" ಎಂದರು. ಒಬ್ಬೊಬ್ಬನ ಮುಖವೂ ಕಂದಿ, ಕುಂದಿ, ಹೆಣಗಟ್ಟಿತ್ತು. "ಯಾರಿಗೂ ಇಲ್ಲದಂತೆ ಹಾಳಾಯಿತೇ?" ಎಂದು ಈಚಣ್ಣಯ್ಯನವರು ವ್ಯಥೆಗೊಂಡರು. ತಿಮ್ಮ—"ಗೇಣಿಯ ಅಕ್ಕಿಯನ್ನು ನಮ್ಮ ನಮ್ಮ ಮನೆಯಲ್ಲಾದರೂ ಬಿಟ್ಟಿದ್ದರೆ ಸ್ವಲ್ಪವಾದರೂ ಉಳಿಯುತ್ತಿತ್ತು; ಬಿಡಲಿಲ್ಲ. 'ನಿಮ್ಮನ್ನು ನಂಬುವುದು ಹೇಗೆ? ಮುಂಚಿನ ಧನಿಗಳ ಮಾತು ಕೇಳಿ ನೀವು ಕೊಡದೆಹೋದರೆ?' ಎಂದು ಹೆದರಿಸಿ, ಇಲ್ಲಿಗೆ ತರಿಸಿ ಹಾಕಿಸಿಕೊಂಡರು. ಈಗ ತನಗೂ ಇಲ್ಲ, ಪರರಿಗೂ ಇಲ್ಲ—ಹಾಗಾಯಿತು ಕತೆ" ಎಂದನು.

ಈಚಣ್ಣಯ್ಯ ಬೇಸರದಿಂದ "ಇನ್ನು ಏನು ಮಾಡುವ ಹಾಗೆಯೂ ಇಲ್ಲವಲ್ಲ. ಆಗಲೇ ಗೊತ್ತಾಗಿದ್ದರೆ ಏನಾದರೂ ಮಾಡಬಹುದಿತ್ತು. ಸ್ವಲ್ಪವಾದರೂ ಉಳಿಯುತ್ತಿತ್ತು. ಇನ್ನು ತಪ್ಪಿಸಿಯೂ ಉಪಯೋಗವಿಲ್ಲ. ತಿರಿಯೊಳಗಿನ ಬತ್ತ ಕರಟಿಯೇ ಹೋಗಿರುತ್ತದೆ. ಗೊಬ್ಬರಕ್ಕೆ ಆದೀತು.

ಇಷ್ಟು ಸಮೀಪದಲ್ಲಿ ನೀರು ಇದ್ದೂ, ಪಿಳಿ ಪಿಳಿ ಕಣ್ಣು ಬಿಡುವ ಹಾಗಾಯಿತು. ನೀವಾದರೂ ಏನು ಮಾಡುತ್ತೀರಿ? ನಿಮ್ಮ ಜವಾಬ್ದಾರಿ ತಪ್ಪಿಸಿಕೊಳ್ಳುವುದಕ್ಕೆ ಯಲ್ಲಾಪುರಕ್ಕೆ ಓಡಿ ಹೋಗಿ, ಸಾಹುಕಾರರಿಗೆ ಸುದ್ದಿಯನ್ನಾದರೂ ತಿಳಿಸಿಬನ್ನಿ. ನಾಳೆ ನಿಮ್ಮದೇ ತಪ್ಪೆಂದು ಅವರು ಹೇಳಬಾರದಲ್ಲಾ?" ಎಂದರು.

"ನಮ್ಮ ಮೇಲೆ ತಪ್ಪಾಗುವುದು ಹೇಗೆ? ನಾವೇನು ಹಾಕಿದವರೇ? ಅವರೇನೆ ಅತಿ ಆಸೆಗೆ ಮಾಡಿಕೊಂಡದ್ದು. ದೇವರ ಮನಸ್ಸಿಗೆ ಬಾರದ ಕೆಲಸ. ಅದಕ್ಕೇ ಹೀಗಾಯಿತು. ಅಲ್ಲದಿದ್ದರೆ ಯಲ್ಲಾಪುರವೆಲ್ಲಿ? ನಾಗೇನಹಳ್ಳಿಯೆಲ್ಲಿ? ಅಕ್ಕಟಿ ಬಂದದ್ದು ಪುಕ್ಕಟೆ ಹೋಯಿತು" ಎಂದನು ಒಬ್ಬ ಆಳು. ಅವನಿಗೂ ಊರಿನ ಚಿಂತೆಯನ್ನು ಕಂಡು ಸಾಹುಕಾರರಲ್ಲಿ ಉಳಿದಿದ್ದ ಅಭಿಮಾನ ಹೊರಟುಹೋಗಿತ್ತು.

ಅವರ ಇತರ ಆಳುಗಳು "ಅಯ್ಯಾ, ಇದು ಹೀಗೆಯೇ ನೋಡುತ್ತ ಕುಳಿತಿರುವ ವ್ಯಾಪಾರ. ಯಾರೇನೂ ಮಾಡುವ ಹಾಗೂ ಇಲ್ಲ" ಎಂದರು.

"ಯಾರೇನೂ ಮಾಡುವ ಹಾಗಿಲ್ಲ ಎಂಬುದು ಕಂಡರೇನೇ ತಿಳಿಯುತ್ತದೆ. ಆದರೆ ಅನ್ಯಾಯವಾಗಿ ಹಾಳಾಯಿತಲ್ಲಾ? ಒಂದೆರಡು ಮಾನಿಗೆ ಬತ್ತವಾದರೆ ಚಿಂತೆಯಿಲ್ಲ. ಇನ್ನೂರಿತ್ತೋ, ಮುನ್ನೂರು ಇತ್ತೋ; ಎಲ್ಲ ಯಜ್ಞೇಶ್ವರನಿಗೆ ಆಹುತಿಯಾಯಿತು. ಉಂಡದ್ದಲ್ಲ, ಮಾಡಿದ್ದಲ್ಲ. ತಿಮ್ಮ, ಇನ್ನಾದರೂ ಊರವರನ್ನೆಲ್ಲ ಕರೆದುಕೊಂಡು ಒಂದು ಕೈ ನೋಡಬಾರದೇ? ಬೆಂಕಿ, ಈಗ ತಿರಿಯ ಅರ್ಧಕ್ಕಿದೆ. ತೀರ ಬುಡದ ಸ್ವಲ್ಪವಾದರೂ ಉಳಿಯುತ್ತಿತ್ತೋ ಏನೋ" ಎನ್ನುತ್ತಿರುವಾಗಲೇ ಒಬ್ಬ ಆಳು "ಅಣ್ಣ, ಒಂದು ಕವಳ ಕೊಡು, ಎಲೆ ಅಡಿಕೆ ಸಂಚಿ ಚಾವಡಿಯಲ್ಲಿ ಉಳಿದುಹೋಯಿತು. ಉಟ್ಟ ಅರಿವೆಯಲ್ಲದೆ ಇನ್ನೇನೂ ಉಳಿಯಲಿಲ್ಲ" ಎಂದನು.

"ಎಲೆಯಡಿಕೆ ನಾನು ತಂದಿದ್ದೇನೆಯೇ? ನಿಮಗಿಂತ ಹೆಚ್ಚು ಗಾಬರಿ ನನಗೆ. ಬೆಳಗಿಂದ ಎಲೆಯಡಿಕೆ ಮುಟ್ಟಲಿಲ್ಲ. ಈಚಣ್ಣಯ್ಯನವರ ಮನೆಗೆ ಹೋಗಿ ಅವರನ್ನು ಕರೆದುಕೊಂಡು ಬರುವುದಕ್ಕೆ ಇಷ್ಟು ಹೊತ್ತಾಯಿತು. ಅಷ್ಟು ಯಾಕೆ ಯೋಚನೆ? ತೋಟ ಹೊಗ್ಗಿದರೆ ಎಲೆ ಅಡಿಕೆ ಎರಡೂ ಇದ್ದೀತಲ್ಲ" ಎಂದನು ತಿಮ್ಮ.

ಈಚಣ್ಣಯ್ಯನವರಿಗೆ ಆ ಮಾತುಗಳೆಲ್ಲ ಬೇಕಿರಲಿಲ್ಲ. ಅವರು "ತಿಮ್ಮ, ಎಲೆ ಅಡಿಕೆ ಎಂದು ಕೂತರೆ ಆಗದು. ಇನ್ನೊಂದು ನಾಲ್ಕು ಮಂದಿಯನ್ನು ಬರಲಿಕ್ಕೆ ಹೇಳು. ಉಳಿದುದನ್ನು ಉಳಿಸುವ" ಎಂದು ಹೇಳಿದರು. "ಅಯ್ಯಾ, ನಾಲ್ಕು ಮಂದಿಯನ್ನು ಕರೆದುಕೊಂಡು ಬರುವಾಗ ಉಳಿಯುವುದು ಬೂದಿಯ ರಾಶಿ. ಈ ಬೆಂಕಿಯನ್ನು ನಂದಿಸಲಿಕ್ಕೆ ಬ್ರಹ್ಮನೇ ಬರಬೇಕು. ಹತ್ತಿರ ಹೋಗಲಿಕ್ಕಾದರಲ್ಲವೇ ನಂದಿಸುವುದು" ಎಂದನು ತಿಮ್ಮ.

ಅವರ ಮನಸ್ಸಿಗೂ ಅದು ಹೋಯಿತು—ಬ್ರಹ್ಮ ಬಂದರೂ ಅದು ಆಗದ ಕೆಲಸವೆಂದು. ಆ ಉರಿಯ ನಾಲಗೆಗಳನ್ನು ಕಂಡು ಅವರ ಮುಖ ಕೆಂಪಡರಿತ್ತು. ಅವರ ಕಣ್ಣು ದೊಡ್ಡದಾಗಿತ್ತು. "ಮಹಾಬಲ ಭಟ್ಟರ ಕುಲದ ಮನೆ ಹೀಗೆ ಅನ್ಯಾಯವಾಗಿ ಉರಿದು ಧ್ವಂಸವಾಯಿತಲ್ಲ? ಅವರ ಭೂಮಿ ನಾಳೆ ದೇವರ ದಯೆಯಿಂದ ಅವರಿಗೆ ಸಿಕ್ಕಿದರೂ ಈ ಮನೆ ಸುಟ್ಟ ದಂಡವನ್ನು ತುಂಬಿಸುವುದು ಸಾಧ್ಯವೇ?" ಎಂದು ಕಂಗಾಲಾಗಿ ಯೋಚಿಸುತ್ತ ನಿಂತರು. ಸ್ವಲ್ಪ ಹೊತ್ತು ಎಲ್ಲರೂ ಮಾತಿಲ್ಲದ ಮೂಕರಾದರು. ಕಾವಲಿನ ಆಳುಗಳು ತಮ್ಮ ತಮ್ಮೊಳಗೆ 'ಇನ್ನು ಯೋಚನೆ ಮಾಡಿ ಏನೂ ಫಲವಿಲ್ಲ. ಯಲ್ಲಾಪುರಕ್ಕೆ ಹೋಗುವವರು ಯಾರೆಂದು ನಿಶ್ಚಯಿಸಿ, ಆದಷ್ಟು ಬೇಗನೆ ಸಾಹೇಬರರಿಗೆ ಸುದ್ದಿ ತಿಳಿಸಬೇಡವೇ?' ಎಂದು ತರ್ಕಿಸಿದರು.

"ಹೊಂ, ಯಾರೇ ಅಲ್ಲಿಗೆ ಹೋಗಲಿ. ನಾನು ನೆಟ್ಟಗೆ ನನ್ನ ಊರಿಗೆ ಹೋಗುತ್ತೇನೆ. ಸಾಹೇಬರು, ಸಿಟ್ಟಿಗೆ ಎದುರಿಗೆ ಸಿಕ್ಕಿದವನನ್ನು ಹಿಸುಕಿ ಕೊಂದಾರು" ಎಂದನು ಒಬ್ಬ.

"ಹಾಗೇಕೆ ಮಾಡಿಯಾರು? ಹೋಗಿ ಹೇಳಬೇಡವೇ?" ಎಂದನು ಮತ್ತೊಬ್ಬ. ಮಧ್ಯಾಹ್ನದ ವರೆಗೆ ಯಾರೂ ಏನೂ ಮಾಡಲಿಲ್ಲ. ಈಚಣ್ಣಯ್ಯ ಅಳುಮೋರೆಯಿಂದ ತಮ್ಮ ಮನೆಗೆ ಹಿಂದಿರುಗಿದರು. ಮನೆಗೆ ಬಂದು "ಇಂತಹ ಒಂದು ಅನ್ಯಾಯವಿದೆಯೇ!" ಎಂದರು. "ಇದು ಮಹಾಬಲ ಭಟ್ಟರ ಶಾಪ. ಬ್ರಾಹ್ಮಣರ ಶಾಪವು ಕಲಿಯುಗದಲ್ಲಿಯೂ ನಾಟುತ್ತದೆ ಎಂಬುದಕ್ಕೆ ಇದು ಸಾಕ್ಷಿ" ಎಂದಳು ಗುಡಿಗಾರನ ಮುದುಕಿ ತಾಯಿ. ಇದೇ ತೆರ ಒಂದಲ್ಲ ಒಂದು ಟೀಕೆಯಲ್ಲಿ ಆ ದಿನ ಸಂದಿಯಿತು. ಸಂಜೆಯ

ವೇಳೆಗೆ ರಾಧಾಕೃಷ್ಣನು ಸಂಚಾರ ಮುಗಿಸಿಕೊಂಡು ಬಂದನು. ಅವನು ತಿರುಗಿ ಭಿಕ್ಷೆಯೆತ್ತಲು ಹೋಗಿದ್ದ. ಯಾರನ್ನಾದರೂ ಇನ್ನೊಮ್ಮೆ ಬೇಡಿ, ಕಾಡಿ, ಊರಿನ ಬತ್ತವನ್ನು ಊರಲ್ಲಿ ಉಳಿಸಲು ಉಪಾಯ ವಿದ್ದಿತೇ—ಎಂದು ಶಿರ್ಶಿಗೆ ಹೋಗಿದ್ದ. ಅಲ್ಲಿ ಹಲವರನ್ನು ಭೇಟಿಯಾದ. ಒಬ್ಬರು "ನಿನ್ನೆ ಯಾವುದಕ್ಕೋ ನಾನು ಹತ್ತು ರೂಪಾಯಿಗಳನ್ನು ಕೊಟ್ಟಾಯಿತು; ಅಂಕೋಲೆಯವರಿಗೆ ಇವತ್ತು ಐವತ್ತು ರೂಪಾಯಿ ಕೊಟ್ಟೆ" ಎಂದು ಬರಿಯ ಮಾತುಗಳನ್ನಾಡಿದರು. ಆತ ಬಂದುದಕ್ಕೆ ಒಣ ಸಮಾಧಾನ ಹೇಳಿದರು. ಆತನು ಹೋದ ಕೆಲಸವಾಗಲಿಲ್ಲ.

ಹೋದುದಕ್ಕೆ ಒಂದು ಪತ್ರ ಮಾತ್ರ ದೊರೆಯಿತು. ಶಿರ್ಶಿಯ ಒಬ್ಬ ಮಿತ್ರರು ಯಾರ ಮೂಲಕವೋ ಈಚಣ್ಣಯ್ಯನವರಿಗೆ ಬರೆದ ಒಂದು ಕಾಗದವನ್ನು ತಂದಿದ್ದ. ಅದನ್ನು ಅವರಿಗೆ ಕೊಟ್ಟು "ಬೆಳಗಾಮಿನಿಂದ ಬಂದದ್ದು. ನಿಮ್ಮ ಮನೆಯವರದ್ದಿರಬಹುದು" ಎಂದರು. ಅವರಿಗೆ ಕಾಗದ ಒಡೆದು ಓದುವುದಕ್ಕಿಂದ, ಸುದ್ದಿ ತಿಳಿಸುವ ಆತುರ ಅಷ್ಟಿಷ್ಟಲ್ಲ. "ಒಂದು ಮಲಾಮತಿ ಆಯಿತು ನೋಡಿ—ಮಹಾಬಲನ ಬಾಯಿಯ ಶಾಪ ನಿಜವಾಗಿ ಬಿಟ್ಟಿತು" ಎಂದರು.

"ಏನು" ಎಂದು ಕೇಳಿದರೆ "ಸಾಹುಕಾರರ ಬತ್ತವೆಲ್ಲ ಅಗ್ನಿ ನಾರಾಯಣನಿಗೆ ಅರ್ಪಿತವಾಯಿತು. ಬರಿಯ ಬತ್ತವಾದರೆ ಅಷ್ಟೇನೆ ಹೋಯಿತು. ಆದರೆ ಆ ದೊಡ್ಡಮನೆ, ಬಚ್ಚಲು, ಕೊಟ್ಟಿಗೆ ಒಂದೊಂದೂ ಉಳಿಯಲಿಲ್ಲ. ನಾನು ಬೆಳಗಿನಿಂದ ಮಧ್ಯಾಹ್ನದ ತನಕ ಅಲ್ಲಿಯೇ ಇದ್ದೆ. ಬೆಂಕಿಬಿದ್ದದ್ದು ಮಧ್ಯರಾತ್ರಿಗಿರಬೇಕು. ಮಧ್ಯಾಹ್ನದ ತನಕವೂ ಉರಿಯುತ್ತಲೇ ಇತ್ತು. ಹೇಗೆ, ಏನು? ಎಂಬುದು ಕಾವಲಿನ ಒಬ್ಬ ಆಳಿಗೂ ಗೊತ್ತಿಲ್ಲ. ಭೂತದ ಉಪದ್ರವಿದ್ದರೂ ಇರಬಹುದು" ಎಂದರು.

"ಭೂತವಲ್ಲ—ಮತ್ತೇನಲ್ಲವೇ? ಹೋದದ್ದು ಹೌದಾದರೆ ಅದು ಅವರದ್ದೇ ಕೆಲಸ"

"ಯಾರು, ಮನೆಯ ಕಾವಲಿನವರದ್ದೇ"

"ಕಾವಲಿನವರದ್ದಲ್ಲ. ಸಿಟ್ಟಾದ ಮಹಾಬಲ ಭಟ್ಟರ ಕೆಲಸ. ಅವರ ಮಾತನ್ನು ಕೇಳುವಾಗ, ಅವರ ರೀತಿಯನ್ನು ನೋಡಿದಾಗ, ಈ ಆಸಾಮಿ ಅಂಥದೇನನ್ನಾದರೂ ಮಾಡುವವರೇ ಎಂದು ತೋರಿತ್ತು ನನಗೆ"

"ಛೀ, ಛೀ. ಅವನೇ! ಎಂದಿಗೂ ಮಾಡಲಾರ. ನೀವು ಹೊರಟು ಹೋದ ಮರುದಿನವೇ ಅವನೂ ಹೊರಟು ಹೋದನು. ಹೋಗಿ, ೯ನ ಮೂರಾಯಿತು. ಈ ಸಂಗತಿ ನಡೆದದ್ದು ನಿನ್ನೆಯ ರಾತ್ರಿ. ಇನ್ನೂ ಬೆಂಕಿ ನೊಂದಿಲ್ಲ. ಅಲ್ಲಿ ಬೇರೆ ಮನೆಯೇ? ಸಮೀಪದಲ್ಲಿ ಜನವೇ? ಅಲ್ಲಿದ್ದ ಜನರು ಬೆಪ್ಪುಕಟ್ಟಿ ಕುಳಿತು ಬಿಟ್ಟರು. ನೀರಿದ್ದರೂ ಬರಿದೆ ಮುಖ ಮುಖ ನೋಡುತ್ತ ಕೂತುಬಿಟ್ಟರು. ಸಮನಾಗಿ ಹೊತ್ತಿ ಉರಿಯತೊಡಗಿದ ಮೇಲೆಯೇ ಅವರಿಗೆ ಎಚ್ಚರವಾದದ್ದಂತೆ. ನಾನು ಬೆಳಿಗ್ಗೆ ಹೋಗಿ ನೋಡುವಾಗ ಎಲ್ಲಾ ಮುಗಿದಿತ್ತು"

"ಹಾಗಾದರೆ ನಾನು ಹೋಗಿ ಬರುತ್ತೇನೆ—ಈಗ ಬರುತ್ತೇನೆ"

"ಈ ಕತ್ತಲೆಗೆ? ಹೋಗಿ ಇಷ್ಟು ಬೂದಿಯನ್ನು ನೋಡಬಹುದು. ಅದನ್ನು ಬೆಳಿಗ್ಗೆಯೂ ಕಾಣಬಹುದಲ್ಲ. ದಣಿದು ಬಂದಿದ್ದೀರಿ, ಒಂದಿಷ್ಟು ಗಂಜಿ ಊಟವನ್ನು ಮಾಡಿ. ಬರಿಯ ಗಂಜಿಯೇ— ಮತ್ತೇನಿಲ್ಲ".

ಆತ ಆಗಲೆಂದು ಬಚ್ಚಲ ಮನೆಗೆ ಸ್ನಾನಕ್ಕೆ ಹೋದನು. ನಡೆದು, ದಣಿದು, ಕೆಲಸವಾಗದೆ ಬರಿದೆ ಬಂದ ಅವನ ಮನಸ್ಸಿಗೆ ಬೆಂಕಿಯ ಕತೆ ತುಂಬ ತತ್ತರವನ್ನುಂಟುಮಾಡಿತು. "ಅಯ್ಯೋ," ಅಂದುಕೊಂಡನು. ಆವನ ಮನಸ್ಸಿಗೆ ಅದು ಖಾತ್ರಿಯಾಗಿಯೂ, ತಮ್ಮ ಮಹಾಬಲ ಭಟ್ಟರ ಕೆಲಸವೆಂದು ತೋರಿತು. ಅವರು ಆ ದಿನ ಹೊರಟು ಹೋಗಿದ್ದರೂ, ಸಮಯಕಾದಿದ್ದು ತಿರುಗಿ ಬಂದು ಅಷ್ಟು ಕೆಲಸ ಮಾಡಿ ಹೋಗಿರಬೇಕು" ಎಂದು ತೋರಿತು.

"ಅಯ್ಯೋ, ಮನುಷ್ಯನ ಸಿಟ್ಟೇ? ಅಷ್ಟೆಲ್ಲ ಬತ್ತವು, ನಮಗೇನೆ ಅವಶ್ಯವಿದ್ದಾಗ, ಒಬ್ಬರಿಗೂ ಇಲ್ಲದೆ ಹೋಯಿತಲ್ಲಾ" ಎಂದುಕೊಳ್ಳುವಂತಾಯಿತು. ಇನ್ನೊಮ್ಮೆ ಬೇರೆಯೇ ವಿಧವಾಗಿ ಹೊಳೆಯಿತು-'ತನ್ನ ಬೆಳೆ, ತನ್ನ ಮನೆ ತನಗೇ ಇಲ್ಲದಾಗುವಾಗ ಮನುಷ್ಯನಿಗೆ ಎಲ್ಲಿನ ತಾಳ್ಮೆಯು ಉಳಿದೀತು? ತಾಳ್ಮೆಗೂ ಒಂದು ಮಿತಿಯಿಲ್ಲವೇ? ಊರಿನ ಜನ ಇಷ್ಟೇ ತ್ಯಾಗದಿಂದ ತಮ್ಮ ಸರ್ವಸ್ವವನ್ನು ಕಳೆದುಕೊಂಡು ಕುಳಿತಾಗ, ಈ ಬುದ್ಧಿಗೇಡಿ ಸಾಹೇಬನು ಬೇಟೆಗೆ ಕಾದ ಮೊಸಳೆಯಂತೆ, ಬಾಯಿಬಿಡುವುದರಲ್ಲಿ ಏನು ನ್ಯಾಯ? ಅದು ಎಷ್ಟು ನ್ಯಾಯವೋ, ಈ ಪ್ರತಿಕಾರವೂ ಅಷ್ಟೇ ನ್ಯಾಯ. ನಾಳೆ-ಯಾರಿಗೆ ಗೊತ್ತು? ಈ ಸತ್ಯಾಗ್ರಹ ಯುದ್ಧವು ಯಶಸ್ವಿಯಾಗದೆ

ಹೋದರೆ, ಜನ ಶಾಶ್ವತವಾಗಿ ಮೌನರಾಗಿ ಕುಳಿತಿರುತ್ತಾರೆಯೇ? ತಮ್ಮ ಎಲ್ಲವನ್ನು ಕಳೆದುಕೊಂಡು, ಕೈಕಟ್ಟಿ ಕುಳಿತಿರಬಲ್ಲರೇ? ತಮ್ಮ ಭವಿಷ್ಯವೇ ಕೆಟ್ಟುಹೋದುದಕ್ಕಾಗಿ, ಚಿಂತೆ, ಕ್ರೋಧಗಳು, ಹುಟ್ಟವೇ? ಅಹಿಂಸೆ ಮರವೆಯಾಗಿ, ಸೇಡು ಅದರ ಬದಲು ಉಂಟಾಗುವುದು ಆಶ್ಚರ್ಯವಲ್ಲ. ಎಲ್ಲರೂ ಗಾಂಧಿಯಂತಾಗಲಾರರಷ್ಟೆ. ಒಬ್ಬರ ಮನಸ್ಸು ಇನ್ನೊಬ್ಬನ ಮನಸ್ಸಿನಂತಿರಲಾರದು' ಎಂದು ತೋರಿತು. ನೀರನ್ನು ಮೈಗೆ ಎರೆದು ಕೊಳ್ಳುವುದರಲ್ಲಿ ಸಮಯ ಆತಗೆ ಹೋದುದೂ ತಿಳಿಯಲಿಲ್ಲ. ಅಷ್ಟರಲ್ಲಿ ಇನ್ನೊಂದು ವಿಚಾರಮೂಡಿತು. 'ಎಷ್ಟೆಂದರೂ ಅದು 'ಅನ್ನ. ಹಸಿದಿರುವ ಜನರ ಮುಂದೆಯೇ ಅದನ್ನು ಸುಡುವುದೆಂದರೆ ಅರ್ಥವಿಲ್ಲ. ತೀರ ತಪ್ಪು ಕೆಲಸ' ಎಂದುಕೊಂಡ.

ಅಷ್ಟರಲ್ಲಿ ಮೀಯುವ ಮನೆಗೇನೇ ಈಚಣ್ಣಯ್ಯನವರು ಬಂದರು. "ಹೌದೇ, ನಾನು ಫಕ್ಕನೆ ಬೆಳಗಾವಿಗೆ ಹೋಗಬೇಕಾಯಿತಲ್ಲ" ಎಂದು ನುಡಿದರು. "ಯಾಕೆ? ಕಾಗದದಲ್ಲಿ ಏನಿದೆ?"

"ಕಾಗದ ಬೆಳಗಾವಿನವರು ಒಬ್ಬರು ಬರೆದುದು—ಯಾರೋ ಕುಲ ಕರ್ಣಿಯವರಂತೆ. ಜೈಲಿನಲ್ಲಿ ಅವಳಿಗೆ ಕಾಯಿಲೆ ತೊಡಗಿದ್ದರಿಂದ ಬಿಟ್ಟಿ ದ್ದಾರಂತೆ; ಆದರೆ ಊರಿಗೆ ಹಿಂದಿರುಗುವಷ್ಟು ತ್ರಾಣವಿಲ್ಲ. ತುಂಬ ಕಾಯಿಲೆ, ಅಶಕ್ತಿ, ಬಂದು ಕರೆದುಕೊಂಡು ಹೋಗಿ-ಎಂದು ತಿಳಿಸಿದ್ದಾರೆ" ಎಂದರು. ಆತ ಅವಸರದಿಂದ ಸ್ನಾನ ಮುಗಿಸಿ ಹೊರಕ್ಕೆ ಬಂದ. ಅವ ನ್ನೋದಿ ಆಶ್ಚರ್ಯ, ಬೇಸರಗಳೆರಡೂ ಅವನಿಗೆ ಆದುವು. "ಹೋಗಿ ಬನ್ನಿ. ಆದರೆ ನೀವು ಇಲ್ಲಿಂದ ಹೋದರೆ ಇಲ್ಲಿ ಯಾರು? ಒಂದೂ ನಾನು, ಒಂದೂ ನೀವು—ಇಬ್ಬರೊಳಗೆ ಒಬ್ಬರು ಕುಳಿತಿರಬೇಕು. ನಿಮಗೆ ಯೋಚನೆ ಬೇಡ, ನಾನೇ ಹೋಗಿ ಬರುತ್ತೇನೆ—ಆಗದೇ? ಹೋಗುವುದಕ್ಕೆ ಖರ್ಚಿಗೆ ಏನಾದರೂ ಉಳಿದಿದೆಯೇ? ಹೇಗೆ?" ಎಂದನು.

"ಇದ್ದೀತು, ನಾಲ್ಕೆಂಟು ರೂಪಾಯಿಗಳಿದ್ದಾವು. ಹೋಗುವುದಕ್ಕೆ ಸಾಕು. ಬರುವುದಕ್ಕೆ ಎಷ್ಟು ಹಣ ಬೇಕಾಗುತ್ತದೋ, ಏನೆಲ್ಲ ಬೇಕಾಗು ತ್ತದೋ. ಹಾಗೆ ಅಗತ್ಯವಿದ್ದರೆ ಅವಳ ಮೈಮೇಲಿನ ಒಡವೆ ಇದೆಯಲ್ಲ- ಅದನ್ನು ತೆಗೆಯದೆ ಬಿಟ್ಟದ್ದರೆ. ಆದರೆ ಅವಳಿಂದ ಇಷ್ಟರ ವರೆಗೆ ಒಂದೇ ಒಂದು ಸುದ್ದಿಯಿರಲಿಲ್ಲ. ಯಾಕೆ ಈ ತನಕ ಕಾಗದವನ್ನು ಬರೆಯಲಿಲ್ಲ.

ಎಂದು ಯೋಚಿಸುತ್ತಿದ್ದೆ. ಹಾಗೆ ಬರೆಯಲು ಬಿಟ್ಟಿರಲಿಕ್ಕೂ ಇಲ್ಲ. ಹಾಗೆ ವಾಯಿದೆಗೆ ಮುಂಚೆ ಬಿಡಬೇಕಾದರೆ ಕಾಯಿಲೆಯು ತುಂಬ ಜೋರಿರಲೇ ಬೇಕು. ಪಾಪ, ಅದರಿಂದ ಎಷ್ಟು ಕಷ್ಟಪಟ್ಟಳೋ, ಏನು ಸಂಗತಿಯೊ! ಹಾಗೆ ಸ್ವಲ್ಪವಾದರೂ ಹುಷಾರಿದ್ದರೆ, ಅವಳೇನೆ ಮನೆಗೆ ಬರುವವಳು; ಅಷ್ಟು ಧೈರ್ಯವಿದೆ.

"ಇಲ್ಲ, ಒಂದು ಲೆಕ್ಕಕ್ಕೆ ಅಲ್ಲಿಗೆ ನೀವೇ ಹೋಗುವುದು ಒಳ್ಳೆಯದು. ಅಂದರೆ ಅವರಿಗೆ ಸಮಾಧಾನವಾದೀತು. ಬೆಳಗಾವಿಯಲ್ಲಿ ಕಾಂಗ್ರೆಸ್ಸಿನ ಜನರು ಯಾರೆಂದು ನೋಡಿ ಅವರಿಂದ ಸಹಾಯ ತೆಗೆದುಕೊಳ್ಳಬಹುದು. ತುಂಬ ಕಾಯಿಲೆಯಾದರೆ ಕಾರ್ ಮಾಡಿ, ತರಬೇಕಾದೀತು. ತಂವರೂ ಇಲ್ಲಿಗೆ ತಂದು ಉಪಯೋಗವಿಲ್ಲ. ಮದ್ದು, ಉಪಚಾರ, ಕಷ್ಟವಾದೀತು. ಆಸ್ಪತ್ರೆ ಇಲ್ಲದ ಊರಿನಲ್ಲಿ ಇದ್ದು ಮಾಡುವುದೇನು? ಅಂಥ ತೊಂದರೆ ಕಂಡಲ್ಲಿ ಶಿರ್ಶಿಗೆ ಕರೆದುಕೊಂಡು ಹೋಗಿ"

"ಯಾವುದಕ್ಕೂ ಹೋಗಿ ನೋಡಿಯೇ ಆಗಬೇಕಲ್ಲ; ಹೊರಡುವುದಂತೂ ಹೊರಡುವುದೇ."

ರಾತ್ರಿ ಊಟವಾದ ಮೇಲೆ, ರಾಧಾಕೃಷ್ಣನ ಕುತೂಹಲನಿವಾರಣೆಗಾಗಿ, ಮನೆ ಸುಟ್ಟ ತಾವಿನ ತನಕ ಹೋಗಿ ಬಂದರು. ಕಾವಲಿನ ಆಳುಗಳು ಅಡಿಕೆ ತೋಟದ ಬಳಿಯಲ್ಲಿ ಕುಳಿತು, ಹರಟೆಯಲ್ಲಿ ಮಗ್ನರಾಗಿದ್ದರು. ಅಲ್ಲೇ ಬಳಿಯಲ್ಲಿ ಒಂದು ಒಲೆ ಹೂಡಿ, ಅಡುಗೆಯ ಕೆಲಸವು ನಡೆದಿತ್ತು. ಈಚಣ್ಣಯ್ಯ ಅವರನ್ನು ಕುರಿತು "ಯಲ್ಲಾಪುರಕ್ಕೆ ಯಾರು ಹೋದರು?" ಎಂದು ಕೇಳಿದರು. "ಹೋಗಬೇಕು, ನಾಳೆ ಯಾರಾದರೊಬ್ಬರು ಹೋಗುತ್ತೇವೆ" ಎಂಬ ಉತ್ತರ ಬಂದಿತು.

ರಾಧಾಕೃಷ್ಣ ಅಂಗಳದ ಮುಂದೆ ಹೋಗಿ ನಿಂತ. ಮನೆಯ ಬೋದಿಗೆ, ಕಂಬಗಳೆಲ್ಲ ಇನ್ನೂ ಕೆಂಡವಾಗಿ ಹೆಗ್ಗುಲಿಮೆಯಂತೆ ಉರಿಯುತ್ತಿದ್ದುವು. ಬತ್ತದ ತಿರಿಯು ಬೆಂಕಿಯ ಗುಡ್ಡವಾಗಿತ್ತು. ಕತ್ತಲಲ್ಲಿ ಆ ಉರಿಗಳ ರಾಶಿ ರೌದ್ರವಾಗಿ ಕಾಣಿಸುತ್ತಿತ್ತು. ಅದರ ಬೆಳಕಿನಲ್ಲಿ ಅಡಿಕೆಯ ತೋಟ ಸಮನಾಗಿ ಬೆಳಗಿತ್ತು. "ಇನ್ನು ಯೋಚಿಸಿ ಏನು ಬಂತು? ಹತ್ತು ಜನರ ಅನ್ನವೇ ಹೋಯಿತು, ಮನೆ ಹೋಯಿತು" ಎಂದು ರಾಧಾಕೃಷ್ಣ ನಿಟ್ಟುಸಿರನ್ನು ಬಿಟ್ಟನು. ಅಲ್ಲಿ ಹೆಚ್ಚು ಹೊತ್ತು ನಿಲ್ಲುವುದಕ್ಕೂ ಅವನಿಂದಾ

ಗಲಿಲ್ಲ. ಇಂತಹ ಹಾನಿಯನ್ನು ನೋಡುತ್ತ ನಿಂತಿರುವುದು ಅವನ ಸ್ವಭಾವಕ್ಕೆ ಒಗ್ಗದು. ಅವರಲ್ಲಿಯೂ, ಮನುಷ್ಯನಿರ್ಮಿತ ಹಾನಿಯಿದು—ಎಂದು ತೋರಿ, ಇನ್ನಷ್ಟು ವ್ಯಥೆಯಾಯಿತು.

ಇಬ್ಬರೂ ತಮ್ಮ ಮನೆಗೆ ಮರಳಿದರು. ರಾಧಾಕೃಷ್ಣನ ತಲೆಯಲ್ಲಿ—ಒಂದೆಡೆ ಬೆಂಕಿಯ ಚಿತ್ರ; ಇನ್ನೊಂದೆಡೆ ತಾನು ಕಾಣದ, ಈಚಣ್ಣಯ್ಯನವರ ಹೆಂಡತಿಯ ಕಲ್ಪನಾ ಚಿತ್ರಗಳು ತೂಗಾಡುತ್ತಿದ್ದುವು. ಅವರು ಸೆರೆಗೆ ಹೋದ ತರುವಾಯವೇ ಆತನು ನಾಗೇನಹಳ್ಳಿಗೆ ಪರಿಚಿತನಾದುದು. ಆ ವೀರ ಮಹಿಳೆಯು ಹೇಗಿರಬಹುದು—ಇದ್ದೊಬ್ಬ ಮಗನನ್ನು ಬಿಟ್ಟು ಸೆರೆಗೆ ಹೋಗುವುದಕ್ಕೆ! ಈಗ ಬೇನೆಯಿಂದ ಹೇಗಾಗಿರಬಹುದು—ಎಂದು ಊಹಿಸಲೆತ್ನಿಸುತ್ತಿದ್ದ.

ಮರುದಿನ ಬೆಳಕು ಹರಿಯುತ್ತಲೇ. ಅವರಿಬ್ಬರೂ ಸಿದ್ಧಾಪುರದ ಮೋಟಾರು ಹಾದಿಯ ತನಕ ನಡೆದು ಹೋದರು. ಈಚಣ್ಣಯ್ಯನವರೇ ಬೆಳಗಾವಿಗೆ ಹೋಗುವುದೆಂದು ನಿರ್ಣಯವಾಯಿತು. ಅವರು ರಾಧಾಕೃಷ್ಣನೊಡನೆ "ನಾನು, ಊರಿಗೆ ಬರುವ ತನಕ ನೀವು ಮನೆಯಲ್ಲೇ ಇರಬೇಕು. ನಾನು ನೆಟ್ಟಗೆ ಇಲ್ಲಿಗೆ ಬರಲಿಕ್ಕಾಗುವುದೆಂದೂ ಹೇಳಲಾರೆ." ಎಂದರು. ಅದಕ್ಕೆ ಆತ, "ಒಮ್ಮೆ ಏನಾದರೂ ಹೆಚ್ಚು ಕಡಮೆಯಾದರೆ ನಾನೂ ಬರಬೇಕೆಂದು ತೋರಿದರೆ ಸಿದ್ಧಾಪುರಕ್ಕೆ ತಂತಿ ಕೊಡಿ. ಗಂಗಯ್ಯನವರ ವಿಳಾಸಕ್ಕೆ ತಂತಿ ಕೊಟ್ಟರೆ ಅವರು ನನಗೆ ಮುಟ್ಟಿಸುತ್ತಾರೆ. ಇಲ್ಲಿಯೂ ತುಂಬ ತೊಂದರೆ ಬಂದೀತು. ಈ ಬೆಂಕಿಯ ಕತೆ ಸಾಹುಕಾರರಿಗೆ ಮುಟ್ಟಿ, ಅವರು ಇನ್ನೇನೇನು ಗಲಾಟೆ ಮಾಡಲಿಕ್ಕಿದೆಯೋ! ಊರವರನ್ನು ಹಾಗೆಯೇ ಬಿಡಲಿಕ್ಕಿಲ್ಲ.--ತಮ್ಮ ಹೊಟ್ಟೆ ಉರಿಗೆ" ಎಂದನು. ಸ್ವಲ್ಪ ಹೊತ್ತಿನಲ್ಲಿ ಮೋಟರು ಬಂದಿತು. ಈಚಣ್ಣಯ್ಯನವರು ಅದನ್ನೇರಿ ಹೊರಟು ಹೋದರು. ರಾಧಾಕೃಷ್ಣ ನಾಗೇನಹಳ್ಳಿಗೆ ಹಿಂದಿರುಗಿದನು. ಮನೆಗೆ ಬರುವಾಗಲೆಲ್ಲ ಯೋಚನೆಗಳೇ.

ಮನಸ್ಸಿಗೆ ಕಾಣುತ್ತಿತ್ತು.—"ಇಷ್ಟರಲ್ಲಿ ಅವರ ಆಳುಗಳು ಹೊರಟಿರಬಹುದು. ನಾಳೆಯ ಒಳಗೆ ಸಾಹುಕಾರರಿಗೆ ಈ ಸುದ್ದಿ ಮುಟ್ಟುತ್ತದೆ. ಅವರು ಯಲ್ಲಾಪುರದಿಂದ ಓಡಿ ಬರುವವರೇ. ಸಿದ್ಧಾಪುರಕ್ಕೆ ಬಂದು, ಪೋಲೀಸರನ್ನು ಕರೆದುಕೊಂಡು ನಮ್ಮ, ಊರವರನ್ನೆಲ್ಲ ಎಷ್ಟು ಹಿಂಸಿಸ

ಲಿಕ್ಕಿವೆಯೋ! ಇದನ್ನಾರು ಮಾಡಿದುದೋ? ಇನ್ನು ಯಾರಿಗೆಲ್ಲ ಬೆದರಿಕೆಯೋ? ನಮ್ಮ ಮನೆಯವರ ಮೇಲೆ ಹೇಗೂ ಕಣ್ಣು ಇದ್ದೇ ಇದೆ" ಎಂದು ಚಿಂತಿಸುತ್ತಲೇ ಇದ್ದ.

ಮನೆಗೆ ಬಂದರೆ, ಅವನಿಗೆ ಊಟವೂ ರುಚಿಸಲಿಲ್ಲ. ಹೇಗೋ ಒಂದು ತುತ್ತು ಊಟಮಾಡಿ—ಮನೆಯ ಹೆಂಗುಸರೊಡನೆ—'ನಾಳೆ ಪೋಲೀಸರು ಬಂದಾರು—ಹೀಗಾದೀತು. ಅವರು ಬಂದು ಹೆದರಿಸಬಹುದು; ನೀವು ಹೆದರಬಾರದು' ಎಂದು ಉಪದೇಶಮಾಡುತ್ತಿದ್ದ. ಗುಡಿಗಾರನ ಮುದಿ ತಾಯಿ "ಅದಕ್ಕೇನಂತೆ! ನಮ್ಮನ್ನು ಹಿಡಿದುಕೊಂಡು ಹೋಗುತ್ತಾರೆಯೇ? ಯಾರ ತಪ್ಪಿಗೆ, ಯಾರಿಗೆ ಶಿಕ್ಷೆ? ಅಷ್ಟು ನ್ಯಾಯ, ನೀತಿ ಇಲ್ಲವಾದರೆ ತೆಗೆದುಕೊಂಡು ಹೋಗಲಿ. ಇಲ್ಲಿ ಸಾಯುವ ಬದಲು, ಅಲ್ಲಿ ಸಾಯುತ್ತೇನೆ" ಎಂದಳು. ಆದರೆ ಎಲ್ಲರೂ ಅಷ್ಟು ವಿರಕ್ತರಲ್ಲ. ಉಳಿದ ಹೆಂಗಸರಿಗೆ ಪೋಲೀಸರ ಭೀತಿಯು ಇದ್ದೇ ಇದೆ. ಅದಕ್ಕು ಹೆಚ್ಚಾಗಿ ಮಾನದ ಭೀತಿಯು ಇದ್ದೇತೀರಬೇಕಷ್ಟೆ.

* * * *

ನಾಲ್ಕು ದಿನಗಳು ಸರಿದುವು. ಈಚಣ್ಣಯ್ಯನವರು ಬೆಳಗಾವನ್ನು ಸೇರಿದ್ದರು. ಅವರ ಮಡದಿಯ ಸ್ಥಿತಿ ತುಂಬ ಶೋಚನೀಯವಾಗಿತ್ತು. ಸುಮಾರು ಇಪ್ಪತ್ತೈದು ವಯಸ್ಸಿನ ದೃಢಕಾಯಳಾದ ಸುಬ್ಬಮ್ಮ ಈಗ ಸೊರಗಿ ಸಿಪ್ಪೆಯಾಗಿದ್ದಾಳೆ. ಮುಖದಲ್ಲಿ, ಮೈಯಲ್ಲಿ ರಕ್ತದ ಕಳೆಯೇ ಕಾಣಿಸುವಂತಿರಲಿಲ್ಲ. ಜೈಲಿನ ಅನ್ನ ತಿಂದು, ಆರೋಗ್ಯ ಕೆಟ್ಟು ಅಮಶಂಕೆಗೆ ಬಲಿಯಾಗಿದ್ದಾಳೆ. ಬಹುದಿನ ಔಷಧವೇ ನಡೆಯಲಿಲ್ಲ. ಕೊನೆಗೆ ಔಷಧ ಪ್ರಯೋಜನವಾಗಲಿಲ್ಲ. ಬೆದರಿಕೊಂಡು ಅವಳನ್ನು ಬಂಧಮುಕ್ತಳನ್ನಾಗಿ ಮಾಡಿದರು. ಆ ಬೇನೆ ಜೈಲಿನ ಆವರಣದಲ್ಲಿ ಬಹುವಾಗಿ ಪ್ರಸಾರವಾಗಿ, ಎಷ್ಟೋ ಜನರು ಪ್ರಾಣ ಬಿಟ್ಟರು. ಈಕೆ ಯಾರದೋ ಪರಿಚಯದಿಂದ ಬೆಳಗಾವಿಯ ಕುಲಕರ್ಣಿ ರಘುನಾಥರಾಯರ ಮನೆಯನ್ನು ಸೇರಿದಳು. ಅಲ್ಲಿಗೆ ಬಂದ ಮೇಲೆ ಸಮನಾದ ಚಿಕಿತ್ಸೆ ತೊಡಗಿತು. ಆದರೆ ಬಹು ದೀರ್ಘಕಾಲ ಮೌನವಾಗಿ ಅನುಭವಿಸಿದ ಕಾಯಿಲೆ, ಒಮ್ಮೆಗೆ ಗುಣವಾಗಲಿಕ್ಕುಂಟೇ? ಅವಳ ಗೆಳತಿಯರು ಒಬ್ಬಿಬ್ಬರು ಸಾವಿಗೆ ಅಂಜಿ ಕ್ಷಮಾಪಣೆ ಬರೆದು ಕೊಟ್ಟು ಬಿಡುಗಡೆ ಹೊಂದಿದ್ದರು. ಈಕೆ ಆ ಕೆಲಸ ಮಾಡಲಿಲ್ಲ.

ಸತ್ತರೂ ಅಲ್ಲಿಯೇ ಸಾಯುತ್ತೇನೆ ಎಂದುಕೊಂಡಳು. ಆ ಸಾವಿನ ಹೊರೆ ತಮಗೆ ಬೇಡವೆಂದು ಜೈಲಿನವರು ಬಿಟ್ಟರು. ಆದರೆ ಬೇನೆಯ ಸ್ಥಿತಿ ತುಂಬ ಉಗ್ರವಾಗಿತ್ತು.

ಅವಳಿಗೆ ಸೆರೆಮನೆಯಲ್ಲಿಯೂ, ಅದರ ಹೊರಗೂ, ತನ್ನ ಚಿಂತೆಗಿಂತ ಮನೆಯವರ ಹಂಬಲ ಅತಿಶಯವಾಗಿತ್ತು. ಕಿಟ್ಟಣ್ಣನ ಹಂಬಲ ಹೇಳಿ ತೀರದು. ಮನೆಯಲ್ಲಿ ತಾನಿಲ್ಲದೆ, ಯಜಮಾನರು ಹೇಗೆ ದಿವಸ ಕಳೆಯುತ್ತಾರೋ—ಎಂಬ ಕಾತರ ಮತ್ತಷ್ಟು. ಊರಿಂದ ಈಚಣ್ಣಯ್ಯನವರು ಒಂದೆರಡು ಬಾರಿ ಪತ್ರ ಬರೆದಿದ್ದರು. ಎಲ್ಲರೂ ಕ್ಷೇಮವೆಂದು ತಿಳಿಸಿದ್ದರು. ಆದರೆ ಆ ಮಾತಿನಲ್ಲಿ ಆಕೆಗೆ ಅಷ್ಟೊಂದು ನಂಬಿಕೆ ಉಂಟಾಗಿರಲಿಲ್ಲ.

ಈಗ ಅವಧಿಗೆ ಮುಂಚಿತವಾಗಿ ಬಿಡುಗಡೆಯಾಯಿತು. ನೆಟ್ಟಗೆ ಊರಿಗೆ ಹೋಗುವೆನೆಂದು ಹೊರಕ್ಕೆ ಬಂದಳು. ಅಷ್ಟೊಂದು ಶಕ್ತಿ ಹೇಗೆ ಬಂದೀತು? ಹಿತಚಿಂತಕರ ಬಲವಂತಕ್ಕೆ, ಕುಲಕರ್ಣಿಯವರ ಆಶ್ರಯವನ್ನು ಪಡೆದಳು. ಪತಿಯ ದರ್ಶನವಾಗುತ್ತಲೇ, ಒಂದು ಬಾರಿಗೆ ಆಕೆಯ ಮುಖ ಅರಳಿತು. "ಕೂತುಕೊಳ್ಳಿ" ಎಂದಳು. "ಕಿಟ್ಟಣ್ಣ ಹೇಗಿದ್ದಾನೆ?" ಎಂದು ಕೇಳಿದಳು. "ಊರಿನ ಸಂಗತಿ ಏನೇನು ಹೇಳಿ" ಎಂದಳು. ಬಹು ಹೊತ್ತಿನ ತನಕ ಈಚಣ್ಣಯ್ಯ ಎಲ್ಲವನ್ನೂ ಹೇಳುತ್ತ ಕುಳಿತರು. "ಹೇಗೆ? ಹೊರಡುವ ಸ್ಥಿತಿಯಲ್ಲಿ ಇದ್ದೀಯಾ? ಏನು ಅನಿಸುತ್ತದೆ" ಎಂದು ಕೇಳಿದರು. "ನಾನೇ—ನಿಮಗಾಗಿ ಕಾದಿದ್ದೆ. ಹೇಗಿದ್ದರೂ ಹೊರಡಬೇಕು. ಮಗುವನ್ನು ನೋಡುವ ತನಕ ಮನಸ್ಸಿಗೆ ಏನೂ ಸಮಾಧಾನವಿಲ್ಲ. ನೆಟ್ಟಗೆ ಮನೆಗೆ ಹೋಗುವ" ಎಂದಳು. ಆ ರಾತ್ರಿಯೇ ಗಾಡಿಗೆ ಹೇಗೋ ಅವಳನ್ನು ಸಾಗಿಸಿಕೊಂಡು ರೈಲಿನಲ್ಲಿ ಹುಬ್ಬಳ್ಳಿಗೆ ಕರೆದುತಂದರು. ಅಲ್ಲಿಂದ ಬೆಳಗಿನ ಮೋಟಾರಿಗೆ ಯಮುಯಾತ್ರೆಮಾಡಿ ಶಿರ್ಶಿಯನ್ನು ಸೇರಿದರು. ಅಷ್ಟರೊಳಗೆ ಆಕೆ ಕಂಗಾಲಾಗಿದ್ದಳು.

ಶಿರ್ಶಿ, ಈಚಣ್ಣಯ್ಯನವರಿಗೆ ತುಂಬ ಪರಿಚಿತವಾದ ಊರು. ತಮ್ಮ ಒಬ್ಬ ಸ್ನೇಹಿತರ ಮನೆಯನ್ನು ಹೋಗಿ ಸೇರಿದರು. ಅಲ್ಲಿ ಆ ದಿನ ನಿಂತು, ಅವಳನ್ನು ಡಾಕ್ಟರರಿಗೆ ತೋರಿಸಿ, ಪಯಣ ಮುಂದುವರಿಸುವ ವಿಚಾರ ಅವರದ್ದು. ರಾಧಾಕೃಷ್ಣನೂ ಹಾಗೇನೇ ಹೇಳಿದ್ದ. ಆದರೆ ಅಂತಹ ನಿಶ್ಯ

ಕ್ತಿಯಲ್ಲಿಯೂ ಅವಳಿಗೆ ಊರಿಗೆ ಹೋಗುವ ಹಟ. ಡಾಕ್ಟರರನ್ನು ಗೆಳೆಯರ ಮನೆಗೆ ಬರಮಾಡಿ ಆಕೆಯನ್ನು ತೋರಿಸಿದಾಗ, "ಅಮ್ಮಾ, ಮಕ್ಕಳಾಟಿಕೆ ಮಾಡಬೇಡಿ. ಇದಕ್ಕೆ ತುಂಬ ವಿಶ್ರಾಂತಿಬೇಕು, ಚಿಕಿತ್ಸೆ ಬೇಕು. ನಾಗೇನಹಳ್ಳಿಯಲ್ಲಿ ಅದಾಗುವ ಕೆಲಸವಲ್ಲ. ಆಸೆಯಾದರೆ ಮಗುವನ್ನು ಕರೆಯಿಸಿಕೊಳ್ಳಿ. ನಿಮ್ಮ ಸ್ಥಿತಿ ತುಂಬ ಜೋಪಾನವಾಗಿ ನೋಡಬೇಕಾದ ಸ್ಥಿತಿ"-ಎಂದು ಬುದ್ಧಿ ಹೇಳಿದರು. ಅವರನ್ನು ಬಿಟ್ಟು ಬರಲು ಹೋದ ಈಚಣ್ಣಯ್ಯನವರೊಡನೆ ಖಾಸಗಿಯಿಂದ "ನೀವು ಇಲ್ಲಿಯ ತನಕ ಬಂದದ್ದೇನೆ ದೊಡ್ಡದು. ಈ ಮೋಟಾರು ಪ್ರಯಾಣದಲ್ಲಿ ಅವರ ಜೀವ ಉಳಿದುದೇ ದೊಡ್ಡದು. ನಿಮಗೆ ಬೇಕಾದರೆ ಬಿಡಾರದ ಮನೆ ಒದಗಿಸುತ್ತೇನೆ. ನೀವು ಇಲ್ಲಿಯೇ ಎಂಟು ದಿವಸ ಕೂತಿರಿ" ಎಂದರು. ಈಚಣ್ಣಯ್ಯ ಅನುಮಾನಿಸಿದ್ದನ್ನು ಕಂಡು, ಅವರು "ನಾನು ಹಣದ ಆಸೆಗೆ ಹಾಗೆ ಹೇಳುತ್ತಿದ್ದೇನೆಂದು ತಿಳಿಯಬೇಡಿ. ಅವರು ದೇಶಕ್ಕಾಗಿ ಜೈಲಿಗೆ ಹೋಗಿದ್ದರೆ. ಹಾಗೆ ಹೋಗಿ ಬಂದವರ ಸೇವೆಯನ್ನು ನಾನು ಮಾಡಲಾರೆನೇ? ನಿಮ್ಮ ಮನೆಯ ವಿಷಯ ನನಗೆ ಗೊತ್ತು. ನಿಮ್ಮ ಸ್ನೇಹಿತ ರಾಧಾಕೃಷ್ಣನವರೂ ಆಗಾಗ ಇಲ್ಲಿಗೆ ಬರುವವರು. ಅವರಿಗೆ ನನ್ನಿಂದಾದ ಸಹಾಯ ಮಾಡುತ್ತಿದ್ದೇನೆ" ಎಂದರು. ಈಚಣ್ಣಯ್ಯನವರಿಗೆ ವಿಶ್ವಾಸವುಂಟಾಯಿತು—"ಹಾಗಾದರೆ ನಾನು ಅವಳಿಗೆ ನಿಜವಾದ ಸಂಗತಿಯನ್ನು ಹೇಳಬೇಡವೇ" ಎಂದರು.

"ಏನದು?"

"ನಾನು ಅವಳಿಗೆ ನಮ್ಮ ಮಗ ಮಂಗಳೂರಿನಲ್ಲಿದ್ದಾನೆಂದು ಹೇಳಿರಲಿಲ್ಲ. ಮನೆಯಲ್ಲೇ ಇದ್ದಾನೆಂದು ಅವಳು ತಿಳಿದಿರಬೇಕು. ಮಂಗಳೂರಿಗೆ ಹೋಗಿ ಅವನನ್ನು ಕರೆದು ತರುವುದಕ್ಕೆ ಒಂದು ವಾರಬೇಕು. ನಾನಾಗಲೀ, ರಾಧಾಕೃಷ್ಣನವರಾಗಲೀ ಹೋಗಬೇಕು" ಎಂದರು. "ಆಗಲಿ, ಹಾಗೆಯೇ ಮಾಡಿ" ಎಂದು ನುಡಿದರು ಡಾಕ್ಟರರು. ಅವರಿಗೆ ಅಲ್ಲಿ ಉಳಿದಿರುವುದಕ್ಕೆ ಒಂದು ಬಿಡಾರವನ್ನೂ ಒದಗಿಸಿಕೊಟ್ಟರು. ಈಚಣ್ಣಯ್ಯನವರು ಸುಬ್ಬಮ್ಮನ ಮುಂದೆ ಕಿಟ್ಟಣ್ಣ ದೂರದಲ್ಲಿದ್ದಾನೆಂದು ಹೇಳಬೇಕಾಯಿತು.

"ಅಲ್ಲಿಗೆ ಯಾಕೆ ಕಳುಹಿಸಿದಿರಿ?"

"ಏನು ಮಾಡಲಿ ಹೇಳು. ಮಹಾಬಲಣ್ಣ, ಗೋಪಾಲಣ್ಣನ ಮನೆಯು ವರನ್ನು ಮನೆಯಿಂದ ಹೊರಡಿಸಿದರು. ಅವರ ಆಸ್ತಿ ಮನೆ ಹೋಯಿತು. ನಮ್ಮ ಜಾನುವಾರು ಹೋಯಿತು. ಊರಿನ ಹತ್ತೆಂಟು ಮನೆಗಳು ಗತಿ ಗೋತ್ರವಿಲ್ಲದಂತಾಗಿವೆ. ಈಗ ನಾವೆಲ್ಲರೂ ಒಂದೇ ಕಡೆಯಲ್ಲಿ ಕುಳಿತು ದಿನ ತೆಗೆಯುತ್ತಿದ್ದೇವೆ. ಅಷ್ಟೊಂದು ಜನರ ಸಂಸಾರ ಹೇಗೆ ನಡೆಯಬೇಕು ಹೇಳು. ಮಕ್ಕಳಾದರೂ ಸುಖವಾಗಿರಲಿ—ಎಂದು ಅವರನ್ನು ರಾಧಾಕೃಷ್ಣನವರ ಮನೆಯಲ್ಲಿ ಬಿಟ್ಟುಬರಬೇಕಾಯಿತು. ನೀನು ಏನೂ ಯೋಚನೆ ಮಾಡಬೇಕಿಲ್ಲ" ಹೀಗೆಂದು ಅವರು ತಮ್ಮ ಸಹಾಯಕ್ಕೆ ಒದಗಿದ ರಾಧಾಕೃಷ್ಣನ ವಿಚಾರವನ್ನು ತಿಳಿಸಿದರು. ಆ ಮೇಲೆ ಡಾಕ್ಟರರ ಕಟ್ಟಪ್ಪಣೆಯನ್ನು ಹೇಳಿದರು. ಆಕೆಯು ಒಡಂಬಡಬೇಕಾಯಿತು.

ರಾಧಾಕೃಷ್ಣನಿಗೆ ಪತ್ರ ಹೋಯಿತು. ಆತನೂ ಶಿರ್ಶಿಗೆ ಬಂದನು. ಅವರೊಡನೆ ಈಚಣ್ಣಯ್ಯ "ಈಗ, ನಾನಾಗಲೀ, ನೀವಾಗಲೀ, ಮಂಗಳೂರಿಗೆ ಹೋಗಬೇಕಾಯಿತಲ್ಲಾ? ನಮ್ಮ ಸುಬ್ಬಿಯು, ಮಗುವನ್ನು ನೆನೆನೆನೆದು ಅಳುತ್ತಿದ್ದಾಳೆ" ಎಂದರು.

"ಏನೂ ಯೋಚನೆ ಬೇಡ; ನಾನು ಅಲ್ಲಿಗೆ ಹೋಗಿಬರುತ್ತೇನೆ" ಎಂದ ರಾಧಾಕೃಷ್ಣ. ಆ ಬಳಿಕ ಆತ ವೈದ್ಯರ ಬಳಿಗೆ ಹೋಗಿ, ರೋಗಿಯ ವಿಚಾರವನ್ನು ಕುರಿತು ಮಾತನಾಡಿದ. ಅವರು "ಏನೋ, ತುಂಬ ಕಠಿಣಾವಸ್ಥೆಗೆ ಮುಟ್ಟಿದ ಸ್ಥಿತಿಯಿದು. ನನ್ನ ಪ್ರಯತ್ನವಂತು ಮಾಡುತ್ತೇನೆ. ನೀವು ಮಗುವನ್ನು ಕರೆದುಕೊಂಡು ಬನ್ನಿ. ಅದರಿಂದ ಅವರ ಮನಸ್ಸು ಸ್ವಲ್ಪ ಉಲ್ಲಾಸವಾಗುವುದಕ್ಕೆ ಸಹಾಯವಾದೀತು" ಎಂದರು.

ಮಂಗಳೂರಿಗೆ ಹೋಗುವುದಕ್ಕೂ, ಹಣವನ್ನು ಅವರೇನೆ ಕೊಡಬೇಕಾಯಿತು. ಡಾ। ನಾಡಕರ್ಣಿಯವರು ಎಲ್ಲ ಸಾರ್ವಜನಿಕ ಕೆಲಸಗಳಲ್ಲಿ ತುಂಬ ಶ್ರದ್ಧೆಯುಳ್ಳವರು. ಅವರ ಸಂಪಾದನೆಯೂ ಚೆನ್ನಾಗಿತ್ತು; ವೆಚ್ಚವೂ ಕಡಿಮೆಯಾಗಿರಲಿಲ್ಲ. ಚಳವಳ ತೊಡಗಿದಾಗ, ಸುತ್ತುಮುತ್ತಲಿನ ಉತ್ಸಾಹವನ್ನು ಕಂಡು ಅವರಿಗೂ ಉತ್ಸಾಹವಾಯಿತು. ಆದರೆ ಮನೆಯಲ್ಲಿ ನಿತ್ಯ ಕಾಯಿಲೆಯ ಸೋದರಿಯೊಬ್ಬಳು ಇರುವುದನ್ನು ಕಂಡು, ತಮ್ಮ ಉತ್ಸಾಹ ತಡೆದು ಕುಳಿತರು. ಆದರೆ ಚಳವಳಕ್ಕೆ, ಹಿಂದಿನಿಂದ ಅವರು ಶಕ್ತಿಮೀರಿ ಸಹಾಯ ಮಾಡಿದ್ದಾರೆ. ಖಾದಿಯ ಅಂಗಿ ತೊಟ್ಟು ಯಾರಾದರೂ

ಚಿಕಿತ್ಸೆಗೆಂದು ಮನೆಗೆ ಬಂದರೆ- ಹಣ ಅವರಾಗಿ ಕೊಟ್ಟರೆ ಕೊಳ್ಳುತ್ತಾರೆ, ಇಲ್ಲವಾದರೆ ಇಲ್ಲ ಅವರಿಗೆ ಅಂತಹ ಶ್ರದ್ಧೆಯು ಈ ರಾಷ್ಟ್ರೀಯ ಕೆಲಸಗಳಲ್ಲಿ. ರಾಧಾಕೃಷ್ಣನ ಪರಿಚಯ ಈ ನಿಮಿತ್ತದಿಂದಲೇ ಬಹು ಚೆನ್ನಾಗಿ ಆದುದು. ರಾಧಾಕೃಷ್ಣನ ಸ್ಥಿತಿಯೂ ಅವರಿಗೆ ತಿಳಿದಿತ್ತು. ಅವರಾಗಿ ನಗುತ್ತ— 'ಹೋಗಿ ಬರುವುದಕ್ಕೆ ಎಷ್ಟು ಹಣ ಬೇಕು' ಎಂದು ಕೇಳಿದರು. ತಾವೇ ಅಂದಾಜಿನ ಮೇಲೆ ಮೂವತ್ತು ರೂಪಾಯಿಗಳನ್ನೂ ಕೊಟ್ಟರು. ಆತ ಹಣವನ್ನು ಪಡೆಯುತ್ತ ಹೇಳಿದನು—"ಡಾಕ್ಟರ್, ನಾಗೇನಹಳ್ಳಿಯನ್ನು ಬಿಡುವುದಕ್ಕೂ ನನಗೆ ಹೆದರಿಕೆಯಾಗುತ್ತದೆ" ಎಂದು ನಡೆದ ಪ್ರಕರಣ ವನ್ನು ಹೇಳಿದನು. "ಅಪಕ್ಕಾಗಿಯೇ ಸಾಹೇಬರು ಪೋಲೀಸರನ್ನು ಕರೆ ದುಕೊಂಡು ಬಂದು ಏನು ದಾಂಧಲೆ ಹಾಕುತ್ತಾರೋ; ಮನೆಯಲ್ಲಿ ಉಳಿ ದಿರುವವರು ಹೆಂಗಸರು, ಮುದುಕರು. ನಾನು ಈ ಚಣ್ಣಯ್ಯ, ಇಬ್ಬರೂ ಮನೆ ಬಿಟ್ಟಾಗ, ಅವರು ಬಂದು ಏನು ಮಾಡುತ್ತಾರೋ ಹೇಗೆ ಹೇಳಲಿ" ಎಂದರು.

ನಾಡಕರ್ಣಿಯವರು ತುಟಿಗೆ ಬೆರಳಿಟ್ಟು ನಾಲ್ಕು ನಿಮಿಷ ಯೋಚಿ ಸಿದರು. "ಯಾರು? ಯಲ್ಲಾಪುರದ ಸಾಹುಕಾರರೇ; ಅಂಥ ಕೆಟ್ಟವರಲ್ಲ" ಎಂದರು.

"ಅವರು ಕೆಟ್ಟವರಲ್ಲವಾದರೂ ಪೋಲೀಸು ಫಿರ್ಯಾದು ಕೊಟ್ಟಲ್ಲಿ, ಮುಂದೆ ತೊಂದರೆ ಇದ್ದೇ ಇದೆ. ನಾವಿಬ್ಬರೂ ಊರು ಬಿಟ್ಟಿರುವಾಗಲೇ ತೊಂದರೆ ಬಂದರೆ—ಎಂಬ ಯೋಚನೆ ನನಗೆ. ನಾನು ಹೊರಡುವ ಮುಂಚೆ ನಾಗೇನಹಳ್ಳಿಗೆ ಹೋಗಿ, ನಾಲ್ಕು ಮಾತು ಹೇಳಿ ಬರುವ ಎಂದೂ ಕಾಣುತ್ತದೆ" ಎಂದನು. ಡಾಕ್ಟರರು, "ನೀವೀಗ ಹೋಗಿ. ಆ ವಿಚಾರವನ್ನು ನನಗೆ ಬಿಟ್ಟುಬಿಡಿ" ಎಂದು ತಿಳಿಸಿದರು. ಸುಲೇಮಾನ್ ಸಾಹೇಬರ ಪರಿಚಯ ಅವರಿಗೂ ಇತ್ತು. ಅವರು ಮೊದಲು ತಮ್ಮ ವೈದ್ಯಾಲಯವನ್ನು ತೆರೆದದ್ದು ಯಲ್ಲಾಪುರದಲ್ಲೇ. ಆಗಲೇ ಅವರ ಪರಿಚಯ. ಆ ಧೈರ್ಯದಿಂದಲೇ ತಂತಿ ಕೊಟ್ಟು ಸಾಹೇಬರನ್ನು ತಮ್ಮ ಬಳಿಗೆ ಕರೆಯಿಸಿಕೊಂಡರು. ಸಾಹೇಬರಿಗೆ ಅಷ್ಟರಲ್ಲಿ ನಾಗೇನಹಳ್ಳಿಯ ಲಂಕಾದಹನದ ವರ್ತಮಾನ ಹೋಗಿತ್ತು. ಸುದ್ದಿಯನ್ನು ಕೇಳಿ ಒಮ್ಮೆ ಆವೇಶ ಉಂಟಾಯಿತು. 'ನಾಗೇನ ಹಳ್ಳಿಯವರಿಗೆ ಬುದ್ಧಿ ಕಲಿಸುತ್ತೇನೆ'

ಎಂದೂ ತೋರಿತು. ಆದರೆ ಮರುಗಳಿಗೆಗೆ, ಆ ಬಗೆಯಲ್ಲಿ ಹಟವನ್ನು ಸಾಧಿಸಿ ಪ್ರಯೋಜನವಿಲ್ಲವೆಂದೂ ಕಂಡಿತು. ಊರಲ್ಲಿ ಇರುವ ನಾಲ್ಕು ಜನರಲ್ಲಿ ತಾವು ಇನ್ನಷ್ಟು ವೈರ ಕಟ್ಟಿಕೊಂಡರೆ ಸಾಕ್ಷಿ ಹೇಳುವವರೂ ಸಿಗಲಾರರು—ಎಂದು ತೋರಿತು. ಆದುಧರಿಂದಲೇ ಶಿರ್ಶಿಗೆ ಬಂದ ಸಾಹೇಬರೊಡನೆ ಡಾಕ್ಟರರು ಹೆಚ್ಚು ಉಸಿರನ್ನು ಖರ್ಚುಮಾಡಬೇಕಾಗ ಲಿಲ್ಲ. "ಸಾಹೇಬರೇ, ನೀವು ಇಂತಹ ಸಮಯದಲ್ಲಿ ಆಸ್ತಿಯ ಹರಾಜಿಗೆ ನಿಂತದ್ದೇನೆ ತಪ್ಪು. ನನಗೆ ಅದು ಗೊತ್ತಿದ್ದರೆ, ಎಂದೂ ಬಿಡುತ್ತಿರಲಿಲ್ಲ. ಅವರೆಲ್ಲರು ಜೈಲಿಗೆ ಹೋದದ್ದು, ಮಾಡಿದ್ದು ತಮ್ಮ ಸ್ವಂತ ಬದುಕಿಗಾಗಿಯೋ? ಹೇಳಿ" ಎಂದರು.

"ಏನು ಮಾಡಲಿ ಸ್ವಾಮಿ? ನನಗೆ ಸರಕಾರದವರ ನೂರು ಹಂಗುಗಳಿದ್ದಾವೆ. ರಸ್ತೆಯ ಕಂಟ್ರಾಕ್ಟು, ಫೋರೆಸ್ಟು ಕಂಟ್ರಾಕ್ಟು ಎಂದು ಅವರ ಕಾಲ ಬುಡಕ್ಕೆ ಸದಾ ಹೋಗುತ್ತಿರುವವನು ನಾನು. ಖುದ್ದು ಮಾಮಲೇದಾರರೇ ಹೇಳಿ ಕಳುಹಿಸಿದರು—ಅಗ್ಗದಲ್ಲಿ ಸಿಗುವ ಆಸ್ತಿಯನ್ನು ಯಾಕೆ ಬಿಡುತ್ತೀರಿ? ನೀವು ಬಿಟ್ಟರೆ ಹೊರಗಿನವರು ಬಂದು ಕೊಳ್ಳುವುದಿಲ್ಲವೇ? ಎಂದು ಒತ್ತಾಯವನ್ನು ಮಾಡಿದರು. ದಾಕ್ಷಿಣ್ಯಕ್ಕೆ ಒಪ್ಪಿಕೊಂಡೆ. ಈಗ ಬುದ್ಧಿ ಬಂದಿತಲ್ಲ?"

"ಹೋದದ್ದು ಹೋಯಿತು. ಅದನ್ನು ಕಟ್ಟಿಕೊಂಡು ನೀವು ತಿರಗಿ ಫಿರ್ಯಾದಿ, ಗಿರ್ಯಾದಿ ಮಾಡಿ ಪೋಲೀಸರ ಜುಲುಮಿಗೆ ಅವಕಾಶ ಕೊಡಬಾರದು. ನನಗೆ ಆ ಊರಿನವರ ಗೋಳು ಗೊತ್ತು. ಇಂಥವರೇ ಆ ಕೆಲಸ ಮಾಡಿದ್ದಾರೆಂದು ತಿಳಿದರೆ, ಆಗ ಬೇರೆಯೇ ಲೆಕ್ಕ. ಹಾಗಲ್ಲದೆ ನೀವು ಬರಿದೆ ಫಿರ್ಯಾದಿ ಕೊಟ್ಟಲ್ಲಿ ಪೋಲೀಸರ ಹಿಂಸೆ ಜನಕ್ಕೆ ತಪ್ಪಿದ್ದಲ್ಲ. ನೀವೀಗ ಮಹಾಬಲ ಭಟ್ಟರ ಆಸ್ತಿಯನ್ನು ತೆಗೆದುಕೊಂಡಿರಿ. ಅವರು ಜೈಲಿನಿಂದ ಹಿಂದಕ್ಕೆ ಬಂದರು. ತಮ್ಮ ಸಂಸಾರ ಕಟ್ಟಿಕೊಂಡು ಊರು ಬಿಟ್ಟು ಸಾಗರಕ್ಕೆ ಹೊರಟು ಹೋದರಂತೆ. ಪುಣ್ಯದ ಕೆಲಸವೇ ಇದು?" ಎಂದು ದಿಫೋರ್ಪದೇಶವನ್ನು ಮಾಡಿದರು. ಸಾಹೇಬರು ತುಂಬ ವಿಚಾರಕ್ಕೊಳಗಾದರು. ತಾನು ಈ ಗೊಂದಲಕ್ಕೆ ಸಿಕ್ಕಿದುದೇ ತಪ್ಪೆಂದು ಅವರಿಗೆ ತೋರಿತು. 'ಅಷ್ಟೇ ಸಾಕು, ಇನ್ನೂ ಹೆಚ್ಚಿನ ಮೂರ್ಖತನವನ್ನು ತೋರುವುದು ಬೇಡ' ಎಂಬುದನ್ನು ಒಪ್ಪಿ ಮನೆಗೆ ಮರಳಿದರು.

*       *       *       *       *

- ಕಿರಿಪದವಿನಲ್ಲಿ ರಾಧಾಕೃಷ್ಣನಿಲ್ಲದೆ ಹಲವು ತಿಂಗಳುಗಳೇ ಕಳೆದಿದ್ದುವು. ವರ್ಷವೂ ಸಮೀಪಿಸಿರಬೇಕು. ಸತ್ಯ—'ಇವರು ಪತ್ರವನ್ನು ಬರೆಯದೆ ಯಾಕೆ ಕುಳಿತಿರುತ್ತಾರಪ್ಪಾ' ಎಂದು ಯೋಚಿಸಿ ಯೋಚಿಸಿ, ದಣಿದಿದ್ದಳು. ಆತ ಕಾಗದ ಬರೆಯುತ್ತಲೇ ಇರಲಿಲ್ಲವೆಂದಲ್ಲ. ಬರೆಯುವುದು ಬಹಳ ವಿರಳ; ಮಾತೂ ವಿರಳವೇ. ಅಲ್ಲಿಂದ ಸ್ವಲ್ಪ ಹಣವನ್ನು ಕಳುಹಿಸಿದ್ದ. ಅನಂತರಾಮನೂ ತಿಂಗಳಿಗೆ ಹತ್ತೆಂಟುರೂಪಾಯಿಗಳನ್ನು ಕಳುಹಿಸುತ್ತಿದ್ದ. ಆದರೆ ಈ ಅನಾಥ ಬಾಲಕರು ಅಲ್ಲಿಗೆ ಸೇರಿದಂದಿನಿಂದ ಅವರ ಹೊರೆ ಅಧಿಕವಾಗಿದೆ. ಶ್ಯಾಮ ಎರಡು, ಮೂರು ತಿಂಗಳ ಕಾಲ, ಮಂಗಳೂರಿನ ಉದಾರಿಗಳ ಬಳಿ ಸುಳಿದಾಡಿ ಬಂದ. ಆದರೆ ಅವನಂತಹ ಹುಡುಗನನ್ನು ಕಂಡು ಯಾರಿಗೆ ವಿಶ್ವಾಸಬರಬೇಕು? ಆತ ರಾಧಾಕೃಷ್ಣನ ಹೆಸರನ್ನು ಹೇಳಿದರೂ ಅಷ್ಟೇನೆ ಫಲ. ಅವನ ಪರಿಚಯವಾದರೂ ಎಷ್ಟು ಮುಂದಿಗೆ ಇದೆ? ನಂದರವರ ವಂತಿಗೆಯಂತೂ ಮೊದಲ ತಿಂಗಳಲ್ಲೇ ಮುಕ್ತಾಯವಾಯಿತು. ತಿಂಗಳಿಗೆ, ಆಸೆಯಿಂದ ಆರೆಂಟು ಬಾರಿ ಹೋದರೆ, ಹತ್ತು ಇಪ್ಪತ್ತು ರೂಪಾಯಿಗಳ ವಂತಿಗೆ ಹಣ ಕೂಡುವುದು ಕಷ್ಟವಾಯಿತು. ಇದನ್ನು ಕಂಡು ಆತ ಒಂದು ದಿವಸ ಸತ್ಯಳೊಡನೆ "ಮಂಗಳೂರಿಗೆ, ದಿನ ಬಿಟ್ಟು ದಿನ, ಬೇಡುವುದಕ್ಕೆ ಹೋಗುವುದೇನೂ ತಪ್ಪಿದ್ದಲ್ಲ. ಆ ಶ್ರಮದ ಬದಲು, ರಾಮಣ್ಣ ಹೇಳಿದ ಹಾಗೆ ಎರಡು ಎಮ್ಮೆಗಳನ್ನು ಸಾಕಿದರೆ, ಇದರ ಎರಡು ಪಾಲು ಹಣ ಬೇಡದೇನೇ ಸಿಕ್ಕೀತಲ್ಲ. ನಾನಿದ್ದೇನೆ, ಮಹಾದೇವನೂ ಬಂದಾನು, ಕಲಲ ಹೇಗೂ ಇದ್ದಾನೆ. ಸರದಿಯಿಂದ ಹೋಗಿ ಹಾಲು ಮಾರಿ ಬರಬಹುದು" ಎಂದನು. ಸತ್ಯಳಿಗೂ ಆ ಯೋಚನೆಯೇ ಒಳಿತೆಂದು ಕಂಡಿತು. ಮನೆಯ ಖರ್ಚುವೆಚ್ಚ ಏರುತ್ತಿದೆ. ಇರುವ ಒಂದು ಎಮ್ಮೆಗೆ ಚೆನ್ನಾಗಿ ಮೇವನ್ನು ಹಾಕದೆ, ಹಾಲು ಕೊಡುವಂತಿಲ್ಲವಷ್ಟೆ. ಮೂರು ಜಾನುವಾರುಗಳ ಬದಲು ಐದು ಆದೀತು–ಇಷ್ಟೇನೆ. ಆದರೆ ಈ ವೇಳೆಯಲ್ಲಿ ಹಾಲು ಮಾರಿಯಾದರೂ ಸಹಾಯ ಸಿಕ್ಕೀತು.

ಆ ಯೋಚನೆಯೇ ಬಲವಾಯಿತು. ಅಂದೇನೆ ರಾಮಣ್ಣ ಅವರಿಗೆ ಅದೇ ಮಾತನ್ನು ಹೇಳಿದ್ದ. ಈಗ ತಿರುಗಿ ಶ್ಯಾಮ ಅದನ್ನೇ ಹೇಳುತಿದ್ದಾನೆ.

ಸಾಲಮಾಡಿಯೇ ಎಮ್ಮೆಗಳನ್ನು ತರಬೇಕಾದದ್ದು ನಿಜ. ಹಾಲನ್ನು ಸಾಗಿಸುವ ಭಾರವೂ ಈ ಎಲ್ಲ ಹೆಚ್ಚಿನ ಹೊರೆಯೂ ಶ್ಯಾಮನ ಮೇಲೆಯೇ ಬೀಳುತ್ತದೆ ಎಂದು ತೋರಿತು. ಅದಕ್ಕೆ ಶ್ಯಾಮಣ್ಣ "ಆ ಯೋಚನೆ ನಿಮಗೆ ಬೇಡ, ನಾನು ಎಷ್ಟೂ ದುಡಿದೇನು; ಆಳು ಇದ್ದಾನೆ, ಮಕ್ಕಳು ಇದ್ದಾರೆ, ನೀವು ರಾಮಣ್ಣನನ್ನು ಕರೆಯಿಸಿ—ಸಾಲವನ್ನು ಕೇಳಿ. ಹಾಲಿನ ಹಣದಲ್ಲಿಯೇ ಅವನ ಋಣ ತೀರಿಸಬಹುದು. ಮಂಗಳೂರಿನ ಸುತ್ತು ಮುತ್ತು ಎಷ್ಟೋ ಕುಟುಂಬಗಳು ಆ ರೀತಿ ಜೀವನ ಮಾಡುತ್ತಿವೆ. ಈ ದುಡ್ಡಿದ್ದವರ ಮುಂದೆ ಜೋಲು ಮುಖಮಾಡಿ ಬೇಡುವ ಕೆಲಸಕ್ಕಿಂತ ಆ ಕಷ್ಟ ಎಷ್ಟೋ ಮೇಲು" ಎಂದು ಬಲವಂತಮಾಡಿದನು. ಅವನ ಮಾತಿಗೆ ಬೆಂಬಲವಾಗಿ ಮಹಾದೇವ "ದಿನ ಬಿಟ್ಟು ದಿನ ಇಲ್ಲವೇ ಒಪ್ಪತ್ತು ನಾನೂ ಮಂಗಳೂರಿಗೆ ಹೋಗಿ ಬಂದೇನು" ಎನ್ನುತ್ತಲೇ, ಆಕೆಯು "ಒಳ್ಳೆಯ ಕೆಲಸ. ನಿಮಗೆ ಕಷ್ಟವಾಗಬಾರದು-ಎಂದು ಅವರು ನಿಮ್ಮನ್ನು ಇಲ್ಲಿಗೆ ಕಳುಹಿಸಿದ್ದು. ಬದಲು ನಾವು ನಿಮ್ಮಿಂದ ದುಡಿಸಿ ಕಷ್ಟಕೊಟ್ಟರೆ?" ಎಂದಳು. ಅಂತೂ ಶ್ಯಾಮನ ಮಾತಿಗೆ ಆ ದಿನ ಸಮ್ಮತಿಯು ದೊರೆಯಿತು. ಆತನ ಹೇಳಿಕೆಯಂತೆ ರಾಮಣ್ಣ ಪೂಜಾರಿಯು ಅಲ್ಲಿಗೇನೆ ಬಂದನು. ಆಕೆ ಅವನೊಡನೆ "ಆ ದಿನ ನೀನೇ ಹೇಳಿದೆ; ನಾನು ಚೇಷ್ಟೆಯೆಂದು ತಿಳಿದು ಕೊಂಡೆ. ಈಗ ಸಂಸಾರವನ್ನು ಸಾಗಿಸುವ ದಾರಿ, ಬೇರೆಯಿಲ್ಲವೆಂದು ಕಾಣು ತ್ತದೆ. ಎಷ್ಟು ಇದ್ದರೂ ಮನೆಯ ಖರ್ಚಿಗೇನೆ ಸಾಕಾಗುತ್ತಲಿಲ್ಲ. ಎರಡು ಮೂರು ಎಮ್ಮೆಗಳನ್ನು ಜಾಸ್ತಿಯಾಗಿ ಕಟ್ಟಿಕೊಂಡರೆ ಆಗಬಹುದು ಎಂದು ಕಾಣುತ್ತದೆ" ಎಂದಳು. ರಾಮಣ್ಣ ನಕ್ಕನು. "ಆಗಲಿ, ಕೊಡಿಸುತ್ತೇನೆ" ಎಂದನು.

"ರೂಪಾಯಿ ನನ್ನಲ್ಲಿಲ್ಲ. ಅವರು ಯಾವಾಗ ಬರುತ್ತಾರೆಯೋ? ಬಂದ ಮೇಲೆಯೇ ಕೊಡಬೇಕು. ಸ್ವಲ್ಪ ಸ್ವಲ್ಪ ಹಣ ಹಾಲು ಮಾರಿದ ಹಣ ದಿಂದಲೇ ಕೊಡಬೇಕು. ನಿನ್ನ ಅಕ್ಕಿಯ ರೂಪಾಯಿ ಇನ್ನೂ ಹಾಗೆಯೇ ಇದೆ" ಎಂದಳು. "ಅಮ್ಮ ಅಂತಹ ಮಾತುಗಳನ್ನು ನೀವು ನನಗೆ ಹೇಳ ಬೇಕೆಂದಿಲ್ಲ. ನಿಮ್ಮ ನಂಬಿಕೆ ನನಗೆ ಸಾಕು. ಹಣವನ್ನು ಒದಗಿಸಿ ಎಮ್ಮೆ ತರಿಸಿ ಕೊಟ್ಟರೆ ಆಯಿತಲ್ಲಾ? ಒಂದೆರಡು ದಿವಸ ಹೋದೀತು; ಅಂದರೆ ನಮ್ಮ ಅಪ್ಪನಿಗೆ ತಿಳಿಯದೆ ಆಗಬೇಕಾದ ವಹಿವಾಟು ಇದು." ಎಂದು ಹೇಳಿ ಹೊರಟುಹೋದನು.

ಆ ವಾರದ ಕೊನೆಗೆ ಎರಡು ಹೊಸ ಎಮ್ಮೆಗಳು ಮನೆಗೆ ಬಂದುವು. ಅವುಗಳ ಹುಲ್ಲಿನ ಏರ್ಪಾಟುಗಳನ್ನು ರಾಮಣ್ಣ ಊರಲ್ಲಿಯೇ ಮಾಡಿಸಿ ಕೊಟ್ಟನು. ಅಂದಿನಿಂದ ಶ್ಯಾಮು, ಕಲಲ, ಮಾಧವರು ಸರದಿಯಿಂದ ಮಂಗಳೂರಿಗೆ ಹೋಗಿ ಬರತೊಡಗಿದರು. ದಿನಕ್ಕೆ ಎರಡು ಎರಡೂವರೆ ರೂಪಾಯಿಗಳ ಅಥವಾ ತುಸು ಸ್ವಲ್ಪವೇ ಹೆಚ್ಚಾಗಿ, ಹಾಲಿನ ವ್ಯಾಪಾರ ನಡೆಯಿಸುವುದು ಸಾಧ್ಯವಾಯಿತು. ಈ ಉದ್ಯೋಗದಿಂದ, ಕೆಲಸ ಸ್ವಲ್ಪ ಹೆಚ್ಚಾಗುತ್ತಿದ್ದರೂ, ಶ್ರಮವಾಗುತ್ತಿದ್ದರೂ, ಮನಸ್ಸಿಗೆ ಒಪ್ಪದ ಭಿಕ್ಷಾಟಣೆ ನಿಂತಿತಲ್ಲವೆ ಎಂಬ ಸಂತೋಷವಾಯಿತು. ವೆಚ್ಚ ಹೋಗಿ ಒಂದು ಒಂದೂವರೆ ರೂಪಾಯಿಗಳಾದರೂ ಉಳಿಯಬಹುದು. ಅಲ್ಲದೆ ಬೇಸಾಯಕ್ಕೆ ಸಮೃದ್ಧಿಯಾಗಿ ಗೊಬ್ಬರವೂ ದೊರೆಯುತ್ತಿದೆ. ಮನೆಯ ಮಕ್ಕಳು, ಹಿರಿಯರು ಸೇರಿ, ಜಾನುವಾರುಗಳ ಸೇವೆಯನ್ನು ಉತ್ಸಾಹದಿಂದ ಮಾಡುತ್ತಿದ್ದರು. ಪರಾಧೀನತೆಯು ತಪ್ಪುತ್ತಿದೆ ಎಂಬ ಹಿಗ್ಗು ಶ್ಯಾಮ ಸತ್ಯರನ್ನು ಸಂತೋಷದಲ್ಲಿ ನಲಿಸಿತು.

ಒಂದು ರಾತ್ರಿ ಊಟವಾದ ಬಳಿಕ ಮಕ್ಕಳು ಅಂಗಳದಲ್ಲಿ ಚಾಪೆ ಹಾಸಿ ಕುಳಿತಿದ್ದರು. ಬೆಳುದಿಂಗಳು ಸುತ್ತಲು ಹಬ್ಬಿತ್ತು. ಮಾಧವ, ಗಂಗೆ, ಶಾರದೆ, ಕಿಟ್ಟಣ್ಣ ಎಲ್ಲರೂ ಕಥೆ ಕೇಳುತ್ತ ಕುಳಿತಿದ್ದರು. ಶ್ಯಾಮು ಮನೆಯ ಒಳಗಡೆ, ದೀಪದ ಎದುರು ಕುಳಿತು, ಹಿಂಡಿ, ಹತ್ತಿಯ ಕಾಳು ಗಳ ಲೆಕ್ಕ ಬರೆಯುತ್ತಿದ್ದ; ಸತ್ಯ ಅಡುಗೆಯ ಮನೆಯಲ್ಲೇ ಇದ್ದಳು. ಚಂದ್ರ ಅವಳ ಬೆನ್ನ ಹಿಂದೆ ಕೂತು ರಗಳೆ ಎಬ್ಬಿಸುತ್ತಿದ್ದ. ಆಗ ಯಾರೋ, ಗಡ್ಡಾ ಸಾಹೇಬರು ಒಬ್ಬರು ಅಂಗಳಕ್ಕೆ ಬಂದು "ಸತ್ಯ" ಎಂದು ಕೂಗಿ ದರು. ಹುಡುಗರು ಅವರು ಮುಖಮುಖ ನೋಡಿದರು. ಮಾಧವ ಶ್ಯಾಮ ನನ್ನು ಕೂಗಿ ಕರೆದ. ಶ್ಯಾಮು 'ಯಾರು?' ಎಂದು ಕೇಳಿದ. ಇಬ್ಬರೂ ಮೆಟ್ಟಲ ಬಳಿ ಸಂಧಿಸಿದರು. ರಾಧಾಕೃಷ್ಣ ಶ್ಯಾಮುನ ಬೆನ್ನನ್ನು ತಟ್ಟಿದ. "ಏನು? ಹೇಗಿದ್ದಿ?" ಎಂದು ಕೇಳಿದ. ಶ್ಯಾಮುನಿಗೆ ಆತನ ರೂಪುನೋಡಿ ಗಾಬರಿಯಾದರೂ, ಸ್ವರದ ಗುರುತು ಹತ್ತದೇ? "ಅಮ್ಮಾ, ಚಂದ್ರ, ಯಾರೋ ಬಂದಿದ್ದಾರೆ ನೋಡು" ಎಂದು ಕೂಗಿದ. ಆ ಸ್ವರದ ಉಬ್ಬಿ ನಿಂದಲೇ, ಸತ್ಯಳ ಹರ್ಷವು ಉಕ್ಕಿತು. ಯಾರೆಂಬ ಊಹೆಯೂ ಆಯಿತು. ಮಗುವನ್ನು ಎತ್ತಿಕೊಂಡು ಹೊರಕ್ಕೆ ಬಂದಳು.

ರಾಧಾಕೃಷ್ಣನು ಮನೆಯ ಚಾವಡಿಯಲ್ಲಿ ಹೋಗಿ ಕುಳಿತ. ಎಲ್ಲರೂ, ಅವನ ಸುತ್ತ ಕುಳಿತರು. ಸತ್ಯ, ಬಳಿಯಲ್ಲಿ ಕುಳಿತು ಅವನ ಮುಖವನ್ನೇ ದುರ ದುರನೆ ನೋಡುತ್ತಾಳೆ. ಚಂದ್ರ ಕರೆದರೂ ಬಳಿಗೆ ಹೋಗಲೊಲ್ಲ. ಸ್ವರ ಅವನನ್ನು ಕರೆದರೂ, ರೂಪ ಅನುಮಾನವನ್ನುಂಟುಮಾಡುತ್ತಿದೆ. ಮಹಾದೇವನಿಗೆ ಮಾತ್ರ ನಾಲ್ಕು ದಿನಗಳ ಗುರುತಾದರೂ ಅವನು ಯಾರೆಂಬುದು ತಿಳಿಯಿತು. ಆಗ ರಾಧಾಕೃಷ್ಣ ಅವನೊಡನೆ "ಮಹಾದೇವ, ನಿನ್ನ ತಂದೆ ಜೈಲಿನಿಂದ ಬಂದರು. ಮೊನ್ನೆಯಷ್ಟೇ, ನಿನ್ನ ಅಮ್ಮ, ಅಜ್ಜಿಯರನ್ನು ಕರೆದುಕೊಂಡು ಸಾಗರಕ್ಕೆ ಹೋಗರು. ನೆಂಟರ ಮನೆಗಂತೆ. ಅಷ್ಟರ ತನಕ ಎಲ್ಲರೂ ಒಟ್ಟಿಗೆಯೇ ಇದ್ದೆವು" ಎಂದ. ಕಿಟ್ಟಣ್ಣನನ್ನು ಉದ್ದೇಶಿಸಿ, "ನಿನ್ನ ಅಮ್ಮ ಬಂದಿದ್ದಾಳೆ ಶಿರ್ಸಿಗೆ. ನಿನ್ನನ್ನು ಕಾಣಬೇಕಂತೆ. ಕರೆದುಕೊಂಡು ಹೋಗುವುದಕ್ಕೇನೇ ಬಂದಿದ್ದೇನೆ" ಎಂದನು. ಉಳಿದ ಮಕ್ಕಳು ಆಚೀಚೆ ನೋಡಿದುವು. "ತಮ್ಮನ್ನು, ತಮ್ಮನ್ನು," ಎಂದು ಪ್ರಶ್ನಿಸುವಂತಿತ್ತು ಅವರ ಮುಖಗಳು.

ಸತ್ಯ ಮೆಲ್ಲಗೆ "ಹೊಂ, ಕಡೆಗೂ ಬಂದಿರಿ. ಮನೆಯ ನೆನಪಾಯಿತಲ್ಲವೆ" ಎಂದು ನಕ್ಕಳು. "ಊಟ?" ಎಂದು ಕೇಳಿದಳು.

"ಆಗಿದೆ"

"ಯಾವಾಗ?"

"ಶಿರ್ಸಿಯಲ್ಲಿ ಮೊನ್ನೆ ಹೊರಡುವಾಗ" ಎಂದು ನಕ್ಕ. ಆಕೆ ಡಬಕ್ಕನೆ ಎದ್ದು ನಿಂತಳು. ಶ್ಯಾಮು, "ನೀವೆಲ್ಲ ಮಾತನಾಡುತ್ತ ಕುಳಿತಿರಿ. ಒಂದು ನಿಮಿಷದಲ್ಲಿ ಅಡುಗೆ ಮಾಡುತ್ತೇನೆ" ಎಂದಳು. ಶ್ಯಾಮು ಅಕ್ಕನನ್ನು ಕೈ ಹಿಡಿದು ಕುಳ್ಳಿರಿಸಿ, ತಾನು ಆ ಕೆಲಸ ಮಾಡುವುದಕ್ಕೆ ಒಳಗೆ ಹೋದನು. ರಾಧಾಕೃಷ್ಣ, ಚಂದ್ರ, ಕಿಟ್ಟಣ್ಣರಿಬ್ಬರನ್ನೂ ತನ್ನ ಸಮೀಪಕ್ಕೆ ಕರೆದನು. ಗಡ್ಡದ ಮಾವನ ಬಳಿಗೆ ಹೋಗುವುದಕ್ಕೆ ಅವರಿಗೆ ಅಂಜಿಕೆ. ದೀರ್ಘಾಲೋಚನೆಯಿಂದ ಚಂದ್ರನಿಗೆ ಅದು ತನ್ನ ತಂದೆಯೆಂದು ಖಂಡಿತವಾಯಿತು. ಮೆಲ್ಲ ಮೆಲ್ಲನೆ ಸರಿ ಸರಿದು ತಂದೆಯ ತೊಡೆಯ ಮೇಲೆ ಹೋಗಿ ಕುಳಿತ. ಅವನ ಗಡ್ಡವನ್ನು ನೀವಿದ. ಚಂದ್ರನಿಗೆ ದಿನದ ಆಟದಿಂದ ಆಯಾಸವಾಗಿತ್ತು. ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಮೈಯನ್ನು ಸವರಿ ನಿದ್ದೆ ಮಾಡಿಸಿದನು. ಕಿಟ್ಟಣ್ಣ 'ಸಾಕು

ತಾಯಿಯ ತೊಡೆಯ ಮೇಲೆ ತಲೆಯನ್ನಿಟ್ಟು ನಿದ್ದೆ ಮಾಡಿದ. ರಾಧಾಕೃಷ್ಣ ಮಕ್ಕಳಿಗೆ ಊರಿನ ವಿಚಾರವನ್ನು ಒಂದೊಂದಾಗಿ ಹೇಳಿದನು. ಅವಳು ಈಚಣ್ಣಯ್ಯನವರು ಕೊಟ್ಟ ನಗಗಳ ವಿಚಾರವನ್ನು ಹೇಳಿದಳು. "ನಾಳೆಗೆ ಹೋಗಬೇಕೇ?" ಎಂದಳು ಸತ್ಯ. ಅಂಥ ಸುಖದ ಸಮಯವು ಅಷ್ಟು ಕ್ಷಿಪ್ರದಲ್ಲಿ ಕೊನೆಗೊಳ್ಳುವುದಕ್ಕೆ ಅವಳ ಮನಸ್ಸು ಹೇಗೆ ಒಪ್ಪೀತು?

"ಏನು ಮಾಡಲಿ ಸತ್ಯ, ಈ ಮಗುವನ್ನು ಕೊಂಡುಹೋಗುವುದಕ್ಕೇನೇ ಬಂದದ್ದು. ಅವನ ತಾಯಿಯು ಮಗುವನ್ನು ಬಹಳವಾಗಿ ಹಂಬಲಿಸುತ್ತಿದ್ದಾಳೆ. ಅವಳ ಕಾಯಿಲೆಯೂ ಧೈರ್ಯದ್ದಲ್ಲ. ಎಷ್ಟು ಬೇಗ ಮಗುವನ್ನು ಕೊಂಡುಹೋಗಿ ತೋರಿಸುತ್ತೇವೋ, ಅಷ್ಟು ಉಳಿಯುವ ಧೈರ್ಯ ಹೆಚ್ಚು."

"ಆಗಲಿ, ಇನ್ನು ಎಂದು ಬರುತ್ತೀರಿ? ಬರುವುದು ತಡವಾದರೂ ಚಿಂತೆಯಿಲ್ಲ. ಮೇಲಿಂದ ಮೇಲೆ ಕಾಗದ ಹಾಕಬಾರದೇ?"

"ಸದಾ ತಿರುಗಾಟ ನನಗೆ; ಕಾಗದ ಹಾಕದೆ ಇರುವಷ್ಟು ವಿರಾಮ ಇಲ್ಲವೆಂದಲ್ಲ ಆದರೆ ಹಾಗೆ ಹಾಕುವುದಕ್ಕೆ ಅಂಜಿಕೆ. ಟಪ್ಪಾಲಿಗೆ ಬಂದು ಹೋಗುವ ಕಾಗದಗಳನ್ನೆಲ್ಲ, ಪ್ರತಿ ಕಡೆಯಲ್ಲಿಯೂ ಓದಿನೋಡುತ್ತಿದ್ದಾರೆ. ಅವರ ಕೈಗೆ ಸುಲಭದಲ್ಲಿ ಸಿಕ್ಕಿ, ನನ್ನಿಂದಾಗುವ ಕೆಲಸವನ್ನು ಕೆಡಿಸಿಕೊಳ್ಳಬಾರದಲ್ಲ? ಇರಲಿ, ಮಂಜಯ್ಯನವರೇನಾದರೂ ನಿನಗೆ ಕಾಗದ ಬರೆದಿದ್ದಾರೆಯೋ? ತಮ್ಮನಿಂದೇನಾದರೂ ಸುದ್ದಿ ಇದೆಯೋ?"

"ಅಪ್ಪ ಒಮ್ಮೆ ಇಲ್ಲಿಗೇನೆ ಬಂದಿದ್ದರಲ್ಲ—ನನ್ನನ್ನು ಕರೆದುಕೊಂಡು ಹೋಗುವುದಕ್ಕೆ. ಆಗ ಶ್ಯಾಮನೂ ಮನೆಗೆ ಬಂದಿರಲಿಲ್ಲ. ಹಾಗಾಗಿ ನಾನು ಊರಿಗೆ ಹೋಗಲೇ ಇಲ್ಲ. ಅವರಿಗೆ ಎಷ್ಟು ಬೇಸರವಾಯಿತೋ, ಏನೋ. ಮತ್ತೆ ನಿಮ್ಮ ತಮ್ಮನಿಂದ, ಎಂಟು, ಹತ್ತು ರೂಪಾಯಿ ತಿಂಗಳಿಗೆ ಬರುತ್ತಿದೆ" ಎಂದಳು. ತಂದೆಯೊಡನೆ ಆದ ವಿರಸದ ವಿಚಾರವನ್ನು ಮಾತ್ರ ಹೇಳಲಿಲ್ಲ.

ಊಟದ ಕರೆ ಬಂದಿತು. ಊಟ ಮಾಡಿ ಮಲಗುವ ತನಕ, ಮಲಗಿದ ಮೇಲೆಯೂ, ಅವರ ಮಾತುಕತೆ ನಡೆಯಿತು. ಶ್ಯಾಮ ತನ್ನ ಮತ್ತು ಮಂಗಳೂರಿನ ಕತೆಗಳನ್ನೆಲ್ಲ ಹೇಳಿದ. ಸತ್ಯ ಕಿರಿಪದವಿನ ಸಂಗತಿಗಳನ್ನು ಹೇಳಿದಳು. ರಾಮಣ್ಣನ ವಿಚಾರವನ್ನು ಬಾಯಿ ತುಂಬ ಹೊಗಳಿ ನುಡಿ

ದಳು. "ಸತ್ಯ ಯಾವಾಗಲೂ ಹಾಗೆಯೇ. ಎಷ್ಟೋ ಬಾರಿ ನಾವು ನಂಬಿದವರೇನೆ ಮೋಸಕೊಡುತ್ತಾರೆ ಯಾರ ಸಹಾಯ ಎಣಿಸಲಿಲ್ಲವೋ ಅವರಿಂದಲೇ, ಸಹಾಯ ಬರುತ್ತದೆ. ರಾಮಣ್ಣನ ಋಣವನ್ನು ಊರಿಗೆ ಬಂದ ಮೇಲೆ ತೀರಿಸುತ್ತೇನೆ. ನನಗೆ ಗೊತ್ತು ಅವನ ಸ್ವಭಾವ. ಆ ನೆರೆಯ ಬಳಿಕ ಆತ ನನ್ನನ್ನು ದೇವರೇ ಎಂದು ನಂಬಿದ್ದಾನೆ. ಅವನ ಹೇಳಿಕೆಯಂತೆ ಎಮ್ಮೆಗಳನ್ನು ಕಟ್ಟಿಕೊಂಡದ್ದು ಬಹಳ ಒಳ್ಳೆಯದಾಯಿತು. ನಾಳಿನ ಜೀವನಕ್ಕೂ, ಒಂದು ದಾರಿ ಕಂಡ ಹಾಗಾಯಿತು" ಎಂದ.

ಈ ಎಡೆಯಲ್ಲಿ ಕಿಟ್ಟಣ್ಣನ ಸ್ನೇಹ ಬೆಳೆಯಿಸುವುದು ಮುಖ್ಯ ಕೆಲಸ. "ನಿನ್ನ ಅಮ್ಮನ ಹತ್ತಿರ, ಅಪ್ಪನ ಹತ್ತಿರ ನಾಳೆಗೆಯೇ ಹೋಗುವ" ಎಂದು ವಿಶ್ವಾಸ ಹುಟ್ಟಿಸಿದನು. ಜತೆಗೆ ಉಳಿದ ಮಕ್ಕಳನ್ನು ಸಂತೋಷ ಗೊಳಿಸಬೇಕಾಯಿತು. ಮಾಧವ ತುಂಬ ವಿಚಾರ ಶಾಲಿ. ಆತ ಗಂಗೆ ಶಾರದೆಯರಿಗೆ ಸಮಾಧಾನದ ಮಾತುಗಳನ್ನು ಹೇಳಿದನು.

"ನೀವೇನೂ ಯೋಚಿಸಬೇಡಿ. ನಿಮ್ಮ ತಂದೆ ಬೇಗ ಬಂದಾರು. ನಿಮ್ಮನ್ನು ಮರೆತಿಲ್ಲ. ನಾನೂ ಇನ್ನೊಮ್ಮೆ ಬಂದು ನಾಲ್ಕು ದಿನ ಇದ್ದು ಹೋಗುತ್ತೇನೆ. ಕಿಟ್ಟಣ್ಣನ ತಾಯಿಯ ಕಾಯಿಲೆಯಲ್ಲವಾದರೆ ಎರಡು ದಿನ ಇಲ್ಲಿ ಕುಳಿತಿರಬಹುದಿತ್ತು" ಎಂದನು ರಾಧಾಕೃಷ್ಣ. ಬೆಳಗಿನ ಜಾವದ ತನಕ ಗಂಡಹೆಂಡಿರಿಬ್ಬರು ಮಾತನಾಡುತ್ತಲೇ ಇದ್ದರು. ನಡು, ನಡುವೆ ಮಾತು, ನಡು ನಡುವೆ ನಿದ್ರೆ; ನಡು ನಡುವೆ ಎಚ್ಚರ. ಆಕೆಯ ಹೃದಯ ಇಂದು ತುಂಬ ಉಲ್ಲಾಸವಾಗಿದೆ. ಆ ದೀರ್ಘಕಾಲದ ಕಷ್ಟ ಬೇಸರಗಳನ್ನು ಸಂಪೂರ್ಣವಾಗಿ ಮರೆತಿದೆ. ಬಾನಲ್ಲಿ ಬೆಳ್ಳಿ ಮೂಡುತ್ತಲೇ, ರಾಧಾಕೃಷ್ಣ ಎದ್ದು ಕಲಲನನ್ನು ಕರೆಯಿಸಿ, ಕಿಟ್ಟಣ್ಣನನ್ನು ಹೊರಿಸಿಕೊಂಡು, ಮಂಗಳೂರಿಗೆ ಹೊರಟುಹೋದ. ಅಲ್ಲಿಂದ ಮೊದಲಿನ ಬಸ್ಸಿಗೇನೇ, ಅವನ ಪ್ರಯಾಣ ಸಾಗಿಬಿಟ್ಟಿತು. ತಿರುಗಿ ಕಿರಿಪದವಿನ ಸಂಸಾರದ ಭಾರವೆಲ್ಲ ಶ್ಯಾಮು, ಸತ್ಯರ ಭುಜಗಳನ್ನೇರಿ ಕುಳಿತಿತು.



# ಹದಿನಾಲ್ಕನೆಯ ಅಧ್ಯಾಯ

ರಾಧಾಕೃಷ್ಣ ಬಸ್ಸು ಪ್ರವಾಸಮಾಡಿ, ಕಿಟ್ಟಣ್ಣನನ್ನು ಕರೆದುಕೊಂಡು ಶಿರ್ಶಿಗೆ ಬಂದು, ಅವನ ತಾಯಿತಂದೆಯರಿಗೆ ಒಪ್ಪಿಸಿದನು. ಸುಬ್ಬಮ್ಮ ಮಗುವನ್ನು ಅಗಲಿ ಒಂದು ವರ್ಷ ಪೂರ್ಣ ಕಳೆಯದೆ ಹೋದರೂ, ಮಗುವಿಗೆ ಆ ಸ್ಥಿತಿಯಲ್ಲಿ ತಾಯಿಯ ಗುರುತು ಹತ್ತುವುದೂ ಕಷ್ಟವಾಯಿತು. ಈಚಣ್ಣಯ್ಯ ಅವನನ್ನು ಎತ್ತಿಕೊಂಡು ಕಾಲಮೇಲೆ ಕುಳ್ಳಿರಿಸಿ, ಪತ್ನಿಯ ಬಳಿಯಲ್ಲಿ ಕುಳಿತು, "ಇದು ಅಮ್ಮನಲ್ಲವೇ ಮಗು? ಜ್ವರ ಬಂದಿದೆ ನೋಡು, ಆ ದಿನ ಸರಕಾರದವರು ಹಿಡಿದುಕೊಂಡು ಹೋದದ್ದು?" ಎಂದು ನೆನಪು ಹುಟ್ಟಿಸಬೇಕಾಯಿತು. ಆಕೆ ತನ್ನ ಕ್ಷೀಣ ಹಸ್ತವನ್ನು ನೀಡಿ, ಮಗುವಿನ ಕಪೋಲವನ್ನು ಸವರುತ್ತಾಳೆ. ಎಲ್ಲರ ಮನಸ್ಸಿನಲ್ಲೂ ಹಿಂದಿನ ವಿರಹದ ಚಿತ್ರ ಮೂಡಿ ನಿಂತಿತು. ತಾಯಿ ಮೆಲುವಾಗಿ 'ಕಿಟ್ಟಣ್ಣ' ಎಂದು ಎರಡು ಮೂರಾವೃತ್ತಿ ಕರೆಯುತ್ತಲೇ, ಈಚಣ್ಣಯ್ಯನವರು ಮುಖ ತಿರುಗಿಸಿ ಕಣ್ಣೀರನ್ನು ಉಜ್ಜಿಕೊಂಡರು. ಮಗುವಿಗೂ ದುಃಖ ಬಂದಿತು. "ಅಮ್ಮಾ, ಇಷ್ಟು ದಿನ ಎಲ್ಲಿಗೆ ಹೋಗಿದ್ದೆ? ಸರಕಾರದವರು ನಿನ್ನನ್ನು ಹೊಡೆದರೆ?" ಎಂದು ಪ್ರಶ್ನೆ ಮಾಡಿದನು. ಸುಬ್ಬಮ್ಮ ನಕ್ಕಳು. ಮೆಲುದನಿಯಲ್ಲೇ ಅವನೊಡನೆ ಮಾತನಾಡಿದಳು. ಆ ಗಳಿಗೆಯಲ್ಲಿ ಅವಳ ಜೀವ ತುಂಬಿ ಬಂದಂತೆ ಕಂಡಿತು. "ಯಾರಲ್ಲಿಯೋ, ಮಗುವನ್ನು ಬಿಟ್ಟು ಬಂದಿದ್ದೇನೆ" ಎಂದರೆ ಅವಳ ಕರುಳು ಹೇಗೆ ಒಪ್ಪೀತು? ತನ್ನ ಮಗುವನ್ನು ತಾನು ಕಾಣುವ ತನಕ—'ಆ ಯಾರ' ಮೇಲೆಯೂ ಅವಳಿಗೆ ವಿಶ್ವಾಸವಿರಲಿಲ್ಲ. ಎಷ್ಟೆಂದರೂ ತನ್ನ ಮರಿ ತನ್ನ ಮರಿಯೇ; ಪರರ ಮರಿ ಪರರ ಮರಿಯೇ. ಈಗ ಮಗುವನ್ನು ನೋಡುತ್ತ, "ತನ್ನ ಮರಿಯನ್ನು ಪರರ ಮರಿಯಂತೆ ಕಂಡು ಕೊಂಡಿಲ್ಲ—ಎಂಬುದು ಖಾತ್ರಿಯಾಯಿತು. "ಮಗು ಬಚ್ಚಲಿಲ್ಲ. ಮೊದಲಿಗಿಂತ ತುಂಬಿದೆ; ಮಾತು ಚೆನ್ನಾಗಿ ಆಡುತ್ತಾನೆ." ಎಂದು ಪತಿಯೊಡನೆ ಹೇಳಿದಳು. ಬಳಿಯಲ್ಲಿ ನಿಂತಿದ್ದ ರಾಧಾಕೃಷ್ಣನಾಗ, ತನ್ನ ಹೊಣೆಯನ್ನು ಸತ್ಯಳಿಷ್ಟು ಚೆನ್ನಾಗಿ ನೆರವೇರಿಸಿದಳು, ಎಂಬುದನ್ನು ಮನಗಂಡ.

ಸ್ವಲ್ಪ ಹೊತ್ತಿನಲ್ಲಿ ರಾಧಾಕೃಷ್ಣ, ಜತೆಯಲ್ಲಿ ತಂದಿದ್ದ ನಗಗಳನ್ನು ಈಚಣ್ಣಯ್ಯನವರಿಗೆ ಒಪ್ಪಿಸಿದನು. "ಇದನ್ನು ನೀವು ಕೊಂಡು ಹೋದದ್ದು ನನಗೆ ಗೊತ್ತೇ ಇರಲಿಲ್ಲ" ಎಂದನು. ಅದಕ್ಕವರು "ನೀವು ಯಾಕೆ ಅದನ್ನು ಹಿಂದಕ್ಕೆ ತಂದಿರಿ? ಅಷ್ಟು ಮಕ್ಕಳನ್ನು ಅವರು ಸುಮ್ಮನೆ ಸಾಕಲು ಬರುತ್ತದೆಯೇ? ಆಪತ್ಕಾಲದಲ್ಲಿ ಒತ್ತೆಯಾದರೂ ಇರಿಸಬಹುದಲ್ಲ— ಎಂದು ಬಿಟ್ಟುಬಂದೆ" ಎಂದರು. ರಾಧಾಕೃಷ್ಣನು ನಗುತ್ತ ಹೊರಟು ಹೋದ. ಅವನ ಒಂದು ಕೆಲಸವಾಯಿತು. ಮಗುವು ಬಂದುದರಿಂದ ತಾಯಿಯ ಉತ್ಸಾಹವು ಹೆಚ್ಚಿ, ಆಕೆ ಬೇಗನೆ ಎದ್ದು ಕುಳಿತಾಳು ಎಂಬ ವಿಶ್ವಾಸವುಂಟಾಯಿತು. ಅವನಿಗೆ ನಾಗೇನಹಳ್ಳಿಯ ಚಿಂತೆ ತಿರುಗಿ ತೊಡಗಿತು. ಆ ಊರನ್ನು ತಿರುಗಿ ನೋಡುವ ತನಕ ಎಲ್ಲಿಲ್ಲದ ಆತುರ. ಡಾಕ್ಟರರು ತಾವು ನಡೆಯಿಸಿದ ಸಂಧಾನದ ವಾರ್ತೆಯನ್ನು ಹೇಳಿದರು. ಆದರೂ ಅವನ ಕಾತರ ಹೋಗದು. "ಈಚಣ್ಣಯ್ಯ, ನೀವು ಯೋಚನೆ ಬಿಟ್ಟು ಇಲ್ಲಿಯೇ ಕುಳಿತಿರಿ. ಇವರು ಹುಶಾರಾಗುವ ತನಕ ಏಳುವುದು ಬೇಡ. ನಿಮ್ಮ ಮನೆಯ ಜವಾಬ್ದಾರಿ ನನಗಿರಲಿ. ನಾಳೆ ಬೆಳಿಗ್ಗೆಯೇ, ನಾನು ನಾಗೇನಹಳ್ಳಿಗೆ ಹೋಗುತ್ತೇನೆ" ಎಂದು ಹೇಳಿ ಹೋದನು.

ಮರುದಿನ ನಾಗೇನ ಹಳ್ಳಿಯನ್ನು ಸೇರುವ ತನಕ, ಅದೇ ಬಗೆಯ ಆತುರ ಅವನದು. ಡಾಕ್ಟರರ ಮಾತನ್ನು ಸಾಹೇಬರು ಕೇಳಿದ್ದೆಂಬುದು ಖಂಡಿತವಾಯಿತು. ಪುಣ್ಯಾತ್ಮ, ಅಷ್ಟನ್ನಾದರೂ ಮಾಡಿದನಲ್ಲ. ಬದಲಿಗೆ ಪೋಲೀಸರಿಗೆ ತಿಳಿಸಿ, ಅವರು ಸಿಕ್ಕಿದವರಿಗೆ ಹಿಂಸೆಕೊಡಲು ತೊಡಗಿದ್ದರೆ, ಏನು ಮಾಡಬೇಕಿತ್ತು.? ಪೋಲೀಸರು ಬಂದು ಬಡಿದರೂ ತಿಂದು ಕುಳಿತಿರಬೇಕು. ಈಗಾಗಲೇ ಜನರ ಮೇಲೆ ಅವರು ತಿರುಗಿ ಬಿದ್ದಿದ್ದಾರೆ. ಊರಲ್ಲಿ ಒಂದು ಸಣ್ಣ ಕಳ್ಳತನವಾಯಿತೆಂದು ಅವರಿಗೆ ತಿಳಿಸುವುದಕ್ಕೆ ಹೋದರೆ, 'ನಿಮ್ಮಪ್ಪ ಗಾಂಧೀ ಇದ್ದಾನಲ್ಲಾ, ಅವರಿಗೆ ಹೇಳಿ' ಎನ್ನತೊಡಗಿದ್ದಾರೆ. ಅವರ ಕಣ್ಣಿಗೆ, ಸತ್ಯಾಗ್ರಹ ಮಾಡಿದವರೂ, ಮಾಡದವರೂ—ಎಲ್ಲರೂ ಅಪರಾಧಿಗಳಾಗಿ ಕಾಣಿಸುತ್ತಿದ್ದಾರೆ. ಇಂಥ ಸಮಯದಲ್ಲಿ ತನ್ನಂತಹನು, ಆ ಜನರೊಡನೆಯೇ ಇದ್ದು ಅವರಿಗೆ ಧೈರ್ಯ ಹೇಳುವುದು ತನ್ನ ಕೆಲಸ ಎಂದು ತಿಳಿದನು.

ಆ ಹಳ್ಳಿಗೆ ಹೋಗಿ ಕುಳಿತ ಮೇಲೆ, ಅಲ್ಲಿನ ಯೋಚನೆಯೇ ಬಲವಾಯಿತು. ಆ ಊರಿನ ಬೇಸಾಯದ ಪರಿಸ್ಥಿತಿ ತುಂಬ ಕಷ್ಟವಾಗಿತ್ತು. ಈಚಣ್ಣಯ್ಯನವರಂತೆ ಭೂಮಿ ಕಳೆದುಕೊಳ್ಳದಿದ್ದವರು, ನಾಲ್ಕಾರು ಮಂದಿ ರೈತರಿದ್ದಾರೆ. ಅವರ ಕಣ್ಣಮುಂದೆ ಭೂಮಿ ಇದ್ದೂ ಇಲ್ಲದಾಗಿದೆ. ಸಾಹೇಬರ ಒಕ್ಕಲನ್ನು ತಪ್ಪಿಸಿ ತರುವಂತಿಲ್ಲ. ಅವರು, ಊರವರೇ; ಪರಿಚಿತರು. ನಾಳೆ ಸಾಹೇಬರು ಅಲ್ಲಿಯೇ ಬೇರು ಬಿಡದಂತೆ ನೋಡುವುದಕ್ಕೆ ಅವರನ್ನು ಕದಲಿಸದೆ ಇರುವುದು ಒಳಿತು. ಉಳಿದ ಎಷ್ಟೋ ಜನರು ತಮ್ಮ ಹೊಲಗದ್ದೆಗಳ ಬೇಸಾಯವನ್ನು ಘಟ್ಟದ ಕೆಳಗಿನ ಕೂಲಿಗಳಿಂದ ಮಾಡಿಸಬೇಕಿತ್ತು. ಸರಕಾರದ ಬೆದರಿಕೆಗೋ ಅಥವಾ ತಮಗೇನೇ ಅಲ್ಲಿಯ ಬದುಕಿನ ಮೇಲೆ ಭೂಮಿಯನ್ನು ಗೇಣಿಗೆಮಾಡಲು ಧೈರ್ಯವಾಗದೆಯೋ, ಕರಾವಳಿಗೆ ಓಡಿಹೋದರು. ಇತ್ತ ತಾವೇ ದುಡಿದು, ದಣಿದರೂ, ಫಸಲು ಬರುವ ವೇಳೆಗೆ ಸರಕಾರದವರು ಅದನ್ನು ಒತ್ತಾಯದಿಂದ ಸಾಗಿಸಿಕೊಂಡು ಹೋದಾರು—ಎಂಬ ಭೀತಿಯಿದೆ. ಇತ್ತ ಮಹಾಬಲ ಭಟ್ಟರ ಒಕ್ಕಲು ಬೇಸಾಯ ಮಾಡಿ, ಹೊಸ ಧನಿಗೆ ಗೇಣಿಸಲಿಸುವೆನೆಂದು ಯೋಚನೆಮಾಡಿದರೂ, ಬೇಸಾಯ ಮಾಡಿದರೆ, ಮಾರಿಯಮ್ಮನ ಆಣೆಯನ್ನು ಅವರು ಹಾಕಿದ್ದಾರೆ. ಈ ತಂಟೆ ಬೇಡವೇ ಬೇಡವೆಂದು ಆತನು ಊರು ಬಿಟ್ಟು ಹೋದನು. ಊರಲ್ಲಿ ಉಳಿದವರು ಬಹು ಸ್ವಲ್ಪ ಮಂದಿ; ಗದ್ದೆಗಳೇನೋ ಇದ್ದಾವೆ. ಕೆಲವು ಈಗಾಗಲೇ ಬೆಳೆಯಾಗದೆ ಪಾಳುಬಿದ್ದಿವೆ. ಮಿಕ್ಕವು ಪಾಳುಬೀಳುವವು.

ಸುಲೇಮಾನ್ ಸಾಹೇಬರು ವಹಿಸಿಕೊಂಡ ತೋಟ, ಭೂಮಿಗಳೆರಡೂ ಒಕ್ಕಲಿಲ್ಲದೆ ಹಾಳಾಗುವ ಸ್ಥಿತಿ ಬಂದಿದೆ. ತೋಟದ ಆರೈಕೆಗೆ ಬಂದ ಆಳುಗಳು, ಬೆಂಕಿಯ ಪ್ರಕರಣ ನೋಡಿ ಓಡಿ ಹೋದವರು, ತಿರುಗಿ ಆ ಊರಿಗೆ ಕಾಲಿರಿಸಲಿಲ್ಲ. ಮಕರ ಸಂಕ್ರಾಂತಿಯ ತನಕ, ಬೆಳೆದ ಅಡಿಕೆಯನ್ನು ಇಳಿಸುವುದಕ್ಕೆ ನಾಲ್ಕಾರು ಮಂದಿ ಬಂದು, ಅಷ್ಟು ಕೆಲಸ ಮಾಡಿಹೋದರು. ಅನಂತರ ಅವರ ಸಾಹೇಬರೂ ಇಲ್ಲ, ಮುಕಾದಮೂ ಇಲ್ಲ. "ಪರಿಸ್ಥಿತಿ ಶಾಂತವಾದ ಮೇಲೆ ನೋಡುವ. ಊರಿನವರಿಗೆ ಸಿಟ್ಟು ಬಂದಿರುವಾಗ, ನಾವು ಹಟ ಸಾಧಿಸಿ ಬೆಳೆಬೆಳೆದರೆ, ಅದನ್ನು ಸುಟ್ಟುಹಾಕಿಯಾರು" ಎಂದು ಅವರು ಉದಾಸೀನಭಾವ ತಾಳಿದರು.

ಯುಗಾದಿಯ ವೇಳೆಗೆ ತಮ್ಮ ತಮ್ಮ ಶಿಕ್ಷೆಗಳನ್ನು ಅನುಭವಿಸಿ ಊರಿನ ರೈತರು ಒಬ್ಬೊಬ್ಬರಾಗಿ ಮರಳಿ ಬಂದರು. ಅಂಗಡಿ ವ್ಯಾಪಾರ ಮಾಡುತ್ತಿದ್ದ ನಾಯಕರು ತಮ್ಮ ಗುಡಿಯನ್ನು ಸೇರಿದರು. ಅವರ ಮನೆಯು ಮುಚ್ಚಿತ್ತು. "ಅವಳು ತಾಯಿ ಮನೆಗೆ, ಹೊನ್ನಾವರಕ್ಕೆ, ಹೋಗಿರಬೇಕು. ಮಕ್ಕಳನ್ನು ಕಟ್ಟಿಕೊಂಡು ಇಲ್ಲಿ ಯಾವ ಧೈರ್ಯದ ಮೇಲೆ ದಿನ ಕಳೆದಾಳು? ನಾನೂ ನಾಲ್ಕು ದಿನದ ಮಾತಿಗೆ ಅಲ್ಲಿಗೆ ಹೋಗಿಬರುತ್ತೇನೆ" ಎಂದುಕೊಂಡರು. ಮನೆ ಅಂಗಡಿಗಳನ್ನೆಲ್ಲ ಹುಡುಕಿ ನೋಡಿದರೆ, ಬೆಲೆಬಾಳುವ ಯಾವ ಸಾಮಾನೂ ಇದ್ದಿರಲಿಲ್ಲ. ಎಲ್ಲವೂ ತಮಗೆ ವಿಧಿಸಿದ ದಂಡದ ಹಣಕ್ಕಾಗಿ ಹರಾಜಾಗಿರಬೇಕು—ಎಂದು ಊಹಿಸಿ, ತಮ್ಮ ಸಿಟ್ಟನ್ನು ಹೆಚ್ಚಿಸಿಕೊಂಡು ಹೋದರು. ಮಹಾಬಲ ಭಟ್ಟರ ಅಣ್ಣ ಗೋಪಣ್ಣ ಭಟ್ಟರು ಯುಗಾದಿಯಾದ ಎಂಟು ದಿನಕ್ಕೆ ಬಂದರು. ಶಿರ್ಶಿಗೆ ಬರುತ್ತಲೇ ಊರಿನ ಸುದ್ದಿಯು ತಿಳಿಯಿತು. ತಮ್ಮ ಮಹಾಬಲ, ಸಾಗರ ಸೀಮೆಗೆ ಹೋದದ್ದು, ಅವರ ಕುಟುಂಬದ ಮನೆಯು ಅಗ್ನಿ ದೇವರಿಗೆ ತುತ್ತಾದದ್ದು, ಗಂಗೆ ಶಾರದೆಯರು ಮಂಗಳೂರಿಗೆ ಹೋದದ್ದು, ಎಲ್ಲ ಸಂಗತಿಗಳೂ ತಿಳಿದುವು. ಅಲ್ಲಿಂದ ನೆಟ್ಟಗೆ ನಾಗೇನಹಳ್ಳಿಗೆ ಬಂದರು. ತನ್ನ ಮನೆಯೂ, ರಾವಣಾಸುರನ ಪಟ್ಟಣವಾಯಿತೋ ಎಂದು ನೋಡಲು—ಮೊದಲು ಹೋದರು. ಹಾಗೇನೂ ಆಗಿರಲಿಲ್ಲ. ಮನೆಗೆ ಬೀಗ ಮುದ್ರೆ ಗಟ್ಟಿಯಾಗಿ ಒತ್ತಿತ್ತು. ಮನೆ ತಮ್ಮದಾಗಿಯೇ ಉಳಿದಿರಲಿಲ್ಲ. ಯಲ್ಲಾಪುರ ಸಾಹೇಬರಿಗೆ ಅದು ವಿಕ್ರಯವಾಗಿತ್ತು ಎಂಬುದು ತಿಳಿದಿತ್ತು. ದಾರಿಯಲ್ಲಿ ಒಬ್ಬಿಬ್ಬರು ಹಳೆಯ ಒಕ್ಕಲುಗಳು ಅವರನ್ನು ಸಂಧಿಸಿದರು. "ಅಯ್ಯಾ ಎಂದು ಬಂದಿರಿ? ಎಂದು ಮುಗಿಯುತ್ತದೆ ಇದೆಲ್ಲ. ಬೇರೆ ಊರುಗಳಲ್ಲಿ ಇನ್ನೂ ಜೋರಾಗುತ್ತಲೇ ಇದೆಯೆಂದು ಕೇಳುತ್ತೇವೆ" ಎಂದರು. "ನಮ್ಮ ನಾಗೇನಹಳ್ಳಿ ಮಾತ್ರ ಮುಗಿದ ಹಾಗೆಯೇ" ಎಂದರು ಆ ಜನ. ಇವರಿಗೂ ಹಾಗೆಯೇ ಅನಿಸಿತು. ಅವರಿಗೆ ತಮ್ಮ ಮನೆಯ ಧೂಳು ತುಂಬಿದ ಜಗುಲಿ, ಅಂಗಳವನ್ನು ನೋಡಿದಾಗಲೇ ವ್ಯಥೆ ಉಕ್ಕಿತು. ನಾಳೆ ದಿನವಾದರೂ ಗಾಂಧಿಯವರ ಕೃಪೆಯಿಂದ ತಮ್ಮ ಬದುಕು ತಮಗೆ ಸಿಕ್ಕೀತು ಎಂದು ಒಳ ದನಿ ನುಡಿಯುತ್ತಿತ್ತು. ಆದರೆ ಅವರ ಎದೆ ಬಡಬಡಿಸಿದ್ದು, ತಮ್ಮ ಕಾವಲಿಲ್ಲದ ಅಡಕೆ ತೋಟವನ್ನು ನೋಡಿ. ವರ್ಷ

ವೆಲ್ಲ, ದಂಬೆ ನೀರಿದ್ದರೂ, ನೀರಿನ ಹನಿಯನ್ನು ಅದಕ್ಕೆ ಚೇಪಿದವರಿಲ್ಲ. ಮರಗಳೆಲ್ಲ ಬಾಡಿದ್ದುವು. ಮರಗಳಲ್ಲಿ ಸಿಂಗಾರ ಹೂವು ಹೆಸರಿಗೆ ಮಾತ್ರ ಇತ್ತು. ಬೇಲಿಯ ಹೊರಗಿನ ಲಂಟಾನಗಳು ತೋಟವನ್ನು ಆಕ್ರಮಿಸಿ ದುವು. ಅವರ ಎದೆಯು ಬಿಸಿ ಉಸಿರನ್ನು ಕರೆಯಿತು. "ಒಂದು ವರ್ಷ ಹೀಗೆ ಹಾಳಾದ ತೋಟ, ನಾಲ್ಕು ವರ್ಷಕಾಲ ದುಡಿದರೆ ಸಮವಾಗುತ್ತದೆ ಯೇ?" ಎಂದರು. ಈ ಎಲ್ಲ ವ್ಯಥೆಯನ್ನು ಹೊತ್ತುಕೊಂಡೇನೆ ಈಚಣ್ಣ ಯ್ಯನವರ ಮನೆಗೆ ಹೋದುದು. ತನ್ನ ನೆಲವನ್ನು ನೋಡುವ ಮೊದಲು ತನ್ನ ಜನರನ್ನು ನೋಡುವುದಕ್ಕೆ ಮನಸ್ಸಾಗಲಿಲ್ಲ. ಮನೆಯ ಕಡೆಗೆ ಹೋಗುತ್ತ ತಮ್ಮ ಮುದಿ ಚಿಕ್ಕ ತಂದೆ, ಹೆಂಡತಿ, ಮಕ್ಕಳ ನೆನಪಾಯಿತು. ಮಕ್ಕಳನ್ನು ನೋಡುವುದು, ಇನ್ನೆಷ್ಟು ದಿನಕ್ಕೋ—ಎಂದು ತೋರಿತು.

ಮನೆಯಲ್ಲಿ ತಮ್ಮವರ ಪ್ರೀತಿಯ ಸ್ವಾಗತವಾಯಿತು. ಆದರೆ ಅಂದಿನ ಮನಸ್ಸಿನ ಪರಿಸ್ಥಿತಿಯಲ್ಲಿ ಅವರಿಗೆ ಯಾವುದೂ ಬೇಡವಾಗಿ ಕಾಣಿಸು ತ್ತಿತ್ತು. ಒಂದೆರಡು ದಿನ ಅರೆಮರುಳರಂತೆ, ಮನೆಯಲ್ಲಿಯೂ, ಊರ ಲ್ಲಿಯೂ ಸುತ್ತಾಡಿದರು. ಅಷ್ಟೊಂದು ಜನರು ಈಚಣ್ಣಯ್ಯನವರ ಮನೆ ಯಲ್ಲಿ ಉಂಡು ಕುಳಿತಿರುವುದು ಅವರ ಮನಸ್ಸಿಗೆ ಒಪ್ಪಲಿಲ್ಲ. ಯಾವ ಪುಣ್ಯಾತ್ಮ ಇವರ ಹೊಟ್ಟೆಗೆಲ್ಲ ತಂದು ಹಾಕುತ್ತಾನೋ? ಎಷ್ಟು ದಿವಸ ಹೀಗೆಯೇ ಸಾಗಬಹುದು! ಆದರೆ ದೇವರು ರಟ್ಟೆಯನ್ನು ಗಟ್ಟಿಯಾಗಿ ಕೊಟ್ಟಿರುವಷ್ಟು ದಿನ ಹೀಗೆ, ಕುಳಿತು ತಿನ್ನುವುದಕ್ಕೆ ಬಂದೀತೆ? ತಮಗೆ ಏನೇನೂ ಸಂಬಂಧವಿಲ್ಲದ ರಾಧಾಕೃಷ್ಣನಂತಹ ಒಬ್ಬ ವ್ಯಕ್ತಿ, ಭಿಕ್ಷೆಯೆತ್ತಿ ತಂದು, ತಮ್ಮನ್ನು ಸಾಕುವುದರಲ್ಲಿ ಏನು ಅರ್ಥ? ನಾಳಿನ ದಾರಿಯನ್ನು ನಾವು ನೋಡಬೇಡವೇ? ಈ ವಿಚಾರಗಳು ಮೊಳೆಯುತ್ತಿದ್ದಾಗಲೇ, ತಮ್ಮ ತೋಟ, ಮನೆ ಗದ್ದೆಗಳ ಚಿತ್ರವೂ ಮನಸ್ಸಿನೆದುರಿಗೆ ಮೂಡುತ್ತವೆ. "ಅವನ್ನು ತಾನು ಬಿಟ್ಟು ಕುಳಿತುಕೊಳ್ಳುವುದರಲ್ಲಿ ಅರ್ಥವೇ ಇಲ್ಲ. ಅಲ್ಲಿಯೇ ಹೋಗಿ ಕುಳಿತುಕೊಂಡು ಬಿಡುತ್ತೇನೆ. ದೇವರ ಸತ್ಯಕ್ಕೆ, ಆ ಮನೆಯು ನನ್ನದು. ನನ್ನದೆಂದೇ ತಿಳಿದು ಸ್ಥಾಪನೆಯಾಗುತ್ತೇನೆ. ಸಾಹೇ ಬರು ಓಡಿಸುವುದಾದರೆ ಓಡಿಸಲಿ. ಒಂದು ಸತ್ಯಾಗ್ರಹದ ಹಿಂದೆ ಇನ್ನೊಂದು ಸತ್ಯಾಗ್ರಹ ಮಾಡಬೇಕಾದೀತು" ಎಂದುಕೊಂಡರು. ಆ ಯೋಚನೆಯು ಬರುತ್ತಲೇ ಅವರ ಹೆಮ್ಮೆ ತಲೆಯೆತ್ತಿತು. "ನನ್ನ ಭೂಮಿಯಿಂದ ಬತ್ತ,

ಅಡಿಕೆ ಸಾಗಿಸುವವರಿದ್ದರೆ, ಅದು ತನ್ನ ರುಂಡವನ್ನು ನೆಲಕ್ಕೆ ಇಳಿಸಿದ ಮೇಲೆಯೇ ಸಾಧ್ಯ" ಎಂದುಕೊಂಡರು. ಮಹಾಬಲನ ವಿಷಯ ನೆನಪಿಗೆ ಬಂತು. ಮನೆಯವರಿಂದ 'ಅವನ ಮನೆ, ಅವನಿಂದಲೇ ನಾಶವಾಯಿತು' ಎಂಬ ಸಂಗತಿಯನ್ನು ಕೇಳಿದ್ದರು. 'ತಾನು ಅಂಥ ಹುಚ್ಚು ಕೆಲಸ ಮಾಡ ಲಾರೆ. ಅಲ್ಲದೆ ನೆಂಟರ ಮನೆಯ ಅನ್ನಕ್ಕೂ ಹೋಗಿ ಬಿದ್ದಿರಲಾರೆ. ಪ್ರಸಂಗ ಬಂದರೆ, ನೇಗಿಲು ಹಿಡಿದಾದರೂ ತನ್ನ ಅನ್ನ ತಾನು ದೊರಕಿಸಿ ಕೊಳ್ಳುತ್ತೇನೆ' ಎಂದು ನಿರ್ಧರಿಸಿದರು.

ಮನೆಯಲ್ಲಿ ಅವರ ಚಿಕ್ಕಪ್ಪನೂ ಅದೇ ವಿಚಾರವನ್ನು ಒತ್ತಿ ಹೇಳಿ ದರು. "ನಾಳೆ—ಸರಕಾರದವರಲ್ಲ ಅವರ ಅಪ್ಪ ಬಂದರೂ, ನಮ್ಮ ಮನೆ ಯನ್ನು ನಮಗೆ ಕೊಡಿಸಲೇ ಬೇಕು. ಐದು ಖಂಡಿ ಅಡಿಕೆಗಳು ಬರುವ ತೋಟ; ನೂರು ಮಾನಿಗೆ ಅಕ್ಕಿ ಹುಟ್ಟುವಷ್ಟು ಭೂಮಿಯದು. ದುಡ್ಡು ಕಾಸಿಗೆ ಹರಾಜು ಮಾಡಲಿಕ್ಕೆ ಯಾರು ಅವರಿಗೆ ಹೇಳಿದರಂತೆ. ಹರಾಜಿನ ನೋಟೀಸು ನಮಗೆ ಮುಟ್ಟಲೇ ಇಲ್ಲ. ನಾಳೆ ಕೋರ್ಟಿಗೆ ಹೋದರೂ, ಈ ಲಿಲಾವು ಸಿಂಧುವಾಗಲಿಕ್ಕಿಲ್ಲ.' ಎಂದು ಮೊದಲಾಗಿ ಉಪದೇಶಮಾಡಿ ದರು. ಸರಿ, ಎಲ್ಲರ ಮನಸ್ಸಿನಲ್ಲಿಯೂ ತಮ್ಮ ಮನೆಗೇನೆ ಹೋಗಿ ಕುಳಿತುಕೊಳ್ಳುವುದೆಂದು ನಿಶ್ಚಯವಾಯಿತು. ಆದರೆ ತಿರುಗಿ ಕೆಲಸ ಗಳನ್ನು ತೊಡಗುವುದಕ್ಕೆ ಬೇಕಾಗುವ ದನ, ಕೋಣ, ಪಾತ್ರೆ ಪರಡಿ ಪ್ರತಿಯೊಂದನ್ನೂ ಕೂಡಿಸಿಯೇ ಆಗಬೇಕು. ಅವರ ಮಾವನ ಮನೆಯ ಸಂಬಂಧ ಗೋಕರ್ಣದಲ್ಲಿ. ಆದುದರಿಂದ ಅಲ್ಲಿಗೆ ಪಯಣ ಹೊರಟರು. ಗೋಪಣ್ಣನವರಿಗೂ ವತನವಿತ್ತು; ಅವರ ಮಾತಿಗೂ ವತನವಿತ್ತಾದುದರಿಂದ, ಬಂಧು ಮಿತ್ರರಿಂದ ಸಹಾಯ ದೊರಕಿಸಿಕೊಳ್ಳು ವುದು ಕಷ್ಟವಾಗಲಿಲ್ಲ. ನಗದು ಹಣ, ಎರಡೆರಡು ಜತೆ ಕೋಣ, ಒಂದು ಘನವಾದ ಎಮ್ಮೆ, ಪಾತ್ರೆ ಪರಡಿ, ಅಲ್ಲದೆ ತಮ್ಮ ಭಾವನ ಭೂಮಿಯಿಂದ ಮೂರು ಮಂದಿ ಒಕ್ಕಲುಗಳನ್ನೂ ಹೊರಡಿಸಿಕೊಂಡು, ಅವರು ಸ್ವಗ್ರಾಮವನ್ನು ಸೇರಿದರು. 'ಆ ಒಂದು ವರ್ಷ, ಕೃಷಿ ಅಷ್ಟೊಂದು ಪಸಂದವಾಗಿ ಆಗಲಾರದಾದರೂ, ಮುಂದಿನ ವರ್ಷ ಕ್ಷೇಮ ವಾದೀತು' ಎಂದುಕೊಂಡರು. ಒಂದು ವರ್ಷ ಮೂರು ತಿಂಗಳ ನಂತರ ತಮ್ಮದು ಅಲ್ಲವಾದ ಮನೆಯಲ್ಲಿ, ಅದು ತಮ್ಮದೇ ಎಂಬ ಧೈರ್ಯದಿಂದ ಹೋಗಿ ಕುಳಿತುಬಿಟ್ಟರು.

ಈ ನಡುವೆ ರಾಧಾಕೃಷ್ಣನ ಪರಿಚಯು ಅವರಿಗೆ ಸಾಕಷ್ಟು ಉಂಟಾಯಿತು. ತಮ್ಮ ಹಿತಚಿಂತಕನೆಂಬುದರಿಂದ ಮುಂದಿನ ಮಾರ್ಗ ನಿಶ್ಚಯವಾದ ಮೇಲೆ "ಏನು? ನನ್ನ ಏರ್ಪಾಡು ಸಮನಲ್ಲವೇ"? ಎಂದು ಅವನನ್ನು ಕೇಳಿದರು. ಆತ ನಗುತ್ತ "ವ್ಯವಹಾರದ ರೀತಿಯಿಂದ ಅದೊಂದು ತಪ್ಪಲ್ಲ" ಎಂದನು. ಇನ್ನು ತತ್ವಶಃ ತಪ್ಪಾದೀತೇ—ಎಂಬುದನ್ನು ಮಾತ್ರ ಈ ಸಂದಿಗ್ಧದಲ್ಲಿ ಹೇಳಲಾರ. ಈಗಂತೂ ಮನೆ, ಕೋಟೆ, ಗೋಪಣ್ಣ ಭಟ್ಟರ ಸ್ವಾಧೀನದಲ್ಲಿಯೇ ಇದೆ. ಅವರೆನ್ನುವ ಹಾಗೆ "ಸಾಹೇಬರು ಸಿವಿಲಿಗೆ ಹೋಗಬೇಕು. ಭೂಮಿಯ ಯಜಮಾನ ಜೈಲಿಗೆ ಹೋದಾಗ ಅವನಿಗೆ ನೋಟೀಸು ಇಲ್ಲದೆ, ಅವನ ಆಸ್ತಿ ಹರಾಜಾಯಿತು. ಭೂಮಿಯ ಸ್ವಾಧೀನತೆ ಅವರಿಗೆ ಕೊಟ್ಟ್ಯೋ ಇಲ್ಲ" ಎಂಬುದು ಲೌಕಿಕ. ಅಂತೂ ಗೋಪಣ್ಣ ಭಟ್ಟರು ಧೈರ್ಯಕ್ಕೇನೂ ಕಡಿಮೆಯಲ್ಲ. ಈ ನಡುವೆ ಮಹಾಬಲ ಭಟ್ಟರ ಒಕ್ಕಲು ತಿಮ್ಮ ಬಂದು "ಅಯ್ಯಾ ನಾನೇನು ಮಾಡಲಿ? ನಿಮ್ಮ ಸಾಹೇಬರಿಗೆ ಗೇಣಿಕೊಟ್ಟರೆ, 'ಶಿರ್ಶಿಯ ಅಮ್ಮನವರ ಆಣೆ' ಹಾಕಿದ್ದಾರಲ್ಲ. ಅವರ ಈ ಪಂಚಾಯಿತಿಯೇ ನನಗೆ ಬೇಡವೆಂದು ಕಾಣುತ್ತದೆ. ನಾನು ಊರು ಬಿಡುತ್ತೇನೆ?" ಎಂದನು. ಕೇಳಿದ ಇವರು "ಭೂಮಿ ಅದಕ್ಕೆ ಬಿಡಬೇಕೇನು? ಮಹಾಬಲನ ಲೆಕ್ಕಕ್ಕೆ ನನ್ನ ಕೈಗೆ ಗೇಣಿ ಕೊಡಬಹುದಲ್ಲವೆ? ಕಳೆದ ವರ್ಷ, ಊರಿನಲ್ಲಿ ಗಂಡು ಹುಳಗಳು ಇಲ್ಲದುದನ್ನು ಕಂಡು ಸಾಹೇಬರು ಪಾರುಪತ್ಯ ಮಾಡಿದರೆಂದು, ನಾವೆಲ್ಲ ಊರಿಗೆ ಬಂದ ಮೇಲೆಯೂ ಆಗಲಿಕ್ಕಿಲ್ಲ" ಎಂದರು.

"ಅಯ್ಯಾ, ಹಾಗೆಲ್ಲ ನಾವು ಹಟ ಸಾಧನೆ ಮಾಡಿದರೆ, ಪೋಲೀಸರು ಬಂದು ಎಳೆದು, ಮನೆಯಿಂದ ಹೊರಗೆ ಹಾಕಿ, ಹೊಡೆದು ಗಲಾಟೆ ಮಾಡಿದರೆ ಏನು ಮಾಡುವುದು?"

ಇನ್ನೊಂದು ಸಾರಿ ಹಾಗೆ ಮಾಡುತ್ತಾರಂತೇನು? ದೇವರು ಬುದ್ಧಿ ಕೊಟ್ಟರೆ ಹಾಗೆಯೇ ಮಾಡಲಿ. ಆಗ ದೇವರು ನಮಗೂ ಸಮನಾದ ಬುದ್ಧಿಯನ್ನು ಕೊಟ್ಟಾನು. ಆದರೆ ನನ್ನ ಮನಸ್ಸಿಗೆ ಅನಿಸುತ್ತದೆ—ಗಾಂಧೀಜಿಯವರಿಗೆ ಈ ಸಾರಿ ಜಯವಾಗುತ್ತದೆಯೆಂದು. ಇದೇ ಉಢಾಳರು, ತಿರುಗಿ ಗಾಂಧೀ ಟೋಪಿಯವರಿಗೆ ಕಂಡಲ್ಲಿ ಗೋಣು ಬಗ್ಗಿಸುವ ದಿವಸ

ಗಳು ಬಂದಾವು” ಈ ಮಾತುಗಳಿಂದ ತಿಮ್ಮನ ಮನಸ್ಸಿನಲ್ಲಿ “ಕೂಡಿದಷ್ಟು ಸಾಗುವಳಿ ಮಾಡುತ್ತೇನೆ. ನಾಳೆ ಆದದ್ದಾಗಲಿ” ಎಂದು ತೋರಿತು.

* * * * *

ಈಚಣ್ಣಯ್ಯನವರು ಮಳೆಗಾಲ ಬರುವುದೆಂಬ ಆತುರದಿಂದ ತಮ್ಮ ಊರು ಮನೆಯನ್ನು ಸೇರಿದರು. ಸುಬ್ಬಮ್ಮನವರ ಬೇನೆ ನಿವಾರಣೆಯಾಯಿತು. ಆದರೆ ಅಶಕ್ತಿ ಬಹಳವಿದ್ದುದರಿಂದ, ಡಾಕ್ಟರರು “ಮಗುವೂ, ನಿಮ್ಮ ಹೆಂಡತಿಯೂ, ಮಳೆಗಾಲ ಕಳೆಯುವ ತನಕ ಇಲ್ಲಿಯೇ ಇರಲಿ. ಬೇರೆ ಬಿಡಾರಮಾಡಬೇಕಿಲ್ಲ. ನಮ್ಮ ಮನೆಯಲ್ಲಿಯೇ ಇರುತ್ತಾರೆ. ಇಂಥ ಅಶಕ್ತಿ ತುಂಬಿರುವಾಗ, ಹಳ್ಳಿಯನ್ನು ಸೇರಿದರೆ ಉಪಚಾರಕ್ಕೆ ಕಷ್ಟವಾದೀತು. ಅವರಿಗೆ ವಿಶ್ರಾಂತಿ ಬೇಕು, ಅನುಪಾನವು ಬೇಕು” ಎಂದರು. ಆ ಮಾತನ್ನು ರಾಧಾಕೃಷ್ಣನೂ ಸಮರ್ಥಿಸಿದನು. ಈಚಣ್ಣಯ್ಯ ಊರಿಗೆ ಹೊರಡುತ್ತ ನಮ್ರತೆಯಿಂದ ಕೈ ಜೋಡಿಸಿ “ಈಗ ನನ್ನ ಕೈ ಬರಿದಾಗಿದೆ, ಮುಂದೆ ದೇವರು ನಡೆಯಿಸಿದರೆ ನಿಮ್ಮ ಋಣ ತೀರಿಸುತ್ತೇನೆ. ಅಲ್ಲಿಯ ತನಕ ಈ ಅಡ್ಡಿಗೆಯ ಸರ ನಿಮ್ಮಲ್ಲಿ ಇರಲಿ” ಎಂದರು. ನಾಡಕರ್ಣಿಯವರು ಸಿಟ್ಟಾದರು. ನಗುವೂ ಬಂದಿತು. “ಹೋಗಿ, ಹೋಗಿ; ದುಡ್ಡಿನ ಆಸೆಗೆ ನಾನು ಇಷ್ಟೆಲ್ಲ ಮಾಡಿಲ್ಲ” ಎಂದರು.

“ಅದು ಗೊತ್ತಿದ್ದರೂ, ಶಕ್ತಿಯಿರುವಷ್ಟು ದಿನ ನಮ್ಮ ಋಣವನ್ನು ನಾವು ತೀರಿಸುವುದು ಕರ್ತವ್ಯ” ಎಂದರು. ಆದರೂ ನಾಡಕರ್ಣಿಯವರು ಆ ಚಿನ್ನವನ್ನು ಮುಟ್ಟಲಿಲ್ಲ. ರಾಧಾಕೃಷ್ಣನಿಂದ ಗೋಪಣ್ಣ ಭಟ್ಟರು ಗೋಕರ್ಣಕ್ಕೆ ಬೇಸಾಯದ ಈ ವಿಚಾರ ತಯಾರಿ ಮಾಡಲು ಹೋದದ್ದು ತಿಳಿಯಿತು. ಈಗ ಕೈಯಲ್ಲಿ ನಗ ಇದೆ. ಅವುಗಳನ್ನೂ ಬಳೆಗಳನ್ನೂ ಸುಬ್ಬಮ್ಮನಿಗೆ ಒಪ್ಪಿಸಿ, ಉಳಿದ ಒಡವೆಗಳನ್ನು ಪರಿಚಿತರಲ್ಲಿ ಒತ್ತೆಯಿಟ್ಟು, ಸ್ವಲ್ಪ ನಗದಿ ಹಣವನ್ನು ಕೊಂಡರು. ಅದರಿಂದ ಎರಡು ಜತೆ ಕೋಣಗಳನ್ನು ಅಟ್ಟಿಕೊಂಡು, ಅವರು ತಮ್ಮ ಊರನ್ನು ಸೇರಿದರು. ಜಾನವಾರುಗಳಲ್ಲದೆ, ಊರಿನ ಬೇಸಾಯವು ಕಜಗೆಡಬಾರದೆಂದು ಹೀಗೆ ಮಾಡಿದರು. ಊರಿಗೆ ಬಂದ ಮೇಲೆ ರಾಧಾಕೃಷ್ಣ ಅವರೊಡನೆ “ಒಳ್ಳೆಯ ಕೆಲಸ ಮಾಡಿದಿರಿ ನೀವು. ಗದ್ದೆ ಈ ವರ್ಷವೂ ಹಡಿಲು ಬಿದ್ದರೆ ನಾಳೆ ಕೆಟ್ಟೇ ಹೋಗುತ್ತದೆ. ಆ ದಂಡ ನೀವೇ ಹೊರುವವರಲ್ಲವೇ” ಎಂದನು. ಆ ವರ್ಷ ಅವರು ಊರಿನ

ತಿಳು, ಒಕ್ಕಲುಗಳನ್ನೆಲ್ಲ ಒಗ್ಗೂಡಿಸಿ ಆದಷ್ಟು ಗದ್ದೆಗಳನ್ನು ಉಳುಮೆ ಮಾಡಿ ಬಿತ್ತನೆ ನಡೆಯಿಸಿದರು. ಆ ವರ್ಷದ ಮಟ್ಟಿಗೆ ಜಾನುವಾರುಗಳ ಅಭಾವದಿಂದ ಗೊಬ್ಬರ ಏನೇನೂ ಸಾಲದೆಹೋದರೂ, ಸೊಪ್ಪನ್ನು ಹಾಕಿ ಪೂರೈಸಿದರು. ಮಹಾಬಲ ಭಟ್ಟರ ಮನೆಯ ಬೂದಿಯೂ ಈ ಕೆಲಸಕ್ಕೆ ನೆರವಾಯಿತು.

ಮಳೆಗಾಲದಲ್ಲಿ ರಾಧಾಕೃಷ್ಣ ಹೊರಗೆಲ್ಲಿಗೆ ಹೋಗಲೂ ಇಲ್ಲ. ಸಂಚಾರವನ್ನು ಕಡಿಮೆ ಮಾಡಿದನು. ಮಳೆಯಲ್ಲಿ ಸಂಚಾರವೂ ಕಷ್ಟ. ಬದಲು ನಾಗೇನಹಳ್ಳಿಯಲ್ಲಿ ಕುಳಿತಿದ್ದು ಜೈಲಿನಿಂದ ಬಂದವರ ಯೋಗ ಕ್ಷೇಮ ನೋಡುತ್ತಿದ್ದ. ಚಳಿಜ್ವರ, ಶೀತಜ್ವರಗಳಿಂದ ಮಲಗಿದವರ ಯೋಗ ಕ್ಷೇಮವನ್ನು ತಿಳಿಯುವುದು ಅವನ ಕೆಲಸ. ಮದ್ದಿಗೆಂದು ಸಿದ್ಧಾಪುರಕ್ಕೆ ಓಡುತ್ತಾನೆ. ನಿತ್ಯೋಪಚಾರಕ್ಕೆ ಡಾ। ನಾಡಕರ್ಣಿಯವರು, ಅವನಿಗೆ ಬಂದು ಔಷಧದ ಪೆಟ್ಟಿಗೆಯನ್ನು ಕೊಟ್ಟಿದ್ದರು. ಹೀಗೆ ಊರವರ ಉಪಚಾರ ಸಹಾಯಗಳಲ್ಲಿ ಅವನ ಮನಸ್ಸೂ ತುಂಬಿತು, ವೇಳೆಯೂ ತುಂಬಿತು.

ಅವನ ಬಿಡುವಿನಲ್ಲೆಲ್ಲ ಅವನ ಯೋಚನೆಗಳು ಚಳವಳದ ಭವಿಷ್ಯದ ಕಡೆಗೂ, ನಾಗೇನಹಳ್ಳಿಯ ಸುಖದುಃಖದ ಕಡೆಗೂ ಹರಿಯುತ್ತದೆ. ಚಳವಳ ತೊಡಗಿ ಎರಡು ವರ್ಷಗಳಾಗುತ್ತ ಬಂದಿತು. ಅದು ಯಾವ ರೀತಿಯಲ್ಲಿ ಕೊನೆಗಂಡೀತು ಎಂಬುದನ್ನು ಊಹಿಸಲು ಸಾಧ್ಯವಾಗಿಲ್ಲ. ಹಾಗೆಂದು ಮನಸ್ಸು ಗ್ರಾಮಸ್ಥರ ಕಡೆಗೆ ಹರಿಯುತ್ತದೆ. ಅಂಗಡಿಕಾರ ಆನಂದ ನಾಯಕನು ಹೆಂಡತಿ ಮನೆಗೆ ಹೋದವರು ತಿರುಗಿ ಬರಲೇ ಇಲ್ಲ. ಹೇಗೆ ಬಂದಾರು? ತಿರುಗಿ ಅಂಗಡಿ ಹೊರಡಿಸುವುದಕ್ಕೆ ನೂರು ರೂಪಾಯಿಗಳಾದರೂ ಬೇಕು. ಅಂಗಡಿಯನ್ನು ತೆರೆದರೂ ಮೊದಲಿನಂತೆ ವ್ಯಾಪಾರವಾಗುವ ಸಂಭವವಿಲ್ಲ. ಹೇಗಿದ್ದರೂ ಆ ಪ್ರಾಂತ್ಯಕ್ಕೆ ಒಂದು ಅಂಗಡಿ ಬೇಕೇ ಬೇಕು. ಪ್ರತಿಯೊಂದು ಸಾಮಾನಿಗೂ ಹತ್ತು ಮೈಲು ದೂರದ ಸಿದ್ಧಾಪುರಕ್ಕೆ ಹೋಗಿ ಪೂರೈಸೀತೇ? ನಾಯಕರಿಗೂ ಇದೇ ಯೋಚನೆ ಬಂದಿದೆ. ಆದರೆ ಅವರು ಸರಕಾರಕ್ಕೆ ತೆರಬೇಕಾದ ದಂಡ ಇನ್ನೂ ತುಂಬಿಲ್ಲ. ತಾನು ಸಾಲವನ್ನು ಮಾಡಿ ಅಂಗಡಿ ಇರಿಸುವುದು, ಅವರು ದಂಡದ ಹಣಕ್ಕೆ ಇನ್ನೊಮ್ಮೆ ಇದ್ದ ಒಡವೆಗಳನ್ನು ದೋಚಿಕೊಂಡು

ಹೋಗುವುದು—ಈ ತಂಟೆಯೇ ಬೇಡವೆಂದು ನಾಗೇನಹಳ್ಳಿಯ ಯೋಚನೆಯನ್ನು ಪ್ರಕೃತ ಬಿಟ್ಟರು.

ಸೆರೆಮನೆಯ ಅವಧಿ ಮುಗಿಸಿ ಗುಡಿಗಾರ ವೆಂಕಟುವು ಬಂದಿದ್ದಾನೆ. ಆತ ಚಂದಪ್ಪನ ತಂದೆ. ಜಾತಿಯಲ್ಲಿ ಗುಡಿಗಾರ. ಅಗತ್ಯವಿದ್ದರೆ ಅಟ್ಟದಲ್ಲಿರಿಸಿದ ಬೆಂಡನ್ನು ತೆಗೆದು ಬಾಸಿಗ ಮಾಡಿಕೊಡಬಲ್ಲ. ಆದರೆ ಅದು ಉಪವೃತ್ತಿಯಾಗಿದೆ. ಅವನಮುಖ್ಯ ವೃತ್ತಿಯಲ್ಲ. ಮಹಾಬಲ ಭಟ್ಟರ ಗೇಣಿ ಒಕ್ಕಲಾಗಿದ್ದ ಆತ, ಮನೆಗೆ ಈ ಮಳೆಗಾಲದಲ್ಲಿ ತುಂಬ ದಣಿದು ಬಂದರೆ ಎದುರಿಗೆ ಸಂಪೂರ್ಣ ನಿರಾಶೆಯ ಚಿತ್ರ ಬರೆದಿತ್ತು. ಭೂಮಿ ಹೋಗಿದೆ; ಮನೆಯ ಪಾತ್ರೆಗಳೂ, ಎತ್ತುಗಳೂ ಹೋಗಿವೆ. ಮುದಿ ತಾಯಿ ಈಚಣ್ಣ ಭಟ್ಟರ ಮನೆಯ ಚಾವಡಿಯಲ್ಲಿ ಕುಳಿತು ತಪಿಸುತ್ತಿದ್ದಾಳೆ. ಆಕೆ ಮಳೆಗಾಲವನ್ನು ತಳ್ಳುವುದೇ ಕಷ್ಟ. ಈ ಗೊಂದಲಕ್ಕೆ ಕೈ ಹಾಕದಿದ್ದರೆ, ಅವನಿಗೆ ಇಷ್ಟರೊಳಗೆ ಎರಡನೆಯ ಮದುವೆಯೂ ಆಗಿಹೋಗುತಿತ್ತು. ಮೊದಲಿನವಳು ಸತ್ತು ಎರಡು ವರ್ಷಗಳಾಗಿದ್ದುವು. ಆದರೆ ಈಗಿನ ಅವನ ಪರಿ, ಬೇರೆಯೇ ಆಗಿದೆ. ಇಷ್ಟು ದಿವಾಳಿಯಾದವನಿಗೆ, ಹೆಣ್ಣು ಕೊಡುತ್ತಾರೆಯೋ ಇಲ್ಲವೋ ಎಂಬ ಯೋಚನೆ ಬಂದಿದೆ. 'ಮಗ ಎಂದು ಬರುತ್ತಾನೆ'ಂದು ರಾಧಾಕೃಷ್ಣನನ್ನು ಆತ ಕೇಳುತ್ತಲೇ ಇದ್ದಾನೆ. ಅವನು ಬಂದಗಳಿಗೆಯಿಂದ ಈಚಣ್ಣಯ್ಯ ಅವನಿಗೆ ಹೇಳಿಯೇ ಹೇಳುತ್ತಿದ್ದಾರೆ "ವೆಂಕಟು, ನಾನು ಅನ್ನುವುದನ್ನು ಕೇಳು—ನೀನು ಒಂದು ಮುಡಿಯಾಗಲಿ, ಎರಡು ಮುಡಿಯಾಗಲೀ, ಬೀಜವನ್ನು ಬಿತ್ತು. ಕೋಣ ನಮ್ಮದೇ ಇದೆ. ನಾಟಿಗೆ ಎಲ್ಲರೂ ಸಹಾಯಮಾಡುತ್ತಾರೆ" ಎಂದರೆ ಅವನ ಕಿವಿ ಕಿವುಡಾಗುತ್ತಿತ್ತು. ಅವನ ಮನಸ್ಸಿಗೆ, ತಾನು ಆ ಮೂಲೆಯಲ್ಲಿ ಇರುವುದಕ್ಕಿಂತ ಪೊರಬಡ ಊರಿಗೆ ಹೋಗಿ, ಜಾತಿ ಕಸಬು ಮಾಡಿಕೊಂಡಿರುವುದು ಒಳ್ಳೆಯದೆಂದು ತೋರುತ್ತದೆ. ಮಗನನ್ನು ಕಂಡು ಸಾಯುತ್ತೇನೆ ಎಂದು ಹರಕೆಹೊತ್ತ ಅವನತಾಯಿ,ಒಂದು ದಿನ ಮಗನ ತೊಡೆಯ ಮೇಲೆ,ದೂರವಿದ್ದ ಮೊಮ್ಮಗನನ್ನು ನೆನೆದು ಪ್ರಾಣಬಿಟ್ಟಳು. ಹೆಂಡತಿ, ತಾಯಿ ಇಬ್ಬರನ್ನೂ ಕಳೆದುಕೊಂಡ ವೆಂಕಟುವಿಗೆ ಬೇಸಾಯದಲ್ಲಿ ಯಾವ ಮೋಹ ಉಂಟಾದೀತು? ಇನ್ನು ಮಗ ಕ್ಷಿಪ್ರದಲ್ಲಿಯೇ ಬರಬೇಕೆಂಬ ಆತುರವೂ ಅವನಿಗಿಲ್ಲ. "ನಮ್ಮ ಚಂದಪ್ಪ, ನಿಮ್ಮ ಮಕ್ಕಳೊಟ್ಟಿಗೆಯೇ ಇದ್ದಾನಲ್ಲ, ಇರಲಿ. ನನಗೆ ಬೇಸರ

ದಲ್ಲಿ ಏನು ಮಾಡುವುದಕ್ಕೂ ತೋರುವುದಿಲ್ಲ ಸೊರಬಕ್ಕೆ ಒಮ್ಮೆ ಹೋಗಿ ಬರುತ್ತೇನೆ" ಎಂದು ಹೊರಟೇ ಹೋದ.

ಗುಡಿಗಾರ ವೆಂಕಟುವಿನಂತೆ, ಅಂಗಡಿ ನಾಯಕರಂತೆ, ಸೆರೆಮನೆಯಿಂದ ಮನೆಗೆ ಬಂದ ಮೇಲೆ, ಚೇತರಿಸಲಾರದೆ ಹೋದ ಕೆಲವೊಂದು ಕುಟುಂಬಗಳನ್ನು ಕಂಡು, ರಾಧಾಕೃಷ್ಣನಿಗೆ ತುಂಬ ವ್ಯಥೆಯಾಯಿತು. ಇನ್ನೊಂದೆರಡು ವರ್ಷಗಳ ನಂತರ-ಹೋದ ಭೂಮಿ, ತೆತ್ತದಂಡ ಎಲ್ಲವೂ ಹಿಂದಕ್ಕೆ ಬಂದಾವೆಂದು ಊಹಿಸಿದರೂ—ಹಾಳಾದ ಹೊಲ, ಆರಿ ಹೋದ ವಿಶ್ವಾಸ, ಮಣ್ಣು ಮುಕ್ಕಿದ ಬಂಧುಗಳು—ಇವೆಂದಾದರೂ ಬರುವುದುಂಟೇ?

ನವರಾತ್ರಿಯ ಸಮಯಕ್ಕೆ ಶಿರ್ಶಿಯಿಂದ ಸುಬ್ಬಮ್ಮ, ಸಂಪೂರ್ಣ ಆರೋಗ್ಯಹೊಂದಿ ಮನೆಗೆ ಮರಳಿದರು. ಈಚಣ್ಣಯ್ಯನವರ ಮನೆಯಲ್ಲಿ ಇನ್ನೊಮ್ಮೆ ಬೆಳಕು ಮೂಡಿತು. ಈಗ ಅಲ್ಲಿನ ಶಿಬಿರ ಒಡೆದಿದೆ. ಅಲ್ಲಲ್ಲಿ ತಂತಮ್ಮ ಮನೆಯವರು ಜೈಲಿನಿಂದ ಬಂದ ಮೇಲೆ, ಹಾಗೆ ಒಂದೇ ಗುಂಪಾಗಿ ಕುಳಿತಿರುವುದಕ್ಕೆ ಇಷ್ಟವಾಗಲಿಲ್ಲ. ಅವರು ಬೇರೆಯಾಗಿ ಒಡೆದು, ತಮ್ಮ ಹಳೆಯ ಮನೆಗಳನ್ನು ಇದ್ದುದರಲ್ಲೇ ಸರಿಪಡಿಸಿಕೊಂಡು ಹೋಗಿ ಸೇರಿದರು. ಕಳೆಕೀಳುವುದು, ಬೆಳೆ ಕಾಡುಮೃಗಗಳ ಬಾಯಿಗೆ ತುತ್ತಾಗದಂತೆ ಕಾವಲು ಹಾಕುವುದು, ಬೇಲಿಮಾಡುವುದು, ಏನಾದರೂ ತರಕಾರಿ ಬೆಳೆಯುವುದು, ಇಂಥ ಉದ್ಯೋಗಗಳಲ್ಲಿ ಅವರ ಸಮಯ ಹೋಗತೊಡಗಿತು. ಅವರವರಿಗೆ ಈಗ ಅವರವರ ಕೆಲಸವಿದೆ. ರಾಧಾಕೃಷ್ಣನಿಗೆ ತನ್ನ ಯೋಚನೆಯಾಗತೊಡಗಿತು. ಊರಲ್ಲಿ ತನ್ನ ಮನೆಯಬದುಕು ಹೇಗೆ ಸಾಗಿದೆ ಎಂಬ ಯೋಚನೆ. ನಾಗೇನಹಳ್ಳಿಯನ್ನು ಬಿಡುವುದಕ್ಕೆ ಮನಸ್ಸು ಬರುವುದಿಲ್ಲ ಒಬ್ಬ ರೋಗಿಗೆ ಉಪಚಾರ, ಒಬ್ಬರಿಗೆ ಧೈರ್ಯ ಹೇಳುವ ಕೆಲಸ, ಇನ್ನೊಬ್ಬನಿಗೆ ಅಲ್ಪಸ್ವಲ್ಪ ಸಹಾಯಮಾಡುವ ಕೆಲಸ ಇದ್ದೇ ಇದೆ. ಇನ್ನು ಹೊರಡುವುದಾದರೆ, ಒಂದೇ ಬಾರಿಗೆ ಎಲ್ಲ ಹೊರೆಗಳನ್ನು ಒಪ್ಪಿಸಿ ಕೊಟ್ಟೇ ಹೋಗಬೇಕು. ಇತ್ತ ನತ್ಯಕೊಬ್ಬಳ ಮೇಲೆಯೇ ಅಷ್ಟೊಂದು ಹೊಣೆಯನ್ನು ಎಷ್ಟು ದಿವಸ ಹೊರಿಸಬಹುದು? "ನನ್ನ ಕೆಲಸ ಮುಗಿಯುತ್ತ ಬಂತೆಂದುಕಾಣುತ್ತದೆ. ಇನ್ನೊಂದುಬಾರಿ ಕಡೆಯ ತಿರುಗಾಟವನ್ನು ಮುಗಿಸುತ್ತೇನೆ. ನಿಮ್ಮೂರಿಗೆ ಇನ್ನೂ ನಾಲ್ಕೆಂಟು ಜತೆ ಕೋಣಗಳನ್ನೂ

ಒಂದಿಷ್ಟು ಸಾಲವನ್ನು ಕೊಡಿಸುವುದಕ್ಕೂ ಬಂದರೆ ಅಷ್ಟು ಮಾಡಿ ನಾನು ಊರಿಗೆ ಹೋಗುತ್ತೇನೆ” ಎಂದು ಈಚಣ್ಣಯ್ಯನವರೊಡನೆ ಹೇಳಿದ.

ಅವರು “ಈ ವರ್ಷದ ಬೆಳೆಯು ಬರಬೇಕು ನಮ್ಮ ಕೈಗೆ. ದೀವಳಿಗೆಯ ಸಮಯಕ್ಕೆ ಊರವರೆಲ್ಲರು ಕುಳಿತು, ದೇವರಿಗೆ ಒಂದು ಸಂತರ್ಪಣೆ ಮಾಡುವ. ಆ ಮೇಲೆ ನಿಮ್ಮ ಜತೆಗೆ ನಾನೂ ಬರುತ್ತೇನೆ; ಅಲ್ಲಿಂದ ಮಕ್ಕಳನ್ನು ಹಿಂದಕ್ಕೆ ಕರಕೊಂಡು ಬರುತ್ತೇನೆ” ಎಂದರು. ರಾಧಾಕೃಷ್ಣ ಒಪ್ಪಿಕೊಂಡ. ಆದರೆ ಹೊರಡುವ ಮೊದಲು ನಾಗೇನ ಹಳ್ಳಿಯುವರ ಸಲುವಾಗಿ ಒಂದು ಸಾವಿರ ರೂಪಾಯಿಯಷ್ಟು ಸಹಾಯ ಧನ ಒದಗಿಸಲು ಬಂದೀತೇ—ಎಂಬ ಕೊನೆಯ ಪ್ರಯತ್ನಕ್ಕಾಗಿ ಆತ ಹೊರಟನು. ಹೋದಲ್ಲಿಗೇನೆ ಹೋಗಬೇಕು. ಕೊಟ್ಟವರೇ ಕೊಡಬೇಕು. ಇದು ಆತ ಸಂಧಿಸಿದ ಪರಿಸ್ಥಿತಿ. ಅಲ್ಲದೆ ಹಣದ ಮುಗ್ಗಟ್ಟು ದೇಶದಲ್ಲೆಲ್ಲೂ, ಕಠಿಣಾವಸ್ಥೆಗೆ ಬಂದಿತ್ತು. ದೇಶಸೇವೆಯ ಔದಾರ್ಯ ತೀರ ತಣಿದು ಹೋಗಿತ್ತು. ಹೋದ ಕೆಲಸಗಳು ಕಾಲು ಪಾಲು ನೆರವೇರುವುದೂ ಕಠಿಣವಾಯಿತು. ಆಗ ಆತನ ಮನಸ್ಸಿಗೆ ಅನಿಸಿತು! “ತನ್ನಂತಹನಿಗೇ ಭಿಕ್ಷಾವೃತ್ತಿ ಇಷ್ಟು ಕಠಿಣವಾಗಿ ಬಂದಿರುವಾಗ, ಯಾವ ಧೈರ್ಯದ ಮೇಲೆ, ನಾನು ಸತ್ಯಳು ಒಬ್ಬಳನ್ನೇ ಬಿಟ್ಟು ಬಂದೆ” ಎಂಬ ಚಿತ್ರ ಕಾಣತೊಡಗಿತು.

* * * *

ದೇಶಕ್ಕೆ ಬದಿಂತು ದೀಪಾವಳಿ. ನಾಗೇನ ಹಳ್ಳಿಯ ಬತ್ತದ ಕಣಜಗಳನ್ನು ಅದು ತುಂಬಿತು. ಎರಡು ವರ್ಷಗಳ ನಂತರ ಲಕ್ಷ್ಮಿ ಅವರ ಊರಿಗೆ ತಿರುಗಿ ಕಾಲಿರಿಸಿದ್ದಾಳೆ—ಎಂಬ ಭರವಸೆಯನ್ನೂ ತಂದಿತು. ರಾಧಾಕೃಷ್ಣನು ತನ್ನ ಊರಿಗೆ ಹೊರಟು ಎದ್ದನು. ಈಚಣ್ಣಯ್ಯನವರು ಜತೆಗೆ ಎದ್ದರು. ಸುಬ್ಬಮ್ಮ ಆಗ ‘ಅಯ್ಯೋ, ನಾನೂ ಬರುತ್ತಿದ್ದೆ’ ಎಂದುಕೊಂಡಳು. ಈಚಣ್ಣಯ್ಯನವರು-“ದೇವರು ನಡೆಯಿಸಿದರೆ ಅವರು ಗಂಡ ಹೆಂಡಿರು, ನಾಗೇನಹಳ್ಳಿಗೆ ಬಾರದೆ ಇರಲಾರರು” ಎಂದರು. ಆ ಊರಿನಿಂದ ಸಾಗರಕ್ಕೆ ಹೋಗುವುದು ಸುಲಭವಾಗಿದ್ದರೂ, ರಾಧಾಕೃಷ್ಣ ಇನ್ನೊಮ್ಮೆ ಡಾ। ನಾಡಕರ್ಣಿಯವರನ್ನು ಕಾಣುವ ಸಲುವಾಗಿ ಶಿರ್ಶಿಗೆ ಹೋದನು. ಒಂದು ದಿನವೆಲ್ಲ ಅಲ್ಲಿ ಸಂತೋಷದಲ್ಲಿ ಕಳೆದನು. ನಾಡಕರ್ಣಿಯವರ ವೃತ್ತಿಯನ್ನು ಕಂಡು, ರಾಧಾಕೃಷ್ಣ “ನಾನು ಈ ಬೋಳು

ಬಿ. ಎ. ಕಲಿಯುವುದರ ಬದಲು, ನಿಮ್ಮ ಉದ್ಯೋಗ ಕಲಿತಿದ್ದರೆ, ಊರಿಗೆ ಎಷ್ಟೋ ಉಪಕಾರ ಮಾಡಬಹುದಿತ್ತು" ಎಂದನು. ಮರುದಿನ ಹೊರಡುವಾಗ, ಡಾಕ್ಟರವರು "ಇನ್ನೊಮ್ಮೆ ಈ ಕಡೆ ಯಾವಾಗ?" ಎಂದು ಪ್ರಶ್ನೆ ಮಾಡಿದರೆ, ಈತ "ಮುಂದಿನ ಸತ್ಯಾಗ್ರಹದ ವೇಳೆ" ಎಂದನು. ಇಬ್ಬರೂ ನಕ್ಕರು. ಡಾಕ್ಟರರು "ಆ ಅವಕಾಶ ಇನ್ನು ಬರಲಾರದು" ಎಂದರು. ಈತ "ಬಂದರೆ ಕಠಿಣವಾಗಿಯೇ ಬರುತ್ತದೆ" ಎಂದನು.

ಶಿರ್ಶಿಯಿಂದ ಮೋಟರು ದಾರಿಯಾಗಿ ಅವರಿಬ್ಬರೂ ಸಾಗರಕ್ಕೆ ತೆರಳಿದರು. ಸಾಗರಕ್ಕೆ ಎರಡು ಮೈಲು ದೂರದಲ್ಲಿ ಮಹಾಬಲ ಭಟ್ಟರ ನೆಂಟರ ಮನೆಯಿತ್ತು. ಅಲ್ಲಿಗೆ ಹೋಗಿ ಅವರನ್ನು ಕಂಡು, "ಮನೆಯ ಮಕ್ಕಳನ್ನು ಕರೆದು ತರಬೇಕೇ?" ಎಂದು ಕೇಳಲು ಆತುರ. ಅಲ್ಲದೆ ಊರಿಗೆ ಮರಳಿ ಬಂದ ಅವರ ಅಣ್ಣ, ಗೋಪಣ್ಣ ಭಟ್ಟರ ಸಂಗತಿಯನ್ನು ತಿಳಿಸುವುದಕ್ಕೂ ಉತ್ಸಾಹ. ಅಲ್ಲಿಗೆ ಹೋದ ಮೇಲೆ ಮಹಾಬಲ ಭಟ್ಟರ ಸಂಗತಿಯು ತಿಳಿಯಿತು—ಅವರು ತಮ್ಮ ಸೋದರ ಮಾವನ ಮನೆಯಲ್ಲಿ, ಹೊರೆಯಾಗಿ ಕುಳಿತಿದ್ದಾರೆಂದು. ಮರಳಿ ನಾಗೇನಹಳ್ಳಿಗೆ ಹೋಗುವುದಕ್ಕೆ ನಂಬಿಕೆಯು ಸಾಲದು, ಧೈರ್ಯವೂ ಸಾಲದು. ಯಾವುದನ್ನು ನಂಬಿ ಹೋಗಬೇಕು—ಎಂದು ಅವರಿಗೆನಿಸುತಿತ್ತು. "ಮಕ್ಕಳನ್ನು ಎಲ್ಲಿಗೆ ಕರೆಯಿಸಿಕೊಳ್ಳುವುದು ಮಹಾರಾಯ? ಅವರ ಅಬ್ಬೆಗೂ ನನಗೂ, ಮಗುವನ್ನು ಕಾಣುವ ಆಸೆಯೇನೋ ಇದೆ. ಆದರೆ ನಾವೇ ಇಲ್ಲಿಂದ, ಎಷ್ಟು ಬೇಗ ತಾವು ಬಿಡುತ್ತೇವೆಯೋ, ಅಷ್ಟು ಒಳ್ಳೆಯದೆಂದು ತೋರುತ್ತಾ ಇದೆ. ಎಲ್ಲಾದರೂ ಗೇಣಿಗೆ ಒಂದು ಜಾಗವನ್ನು ಹುಡುಕಿ, ತಿರುಗಿ ಬಿಡಾರ ಹೂಡುವ ತನಕ ನೆಮ್ಮದಿಯಿಲ್ಲ. ಆ ಗಳಿಗೆಯ ಸಿಟ್ಟಿಗೆ, ಮನೆಯನ್ನು ಸುಟ್ಟುಹಾಕಿ ಬಾರದಿರುತ್ತಿದ್ದರೆ, ಆ ದರಿದ್ರ ಸಾಹೇಬನಿಗೆ ಸಲಾಂ ಹಾಕಿಯಾದರೂ ಅಲ್ಲಿಯೇ ಕುಳಿತುಕೊಂಡಿರಬಹುದಿತ್ತು. ಗೇಣಿಗಾದರೂ, ಜಾಗ ವಹಿಸಿಕೊಳ್ಳಬಹುದಿತ್ತು" ಎಂದರು.

ಮನೆಸುಟ್ಟ ವಿಚಾರ ಬರುತ್ತಲೇ ಈಚಣ್ಣಯ್ಯ "ನೀನೇನೆ, ಅದನ್ನು ಮಾಡಿ ಬಂದವ? ನನಗೂ ಅದೇ ಅನುಮಾನವಾಯಿತು. ಇವರು ಖಂಡಿತಕ್ಕೂ 'ನೀವೇ ಆ ಕೆಲಸ ಮಾಡಿರಬೇಕು' ಎಂದಿದ್ದರು. ಎಷ್ಟು ಹೊಟ್ಟೆ ಸಂಕಟವಾದರೂ ಹಾಗೆ ಮಾಡಬಾರದಿತ್ತು. ತುಂಬ ತಪ್ಪುಕೆಲಸವಾ

ಯಿತು. ನಾಳೆ ದಿನ ಸರಕಾರ ಅವರವರ ಜಾಗ, ಅವರವರಿಗೆ ಹಿಂದಕ್ಕೆ ಕೊಡುವ ಕಾಲ ಬಂದೀತು. ತಿರುಗಿ ಇನ್ನು ಅಂಥ ಮನೆ ಕಟ್ಟಿಸಬೇಕಾದರೆ ಐದಾರು ಸಾವಿರ ರೂಪಾಯಿಗಳಾದರೂ ಬೇಡವೇ?" ಎಂದರು. ಇದರಿಂದ ಮಹಾಬಲ ಭಟ್ಟರ ಒಡಲ ಉರಿ ಇನ್ನಷ್ಟು ಅಧಿಕವಾಯಿತು. "ಈಗ ನಮ್ಮ ಗೋಪಣ್ಣನೇ ಬುದ್ಧಿವಂತನೆಂದು ಕಾಣುತ್ತದೆ. ಮನೆ, ಆಸ್ತಿ ಎರಡೂ ಇಟ್ಟುಕೊಂಡಿದ್ದಾನೆ. ಸಾಹೇಬನೇ ಆಸ್ತಿ ಸ್ವಾಧೀನಕ್ಕೆ ಸಿವಿಲಿಗೆ ಹೋಗಬೇಕು. ಅವನೇನು ಹೇಳಿದ್ದಾನೆ—ಗಂಗೆ, ಶಾರದೆಯರನ್ನು ಕರ ಕೊಂಡು ಬರಹೇಳಿದ್ದಾನೆಯೇ ?"ಎಂದು ಕೇಳಿದರು.

"ಕರೆದು ತರಬೇಕು; ಪಾಪ-ಅವಕ್ಕೂ ಅಪ್ಪ ಅಮ್ಮನನ್ನು ಕಾಣಲು ಹಂಬಲವಾಗದೇ? ಒಂದು ನಾಲ್ಕು ದಿವಸ ಅಲ್ಲಿದ್ದು, ಮನೆಯಲ್ಲಿ ಪೂರೈಸದೆ ಹೋದರೆ, ಇನ್ನೊಮ್ಮೆ ಬಿಟ್ಟು ಬರುವ. ಇಲ್ಲವಾದರೆ ಅವುಗಳು ಅಲ್ಲಿ ನಮ್ಮನ್ನು ಜಾನಿಸುತ್ತಿರುವುದಿಲ್ಲವೇ? ಅಲ್ಲದೆ ಇವರೊಬ್ಬರಿಗೇನೆ ನಾವು ಎಷ್ಟೆಂದು ತೊಂದರೆ ಕೊಡಬಹುದು" ಎಂದು ರಾಧಾಕೃಷ್ಣನ ಸ್ತುತಿಯನ್ನು ಮಾಡಿದರು. ಮಹಾಬಲ ಭಟ್ಟರಿಗೆ, ತಮ್ಮ ಆ ಸ್ಥಿತಿಯಲ್ಲಿ ಸಾಗರವನ್ನು ನಾಲ್ಕು ದಿನಕ್ಕಾದರೂ ಬಿಡಬೇಕೆಂದು ತೋರಿತು. ಅವರು "ನಾನೂ ಬಂದು ಬಿಡುತ್ತೇನೆ, ಮಕ್ಕಳನ್ನು ಕರೆದು ತರುವುದೋ, ಬಿಡುವುದೋ, ಆ ಮೇಲೆ ನೋಡುವ. ಆದರೆ ಅವು—'ಈ ಅಪ್ಪ, ಅಮ್ಮ, ನಮ್ಮನ್ನು ಕಣ್ಣು ಕಾಣದ ಕಾಡಿಗೆ ಅಟ್ಟಿದರು' ಎಂದು ತಿಳಿಯಬಾರದಲ್ಲ" ಎಂದರು. ಅವರ ಸ್ಥಿತಿಯು ತೀರ ಅರೆಮರುಳರಂತಾಗಿತ್ತು. ಸತ್ಯಾಗ್ರಹ ಕಾಲದ ಧೈರ್ಯವೆಲ್ಲವೂ ಇಂಗಿಹೋಗಿ, ಅವರ ಬದುಕು ಕಂಗಾಲುಗೊಂಡಿದೆ. ನಾಳಿನ ಮಾರ್ಗವೇ ಕಾಣಿಸದಾಗಿದೆ. ಒಂದು ಗಳಿಗೆಯ ಸಿಟ್ಟಿಗೆ ಸೊಕ್ಕಿ, ಇಡಿಯ ಜೀವಮಾನದ ಸೌಖ್ಯವನ್ನೇ ಕೆಡಿಸಿಕೊಂಡೆನೆಂದು ಅವರ ಮನಸ್ಸೇ ಹೇಳತೊಡಗಿದೆ.

ಇಬ್ಬರೂ ಹೊರಟವರು, ಈಗ ಮಹಾಬಲ ಭಟ್ಟರನ್ನು ಸೇರಿ, ಮೂರು ಮಂದಿಯಾಗಿದ್ದಾರೆ. "ಹೋಗಿ ಬರುವ ಖರ್ಚಿಗೆ ಏನು ಗತಿಯೋ" ಎಂದು ಮಹಾಬಲ ಭಟ್ಟರ ಮನಸ್ಸು ಹೇಳುತ್ತಿತ್ತು. ದುಡ್ಡಿರುವ ಕಾಲದಲ್ಲಿ ತುಂಬ ಧಾರಾಳಿಯಾಗಿ ಬಾಳಿದವರು ಅವರು. ಈಗ ಬರಿಗೈಯಿಂದ ಅವರಿಬ್ಬರ ಜತೆಯಲ್ಲಿ ಹೊರಡುವುದಕ್ಕೆ, ಮನಸ್ಸು ಪ್ರತಿ ಕ್ಷಣವೂ ಲಜ್ಜೆ

ಗೊಳ್ಳುತ್ತಿತ್ತು. ಮನಸ್ಸಿನ ಶಾಂತಿ, ಮಕ್ಕಳನ್ನು ನೋಡುವ ಹಂಬಲ, ನಾಲ್ಕು ದಿನಗಳ ವಿಶ್ರಾಂತಿ—ಇಷ್ಟಲ್ಲವಾದರೆ ಅವರು ಎಂದೆಂದಿಗೂ ಹಾಗೆ ಹೊರಡುವವರಲ್ಲ. ಸದಾ ಕೆಚ್ಚಿನ ಮಾತಾಡುವುದು ಅವರ ಶೀಲ. ಆ ಕೆಚ್ಚು ಈಗೆಲ್ಲಿ? ನಾಳೆ, ನಾಳೆ, ನಾಳೆ—ಎಂಬುದೇ ದೊಡ್ಡ ದೆವ್ವವಾಗಿದೆ. ಮನಸ್ಸಿನ ಮುಂಗಡೆಯಲ್ಲಿ. ತಮ್ಮ ಸೋದರ ಮಾವನ ಮನೆಗೆ ಬಂದಿದ್ದಾರೆ, ತಮ್ಮವಳದ್ದೇ ತವರು ಮನೆ; ಆದರೂ ಕಷ್ಟ ಕಾಲದಲ್ಲಿ ನೆರವು ಕೊಡಲು ಹಿಂಜರಿದರು. ಚಿಕ್ಕ ಪುಟ್ಟ ವಿಷಯಗಳಿಗಾಗಿ ಜಗಳ ತೆಗೆದರು. ಬಾಯಿ ಬಿಟ್ಟು 'ನೀವಿಲ್ಲಿರ ಬೇಡಿ' ಅನ್ನದಿದ್ದರೂ, ಇರುವುದು ಮಾತ್ರ ಅಸಹನೀಯವಾಗಿವೆ. 'ಬೇಡಿಯಾದರೂ ತಿನ್ನುವ, ನಂಟರ ಮನೆಯ ಬಾಳುವೆ ಬೇಡ' ಎನ್ನುವ ಸ್ಥಿತಿ ಬಂದಿದೆ. ದಾರಿಯ ನೋಟಗಳಿಂದ, ಮಾತುಕತೆಗಳಿಂದ, ಹೊಸ ಜನರ ಪರಿಚಯದಿಂದ, ತಮ್ಮ ಇರವನ್ನು ಮರೆತವರಂತೆ ಹಾದಿಸಾಗುತ್ತಲೇ ಇದ್ದರು. ಸಾಗರದಿಂದ ಕುಂದಾಪುರ, ಅಲ್ಲಿಂದ ಮಂಗಳೂರಿಗೆ ಎರಡು ದಿನಗಳ ಪಯಣ. ನೆಟ್ಟಗೆ ಅವರನ್ನು ಕರೆದುಕೊಂಡು ಕುಂದಾಪುರಕ್ಕೆ ಬಂದು, ತಮ್ಮ ಮನೆಯನ್ನು ಹೊಗ್ಗಿದಾಗ, ರಾಧಾಕೃಷ್ಣನಿಗೆ ತುಂಬ ಅಳುಕು. ತಾಯಿ ಪುಟ್ಟಮ್ಮ, ಅವನ ತಮ್ಮಂದಿರಿಬ್ಬರೂ, ಎಷ್ಟು ಸಂತೋಷವನ್ನು ಪಟ್ಟರೋ! ಆ ದಿನ ಮರುದಿನವೆಲ್ಲ ಅವರ ಒತ್ತಾಯಕ್ಕೆ ಅಲ್ಲಿಯೇ ನಿಲ್ಲಬೇಕಾಯಿತು. ತಾಯಿ ತನ್ನ ಹಂಬಲವನ್ನೆಲ್ಲ ತೋಡಿಕೊಂಡಳು. ಮಗನ ದರ್ಶನದಿಂದ ಅವಳ ಮನಸ್ಸು ಉಕ್ಕಿಬರುತ್ತಿತ್ತು. ತಮ್ಮ ಮನೆಯ ಆರ್ಥಿಕ ಸ್ಥಿತಿಗತಿಗಳನ್ನೆಲ್ಲ ವಿವರಿಸಿದನು. ಅಷ್ಟು ಭೂಮಿ ಇದ್ದರೂ, ಕಾಳಿಗೆ ಬೆಲೆ ಇಲ್ಲದ ನಿಮಿತ್ತ, ಒಕ್ಕಲಿಂದ ಗೇಣಿ ಬರುವುದು ಕಷ್ಟವಾಗಿದೆ—ಎಂಬೆಲ್ಲ ವಿಷಯಗಳನ್ನು ವಿಸ್ತರಿಸಿ ಹೇಳಿದಳು. "ಇನ್ನೊಮ್ಮೆ ಬಂದು ಎಲ್ಲ ವ್ಯವಸ್ಥೆ ಮಾಡುತ್ತೇನೆ" ಎಂದು ಭರವಸೆ ಕೊಟ್ಟು ತನ್ನ ಗೆಳೆಯರನ್ನು ಕೂಡಿಕೊಂಡು ಮಂಗಳೂರಿಗೆ ಪಯಣ ಬೆಳೆಯಿಸಿದನು.

ಮಂಗಳೂರನ್ನು ಸಮೀಪಿಸುತ್ತ, ಖಾದೀ ಉಡುಗೆ ಧರಿಸುತ್ತಿದ್ದವರ ಸಂಖ್ಯೆಯು ಹೆಚ್ಚು ಹೆಚ್ಚಾಗಿ ಕಾಣಿಸತೊಡಗಿತು. ಖಾದಿ ಟೊಪ್ಪಿಯು, ನೂರಾರು ಜನರ ತಲೆಯ ಮೇಲೆ ಅಲಂಕಾರವಾಗಿ ಇದ್ದುದು ಕಂಡಿತು. ಅದನ್ನು ಕಂಡು ಈಚಣ್ಣಯ್ಯ "ನಿಮ್ಮ ಊರಿನಲ್ಲಿ ತುಂಬ ಖಾದಿ ಕಾಣೆ

ಷುತ್ತಿದೆ. ಇಲ್ಲಿಯೂ ಸತ್ಯಾಗ್ರಹ ಬಹಳ ಜೋರಿನಿಂದ ನಡೆದಿರಬಹುದು —ಅಲ್ಲವೇ" ಎಂದರು.

"ಹೂಂ,"

"ಏನು, ಹೂಂ ಅನ್ನುತ್ತೀರಿ"?

"ಇಲ್ಲಿಯೂ ಬಹಳ ಮಂದಿ ಸೆರೆಮನೆಗೆ ಹೋಗಿದ್ದಾರೆ. ಲಾಟಿಯ ಹಾವಳಿ ಬಹಳ ನಡೆಯಿತು. ಚಳವಳವು ಮಾತ್ರ ಮಂಗಳೂರಿನಲ್ಲಿಯೇ ಉರಿದು ಅಲ್ಲೇ ನಂದಿಹೋಯಿತು. ಪೇಟೆಯಿಂದ ಅದು ಹಳ್ಳಿಗೆ ಹೋಗಲೇ ಇಲ್ಲ. ಬೇರೆ ಬಗೆಯಿಂದ ಕಾಯಿದೆ ಭಂಗಮಾಡಿದವರೂ ಕಡಿಮೆ. ಬಹಳ ಮಾಡಿ, ಬಡವರೇ ಸೆರೆಮನೆಗೆ ಹೋದವರು. ಅವರೇ ತಲೆಯೊಡೆಸಿಕೊಂಡವರು. ನಿಮ್ಮ ಊರಿನವರಂತೆ ಆಸ್ತಿ ಮನೆ ಕಳೆದುಕೊಂಡವರು ಕಡಿಮೆ."

"ಅಷ್ಟೇಯೇ?"

"ಒಂದು ಊರಿನ ಹಾಗೆ ಇನ್ನೊಂದು ಊರು ಇರುತ್ತದೆಯೇ" ಎಂದನು ರಾಧಾಕೃಷ್ಣ. ಅವನಿಗೆ ತಮ್ಮ ಊರಿನ ವಿಮರ್ಶೆ, ತನ್ನ ವಿಮರ್ಶೆ ಎಂದೆನಿಸುತ್ತಿತ್ತು. ತನ್ನೂರಿನವರ ಸಲವಾಗಿ ಅವನು ಅಷ್ಟೊಂದು ಹಿಗ್ಗಲಾರನು. ಆದುದರಿಂದಲೇ ಸುಮ್ಮನಾದನು. ಸಂಜೆಯ ವೇಳೆಗೆ ಸಮನಾಗಿ ಅವರು ಮಂಗಳೂರನ್ನು ಸೇರಿದರು. ಆಗ ರಾಧಾಕೃಷ್ಣ "ರಾತ್ರಿ ಇಲ್ಲೆಲ್ಲಾದರೂ ಹೊಟೇಲಿನಲ್ಲಿ ಉಳಿದುಕೊಂಡು ಬೆಳಗ್ಗೆ ಹೋಗೋಣವೇ? ಅಥವಾ ಎರಡು ಹರದಾರಿ ದೂರ ನಡೆದು ಮನೆಯನ್ನು ಇಂದೇ ಸೇರೋಣವೇ?" ಎಂದು ಕೇಳಿದ. ಈಚಣ್ಣಯ್ಯ "ಇಲ್ಲಿಯ ತನಕ ಬಂದು ಇಲ್ಲೇಕೆ ರಾತ್ರಿಯನ್ನು ಕಳೆಯಬೇಕು? ಹಳ್ಳಿಯವರಾದ ನಮಗೆ ಎರಡು ಹರದಾರಿ ಏನು ದೂರ? ಹೋಗಿ ಬಿಡುವ" ಎಂದುದರಿಂದ, ಮೂವರೂ ಬಗಲು ಗಂಟುಗಳನ್ನು ಹಿಡಿದುಕೊಂಡು ಕಿರಿಪದವಿಗೆ ಹೊರಟರು.

ಕಿರಿಪದವಿನಲ್ಲಿ ಇವರ ನಿರೀಕ್ಷೆಯನ್ನು ಯಾರು ಮಾಡಿದ್ದಾರೆ? ಇವರು ಹೋಗಿ ಸೇರುವಾಗಿ ಒಂಬತ್ತು ಘಂಟೆ ಆಗಿತ್ತು. ಅವರೆಲ್ಲ ಊಟ ಮಾಡಿ ಮಲಗಿಕೊಳ್ಳುವುದರಲ್ಲಿದ್ದರು. ಇವರನ್ನು ಕಂಡು ಮನೆಯವರಿಗೆ ಒಂದು ಹಬ್ಬವೇ ಆದಂತಾಯಿತು. ಸತ್ಯ ಅಡಿಗೆ ಮಾಡುವುದಕ್ಕೆ ಎದ್ದಳು. ಶ್ಯಾಮ ತಾನು ಮುಂದಾದನು. ಮೂವರು ಬಂದುದರಿಂದ ಆಕೆ ಆ ಕೆಲ

ಸಕ್ಕೆ ತಾನೇ ಒಳಗೆ ಹೋದಳು. ಉಳಿದವರು ಮಕ್ಕಳೊಡನೆ ಮಾತ ನಾಡುತ್ತ ಕುಳಿತರು. ಪ್ರತಿ ಒಬ್ಬೊಬ್ಬರ ವರ್ತಮಾನವನ್ನು ತಂದವರೂ ಉಂಟು. ಸುಖಕರವಾದ ವರ್ತಮಾನ ಬಾರದಿದ್ದುದು ಚಂದಪ್ಪನಿಗೆ ಮಾತ್ರ. ಅವನ ಸಂತೋಷಕ್ಕಾಗಿ ರಾಧಾಕೃಷ್ಣನು "ನಿನ್ನ ತಂದೆ ಬೇಗ ಬರುತ್ತಾನಂತೆ. ಈಗ ಅವನು ಸೊರಬಕ್ಕೆ ಹೋಗಿದ್ದಾನೆ. ಇನ್ನು ಮುಂದೆ ಅಲ್ಲಿಯೇ ಇರುವುದಂತೆ"ಎಂದನು. ಚಂದಪ್ಪನಿಗೆ ಅಜ್ಜಿ ತೀರಿಕೊಂಡ ವರ್ತ ಮಾನವನ್ನು ಹೇಳಿ, ಅವನನ್ನು ನೋಯಿಸುವುದಕ್ಕೆ ಇಷ್ಟವಾಗಲಿಲ್ಲ. ಚಂದಪ್ಪ ಪ್ರತಿಯಾಗಿ, "ಅಪ್ಪ ಬರುತ್ತಾನಲ್ಲ—ಮತ್ತೇನಿಲ್ಲವೇ? ಹಾಗೆ ಬರುವ ಮನಸ್ಸಿದ್ದರೆ ನಿಮ್ಮೊಟ್ಟಿಗೆ ಬರುವುದಿಲ್ಲವೇ? ನನ್ನನ್ನು ಯಾರೂ ಕರೆಯಲು ಬರುವುದು ಬೇಡ, ನಾನು ಇಲ್ಲಿಯೇ ಇರುತ್ತೇನೆ" ಎಂದನು. ಆತನ ರೆಪ್ಪೆಮುಡಚಿತು; ತುಟಿ ಮೊನಚಾಯಿತು. ಅದನ್ನು ಕಂಡು ರಾಧಾ ಕೃಷ್ಣ "ಬೇಸರ ಮಾಡಬೇಡ, ಮಗು, ಜೈಲಿನಿಂದ ಬಂದವನು ಊರಿಗೆ ಬಂದು ಅಲ್ಲಿಂದ ಸೊರಬಕ್ಕೆ ಹೋದ. ಆ ಮೇಲೆ ಸಿಕ್ಕಿಲ್ಲ. ನಾವು ಇಲ್ಲಿಗೆ ಬರುವುದೂ ಅವನಿಗೆ ಗೊತ್ತಿಲ್ಲ" ಎಂದನು.

"ಹಾಗಾದರೆ ನನ್ನನ್ನು ಅಜ್ಜಿಯಿದ್ದಲ್ಲಿಗಾದರೂ ಕಳುಹಿಸುತ್ತೀರಾ?"

"ಇಲ್ಲಿ ಬೇಸರವಾಗುತ್ತದೆಯೇ?"

"ಹಾಗೇನೂ ಬೇಸರವಿಲ್ಲ. ಆದರೆ ಆಗಾಗ ಅಜ್ಜಿಯ ನೆನಪು, ಮನೆಯ ನೆನಪು ಆಗುತ್ತದೆ. ಒಮ್ಮೆ ಹೋಗಿ ನೋಡಿಬಂದರೂ ಸಾಕು."

"ಆಗಲಿ, ಹಾಗೆಯೇ ಮಾಡುವ"

''ಆಗಲೂ ಅಜ್ಜಿಯ ವಿಷಯವನ್ನು ಹೇಳುವುದಕ್ಕೆ ರಾಧಾಕೃಷ್ಣನಿಗೆ ಬಾಯಿ ಬರಲಿಲ್ಲ. ನಾಳೆ ದಿವಸ ವಿರಾಮವಾಗಿದ್ದು, ಅವನನ್ನು ಸಮಾ ಧಾನ ಪಡಿಸಿ, ಒಲಿಸಿಕೊಂಡ ಮೇಲೆ ಹೇಳುವ" ಎಂದು ತೋರಿತು. ಈಚಣ್ಣಯ್ಯ, ಮಹಾಬಲನವರು ಮಕ್ಕಳೊಡನೆ ಮಾತನಾಡುತ್ತ ಇದ್ದರು. ಶ್ಯಾಮನು "ಕಿಟ್ಟಣ್ಣ ಹೇಗಿದ್ದಾನೆ? ನೀವು ಅವನನ್ನು ಕರೆದುಕೊಂಡು ಬರಲಿಲ್ಲವೇಕೆ?" ಎಂದನು.

"ಅವನು ಈಗ ಚೆನ್ನಾಗಿ ಇದ್ದಾನೆ. ಅವನ ತಾಯಿ ಹುಶಾರಾಗಿ ಮನೆಗೆ ಬಂದಿದ್ದಾಳೆ. ಅವಳು ಜೈಲಿನಿಂದ ಬರುವಾಗ ಬದುಕುತ್ತಿದ್ದಳೋ,

ಇಲ್ಲವೋ ಎಂಬ ಅನುಮಾನ ನನಗಿತ್ತು. ಅದಕ್ಕಲ್ಲವೇ, ಕಿಟ್ಟಣ್ಣನನ್ನು ತಾಯಿಯ ಹತ್ತಿರ ಕರೆದುಕೊಂಡು ಹೋದುದು" ಎಂದರು ಈಚಣ್ಣಯ್ಯ.

"ಇನ್ನು ಇವರೆಲ್ಲರನ್ನು ಕರೆದುಕೊಂಡು ಹೋಗುತ್ತೀರಾ?"

"ಹಾಗೆಂದು ಯೋಚನೆ—ಮತ್ತೇನಾಗುತ್ತದೆಯೋ?"

"ಶ್ಯಾಮನ ಮುಖ ಸಪ್ಪಗಾಯಿತು. ಇಷ್ಟು ದಿನ ತುಂಬಿಕೊಂಡಿದ್ದ ಆ ಮನೆಯು ತಿರುಗಿ ಬರಿದಾಗುವುದು, ಅವನಿಗೆ ರುಚಿಸದಾಯಿತು. ಅಣ್ಣನ ಬರುವಿಕೆಯಿಂದಾದ ಸಂತೋಷವು, ಈ ಯೋಚನೆಯಿಂದ ಸಪ್ಪಟವಾಯಿತು. ಅಲ್ಲದೆ ಅಣ್ಣ, ಹಿಂದಿನ ಬಾರಿಯಂತೆ, ಮರುದಿನವೇ ಹೊರಟು ಹೋದಾನೆಯೇ—ಎಂಬ ಆತುರವೂ ಉಂಟಾಯಿತು.

ರಾಧಾಕೃಷ್ಣನು ಒಂದಿಷ್ಟು ತಣ್ಣೀರನ್ನೆರೆದುಕೊಂಡು, ಪ್ರವಾಸದ ಬೇಗೆಯನ್ನು ಕಳೆದು, ಚಂದ್ರನನ್ನು ಎತ್ತಿಕೊಂಡು ಅಡುಗೆಯ ಮನೆಗೆ ಹೋದನು. ಒಲೆಯ ಮುಂದೆ ಕುಳಿತು ಪಟ್ಟಾಗಿ ಮಾತಿಗೆ ತೊಡಗಿದನು. "ಹೇಗಿದ್ದೀ ಸತ್ಯ? ನಾನು ಊರಿಗೆ ಬರಲಿಕ್ಕೇ ಇಲ್ಲ ಎಂದು ತಿಳಿದಿರಲಿಲ್ಲವೇ" ಎಂದು ಪರಿಹಾಸ್ಯಮಾಡಿದನು.

"ಅಲ್ಲ, ಬೇಗ ಬರುತ್ತೇನೆಂದವರು ವರ್ಷ ಸಂದ ಮೇಲೆ ಬರುವುದೇ?" ಎಂದು ಹೇಳಿ ಅವಳು ನಕ್ಕಳು.

"ವರ್ಷವಾಯಿತೇ ಈಗ"

"ಊಹೊಂ, ವರ್ಷಕ್ಕೆ ಇನ್ನೂ ಎರಡು ತಿಂಗಳು ಉಳಿದಿವೆ. ಈ ಸಾರಿ ಎಂದು ಹೊರಡುವುದು? ರಾತ್ರಿ ಊಟವಾದ ಮೇಲೆಯೋ, ನಿದ್ರೆಯಾದ ಮೇಲೆಯೋ" ಎಂದು ಕೇಳಿದಳು. ಆ ಮಾತಿನಲ್ಲಿ ಮಾತ್ರ ನಗು ಬೆರತಿರಲಿಲ್ಲ. ನಿರೀಕ್ಷೆಯು ತುಂಬಿತ್ತು.

"ಬೇಸರವಾಗಿರಬೇಕು ನಿನಗೆ, ನಾನಿಲ್ಲದೆ"

"ಆಗದೆ ಇರುತ್ತದೆಯೇ? ನಮ್ಮವರೆಂಬವರು ಯಾರು ಇದ್ದಾರೆ ಇಲ್ಲಿ?"

"ಏನು ಮಾಡಲಿ ಸತ್ಯ, ಆ ಗ್ರಾಮಗಳ ಸ್ಥಿತಿಯನ್ನು ನೆನೆದರೆ ಒಂದು ದಿನವೂ ಬಿಟ್ಟು ಏಳುವುದಕ್ಕೆ ಮನಸ್ಸು ಬರುವುದಿಲ್ಲ. ಈಗ ಏನೋ ಒಂದು ಹಂತಕ್ಕೆ ಬಂದು ನಿಂತಿದೆ. ಜೈಲಿಗೆ ಹೋದವರೆಲ್ಲರೂ ಹಿಂದಿರುಗಿ ಬಂದಿದ್ದಾರೆ. ಹೇಗೂ ಮುಂದಿನ ಬದುಕನ್ನು ಸಾಗಿಸಿಕೊಂಡು

ಹೋದಾರು. ನಾನು ಅಲ್ಲಿದ್ದು ಹೆಚ್ಚಿನ ಏನನ್ನು ಮಾಡುವಂತೆಯೂ ಇಲ್ಲ ಹೀಗಾಗಿ ತಿರುಗಿ ಹೋಗುವುದಿಲ್ಲ. ನಿನಗೆ ಉಮೇದವಿದ್ದರೆ ಒಂದು ಸಾರಿ, ಆಲೆಮನೆ, ಕುಂದಾಪುರಗಳನ್ನೆಲ್ಲ ನಾವು ಸುತ್ತಾಡಿ ಕೊಂಡು ಬರುವ"

"ನೀವು ಬಂದಿರಲ್ಲವೆ, ನನಗೆ ಅದೇ ಸಾಕು. ತಿರುಗಾಟ, ಗಿರುಗಾಟ ಸದ್ಯಕ್ಕೆ ಬೇಡ. ಒಂದು ಸಾರಿ ಆಲೆಮನೆಗೆ ಹೋಗಬೇಕೆಂದಿದೆ—ಅದೂ ಅಪ್ಪನ ಸಮಾಧಾನಕ್ಕಾಗಿ. ಒಮ್ಮೆ ಅಮ್ಮನ ಮುಖನೋಡುವ ಆಸೆಗಾಗಿ. ಮತ್ತೆ ನನಗೆ ಎಲ್ಲಿ ಹೋಗಬೇಕೆಂಬ ಆಸೆಯೂ ಇಲ್ಲ. ಯಾವ ಊರಿನಲ್ಲಿ ಏನಿದೆಯಂತೆ?"

"ಅದು ಸರಿಯೇ. ಅದೂ ಊರು, ಇದೂ ಊರು" ಎಂದು ನಕ್ಕನು.

ಅವನ ಮನಸ್ಸು ಮಾತ್ರ "ಇದು ಪೇಟೆ ಸಮೀಪದ ಊರು, ಅದು ಕಗ್ಗಾಡಿನ ಹಳ್ಳಿ. ಅಲ್ಲಿ ಸ್ವಲ್ಪ ಹೆಡ್ಡರು ಹೆಚ್ಚಿಗೆ. ಇಲ್ಲಿ ಸ್ವಲ್ಪ ಬುದ್ಧಿವಂತರು ಜಾಸ್ತಿ" ಎಂದು ಪರಿಹಾಸ್ಯಮಾಡುವುದರಲ್ಲಿತ್ತು.

ಒಲೆಯ ಮುಂದೆ ಒಗ್ಗರಣೆ ಚುಂಯಿಗುಡುತ್ತಲೆ, ರಾಧಾಕೃಷ್ಣ ಶ್ಯಾಮನನ್ನು ಕರೆದು 'ಅವರನ್ನು ಸ್ನಾನಕ್ಕೆ ಕರೆದುಕೊಂಡು ಹೋದೆಯಾ, ಊಟಕ್ಕೆ ಆಯಿತು' ಎಂದು ಹೇಳಿದ. ಇಷ್ಟೆಲ್ಲ ಸಮಯ ಮಗುವನ್ನು ಹಿಡಿದು ಕಾಲಲ್ಲಿ ಜೋಕಾಲಿಮಾಡಿ, ನಿದ್ದೆ ಮಾಡಿಸುತ್ತಿದ್ದ. ಚಂದ್ರನಿಗೆ ನಿದ್ದೆ ಹತ್ತಿದುದರಿಂದ, ಚಾಪೆಯ ಮೇಲೆ ಮಲಗಿಸಿ, ಸ್ನೇಹಿತರನ್ನು ಕರೆಯಲು ಹೋದ. ಅವರು ಸ್ನಾನ ಮಾಡಿ ಊಟದ ಮನೆಗೆ ಬಂದರು. ಊಟ ಪ್ರಾರಂಭವಾಯಿತು.

"ಹೋ, ಊಟ ಜೋರಾಗಿಯೇ ಇದೆ. ಇಷ್ಟೆಲ್ಲ ತರಕಾರಿ ಎಲ್ಲಿಂದ ಸಂಪಾದಿಸಿರಿ ಅಮ್ಮಾ?" ಎಂದರು ಈಚಣ್ಣಯ್ಯ.

ಸತ್ಯ "ಮನೆಯಲ್ಲಿಯೇ ಬೆಳದದ್ದು. ಇಲ್ಲಿ ಸಂಪಾದಿಸುವ ಹಾಗೂ ಇಲ್ಲ. ಕೊಳ್ಳುವ ಹಾಗೂ ಇಲ್ಲ. ನಿಮ್ಮ ಮಕ್ಕಳನ್ನೇ ಕೇಳಿ—ಕಾಯಿ ಸಲ್ಯ ಬೆಳೆಯುವ ಕಷ್ಟ ಅವರಿಗೆ ಚೆನ್ನಾಗಿ ಗೊತ್ತಾಗಿದೆ" ಎಂದಳು.

"ಅಷ್ಟು ಮಾಡದಿದ್ದರೆ ಹೇಗೆ? ನಾವು ಹಳ್ಳಿಯಲ್ಲಿ ಅದನ್ನೇ ಮಾಡುವವರು. ಇಲ್ಲಿ ಬೆಳೆಯಲು ಕಲಿತದ್ದು, ನಾಳೆ ನಮಗೂ ಒಂದು ಚೂರು

ಸಿಗುವಂತೆ ಮಾಡೀತು. ನಮ್ಮಂಥವರು ಕಗ್ಗಾಡಿನಲ್ಲಿ ದೊಡ್ಡವರಾಗಲೀ, ಸಣ್ಣವರಾಗಲೀ, ಕೈ ಕಟ್ಟಿಕುಳಿತರೆ ದಿನ ಹೋಗಲಾರದು."

ಸತ್ಯಳಿಗೆ ಅದುವೇ ಒಂದು ಸಮಾಧಾನ—ತಮ್ಮ ಮಕ್ಕಳನ್ನು ದಣಿಸಿ, ದುಡಿಸಿದರು.—ಎಂಬ ಅಪವಾದವು ಎಲ್ಲಿ ಬರುತ್ತದೆಯೋ ಎಂದು ಅವಳು ಯೋಚಿಸಿದ್ದಳು. ತಾವೆಲ್ಲ ಹಾಗೆ ದುಡಿಯದಿದ್ದರೆ ದಿನ ಹೋಗುವುದೂ ಕಷ್ಟವಿತ್ತು. ಈಗ ಈ ಚಣ್ಣಯ್ಯನವರ ಮಾತನ್ನು ಕೇಳಿ ಅವಳಿಗೆ ಭರವಸೆಯಾಯಿತು. "ಇವರು ಹಾಗೆ ದೂರುವ ಜನರಲ್ಲ" ಎಂಬ ಧೈರ್ಯವಾಯಿತು.

ಆ ರಾತ್ರಿ ಸತ್ಯನಿಗೆ ನಿದ್ರೆಯೇ ಬರಲೊಲ್ಲದು. ಮನಸ್ಸಿನಲ್ಲಿ ಉಕ್ಕಿ ಬರುತ್ತಿರುವ ಸಂತೋಷ, ನೂರಾರು ಸವಿಗನಸುಗಳು ನಲಿದಾಡುತ್ತಿವೆ. ನಾಳಿನ ಚಿಂತೆ ಎಂಬುದು ಒಮ್ಮಿಂದೊಮ್ಮೆಗೆ ಮಾಯವಾಗಿದೆ. ತನ್ನ ಮೇಲಿನ ಹೊರೆಯನ್ನು ಈ ತನಕ ಹೇಗೂ ನಿರ್ವಹಿಸಿಬಂದುದಕ್ಕಾಗಿ ತುಂಬ ಸಮಾಧಾನವಾಯಿತು. ಆ ರಾತ್ರಿಯೆಲ್ಲವೂ ಪತಿಯನ್ನು ವಿವಿಧ ಪ್ರಶ್ನೆಗಳಿಂದ ಕಾಡಿದಳು. "ಆ ಊರಿನ ಕಥೆಯನ್ನು ಹೇಳಿ; ಒಂದೂ ಬಿಡದಂತೆ ನಮಗೆ ಹೇಳಿ. ಅವರಾದರೆ ಬದುಕಿದ್ದಕ್ಕೆ ಸಾರ್ಥಕವಾಯಿತು" ಎಂದಳು. ಅವರ ಸಾಹಸವನ್ನು ಕೇಳಿದಷ್ಟು ಹೆಮ್ಮೆಯಾದಂತೆ ಈಗಣ ದುಃಸ್ಥಿತಿಗಾಗಿ ಮರುಗಿದಳು. ನಾಳೆ ಇಲ್ಲಿಂದ ಹೊರಟು ಹೋಗುವ ಮಕ್ಕಳು, ಅಲ್ಲಿ ಇನ್ನು ಎಂಥ ಒದ್ದಾಟಕ್ಕೆಲ್ಲ ಗುರಿಯಾಗಬೇಕೋ ಎಂದು ಕನಿಕರಪಟ್ಟಳು. ಆಯಾಸಪಟ್ಟು ಮಲಗಿದ ಪತಿರಾಯ, ದೊಡ್ಡ ಉಸಿರನ್ನು ತೆಗೆಯುವುದು ಸಹ ಅವಳಿಗೆ ಕೇಳಿಸುತ್ತಲಿಲ್ಲ. ಒಂದೇ ಸವನೆ ಮಾತನಾಡುತ್ತಿದ್ದಳು. ರಾಧಾಕೃಷ್ಣ ನಡುನಡುವೆ ಅರ್ಧ ಎಚ್ಚರದಿಂದ, 'ಹಾ, ಹೊಂ', ಎನ್ನುತ್ತಿದ್ದ. ಆಕೆ ಬಿಟ್ಟು ಹೋಗುವ ಮಕ್ಕಳನ್ನು ನೆನೆದು ಅವರ ಗುಣಗಾನ ಮಾಡುತ್ತಿದ್ದಳು. "ಮಹಾದೇವನೆಂದರೆ ಇದನ್ನು ತನ್ನ ಮನೆಯೆಂದೇ ತಿಳಿದುಕೊಂಡಿದ್ದಾನೆ. ಒಂದಿಷ್ಟೂ ಬೇಸರಪಟ್ಟಿಲ್ಲ. ನಮ್ಮನ್ನೂ ಬೇಸರಗೊಳಿಸಲಿಲ್ಲ. ಇನ್ನು ಗಂಗೆ ಶಾರದೆಯರು ಕಡಿಮೆಯೇ? ಸದಾ ನನ್ನ ಹಿಂದೆಯೇ ಓಡಾಡುತ್ತಿದ್ದರು. 'ಅಕ್ಕ', 'ಅಕ್ಕ' ಎಂದು ನನ್ನನ್ನು ಕರೆದು ಪ್ರೀತಿಸಿದಷ್ಟೂ ತೃಪ್ತಿ ಇಲ್ಲ ಅವರಿಗೆ. ಇನ್ನು ಕಿಟ್ಟಪ್ಪನಾಗಲೀ, ಚಂದಪ್ಪನಾಗಲೀ ತೆಗದಿರಿಸುವ ಮಕ್ಕಳು ಒಂದೂ ಅಲ್ಲ.

ಅವರೆಲ್ಲ ಹೊರಟು ಹೋದರೆ, ಈ ಮನೆ ಬರಿದಾಗಿ ಕಂಡೀತು. ಹೊತ್ತೇ ಹೋಗಲಾರದು. ಇಷ್ಟು ದಿನ ಆಶ್ರಮವೆಂದು ಹೆಸರಿಟ್ಟದ್ದಕ್ಕೆ ಇಷ್ಟು ಮಕ್ಕಳಿದ್ದದ್ದು ಸಾರ್ಥಕವಾಗಿತ್ತು. ಇನ್ನೆಲ್ಲವನ್ನು ಬುಡದಿಂದಲೇ ತೊಡಗ ಬೇಕು." ಎನ್ನುತ್ತಿದ್ದಳು. ಕಟ್ಟಕೊನೆಗೆ ತನ್ನ ಪತಿಗೆ ಗಾಢವಾದ ನಿದ್ರೆ ಬಂದಿದೆ ಎಂದು ಗೊತ್ತಾಯಿತು. ಆತನ ತಲೆಗೂದಲನ್ನು ಸವರುತ್ತ, ಬಹುಹೊತ್ತು ತನ್ನಲ್ಲಿ ತುಂಬಿ ತುಳುಕುತ್ತಿದ್ದ ಪ್ರೇಮಾದರಗಳಿಗೆ ವ್ಯಕ್ತ ರೂಪವನ್ನು ಕೊಟ್ಟಳು.

ರಾತ್ರಿಯು ಕಳೆದು ಬೆಳಗಾಯಿತು. ಈಚಣ್ಣಯ್ಯನವರು ಮುಖ ತೊಳೆದು ಬಂದವರೇ "ಹೊಂ—ನಾವು ಎಂದು ಹೊರಡುವುದೆಂದು ಕೇಳಿ" ಎಂದರು. ಅದಕ್ಕೆ ರಾಧಾಕೃಷ್ಣ "ಏನಷ್ಟು ತರಾತುರಿ ನಿಮಗೆ? ನಿಮ್ಮಲ್ಲಿ ನಾನು ವರ್ಷಗಟ್ಟಲೆ ಇರಲಿಲ್ಲವೇ? ಬಂದ ಮರುದಿನವೇ ಹೊರಡುವುದೇ? ಒಂದು ವಾರವಾದರೂ ಇಲ್ಲಿರಬೇಕು. ಹೇಗೂ ಬಂದಿದ್ದೀರಿ. ಇನ್ನು ಆಗಾಗ ಬರುವುದುಂಟೇ? ಮಂಗಳೂರು ಉಡುಪಿ ಇವುಗಳನ್ನೆಲ್ಲ ನೋಡಿ ಕೊಂಡು ಹೋಗುವಿರಂತೆ" ಎಂದು ಬಲವಂತ ಮಾಡಿದನು.

"ಆಗಲಿ" ಎಂದರು. ಒಂದೆರಡು ದಿವಸ ಹಟ್ಟಿಯಿಂದ ಹಿಡಿದು ಹಿತ್ತಲಿನ ತನಕ, ಪದವಿನಿಂದ ಹಿಡಿದು ನದಿಯ ತನಕ ಅಲೆದಾಡಿದರು. ರಾಧಾಕೃಷ್ಣ ಅವರನ್ನು ಗ್ರಾಮದ ಗುರುತಿನ ಮನೆಗಳೆಲ್ಲವಕ್ಕೂ ಕರೆದು ಕೊಂಡು ಹೋದನು. ಊರ ಜನಗಳ ಮುಂದೆ "ನೋಡಿ, ಇವರ ಊರಿನವರು ಏನೇನು ಕಾರುಭಾರು ಮಾಡಿದರು ಗೊತ್ತೇ? ಈ ಈಚಣ್ಣ ಯ್ಯನವರ ಹೆಂಡತಿ ಸಹ ಜೈಲಿಗೆ ಹೋಗಿ ಬಂದರು. ಎಷ್ಟೋ ಜನ ಮನೆ ಮಾರುಗಳನ್ನು ಕಳೆದುಕೊಂಡರು. ಸ್ವಾರ್ಥ ತ್ಯಾಗ, ದೇಶಸೇವೆ ಎಂದರೆ ಅದು" ಎಂದು ಅವರನ್ನು ಆದರ್ಶವಾಗಿ ಬಣ್ಣಿಸಿದನು.

ರಾಮಣ್ಣ,ಮಾಸ್ತರರ ದರ್ಶನದಿಂದ ತುಂಬ ಸಂತೋಷಗೊಂಡನು. "ಮಾಸ್ತರರೇ, ಅವರ ಊರಿಗೆ ಅವರಿದ್ದಾರೆ. ನಮ್ಮೂರಿಗೆ ನೀವಿಲ್ಲವೇ? ಎಲ್ಲರ ಪ್ರತಿನಿಧಿಯ ಹಾಗೆ" ಎಂದು ಎಲ್ಲರನ್ನೂ ನಗಿಸಿದನು. "ಅಷ್ಟೇ ರಾಮಣ್ಣ. ನಮ್ಮ ಊರವರಿಗೆ ಬೆರಳು ತೋರಿಸುವುದಕ್ಕೆ ಒಬ್ಬರು ಸಿಕ್ಕಿ ದರೆ ಸಾಕು" ಎಂದು ನಕ್ಕು ನುಡಿದ. ಅವನಿಗೆ ರಾಮಣ್ಣನ ಸಹಾಯದ ಮರವೆ ಆಗಿರಲಿಲ್ಲ; "ರಾಮಣ್ಣಾ, ಬಂದಿದ್ದೇನೆ ನಿನ್ನೆ……..ಇನ್ನು ಊರ

ಲ್ಲಿಯೇ. ನೀನು ನನ್ನ ಮೇಲೆ ದೊಡ್ಡ ಹೊರೆಯನ್ನು ಹೊರಿಸಿ ಇಟ್ಟಿ ದ್ದೀಯಾ. ಆದಷ್ಟು ಬೇಗ ನಿನ್ನ ಋಣ ತೀರಿಸುತ್ತೇನೆ. ಸದ್ಯ, ಮುಂದಿನ ಯೋಚನೆಯನ್ನು ನಾನೇನೂ ಮಾಡಿಲ್ಲ" ಎಂದನು.

ಮತ್ತೊಂದು ದಿನ ಎಲ್ಲರೂ ಸೇರಿ ಮಂಗಳೂರು ನಗರವನ್ನು ಸುತ್ತಿ ಕೊಂಡು ಬಂದರು. ಆ ಮಕ್ಕಳನ್ನು ಕರೆದುಕೊಂಡು, ನದಿ, ಕಡಲು, ಕದ್ರಿಯ ದೇವಾಲಯ, ಕಾರ್ಖಾನೆಗಳು, ಎಲ್ಲವನ್ನೂ ನೋಡಿಕೊಂಡು ಬಂದರು. ಈಚಣ್ಣಯ್ಯ "ನಾನು ಹಿಂದಿನ ಸಾರಿ ಬಂದಾಗ, ಮಂಗಳೂರು ಪೇಟೆ ಇಷ್ಟೊಂದು ದೊಡ್ಡದೆಂದು ಕಾಣಿಸಲೇ ಇಲ್ಲ. ಅನೆಲ್ಲ ತಿರುಗಾಡಿಯೇ ಗೊತ್ತಾಗಬೇಕು. ಕೋರ್ಟು ಗುಡ್ಡದಿಂದ ನೋಡಿದರೆ, ಇಡೀ ಊರು ಒಂದು ತೆಂಗಿನ ತೋಟವಾಗಿ ಕಾಣುತ್ತದೆಯಲ್ಲವೇ? ರಸ್ತೆಗಳು ಎಷ್ಟು, ಮನೆಗಳು ಎಷ್ಟು, ಜನವಸತಿಗಳೆಷ್ಟಿರಬಹುದು, ಎಂದು ಅಂದಾಜೇ ಆಗು ವುದಿಲ್ಲ" ಎಂದರು.

ಅಲೆದಾಡುತ್ತಿರುವಾಗ, ಕಿರಿಯರ ಗುಂಪಿಗೆ ಶ್ಯಾಮಣ್ಣ ನಾಯಕನಾ ಗಿದ್ದ. ಹಿರಿಯರಲ್ಲಿ ರಾಧಾಕೃಷ್ಣ, ಈಚಣ್ಣಯ್ಯರಿಬ್ಬರೇ ಮಾತುಗಾರರು. ಅವರಲ್ಲಿ ಬಳಕೆ, ಸ್ನೇಹಗಳೆರಡೂ ಅಧಿಕವಾಗಿದ್ದುವು. ಆದರೂ ಮಾತಿಗೆ ಎಂದಿಗೂ ಹಿಂದಾಗುವವರಲ್ಲದ ಮಹಾಬಲಯ್ಯ, ಯೋಚನೆಗಳಿಂದಾಗಿ ತುಂಬ ಮೂಕರಾಗಿದ್ದಾರೆ. ಅವರ ಕಣ್ಣೆದುರಿನ ನೋಟಗಳು, ಕಿವಿಗೆ ಬೀಳುವ ನಾದಗಳು, ಯಾವ ಪರಿಣಾಮವನ್ನೂ ಮಾಡುತ್ತಲಿಲ್ಲ. ಆಗಾಗ ರಾಧಾಕೃಷ್ಣ ಸಹಾನುಭೂತಿಯಿಂದ "ಏನು, ಯೋಚಿಸುತ್ತಿದ್ದೀರಿ. ಬೇಸ ರವೇ" ಅಂದರೆ ಅವರು "ಏನಿಲ್ಲ—ಏನೋ ಬಂದಿತು ತಲೆಗೆ" ಅನ್ನುತ್ತಾ ರೆಯೇ ಹೊರತು, ತಮ್ಮನ್ನು ಅಲ್ಲೋಲಕಲ್ಲೋಲ ಮಾಡುತ್ತಿದ್ದ ವಿಚಾರ ಗಳನ್ನು ಕುರಿತು, ಹೃದಯವನ್ನು ಬಿಚ್ಚುತ್ತಲೇ ಇದ್ದಿಲ್ಲ.

ಮಂಗಳೂರನ್ನು ನೋಡಿಕೊಂಡು ತಿರುಗಿ ಕಿರಿಪದವಿಗೆ ಬಂದರು. ಈಚಣ್ಣಯ್ಯ ಒಮ್ಮೆ "ನೀವು ಇದನ್ನು ಏನೆಂದು ಶುರುಮಾಡಿದಿರಿ? ಇದನ್ನು ಹೀಗೆಯೇ ನಡೆಯಿಸಿಕೊಂಡು ಹೋಗಲು ಬಂದೀತೇ" ಎಂದರು. "ಇನ್ನು ಎಲ್ಲವನ್ನೂ ಯೋಚಿಸಿಯೇ ಆಗಬೇಕು. ಯಾವುದೋ ರೀತಿ ಯಲ್ಲಿ ಇದು ಶುರುವಾಯಿತು. ಇನ್ನು ಯಾವುದೋ ರೀತಿಯಲ್ಲಿ ಇದು ನಡೆದುಕೊಂಡು ಬಂದಿತು. ನನ್ನ ಮನಸ್ಸಿನಲ್ಲೇನೋ, ನೂರು ಯೋಚ

ನೆಗಳು ಬರುತ್ತಿವೆ, ಹೋಗುತ್ತಿವೆ. ಕಾರ್ಯಕ್ಕೆ ಬರುವಾಗ ನೂರರಲ್ಲಿ ಒಂದೂ ಸಾಧಿಸುವುದಿಲ್ಲ.” ಎಂದು ತನ್ನ ಅನಿಶ್ಚಿತದ ಭವಿಷ್ಯವನ್ನು ಕುರಿತು ಹೇಳಿದನು. ಪಾರ ಕಳೆಯುತ್ತಲೇ, ಈಚಣ್ಣಯ್ಯ “ಆಗಲಿ, ಇನ್ನು ನಮಗೆ ಅಪ್ಪಣೆಕೊಡಿಸಿ; ಈ ದಿನ ಸಂಜೆ ಮಂಗಳೂರಿಗೆ ಹೋಗಿದ್ದು, ಅಲ್ಲಿಂದ ನಾಳೆ ಹೊರಡುತ್ತೇವೆ’ ಎಂದರು.

“ನೀವು” ಎಂದು ಮಹಾಬಲ ಭಟ್ಟರನ್ನು ನೋಡಿ ರಾಧಾಕೃಷ್ಣ ಕೇಳಿದ.

“ಇಲ್ಲೇ ಬಿಡಾರ ಮಾಡುವುದೇ? ವಿಧಿ ಯಾವ ಊರಿನ ನೀರಿನ ಋಣ ಬರೆದಿದ್ದಾನೋ, ಅಲ್ಲಿಗೆ ಹೋಗುವುದು.”

“ನೀವು ಹಾಗೆ ನಿರಾಶೆಗೊಳ್ಳಬಾರದು. ನೀವು ಒಂದು ದೊಡ್ಡ ಕೆಲಸಕ್ಕಾಗಿ ಅಷ್ಟೇ ದೊಡ್ಡ ತ್ಯಾಗಮಾಡಿದಿರಿ. ತ್ಯಾಗಮಾಡಿದ ಮೇಲೆ, ಆ ಕೆಲಸಮಾಡಿ ಕೆಟ್ಟೆನಲ್ಲಾ—ಎಂದು ಎಂದಿಗೂ ತಿಳಿಯಬಾರದು. ಇಂಥ ದೊಡ್ಡ ಕೆಲಸವು, ಸಾವಿರ ಜನ ಕೈಸುಟ್ಟುಕೊಳ್ಳದೆ ಆಗುವ ಕೆಲಸವಲ್ಲ.”

“ಇದು ಕೈಸುಟ್ಟುಕೊಂಡದ್ದಲ್ಲ; ಮನೆಸುಟ್ಟುಕೊಂಡ ಮೂರ್ಖತನ” ಎಂದರು ತಮಗೆ ತಾವೇ ಈಚಣ್ಣಯ್ಯ “ಮಹಾಬಲ, ಆದದ್ದನ್ನು ಯೋಚಿಸಬಾರದು. ಇವರನ್ನು ನೋಡಿದೆಯಲ್ಲ ನೀನು. ತಮ್ಮ ಸ್ವಂತ ಮನೆ ಇರುತ್ತ, ಇಲ್ಲಿಗೆ ಬಂದು ಕುಳಿತರು. ತಮಗೆ ಎಷ್ಟು ಕಷ್ಟವಾದರೂ, ಪರರ ಕಷ್ಟಕ್ಕೆ ಹೆಗಲುಕೊಟ್ಟರು. ನೀನು ನಾನು—ನಮ್ಮ ಕಷ್ಟಕ್ಕೆ ಹೆಗಲುಕೊಡಲು ಹೆದರಿದರೆ ಹೇಗೆ? ಸಾಗರದ ಯೋಚನೆಯನ್ನು ಬಿಟ್ಟು ಊರಿಗೆ ಬಂದುಬಿಡು. ನಿನಗೆ ಒಪ್ಪಿಗೆಯಾದರೆ ನಮ್ಮ ಮನೆಯಲ್ಲಿರು; ಇಲ್ಲವಾದರೆ ಗೋಪಣ್ಣನ ಮನೆಯಲ್ಲಿರು. ಒಟ್ಟಿಗೆ ಕಷ್ಟವೋ, ಸುಖವೋ, ಊರಲ್ಲಿದ್ದು ಅನುಭವಿಸುವ” ಎಂದರು.

“ಅನುಭವಿಸುವುದು ಅನುಭವಿಸುವುದೇ. ನಮ್ಮ ಪಾಲಿಗೆ ಇನ್ನು ಸುಖವಿದೆ ಎಂಬುದು ತಿಳಿಯುವುದು ಭ್ರಮೆ. ಕಳೆದ ಆಸ್ತಿ ನಮ್ಮ ಕೈಗೆ ಬರುತ್ತವೆ ಎಂದು ನನಗೆ ಅನಿಸುವುದಿಲ್ಲ. ಪರರಲ್ಲಿ, ಗೇಣಿಯ ಒಕ್ಕಲಾಗಿ ನಿಂತು ದಿನ ತೆಗೆಯಬೇಕು. ಆ ಜೀವನ ಏನೆಂದು ಗೊತ್ತೇ ಇದೆಯಲ್ಲ”.

“ಹಾಗಾದರೆ ಸಾಗರವೇ ಗಟ್ಟಿಯೆಂದು ಹೇಳುತ್ತೀಯಾ?”

ಸಾಗರಬೇಡ ಮಹಾರಾಯ, ಯಾವ ನೆಂಟರ ಹಂಗೂ ನನಗೆ ಬೇಡ. ಇನ್ನು ಗೋಪಣ್ಣನಲ್ಲಿಗೆ ಹೋಗಿ, ದಾಯಾದಿಗಳಲ್ಲಿ ಜಗಳ ತರುವುದು ಬೇಡ. ನಾನು ಒಬ್ಬನೇ ನಾಲ್ಕೂರು ಸುತ್ತಿ ಬರುತ್ತೇನೆ. ವಾಯಿದೆ ಗೇಣಿಗಾದರೆ ವಾಯಿದೆಗೆ, ಮೂಲಗೇಣಿಗಾದರೆ ಮೂಲಗೇಣಿಗೆ, ಒಂದು ಚೂರು ಹೊಲಮನೆ ಸಿಗುತ್ತದೆಯೇ ಎಂದು ನೋಡುತ್ತೇನೆ. ಇನ್ನು ಏನನ್ನು ಅನುಭವಿಸುವುದಾವರೂ, ಗುರುತಿನವರೂ, ನಂಟರೂ, ಇಲ್ಲದ ಠಾವುಠಿಕಾಣಿ ಕಂಡು ಬದುಕಬೇಕೆಂಬ ಆಸೆ"

ಈ ಮಾತುಗಳನ್ನು ಕೇಳುತ್ತ ರಾಧಾಕೃಷ್ಣ ಅಲ್ಲಿಯೇ ಕುಳಿತಿದ್ದ. ಮಹಾಬಲಯ್ಯ ಕೊನೆಗಾದರೂ ತಮ್ಮ ಹೃದಯ ಬಿಚ್ಚಿದ್ದನ್ನು ಕಂಡು ಆತನೆಂದ "ಮಹಾಬಲಯ್ಯ, ನೀವು ಹಾಗೆಯೇ ಮಾಡಿ. ಯೋಗ್ಯ ಭೂಮಿ ಸಿಗುತ್ತದೆಯೇ ಎಂದು ನೋಡಿ ಬನ್ನಿ. ನಿಮ್ಮ ಮಕ್ಕಳು ಇಲ್ಲಿ ಸುಖವಾಗಿದ್ದಾರು ಎಂದು ಸಮಾಧಾನವಾದರೆ ಅವರು ಇಲ್ಲಿಯೇ ಇರಲಿ. ಎಲ್ಲಿರುವುದೂ ಎಂದು ತಾವು ನಿಶ್ಚಯವಾದ ವೇಳೆ ಅವರನ್ನು ಕರೆದು ಕೊಂಡು ಹೋಗಿ. ನಿಮಗೆ ಕಷ್ಟವಾದರೆ, ನಾನು ತಂದು ಅವನನ್ನು ಮುಟ್ಟಿಸುತ್ತೇನೆ" ಎಂದನು. ಅವರ ಮನಸ್ಸು ಆ ಕಡೆಗೇನೇ ವಾಲುತ್ತಿತ್ತು.

"ನಾನು ಡಾ। ನಾಡಕರ್ಣಿಯವರಿಗೂ ಒಂದು ಕಾಗದ ಬರೆಯುತ್ತೇನೆ. ಅದನ್ನು ತೆಗೆದುಕೊಂಡು, ನೀವು ಡಾಕ್ಟರರನ್ನು ನೋಡಿ. ಸುಲೇಮಾನ್ ಸಾಹೇಬರಿಗೂ ಅವರಿಗೂ ತುಂಬ ಸ್ನೇಹವಿದೆ, ಪರಿಚಯವಿದೆ. ಅವರು ಒತ್ತಾಯದಿಂದ ಹೇಳಿದರೆ, ನಿಮ್ಮ ಭೂಮಿ ನಿಮಗೆ ಸಿಗಬಹುದು. ಬರಿಯ ಎರಡು ಸಾವಿರಕ್ಕಲ್ಲವೇ ಅದು ಹರಾಜು ಆದದ್ದು. ಅಷ್ಟನ್ನೇನೋ ಅವರಿಗೆ ಕೊಡಬೇಕಾದೀತು. ಆ ಭೂಮಿಯ ಮೇಲೆ ಅಷ್ಟು ಸಾಲ ಕೊಡುವವರು ಇಲ್ಲವೇ?

"ಡಾಕ್ಟರರು ಅಷ್ಟನ್ನು ಮಾಡಿಸಿಕೊಟ್ಟರೆ ಆಗಬಹುದು. ಆದರೆ ಅಷ್ಟು ಅಗ್ಗದಲ್ಲಿ ಸಿಕ್ಕಿದ ಆಸ್ತಿಯನ್ನು ಅವನು ಬಿಟ್ಟು ಕೊಡಬೇಕಲ್ಲ"

"ಬಿಡದೆ ಏನು ಮಾಡುತ್ತಾನೆ? ಭೂಮಿಯೆಲ್ಲವೂ ಹಾಳುಬಿದ್ದಾಯಿತು. ಅದರಗೇಣಿ ವಸೂಲಿಮಾಡುವುದು ಕಷ್ಟ. ಗೋಪಣ್ಣನನ್ನು ಹೊರಡಿಸುವುದಕ್ಕೆ ಸಿವಿಲಿಗೆ ಹೋಗಬೇಕು. ಮನೆಯ ಬತ್ತ ಸುಟ್ಟು ಹೋದಾಗಲೇ ಕಂಗಾಲಾಗಿದ್ದನು ಆತ. ಕೊಟ್ಟ ಹಣ ಸಿಕ್ಕಿದರೆ ದಮ್ಮಯ್ಯ ಹಾಕಿ

ಭೂಮಿಯನ್ನು ಹಿಂದಕ್ಕೆ ಕೊಟ್ಟಾನು. ನಾಡಕರ್ಣಿಯವರಿಗೆ ಗೊತ್ತು ಅವನ ವಿಚಾರ. ನೀವೇನೂ ಯೋಚನೆ ಮಾಡಬೇಡಿ, ಹೋಗಿ."

ಆ ಮಾತನ್ನು ಪುಷ್ಟೀಕರಿಸುತ್ತ ಈಚಣ್ಣಯ್ಯನವರೆಂದರು. "ಮಹಾಬಲ, ಬೇರೆಯವರನ್ನು ನಂಬಿ, ಹೊಸ ಊರಿಗೆ ಹೋಗಿ ಒದ್ದಾಡುವುದು ಸಮನಲ್ಲ. ನೆಟ್ಟಗೆ, ದೇವರ ಮೇಲೆ ಭಾರ ಹಾಕಿ ಶಿರ್ಶಿಗೇ ಹೋಗು. ಆದೀತು ನಿನ್ನ ಕೆಲಸ. ಸಣ್ಣದೊಂದು ಜೋಪಡಿ ಹಾಕಿ ಕುಳಿತುಕೋ. ಸಾಲಮಾಡಿ ಅವನ ಹಣ ಕೊಟ್ಟರೂ, ಗದ್ದೆ ತೋಟ ಎರಡೂ ಇರುವಾಗ ನಿನ್ನ ದಿನದ ಖರ್ಚು ನಡೆದೀತು. ಆ ಮೇಲೆ ಹುಡುಗರನ್ನು ಕರೆದುಕೊಂಡು ಹೋದರಾಯಿತು" ಎಂದರು. ದಾರಿಗಾಣದ ಅವರು, ಹಾಗೆಯೇ ಆಗಲೆಂದರು. ಅಂತೂ ಆ ದಿನದಲ್ಲಿ ಅವರ ಮನಸ್ಸು ಸ್ಥಿಮಿತಕ್ಕೆ ಬಂದಂತೆ ಕಂಡಿತು. ಈಚಣ್ಣಯ್ಯನವರು ಅವರಿಗೆ ಮೇಲಿಂದ ಮೇಲೆ ಒತ್ತಿ ಒತ್ತಿ ಹೇಳುತ್ತಿದ್ದರು. ಆದರೆ ಸಂಜೆಯಾಗುವಾಗ ಮಹಾಬಲಭಟ್ಟರ ನಿರ್ಧಾರ ಸ್ವಲ್ಪ ಬದಲಾಯಿಸಿತು "ಗಂಗೆ, ಶಾರದೆಯರು ಊರಿಗೆ ಹೊರಡುವಾಗ, ನಾಗಪ್ಪ, ಮಹಾದೇವರನ್ನು ಬಿಟ್ಟು ಹೋಗುವುದಕ್ಕೆ ಆಗುತ್ತದೆಯೇ? ಒಮ್ಮೆ ಬಂದಿದ್ದೇನೆ. ದೇವರ ಮೇಲೆ ಭಾರಹಾಕಿ ಕರೆದುಕೊಂಡು ಹೋಗುತ್ತೇನೆ" ಎಂದರು. ಮಕ್ಕಳಿಗೆ ಹೊರಡುವ ಉತ್ಸಾಹವು ಒಂದು ಕಡೆಯಲ್ಲಿ; ಆದರೆ ಆ ಸ್ಥಳವನ್ನು ಬಿಟ್ಟು ಹೋಗಬೇಕಲ್ಲಾ ಎಂಬ ವ್ಯಥೆ ಇನ್ನೊಂದು ಕಡೆ. ಅವರೆಲ್ಲರಿಂದ ಬೇರೆಯಾಗಿಯೇ ಉಳಿಯಬೇಕಾದವನು ಚಂದಪ್ಪ ಮಾತ್ರ.

ಮರುದಿನ ಬೆಳಿಗ್ಗೆ ಅವರೆಲ್ಲರು ಹೊರಡುವುದೆಂದಾಯಿತು. ಶ್ಯಾಮ ರಾಧಾಕೃಷ್ಣ ಇಬ್ಬರೂ ಅವರ ಜತೆಗೆ ಹೋಗಿ ಮಂಗಳೂರಿನಿಂದ ಕುಂದಾಪುರಕ್ಕೆ ಕಳುಹಿಸಿಕೊಡುವ ನಿರ್ಧಾರ ಮಾಡಿದರು. ಬೆಳಿಗ್ಗೆ ಎಲ್ಲ ಮಕ್ಕಳ ಸ್ನಾನ ಊಟಗಳಾದುವು. ಸತ್ಯ—ಗಂಗೆ, ಶಾರದೆಯ ತಲೆಯನ್ನು ಬಾಚಿ ಹೆರಳು ಹಾಕಿದರು. ಹೂ ಮುಡಿಸಿದಳು. ಸತ್ಯಳ ಬಳಿಗೆ ಓಡಿ ಬಂದು ಅವರು ತುಂಬ ಕಣ್ಣೀರನ್ನು ಕರೆದರು. ಚಂದ್ರನಿಗೆ ಅಕ್ಕ ಅಣ್ಣಂದಿರು ಹೊರಡುವರೆಂದು ಖಂಡಿತವಾದೊಡನೆಯೇ, 'ಬೇಡ, ಬೇಡ'ವೆಂದು ಅಳತೊಡಗಿದ. ಮಹಾದೇವ, ಶ್ಯಾಮರ ವಿದಾಯ ತುಸು ಹೊತ್ತಿನ ನಂತರ ಆಗುವುದಾದರೂ, ವ್ಯಥೆ ಈಗಲೇ ತುಂಬಿ ಬಂದಿದೆ. ಸತ್ಯ, ಒಂದು ಕೈಯಲ್ಲಿ

ತನ್ನ ಮಗುವನ್ನು ಎತ್ತಿಕೊಂಡು, ಇನ್ನೊಂದು ಕೈಯಲ್ಲಿ, ಚಂದಪ್ಪನನ್ನು ಹಿಡಿದುಕೊಂಡು ಪದವನ್ನೇರಿದಳು. ಇಬ್ಬರೂ, ಆಪ್ತರ ಬಿಂಬಗಳು ದೂರದಲ್ಲಿ ಅದೃಶ್ಯವಾಗುವ ತನಕ ಅಲ್ಲಿಯೇ ನಿಂತು ನೋಡಿದರು. ಚಂದಪ್ಪ "ನಾನೊಬ್ಬನೇ ನಿರ್ಭಾಗ್ಯ" ಎಂದು ತನ್ನ ದುಃಖವನ್ನು ನುಂಗಿಕೊಳ್ಳುತ್ತಿದ್ದನು.

ಸತ್ಯ ಇಬ್ಬರನ್ನೂ ಮನೆಗೆ ಕರೆದು ತಂದಳು. ಅವರ ಅಳುವನ್ನು ಸಮಾಧಾನಪಡಿಸುವುದು ಸುಲಭವಾಗಲಿಲ್ಲ ಎರಡು ವರ್ಷಗಳ ಕಾಲದಲ್ಲಿ ಬೆಳೆದು ಬಂದ ಮಮತೆಯ ನಂಟು, ಅವಳಿಗೂ ಇದ್ದಿರಲಿಲ್ಲವೇ? ಆ ವಿರಹವನ್ನು ಎಣಿಸಿದರೆ ತನಗೂ ದುಃಖ ಬರುತ್ತದ. ಅದನ್ನು ತಡೆದು ಹಿಡಿದೇ ಚಂದಪ್ಪನಿಗೆ ಸಮಾಧಾನ ಹೇಳಬೇಕಾಗಿದೆ "ನೀನು ಏನೂ—ಯೋಚನೆಮಾಡಬೇಡ. ನಿನ್ನ ತಂದೆಗೆ ಕಾಗದ ಬರೆದು ನಿನ್ನನ್ನು ಕರೆದುಕೊಂಡು ಹೋಗುವ ಹಾಗೆ ಮಾಡುತ್ತೇವೆ. ಅವನಿಗೆ ಬರಲು ಅನುಕೂಲವಿಲ್ಲದೆ ಹೋದರೆ ನಾವೇ ಹೋಗಿ ಬಿಟ್ಟು ಬರುತ್ತೇವೆ" ಎಂದು ತಿರುತಿರುಗಿ ಹೇಳಿದಳು. ಅಲ್ಲಿಯ ತನಕ, ಚಂದಪ್ಪನ ಕಿವಿಗೆ ಅವನ ಅಜ್ಜಿಯು ತೀರಿಕೊಂಡ ವರ್ತಮಾನ ಮುಟ್ಟಿರಲೇ ಇಲ್ಲ.

ರಾಧಾಕೃಷ್ಣ ಅವರೆಲ್ಲರನ್ನು ಕರೆದುಕೊಂಡು ಮಂಗಳೂರನ್ನು ಸೇರಿದನು. ಊಟವಾಗಿ ಅವರನ್ನು ಮೋಟರಿನಲ್ಲಿ ಕುಳ್ಳಿರಿಸುವ ವೇಳೆಗೆ ಇನ್ನೊಮ್ಮೆ ಅಳುವಿನ ಪ್ರಕರಣವಾಯಿತು. ಮಹಾಬಲಭಟ್ಟರು "ಸ್ವಾಮಿ, ನಮ್ಮನ್ನು ಮರೆಯಬಾರದು. ನಿಮ್ಮ ಮನೆಯವರನ್ನು ಕರೆದುಕೊಂಡು ತಿರುಗಿ ನಮ್ಮ ಮನೆಗೆ ಬರಬೇಕು. ಎರಡು ವರ್ಷವಾಗಲಿ, ನಾಲ್ಕು ವರ್ಷವೇ ಆಗಲಿ—ಬರಬೇಕೇ" ಎಂದರು.

ಗಂಗೆ ಶಾರದೆಯರಿಗೆ ರಾಧಾಕೃಷ್ಣನ ಪರಿಚಯ ಕೆಲವು ಬಾರಿಯ ನೋಟದಿಂದ ಮಾತ್ರ. ಆದರೆ ಸತ್ಯಕ್ಕನ ಗಂಡನೆಂಬ ಅಭಿಮಾನ ಮನಸ್ಸಿನಲ್ಲಿ ಮೂಡಿತ್ತು. ಆ ಮಕ್ಕಳು ಋಣಪೂರಿತವಾದ ಕಣ್ಣುಗಳಿಂದ ಅವನನ್ನೇ ನೋಡುತ್ತಿದ್ದರು. ರಾಧಾಕೃಷ್ಣ ಅವರಿಬ್ಬರ ಭುಜದ ಮೇಲೆ ಕೈಯಿಟ್ಟು "ಮಹಾಬಲಯ್ಯ, ನೀವು ಯಾವ ಯೋಚನೆಯನ್ನೂ ಇರಿಸಿಕೊಳ್ಳಬೇಡಿ. ನಾನು ಹೇಳಿದಂತೆ ಮಾಡಿ; ಡಾಕ್ಟರರು ನಿಮ್ಮ ಕೆಲಸವನ್ನು ಮಾಡಿಸಿಕೊಡುತ್ತಾರೆ. ಇನ್ನು ನಿಮ್ಮ ಊರಿಗೆ ಬರುವ ವಿಚಾ

ರವ್ವೋ--ಬಂದ್ದೇ ಬರುತ್ತೇನೆ. ಗೋಪಣ್ಣ ಭಟ್ಟರಿಗೆ ಹೇಳಿ—ಈ ಗಂಗೆ, ಶಾರದೆಯರ ಲಗ್ನಕ್ಕೆ ನಾನು ಬಂದೇ ಬರುತ್ತೇನೆಂದು" ಎಂದನು.

"ಖಂಡಿತವೇ?"

ಈ ಅವರ ಮೋಟರು ಮಂಗಳೂರನ್ನು ಬಿಟ್ಟಿತು. ಅದರ ಬೆಂಗಡೆಯ ಧೂಳು ಒಳಗೆ ಕುಳಿತ ಸ್ನೇಹಿತರನ್ನು ಮರೆಮಾಜಿತು. ಶ್ಯಾಮು ಅವರನ್ನು ನೆನೆದು "ಅಣ್ಣಾ, ಎಂಥ ಒಳ್ಳೆಯ ಮಕ್ಕಳು ಬಲ್ಲಿರಾ? ನೀವು ಶಾಲೆ ಸುರುಮಾಡಿದಾಗಲೇ ಅವರು ಬಂದಿದ್ದರೆ ಎಷ್ಟು ಚೆನ್ನಾಗುತ್ತಿತ್ತು. ನಾನು ಅವರಿಗೆ ಏನನ್ನು ಕಲಿಸಿಯೇನು? ಅ, ಆ, ಎಂದು ಒಂದಿಷ್ಟು ಓದು ಬರಹ ಹೇಳಿ ಮುಗಿಸಿದೆ" ಎಂದನು. ಅವನ ಮುಖವು ವಿಯೋಗದ ನೋವನ್ನೆಲ್ಲ ಹೊತ್ತಿತ್ತು. ಅಲ್ಲಿಂದ ಸ್ವಲ್ಪ ಮುಂದೆ ಹೋಗುತ್ತಲೇ ಶ್ಯಾಮು "ಅಣ್ಣಾ, ಆ ಪತ್ರಿಕೆಯವರು ನೀವು ಬಂದರೆ ತಿಳಿಸಬೇಕು ಅಂದಿದ್ದರು. ಅವರ ಕಚೇರಿಗೆ ಹೋಗಿ ಬರೋಣವೇ" ಎಂದನು.

"ಯಾರು, ಪ್ರಭುದೇವನೇ? ಅವನದೊಂದು ಪೇಪರು ಇರಬೇಕಲ್ಲವೇ? ಅವನು ಜೈಲಿಗೆ ಹೋದಾಗ ಅದು ನಿಂತಿರಬೇಕು."

"ಹೋಗಿ ಬಂದ ಮೇಲೆಯೂ ಬಹು ದಿವಸ ಹೊರಡಿಸಲಿಕ್ಕಾಗಲಿಲ್ಲ. ಅವರು ನಿಮ್ಮನ್ನು ಕಾಣಬೇಕು ಅನ್ನುತ್ತಿದ್ದರು. ಅವರ ಮನಸ್ಸಿನಲ್ಲಿಯೂ—ಅನಾಥಾಲಯ, ಆಶ್ರಮ, ಪತ್ರಿಕೆ—ಎಂದು ಹಲವಾರು ಯೋಚನೆಗಳಿವೆ. ಅನೇಕ ಬಾರಿ ನಾನು ಅವರಲ್ಲಿಗೆ ಹೋಗಿದ್ದೆ. ಕೆಲವೊಮ್ಮೆ ಹಣದ ಸಹಾಯವನ್ನೂ ಮಾಡಿದ್ದರು. ಮಾತಿನಲ್ಲಿ ಮಾತ್ರ ಅದ್ಭುತ ವ್ಯಕ್ತಿ" ಎಂದನು.

"ಕೆಲಸದಲ್ಲಿ?" ಎಂದು ನಕ್ಕನು ರಾಧಾಕೃಷ್ಣ.

"ಆಗಲಿ ಹೋಗುವ, ಇವತ್ತೇ ಬೇಕಿಲ್ಲ. ಇಲ್ಲಿಯೇ ಇರುತ್ತೇನಲ್ಲ? ಅಲ್ಲದೆ ನಾಳಿನ ವಿಚಾರಕ್ಕೆ ಹೆಚ್ಚಾದ ಗಮನವಿರಬೇಕು. ನನ್ನ ಭೂಮಿಗೆ ಇನ್ನೆರಡು ವರ್ಷಗಳ ವಾಯಿದೆ ಮಾತ್ರ ಉಳಿದಿವೆ. ಎಂದು ಕಾಣುತ್ತದೆ. ಅದನ್ನು ಸಾಹುಕಾರರು ತಿರುಗಿ ಮೂಲಗೇಣಿಗೆ ಕೊಡುವಂತಿದ್ದರೆ ಮಾತ್ರ ಪ್ರಯೋಜನ. ಆಗುವುದಿಲ್ಲವೆಂದರೂ ಸರಿಯೇ; ಗೇಣಿ ಹೆಚ್ಚಿಸಿದರೂ ಸರಿಯೇ—ನಾವು ಅಲ್ಲಿ ಕುಳಿತು ಉಪಯೋಗವಾಗದು. ತೀರ ವಾಯಿದೆ ಕಳೆದ ಮೇಲೆ ಯೋಚನೆ ಮಾಡುವುದಕ್ಕಿಂತ ಈಗಾಗಲೇ ಮುಂಜಾಗ್ರತೆ

ವಹಿಸುವುದು ಒಳ್ಳೇಯದು."

"ಪ್ರಭುದೇವರೆನ್ನುತ್ತಿದ್ದರು-ಪೇಟೆಗೆ ಸಮೀಪವಾಗಿ ಒಳ್ಳೆಯ ಜಾಗವನ್ನು ತಾನು ಕೊಡಿಸುತ್ತೇನೆ. ಅಂಥ ಕೆಲಸಗಳಿಗೆ ಹಳ್ಳಿ ಮೂಲೆಗಳು ಪ್ರಯೋಜನವಿಲ್ಲ—ಎಂದು. ಹಾಗೇನಾದರೂ ಸಿಕ್ಕಿದರೆ ಆಗುತ್ತಿತ್ತು".

"ಹಾಗೆ ಜನಗಳ ಬಾಯಿಮಾತನ್ನು ನಂಬಿ ಉಪಯೋಗವಿಲ್ಲ."

"ಸುಳ್ಳು ಹೇಳುತ್ತಾರೆಯೇ ಅವರು?"

"ಸುಳ್ಳು ಹೇಳುತ್ತಾರೆಂದಲ್ಲ. ಹಾಗೆ ಹೇಳುವವರೂ ಇದ್ದಾರೆ. ಸತ್ಯ ಹೇಳುತ್ತಾರೆಂದೂ ನಂಬಬೇಕಿಲ್ಲ. ಈಗಾಗಲೇ ಹಲವರ ಮಾತನ್ನು ನಂಬಿ ಮೋಸಹೋಗಿದ್ದೇವಲ್ಲ. ತಿರುತಿರುಗಿ ಅದೇ ಅನುಭವವು ಬರಬಾರದಲ್ಲ."

"ನಾನು ಇನ್ನಾವುದಕ್ಕೂ ಹೇಳಿದುದಲ್ಲ. ಪೇಟೆಗೆ ಆರು ಮೈಲಿನಷ್ಟು ದೂರವಾಗಿದ್ದೇವೆ. ನಮ್ಮ ಹಾಲಿನ ಉದ್ಯೋಗ ಬೆಳೆಯಿಸಿದರೆ, ಸುಖವಾಗಿ ನಮ್ಮ ಜೀವನಹೋಗಬಹುದು. ನಿತ್ಯ ಪೇಟೆಗೆ ಹಾಲು ಹೊತ್ತುಕೊಂಡು ಹೋಗುವುದೆಂದರೆ, ಇತರ ಕೆಲಸ ಮಾಡುವುದಕ್ಕೆ ಶಕ್ತಿ ಉಳಿಯುವುದಿಲ್ಲ. ಅಲ್ಲದೆ ಪ್ರತಿಯೊಂದು ಕೆಲಸಕ್ಕೂ ನಾವು ಪೇಟೆಗೆ ಮುಖ ಮಾಡಬೇಕಾಗಿದೆ. ಆದುದರಿಂದಲೇ, ಅನುಕೂಲವಾದ ಸ್ಥಳ ಸಿಕ್ಕಿದರೆ ಆಗಬಹುದಲ್ಲವೇ" ಎಂದು ತೋರುತ್ತದೆ.

"ದಿನಕ್ಕೆ ಎರಡು ಬಾರಿಯೂ ಹೊತ್ತುಕೊಂಡು ಹೋಗುತ್ತಿದ್ದಿರಲ್ಲವೇ? ಬೆಳಿಗ್ಗೆ ಯಾರು ಹೋದರು?"

"ಕಲಲ, ಅವನು ಬೆಳಿಗ್ಗೆ ಹೋದರೆ ನಾನು ಸಂಜೆ ಹೋಗಬೇಕು."

"ಇವತ್ತು ತಿರುಗಿ"

ಆ ದಿನ ಎರಡನೇ ಬಾರಿಗೆ ಹೋಗುವುದೆಂದರೆ ಶ್ಯಾಮನಿಗೆ ಹದಿನಾಲ್ಕು ಮೈಲಿನ ಸಂಚಾರವಾಗುತ್ತದೆ. ಇದೇ ರೀತಿಯಲ್ಲಿ ಅವನು ಎರಡು ವರ್ಷ ಕಾಲ ಹಿಂಸೆಗೆ ಗುರಿಯಾಗಿರಬೇಕು ಎಂದು ತೋರಿತು. ಅವನು ಅಂದಂತೆ ಮಾಡದೆಹೋದರೆ, ದುಡಿಯುವವರ ಪಾಲಿಗೆ ಹಿಂಸೆ ಕೊಟ್ಟಂತೆಯೇ ಸರಿ. ಹಾಗೆಂದು ಹಾಲಿನ ವ್ಯವಸಾಯವನ್ನು ಬಿಡಲೇ? ಸತ್ಯಳ ಮಾತನ್ನು ಕೇಳಿದರೆ—ಅವರ ಕಷ್ಟಗಳು ಬಹುಮಟ್ಟಿಗೆ ಹಗುರವಾದುದು ಆ ಉದ್ಯೋಗದಿಂದಲೇ.

ಇಬ್ಬರೂ ಮಾತನಾಡುತ್ತ ತಮ್ಮ ಮನೆಗೆ ಹಿಂದಿರುಗಿದರು. ಮನೆಗೆ ಬರುತ್ತಲೇ ರಾಧಾಕೃಷ್ಣನು, ಬಾಯಿ ತುಂಬ 'ಚಂದ್ರಾ' ಎಂದು ಕರೆದು ಕೂಗಿದನು. ಚಂದ್ರ ಬಂದವನೇ, "ಅಣ್ಣಾ, ಅಕ್ಕಂದಿರನ್ನು ಎಲ್ಲಿ ಬಿಟ್ಟು ಬಂದೆ? ಮಹಾದೇವ ಎಲ್ಲಿ? ಎಲ್ಲ ಎಲ್ಲಿಗೆ ಹೋದರು" ಎಂದು ಕೇಳಿದ.

"ಬರುತ್ತಾರೆ, ಬರುತ್ತಾರೆ, ದೂರ ಹೋಗಿ ಬರುತ್ತಾರೆ. ಬರುವಾಗ ನಿನಗೆ ತುಂಬ ತಿಂಡಿ ತರುತ್ತಾರೆ" ಎಂದ ರಾಧಾಕೃಷ್ಣ. ಚಂದಪ್ಪ ಶ್ಯಾಮ ನನ್ನು ಹಿಡಿದುಕೊಂಡು "ಅವರು ಬಿಟ್ಟುಹೋದ ಹಾಗೆ, ನೀನೂ ಓಡಿ ಹೋಗಬೇಡ" ಎಂದು ಹೇಳಿದನು. ಶ್ಯಾಮ—"ಛೀ, ನಾನೂ ನೀನೂ ಇಲ್ಲಿಯೇ ಇರುವವರು. ಇದು ನಮ್ಮ ಮನೆಯಲ್ಲವೇ?" ಎನ್ನಲು ಆತ, ರಾಧಾಕೃಷ್ಣನೊಡನೆ, "ಇದು ಶ್ಯಾಮನ ಮನೆಯಂತೆ!" ಎಂದು ಚೇಷ್ಟೆ ಮಾಡಿದನು.

"ಹೌದು, ಅವನದ್ದು, ನನ್ನದು, ನಿನ್ನದು, ಅಕ್ಕನದು—ಎಲ್ಲರದು" ಎಂದನು ರಾಧಾಕೃಷ್ಣ.



# ಹದಿನೈದನೆಯ ಅಧ್ಯಾಯ

ಊರಿಗೆ ಬಂದು ಬಹು ದಿನಗಳಾಗುವ ತನಕ, ರಾಧಾಕೃಷ್ಣ ಜಡನಾಗಿಯೇ ಇದ್ದನು. ಭವಿಷ್ಯದ ಚಿತ್ರವು ಕಣ್ಣೆದುರಿಗೆ ಬರಿಯ ಮಂಜು ಮುಸುಕಿದಂತಿತ್ತು. ನೇಸರೊಡೆದು, ಮಂಜು ಕರಗಿ, ಮುಂದಿನ ದಾರಿಯು ಅರಿವಾಗಲಿಲ್ಲ. ತನ್ನ ಮನೆಯಿಂದ ಏನೂ ಹಿಸೆ ಪಡೆಯದೆ, ಅಲ್ಲಿರುವುದನ್ನು ತಮ್ಮಂದಿರಿಗೆ ಬಿಟ್ಟು, ತಾನು ಸ್ವತಂತ್ರನಾಗಬೇಕು ಎಂದು ಅವನ ಮನಸ್ಸು. ಆದರೆ ಈಗ ತುಂಬ ಕೈಸೋತಿದೆ. ಇಷ್ಟು ದಿನದ ಜೀವನ ಅವನನ್ನು ಸಾಲಗಾರನನ್ನಾಗಿ ಮಾಡಿದೆ. ಅದೆಲ್ಲವನ್ನು ನೀಗಿಸಿಕೊಳ್ಳುವ ತನಕ ಮನಸ್ಸಿಗೆ ಶಾಂತಿ ದೊರೆಯಲಾರದು. ಇತ್ತ, ಆ ವರ್ಷದ ಗೇಣಿಯನ್ನು ಸಲಿಸುವುದೂ ಆಗಲಿಲ್ಲ. ಅದನ್ನು ಬೇಗನೇ ತೀರಿಸಬೇಕು. ಸಾಹುಕಾರರಿಂದ ಮೇಲಿಂದ ಮೇಲೆ ಕರೆ ಬರುತ್ತಿದೆ. ಅವರು ಯಾವ ಕರುಣೆಯನ್ನೂ ತೋರಿಸುವವರಲ್ಲ ಎಂದು ತಿಳಿದಿತ್ತು. ಹೀಗಾಗಿ ಸ್ವಲ್ಪ ಕ್ಕಾದರೂ ಮನೆಯ ನೆರವನ್ನು ಪಡೆಯಬೇಕು—ಎಂದು ಮನಸ್ಸು ಆಸೆ ಪಡುತ್ತಿದೆ. ಎಲ್ಲದಕ್ಕೂ ಮುಂಚಿತವಾಗಿ, ಸಾಹುಕಾರರ ಭೇಟಿಗಾಗಿ ಮಂಗಳೂರಿಗೆ ಹೋದನು.

ಹೋಗಿ ಅವರನ್ನು ಕಂಡ ಕ್ಷಣವೇ, ಅವರ ಉತ್ತರ ದೊರೆಯಿತು. "ಈ ವಾಯಿದೆಯ ನಂತರ ಹೆಚ್ಚಿನ ವಾಯಿದೆಗೆ ಭೂಮಿ ನಿಮಗೆ ಸಿಗಲಾರದು. ಆ ದಿವಸ ಏನೋ, ದಯಾನಂದರಾಯರ ದಾಕ್ಷಿಣ್ಯಕ್ಕೆ ವಾಯಿದೆ ಗೇಣಿಗೆ ಭೂಮಿಯನ್ನು ಕೊಟ್ಟೆ. ಎಷ್ಟೋ ಜನರು ಚಾಲಗೇಣಿಗೆ ಅದನ್ನು ಕೇಳುತ್ತಿದ್ದಾರೆ. ಇನ್ನೂ—ಹತ್ತು ಮುಡಿ ಗೇಣಿ, ಹೆಚ್ಚಿಗೆ ಕೊಡುತ್ತೇವೆ ಎಂದು ಹೇಳಿದ್ದಾರೆ. ಬಿತ್ತಿದರೆ ಹೊನ್ನಾಗುವ ಬಯಲು ಅದು" ಎಂದು ಅವನನ್ನು ತೀರ ನಿರಾಶೆಗೊಳಿಸಿ ಕಳುಹಿಸಿದರು. ಆ ಮಾತನ್ನು ನೆನೆಯುತ್ತ, ಶ್ಯಾಮನೆಂಬುದನ್ನು ಯೋಚಿಸುತ್ತ, ಅವನು ಮನೆಗೆ ಬಂದುದಾಯಿತು. ಆದರಿಂದ, "ಪ್ರಭುದೇವನನ್ನು ಕಂಡು, ಒಮ್ಮೆ ಇಲ್ಲಿಗೆ ಬರಲು ಆಮಂತ್ರಣವನ್ನು ಕೊಡು. ಅವರಾಗಿ ಆ ಪ್ರಸ್ತಾಪವನ್ನು ಎತ್ತಿದರೆ ನಾವೂ ವಿಚಾರಮಾಡುವ" ಎಂದು ತಿಳಿಸಿದನು. ಶ್ಯಾಮನ ಮನಸ್ಸಿನಲ್ಲಿ

ಆಗಾಗಲೇ—"ಪೇಟೆಯ ಸಮೀಪದ ರಮಣೀಯ ಆವರಣಕ್ಕೆ ಹೋಗಿ ಸೇರುತ್ತೇವೆ; ಅಲ್ಲಿ ಎಲ್ಲದಕ್ಕೂ ಅನುಕೂಲ" ಎಂಬ ಆಶೆ ಅಂಕುರಿಸಿತು.

ಇತ್ತ ಊರನ್ನು ಬಿಡುವ ನಿರ್ಧಾರವೇನೋ ಅವರ ಮನಸ್ಸಿನಲ್ಲಿ ನಟ್ಟುದಾಯಿತು. ಆ ವಿಚಾರವನ್ನು ಕೇಳಿ ಸತ್ಯ ಎಂದಳು "ಹಾಗಾದರೆ ನಮಗೆ ಯಾವ ಊರಾದರೇನು? ನಮ್ಮ ಊರಿಗೇ ಹೋಗುವ. ನಿಮ್ಮ ಭೂಮಿಯೋ ಇಲ್ಲವೇ? ಕುಂದಾಪುರ ಒಂದು ಹಳ್ಳಿಯೇ" ಎಂದು ಕೇಳಿದಳು. ಅದಕ್ಕೆ ರಾಧಾಕೃಷ್ಣ "ಅದು ಬೇಡ, ಸತ್ಯ. ನಂಟರಿಷ್ಟರು ಇರುವ ಊರು ಬೇಡವೇ ಬೇಡ. ಕಷ್ಟವೋ, ಸುಖವೋ, ನಮನಮದು ನಮಗೆ. ಸ್ವಂತ ಊರಲ್ಲಿ ಇದ್ದರೆ ಹಾಗಾಗುವುದಿಲ್ಲ. ನಾನು ಬೇಗನೇ ಕುಂದಾಪುರಕ್ಕೆ ಹೋಗಿ ಹಿಂವಕ್ಕೆ ಬರುತ್ತೇನೆ. ತಮ್ಮಂದಿರಿಗೆ ಬಿಡುವ ಅಂಶವನ್ನು ಬಿಟ್ಟು ಏನಾದರೂ ಕೈಗೆ ಸ್ವಲ್ಪ ಬಂದರೆ, ಸಾಲವನ್ನಾದರೂ ತೀರಿಸಬಹುದು. ಮುಂದಿನ ಯೋಚನೆ ಮುಂದೆ" ಎಂದನು.

ಈ ಮಾತು ನಡೆಯುವ ಕೆಲವು ದಿವಸಗಳ ಮೊದಲು ಸತ್ಯ, ತಂದೆ ಬಂದಾಗ, ಮೈಯ ಮೇಲೆ ಆಭರಣಗಳಿಲ್ಲದುದನ್ನು ಕಂಡು ನಡೆದ ಪ್ರಕರಣವನ್ನು ಹೇಳಿದ್ದಳು. ಈಗ ಆ ನೆನಪು ತಿರುಗಿ ಉಂಟಾಗಿ "ಆ ಚಿನ್ನವನ್ನು ಬಿಡಿಸಲು ಬರಲಿಕ್ಕಿಲ್ಲವೇ? ಒಂದು ಸಾರಿ ಅದನ್ನು ಹಾಕಿಕೊಂಡು ಅಪ್ಪನಿಗೆ ತೋರಿಸಿಕೊಂಡು ಬರುತ್ತೇನೆ. ಮತ್ತೇನಾದರೂ ಚಿಂತೆ ಇಲ್ಲ. ಚಿನ್ನದ ಆಸೆಯಿಂದ ಕೇಳಿದೆನೆಂದು ತಿಳಿಯಬೇಡಿ. ಆ ಮೇಲೆ ನನಗೆ ತಿರುಗಿ ಊರಿಗೆ ಹೋಗಬೇಕೆಂದೂ ಕಾಣಿಸುವುದಿಲ್ಲ" ಎಂದಳು. ಏನೆಂದು ಉತ್ತರವೂ ಅವನಿಗೆ ತೋರಲಿಲ್ಲ. ಅವನ ಮನಸ್ಸಿನಲ್ಲಿ—ಸಾಹುಕಾರರ ಬಾಕಿ, ಅನಂತರ ರಾಮಣ್ಣನ ಸಾಲ. ಆ ಮೇಲೆ ಇನ್ನುಳಿದುವು—ಎಂದು ಒಂದೊಂದಕ್ಕೂ ಸ್ಥಾನವನ್ನು ಅಂಕಿಸಿದ್ದ. ಊರಿಗೆ ಹೋದರೆ, ಕೈಗೆ ಎಷ್ಟು ಬಂದೀತೆಂಬುದು ಅವನಿಗೆ ತಿಳಿಯದ ಸಂಗತಿ. ಹೀಗಿರಲು—'ಆಗಲಿ', ಇಲ್ಲವೇ, 'ಆಗದು', ಎನ್ನದೆಯೆ ಕುಳಿತ.

ಅದರಿಂದ ಆಕೆ "ಬೇಸರವೇ" ಎಂದು ಗಂಡನನ್ನು ಕೇಳುವುದಾಯಿತು. "ಬೇಸರವಿಲ್ಲ, ನಿನ್ನ ಹತ್ತಿರ ಹೇಳುವುದಾದರೂ, ಹೀಗೆಯೇ ಮಾಡಬಂದೀತು ಎಂದು ಸ್ಪಷ್ಟವಾದ ಮೇಲೆ ಹೇಳಬೇಕು. ನನಗೆ ಮುಂದಿನ ಸ್ಥಿತಿ ಏನೆಂದು ತಿಳಿದಿಲ್ಲ. ಊರಿಗೆ ಒಮ್ಮೆ ಹೋಗಿ ಬರು

ಎಂದನು ಆತ. ಹಾಗೆ ಊರನ್ನು ಕಾಣುವುದಕ್ಕೂ, ಕೆಲವು ದಿನಗಳು ಹೋದುವು. ಉತ್ಸಾಹವಿಲ್ಲದೆ, ಮುಂದಿನ ದಾರಿಯು ಸೂಚಿಸದಿರುವಾಗ, ಶರೀರಕ್ಕಾದರೂ ಏನು ಚಟುವಟಿಕೆ ಬಂದೀತು? ಮನೆಯ ಕೆಲಸದಲ್ಲಿ ಶ್ಯಾಮು ದಣಿಯುತ್ತಾನೆಂದು ತಿಳಿದರೂ, ಒಂದು ದಿನವೂ "ನಿನ್ನ ಬದಲಿಗೆ ನಾನು ಹಾಲು ಒಯ್ಯುತ್ತೇನೆ" ಎಂದವನಲ್ಲ; ಹಾಗೆಂದಿದ್ದರೂ ಶ್ಯಾಮು ಬಿಡಲಾರ. ರಾಧಾಕೃಷ್ಣನ ಕೆಲಸವೆಂದರೆ ಚಂದ್ರುವನ್ನು ಕರೆದುಕೊಂಡು ಭ್ರಮಿಷ್ಠನಂತೆ ಗ್ರಾಮದಲ್ಲಿ ಸಂಚರಿಸುವುದು. ಇನ್ನೊಮ್ಮೆ ಚಂದ್ರು, ಚಂದಪ್ಪರನ್ನು ಕುಳ್ಳಿರಿಸಿಕೊಂಡು ಏನಾದರೂ ಕತೆಗಳನ್ನೋ, ಪಾಠಗಳನ್ನೋ ಹೇಳುವುದು. ಯಾರಿಗೆ ಹೇಳುತ್ತಿದ್ದೇನೆ; ಯಾಕೆ ಹೇಳುತ್ತಿದ್ದೇನೆ ಎಂದು ಮನಸ್ಸಿಗೆ ತೋರದ ಗಳಿಗೆಯೂ ಉಂಟು. ಆತನೇನಾದರೂ, ಸರಸದಲ್ಲಿ, ವಿರಸದಲ್ಲಿ—ಮಾತನಾಡುವುದಾದರೆ, ಅದು ರಾಮಣ್ಣನಲ್ಲಿ. ರಾಮಣ್ಣ ತಾನಾಗಿಯೇ ಬಂದು ಹರಟೆಗೆ ಕುಳಿತಿರುವುದುಂಟು, ಇಲ್ಲವೆ, ಇವನಾದರೂ ಅಲ್ಲಿಗೆ ಹೋಗಿ, ಅವನನ್ನು ಕರೆಯುವುದು ಉಂಟು. ಆತನಿಗೆ ಇವನ ಬಾಯಿಂದ ದೇಶದ ರಾಜಕೀಯವನ್ನೂ, ಉಳಿದ ವಿಷಯಗಳನ್ನೂ ಕೇಳುವ ಆತುರ. ಈತ ತಿಳಿದುದನ್ನು ಹೇಳುತ್ತಾನೆ. ಅಂತು ಸಮಯಹೋಗುತ್ತದೆ.

ಒಂದು ದಿನ ರಾಮಣ್ಣನೇ ಕೇಳಿದ—"ನಿನ್ನೆ ನಾನು ಬಂದಿದ್ದೆ. ರಂಗಪ್ಪಯ್ಯನವರಲ್ಲಿಗೆ ಹೋಗಿದ್ದೀರೆಂದು ಅಮ್ಮ ಹೇಳಿದರು. ಏನೆಂದರು, ನಿಮ್ಮ ಸಾಹುಕಾರರು? ಗೇಣಿಯಲ್ಲಿ ಏನಾದರೂ ಬಿಡುತ್ತೇನೆ ಅಂದರೇ? ಬಿಡುವ ಜನವೇ! ನೆರೆ ಬಂದ ವರ್ಷ, ಯಾರಿಗೂ ಕಾಸು ಬಿಡದವರು, ಈಗ ನಿಮಗೆ ಬಿಟ್ಟಾರೆಯೇ"?

"ಅವರನ್ನು 'ಬಿಡಿ' ಎಂದು ಕೇಳಲಿಕ್ಕೆ ನಾನು ಹೋಗಲಿಲ್ಲ. ನಾನು ಹೋದದ್ದು ವಾಯಿದೆ ಗೇಣಿಯನ್ನು ಮುಂದುವರಿಸುತ್ತೀರಾ ಎಂದು ಕೇಳುವುದಕ್ಕೆ. ಇನ್ನು ಎರಡು ವರ್ಷ ಉಳಿದಿದೆ: ಮುಂದಿನ ವಿಚಾರವನ್ನು ಈಗಲೇ ಕೇಳಿ ತಿಳಿಯುವುದು ಒಳ್ಳೆಯದಲ್ಲವೆ? ಚಾಲಗೇಣಿ ಒಕ್ಕಲಾಗಿ ಕುಳಿತಿರಲು ನನಗೆ ಇಷ್ಟವಿಲ್ಲ. ನಲ್ವತ್ತು ಮುಡಿ ಗೇಣಿಯನ್ನು ಕೊಟ್ಟರೆ ನಮ್ಮ ಜೀವನ ಹೋಗಲಾರದು."

“ನಿಮ್ಮಂಥವರು ಸಾಗುವಳಿಯಿಂದ ಜೀವನ ಮಾಡಿ ಪೂರೈಸೀತೇ? ಇರಲಿ—ಏನೆಂದರು, ವಾಯಿದೆ ಮುಂದುವರಿಸುತ್ತಾರೇನು?”

“ಇಲ್ಲವಂತೆ; ವಾಯಿದೆಯ ನಂತರ, ನಲ್ವತ್ತು ಮುಡಿಯನ್ನು ಐವತ್ತಕ್ಕೆ ಏರಿಸುತ್ತಾರಂತೆ; ಅದೂ ಚಾಲಗೇಣಿಗೆ.”

“ಹಾಗೆ ಐವತ್ತು, ಅರುವತ್ತು ಮುಡಿ ಗೇಣಿ ಒಪ್ಪಿಕೊಳ್ಳಲು ಮರ ಕಾಲನಂತಹ ಒಕ್ಕಲೇ ಸಿಗಬೇಕು. ಇರುವಷ್ಟು ದಿವಸ ಗೇಣಿಯನ್ನು ತಿಂದು, ನಾವು ಹಾಕಿ, ಒತ್ತಾಯ ಮಾಡಿದರೆ ಜಾಗ ಬಿಟ್ಟರೆ ಆಯಿತು.”

“ನನಗೂ ಈ ಜಾಗವನ್ನೂ ಬಿಡುವ ಯೋಚನೆ ಬಂದಿದೆ. ಪೇಟೆಗೆ ಸ್ವಲ್ಪ ಸಮೀಪವಾಗಿ ಹೋಗಿ ಇರುವ ಎಂದು ಅನಿಸುತ್ತದೆ. ನೀನೇ, ಈ ಹಾಲಿನ ವ್ಯಾಪಾರ ಹೇಳಿಕೊಟ್ಟೆ. ಶ್ಯಾಮ ಮತ್ತು ಆಳು ನಿತ್ಯ ಹದಿನೆರಡು ಮೈಲು ದೂರ ನಡೆಯಬೇಕು. ನನ್ನಿಂದಲೂ ಅದು ಆಗುವ ಕೆಲಸವಲ್ಲ. ಅಲ್ಲದೆ ಈ ಬೇಸಾಯದ ವಹಿವಾಟಿಗಿಂತ ಆ ಕೆಲಸವೇ ವಾಸಿ ಎಂದು ಕಾಣುತ್ತದೆ. ಒಂದು ಹತ್ತು ಎಮ್ಮೆಗಳನ್ನು ಕಟ್ಟಿಕೊಂಡರೆ, ಸುಖವಾಗಿ ಜೀವನ ಹೋಗಬಹುದು” ಎಂದು ತೋರುತ್ತದೆ.

“ಆಗದೆ ಏನು? ಆದರೆ ಅದರಿಂದ, ಸತ್ಯಮ್ಮ ಎಮ್ಮೆ ಚಾಕರಿಯಲ್ಲಿ ಕಂಗಾಲಾದಾರು.”

“ಸತ್ಯ ಈ ಎರಡು ವರ್ಷ ನುಗ್ಗಾದದ್ದೇ ಸಾಕು. ಹತ್ತು ಎಮ್ಮೆಗಳನ್ನು ಕಟ್ಟಿಕೊಳ್ಳುವ ತ್ರಾಣ ಬಂದರೆ, ಅದಕ್ಕೆ ಸಮನಾಗಿ ಆಳು, ಕಾಳು ಮಾಡಿಕೊಳ್ಳಬೇಕು. ಮೊದಲು ಪೇಟೆಗೆ ಸಮೀಪವಾಗಿ ಒಯಿನಾದ ಜಾಗ ಸಿಗಬೇಕು. ಕದ್ರೆ ಹತ್ತಿರ ಸಿಕ್ಕಿದರೂ ಆಗಬಹುದು; ಅರ್ಧ ತಾಸಿನ ಒಳಗೆ ಸೈಕಲಲ್ಲಿ ಕುಳಿತು ಹೋಗಿಬರುವ ಹಾಗಿರಬೇಕು. ಇವತ್ತು ಬರಿಯ ನನ್ನೊಬ್ಬನ ಜವಾಬ್ದಾರಿಯೇ ಇಲ್ಲ. ಶ್ಯಾಮನಿಗೊಂದು ದಾರಿ ತೋರಿಸಬೇಡವೇ ನಾನು. ನನಗೂ ನಾಲ್ಕು ದಿವಸಗಳ ಮುಂಚೆ ಅವನು ಇಲ್ಲಿಗೆ ಬಂದವನು. ಈಗ ಬಂದು ಎಂಟು ವರ್ಷಗಳಾದುವು. ನಾನು ಬೇರೆ, ಅವನು ಬೇರೆ ಎಂದು ಯೋಚಿಸದೆ ದುಡಿಯುತ್ತಿದ್ದಾನೆ. ಈಗ ಅವನಿಗೆ ಇಪ್ಪತ್ತನಾಲ್ಕು ವರ್ಷ. ತನ್ನದೊಂದು ಸಂಸಾರ ಮಾಡಿಕೊಂಡಿರಬೇಕೆಂಬ ಆಸೆ ಅವನಿಗಾಗದೇ? ನಾನು ಅವನನ್ನು ಬರಿಗೈಯಿಂದ ಕಳುಹಿಸಲಿಕ್ಕೆ ಆಗುತ್ತದೆಯೇ?”

"ನಿಮ್ಮ ಶ್ಯಾಮ ಮಾತ್ರ, ನಿಮಗೆ ಸಮನಾದ ಹುಡುಗ. ಈ ಎರಡು ವರ್ಷಕಾಲ, ಇಷ್ಟೊಂದು ಶ್ರಮದಿಂದ ಇದೆಲ್ಲ ತನ್ನ ಕೆಲಸವೆಂದೇ ತಿಳಿದು ಮಾಡಿದ. ಅಷ್ಟೊಂದು ಶ್ರದ್ಧೆಯಿಂದ ಬೇರೆ ಮಕ್ಕಳು ಆ ಕೆಲಸ ಮಾಡಿಯಾರು ಎಂದು ಹೇಳಲಾರೆ." ಎಂದನು ರಾಮಣ್ಣ. ಹೀಗೆ ಅನೇಕ ಬಗೆಯ ಮಾತುಕತೆಗಳಲ್ಲಿ ಸಮಯಹೋಗುತ್ತಿತ್ತು.

ಒಂದು ದಿವಸ ಅವನೂ, ರಾಮಣ್ಣನೂ ಬರಿದಾದ ಶಾಲೆಯ ಚಾವಡಿಯಲ್ಲಿ ಕುಳಿತು, ಮಾತುಕತೆ ಆಡುತ್ತಿದ್ದಾಗಲೇ, ಪೇಟೆಗೆ ಹೋಗಿದ್ದ ಶ್ಯಾಮನು ಬಂದನು. ಅವನ ಜತೆಗೆ ಇನ್ನಾರೋ ಠಾಕುಠೀಕಿನ ಗಾಂಧಿಯ ಭಕ್ತರಿದ್ದರು. ಅವರು ಬರುತ್ತಿರುವ ರೀತಿಯೇ ಒಂದು ತೆರನಾಗಿತ್ತು. ಮಗ್ಗುಲ ಗುಡ್ಡದಿಂದ ಇಳಿಯುತ್ತ, ಇಳಿಯುತ್ತ, "ನೋಟ ಮಾತ್ರ ಬಹಳ ಚೆನ್ನಾಗಿದೆ. ಆದರೆ ಕಡಲಿನಲ್ಲಿ ಹುದುಗಿಕೊಂಡ ರತ್ನದ ಹಾಗೆ ಈ ಜಾಗ; ಇದು ನಮ್ಮ ಮಂಗಳೂರಿಗೆ ತಾಗಿರಬೇಕಿತ್ತು" ಎಂದು ದಣಿವಿಗೂ, ನಿಸರ್ಗನೋಡಿ ಮನಸೋತವರಂತೆಯೂ ಆಗಾಗ ನಿಂತು, ಮಾತನಾಡುತ್ತ ಅವರು ಇಳಿದು ಬಂದರು. ಶ್ಯಾಮ "ಮಂಗಳೂರಿಗೆ ಸಮೀಪವಾಗಿ ಚಂದದ ಸ್ಥಳಗಳಿಗೆ ಕಡಿಮೆಯಿದೆಯೇ?" ಎಂದ "ತುಂಬ ಇವೆ. ನಾನೆಂದುದು ಅದನ್ನಲ್ಲ. ನಿಮ್ಮ ರಾಧಾಕೃಷ್ಣನವರ ನಿಜವಾದ ಯೋಗ್ಯತೆ ಜನರಿಗೆ ತಿಳಿಯಬೇಕಾದರೆ, ಮಂಗಳೂರಿಗೆ ಸಮೀಪವಾಗಿರಬೇಕೆಂದೆ. ಆಗಲಾದರೆ, ಆಶ್ರಮಕ್ಕೆ ಎಷ್ಟೋ ವಿದ್ಯಾರ್ಥಿಗಳು ಸೇರುತ್ತಿದ್ದರು. ಇದು ತೀರ, ಹಾದಿ ಬಿಟ್ಟಿರುವ ಸ್ಥಳ. ಅರಣ್ಯದಲ್ಲಿರುವ ಕುಸುಮದ ಹಾಗೆ; ಪರಿಮಳ ಮೂಸುವವರಿಲ್ಲದೆ ವ್ಯರ್ಥವಾಗುತ್ತಿದೆ."

ಅಷ್ಟಕ್ಕೆ ಶಾಲೆಯ ಅಂಗಳ ಬಂದಿತು. ಅವರಿಬ್ಬರ ಮಾತುಗಳನ್ನು ಕೇಳಿ, ರಾಮಣ್ಣ, ರಾಧಾಕೃಷ್ಣ ಇಬ್ಬರೂ ಹೊರಕ್ಕೆ ಬಂದರು. ಶ್ಯಾಮ ಅಣ್ಣನನ್ನು ಕರೆದು "ಅಣ್ಣಾ, ಇವರನ್ನೇ ಹೇಳಿದ್ದು; ಮಂಗಳೂರು ಮಿರರಿನ ಸಂಪಾದಕರು ಇವರು. ಈಗ ಅದಕ್ಕೆ ಬೇರೆಯ ಹೆಸರನ್ನಿರಿಸಿದ್ದಾರೆ— 'ಕೆಂಪು ತಾರೆ' ಎಂದು." ಎಂದು ಪ್ರಭುವಿನ ಪರಿಚಯ ಮಾಡಿಕೊಟ್ಟನು. ಸರಿ, ಉಭಯತರಲ್ಲಿಯೂ ಪರಿಚಯವಾಯಿತು. ಎಲ್ಲರೂ ಶಾಲೆಯ ಆವರಣಕ್ಕೆ ಹೋಗಿ ಕುಳಿತರು. ಎಳನೀರುಗಳನ್ನು ತರಲು ಶ್ಯಾಮ ಬಯಲಿಗೆ ಹೋದ. ತಾಸಿಗೆ ಒಮ್ಮೆಯಾದರೂ, ಕಾಫಿ ನೈವೇದ್ಯ ಆಗುತ್ತಿದ್ದ ಪ್ರಭು

ದೇವನಿಗೆ ಎಳನೀರನ್ನಾದರೂ ಸಲಿಸಬೇಡವೇ? ಅಂತೆಯೇ ರಾಧಾಕೃಷ್ಣ "ನಿಮಗೆ ಕಾಫಿ, ಟೀ ಅಭ್ಯಾಸವಿರಬೇಕು. ಇಲ್ಲಿ ನೀರು ಬೆಲ್ಲವೇ ಗತಿ! ಅದಕ್ಕಾಗಿ ಎಳನೀರು ತರಲು ಶ್ಯಾಮ ಹೋಗಿದ್ದಾನೆ. ಶ್ಯಾಮನಿಗೆ ನಿಮ್ಮ ಪರಿಚಯ ಜೈಲಿನಲ್ಲಿ ಆಯಿತೆಂದು ಹೇಳಿದ. ಅಲ್ಲಿ ಎಷ್ಟು ತಿಂಗಳ ಕಾಲ ಇದ್ದಿರಿ?"

"ಒಂಬತ್ತು ತಿಂಗಳು. ಅಷ್ಟು ದಿವಸಗಳು ಹೇಗೆ ಸರಿಯಿತೆಂದೇ ತಿಳಿಯಲಿಲ್ಲ. ನಾವು ಜೈಲನ್ನೇ ಕಾಂಗ್ರೆಸ್ಸು ಶಿಬಿರವನ್ನಾಗಿ ಮಾಡಿಬಿಟ್ಟೆವು. ಅಲ್ಲಿ ನಾವು ಮಾಡಿದ್ದು ಮಾಫಿ."

"ಕನ್ನಾನೂರಿನಲ್ಲಿ ಹಾಗಿರಬಹುದು. ಉತ್ತರ ಕರ್ನಾಟಕದ ಜೈಲುಗಳು ತಮ್ಮ ಮರ್ಯಾದೆಯನ್ನು ಕೆಡಿಸಿಕೊಳ್ಳಲಿಲ್ಲ. ಅನ್ನಾಹಾರದ ವಿಷಯದಲ್ಲಿ—ಹೇಳಿಕೇಳಿಯೇ ಜೈಲು; ಉಳಿದ ವಿಷಯಗಳಲ್ಲಿಯೂ ತುಂಬ ಕಷ್ಟವಿತ್ತಂತೆ. ಸೆರೆಮನೆಗೆ ಹೋದ ತರುಣರ ಉಕ್ಕನ್ನು ಮುರಿಯುವ ಹಟದಿಂದ, ಎಷ್ಟು ದಣಿಸಿದರೆಂದು ಹೇಳುವುದಕ್ಕಿಲ್ಲ."

"ನಿಮ್ಮ ಶ್ಯಾಮಣ್ಣನಿಂದ ಅನೇಕ ಸಂಗತಿಗಳು ತಿಳಿದುವು. ನಿಮ್ಮ ವಿಚಾರವನ್ನೆಲ್ಲ ಆತ ಆಗಾಗ ನನಗೆ ಹೇಳುತ್ತಿದ್ದ. ನಮ್ಮ ಊರಿನ ಹಣೆಯ ಬರಹ ನಿಮಗೇನೂ ಹೊಸತಲ್ಲ. ನಮ್ಮ ಶ್ರೀಮಂತರಿಗೆ ಯಾವ ಕಳಕಳಿಯೂ ಇಲ್ಲ; ಮರ್ಯಾದೆಯೂ ಇಲ್ಲ. ಉತ್ತರ ಕನ್ನಡದ ಕತೆಯನ್ನು ಕೇಳುವಾಗ, ನನಗೆ ಆಶ್ಚರ್ಯವಾಗುತ್ತಿತ್ತು. ಇಲ್ಲಿ ಎಲ್ಲವೂ 'ನೀರ ಮೇಲಣ ಗುಳ್ಳೆಯಂದದಿ' ಆಗಿಹೋಗಿಬಿಟ್ಟಿತು. ಸೆರೆಗೆ ಹೋಗಿ ಬಂದ ಜನಗಳಲ್ಲಂತೂ ಈಗ ತುಂಬ ನಿರಾಶೆಯು ಹಬ್ಬಿದೆ. ತಾವಿನ್ನು ಯಾರ ಮಾತನ್ನು ನಂಬಿಯೂ ಜೈಲಿಗೆ ಹೋಗಲಾರೆವು ಎನ್ನುತ್ತಿದ್ದಾರೆ. ನನಗೆ ಒಂದು ಸಂಕಲ್ಪವಿದೆ. ಪಿಕೆಟಿಂಗ್ ಕೆಲಸವನ್ನು ತಿರುಗಿ ತೊಡಗಿಸಬೇಕು ಎಂದು ತುಂಬ ಆಸೆಯಾಗಿದೆ. ಆದರೆ ಊರಿನ ಜನಕ್ಕೆ ರಾಜಕೀಯವೇ ಸಾಕುಸಾಕಾಗಿದೆ."

"ಏನು ಕಾರಣ?"

"ಏನೆನ್ನಲಿ? ಸಮನಾದ ಮುಂದಾಳುಗಳ ಕೊರತೆ. ಮೊದಲು ಧೈರ್ಯ ಕೊಟ್ಟವರಲ್ಲಿ, ಹಲವರು ಆ ಮೇಲೆ ಹಿಂದಕ್ಕೆ ಸರಿದರು. ಜನರು ಜೈಲಿಗೆ ಹೋಗಿರುವಾಗ—ಅವರ ಮನೆಯವರ ಸ್ಥಿತಿ ಏನಾಗಿದೆ, ಬದು

ಕಿದ್ದಾರೆಯೇ, ಸತ್ತಿದ್ದಾರೆಯೇ?—ಎಂದು ವಿಚಾರಿಸುವವರು ಇಲ್ಲದೇ ಹೋಯಿತು. ನಾನು ಕೆಲವು ಜವಾಬ್ದಾರ ಮನುಷ್ಯರನ್ನೇ ಕೇಳಿ ನೋಡಿದೆ. ಅವರೆಂದರು—'ಸತ್ಯಾಗ್ರಹಿಗಳು ಪ್ರತಿಜ್ಞೆ ಸಹಿ ಮಾಡುವಾಗಲೇ, ಅಂತಹ ಸ್ಥಿತಿಯನ್ನು ನೋಡಬೇಕಿತ್ತು. ಯಾರ ಸಹಾಯವನ್ನೂ ಅಪೇಕ್ಷಿಸಬಾರದು ಎಂಬ ಅಭಿಪ್ರಾಯವು ಆ ಪ್ರತಿಜ್ಞೆಯಲ್ಲೇ ಅಡಕವಾಗಿದೆ' ಎಂದುಬಿಟ್ಟರು."

"ಅದು ಸರಿಯೇ. ಅವರವರ ಹೊಣೆಗಾರಿಕೆ ಇರುವಷ್ಟೇನೇ ಉಳಿದವರಿಗೂ ಹೊಣೆಯಿಲ್ಲವೇ? ಅದು ಕರಾರಿನ ವ್ಯಾಪಾರವೇ? ಸತ್ಯಾಗ್ರಹ ಒಡ್ಡಿದವರು—ಏತಕ್ಕಾಗಿ ಹೋದರು, ಯಾರ ಕೆಲಸಕ್ಕಾಗಿ ಹೋದರು, ಎಂದು ತಿಳಿಯುವ ಯೋಗ್ಯತೆ, ಉಳಿದವರಿಗೆ ಇರಬೇಡವೇ? ಒಮ್ಮೆ ಸತ್ಯಾಗ್ರಹ ಒಡ್ಡಿದವರು ಇನ್ನೊಮ್ಮೆ ಒಡ್ಡಬೇಡವೇ? ಸ್ವರಾಜ್ಯ ಸಂಪಾದನೆ ಆಗಿ ಬಿಟ್ಟಿತೇ? ಹಾಗಿದ್ದರೂ, ಕೆಲಸ ಮಾಡಿದ ಸೈನಿಕರನ್ನು ನಾವು ಮರೆತು ಬಿಡುವ ಹಾಗಿದೆಯೇ?"

"ಇಲ್ಲ, ನಮ್ಮಲ್ಲಿ ಸಮನಾದ ಮುಖಂಡರಿಲ್ಲ. ಹಾಗೆಂದರೆ ಇದ್ದವರು ಸಿಟ್ಟಾದಾರು. ನಾವೇನು ಜೈಲಿಗೆ ಹೋಗಲಿಲ್ಲವೇ—ಎಂದು ಕೇಳಿಯಾರು. ಅದರ ಮೇಲಿಂದಲೇ, ಅವರ ಗೌರವ, ಕೀರ್ತಿಗಳನ್ನು ನಾವು ಅಳೆಯಬೇಕಾಗಿದೆ."

"ಎಲ್ಲಿಯ ತನಕ ನಮ್ಮ ಜನ, ಇದು ದೀರ್ಘಕಾಲದ ಸಮರ ಎಂದು ತಿಳಿಯುವುದಿಲ್ಲವೋ, ಹಾಗೆ ತಿಳಿದು, ಹಿಂದು ಮುಂದಿನ ವ್ಯವಸ್ಥೆ ಮಾಡುವುದಿಲ್ಲವೋ, ಅಲ್ಲಿಯ ತನಕ ನಮ್ಮಿಂದ ಏನೂ ಆಗುವುದಿಲ್ಲ. ಮಳೆ ಬಂದ ಕೂಡಲೇ ಹಾರುವ ಹಾತೆಗಳಂತೆ ಇವರ ಕೆಲಸ. ಹಾರಿದಷ್ಟೇ ಸುಲಭದಲ್ಲಿ ರೆಕ್ಕೆ ಮುರಿದು ಬೀಳುತ್ತಾರೆ. ಹಿಂದಿನ ಅಸಹಕಾರದ ಚಳವಳದಲ್ಲಿ ಸೇರಿದ ನೂರು ಮಂದಿಯಲ್ಲಿ, ಐದು ಮಂದಿ ಈಗ ಉಳಿದಿಲ್ಲ. ಇನ್ನೊಮ್ಮೆ ಚಳವಳ ಹೂಡುವ ಕಾಲ ಬಂದರೆ, ಇವರಲ್ಲಿ ಸೇಕಡಾ ಐದು ಮಂದಿಯಷ್ಟು ಮುಂದೆಯೂ ಉಳಿಯುವುದಿಲ್ಲ.

"ಇದಕ್ಕೆ ನನಗೆ ಕಾಣಿಸುವ ದಾರಿ ಒಂದೇನೆ. ಇಲ್ಲಿನ ಕಾಂಗ್ರೆಸ್ಸನ್ನು ನಾವು ಸಂಪೂರ್ಣ ವಶಮಾಡಿಕೊಳ್ಳಬೇಕು. ಕೆಲಸಕ್ಕೆ ಬಾರದ ಜೊಳ್ಳುಗಳನ್ನು ನಿರ್ದಾಕ್ಷಿಣ್ಯವಾಗಿ ಗಾಳಿಗೆ ಹಾರಿಸಿ ಬಿಡಬೇಕು."

"ಆ ಯೋಚನೆಯೇನೋ ಸಮನಾದುದೇ. ಆದರೆ ಸಾಮಾನ್ಯ ಜನರು, ರಾಜಕೀಯ ವಿಚಾರದಲ್ಲಿ ಅಫೀಮು ತಿಂದು ಬಿದ್ದಿರುವಷ್ಟು ದಿವಸ, ಠಕ್ಕರೇ ತೆರೆಯ ಮುಂದಕ್ಕೆ ಬಂದು ನಲಿಯುತ್ತಾರೆ. ಕಾಳು ಯಾವುದು? ಜೊಳ್ಳು ಯಾವುದು ಎಂದು ತಿಳಿಯುವ ಯೋಗ್ಯತೆ ಜನಕ್ಕೆ ಬರಬೇಕಾದುದು ಮುಖ್ಯ"

"ಅದಕ್ಕೆ ಜನಕ್ಕೆ ಸಮನಾದ ರಾಜಕೀಯ ಶಿಕ್ಷಣ ಕೊಡುವುದು, ನಮ್ಮ ಕೆಲಸ. ನಮ್ಮ ಮುಂದಾಳುಗಳನ್ನು ನಾವು ನಿರ್ಮಿಸಬೇಕಾಗಿದೆ. ಮುಂದೆ ನಿಂತವರ ಬಾಲವನ್ನು ಹಿಡಿಯುವುದಲ್ಲ. ಈಗಿರುವ ಒಬ್ಬೊಬ್ಬರನ್ನು ನಂಬಿಯೂ ಫಲವಿಲ್ಲ. ಡಾ| ನಂದರವರಲ್ಲಿಯೂ ನನಗೆ ಸಂಪೂರ್ಣ ನಿರಾಶೆಯಾಗಿ ಬಿಟ್ಟಿದೆ."

"ಅವರಿಗೇನು ನಿರಾಶೆ? ಅವರೇನು ಮಾಡಿದರು?"

"ಅವರಿಗಲ್ಲ. ಅವರ ವಿಷಯದಲ್ಲಿ ನಮಗೆ. ನಮ್ಮ ಜಿಲ್ಲೆಯು ಇಷ್ಟು ನಪ್ಪೆಯಾಗಲು ಅವರೇನೆ ಕಾರಣ. ಮುಖ್ಯ ಸಮಯದಲ್ಲಿ—ತಮ್ಮ ಸುಖಕ್ಕೆ, ತಮ್ಮ ಹಣಕ್ಕೆ ತೊಂದರೆ ಬಂದೀತೆಂದು ಹೆದರಿ ಹಿಂದೆ ಕಾಲುತೆಗೆದರು. ಖಾಸಗಿಯಿಂದ ಕೇಳಿದವರಿಗೆ, "ನಾನು ಹಿಂದೆ ಇದ್ದೇನೆ, ನೀವು ಮುಂದೆ ಹೋಗಿ; ನನ್ನ ಹೆಂಡತಿಯು ಕಾಯಿಲೆಯಲ್ಲನಾದರೆ, ನಾನು ಇಷ್ಟರಲ್ಲಿ ಜೈಲಿನಲ್ಲಿ ಇರುತ್ತಿದ್ದೆ— ಎನ್ನುತ್ತಿದ್ದರು. ಅಷ್ಟು ಮಾತ್ರವೇ ಅಲ್ಲ, ಸಂಸ್ಥೆಯ ಯಾವುದೊಂದು ಲೆಕ್ಕಪತ್ರವನ್ನು, ಹಣಕಾಸಿನ ವಿಚಾರವನ್ನು, ಕೇಳುವವರಿಲ್ಲದಾಗಿದೆ."

"ಕೇಳಿದರೆ?"

"ಕಮಿಟಿಯವರೇ ಕೇಳಿಯಾಯಿತು. ಅದೆಲ್ಲವೂ ಪೋಲೀಸರ ಕೈಗೆ ಸಿಕ್ಕಿ ನಮಗೆ ಹಣ ಸಹಾಯಮಾಡಿದವರು, ಜೈಲಿಗೆ ಹೋಗುವ ಪ್ರಸಂಗ ಬಂದೀತೆಂದು ತಾನು ಸುಟ್ಟು ಹಾಕಿಬಿಟ್ಟೆ. ಅವುಗಳನ್ನೆಲ್ಲ ಎಲ್ಲಿರಿಸಲಿ? ನಮ್ಮ ಸ್ವಯಂಸೇವಕರಲ್ಲಿಯೂ ಸಿ. ಐ. ಡಿಗಳು ಸೇರಿದ್ದಾರೆಂಬುದು ಗೊತ್ತು, ಎಂದು ಹೇಳಿಬಿಟ್ಟರು. ಅವರ ಮಾತು ಸತ್ಯವೇ ಇರಲಿ, ಸುಳ್ಳೇ ಇರಲಿ. ಮುಂದೆ ಮಾತೇ ಇಲ್ಲವಲ್ಲ."

"ಒಟ್ಟು ಎಷ್ಟು ಹಣ ಕೂಡಿತ್ತು? ಸತ್ಯಾಗ್ರಹಿಗಳ ಕುಟುಂಬಕ್ಕೆ ಎಷ್ಟು ಹೋಯಿತು ಎಂದು ಏನಾದರೂ ಹೇಳಿದರೇ?"

"ಯಾವುದೂ ಇಲ್ಲ. 'ಹಣವೆಲ್ಲ ಎಂದೋ ಖರ್ಚಾಗಿ ಬಿಟ್ಟಿದೆ. ಹಾಗೆ ಖರ್ಚು ಮಾಡದಿರುತ್ತಿದ್ದರೆ, ಇಷ್ಟೆಲ್ಲ ಸತ್ಯಾಗ್ರಹಿಗಳು ಜೈಲಿಗೆ ಹೋಗುತ್ತಿದ್ದರೇ?' ಎಂದು ಹೇಳಿದರು. ಈಗಲೂ ಊರಿನ ಮುಖಂಡತನಕ್ಕೆ ಅವರು ಪಟ್ಟಭದ್ರರು. ನನಗೆ ಅನಿಸುತ್ತಿದೆ—ಈ ಶ್ರೀಮಂತರೆನ್ನುವ ಜಾತಿಯೇ ಸಮಾಜ ಜೀವನದ ಜೇನೆಗಳೆಂದು. ನಾವು, ಸಮತಾವಾದವನ್ನು ಪ್ರಚಾರ ಮಾಡಿ, ಇವರನ್ನು ಓಡಿಸದೆ ಬೇರೆ ದಾರಿಯೇ ಇಲ್ಲ."

"ಅಂದರೆ, ನೀವು ಇನ್ನೊಂದು ರಾಜಕೀಯ ಪಂಗಡ ಕಟ್ಟುವವರೇ? ಈ ಸಮಾಜವಾದವನ್ನು ಕೂಗುವವರಲ್ಲಿ ಶ್ರೀಮಂತರು ಇಲ್ಲ ಎಂಬುದು ನಿಮ್ಮ ಯೋಚನೆಯೇ? ಅಪ್ರಾಣಿಕತೆ ಯಾವ ಜನರನ್ನೂ ಬಿಟ್ಟಿಲ್ಲ. ನಾವು ಅವರೊಡನೆ ಹೋರಾಡಬೇಕಾಗಿದೆ. ಈಗ, ಬ್ರಿಟಿಷರೊಡನೆ, ಹೋರಾಡುವ ಕೆಲಸ ಮುಖ್ಯವಾಗಿರುವಾಗ, ಮನೆಯಲ್ಲಿಯೂ ವೈರಿಗಳನ್ನು ಕಟ್ಟಿಕೊಳ್ಳುವುದು ಸುಖವಲ್ಲ."

ಹೀಗೇನೇ ತಾಸು ಎರಡು ತಾಸುಗಳ ಕಾಲ ಅವರಲ್ಲಿ ಮಾತುಕತೆ ನಡೆಯಿತು. ಪ್ರಭುದೇವ ತನ್ನ ಕೆಂಪು ತಾರೆಯ ವಿಷಯವಾಗಿ ಮಾತನಾಡಿದನು. ಅಲ್ಲಿಂದ ಪತ್ರಿಕೆಗಳ ವಿಚಾರವಾಗಿ, ಮಾತು ಹರಿಯಿತು. ಪ್ರಭುದೇವ "ನಿಮ್ಮ ವೀರವಾಣಿ ಕರಪತ್ರಗಳನ್ನು ಓದಿ ಹರ್ಷಗೊಂಡವರಲ್ಲಿ ನಾನೂ ಒಬ್ಬ. ನಿಮ್ಮ ಬರವಣಿಗೆ ಅಷ್ಟು ಚೆನ್ನಾಗಿತ್ತು. ವಿಷಯಕ್ಕೆ ತಕ್ಕ ಮಾತಿತ್ತು. ಎಷ್ಟು ಕೆಲವೇ ಮಾತುಗಳಲ್ಲಿ, ಎಷ್ಟು ವಿಷಯಗಳನ್ನು ಹೇಳಬಹುದೋ, ಅಷ್ಟನ್ನೂ ಹೇಳುತ್ತಿದ್ದಿರಿ ನೀವು. ನೀವು ಆ ಕೆಲಸವನ್ನು ನಿಲ್ಲಿಸಬಾರದು. ನಮ್ಮ ಜನಜೀವನಕ್ಕೂ, ನಮಗೂ, ಬರವಣಿಗೆಯ ಸಂಬಂಧವನ್ನು ನಾವು ಬೆಳೆಯಿಸಬೇಕಾಗಿದೆ. ಜನರು ಮಂಕು ಕುರಿಗಳ ಹಾಗೆ, ಪ್ರತಿಯೊಂದಕ್ಕೂ ಮುಂದಾಳುಗಳ ಮುಖವನ್ನು ನೋಡುವಂತಿರಬಾರದು. ಅವರೂ ವಿಚಾರಪರರಾಗಬೇಕು. ಸಾರ್ವಜನಿಕ ಸಂಸ್ಥೆಗಳು ಯಾವುದೇ ಇರಲಿ, ಅವುಗಳಲ್ಲಿ ಹಾಸಿಗೆಯಲ್ಲಿ ಸೇರುವ ತಗಣೆಗಳ ಹಾಗೆ, ಠಕ್ಕರು, ಸಂಚುಗಾರರು, ಸ್ವಾರ್ಥಿಗಳು, ಸೇರದಂತೆ ನೋಡಿಕೊಳ್ಳಬೇಕು." ಎಂದು ಮೊದಲಾಗಿ ಹೇಳಿ ಅಂಥ ಕೆಲಸಗಳಲ್ಲಿ ರಾಧಾಕೃಷ್ಣನ ಲೇಖನಿಯ ಸಹಾಯವನ್ನು ಬೇಡಿದನು.

ಈ ನಡುವೆ ಬ್ರಾಯಾರಿಕೆಯನ್ನು ಕುಡಿದಾಯಿತು. ಹೊರಗೆ ಸೂರ್ಯನ ಬಿಸಿಲು ಇಳಿದಿತ್ತು. ರಾಧಾಕೃಷ್ಣ ಅವರೊಡನೆ "ಇಂದೇ ಹೋಗಬೇಕಿಲ್ಲವಷ್ಟೆ." ಎಂದು, ಅವರನ್ನು ತನ್ನ ಭೂಮಿಯ ಸುತ್ತಲೂ ಕರೆದೊಯ್ದು, ಒಂದೊಂದಾಗಿ, ತನ್ನ ಹಲವು ನಷ್ಟ ಪ್ರಯತ್ನಗಳನ್ನು ಕುರಿತು, ಹೇಳತೊಡಗಿದನು. ಆಗಲೇ ಪ್ರಭುದೇವನ ಕಿವಿ ನಿಮಿರಿತು. "ನಾನು ಯಾವಾಗಲೂ, ನಿಮ್ಮ ಶ್ಯಾಮನ ಹತ್ತಿರ ಹೇಳುತ್ತಿದ್ದೆ; ಇಂಥ ಸ್ಥಳ ಪೇಟೆಯಲ್ಲಿರಬೇಕು; ಪೇಟೆಗೆ ಸಮೀಪವಾದರೂ ಇರಬೇಕೆಂದು. ಆಗ ನಾಲ್ಕು ಜನ ಬಂದು ಹೋಗುತ್ತಾರೆ, ಮೆಚ್ಚುತ್ತಾರೆ, ಸಹಾಯಮಾಡುತ್ತಾರೆ. ಆಗ ಸಂಸ್ಥೆಯನ್ನು ಚೆನ್ನಾಗಿ ನಡೆಯಿಸುವುದು ಸಾಧ್ಯ. ನಿಮ್ಮ ಈ ಅನುಭವಗಳ ಜತೆಗೆ, ನನ್ನ ಪ್ರಚಾರದ ಶಕ್ತಿಯನ್ನು ಸೇರಿಸಿದರೆ, ದೊಡ್ಡ ಸಂಸ್ಥೆಯನ್ನೇ ನಾವು ನಿರ್ಮಿಸಬಹುದು" ಎಂದನು.

"ಏನಾದರೂ ಮಾಡಬೇಕೆಂಬ ಹಟ ನನಗೆ ಬಹಳವಾಗಿದೆ. ಇದನ್ನೊಂದು, ಅನಾಥಾಲಯವಾಗಿ ಮಾರ್ಪಡಿಸಿ, ನಾಲ್ಕು ಹುಡುಗರಿಗಾದರೂ, ಔದ್ಯೋಗಿಕ, ಮತ್ತು ಕೃಷಿಕ ಶಿಕ್ಷಣ ಕೊಡಿಸಬೇಕೆಂಬ ಕನಸನ್ನು ಹೊತ್ತು ಎಂಟು ವರ್ಷಗಳಾದುವು. ಈಗ ಇಲ್ಲಿನ ತಯಾರಿಯೆಂದರೆ ಶ್ಯಾಮನೊಬ್ಬ. ಈ ಆವರಣಕ್ಕೆ ಸಮನಾಗಿ ಹಳ್ಳಿಯ ಗೊಡ್ಡನನ್ನು ತಯಾರಿಸಿದಂತಾಗಿದೆ. ನನ್ನ ಬೇರೆ ಎಲ್ಲ ಆಸೆಗಳೂ ನಿರರ್ಥಕವಾದುವು."

"ತಾವು ಹಾಗೆ ನಿರಾಶರಾಗಬೇಕಾಗಿಲ್ಲ. ಇಂಥ ಒಂದು ಆದರ್ಶದ ಸಲುವಾಗಿ, ಎಷ್ಟೋ ಹಣ ಕೂಡಿಸಬಹುದೆಂಬ ಧೈರ್ಯ ನನಗಿದೆ. ಸಂಸ್ಥೆಗೆ ಬೇಕಾದುದೇನು?—ಕೆಲಸಮಾಡುವ ವ್ಯಕ್ತಿ; ಪ್ರಾಮಾಣಿಕನಾದ ವ್ಯಕ್ತಿ. ಅದಕ್ಕೆ ನಿಮ್ಮಂತಹರಿರುವಾಗ ಯಾವ ಹೆದರಿಕೆಯೂ ಇಲ್ಲ. ನಮ್ಮ ಶಹರಿನಲ್ಲಿ ನೋಡಬಾರದೇ? ಮಾರಿಯಮ್ಮನ ಭಜನಾ ಮಂದಿರದಿಂದ ಹಿಡಿದು, ಏಕೂ ಬಾರದ ಎಲಿಮೆಂಟರಿ ಶಾಲೆಗಳ ವರೆಗೆ, ವರ್ಷಕ್ಕೆ ನೂರಾರು ಸಂಸ್ಥೆಗಳು, ತಮ್ಮ ವರದಿಗಳನ್ನು ಅಚ್ಚುಹಾಕಿಸುತ್ತಿದ್ದಾವೆ. ಎಲ್ಲವೂ ನಡೆಯುತ್ತಿರುವುದು ಸಾರ್ವಜನಿಕರ ಹಣದಿಂದಲೇ. ನಿಮ್ಮ ಶ್ರಮದ, ಕೆಲಸದ ನೂರನೆಯ ಒಂದಂಶ ಕೆಲಸವು ಅಲ್ಲಿ ಕಾಣಿಸುತ್ತಲಿಲ್ಲ. ಪೇಟೆಯ ರೀತಿ ಬೇರೆ. ಅಲ್ಲಿ ಕೆಲಸಕ್ಕಿಂತ ಹೆಚ್ಚಾಗಿ ಪ್ರಚಾರದ ಡಬ್ಬು ಬೇಕು. ಒಂದು ಗೋರಿ ಕಟ್ಟಿಸುವುದಾದರೂ ಸರಿಯೇ, ಅದರ ಅನಾವರಣವನ್ನು

ಜಿಲ್ಲಾ ಕಲೆಕ್ಟರರಿಂದಲೇ ಮಾಡಿಸುತ್ತಾರೆ. ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವಗಳು ಜಿಲ್ಲಾ ಜಡ್ಜರ ಅಧ್ಯಕ್ಷತೆಯಲ್ಲಿಯೇ ಆಗಬೇಕು. ಊರಿಗೆ ಅಖಿಲ ಹಿಂದುಸ್ಥಾನದ ಕೀರ್ತಿಯುಳ್ಳ ಒಬ್ಬ ಮನುಷ್ಯ ಬಂದ ದ್ದಾದರೆ, ಮಂಗಳೂರಿನ ಸಾವಿರ ಸಂಸ್ಥೆಗಳು ತಲೆ ಎತ್ತುತ್ತವೆ."

ಸಂಜೆ ಅವರ ತಿರುಗಾಟ ಮುಗಿದು, ಮನೆಗೆ ಬಂದು, ಊಟವಾಯಿತು. ರಾಮಣ್ಣ, ಇವರ ಬೆನ್ನಿನ ಹಿಂದೆಯೇ ಮೂಕನಾಗಿ ಅನುಸರಿಸುತ್ತಿದ್ದ. ಸಂಜೆ ಅವನು ತನ್ನ ಮನೆಗೆ ಹೋದ. ಊಟದ ಕಾಲದಲ್ಲೂ ಊಟಮುಗಿದ ಮೇಲೆಯೂ ಸಂಭಾಷಣೆನಡೆಯುತ್ತಲೇ ಇತ್ತು. ಮುಕ್ಕಾಲು ಪಾಲಿನ ಮಾತಿನ ಹೊಣೆಯು ಪ್ರಭುದೇವನದ್ದು. ಉಭಯತರಲ್ಲಿ ಆದರ ಉಳ್ಳವನಾಗಿದ್ದ ಶ್ಯಾಮನೇ ಶ್ರೋತೃವರ್ಗ. ಅಷ್ಟು ಮಾತಿನ ಬಲವಂತಕ್ಕೆ ಸಿಕ್ಕಿದ ಮೇಲೆ ರಾಧಾಕೃಷ್ಣನು, "ವಿರಾಮವಾದಾಗ ನಿಮ್ಮ ಪತ್ರಿಕೆಗೆ ತಿಳಿದುದನ್ನು ಬರೆಯುತ್ತೇನೆ" ಎಂದನು. ಮರುದಿನ ಬೆಳಗ್ಗೆ ಹೊರಡುವಾಗಲೂ ಪ್ರಭುದೇವನ ಉಪನ್ಯಾಸ ಮುಗಿದಿರಲಿಲ್ಲ "ನೀವು ಒಮ್ಮೆ ನನ್ನ ಮಾತನ್ನು ಕೇಳಿ—ಇದನ್ನು ಕದ್ರಿಗೋ, ಕಂಕನಾಡಿಯ ಸಮೀಪಕ್ಕೋ ತಂದು ಹಾಕಿ. ಆಗ ಹಣ ಕೂಡಿಸುವ ಹೊಣೆ ನನ್ನದು. ಆ ವಿಷಯವನ್ನು ನನಗೆ ಬಿಟ್ಟು, ನೀವು ಬರಿಯ ಕೆಲಸದ ಭಾರವನ್ನು ಹೊತ್ತರೆ ಸಾಕು" ಎಂದನು. "ನೋಡುವ. ಯಾವುದಕ್ಕೂ ಈ ಸ್ಥಳವನ್ನು ಬಿಟ್ಟಾಗಬೇಕಲ್ಲ; ಬೇರೆ ಜಾಗ ಕಂಡಾಗಬೇಕಲ್ಲ" ಎಂದು ರಾಧಾಕೃಷ್ಣ ಹೇಳಿದನು. ಹಾಗೆ ಬಿಡುವ ಕುತೂಹಲ ಆತನಲ್ಲಿ ಕಂಡು ಬಂದುದರಿಂದ, ಪ್ರಭುದೇವ ತನ್ನ ಉದ್ದೇಶ ಸಾರ್ಥಕವಾಯಿತೆಂದು ತಿಳಿದು ಹೊರಟು ಹೋದನು.

ಮುಂದಿನ ವಾರವೇ ರಾಧಾಕೃಷ್ಣ, ಕಂದಾಪುರವನ್ನು ಸೇರಿ, ತನ್ನ ಮನೆಯ ವ್ಯವಹಾರವಲ್ಲಿ ಮನಸ್ಸನ್ನು ತೊಡಕಿಸಿದನು. ತಮ್ಮ ಅನಂತಕೃಷ್ಣ ಈಗ ಸಂಸಾರಿಗನು. ಅವನಿಗೂ, ಶ್ಯಾಮನಿಗೂ ಸಮಪ್ರಾಯವಾಗಬಹುದು. ಆತ ಈಗಾಗಲೇ ಮೂರು ಮಕ್ಕಳ ತಂದೆಯಾಗಿದ್ದಾನೆ. ಅಣ್ಣ ಅಜ್ಞಾತವಾಸದಲ್ಲಿದ್ದಾಗ ತನ್ನ ತಮ್ಮನಿಗೂ ಒಂದು ಲಗ್ನ ಮಾಡಿಸಿದ್ದಾನೆ. ಆತ ಊರಲ್ಲಿಯೇ ಒಂದು ಗುಮಾಸ್ತಿಕೆ ಕೆಲಸ ದೊರಕಿಸಿಕೊಂಡಿದ್ದಾನೆ. ಸುಮಾರು ಒಂದು ತಿಂಗಳ ಕಾಲ ರಾಧಾಕೃಷ್ಣನು, ತನ್ನ ತಾಯಿಯ ಬಳಿಯಲ್ಲಿ ಸಮಯ ಕಳೆದನು.

ಇತ್ತ ಪ್ರಭುದೇವನ ಸವಾರಿ ಉತ್ಸಾಹದಿಂದ ಮಂಗಳೂರಿಗೆ ಬಂದ ಮೇಲೆ, ಸುಮ್ಮನೆ ಕುಳಿತಿರಲಿಲ್ಲ. ಬಂದವನೇ, ತನ್ನ ಕೆಂಪು ತಾರೆಯಲ್ಲಿ 'ಸತ್ಯಾಗ್ರಹದ ಸ್ಮೃತಿ ಪಥಗಳು ಎಂಬ ಲೇಖಮಾಲೆ ಬರಲಿದೆ" ಎಂದು ಪ್ರಕಟಿಸಿದನು. "ಉತ್ತರ ಕನ್ನಡ ಜಿಲ್ಲೆಯಲ್ಲಿ ಫ್ಲೊರೇನ್ಸ್ ನೈಟಿಂಗೇಲರಂತೆ ದುಡಿದ, ಶ್ರೀ ರಾ—ರವರು ಬರೆಯಲು ಒಪ್ಪಿದ್ದಾರೆ" ಎಂದು ಪ್ರಕಟಿಸಿದನು. ಅದಕ್ಕೆ ಪೂರ್ವ ಪೀಠಿಕೆಯಾಗಿ ಆ 'ಶ್ರೀ'ಯುವರ ಪರಿಚಯವನ್ನುಂಟು ಮಾಡಲು ತಾನೊಂದು ದೀರ್ಘ ಲೇಖನವನ್ನು ಬರೆದನು. ನೆರೆಹಾವಳಿಯ ಕಾಲದಲ್ಲಿ ಆತ ಮಾಡಿದ ಕೆಲಸವನ್ನು ಶ್ಯಾಮಣ್ಣನಿಂದ ಕೇಳಿ ತಿಳಿದು, ಅವಕ್ಕೆ ಉಪ್ಪುಕಾರ ಸವರಿ, ತಾನೊಂದು ಮುನ್ನುಡಿ ಬರೆದನು. "ಶ್ರೀರಾ-ರವರು ನೆರೆಹಾವಳಿಯ ಕಾಲದಲ್ಲಿ ಸಲ್ಲಿಸಿದ ಸೇವೆ ಯಾರಿಗೆ ತಿಳಿದಿದೆ? ಇಲಿಯಂತೆ ಸದ್ದಿಲ್ಲದೆ ದುಡಿಯುವ ಸ್ವಭಾವ ಅವರದು. ಮಾತಿನ ಮಲ್ಲರಲ್ಲ—ಎಂಬ ಅಭಿಮಾನ ಪೂರ್ವಕವಾದ ಪ್ರಸ್ತಾವನೆಯನ್ನು ಬರೆದನು. ಈ ತೆರನ ವಿಶೇಷಣ, ಪ್ರಶಂಸೆಗಳನ್ನು ಬಲು ಹಿಂದೆ, ಡಾ| ನಂದರವರಿಗೆ ಆತನು ಆರ್ಪಿಸಿದ ಕಾಲವೊಂದಿತ್ತು. ಆದರೆ ಈಗ ಆತ ನಂದರ ವಿಷಯದಲ್ಲಿ ಭಿನ್ನ ಮನಸ್ಕ; ದ್ವೇಷಿ ಎಂದರೂ ಸರಿಯೇ. ಆದರೆ ನಂದರಿಗೆ, ತಮ್ಮ ಕಹಳೆಯನ್ನೂದಿಕೊಳ್ಳಲು ಇನ್ನೆಷ್ಟು ಪತ್ರಿಕೆಗಳಿಲ್ಲ!

ರಾಧಾಕೃಷ್ಣ ಕುಂದಾಪುರದಲ್ಲಿರುವಾಗಲೇ ಈ ಪ್ರಸ್ತಾವನೆ ಪ್ರಕಟವಾಯಿತು. ಅನಂತಕೃಷ್ಣನು ಅದನ್ನು ಎತ್ತಿ ಹಿಡಿದು, 'ನಿನ್ನ ವಿಷಯ ಬರೆದಿದ್ದಾರೆ ನೋಡು, ಕೆಂಪು ತಾರೆಯಲ್ಲಿ' ಎಂದು ಹಿಗ್ಗಿನಿಂದ ರಾಧಾಕೃಷ್ಣಗೆ ಅದನ್ನು ತಂದು ತೋರಿಸಿದನು. ಆತ ಅದನ್ನು ಓದಿದನು. ತುಟಿಯನ್ನು ಕಚ್ಚಿಕೊಂಡು "ಯಾರ ವಿಯುಷದಲ್ಲಿಯೂ, ಇಂಥ ಅಳತೆ ಮೀರಿದ ಹೊಗಳಿಕೆಯು ಒಳ್ಳೆಯದಲ್ಲ. ಹಾಗೆ ಅಳತೆಮೀರಿ ಹೊಗಳಿದರೆ, ಅಥವಾ ತೆಗಳಿದರೆ ಜನ ಏನೆಂದುಕೊಂಡಾರು?" ಎಂದನು. ಅಂತೂ ಅವನಿನ್ನು ಪತ್ರಿಕೆಗೆ ಬರೆಯದೆ ಮಾರ್ಗವಿಲ್ಲ. ಬರೆಯಲೇ ಬೇಕಾಯಿತು. ಹಾಗೆ ಅವನ ಮನಸ್ಸಿಗೂ ಬರೆಯಬೇಕೆಂದು ತೋರುತ್ತಿತ್ತು. "ಎಷ್ಟೋ ಜನರು ನಾಡಿಗಾಗಿ ದುಡಿದು ನರಳಿದರು; ಸತ್ತರು. ಆದರೆ ಪ್ರಪಂಚಕ್ಕೆ ಕಾಣಿಸುವುದು, ಮುಂಬೆಳಕಿನಲ್ಲಿರುವ ನಾಲ್ಕಾರು ವ್ಯಕ್ತಿಗಳು ಮಾತ್ರ. ಅವರ ವರ್ಚಸ್ಸಿಗೆ ಕಾರಣರಾದ, ಸಾವಿರಾರು ಮಂದಿಯ ತ್ಯಾಗ, ಶೌರ್ಯಗಳು ತಿಳಿ

ಯುವಂತಿಲ್ಲ. ಅದನ್ನು ನಾವು ಮರೆಯಬಾರದು. ಅವರ ವಿಷಯ ವನ್ನೂ ಹೇಳಬೇಕು. ನನ್ನ ಅನುಭವಕ್ಕೆ ಬಂದುದನ್ನಾದರೂ ಹೇಳು ತ್ತೇನೆ" ಎಂದು ತನ್ನ ಒಪ್ಪಿಗೆಯ ಮಾತನ್ನು ಪ್ರಭುದೇವನಿಗೆ ಬರೆದು ತಿಳಿ ಸಿದನು. "ಆದರೂ ಒಂದು ಪ್ರಾರ್ಥನೆ: ನನ್ನ ವಿಷಯದಲ್ಲಿ ನೀವು ಇಷ್ಟೊಂದು ಹೆಚ್ಚು ಮಾತನ್ನು ಇನ್ನೊಮ್ಮೆ ಆಡುವುದಿಲ್ಲವೆಂದು ಭರವಸೆ ಕೊಡಬೇಕು" ಎಂದು ತಿಳಿಸಿದನು.

ಮುಂದಿನ ವಾರದಲ್ಲಿ ಕೆಂಪು ತಾರೆಯಲ್ಲಿ ಒಂದೊಂದಾಗಿ "ಸತ್ಯಾ ಗ್ರಹಿಗಳ ಸ್ಮರಣೆ"ಯು ಬರತೊಡಗಿತು. ಹಳ್ಳಿಯಲ್ಲೇ ಹುಟ್ಟಿ, ಅಲ್ಲಿಯೇ ಬಾಳನ್ನು ಮುಗಿಸುವ ಜನರು ತೋರಿದ ಸಾಹಸ, ತ್ಯಾಗ, ಪಟ್ಟಂತಹ ಬನ್ನ ಭವಣೆಗಳನ್ನು ಕ್ರಮವಾಗಿ ಚಿತ್ರಿಸಿದನು. ಯಾರ ಹೆಸರನ್ನೂ ಬಯಲಿಗೆ ಎಳೆಯಲಿಲ್ಲ. ಹಾಗೆ ಬರೆದಲ್ಲಿ, ಅವರು ಸರಕಾರದ ವಕ್ರದೃಷ್ಟಿಗೆ ಪಾತ್ರ ರಾಗಿ, ಹಾನಿಗೊಳಗಾದಾರೆಂಬ ಭೀತಿ ಅವನನ್ನು ಕಾಡುತ್ತಿತ್ತು. ಅವನ ಬರವಣಿಗೆಯು ಪ್ರತ್ಯಕ್ಷ ಅನುಭವದ ಬಣ್ಣನೆಯಾದುದರಿಂದ, ಅಷ್ಟೊಂದು ಸಚೇತನವಾಗಿತ್ತು. ವಿವೇಕ, ಭಾವಪೂರ್ಣವಾದ ಅವನ ಮಾತು ಗಳಲ್ಲಿ ಓಜಸ್ಸಿತ್ತು. ಆ ಚಿತ್ರಗತ ವ್ಯಕ್ತಿಗಳಲ್ಲಿ ತುಂಬ ತೇಜಸ್ಸಿತ್ತು. ಕೆಂಪು ತಾರೆಯ ಆ ಲೇಖ ಮಾಲೆಯನ್ನು ಓದಲು ಜನರು ಹಾತೊರೆದರು. ವಾರ ದಿಂದ ವಾರಕ್ಕೆ ಓದುಗರ ಸಂಖ್ಯೆಯು ಬೆಳೆಯಿತು. ಊರಿನ ಪಾಲಿಗೆ ಸತ್ತು ಹೋಗಿದ್ದ ಸತ್ಯಾಗ್ರಹವು ತಿರುಗಿ, ಜೀವಕಳೆ ಹೊಂದಿ, ಮನಸ್ಸಿನಲ್ಲಾದರೂ ಕತಕತಿಸುವಂತೆ ಕಂಡಿತು.

* * * *

ಈಗ ಕೆಂಪು ತಾರೆ ಅಚ್ಚಾಗುತ್ತಿರುವುದು—ಪ್ರಭುದೇವ ಮತ್ತು ಸಾಣೆಕಲ್ ಹೊರಡಿಸಿದ ಸ್ವಂತವಾದ ಹೊಸ ಛಾಪಖಾನೆಯಲ್ಲಿ. ಭರತ ಖಂಡದಲ್ಲಿ, ಒಮ್ಮೊಮ್ಮೆ ಎಲ್ಲೆಲ್ಲಿಯೂ ಮೊಳಗಿದ ಸತ್ಯಾಗ್ರಹವು ಈಗ ಸಂಪೂರ್ಣ ನಿದ್ರಾವಸ್ಥೆಯನ್ನು ತಾಳಿದೆ. ಅದರಂತೆ ದೇಶದಲ್ಲಿ, ಸರಕಾ ರದ ದಬ್ಬಾಳಿಕೆಯು ಮಾಯವಾಗಿದೆ. ಸಂಘಟನೆಯ ಕೆಲಸಗಳೆಂಬ ಹೆಸ ರಿನಲ್ಲಿ ಚುನಾವಣೆಯ ದೆವ್ವಗಳು ಮೆಲ್ಲನೆ ತಲೆಯೆತ್ತಿಕೊಂಡಿವೆ. ಅದ ಕ್ಕಾಗಿಯೆಂದರೂ ಚಿಂತೆಯಿಲ್ಲ— ಚಳವಳಿ ಕಾಲದಲ್ಲಿ ಬಹದ್ದೂರ್ ಕ್ಯಾಪ್ ಧರಿಸಿದವರು, ಈಗ ಮೂರಾಣೆ ಬೆಲೆಯ ಗಾಂಧೀ ಟೊಪ್ಪಿಯಿಂದ ಶೋಭಾ

ಯವಾನರಾಗಿದ್ದಾರೆ. ಬಹಿರಂಗದಲ್ಲಿ, ತಾವು ಕಾಂಗ್ರೆಸ್ ಪಂಗಡದವರು ಎಂದು ತೋರಿಸಲು ಅಂಜುತ್ತಿದ್ದವರು, ಈಗ ತಿರುಗಿ ಸದಸ್ಯತನಕ್ಕೆ ಸಹಿ ಹಾಕಿ, ನಾಲ್ಕಾಣೆಯ ಉದಾರಿಗಳಾಗಿದ್ದಾರೆ; ತಿರುಗಿ ದೇಶಭಕ್ತರಾಗಿದ್ದಾರೆ. ಇಷ್ಟು ದಿನ ತಮ್ಮ ಆಸ್ಪತ್ರೆ, ಫಾರ್ಮಸ್ಯೂಟಿಕಲ್ಸ್ ಮೊದಲಾದ ಕಾರುಭಾರಗಳಲ್ಲಿ ಮಗ್ನರಾಗಿದ್ದ ಡಾ। ನಂದರಂಥವರು ರಾಷ್ಟ್ರೀಯ ಕೆಲಸಗಳಿಗೆ ವಿರಾಮ ದೊರಕಿಸಿಕೊಂಡಿದ್ದಾರೆ. ಅವರ ಮೋಟರಿನ ರೆಡಿಯೇಟರಿನ ಮೇಲೆ ಇನ್ನೊಮ್ಮೆ ತ್ರಿವರ್ಣಪತಾಕೆಯು ರಂಜಿಸುತ್ತಿದೆ.

ಇಂಥ ಸ್ಥಿತಿಯನ್ನು ಕಂಡೇನೆ ಪ್ರಭುದೇವನು "ಮಿ। ಸಾಣೆಕಲ್ಸನಗೂ ಒಂದು ಕಾರನ್ನು ಕ್ರಯಕ್ಕೆ ಕೊಂಡು, ಅದರ ತುದಿಯಲ್ಲಿ ಕೆಂಪು ನಿಶಾನಿಯನ್ನು ಹಾರಿಸಿ, ಅವರ ಕಾರಿಗೆ ಅಡ್ಡ ಹಾಯಿಸಿಬಿಡಬೇಕೆಂದಿದೆ. ನನ್ನ ಜೀವನದ ಹಿರಿಯ ಅಭಿಲಾಷೆಗಳಲ್ಲಿ ಇದೂ ಒಂದು" ಎನ್ನುವಂತಾಯಿತು.

ಪ್ರಭುದೇವ ಸಮಾಜವಾದಿಯೂ ಅಹುದು, ಅಖಂಡ ರಾಷ್ಟ್ರಭಕ್ತನೂ ಅಹುದು. ಅವನ ಬಯಕೆಗಳಲ್ಲಿ—ಪ್ರತಿಯೊಂದು ಮನೆಗೂ ಒಂದೊಂದು ಮೋಟರು ಇರಲೇ ಬೇಕು. ಶ್ರೀಮಂತರು ಹೆಮ್ಮೆ ಪಡಬೇಕಾಗಿಲ್ಲ—ಎನಿಸುವಷ್ಟು ಅನುಕೂಲತೆ ಉಳಿದವರಿಗೂ ಇರಬೇಕು—ಎಂಬ ಆಶೆಯಿದೆ. ಆದರಿಂದಾಗಿ, ತನ್ನ ಸ್ವಂತಕ್ಕೆ ಒಂದು ಮೋಟರು ಸಿಗುವ ತನಕ, ತಾನು ಬಡವನೆಂದೇ ತಿಳಿಯುವವನು ಅವನು. "ಅಮೇರಿಕದಂತಹ ಬಂಡುವಳಗಾರರ ದೇಶದಲ್ಲಿ ಪ್ರತಿಯೊಬ್ಬ ಶ್ರಮಗಾರನಿಗೂ ಒಂದು ಮೋಟರು ಇರುವುದು ಸಾಧ್ಯವಾದರೆ, ಸಮತಾವಾದಿ ದೇಶದಲ್ಲಿ ಅದು ಯಾಕೆ ಅಸಾಧ್ಯ?" ಎನ್ನುತ್ತಾನೆ. ಕಾರಿನ ಆಸೆಯಿಂದಾಗಿ, ಆತ ಹಾಗೆ ಅನ್ನುತ್ತಲಿಲ್ಲ. ಹಣದ ವಿಷಯದಲ್ಲಿಯೂ ಅವನಿಗೆ ಅಷ್ಟೊಂದು ಬಾಯಾರಿಕೆಯಿಲ್ಲ ಎಂಬುದನ್ನು ಗೆಳೆಯ ಸಾಣೆಕಲ್ ಬಲ್ಲನು. ಅವನು ಈ ಅನುಕೂಲತೆಗಳನ್ನು ಬೇಡುವುದು—ನಮ್ಮ ಜನರು ಕಿಸೆಯನ್ನೂ ಕಾರನ್ನೂ ಕಂಡು ತಲೆಬಾಗುವವರೆಂದು. ಮೋಟರ್ ವಾಹನರನ್ನು ನಮ್ಮ ಜನರು ದೇವರೆಂದು ತಿಳಿಯುತ್ತಾರಲ್ಲವೆ. ಆ ಜನರನ್ನು ಒಲಿಸಿ ಮೆರೆಯುವ ಸಲುವಾಗಿ ಕಾರು ಬಳಿಯಲ್ಲಿರಬೇಕು; ಅದಕ್ಕಾಗಿಯೇ ತನ್ನ ಕಿಸೆಯು ಸದಾ ತುಂಬಿರಬೇಕೆಂಬುದು ಅವನ ಹಂಬಲ.

"ಅದು ಸರಿಯೇ, ಪ್ರಭುದೇವ. ಈ ಪತ್ರಿಕೆ ನಡೆಯಿಸುವ ತಾಪತ್ರಯವನ್ನೇ ನೋಡಿದರೆ ನಿನಗೆ ತಿಳಿಯದೇ? ಹತ್ತು ಜನರಿಂದ ಬಿಟ್ಟಿ ಬರಹ ಬರೆಯಿಸಬೇಕು ಆದರೂ ತಿಂಗಳ ಕೊನೆಗೆ ಮೊಳೆ ಜೋಡಿಸುವವರಿಗೆ ವೇತನಕೊಡಲು ನಮ್ಮಲ್ಲಿ ಹಣವಿಲ್ಲ. ಹೀಗಿರುತ್ತ-ನಮ್ಮ ಕಿಸೆ ತುಂಬಿ, ಮೋಟರು ಬರಬೇಕೆನ್ನುವುದು ಈ ಜನ್ಮದ ಕನಸಲ್ಲ" ಎನ್ನುತ್ತಾನೆ ಅವನ ಗೆಳೆಯ ಸಾಣೆಕಲ್.

ಅದನ್ನು ಕೇಳಿ ಪ್ರಭುದೇವ ನುಡಿಯುತ್ತಾನೆ, "ಛೀ! ಸಾಣೆಕಲ್, ನಿಮ್ಮನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಒಂದು ದಿವಸ ಸ್ವಂತ ಕಾರಿನಲ್ಲಿ ನಾನೇ ಕರೆದುಕೊಂಡು ಹೋದರೆ ಆಯಿತಲ್ಲ"?

"ಆ ಕಾಲ ಬರುವಾಗ ನಾನು ಈ ಜನ್ಮದಲ್ಲಿ ಇರುತ್ತೇನೆಯೋ, ಇನ್ನೊಂದು ಜನ್ಮ ಬಂದಿರುತ್ತದೆಯೋ—ಯಾರು ಬಲ್ಲರು.? ಪ್ರಾಯಶಃ ವಿಮಾನ ಸಂಚರಿಸುವ ಲೋಕಕ್ಕೆ ಹೋಗಬಹುದು."

"ಹಾಗಾದರೆ-ಇದೇ ಪ್ರತಿಜ್ಞೆ ಎಂದು ತಿಳಿದುಕೋ. ಇನ್ನು ಹೆಚ್ಚೆಂದರೆ ಐದು ವರ್ಷಗಳಲ್ಲಿ ಅಷ್ಟನ್ನು ಮಾಡುತ್ತೇನೆ. ಅದು ಸಾಧ್ಯವೆಂದು ನನ್ನ ಮನಸ್ಸು ಹೇಳುತ್ತಿದೆ. ಹೇಗೆ, ಏನು, ಎಂಬುದನ್ನು ಮಾತ್ರ ಕೇಳಬೇಡ.

"ಐದು ವರ್ಷಗಳಲ್ಲೇ?"

"ಸಾಧ್ಯವಾದರೆ ಅದಕ್ಕೂ ಮೊದಲೇನೆ. ಆಗ ಡಾಕ್ಟರ್ ನಂದರಂಥವರು ತಮ್ಮ ಕಾರನ್ನು ನಿಲ್ಲಿಸಿ, "How do you do?" ಎಂದು ನನ್ನನ್ನು ಮಾತನಾಡಿಸಬೇಕು. ಪಂಥ ಕಟ್ಟುತ್ತೀರಾ?"

"ನನ್ನ ಹತ್ತಿರ ಪಂಥ, ಗಿಂಥಕ್ಕೆ ತ್ರಾಣವಿಲ್ಲ."

"ನಿಮಗೆ ಕಾರು ಬಂದರೆ ನನಗೆ ಸಂತೋಷವೇ. ನಾನು ಬಿಟ್ಟಿ ಕುಳಿತುಕೊಂಡು ತಿರುಗಬಹುದಲ್ಲವೆ."

ನಿಜಕ್ಕೂ, ಪ್ರಭುದೇವನ ಕನಸಿನಲ್ಲಿ ಮೋಟರು ಕೊಳ್ಳುವುದಂತೂ ನಿರ್ಧಾರವಾಗಿ ಬಿಟ್ಟಿದೆ. ರಾಜಕೀಯದಲ್ಲಿ ತಾನೊಬ್ಬ ಟ್ರಾಟ್‌ಸ್ಕಿಯೋ, ಸ್ಟೈಲಿನ್ನೋ ಎಂಬ ಭಾವನೆಯು ಮೂಡಿದೆ. ತನ್ನ ಅಂಥ ಕನಸುಗಳೆಲ್ಲವೂ, ಹೇಗೆ ನೇರವೇರುವುವು ಎಂಬುದನ್ನೂ ಆತ ನಿಶ್ಚಯಿಸಿಬಿಟ್ಟಿದ್ದಾನೆ. ಅದಕ್ಕೇನೆ ಗಳಿಗೆ ಕಾಯುತ್ತಿದ್ದಾನೆ. ರಾಧಾಕೃಷ್ಣನನ್ನು ಒಲಿಸಿಕೊಂಡರೆ

ಆ ಕೆಲಸ ಸುಲಭಸಾಧ್ಯವೆಂದು ಅವನ ಮನಸ್ಸಿಗೆ ತೋರಿದೆ. ಅದರಿಂದಾಗಿ ಮೇಲಿಂದ ಮೇಲೆ ಪತ್ರಮುಖೇನ ಅವನನ್ನು ಕಾಡತೊಡಗಿದ್ದಾನೆ.

ರಾಧಾಕೃಷ್ಣ ಊರಿನಿಂದ ಮರಳಿ ಬಂದು ಅವನನ್ನು ಭೇಟಿಯಾದಾಗ "ನೀವು ಅಷ್ಟೊಂದು ಆತುರ ಮಾಡಬಾರದು. ಹೆಚ್ಚೆಂದರೆ ಇನ್ನು ಒಂದು ವರ್ಷಕಾಲ ಹೋದೀತು. ಇದ್ದ ಸ್ಥಳವನ್ನು ಬಿಡಲೇ ಬೇಕಾಗಿದೆಯಲ್ಲವೆ? ಮೊನ್ನೆ ತಾನೆ ಊರಿಗೆ ಹೋಗಿ ಬಂದು, ಅಲ್ಲಿನ ಭೂಮಿಯನ್ನು ತಮ್ಮಂದಿರಿಗೆ ವಹಿಸಿಕೊಟ್ಟು ಬಂದೆ. ಅದರ ಒಂದಂಶ ಹಣವನ್ನು ಈ ವರೆಗೆ ನಾನು ಮಾಡಿದ ಹೊಂಡಗಳಿಗೆ ತುಂಬಿಸಿಯಾಯಿತು. ಒಂದಿಷ್ಟು ಹಣ ಕೈಯಲ್ಲಿ ಉಳಿದಿದೆ. ಅದನ್ನು ಕರಗಿಸುವ ಮೊದಲು, ಯೋಗ್ಯ ಸ್ಥಳವೊಂದನ್ನು ಹುಡುಕುತ್ತೇನೆ. ಸ್ಥಳ ದೂರವಾಯಿತು ಎಂಬ ದೂರು ಜನರಿಂದ ಬರಬಾರದು. ನನ್ನಿಂದ ತಪ್ಪಾಗದಂತೆ ನೋಡಿಕೊಂಡರೆ, ಮುಂದೆ ಜನ ಕೈ ಬಿಟ್ಟರೂ ಚಿಂತೆಯಿಲ್ಲ. ನನ್ನ ಕರ್ತವ್ಯವನ್ನು ಮಾಡಿದೆನಲ್ಲ ಎಂಬ ಸಮಾಧಾನವಾದರೂ ಉಳಿಯುತ್ತದೆ" ಎಂದು ತಿಳಿಸಿದನು.

ಬೇರೊಂದು ಬಾರಿ ಆತ ಭೇಟಿಯಾದಾಗ "ಜಾಗ ಹುಡುಕುತ್ತಲೇ ಇದ್ದೇನೆ. ಇರುವುದಕ್ಕೆ ಒಂದೆರಡು ಜೋಪಡಿಗಳಿರುವ ಸ್ಥಳಗಳಾದರೂ ಬೇಕು. ಅಂಥ ಎರಡು ಮೂರು ಸ್ಥಳಗಳನ್ನು ನೋಡಿದ್ದೇನೆ. ಒಮ್ಮೆ ನಿಮ್ಮನ್ನೂ ಕರೆದು ಒಯ್ಯುತ್ತೇನೆ ಅಲ್ಲಿಗೆ. ಬಹಳ ಗದ್ದಲ ಮಾಡಿ ಉಪಯೋಗವಿಲ್ಲ. ಅವುಗಳ ಬೆಲೆ ಹೊಂದಬೇಕು. ನಮಗೆ ಸ್ಥಳ ಅವಶ್ಯ ಎಂದು ತೋರಿದರೆ, ಅವರು ದರವನ್ನು ಏರಿಸಿಬಿಡಬಹುದು. ಅಷ್ಟೊಂದು ಹೆಚ್ಚಿಗೆ ಕೊಟ್ಟು ಕೊಳ್ಳುವುದಕ್ಕೆ ನನ್ನಲ್ಲಿ ಹಣವಾದರೂ ಎಲ್ಲಿದೆ?—ಎಂದು ಸಮಾಧಾನ ಹೇಳಿದನು. ಪ್ರಭುದೇವನಿಗೆ ಬೇಸರ ಬಾರದಂತೆ, ಅವರ 'ಕೆಂಪು ತಾರೆಗೆ' ಒಂದೊಂದು ಲೇಖ ಬರೆಯುತ್ತಲೇ ಇದ್ದನು. ಈ ಬರವಣಿಗೆಗಳಿಂದ ಓದುಗರ ಸಂಖ್ಯೆಯು ಬೆಳೆಯಿತು..

ಒಂದು ದಿನ ಹಾಗೆಯೇ, ಪ್ರಭುದೇವನ ಕಚೇರಿಯಲ್ಲಿ ಆತ ಮಾತನಾಡುತ್ತಿದ್ದಲ್ಲಿ, ಮೇಜಿನ ಮೇಲೆ, ವಿನಿಮಯಕ್ಕೆ ಬಂದಿದ್ದ ಪತ್ರಗಳು ರಾಶಿ ಬಿದ್ದಿದ್ದವು. ಹೊತ್ತು ಹೋಗಲಾರದುದಕ್ಕೆ ಒಂದೊಂದೇ ಪತ್ರಿಕೆಯನ್ನು ಆತ ತಿರುವಿನೋಡಿದನು. ಅಲ್ಲಿನ ಜಾಹೀರಾತುಗಳನ್ನು, ಸುದ್ದಿಗ

ಳನ್ನು ಮಗುಚಿನೋಡಿದನು. ಅವುಗಳಲ್ಲಿದ್ದ ಒಂದು ಕೋರ್ಟಿನ ನೋಟೀಸಿನ ಕಡೆಗೆ ಅವನ ಗಮನ ಹೋಯಿತು.

"ಬೈಲೂರಿನ ಆನಂದಯ್ಯನವರು ಈತ್ತೀಚೆಗೆ ಮೃತಪಟ್ಟಿರುವುದರಿಂದ ಅವರಿಗೆ ಸಮನಾದ ವಾರೀಸ್‌ದಾರರು ಯಾರಾದರೂ ಇದ್ದಲ್ಲಿ ಕೋರ್ಟಿನ ಮೂಲಕ ತಮ್ಮ ಹಕ್ಕನ್ನು ಸಾಧಿಸತಕ್ಕದ್ದು. ಹಾಗೆ ಯಾರೂ ಯುಕ್ತ ಕಾಲದಲ್ಲಿ ಮಾಡದೆಹೋದಲ್ಲಿ ಮೃತರ ಆಸ್ತಿಪಾಸ್ತಿಗಳು ಸರಕಾರದ ಅಧೀನವಾಗುವುವು"ಎಂಬುದನ್ನು ತಿಳಿಸುವ ಒಂದು ಪ್ರಕಟಣೆಯಿತ್ತು. ಅದನ್ನು ಓದುತ್ತಲೇ ಪ್ರಭುದೇವನಿಗೆ ನಗು ಬಂದಿತು. ಹೀಗೆ ಗತಿಗೋತ್ರವಿಲ್ಲದೆ, ತಮ್ಮ ಸಂಪತ್ತನ್ನು ಸರಕಾರಕ್ಕೆ ಬಿಡುವ ಹುಚ್ಚರು ಇದ್ದಾರೆಯೇ? ಅಂಥ ಮಹಾನುಭಾವರು, ಬದುಕಿರುವಾಗ ತಮ್ಮ ಸಂಪತ್ತನ್ನು, ಒಳ್ಳೆಯ ಕೆಲಸಗಳಿಗೆ ದಾನಶಾಸನ ಮಾಡಬಾರದೇ—ಎಂದು ತೋರಿತು. ಊರಿನ ಹೆಸರು 'ಬೈಲೂರು' ಎಂದು ಇದ್ದುದನ್ನು ನೋಡುತ್ತ, 'ಅದು ನಮ್ಮ ಶ್ಯಾಮನ ಊರಲ್ಲವೇ' ಎಂಬ ನೆನಪಾಯಿತು. ಆತ ಮನೆಗೆ ಹೋದವನೇ, ಚೇಷ್ಟೆಗಾಗಿ "ಶ್ಯಾಮೂ, ನಿನ್ನ ಊರಿನ ಪುಣ್ಯಾತ್ಮರು ಯಾರೋ ಒಬ್ಬರು ತಮ್ಮ ಭೂಮಿ ಮನೆಗಳನ್ನು ಸರಕಾರಕ್ಕೆ ಒಪ್ಪಿಸಿ ಪ್ರಾಣಬಿಟ್ಟರಂತೆ" ಎಂದನು.

"ಯಾರು—ನಮ್ಮೂರವರೇ? ಯಾರು ಹೇಳಿದರು ನಿಮಗೆ?"

"ಕಂಠೀರವದಲ್ಲೋ, ಯಾವುದರಲ್ಲೋ ಅಂಥ ಒಂದು ನೋಟೀಸು ಇತ್ತು. ಬೈಲೂರಿನ ಆನಂದಯ್ಯನವರಂತೆ." "ನಿಶ್ಚಯವೇ? ಆನಂದಯ್ಯ ಎಂದರೆ ನನ್ನ ಚಿಕ್ಕಪ್ಪ. ಬೇರೆ ಯಾರೂ ಆ ಹೆಸರಿನವರು, ನಮ್ಮ ಊರಿನಲ್ಲಿದ್ದ ನೆನಪು ನನಗೆ ಆಗುವುದಿಲ್ಲ. ಅವರು ತೀರಿಕೊಂಡರೇ? ಅವರಿಗೆ ಹೆಂಡತಿ ಮಕ್ಕಳು ಇದ್ದಾರಲ್ಲಾ?" ಎಂದು ನುಡಿದನು. ರಾಧಾಕೃಷ್ಣನಿಗೆ ಆ ವಿಷಯದಲ್ಲಿ ಆಸಕ್ತಿಯು ಮೂಡಿತು. ಇತ್ತ ಶ್ಯಾಮನಿಗೆ ತನ್ನ ಬಾಲ್ಯದ ಸ್ಮರಣೆಗಳು ನೆನಪಿಗೆ ಬಂದುವು. ಅದನ್ನೆಲ್ಲ ಅವನು ಅಣ್ಣನಿಗೆ ಹೇಳಿದ್ದ. ಆತನ ತಂದೆ ಸಾಯುತ್ತಲೇ, ಅವನಿಗೆ ಹೊಟ್ಟೆಗೆ ಹಾಕದೆ, ಕಾಡಿ, ದಣಿಸಿ, ಆ ಚಿಕ್ಕಪ್ಪ ಹಿಂಸೆಕೊಟ್ಟಿದ್ದ. ಅದನ್ನು ಸಹಿಸಲಾರದೆ, ಊರು ಮನೆಬಿಟ್ಟು ಓಡಿದ ಅವನು ತಿರುಗಿ ಅಲ್ಲಿಗೆ ಹೋಗಿಲ್ಲ. ಶ್ಯಾಮ, ಹೀಗೆ ಅನಾಥನಾಗಿ ಹದಿನೆರಡು ವರ್ಷಗಳಾದುವು. ಅದನ್ನು ನೆನೆದುಕೊಂಡು ರಾಧಾಕೃಷ್ಣ-ಆ

ಆನಂದಯ್ಯ ಇವನ ಚಿಕ್ಕಪ್ಪ ನಿಜವಾದರೆ, ಬಡ ಶ್ಯಾಮನಿಗೆ ಒಂದು ಜೀವನದ ದಾರಿಯಾಯಿತಲ್ಲಾ ಎಂದು ತೋರಿತು. "ನೀನು ಪ್ರಭುದೇವನಲ್ಲಿಗೆ ಹೋಗಿ ಆ ಪೇಪರನ್ನು ತೆಗೆದು ಕೊಂಡು ಬಾ. ಅದರಲ್ಲಿನ ವಿಳಾಸ ನಿನ್ನ ಚಿಕ್ಕತಂದೆಯದೇ ಹೌದಾದರೆ, ನಿಮ್ಮ ಊರಿನ ತನಕವೂ ಹೋಗಿ ಬಾ. ಅಲ್ಲಿನ ಸಂಗತಿ ಏನೆಂದು ಪ್ರತ್ಯಕ್ಷ ತಿಳಿದು ಬರುವುದು ಒಳಿತು." ಎಂದು ಬೋಧಿಸಿದನು. ಶ್ಯಾಮನ ಮನಸ್ಸಿನಲ್ಲಿಯೂ ಆಸೆ ಅಂಕುರಿಸಿತು. ಒಂದೇ ಜಿಗಿತಕ್ಕೆ ಮಂಗಳೂರನ್ನು ಸೇರಿದನು. ಪ್ರಭುದೇವನ ಮೇಜಿನ ಮೇಲಿನ ಹಳೆಯ ಪತ್ರಿಕೆಗಳನ್ನೆಲ್ಲಾ ತಿರುವಿದನು. ಪ್ರಕಟಣೆಗಳನ್ನೆಲ್ಲಾ ಓದಿದನು. ಅವನಿಗೆ ಬೇಕಾದ ಪತ್ರಿಕೆ ದೊರೆಯಿತು. ಅದನ್ನು ತೆಗೆದು ಕೊಂಡು "ಇದು ನಿಮಗೆ ಬೇಕೇ?" ಎಂದು ಕೇಳಿದನು.

"ಇಡಿಯ ರಾಶಿಯನ್ನೇ ಹಿಡಿದುಕೊಂಡು ಹೋಗಿ. ಏಕೆ? ಸಕ್ಕರೆ ಕಟ್ಟುವುದಕ್ಕೆ ಬೇಕೇ?" ಎಂದು ಪ್ರಭುದೇವ ಪರಿಹಾಸ್ಯವನ್ನು ಮಾಡಿದನು. "ಇದು ಒಂದೇನೆ ಸಾಕು" ಎಂದು ಶ್ಯಾಮನು ಅದನ್ನು ತೆಗೆದುಕೊಂಡು ನೆಟ್ಟಗೆ ಕಿರಿಪದವಿಗೆ ಬಂದನು. "ಇದು ಖಂಡಿತವಾಗಿಯೂ ನನ್ನ ಚಿಕ್ಕಪ್ಪನೇ. ಆದರೆ, ಅವರ ಹೆಂಡತಿ ಮಕ್ಕಳ ಗತಿಯೇನು? ಒಂದೂ ತಿಳಿಯದಲ್ಲ! ಆದರೆ, ನಾನು ಒಬ್ಬನೇ ಊರಿಗೆ ಹೋದರೆ ಕೆಲಸವಾಗದು. ನೀವೂ ಬನ್ನಿ ಜತೆಯಲ್ಲಿ. ಈ ಪ್ರಕಟಣೆ ಕೊಟ್ಟವರನ್ನು ಕಂಡು ಮಾತನಾಡುವುದು ಒಳ್ಳೆಯದು" ಎಂದು ಬೇಡಿದನು. ಇಂಥ ವಿಷಯಗಳಲ್ಲಿ ರಾಧಾಕೃಷ್ಣನಿಗೆ ಬಲವಂತ ಮಾಡುವ ಕಾರಣವಿದೆಯೇ? ಅದಷ್ಟು ತೀವ್ರ ಆತ ಆ ಕೆಲಸಕ್ಕೆ ಹೊರಡುವ ನಿಶ್ಚಯ ಮಾಡಿದನು.

* * * * *

ದಿನ ಹೋದಂತೆ ರಾಧಾಕೃಷ್ಣನ ಮನಸ್ಸು, ಕಿರಿಪದವನ್ನು ಬಿಟ್ಟು, ಹೊಸತಾದ ತಾವು ಹುಡುಕಿ ಹೋಗುವ ಹಂಬಲವನ್ನು ಪಡೆಯಿತು. ಅದಕ್ಕಾಗಿ ಹಲವು ಬಾರಿ ಮಂಗಳೂರಿಗೆ ಹೋಗಿ ಬರುತ್ತಿದ್ದಾನೆ. ಮನೆಯಲ್ಲಿರುವಾಗ, ಸತ್ಯಳ ಜತೆಯಲ್ಲಿ ಕೆಲಸಮಾಡುತ್ತಿರುವನಾದರೂ, ಈಗ ತಿರುಗಾಟದಿಂದ ಅವನಿಗೆ ವಿರಾಮ ಕಡಿಮೆ. ಜತೆಗೆ ಈಗ, ಶ್ಯಾಮನ ಸಲುವಾಗಿಯೂ ಸಂಚಾರತೊಡಗಿತು. ವಕೀಲರಲ್ಲಿಗೆ ಹೋದನು; ಹುಡುಗನನ್ನು ಕರೆದುಕೊಂಡು ಬೈಲೂರಿಗೆ ಹೋದನು. ಆನಂದಯ್ಯ ತೀರಿಹೋಗಿ.

ದ್ದುದೂ ನಿಜ. ಅವರ ಹೆಂಡತಿ ಮಕ್ಕಳು ಬಲು ಹಿಂದೆಯೇ ಸತ್ತಿದ್ದರಂತೆ. ಅವರು ಕೊನೆಗಾಲದಲ್ಲಿ ಶ್ಯಾಮನನ್ನು ನೆನೆದು ಅತ್ತುದೂ ಉಂಟಂತೆ. ಬೇರೆಯ ಹಕ್ಕುದಾರರು ಯಾರೂ ಇಲ್ಲದುದರಿಂದ, ಭೂಮಿ ಶ್ಯಾಮನಿಗೆ ಸಿಗುವುದಕ್ಕೆ ತೊಂದರೆಯೇ ಇದ್ದಿರಲಿಲ್ಲ. ನಾಲ್ಕು ದಿನ, ಹಕ್ಕು ಸ್ಥಾಪನೆಗೆ ಸಮಯ ಹೋದೀತಷ್ಟೆ. ಇದರಿಂದ ರಾಧಾಕೃಷ್ಣನ ಮನಸ್ಸಿಗೆ ಎಷ್ಟೋ ನೆಮ್ಮದಿ ಉಂಟಾಯಿತು. ಅವನಿಗೆ ಸುಮಾರು, ಐವತ್ತು ಮುಡಿ ವರಮಾನದ ಭೂಮಿಯೂ, ಐನೂರು ರೂಪಾಯಿಗಳಷ್ಟು ನಗದೂ ದೊರೆಯಬಹುದು. ಆತ ಎಷ್ಟು ದಿವಸ ಪರರನ್ನು ಆಶ್ರಯಿಸಿರಬೇಕು? ಇನ್ನು ಸಂಸಾರಿಗನಾಗಿ, ತನ್ನ ಹೊಟ್ಟೆಯ ಪಾಡನ್ನಾದರೂ ನೋಡಿಕೊಂಡಿರಬಹುದಲ್ಲ. ತಾನು ಅವನಿಗೆ ಪಾಠ ಹೇಳಿಕೊಟ್ಟುದಕ್ಕಿಂತ ಹೆಚ್ಚಾಗಿ, ತನಗೆ ತಾನೇ ವಿದ್ಯೆಯನ್ನು ಕಲಿತವನು ಅವನು. ಈಗ ಇಷ್ಟೊಂದು ಆಶ್ರಯ ಸಿಕ್ಕಿದರೆ, ತನ್ನ ಪಾಡಿಗೆ ತಾನು ಸುಖವಾಗಿ ಇದ್ದಾನು. ಜೀವನಕ್ಕಾಗಿ ದುಡಿಯುವ ನಿಷ್ಠೆ, ಶ್ರಮಗಾರಿಕೆಗಳೆರಡೂ ಅವನಲ್ಲಿವೆ. ಅವನನ್ನು ತಾನು ಬಹು ದಿವಸ ದುಡಿಸಬಾರದು; ತಾನು ಮಾಡುವ ಪರೋಪಕಾರ ಅಷ್ಟರಲ್ಲಿಯೇ ಇದೆ. ಅವನಲ್ಲಿ, ಯಾವುದಾದರೊಂದು ಗಳಿಗೆಗೆ 'ತಾನು ಜೀತದ ಆಳೇ? ಎಂಬ ಭಾವನೆ ಮೂಡಬಹುದು. ಅದು ಮೂಡುವ ಮೊದಲೇನೆ, ಅವನು ಸ್ವತಂತ್ರನಾಗುವುದು ಒಳಿತು—ಎಂದೆಲ್ಲ ಯೋಚಿಸಿದನು. ಆದರೆ ಶ್ಯಾಮ ಯಾವ ಬಗೆಯಲ್ಲಿ ವಿಚಾರ ಮಾಡುತ್ತಿದ್ದಾನೆ, ತನಗೆ ದೊರೆಯಲಿರುವ ಹೊಸ ಅನುಕೂಲತೆಯಿಂದ, ಏನು ಕಾಂಕ್ಷೆಗಳು ಅವನಲ್ಲಿ ಹುಟ್ಟಿವೆ ಎಂಬುದನ್ನು ರಾಧಾಕೃಷ್ಣ ತಿಳಿದುಕೊಳ್ಳಲೂ ಇಲ್ಲ.

ಶ್ಯಾಮನ ಮನಸ್ಸು ಮಾತ್ರ ಬೇರೆಯೇ ತೆರನಾಗಿತ್ತು. ಅಣ್ಣನನ್ನು ಬಿಟ್ಟು ಕದಲುವ ಇಚ್ಛೆ ಅವನಿಗಿರಲಿಲ್ಲ. ಆತ ಯಾವ ಊರಿನಲ್ಲಿ ಕುಳಿತರೂ ಸರಿಯೇ, ಯಾವ ಹೊಸ ಉದ್ಯಮವನ್ನು ತೊಡಗಿದರೂ ಸರಿಯೇ. ಅವನ ಜತೆಯಲ್ಲಿಯೇ ಇದ್ದುಕೊಂಡು ಅವನಿಗೆ ಸಹಾಯಕನಾಗಬೇಕೆಂಬ ಮನಸ್ಸು ಅವನದು. ಅನಾಥನೆಂದು ತಿಳಿದ ತನಗೆ, ಈಗಿಷ್ಟು ಸಂಪತ್ತು ದೊರಕಿದರೆ, ಅವನನ್ನು ಬಿಡಬೇಕೇ? ಆ ವಿಚಾರ ಒಮ್ಮೆಯೂ ಮನಸ್ಸಿಗೆ ಹೊಳೆಯಲಿಲ್ಲ. ಸತ್ಯ, ಮತ್ತು ರಾಧಾಕೃಷ್ಣರಲ್ಲಿ ಬೆಳೆದ ಪ್ರೀತಿ, ಆದರಗಳು ಅವನ ಪಾಲಿಗೆ ಕಡಿಯುವಂತಿರಲಿಲ್ಲ. ಆದರೆ ಒಮ್ಮೊಮ್ಮೆ

ತಾರುಣ್ಯ ಸಹಜವಾದ ವಿವಾಹದ ಆಸೆಯು, ಮನಸ್ಸಿನಲ್ಲಿ ಮೂಡಿದುದೂ ಉಂಟು. ಆ ತನಕ—ತನ್ನಂತಹ ನಿರ್ಗತಿಕನಿಗೆ ಹೆಣ್ಣು ಕೊಡುವವರಾರು?" ಎಂದು ಎನಿಸಿತು. ತಾನು ಸಂಸಾರದ ಭಾರ ಹೊರುವುದು ಸಾಧ್ಯವೇ—ಎಂದೂ ಅಂಜಿಕೆಯಾಗಿತ್ತು. ಆದಕ್ಕೆ ಸಮನಾಗಿ ಪ್ರತ್ಯುತ್ತರ ಸೂಚಿಸದೆಯೂ ಇಲ್ಲ. "ಅದೇನು ಮಹಾಕಷ್ಟ. ಇಲ್ಲಿ ದುಡಿಯಲು ಕಲಿತಿಲ್ಲವೇ! ಹೊಲಮನೆಗಳನ್ನು ಗೇಣಿಗಾದರೂ ಮಾಡಿಕೊಂಡು, ದನಕರು ಸಾಕಿ, ಜೀವನ ಮಾಡಬಾರದೇ" ಎಂದು ಅನಿಸುತ್ತದೆ. "ಬಡತನದಲ್ಲಿ ಎಷ್ಟು ಜನಗಳು ಸಂಸಾರಿಗಳಾಗಿಲ್ಲ" ಎಂದೂ ತೋರುತ್ತದೆ. ಅದಕ್ಕೆ ಬಲವಾದ ಒಂದು ಕಾರಣವೆಂದರೆ-"ನಾಳೆ ನಾನು ನಿರ್ಗತಿಕನಾಗಿ, ಒಂಟಿಯಾಗಿ ಬಾಳಬೇಕಾಗಿ ಬಂದರೆ-"ಎಂಬ ಭೀತಿ. ಆದರೆ ಅವೆಲ್ಲ ಪ್ರಶ್ನೆಗಳು ಹೊಳೆದಾಕ್ಷಣ "ಅಣ್ಣನಿಗೆ ತಿಳಿಯದ ವಿಚಾರಗಳೇ ಅವು? ಸಮಯ ಬಂದಾಗ ಆತ ಹೇಳದೆ ಇರುತ್ತಾನೆಯೇ? ಅವನಿಗೆ ಸಮನೆನಿಸಿದುದು ತನಗೂ ಸಮನೇ" ಎಂಬ ವಿಶ್ವಾಸವಿರಿಸಿ, ತನ್ನ ಕೆಲಸದಲ್ಲಿ ತಾನು ಲೀನನಾಗುತ್ತಾನೆ.

ಕದ್ರಿಗೆ ಒಂದು ಮೈಲು ದೂರದಲ್ಲಿ ಒಂದು ಸುಂದರವಾದ ಭೂಮಿ ವಿಕ್ರಯಕ್ಕೆ ದೊರೆಯುವುದಾಗಿ ರಾಧಾಕೃಷ್ಣನಿಗೆ ತಿಳಿಯಿತು. ತಕ್ಷಣವೇ ರಾಧಾಕೃಷ್ಣ ಅಲ್ಲಿಗೆ ಹೋಗಿ ನೋಡಿ ಬಂದನು. ಆಯ ಅಂದಗಳಲ್ಲಿ ಅದು ಕಿರಿಪದವಿನ ಪ್ರತೀಕವಾಗಿತ್ತು. ಮೇಲೆ ವಿಶಾಲವಾದ ಪದವು; ಅದಕ್ಕೆ ಹೊಂದಿ ಬೆಟ್ಟದ ಇಳುಕಲು; ಅಲ್ಲಿಂದ ಮುಂದೆ ಹೊಲಗದ್ದೆಗಳು. ಅದಾಗುತ್ತಲೇ ಸದಾ ನೀರು ಹರಿಯುವ ಹಳ್ಳ—ಎದುರಿಗೆ ಇನ್ನೊಂದು ಗುಡ್ಡ. ರೂಢಿಯಾದ ಹೊಲಗದ್ದೆಗಳು ಬೇರೆಯವರಿಗೆ ಸೇರಿದುದಾದರೂ, ಹಳ್ಳಕ್ಕೆ ಸಮೀಪವಾದ ಬೆಟ್ಟುಭೂಮಿಯು ನಾಲ್ಕು ಎಕ್ರೆಯಷ್ಟು ವಿಶಾಲವಾಗಿತ್ತು. ಹಳ್ಳದ ನೀರನ್ನು ಕಂಡು ಆತನ ಮನಸ್ಸು ತುಂಬ ಒಲಿಯಿತು. ಕಷ್ಟಪಟ್ಟರೆ, ಆ ಬೆಟ್ಟು ಜಾಗವನ್ನು ಹೊಲವಾಗಿ ಮಾಡಬಹುದು. ಗುಡ್ಡದ ಮಗ್ಗುಲು, ಪದವು, ಸರಕಾರಕ್ಕೆ ಸೇರಿದ ಭಾಗಗಳು. ಗದ್ದೆಗಳು ಖಾಸಗಿಯಾಗಿದ್ದರೂ ಬೆಲೆಗೆ ಸಿಗಬಹುದು. ಈಗ ಆ ಬರಿಯ ಬೆಟ್ಟುಜಾಗಕ್ಕೆ ಎರಡು ಸಾವಿರ ರೂಪಾಯಿಗಳಷ್ಟು ಹಣ ತೆರಬೇಕಾದೀತು. ಆ ಮೇಲೆ ಅಲ್ಲಿ ಬಿಡಾರಗಳನ್ನು ಕಟ್ಟಿಕೊಳ್ಳಬೇಕಾದೀತು. ಅದಕ್ಕೆ ತಿರುಗಿ ಸಾವಿರ ರೂಪಾಯಿಯಾದರೂ

ಬೇಕಾದೀತು. ಸಮೀಪದ ಗದ್ದೆಗಳನ್ನು ಬೆಲೆಗೆ ಕೊಳ್ಳಬೇಕು; ಗೇಣಿ ಕೊಟ್ಟು ಲಾಭ ಉಳಿಯಲಾರದು. ಕಿರಿಪದವಿನ ದುಡಿತದಂತೆ ವ್ಯರ್ಥ ಶ್ರಮವಾದೀತು. ಹಣ ದೊರೆತಾಗಲಷ್ಟೇ, ಗದ್ದೆಗಳನ್ನು ಕೊಂಡು ಕೃಷಿಯ ಯೋಚನೆ ಮಾಡಬೇಕು. ಅಲ್ಲಿಯ ತನಕ ಪಶುಗಳ ಪಾಲನೆ ಮಾಡಬಹುದು. ಆ ಸ್ಥಳವನ್ನು ಬಿಟ್ಟರೆ ಅಷ್ಟು ಸುಲಭಕ್ಕೆ, ಅಷ್ಟು ಚೆಲುವಿನ ಬೇರೆ ಭೂಮಿಸಿಗುವುದು ಕಷ್ಟ.

ಆ ಚಪ್ಪಟೆಯಾದ ಬೆಟ್ಟದಲ್ಲಿ ನಿಂತು, ನಾಲ್ಕು ಸುತ್ತು ನೋಡಿದಾಗ, ಅವನ ಮನಸ್ಸು ತೀರ ಹುಚ್ಚುಗಟ್ಟಿತು. ಎದುರಿನ ಹಸುರು ಬಯಲಿನ ಹರಹು, ಹಿಂದೆ ಮುಂದೆ, ಗುಡ್ಡಗಳು; ನಗರಕ್ಕೆ ತೀರ ಸಮೀಪವಾದ ಸ್ಥಳ—ಹೀಗೆಂದು ಪ್ರಭುದೇವನನ್ನು ಆ ಸ್ಥಳಕ್ಕೆ ಕರೆದುಕೊಂಡು ಹೋಗಿ ತೋರಿಸಿದನು. ಪ್ರಕೃತ ಪ್ರಭುವಿನಿಂದ ಹಣ ಬರುವ ಆಸೆಯು ಇದ್ದಿಲ್ಲವಾದರೂ, ಆತ ಆ ಸ್ಥಳವನ್ನೇನೋ ಮೆಚ್ಚಿದನು. ಹದಿನೈದು ದಿನಗಳ ಹಟ ಸಾಧನೆಯಿಂದ ಆ ಭೂಮಾಲಿಕನನ್ನು ಒಲಿಸಿ, ಎರಡು ಸಾವಿರ ರೂಪಾಯಿ ಬೆಲೆಕೊಟ್ಟು, ಅದನ್ನು ಬರೆಯಿಸಿಕೊಂಡೂ ಆಯಿತು. ಇನ್ನು ಅವನ ಕೈಯಲ್ಲಿರುವ ಯಾವತ್ತು ಸಂಪತ್ತೆಂದರೆ, ಬರಿಯ ಸಾವಿರ ರೂಪಾಯಿಗಳು ಮಾತ್ರ. ತನ್ನ ಮೇಲೆ ಮುನಿಸುಗೊಂಡ ತಂದೆಯಿಂದ ಅವನಿಗೆ ಅಷ್ಟೊಂದು ಉಂಬಳಿಯಾದರೂ ದೊರೆತಿತ್ತು. ಅಷ್ಟೊಂದು ಅಲ್ಪ ಹಣದಿಂದಲೇ ಆತ ತನ್ನ ಹೊಸ ಬಯಕೆಗಳಿಗೆ ರೂಪವನ್ನು ಕೊಡಲು ನಿರ್ಧರಿಸಿಬನು. ಈ ಕೆಲಸವಾಗುವ ತನಕ ಮಂಗಳೂರೇ ಅವನ ಬಿಡಾರವಾಗಿತ್ತು. ಈಗ ಆತ ಉಲ್ಲಾಸದಿಂದ ಕಿರಿಪದವನ್ನು ಸೇರಿದನು.

ಸತ್ಯ, ಶ್ಯಾಮರಿಗೆ, ತನ್ನ ಕಾರ್ಯಸಾಧನೆಯನ್ನು ಕುರಿತು ಹೇಳಿದನು. ಅವರಿಬ್ಬರಿಗೂ ಆನಂದವಾಯಿತು. "ಇನ್ನು ಸತ್ಯ, ನೀನು ಮಗುವನ್ನು ಕರೆದುಕೊಂಡು ನೆಟ್ಟಗೆ ಊರಿಗೆ ಹೋಗು. ಕುಂದಾಪುರದ ತನಕ ನಿನ್ನನ್ನು ಬಿಟ್ಟು ಬರುತ್ತೇನೆ. ಇಲ್ಲಿರುವುದು ಬೋಳುನೆಲ; ಮಾಡನ್ನು ಕಟ್ಟಿ ಆಗಬೇಕು. ನಾವಿಬ್ಬರು, ಅಲ್ಲಿಯೇ ಕುಳಿತು ದುಡಿಯ ಬೇಕಾಗುತ್ತದೆ. ಇಲ್ಲಿಂದ ಸಾಮಾನುಗಳನ್ನು ಸಾಗಿಸಬೇಕು. ಅಲ್ಲೆಲ್ಲವೂ ಹೊಸ ಸೃಷ್ಟಿಯಾಗಬೇಕು. ಹೇಗಾದರೂ ಮಾಡುಬೀಳುವುದಕ್ಕೆ ಮೂರು ತಿಂಗಳ ಸಮಯಬೇಕಾದೀತು. ಅಲ್ಲಿಯ ತನಕ ನಿನಗೆ ದೊಡ್ಡ ರಜೆ" ಎಂದು

ನಕ್ಕು ಹೇಳಿದ. ಮರುದಿನ ಮೂವರೂ ಹೊಸ ಭೂಮಿಯನ್ನು ನೋಡ ಹೋದರು. ಶ್ಯಾಮು "ಜಾಗ ನೋಡುವುದಕ್ಕೇನೋ ಚೆನ್ನಾಗಿದೆ. ಒಳ್ಳೆಯ ಕೆಂಪು ಮಣ್ಣು; ಬಾವಿ ತೆಗೆದರೆ ನೀರೂ ಮೇಲಕ್ಕೆ ಸಿಕ್ಕೀತು. ಚೆನ್ನಾಗಿ ಒಂದು ಗೋಶಾಲೆಯನ್ನು ಮಾಡಬಹುದು. ಆದರೆ ಮನೆಗೆ ಬೇಕೆನ್ನುವಷ್ಟು ಅಕ್ಕಿಯಾನ್ನಾದರೂ ಬೆಳೆಯಬೇಡವೇ" ಎಂದು ಹೇಳಿದ.

"ಎದುರಿಗೆ ಇವೆಯಲ್ಲ, ಇಷ್ಟೆಲ್ಲ ಸುಗ್ಗಿ ಗದ್ದೆಗಳು."

"ಅವನ್ನೂ ಕೊಂಡಿರಾ?"

"ಈಗ ಕೊಂಡಿಲ್ಲ. ದುಡ್ಡು ಎಲ್ಲಿಂದ ತರಲಿ? ಆದರೆ ಅವನ್ನು ಕ್ರಯಕ್ಕೆ ಕೊಡುವವರಿದ್ದಾರೆ. ಬೆಲೆ ಮಾತ್ರ ಐದು ಸಾವಿರ ರೂಪಾಯಿ; ಐವತ್ತು ಮುಡಿ ಗೇಣಿ ಬರುತ್ತದೆ. ಸ್ವಂತ ದುಡಿದರೆ, ಐವತ್ತಲ್ಲ, ನೂರು ಮುಡಿ ಬೆಳೆಯಬಹುದು." ಮೂರು ಬೆಳೆಗಳಿಗೂ, ನೀರಿನ ಆಶ್ರಯವಿದೆ. ಒಳ್ಳೆಯದಾಗಿ ಒಂದೆರಡು ಎಕ್ರೆಗಳಲ್ಲಿ ಹಸಿಯ ಮೇವು ಬೆಳೆಯಿಸಿದರೆ, ಜಾನುವಾರುಗಳ ವೆಚ್ಚ, ಅರ್ಧಕ್ಕರ್ಧವಾದರೂ ಹ[illegible]ದೀತು. ಆದರೆ ಹಣಬೇಕಲ್ಲ!

ಸತ್ಯ ಎಂದಳು, "ಅಪ್ಪನ ಹತ್ತಿರ ಕೇಳಿದರೆ ಕೊಟ್ಟಾರು."

"ಅದು ಮಾತ್ರ ಬೇಡ. ನನಗೆ ಇರುವುದರಲ್ಲಿಯೇ ಅರೆವಾಸಿ ತಮ್ಮಂದಿರಿಗೆ ನಾನು ಬಿಟ್ಟುಬಂದೆ. ಸಂಪೂರ್ಣ ಹಣ ಬಿಟ್ಟುಬರುವ ಯೋಗ್ಯತೆ ಇದ್ದಿಲ್ಲವೆಂದು ವ್ಯಥೆ ಉಂಟಾಗಿದೆ. ಹೀಗಿರುತ್ತ, ತಿರುಗಿ ಮಾವನಲ್ಲಿ ಸಾಲ ಬೇಡುವುದೇ?"

"ನೀವು ಕೇಳಬೇಕಾಗಿಲ್ಲ. ನಾನು ಕೇಳುತ್ತೇನೆ."

"ಬೇಡ; ಈಗಂತು ಬೇಡವೇ ಬೇಡ."

ಈ ಮಾತುಗಳನ್ನೆಲ್ಲ ಶ್ಯಾಮು ಕೇಳುತ್ತಲೇ ಇದ್ದ. ಅವನ ಮನಸ್ಸಿನ ಲಹರಿ ಬೇರೆ ಬಗೆಯಾಗಿ ಹರಿಯುತ್ತಿತ್ತು. ಅಣ್ಣನೊಡನೆ ತಾನಾಗಿ ಆಡಲು ಧೈರ್ಯಸಾಲದು.

ರಾಧಾಕೃಷ್ಣನ ಮೊದಲ ಕೆಲಸವೆಂದರೆ ಸತ್ಯ ಮತ್ತು, ಚಂದ್ರನನ್ನೂ, ಚಂದಪ್ಪನನ್ನೂ, ಕುಂದಾಪುರದ ತನಕ ಕರೆದೊಯ್ದು ಬಿಟ್ಟುಬರುವುದು. ಹಾಗೇನೋ ಮಾಡಿದನು. ಆಲೆಮನೆಯ ತನಕ ಹೋಗಬೇಕೆಂದು ಮನಸ್ಸಾದರೂ, ಮಾವನ ಮನಸ್ಸು ಹೇಗಿದೆ ಎಂದು ತಿಳಿಯುವ ತನಕ

ಧೈರ್ಯವಾಗಲಿಲ್ಲ. ಹಾಗೆಯೇ ಮರಳಿದನು. ನಾಲ್ಕಾರು ದಿನಗಳ ಶ್ರಮದಿಂದ, ಆತ, ಶ್ಯಾಮನನ್ನು ಕರೆದುಕೊಂಡು, ಕಿರಿಪದವಿನಿಂದ ಬಿಡಾರವನ್ನು ಸಾಗಿಸಿದನು. ರಾಮಣ್ಣನಿಗೆ, ಅವರು ಹೋಗುವುದು ಏನೇನೂ ಸಮಾಧಾನವಿಲ್ಲವಾದರೂ ತನ್ನ ಆಳುಗಳನ್ನು ಕೊಟ್ಟು, ಮನೆಯ ವಸ್ತು ಒಡವೆಗಳನ್ನು ಸಾಗಿಸುವುದರಲ್ಲಿ ಸಹಾಯನಾದನು. ತನ್ನ ಒಡೆಯನ ಹಿಂದೆಯೇ ಕಲಲನ ಕುಟುಂಬ ಹೊರಟಿತು. ರಾಮಣ್ಣ, ಆಕ ವಿದಾಯಗೊಳ್ಳುವ ದಿನ ಕಣ್ಣೀರನ್ನೇ ಕರೆದನು. "ಅಯ್ಯೋ, ನಿಮ್ಮನ್ನು ಇರಿಸಿಕೊಳ್ಳುವ ಋಣ ನಮಗೆ ಇಲ್ಲದೆಯೆ ಹೋಯಿತು" ಎಂದನು. ರಾಧಾಕೃಷ್ಣನನ್ನು ನೆನೆದಾಗಲೆಲ್ಲ, ನೆರೆಯ ದಿವಸಗಳು ಅವನ ಕಣ್ಣೆದುರಿಗೆ ಮೂಡುತ್ತಿದ್ದುವು.

ಸರಿ— ಹೊಸ ತಾವಿಗೆ ಬಂದರು. ಮನೆ ಮಠಗಳಾಗುವ ತನಕ ಎರಡು ಮೂರು ಚಪ್ಪರಗಳನ್ನು ಹಾಕಿಕೊಂಡು ದಿನ ಕಳೆದರು. ಪ್ರಾರಂಭಿಸಿದ ಮೊದಲ ಕೆಲಸವೇ ಬಾವಿಯದು. ಬರಿಯ ಎರಡು ಆಳು ಕಂತದಲ್ಲಿ ನೀರು ಸಿಕ್ಕಿತು. ಅಷ್ಟೊಂದು ಅರ್ಗಳವಾದ ನೀರನ್ನು ಕಂಡು— "ಇಷ್ಟು ಮೇಲಕ್ಕೆ ನೀರು ಇರುವಾಗ ಏನನ್ನೂ ಮಾಡಿಕೊಳ್ಳಬಹುದು" ಎಂದರು. ಮೂರು ತಿಂಗಳ ಕಾಲ, ಹಗಲು ರಾತ್ರಿಯೆನ್ನದೆ ಆಳುಗಳನ್ನು ಕಟ್ಟಿಕೊಂಡು ದುಡಿದರು. ಹುಲ್ಲು, ಬಿದಿರು, ಮಣ್ಣುಗಳಿಂದ ಮೂರು ಕೊಗಳುಗಳು ಮೇಲಕ್ಕೆ ಬಂದುವು. ತಾವಿರುವ ಸಲುವಾಗಿ ಒಂದು ಮನೆ. ಎಮ್ಮೆಗಳಿಗಾಗಿ ಒಂದು ಕೊಟ್ಟಿಗೆ—ಕಲಲನ ಸಲುವಾಗಿ ಒಂದು ಗುಡಿಸಲು, ಇಷ್ಟೆಲ್ಲ ನಿರ್ಮಾಣವಾದುವು. ಅಷ್ಟು ಮುಗಿಯುವ ತನಕ, ಅವರ ಮನಸ್ಸಿಗೂ ಮೈಗೂ ನೆಮ್ಮದಿಯಿರಲಿಲ್ಲ. ಹಳೆ ಮನೆಯ ಸಾಮಗ್ರಿಗಳನ್ನು ಕೊಂಡು ಬಂದುದರಿಂದ ಅವರ ಕೆಲಸವೇನೋ, ಸಲಭ ವೆಚ್ಚದಲ್ಲಿ ಮುಗಿಯಿತು. ಮನೆಯ ಕೆಲಸ ಮುಗಿದಂದೇ, ಶಾಲೆಗೆಂದು ಒಂದು ಜೋಪಡಿ ನಿರ್ಮಾಣವಾಯಿತು. "ತತ್ಕಾಲಕ್ಕೆ ಶಾಲೆಗೆ ಇಷ್ಟು ಸಾಕು" ಎಂದನು ರಾಧಾಕೃಷ್ಣ. ಅಷ್ಟು ಮಾಡಿಸಿ, ಪ್ರಭುದೇವನಿರುವಲ್ಲಿಗೆ ಹೋಗಿ, ಅವನನ್ನು ಕರೆದು ತಂದನು. "ನೋಡಿ, ಮನೆ, ಶಾಲೆ, ಹಟ್ಟಿ. ಇಷ್ಟನ್ನು ಹೇಗೂ ಪೂರೈಸಿದ್ದು ಆಯಿತು. ಮುಂದೆ ಹಣ ಒದಗಿದರೆ, ಜನಸಹಾಯ ದೊರೆ

ತರೆ, ಕಲ್ಲು ಹಂಚುಗಳಿಂದ, ಪಕ್ಕಾ ಕಟ್ಟೋಣ ಮಾಡಿಸೋಣವಂತೆ."
ಎಂದು ಹಿಗ್ಗಿ ನುಡಿದನು.

"ಇದು ನೋಡಿ—ಶಾಂತಿನೀಕೇತನ, ಶ್ರೀನಿಕೇತನಗಳೆರಡನ್ನೂ ಮೀರಿಸುವ ಶಾಲೆಯಾಗಬೇಕು. ಈಗ ತತ್ಕಾಲಕ್ಕೇನೋ ಈ ಮನೆ, ಕಟ್ಟಡಗಳು ಸಾಕು, ನಿಜ ನೀವು ಗಾಂಧೀ ತತ್ವದವರು. ನಿಮಗೆ ಇದು ಕೊನೆಯ ತನಕವೂ ಸಾಕಾಗಿ ಕಾಣಿಸಬಹುದು. ಆದರೆ ಜನಕ್ಕೆ ಇದು ಸಾಲದು. ಫೋಟೋಗ್ರಾಫ್ ತೆಗೆದರೆ, ಭರ್ಜರಿಯಾಗಿ ಕಾಣಿಸುವಂತಿರಬೇಕು—ಕಟ್ಟಡ ಗೋಶಾಲೆಯೂ ಅಪ್-ಟು-ಡೇಟ್ ಆಗಿರಬೇಕು. ಆಗಲಿ, ಈಗ ಸಾಕು. ಇದರ ಪ್ರಾರಂಭೋತ್ಸವ ಯಾವಾಗ? ಯಾರಾದರೂ ದೊಡ್ಡ ಮನುಷ್ಯರಿಂದ ಅದನ್ನು ಮಾಡಿಸಿ, ತುಂಬ ಪ್ರಚಾರ ಮಾಡಬೇಕು."

"ಅದು ಮಾತ್ರ ಬೇಡ. ಹಿಂದೆ ನಮ್ಮ ದಲಿತ ವಿದ್ಯಾಪೀಠಕ್ಕೆ ಪ್ರಾರಂಭೋತ್ಸವವೂ ಆಗಿತ್ತು; ಪ್ರಚಾರವೂ ಆಗಿತ್ತು. ದೊಡ್ಡ ಮನುಷ್ಯರೇ ಅದನ್ನು ಅನಾವರಣ ಮಾಡಿದರು. ಇದಕ್ಕೆ ಅವು ಯಾವುದೂ ಬೇಡ. ಶಾಲೆಗೆ ಒಂದು ರೂಪ ಬಂದು, ಅದು ಬೆಳೆದು, ಹೆಮ್ಮೆ ಪಡುವ ದಿನ ಬಂದರೆ, ಆಗ ಉತ್ಸವ ಮಾಡಿಸುವ; ಸಂತೋಷ ಪಡುವ."

"ನಿಮ್ಮ ಆ ಕಲ್ಪನೆ ಮಾತ್ರ ನನಗೆ ಒಪ್ಪುವುದಿಲ್ಲ. ಸಣ್ಣ ರೀತಿ, ಸಣ್ಣ ಜೋಪಡಿಗಳನ್ನು ಮೆಚ್ಚಿ ಯಾರೂ ಬರುವುದಿಲ್ಲ ಇದಕ್ಕೆ ಕನಿಷ್ಠ ಇಪ್ಪತ್ತು ಸಾವಿರ ರೂಪಾಯಿಗಳನ್ನಾದರೂ ಖರ್ಚುಮಾಡಬೇಕು. ಸರಿಯಾದ ಕಟ್ಟಡ, ಮತ್ತು ಉಪಾಧ್ಯಾಯರುಗಳು ಆರಂಭದಲ್ಲಿಯೇ ಇರಬೇಕು. ಆಗ ಹುಡುಗರೂ ಬರುತ್ತಾರೆ; ಹಣವನ್ನೂ ಸೆಳೆಯಬಹುದು."

"ಹಣ ಸೆಳೆಯುವ ಧೈರ್ಯ ನನಗಿಲ್ಲ ನನ್ನ ಮನಸ್ಸೆಂದರೆ, ನಮ್ಮ ಶಕ್ತಿಗೆ ಸಮನಾಗಿ, ಇದನ್ನು ಬೆಳೆಯಿಸಿಕೊಂಡು ಹೋಗಬೇಕೇ ವಿನಾ ಒಮ್ಮೆಗೇ ದೊಡ್ಡ ಹಾರಾಟ ಮಾಡಬಾರದು."

"ಆ ತೆರನ ಬಡತನದ ಕೆಲಸಕ್ಕೆ ಪ್ರಪಂಚದಲ್ಲಿ ಮರ್ಯಾದೆ ಸಿಗಲಾರದು. ಗಾಂಧೀಜಿಯವರು ದೊಡ್ಡ ಮನುಷ್ಯರಾದುದರಿಂದ, ಅವರು ಮಣ್ಣಿನ ಮನೆಯಲ್ಲಿ ಕೂತು ಕೈ ನೀಡಿದರೂ, ಲಕ್ಷಾವಧಿ ಹಣ ಬಂದು ಸುರಿಯುತ್ತದೆ. ಅವರಂತೆ ನಾವು ಕೈ ನೀಡಿದರೆ ಅರ್ಧಾಣೆ ಬಿದ್ದೀತು.

ಅದಕ್ಕೆ ಅವರ ವರ್ಚಸ್ಸು ಕಾರಣ. ಬಡತನದಿಂದ ಆ ವರ್ಚಸ್ಸು ಬರಲಿಲ್ಲ. ಅದು ಶ್ರೀಮಂತಿಕೆ ಇದ್ದಾಗಲೇ ಬಂದದ್ದು. ತಮಗೆ ವರ್ಚಸ್ಸು ಬಂದ ಮೇಲೆ, ಬಡತನ ಕೈಕೊಂಡರು. ನಮ್ಮಂಥರು ಕೆಲಸ ಕೈಕೊಳ್ಳುವಾಗ ಬಾಯಿಯ ಆಡಂಬರ ತೀರ ಅವಶ್ಯ. ಬರಿಯ ಕಟ್ಟಡ ಒಂದರ ಚಿತ್ರವೇ, ನೋಡಿದವರ ಮೇಲೆ ಪರಿಣಾಮ ಮಾಡುವಂತಿರಬೇಕು.”

“ಅದನ್ನು ನಾನೂ ಒಪ್ಪುತ್ತೇನೆ. ನಿಮ್ಮ ಮಾತಿನಲ್ಲಿ ಹುರುಳಿಲ್ಲವೆಂದಲ್ಲ. ಜನಗಳ ಸ್ವಭಾವ ನನಗೂ ತಿಳಿದಿದೆ. ಅಷ್ಟೇ ಚೆನ್ನಾಗಿ ನನ್ನ ಮಿತಿಯೂ ನನಗೆ ತಿಳಿದಿದೆ”.

“ಹೋಗಲಿ. ನೀವು ಯಾವ ಮಿತಿಯನ್ನೂ ಯೋಚಿಸಬೇಕಾಗಿಲ್ಲ. ಇದು ಪೂರ್ಣವಾಗುವಾಗ, ಎಂಥ ರೂಪ ಬರುತ್ತದೆ, ಎಂಬ ಸ್ಪಷ್ಟವಾದ ಯೋಜನೆಯನ್ನು ಹಾಕಿಕೊಡಿ. ಅದನ್ನು ಮುದ್ರಿಸಿ ಪ್ರಚಾರ ಮಾಡಿ, ಹಣವನ್ನು ಗಳಿಸಿ ತರುವ ಭಾರ ನನ್ನದು. ಶಾಲೆಯ ಯಾಪತ್ತು, ಪ್ರಚಾರದ ಕೆಲಸ ನನಗಿರಲಿ. ನಾನು ಹಣವನ್ನು ತಂದು ಕೊಟ್ಟಲ್ಲಿ, ಅದನ್ನು ಚೆನ್ನಾಗಿ ಖರ್ಚು ಮಾಡಿ, ಶಾಲೆಯ ಕೆಲಸವನ್ನು ನಡೆಯಿಸುವ ಭಾರ ನಿಮ್ಮದು. ಆಗದೇ?”

“ನನ್ನೊಬ್ಬನಿಂದಲೇ ಎರಡೂ ಕೆಲಸಗಳಾಗುವುದಿಲ್ಲ ಎಂದು ನನಗೆ ಗೊತ್ತಿದೆ.”

“ಅವುಗಳಲ್ಲಿ ಒಂದರ ಭಾರವನ್ನು ನಾನು ಹೊರಲು ಮುಂದಾದುದು ಅದಕ್ಕೇನೇ. ನೀವು ವಿವರವಾದ ಒಂದು ಹಂಚಿಕೆ ಹಾಕಿಕೊಡಿ. ಎಂಥ ಪಾಠ ಹೇಳಿಕೊಡಬಹುದು, ಎಂಥ ಕಟ್ಟಡವಾಗಬೇಕು, ಯಾವಾವ ಸಲಕರಣೆಗಳು ಬೇಕು, ಸಂಬಳಕ್ಕೆ ಎಷ್ಟು ಹಣಬೇಕು—ಎಂಬ ಹಂಚಿಕೆ ತಯಾರಿಸಿರಿ” ಎಂದು ಹೇಳಿಹೋದನು. ಪ್ರಭುದೇವನ ಅಷ್ಟೆಲ್ಲ ಮಾತುಗಳಲ್ಲಿ ಒಮ್ಮೆಗೇ ವಿಶ್ವಾಸ ಹುಟ್ಟದಾದರೂ, ಆಗಬೇಕಾದ ಕೆಲಸವೆಂಬುದರಿಂದ ರಾಧಾಕೃಷ್ಣನು ಒಪ್ಪಿಕೊಂಡನು.

ಆತನ ಮನಸ್ಸಿನಲ್ಲಿ, ತನ್ನ ವಯ್ಯಕ್ತಿಕವಾದ ಜೀವನವು ಪರರ ಸಹಾಯದ ಮೇಲೆ ಹೊಂದಿರಬಾರದು ಎಂದಿತ್ತು. ಯಾರ ಅನ್ನಕ್ಕೂ ತಾನು ಬೀಳದೆ, ತನ್ನಿಂದಾಗುವ ಕೆಲಸವನ್ನು ಶಾಲೆಗಾಗಿ ಮಾಡಬೇಕು ಎಂದು ಅವನ ನಿರ್ಧಾರ. ಮೊದಲು ಅದಕ್ಕೆ ಅವನ ಗಮನ. ತನ್ನ ಗೋಶಾಲೆಗೆ ಇನ್ನೂ

ನಾಲ್ಕು ಎಮ್ಮೆಗಳನ್ನು ಕೊಂಡುಕೊಂಡನು—ತನ್ನ ಬದುಕಿಗೆ ಮುಖ್ಯ ಎಂಬುದರಿಂದ, ಮುಂದಿನ ವರ್ಷದಲ್ಲಿ ಕೃಷಿಯನ್ನು ತೊಡಗುವ ಯೋಚನೆಯು ಅವನಿಗೆ.

ಈ ನಡುವೆ ಶ್ಯಾಮನ ಕೆಲಸವು ಫಲಿಸಿ ಬದಿಂತು. ಅವನ ಹೆಕ್ಕದಾರಿಕೆಯು ಸಲಭದಲ್ಲಿ ಸ್ಥಾಪಿತವಾಯಿತು. ಅದಾದುದೇ ತಡ, ಬೈಲೂರಿನ ನಾಲ್ಕಾರು ಗೃಹಸ್ಥರು ಅವನನ್ನು ಹುಡುಕಿ ಬಂದರು. "ಅಯ್ಯೋ, ನೀನು ಎಲ್ಲಿದ್ದೆಯೆಂದು, ಯಾರಿಗೆ ತಿಳಿದಿರಬೇಕು. ನಿನ್ನ ಚಿಕ್ಕಪ್ಪ ತೀರಿ ವರ್ಷವೊಂದಾಗಿತ್ತು. ಅವರ ಹೆಂಡಿರು ಮಕ್ಕಳು ಬಹು ಮೊದಲೇ ತೀರಿಕೊಂಡಿದ್ದರು. ಅವರೂ ತಮ್ಮ ಕೊನೆಗಾಲಕ್ಕೆ ನಿನ್ನನ್ನು ತುಂಬ ನೆನೆದರು. ನೀನು ಇಷ್ಟು ಸಮೀಪವಿದ್ದು ನಮಗೆ ಯಾರಿಗೂ ತಿಳಿಯದೆ ಹೋಯಿತೇ?" ಎಂದು ಸಂತಾಪ ವ್ಯಕ್ತ ಮಾಡಿದರು; ಹರಕೆ ಹೊರಿಸಿದರು. ಒಬ್ಬಿಬ್ಬರು ಬಂದು "ನೀನು ಹೀಗೆ ಪರವೂರಿನಲ್ಲಿರುವುದು ಚಂದವಲ್ಲ, ಆಗ ನಿನ್ನ ಭೂಮಿಯ ಹುಟ್ಟುವಳಿ ಕೈಗೆ ಬರಲಾರದು" ಎಂದು ಹೇಳಿದರು. ಇನ್ನೊಬ್ಬರು—"ಇಲ್ಲಿರುವುದಾದರ, ಒಳ್ಳೆಯ ಕ್ರಯ ಬಂದಲ್ಲಿ ಯಾಕೆ ಅದನ್ನು ಮಾರಬಾರದು" ಎಂದೂ ಹೇಳಿದರು. ನಾಲ್ಕನೆಯದೊಂದು ಪಂಥವೂ ಇತ್ತು. "ಶ್ಯಾಮ, ನಿನ್ನ ಜಾತಕದ ನಕಲು ಸಿಕ್ಕೀತೇ?" ಎಂದು ಕೇಳುವ ಮಂದಿ ಅವರು. ಇದರಿಂದಾಗಿ—ಶ್ಯಾಮನಿಗೆ, ಏನೂ ಇಲ್ಲದ ತನ್ನನ್ನು ಇಂದು ಮನುಷ್ಯನನ್ನಾಗಿ ಜನ ತಿಳಿಯತೊಡಗಿದ್ದಾರೆ ಎಂಬ ಹೆಮ್ಮೆಯಾಯಿತು ಒಮ್ಮೆಗೇ ಶ್ಯಾಮನ ಪ್ರಖ್ಯಾತಿ ಇಷ್ಟು ಹರಡಿದ್ದನ್ನು ಕಂಡು, ರಾಧಾಕೃಷ್ಣ "ಯಾರವರು, ಯಾಕೆ ಬಂದರು?" ಎಂದು ಕೇಳುತ್ತಾನೆ. ಕೇಳಿದ ಮೇಲೆ ಹೇಳದಿರಲಿಕ್ಕಾಗುತ್ತದೆಯೇ? ಹೇಳುತ್ತಾನೆ. ಆದರೆ "ಅಳಿಯ ದೇವರ ಒಲುಮೆಗೆ ಬರುವ ಜನರ ವಿಷಯಗಳಲ್ಲಿ ಹೇಳುವಾಗ ಮಾತ್ರ ಗಂಟಲು ಕಟ್ಟುತ್ತದೆ. ಒಮ್ಮೆ "ಅದು ಯಾರು?" ಎಂದು ರಾಧಾಕೃಷ್ಣ ಕೇಳಿದಾಗ, ಶ್ಯಾಮ "ಯಾರೋ ಅಪ್ಪ, ಏನೇನೋ ಬಂದು ಕೇಳುತ್ತಿದ್ದಾರೆ" ಎನ್ನಬೇಕಾಯಿತು. "ಅದೇನು?" ಎಂದು ತೀರ ಒತ್ತಿ ಕೇಳಲು, ಹೇಳುವುದಕ್ಕೆ ನಾಚಿಕೆ. ಆದರೆ ಅವನ ಮನಸ್ಸಿನಲ್ಲಿ ಹೆಣ್ಣಿನ ಬಯಕೆಯು ಮೂಡಿದೆ. ಅಣ್ಣ ಏನೆಂದಾನು? ಎಂಬ ಭೀತಿಯಿದೆ.

ಆ ದಿನ ರಾತ್ರಿ ಊಟ ಮುಗಿದ ಮೇಲೆ, ರಾಧಾಕೃಷ್ಣ ಶ್ಯಾಮುನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡನು. "ಶ್ಯಾಮು, ಹಾಗೆ ಮನೆಗೆ ಬಂದವರನ್ನು ಓಡಿಸಬೇಡ. ನಿನಗೆ ಪ್ರಾಯವಾಗಿಲ್ಲವೇ? ಇದು ಲಗ್ನವಾಗುವ ಪ್ರಾಯ; ಆಗಬೇಕು. ಅದರಲ್ಲೇನು ತಪ್ಪು? ನಿನಗೆ ಸಂಸಾರ ನಡೆಯಿಸಿಕೊಂಡು ಹೋಗ ಬಲ್ಲ ಶಕ್ತಿಯೂ ಇದೆ. ಪಾಪ, ಹೆಣ್ಣು ಹಡೆದವರ ಗೋಳು ಸಾಮಾನ್ಯರಿಗೆ ತಿಳಿಯುವುದಿಲ್ಲ. ಅವರ ಚಿಂತೆಯೇ ಚಿಂತೆ. ಅವರು ಬಡವರಾದರಂತೂ ತೀರಿತು—ತಲೆಯ ಮೇಲೆ, ಸರಕನ್ನು ಹೊತ್ತು ತಿರುಗುವ ವ್ಯಾಪಾರಿಗಿಂತ ಕಡೆ. ನಿನಗೆ ಮಾತನಾಡಲು ದಾಕ್ಷಿಣ್ಯವೇ? ನಾನಿದ್ದೇನಲ್ಲವೆ. ಹೋಗಿ ಹೆಣ್ಣು ನೋಡಿ, ಬರೋಣ. ಮನೆತನ, ರೂಪ, ಗುಣ ಸ್ಥಿತಿಗತಿ ನೋಡಿ ಕೊಂಡು ಒಂದೂ ಆಗುತ್ತದೆ, ಇಲ್ಲವಾದರೆ, ಇಲ್ಲ—ಎಂದು ಹೇಳಿದರಾ ಯಿತು" ಎಂದು ಉಪದೇಶ ಮಾಡಿದನು.

"ನನಗೆ ಗೊತ್ತಿಲ್ಲ—ನೀವು ಹೇಳಿದಂತೆ ನಾನಿರುವವ".

"ಅದು ಈ ತನಕ. ಇನ್ನು ಮುಂದೆ ನೀನು ಸ್ವತಂತ್ರವಾಗಿ ಬದುಕು ವುದಕ್ಕೆ ಕಲಿಯಬೇಕು".

"ಅಂದರೆ ನಾನು ಊರಿಗೆ ಹೋಗಿ, ಅಲ್ಲಿಯೇ ಸಂಸಾರವನ್ನು ಕಟ್ಟಿಕೊಂಡು ಇರಬೇಕೆನ್ನುತ್ತೀರಾ?"

"ಏನು ತಪ್ಪು?"

"ತಪ್ಪೇನಿಲ್ಲ, ನಿಜ. ಆದರೂ, ನಿಮ್ಮ ಒಡನಾಟದಲ್ಲಿ ಬೆಳೆದಿದ್ದೇನೆ. ಯಾರಿಲ್ಲದಾಗ ನೀವು ನನಗೆ ತಂದೆಯಾದಿರಿ, ಅಣ್ಣನಾದಿರಿ. ನಿಮ್ಮ ಸಂಗಡವೇ ಇರಲು ಆಸೆ ನನಗೆ. ನಿಮಗೆ ಬೇಡವಾದರೆ ಹೋಗುತ್ತೇನೆ. ಹಿಂದೊಮ್ಮೆ ಹಾಗೆ ಅಂದಿದ್ದ—ನೀವು ಭರವಸೆ ಕೊಟ್ಟಿರಿ".

ರಾಧಾಕೃಷ್ಣನಿಗೆ ಹಳೆಯ ಕಾಲದ ಮಾತುಗಳ ನೆನವರಿಕೆಯಾ ಯಿತು. ಶ್ಯಾಮುನ ಮುಖವನ್ನೇ ನಿಟ್ಟಿಸಿ ನೋಡಿದನು. "ಅಲ್ಲ ಶ್ಯಾಮು, ನನ್ನ ಈ ಹುಚ್ಚುಗಳಿಗಾಗಿ, ನಾನು ನಿನ್ನನ್ನು ದಣಿಸಬೇಕೆ?

"ಆ ಹುಚ್ಚು ನನಗೆ ಒಪ್ಪಿತವಿರುವಷ್ಟು ಕಾಲ, ಹಾಗೆ ಮಾಡುವುದ ರಲ್ಲಿ ಏನು ತಪ್ಪು? ಅದು ಸರಿತೋರದೆ ಹೋದರೆ ಆಗ ನಾನಾಗಿ ಹೊರಡು ತ್ತೇನೆ. ದಾಕ್ಷಿಣ್ಯಕ್ಕೆ ಕಟ್ಟು ಬೀಳದಿದ್ದರೆ ಆಯಿತಲ್ಲಾ."

"ಹಾಗಾದರೆ ನಾನೇನು ಮಾಡಬೇಕೆನ್ನುತ್ತೀ?"

"ನನಗೀಗ ಆಸ್ತಿ, ಮನೆ, ನಗದು-ಏನೂ ಸಿಗದೆ ಹೋಗಿದ್ದರೆ ಹೇಗೆ ನಡೆಯಿಸಿಕೊಂಡು ಹೋಗುತ್ತಿದ್ದಿರೋ, ಹಾಗೆಯೇ ಇನ್ನೂ ನಡೆಯಿಸಿಕೊಂಡುಹೋಗಬೇಕು."

"ಆಗಲೂ, ನೀನು ಲಗ್ನವಾಗಬೇಕು, ನಿನ್ನದೇ ಸಂಸಾರವನ್ನು ಸಾಗಿಸಿಕೊಂಡು ಹೋಗಬೇಕೆನ್ನುತ್ತಿದ್ದೆ. ನನ್ನ ಸಂಸಾರದಂತೆ ನಿನಗೂ, ಕಷ್ಟ ಸುಖಗಳು ಬರಬಹುದು."

"ಹಾಗಾದರೆ ನನ್ನ ಮನಸ್ಸನ್ನು ಹೇಳುತ್ತಿದ್ದೇನೆ—ನನಗೆ ಮದುವೆಯಾಗಲು ಆಸೆಯೂ ಉಂಟು, ಆಗಲೂಬಹುದು. ಆದರೆ ನಿಮ್ಮಿಬ್ಬರ ಬಳಿಯಲ್ಲೇ ಬದುಕಬೇಕೆಂಬ ಆಸೆ ನನ್ನದು. ನನ್ನ ಕೈಗೆ ಇಷ್ಟು ಸಂಪತ್ತು ಬಂದಿದೆ ನಿಜ; ಅದು ನನ್ನದು ಎಂದು ನಾನು ತಿಳಿಯುವವನಲ್ಲ. ಆ ಹಣವನ್ನು ಇಲ್ಲಿ ತಂದು ಹಾಕುತ್ತೇನೆ. ಆ ಭೂಮಿಯನ್ನು ನಮಗೆ ಕೊಡು-ಎನ್ನುವವರಿದ್ದಾರೆ. ಮಾರಿದರೆ ಐದಾರು ಸಾವಿರ ರೂಪಾಯಿ ಸಿಗಬಹುದು. ಆ ಹಣವನ್ನು ಇಲ್ಲಿ ವೆಚ್ಚಮಾಡುವ. ನಿಮ್ಮ ಜತೆಯಲ್ಲಿ ನಾನು ಇಲ್ಲಿಯೇ ದುಡಿಯುತ್ತೇನೆ. ನಿಮ್ಮ ಕೆಲಸಕ್ಕೆ ಬೇರೆ ಹಣ ಒದಗಿದಾಗ, ಅದನ್ನು ಹಿಂದಕ್ಕೆ ಕೊಡುವಿರಂತೆ, ಇಲ್ಲವೆ ಬಿಡುವಿರಂತೆ."

"ಸರಿಯೆ! ನಾಳೆ ನಿನ್ನ ಮನೆಗೆ ಬರುವವಳು, ಈ ಮರುಳಿಗಾಗಿ ಸಿಟ್ಟಾದರೆ?"

ಶ್ಯಾಮು ನಕ್ಕನು. "ಅದಕ್ಕಾಗಿ ಮದುವೆಗೆ ಮುಂಚಿತವಾಗಿ ಎಲ್ಲವನ್ನೂ ಚರ್ಚೆಮಾಡಬೇಕೆಂದಿದ್ದೇನೆ" ಎಂದನು.

ಇನ್ನೂ ಕೆಲವು ದಿವಸಗಳ ತನಕ ಶ್ಯಾಮುನ ಕೊನೆಯ ಮಾತುಗಳಿಗೆ, ರಾಧಾಕೃಷ್ಣನ ಪ್ರೋತ್ಸಾಹ ದೊರೆತಂತೆ ಕಾಣಿಸಲಿಲ್ಲ. ಆದರೆ ದಿನ ನಿತ್ಯ, ಶ್ಯಾಮುನ ಒತ್ತಾಯ ತಪ್ಪಲಿಲ್ಲ. "ಅಣ್ಣ, ಅದನ್ನು ಮಾರಿ, ಇಲ್ಲಿನ ಹೊಲವನ್ನು ಕೂಡಲೇ ಕೊಂಡುಕೊಳ್ಳುವ. ಈ ವರ್ಷವೇ ಇಲ್ಲಿ ಬೇಸಾಯ ತೊಡಗಬಹುದು. ಜಾನುವಾರುಗಳಿಗೆ ಹುಲ್ಲನ್ನುಕೊಳ್ಳುವ ತಾಪತ್ರಯವಾದರೂ ತಪ್ಪೀತು" ಎನ್ನುತ್ತಿದ್ದ. ಅದರಂತೆ, ಕೆಲಸ ಮಾಡುವುದಕ್ಕೆ ರಾಧಾಕೃಷ್ಣ ಒಡಂಬಡಬೇಕಾಯಿತು. ಸ್ವಲ್ಪ ಕಾಲ ಅಲೆದಾಡಿ, ಬೈಲೂರಿನ ಆಸ್ತಿಗೆ ಗಿರಾಕಿ ಹುಡುಕಿ, ಇಲ್ಲಿನ ಭೂಮಿಯನ್ನು, ಶ್ಯಾಮುನ ಹೆಸ

ರಿಗೇನೇ ಕೊಂಡುಕೊಂಡನು. ನಂಟುತನಕ್ಕೆ ಬಂದವರಿಗೆ, ಮಳೆಗಾಲ ಕಳೆದ ಮೇಲೆ, "ಖಂಡಿತ ಹೇಳುತ್ತೇವಪ್ಪಾ" ಎಂದು ತಿಳಿಸಿದರು.

ಇತ್ತ ಇದ್ದಕ್ಕಿದ್ದಂತೆಯೇ, ಇನ್ನೊಮ್ಮೆ ಪ್ರಭುದೇವನ ಸವಾರಿ ಆಗಮಿಸಿತು:"ಯಾವಾಗ ನೀವು ನಿಮ್ಮ ಶಾಲೆ ತೆರೆಯುವವರು? ನಾನು ಈ ವಾರದಲ್ಲಿ ಉತ್ತರ ಹಿಂದುಸ್ಥಾನಕ್ಕೆ ಹೋಗಿ ಬರಬೇಕೆಂದಿದ್ದೇನೆ. ಎರಡು ತಿಂಗಳು ಊರಲ್ಲಿರುವುದಿಲ್ಲ. ನೀವು ನನ್ನ ಪತ್ರಿಕೆಯ ಬರವಣಿಗೆಯ ಭಾರವನ್ನು ವಹಿಸಿಕೊಳ್ಳಬೇಕು. ನಾನು ನಿಮ್ಮ ಶಾಲೆಯ ಪ್ರಚಾರ ಕೆಲಸವನ್ನು ಮಾಡಿ ಬರುತ್ತೇನೆ" ಎಂದನು.

"ಅಲ್ಲೇ, ಅಷ್ಟು ದೂರವಲ್ಲೇ ಅದರ ಪ್ರಚಾರ?'

"ನೀವು ಆ ವಿಷಯವಾಗಿ ಮಾತನಾಡಬಾರದು. ತನ್ನೂರಿಗೆ ಮಂಗನಾದವನು, ಪರ ಊರಿಗೆ ರಂಗನಾದಾನು"

ರಾಧಾಕೃಷ್ಣನಿಗೆ ಏನು ಹೇಳುವುದಕ್ಕೂ ತೋಚಲಿಲ್ಲ. ಪ್ರಭುವಿಲ್ಲದಾಗ ಪತ್ರಿಕೆಗೇನೋ ಬರೆಯುವುದನ್ನು ಒಪ್ಪಿಕೊಂಡನು ಆ ಕೆಲಸಕ್ಕೆ ಜತೆಗೆ ನಾಣಿಕಲ್‌ನೂ ಇದ್ದಾನೆ. ಆದರೆ ಪ್ರಚಾರದ ವಿಷಯದಲ್ಲಿ ಮಾತ್ರ "ನೀವು ರೈಲಿಗೆ ಇಷ್ಟು ಹಣವನ್ನು ಹಾಳುಮಾಡಿ ಬರುತ್ತೀರಿ. ಅಂಥ ಗಾಳಿಗೋಪುರ ಕಟ್ಟಿ ಪ್ರಯೋಜನವಿಲ್ಲ" ಎಂದು ಹೇಳಬೇಕಾಯಿತು.

"ಕಟ್ಟಿದರೆ, ಅಂಥವನ್ನೇ ಕಟ್ಟಬೇಕು. ಇಂಥ ಜೋಪಡಿಗಳನ್ನಲ್ಲ' ಎಂದು ಹೇಳಿ ಪ್ರಭುದೇವ ನಗುತ್ತ ಹೊರಟುಹೋದನು.



# ಹದಿನಾರನೆಯ ಅಧ್ಯಾಯ

ಸತ್ಯ ತವರು ಮನೆಯ ಪ್ರವಾಸವನ್ನು ಮುಗಿಸಿಕೊಂಡು, ಚಂದ್ರ, ಚಂದಪ್ಪರೊಡನೆ ಮಂಗಳೂರಿಗೆ ನೆಟ್ಟಗೆ ಬಂದಳು. ಪತಿರಾಯನಿಗೆ ತಾನು ಬರುವ ಸಮಯವನ್ನು ತಿಳಿಸಿದ್ದಳು. ಹೀಗಾಗಿ ಅವಳು ತಮ್ಮ ಹೊಸ ಸ್ಥಳಕ್ಕೆ ಬಂದಾಗ, ರಾಧಾಕೃಷ್ಣನೂ ಮನೆಯಲ್ಲಿ ಇದ್ದಿರಲಿಲ್ಲ; ಶ್ಯಾಮನೂ ಇದ್ದಿರಲಿಲ್ಲ. ಮೂರು ತಿಂಗಳ ವಿಶ್ರಾಂತಿಗೆಂದು ಹೋದವಳು, ಬರುವಾಗ ಆರು ತಿಂಗಳ ಮೇಲಾಗಿತ್ತು. ರಾಧಾಕೃಷ್ಣ "ಬರುವಾಗ ದೀರ್ಘ ವಿಶ್ರಾಂತಿಯನ್ನು ಪಡೆದುಕೊಂಡು ಬಾ; ಇಲ್ಲಿ ಬಂದ ಮೇಲೆ ದುಡಿಯುವು ದಂತು ಇದ್ದೇ ಇದೆ. ಇಲ್ಲಿನ ಚಿಂತೆಯನ್ನು ಮರೆತು ಬಿಟ್ಟೇ ಕುಳಿತುಕೋ. ಬಂದ ಮೇಲೆ ಹೊಸ ವಾರ್ತೆಯೊಂದು ನಿನಗಾಗಿ ಕಾದಿರುತ್ತದೆ" ಎಂದು ಪತ್ರವನ್ನು ಬರೆದಿದ್ದನು. ಅವಳು ಮನೆಗೆ ಕಾಲಿರಿಸುವಾಗಲೇ, ನಿಜಕ್ಕೂ ಹೊಸ ಸುದ್ದಿ ಕಾದಿತ್ತು. ಅವಳನ್ನು ಹೊಸಮನೆಯಲ್ಲಿ ಸ್ವಾಗತಿಸಿದವಳು ಒಬ್ಬ ಹದಿನಾರು ವರ್ಷದ ತರುಣಿ. "ಯಾರು? ಎಲ್ಲಾಯಿತು?" ಎಂದು ಸತ್ಯಳನ್ನು ಕೇಳಿದಳು ಅವಳು ಈಕೆಯ ಮುಖ ಸಪ್ಪಗಾಯಿತು. ತಾನು ಸ್ಥಳ ತಪ್ಪಿ ಬಂದೆನೇ ಎಂದು ಅವಳಿಗೆ ಅನುಮಾನವಾಯಿತು. "ನಾವು ಎಲ್ಲೋ ಹಳ್ಳಿಯವರು. ಕತ್ತಲಾಯಿತು ಎಂದು ಇಲ್ಲಿಗೆ ಬಂದೆವು ನಾಳೆ ಬೆಳಗಿನ ರೈಲಿಗೆ ಹೋಗಬೇಕು" ಎಂದಳು. ಆಕೆಯು 'ಬಾಯಾರಿಕೆ ಬೇಕೇ' ಎಂದು ಉಪಚರಿಸಿದಳು. ಇವಳು ಅದಕ್ಕೆ "ಬೇಡ" ಎಂದಳು. "ಬೇಕಮ್ಮ" ಎಂದು ಕೇಳಿದನು ಚಂದ್ರ "ಆಗಲಿ, ತಂದುಕೊಡಿ" ಎನ್ನಬೇಕಾಯಿತು ಸತ್ಯ. ಚಂದ್ರ, ಚಂದಪ್ಪ ಇಬ್ಬರೂ ಅಲ್ಲಿಗೆ ಹೊಸಬರು. ಇದಾರದೋ ಹೊಸ ಮನೆಯಾದುದರಿಂದ ಮುಖ ಮುಖ ನೋಡುತ್ತ, ನೀರು ಕುಡಿಯುತ್ತ ಕುಳಿತರು. ಇವರ ಬೆನ್ನಿಗೆ, ಪೆಟ್ಟಿಗೆಯನ್ನು ತಂದ ಆಳೂ ಬಂದು ಸೇರಿದನು. 'ಹೊರೆಯನ್ನು ಎಲ್ಲಿ ಇಳಿಸಲಿ?' ಎಂದು ಆತ ಕೇಳಿದನು. "ಹೂಂ, ಇರಿಸು ಎಲ್ಲಾದರೂ" ಎಂದಳು ಆಕೆ. ಪೆಟ್ಟಿಗೆ ಅಂಗಳದಲ್ಲಿ ಇರಿಸಿದ್ದನ್ನು ಕಂಡು, ಮನೆಯ ಹುಡುಗಿ, "ನಾಳೆ ಹೋಗುವವರಾದರೆ ಪೆಟ್ಟಿಗೆಯನ್ನು ಚಾವಡಿ ಯಲ್ಲಿ ಇರಿಸಬಹುದು" ಎಂದಳು. ಪಾಪ, ಸತ್ಯಳ ಮನಸ್ಸಿನಲ್ಲಿ ಏನೇನೋ ಹೊಯ್ದಾಟ ತೊಡಗಿತು. "ಹೂಂ, ಇವರು ನನ್ನನ್ನು ಊರಿಗೆ ಕಳುಹಿಸಿ

ಹೀಗೆ ಮಾಡಿದರೇ?" ಎಂದು ಬೆರಗಾಗಿ ಅಂಗಳಕ್ಕೆ ಇಳಿದಳು. ದೂರದಲ್ಲಿ ಕಲಲ ಏನೋ ಅಳತೆ ಮಾಡುವುದು ಕಂಡಿತು. ಬಂದುದು ಸರಿಯಾದ ಸ್ಥಳಕ್ಕೆ ಎಂದೇನೋ ತಿಳಿಯಿತು. ಕಲಲನ ಬಳಿಗೆ ಹೋಗಿ ಬರುತ್ತೇನೆ ಎಂದು ಹೊರಟಳು. ಹಾಗೆ ನಾಲ್ಕು ಹೆಜ್ಜೆ ಸರಿಯುವಾಗ ಶ್ಯಾಮಣ್ಣನು ಬಂದನು. ಸತ್ಯಳನ್ನು ಆತ ನೋಡಿ ನಕ್ಕನು. "ಏನಮ್ಮ, ಬರುವುದನ್ನು ತಿಳಿಸಿ ಕಾಗದ ಹಾಕಬಾರದಿತ್ತೇ? ನಾನಾದರೂ ಬರುತ್ತಿದ್ದೆನಲ್ಲ ಬಸ್ಸಿನ ಬಳಿಗೆ" ಆ ಬಳಿಕ 'ಕಲ್ಯಾಣಿ' ಎಂದು ಕರೆದನು. ಕಲ್ಯಾಣಿ ಮನೆಯೊಳಗಿಂದ ಹೊರಕ್ಕೆ ಬಂದಳು.

"ಯಾರೆಂದು ಕೇಳಿದೆಯಾ ಬಂದದ್ದು? ನಮಸ್ಕಾರ ಮಾಡಿದೆಯಾ ಅವರಿಗೆ?"

"ಯಾರೋ, ನಾಳಿನ ರೈಲಿಗೆ ಹೋಗುವವರು ಎಂದರು. ನಮಸ್ಕಾರವನ್ನೇನೂ ಮಾಡಲಿಲ್ಲ. ನೀರು ಕೇಳಿದರು; ಕೊಟ್ಟೆ."

ಒಂದು ಕ್ಷಣ ಆತನೂ ಬೆರಗಾದ. ಇವರೊಳಗೆ ಏನು ಸಂಧಾನ ನಡೆದಿರಬಹುದು ಎಂದು ತಿಳಿಯದಾದ. ಚಂದ್ರ ಅಷ್ಟರಲ್ಲಿ ಈ ಸಮಸ್ಯೆಗೆ ಕೊನೆಯನ್ನು ತಂದನು. ಶ್ಯಾಮಣ್ಣ "ಯಾರದು?" ಎಂದು ಕೇಳಿದ. ಅವನನ್ನು ಎತ್ತಿಕೊಂಡು ಆತ, "ಕಲ್ಯಾಣಿ, ಅಯ್ಯೋ ಹೆಡ್ಡಿ. ರಾಧಣ್ಣನ ಹೆಂಡತಿ ಅಲ್ಲವೇ ಈ ಅಮ್ಮ? ನನ್ನನ್ನು ದೊಡ್ಡದು ಮಾಡಿದವರೇ ಅವರು; ಗೊತ್ತಾಗಲಿಲ್ಲವೇ?" ಎಂದು ಹೇಳಿ ಸತ್ಯಮ್ಮನ ಕಡೆಗೆ ತಿರುಗಿ, "ಅಕ್ಕಾ ಯಾರಿಗೂ ತಿಳಿಸದೆ ಒಂದು ಲಗ್ನವಾಗಿದ್ದೇವೆ. ಅಣ್ಣನದೇ ಒತ್ತಾಯ. ನಿಮ್ಮನ್ನು ಕರೆಯಿಸಬೇಕೆಂದು ಹಟಮಾಡಿದರೆ, ಅಣ್ಣ ಬೇಡವೆಂದ. ಆಕೆಯ ಮನೆಯವರಿಗೆ ಆತುರ. ಅಣ್ಣನೆಂದನು–'ಅವಳು ಯೋಚನೆಬಿಟ್ಟು ಊರಲ್ಲಿ ಇರಲಿ. ಮದುವೆಗೆಂದು ಬಂದರೆ, ತಿರುಗಿ ಊರಿಗೆ ಹೋಗಲಿಕ್ಕೆ ಆಗುತ್ತದೆಯೇ,? ಹಿಂದೆ ಅವಳು ಪಟ್ಟ ಶ್ರಮವೇ ಸಾಕು. ಒಂದಷ್ಟು ದಿವಸ ಎಲ್ಲ ಯೋಚನೆಗಳನ್ನು ಮರೆತು ಕುಳಿತಿರಲಿ ಎಂದನು. ನಾನು ಆಗಲಿ ಎಂದೆ"

ಕಲ್ಯಾಣಿಯು ಬಂದು ಸತ್ಯಳಿಗೆ ಅಭಿವಂದಿಸಿದಳು. ಈಗ ಸತ್ಯ ಅವಳ ಮುಖವನ್ನು ಕಂಡು ನಕ್ಕಳು. ತನ್ನ ಮಂಕು ಕಲ್ಪನೆಗಳಿಗಾಗಿ ನಾಚಿಕೆಯೂ ಆಯಿತು. ಬೆರಗಿನಿಂದ ತುಂಬಿದ ಹಣೆಯ ಬೆವರನ್ನು

ಉಜ್ಜಿಕೊಂಡು "ಅಯ್ಯೋ ನನ್ನ ಹಣೆಯು ಬರಹವೇ, ಏನೇನೋ ತಿಳಿದುಕೊಂಡೆ ನನ್ನಷ್ಟಕ್ಕೆ" ಎಂದುಕೊಂಡಳು. ಶ್ಯಾಮ ನಗುತ್ತ "ಅಕ್ಕಾ, ನಾಳೆ ರೈಲಿಗೆ ಹೋಗಲಿಕ್ಕುಂಟೇ" ಎಂದು ಪ್ರಶ್ನೆ ಮಾಡಿದ. "ಅಬ್ಬಾ, ನೀವೂ ಠಕ್ಕು ಮಾಡಬಲ್ಲಿರಿ. ಅವಳು ಹಳ್ಳಿಯ ಹುಡುಗಿ ಎಂದು ನೀವು ಹಾಗೆ ಚೇಷ್ಟೆ ಮಾಡಿದ್ದೇ?" ಎಂದನು. "ಹೌದು, ಏನು ಮಾಡಬೇಕಿತ್ತು ನಾನು? ನೀನು ಸುದ್ದಿ ಹೇಳದೆಯೆ ಕುಳಿತೆ. ಅವರು ತಿಳಿಸಲಿಲ್ಲ. ನನಗೆ ಇದು ನನ್ನ ಮನೆ ಅಹುದೇ ಅಲ್ಲವೇ ಎಂಬ ಅನುಮಾನ ಬಂತು...... ಆದರೂ ಶ್ಯಾಮು, ಎಂಥ ರಜೆಯಿದ್ದರೂ ನಿನ್ನ ಮದುವೆಗೆ ಬಾರದೆ ಬಿಡುತ್ತಿರಲಿಲ್ಲ" ಎಂದಳು.

ಚಂದ್ರ ಅವನನ್ನು ಕುಳಿತಿರಲು ಬಿಡಲಿಲ್ಲ. ಶ್ಯಾಮ ಅವನನ್ನು ಕರೆದುಕೊಂಡು ಹೊರಟನು. ಚಂದಪ್ಪನ ಕೈ ಹಿಡಿದು ಸತ್ಯ ಹೊರಬಿದ್ದಳು. ಕಲ್ಯಾಣಿಯೂ ಅವಳನ್ನು ಸೇರಿದಳು. ಶ್ಯಾಮ "ಬನ್ನಿ, ನಿಮ್ಮ ಯಜಮಾನರ ಕಾರುಭಾರ ನೋಡಿ" ಎಂದು ಆ ಆರು ತಿಂಗಳ ದುಡಿತದ ಕಾಣಿಕೆಯನ್ನು ತೋರಿಸಿದನು. ಅಷ್ಟೊಂದು ದೊಡ್ಡ ಹಟ್ಟಿಯನ್ನು ನೋಡಿ, "ಶ್ಯಾಮಾ ಇಷ್ಟೊಂದು ದೊಡ್ಡ ಹಟ್ಟಿ ಯಾಕಂತೆ? ಅವರ ಕಣ್ಣೇ ದೊಡ್ಡದು" ಎಂದಳು. "ಸಾಯಂಕಾಲ ಗೊತ್ತಾಗುತ್ತದೆ" ಎಂದನು ಶ್ಯಾಮ. ತುಸು ಈಚೆಗೆ ಬರುತ್ತಲೇ ಗೊತ್ತಾಯಿತು. ಆರೇಳು ಎಮ್ಮೆಯ ಕರುಗಳನ್ನು ಅಲ್ಲಿ ಕಟ್ಟಿದ್ದರು.

"ಏನು, ಎಮ್ಮೆ ಪೈರನ್ನೇ ಕಟ್ಟಿದ್ದಾರೆಯೇ?"

ಒಟ್ಟು ಹತ್ತು ಎಮ್ಮೆಗಳಿವೆ. ಎಲ್ಲದಕ್ಕಿಂತಲೂ ಇದೇ ಸರಿಯಾದ ಕೆಲಸ ಎಂದು ನಿರ್ಧಾರ ಮಾಡಿದ್ದೇವೆ. ದಿನಕ್ಕೆ ಹತ್ತು, ಹದಿನೈದು ರೂಪಾಯಿಗಳ ಹಾಲು ಮಾರಾಟಕ್ಕೆ ಸಿಗುತ್ತದೆ. ನೀರು ಬೆರಸದ ಹಾಲನ್ನು ಮಂಗಳೂರಿನವರು ಕಂಡದ್ದು ಇದೇ ಮೊದಲು. ಆಳು, ಮೇವು, ಎರಡೂ ಸಮನಾಗಿದ್ದರೆ, ಇನ್ನೂ ಇಪ್ಪತ್ತು ಎಮ್ಮೆಗಳನ್ನು ಕಟ್ಟಬಹುದು.

"ಈ ಹತ್ತು ಎಮ್ಮೆಯ ಸೆಗಣಿಯನ್ನು ಇವಳಿಂದಲೇ ತೆಗೆಯಿಸುತ್ತಿದ್ದೀಯಾ? ನೆಲವನ್ನು ಕೆರೆದು, ಕೆರೆದು ಕೈ ಸೋತಿರಬಹುದು." "ಅದಕ್ಕೇನೆ ನಿಮ್ಮನ್ನು ಬೇಗನೆ ಕರೆಯಿಸಬಾರದೆಂದು ಅಣ್ಣ ಹೇಳಿದ್ದು. ಎಮ್ಮೆ ಚಾಕರಿ ಮಾಡಿ ನೀವು ಸೋತಿದ್ದೀರಿ ಎಂಬುದು ಅವರಿಗೆ ಗೊತ್ತು.

ಇನ್ನು ಕಲ್ಯಾಣಿಗೆ ಆ ಕೆಲಸ ಬಿಟ್ಟಾರೆಯೇ? ಹಟ್ಟಿಯ ಕೆಲಸಕ್ಕೆ ಬೇರೆ ಹೆಣ್ಣಾಳು ಇದೆ. "ಬನ್ನಿ, ಬೈಲಿಗೆ ಹೋಗುವ" ಎಂದು ಮುಂದಕ್ಕೆ ತೋರಿಸುತ್ತ ನಡೆದನು. ಮುಂದೆ, ಹಳ್ಳದ ಬಳಿಯ ಗದ್ದೆಯಲ್ಲಿ, ಹೊಸತಾಗಿ ಹುಲ್ಲು ನಟ್ಟುದನ್ನು ತೋರಿಸಿದನು.

"ಏನು, ಹುಲ್ಲಿನ ಸಾಗುವಳಿ ಮಾಡುತ್ತಾರೆಯೇ? ಗದ್ದೆಗಳನ್ನು ಗೇಣಿಗೆ ಕೊಂಡರೇ?"

"ಇಲ್ಲಮ್ಮ, ನನಗೆ ಸಿಕ್ಕಿದ ಊರಿನ ಭೂಮಿಯನ್ನು ಮಾರಾಟ ಮಾಡಿ, ಇದನ್ನು ಖರೀದಿಗೆ ಕೊಂಡೆವು. ಸುಮಾರು ಐದು ಮುಡಿ ಬೈಲು ಗದ್ದೆ ಇದೆ. ಜಾನುವಾರುಗಳನ್ನು ಸಾಕುತಿದ್ದೇವಲ್ಲಾ! ಪರೀಕ್ಷೆಗಾಗಿ 'ಗಿನಿ' ಹುಲ್ಲನ್ನು ಬೆಳೆಯಿಸಿದ್ದೇವೆ. ನೋಡುವುದಕ್ಕೆ ಕಬ್ಬಿನ ಮೊಳಕೆಯಂತೆ ಕಾಣುತ್ತದೆಯಲ್ಲವೇ? ಈಗ ಒಂದು ಎಕ್ರೆಯಷ್ಟು ನಟ್ಟಿದೆ. ಪ್ರಯೋಜನ ಕಂಡರೆ ಮುಂದಿನ ವರ್ಷ, ಇನ್ನೂ ಸ್ವಲ್ಪ ಹೆಚ್ಚಾಗಿ ಬೆಳೆಯಿಸಬಹುದು."

ಹೊಲದಲ್ಲಿ ಬತ್ತದ ಹೊಸ ಹಸುರು ಎದ್ದು ನಿಂತಿತ್ತು. ಗದ್ದೆಯ ಅಂಚಿನಲ್ಲಿ ಸುಂದರವಾದ ಹಲವು ತೆಂಗಿನ ಗಿಡಗಳು ಫಲಧರಿಸಿ ನಿಂತಿದ್ದಾವೆ. ಎದುರಿನ ಹಳ್ಳ ತುಂಬಿ ಹರಿಯುತ್ತಿದೆ. ತಮ್ಮ ಈ ಹೊಸ ಆವರಣವನ್ನು ನೋಡಿ, ಸತ್ಯಳಿಗೆ ತುಂಬ ಆನಂದವಾಯಿತು. ನೋಟದಿಂದ ತೃಪ್ತಳಾಗಿ ಹಿಂದಿರುಗುತ್ತ, "ಶ್ಯಾಮಾ, ಇನ್ನು ಬೇರೆಯವರನ್ನು ಬೇಡದೆ ಬದುಕುವಂತಾದರೆ ಸಾಕು" ಎಂದಳು.

"ಅದನ್ನು ಹೇಗೆ ಹೇಳಲಿ?"

"ಇಷ್ಟೊಂದು ಎಮ್ಮೆಗಳಿದ್ದರೆ ನಮ್ಮ ಜೀವನ ಹೋಗಲಾರದೆ? ಅಲ್ಲದೆ ಅವರಿಗೆ ಇನ್ನೂ ಶಾಲೆಯ ಯೋಚನೆ ಹೋಗಿಲ್ಲ. ಅದರ ಕಟ್ಟಡವೆಲ್ಲಿದೆ? ದೊಡ್ಡ ಶಾಲೆಯನ್ನೇ ಮಾಡಬೇಕೆಂದಿದ್ದಾರಂತೆ. ಮಕ್ಕಳಿಗೆ, ನೇಯುವ ಕೆಲಸ, ಕಬ್ಬಿಣದಕೆಲಸ, ಆಟದಸಾಮಾನು ತಯಾರಿ, ಇಂಥ ಉದ್ಯೋಗಗಳನ್ನು ಕಲಿಸಿ, ವರ್ಷಕ್ಕೆ ಮೂವತ್ತು ಹುಡುಗರನ್ನಾದರೂ ತರಬೇತು ಮಾಡಬೇಕು" ಎಂದು ಬರೆದಿದ್ದಾರೆ. ಹೀಗಿರುವಾಗ ಪರರನ್ನು ಬೇಡದೆ ನಿರ್ವಾಹವಿದೆಯೇ? ಗೋಶಾಲೆಯಿಂದ, ಮನೆಯ ಮಟ್ಟಿಗೆ ಹೇಗಾದರೂ ಸ್ವತಂತ್ರವಾಗಿರಬಹುದು."

ಶ್ಯಾಮನು ಅವರನ್ನು ಕರೆದುಕೊಂಡು, ಶಾಲೆಯ ಕಟ್ಟಡಕ್ಕೂ ಕಲಲನ ಗುಡಿಸಲಿಗೂ ಹೋಗಿ, ತೋರಿಸಿಕೊಂಡು ಬಂದನು. ಬರುತ್ತ, ಸತ್ಯಳ ಮನಸ್ಸಿನಲ್ಲಿ ತಂದೆ ಹೇಳಿದ ಒಂದು ಮಾತು ಮಾತ್ರ ಕೊರೆಯುತಿತ್ತು. "ಒಮ್ಮೆ ನಿನ್ನ ಗಂಡನನ್ನು ಇಲ್ಲಿಯವರೆಗೆ ಕಳುಹಿಸು. 'ಮಾವನ ಮನೆಗೆ ಅಳಿಯ ಬರಬಾರದೆಂದು ಪ್ರತಿಜ್ಞೆ ಮಾಡಿದ್ದಾನೆಯೇ?" ಎಂದು ಕೇಳು. ಅವನು ಬಂದರೆ ಒಂದು ಮಾತನ್ನು ಕೇಳಬೇಕೆಂದಿದೆ-ಪಿತ್ರಾರ್ಜಿತವಾಗಿ ಬಂದ ನಾಲ್ಕು ಪಾವಾಣೆಗಳನ್ನು ಇಂಥ ಹುಚ್ಚು ಕನಸುಗಳಿಗೆ ಖರ್ಚುಮಾಡಿ ಮುಗಿಸಿದರೆ, ನಾಳೆ ನಿನ್ನ ಸಂಸಾರಕ್ಕೆ ಏನು ಗತಿ ಎಂಬವನ್ನಾದರೂ ಯೋಚಿಸಿದ್ದೀಯಾ ಎಂದು ಕೇಳಬೇಕೆಂದಿದೆ' ಎಂದಿದ್ದರು ಅವರು. ತನ್ನ ಪತಿಯ ಉತ್ಸಾಹವನ್ನು ತಂದೆಯ ಉಪದೇಶದೊಂದಿಗೆ ಹೋಲಿಸಿ ನೋಡಿದಾಗ, ಅವಳ ಮನಸ್ಸು ಚಂಚಲವಾಗುವುದುಂಟು. ಪತಿಯ ದಾರಿಯಲ್ಲಿ ಅನುಮಾನ ಬರುತ್ತದೆ. ಅವಳಿಗೆ ಒಮ್ಮೊಮ್ಮೆ ತಂದೆಯ ಮಾತೇ ಸಮನಾದುದು ಎಂದು ತೋರುತ್ತದೆ. "ಈ ವರೆಗೆ ಮಾಡಿದ ಇವರ ಎಣಿಕೆಗಳು ಎಷ್ಟು ಫಲಗೊಂಡುವು? ಯಾರಿಗೂ ಬೇಡದ ಹೋರಾಟ ನಡೆಯಿಸಿ, ಏನು ಕೆಲಸ ಸಾಧಿಸಿದ ಹಾಗಾಯಿತು?" ಎಂದು ಅವಳೂ ಯೋಚಿಸುತ್ತಿದ್ದಾಳೆ. ಎಲ್ಲರೂ ಮನೆಗೆ ಬಂದರು. ಶ್ಯಾಮನು ಹೆಂಡತಿಯನ್ನು ಕರೆದು "ಕಲ್ಯಾಣಿ, ಮಕ್ಕಳಿಗೆ ಹಸಿವಾಗಿರಬೇಕು; ಏನಾದರೂ ಮಾಡಿಕೊಡುವ ಯೋಚನೆ ಇದೆಯೇ" ಎಂದು ಕೇಳಿದನು. "ಅಡುಗೆಯೇ ಆಗಿದೆ. ಅವರು ಕಾಲುತೊಳೆದು ಊಟಮಾಡಬಹುದಲ್ಲ" ಎಂದಳು. ಶ್ಯಾಮನಾಗ "ಎಲ್ಲವನ್ನೂ ಕಂಡವರು ನಮ್ಮ ಮನೆಯನ್ನೇ ನೋಡಲಿಲ್ಲವಲ್ಲ?" ಎಂದು ಮನೆಯೊಳಕ್ಕೆ ಕರೆದುಕೊಂಡು ಹೋಗಿ ತೋರಿಸಿದ್ದಾಯಿತು. ಕಲ್ಯಾಣಿ ಮಕ್ಕಳನ್ನು ಕರೆದೊಯ್ದು ಅವರಿಗೆ ಅನ್ನಬಡಿಸಿದಳು. "ನೀವು ಊಟಮಾಡಿ, ಬೆಳಿಗ್ಗೆ ಕುಂದಾಪುರದಿಂದ ಹೊರಟವರಲ್ಲವೇ?" ಎಂದಳು. "ನಾನೇ, ಅವರು ಬರಲಿ--ಗೋಶಾಲೆಯ ಯಜಮಾನರು, ಅವರನ್ನು ಕೇಳಿ ಊಟಮಾಡಬೇಕು" ಎಂದಳು.

"ಏನು ಕೇಳುವುದು ಅವರನ್ನು? ನಿಮ್ಮ ಹಸಿವಿಗೆ ಅವರನ್ನು ಕೇಳಬೇಕೇ?"

"ಅಲ್ಲ ಶ್ಯಾಮನ ಲಗ್ನಕ್ಕೆ ನನ್ನನ್ನು ಏಕೆ ಕರೆಯಿಸಲಿಲ್ಲವೆಂದು ಕೇಳಬೇಕು" ಎಂದಳು ನಗುತ್ತ. ಶ್ಯಾಮನ ಮುಖ ಸಣ್ಣಗಾಯಿತು. ತಾನು ಕರೆಯಿಸಬೇಕೆಂದು ಹಟಮಾಡಿದರೂ, ಅವರೇ ಬೇಡವೆಂದರು. ತಾನಾದರೂ ಅವರಿಗೊಂದು ಕಾರ್ಡು ಬರೆಯಬಹುದಿತ್ತು; ಎಂಥ ತಪ್ಪು ಮಾಡಿದೆನು—ಎಂಬ ನೋವು ಅವನ ಕಣ್ಣಲ್ಲಿ ಮೂಡಿದುದನ್ನು ಅವಳು ಕಂಡಳು. "ಇಲ್ಲ, ಶ್ಯಾಮಾ, ಈಗ ನಾನು ಸಿಟ್ಟಾದೆನೆಂದು ತಿಳಿದೆಯಾ? ಒಂದು ರೀತಿಯಲ್ಲಿ ಅವರು ಮಾಡಿದ್ದೇ ಸರಿ; ಅವರಿಲ್ಲದಾಗ ನಾವಿಬ್ಬರೂ ತುಂಬ ದಣಿದಿದ್ದೆವು—ಎಂಬ ಸಂಗತಿಯು ಅವರ ತಲೆಗೆ ನಾಟಿತ್ತು. ನನುಗೆ ಕಷ್ಟವಾಗಲಿಲ್ಲವೆಂದು ಎಷ್ಟು ಹೇಳಿದರೂ,ಅವರು ನಂಬಲಿಲ್ಲ. ಅದಕ್ಕೇನೆ ಅವರು ಒತ್ತಾಯದಿಂದ ನನ್ನನ್ನು ತವರು ಮನೆಗೆ ಕಳುಹಿಸಿದರು. "ನಿನಗೆ ವಿಶ್ರಾಂತಿಬೇಕು; ನೀನು ತುಂಬ ಸೊರಗಿದ್ದೀಯಾ" ಎಂದು ತಂದೆಯ ಮನೆಗೆ, ಪುಷ್ಟಿಗೊಳ್ಳುವುದಕ್ಕೆ ಕಳುಹಿಸಿಕೊಟ್ಟರು. ನಮ್ಮೂರಲ್ಲಿ—ಕರಾವಳಿಯವರು, ಮಳೆಗಾಲಕ್ಕೆ ಮೂಡಲ ಪ್ರಾಂತ್ಯಕ್ಕೆ ಗಾಡಿ ಎತ್ತುಗಳನ್ನು ಪುಷ್ಟಿಯಾಗಲು ಕಳುಹಿಸುವ ಹಾಗೆ!"

ಶ್ಯಾಮು ನಕ್ಕನು. "ಆದರೆ, ಅಮ್ಮಾ ನೀವುಮಾತ್ರ ಪುಷ್ಟಿಯಾಗಿ ಬಂದಿಲ್ಲ. ಇದ್ದ ಹಾಗೆಯೇ ಇದ್ದೀರಿ; ಹೆಚ್ಚೂ ಇಲ್ಲ, ಕಡಮೆಯೂ ಇಲ್ಲ."

"ಹೌದು ಶ್ಯಾಮಾ, ಅಪ್ಪನ ಮನೆಗೆ ಹೋಗಿ ಸೇರಿದ ಮಾತ್ರಕ್ಕೆ ಇಲ್ಲಿನ ಯೋಚನೆಗಳು ತಪ್ಪುತ್ತವೆಯೇ? ತಿಂಗಳಕಾಲ ಸಂತೋಷವಾಗಿದ್ದೆ. ಎಷ್ಟೆಂದರೂ ತವರು ಮನೆಯಲ್ಲವೇ? ಅನಂತರ ಇಲ್ಲಿನ ಯೋಚನೆ ಶುರುವಾಯಿತು. ಹಾಗೆಂದು ತಿರುಗಿ ಒಂದು ತಿಂಗಳದಿನ ತಂಗಿಯ ಮನೆಗೆ ಹೋಗಿ ಕುಳಿತೆ. ಇಲ್ಲಿ ಇಷ್ಟೆಲ್ಲ ಕೆಲಸ ಇರುತ್ತ, ನಾನು ಅಲ್ಲಿ ತಣ್ಣಗೆ ಕುಳಿತಿರುವುದೇ? ಇವರು ಬರುವುದಕ್ಕೆ ಕಾಗದ ಹಾಕುವುದೇ ಇಲ್ಲ. ನಾನು ಹೋಗುತ್ತೇನೆ ಎಂದು ಹೇಳಿದರೆ, ಅಪ್ಪ, ಅಮ್ಮ ಇಬ್ಬರೂ "ಅವನೇನೂ ಬರೆದಿಲ್ಲ. ನಿನಗೇನು ಅವಸರ? ಬರೆದು, ಬಂದು ಕರೆದುಕೊಂಡು ಹೋಗಲಿ" ಎಂದರು. ಕೊನೆಗೂ, ನಾನೇ ಅವರಿಂದ 'ಬಾ' ಎಂದು ಕಾಗದ ಬರೆಯಿಸಿಕೊಳ್ಳಬೇಕಾಯಿತು. ಇವರ ತಮ್ಮನ ಮನೆಯಲ್ಲಿ ಹತ್ತು ದಿವಸ ಇದ್ದೆ. ಇಲ್ಲಿ ಕೈತುಂಬ ಕೆಲಸ ಇರುವಾಗ, ದಿವಸ ಹೋದುದು ಗೊತ್ತಾಗುತ್ತಿರಲಿಲ್ಲ. ಅಲ್ಲಿ ಏನು ಕೆಲಸವೇ? ಬರಿಯ

ಮಾತಿನಲ್ಲಿ ಸಮಯ ಹೋಗಬೇಕು. ಏನು ಮಾತಾಡಬಹುದು! ಎಷ್ಟು ಮಾತನಾಡಬಹುದು? ಆದರೆ ಮಕ್ಕಳಿಬ್ಬರು ಮಾತ್ರ ಊರಲ್ಲಿ ತುಂಬ ಸಂತೋಷಪಟ್ಟುವು. ಚಂದ್ರನಂತೂ ಸೊಕ್ಕಿ ಬಿಟ್ಟಿದ್ದಾನೆ. ಅಜ್ಜನ ಹೆಗಲನ್ನು ಬಿಟ್ಟು ಇಳಿಯಲೇ ಇಲ್ಲ ಕಳ್ಳ. ಅದೇ ನೋಡಿದೆಯಲ್ಲಾ — ಬಂದವನೇ ನಿನ್ನ ಸೊಂಟವನ್ನು ಏರಿ ಕುಳಿತುಕೊಂಡುದು."

"ಇನ್ನು ಚಂದಪ್ಪ?"

"ಅವನೂ ಹಾಗೆಯೇ. ನಾನು, ಮನೆಯಲ್ಲಿ ಮಾತ್ರ ಅವನು ಯಾವ ಜಾತಿಯವನೆಂದು ಹೇಳಲಿಲ್ಲ. ಹೇಳಿದ್ದರೆ ಅವನಿಗೊಂದು ಪಂಕ್ತಿಯೇ ಬೇರೆ ಮಾಡುತ್ತಿದ್ದರು. 'ಯಾರು ಇದು? ಆ ಶಿರ್ಶಿ ಬ್ರಾಹ್ಮಣರು ಬಿಟ್ಟುಹೋದ ಹುಡುಗನೇ'? ಎಂದು ಕೇಳಿದರು. "ಹೂಂ" ಎಂದೆ. 'ಉಳಿದವರೆಲ್ಲ ಹೊರಟುಹೋದರೇ' ಎಂದು ಕೇಳಿದರು. "ಹೂಂ" ಎಂದೆ. ಕೊನೆಗೆ "ಯಾರು ಯಾರ ಮಕ್ಕಳನ್ನು ಅವನಿಗೆ ಸಾಕಲು ಬರುತ್ತದೆ; ತನ್ನ ಕೆಲಸ ಮಾತ್ರ ನೋಡಿಕೊಳ್ಳಲಿಕ್ಕೆ ಆಗುವುದಿಲ್ಲ" ಎಂದರು. ಅಂಥ ಮಾತುಗಳನ್ನೆಲ್ಲ ಕೇಳಿದರೆ ಬೇಸರವಾಗುತ್ತದೆ. ಕೇಳಿ, ಕೇಳಿ ಅಲ್ಲಿ ಕುಳಿತಿರುವುದು ಕಷ್ಟ; ತಂದೆಯ ಮನೆಯಾದರೆ ಏನು?

ಕತ್ತಲಾಗುತ್ತ ಬಂತು. ಆಳು, ಕರೆದ ಹಾಲನ್ನು ಹೊತ್ತುಕೊಂಡು ಮನೆಗೆಬಂದನು. ಧನಿಯ ಸವಾರಿಯೂ ಬಂದಿತು. ಅವನ ಕಾಲ ಸಪ್ಪಳ ಕೇಳಿಯೇ "ಬಂದರೆಂದು ಕಾಣುತ್ತದೆ" ಎಂದಳು ಸತ್ಯ. 'ನಿಮಗೆ ಕಾಲು ಹೆಜ್ಜೆ ಕೇಳಿಯೇ ಗೊತ್ತು ಅಲ್ಲವೇ' ಎಂದನು ಶ್ಯಾಮ. ಆತ ಅಲ್ಲಿಂದಲೇ "ಅಣ್ಣಾ, ಯಾರೋ ನಂಟರು ಬಂದಿದ್ದಾರೆ ಮನೆಗೆ" ಎಂದನು. 'ಯಾರು ಶ್ಯಾಮಣ್ಣ'? ಎಂಬ ಕೂಗು ಬಂದಿತು. 'ಯಾರೋ, ಮಂಜೇಶ್ವರಕ್ಕೆ ಹೋಗುವವರಂತೆ' ಎಂದನು ಆತ.

ಒಳಕ್ಕೆ ಬರುತ್ತಲೇ ಚಂದ್ರನ ಮುಖ ಕಾಣಿಸಿತು. "ಹೋ, ಇವರು ಸುದ್ದಿ ಇಲ್ಲದೆ ಬಂದುಬಿಟ್ಟರೋ! ನನಗೆ, ಅವರಿಗೆ ಭರತಿ ಒಂದು ವರ್ಷದ ರಜೆ ಕೊಡಬೇಕೆಂದಿತ್ತು." "ಒಂದು ವರ್ಷ ಅಲ್ಲಿದ್ದರೆ ಸಮನಾದ ರಜೆಯೇ ಆಗುತ್ತಿತ್ತು" ಎಂದು ನುಡಿಯುತ್ತ ಸತ್ಯ ಎದ್ದಳು. ಅಷ್ಟರಲ್ಲಿ ಮಕ್ಕಳಿಬ್ಬರೂ ಎದ್ದು, ಕೈ ತೊಳೆದು ಓಡಿ ಬಂದು, ಅವನನ್ನು ಮುತ್ತಿದರು. ಚಂದ್ರ ಕಪಿಯಂತೆ ಅವನ ಮೈಯನ್ನೇರಿದ. ರಾಧಾಕೃಷ್ಣ

ಅವನನ್ನು ಎತ್ತಿಕೊಂಡು ಸತ್ಯಳ ಬಳಿಗೆ ಬಂದು ಕುಳಿತುಕೊಂಡ.

"ಅಣ್ಣಾ ಕಾಲುತೊಳೆ, ಊಟಮಾಡುವ. ಅವರು ಊಟಮಾಡ ಲಿಲ್ಲ. ಹಸಿದು ಇದ್ದಾರು. ನಿಮ್ಮನ್ನು ಜೋರುಮಾಡಿದ ಮೇಲೆ ಅವರ ಊಟವಂತೆ" ಎಂದನು ಶ್ಯಾಮು?

"ಏನು ಸತ್ಯ, ಅಷ್ಟು ಸಿಟ್ಟು? ಹಾಗಾದರೆ ಈಗ ಭಾರೀ ಬಿರುಸಿನಿಂದ ಬಂದದ್ದೋ? ಆ ಲೆಕ್ಕದಲ್ಲಿ—ನಾಳೆ ಮಂಜೇಶ್ವರಕ್ಕೆ ಹೋಗುತ್ತಾರೆ, ಎಂದದ್ದೋ ಶ್ಯಾಮು."

"ಹೌದು ಹೌದು, ನಿಮ್ಮನ್ನು ಬಿಟ್ಟು ಮಂಜೇಶ್ವರಕ್ಕಲ್ಲ ರಾಮೇಶ್ವರಕ್ಕೆ ಹೋದರೂ ಪಾಪ ಬರಲಾರದು. ನನ್ನನ್ನು ಕರೆಯಿಸದೆ ಶ್ಯಾಮುನ ಲಗ್ನ ಮಾಡಿಸಿದಿರಲ್ಲವೆ! ಒಳ್ಳೆಯ ಜನ ನೀವು" ಎಂದು ಹೇಳಿದಳು. ಮರೆತು ಹೋದ ನೋವು ಇನ್ನೊಮ್ಮೆ ಮೂಡಿಬಂದಿತು. ಆಗ ರಾಧಾಕೃಷ್ಣ ಅನಿವಾರ್ಯವಾಗಿ ಅವಳಲ್ಲಿ ಕ್ಷಮೆ ಕೇಳಬೇಕಾಯಿತು.

ಎಲ್ಲರೂ ಊಟಕ್ಕೆ ಕುಳಿತಾಗ "ನಮ್ಮ ನಾಗೇಸ ಹಳ್ಳಿಯವರ ಕಾಗದ ಬಂದಿದೆಯೋ? ನನಗೆ ದಿನಕ್ಕೆ ಎರಡು ಬಾರಿ, ಆ ಮಕ್ಕಳ ನೆನಪಾಗುತ್ತಿತ್ತು. ನೆನೆದಾಗಲೆಲ್ಲ ಅವರ ರೂಪ ಕಣ್ಣ ಮುಂದೆ ಕಟ್ಟುತ್ತಿತ್ತು. ಏನಾಯಿತೋ ಅವರಿಗೆ, ಏನಾಯಿತೋ ಮಹಾದೇವನ ಚಿಕ್ಕಪ್ಪನಿಗೆ; ನಮ್ಮಲ್ಲಿಗೆ ಬಂದಾಗ ಅವರ ಮುಖ ನೋಡುವಂತಿರಲಿಲ್ಲ" ಎಂದಳು ಸತ್ಯ.

"ಇಲ್ಲ, ಆ ಮೇಲೆ ಏನೂ ಕಾಗದ ಬಂದಿರಲಿಲ್ಲ. ಹಳ್ಳಿಯ ಜನ; ಟಪ್ಪಾಲು ಆಫೀಸು ಇರುವುದು ಎಂಟು ಮೈಲು ದೂರದಲ್ಲಿ. ನಾಳೆಗೆ ನಾಳೆಗೆ—ಎಂದು ಮರತೇ ಬಿಟ್ಟಿರಬೇಕು. ಡಾ। ನಾಡಕರ್ಣಿಯವರಿಗೆ ಕಾಗದ ಬರೆದಿದ್ದೇನೆ. ಅವರು ಎಲ್ಲಿದ್ದರೂ, ಅವರ ವಿಚಾರ ತಿಳಿದು ಬರೆಯುವ ಹಾಗೆ ಹೇಳಿದ್ದೇನೆ" ಎಂದನು. ಮುಂದೆ ಅವರ ಮಾತುಗಳು ನವೀನ ಗೋಶಾಲೆಯ ಕಡೆಗೆ ಹರಿಯಿತು.

ಆಗ ಸತ್ಯ, "ಹೌದು, ನಿಮ್ಮ ಯೋಚನೆಗಳೆಲ್ಲವೂ ಸರಿಯೇ. ಆದರೆ ಅದಕ್ಕೆ ಬೇಕಾಗುವ ಹಣ ಮಾತ್ರ ಇರುವುದು ಇನ್ನೊಬ್ಬರ ಕಿಸೆಯಲ್ಲಿ. ಇಷ್ಟೆಲ್ಲ ಮಾಡಿದರೂ ಮಕ್ಕಳು ಶಾಲೆಗೆ ಬಾರದೆ ಹೋದರೆ ಏನು ಮಾಡುತ್ತೀರಿ? ಕಿರಿಪದವಿನಲ್ಲಿ ಆದಂತೆಯೇ ಇಲ್ಲಿಯೂ ಆಗು

ತ್ತಿದೆ. ತಿನ್ನಲಿಕ್ಕಿದ್ದಾಗ ಹಲ್ಲಿಲ್ಲ; ಹಲ್ಲಿದ್ದಾಗ ತಿನ್ನಲಿಕ್ಕಿಲ್ಲ" ಎಂದಳು.

ಈ ಬಾರಿ ಹಾಗಾಗಲಾರದು. ನಾಲ್ಕಾರು ಒಳ್ಳೆಯ ಉಪಾಧ್ಯಾಯರನ್ನು ವಿಚಾರಿಸಿ ಇಟ್ಟಿದ್ದೇನೆ. ಈ ಚಂದಪ್ಪನ ಅಪ್ಪನಿಗೂ ಒಂದು ಕಾಗದ ಹಾಕಿಸಿದ್ದೇನೆ. ಅವನು ಗುಡಿಗಾರನಲ್ಲವೆ! ಮರಗೆಲಸವೂ ಬರುತ್ತದೆ. ಅವನು ಬಂದರೆ ಆಟದ ಸಾಮಾನುಗಳನ್ನು ಮಾಡುವ ಏರ್ಪಾಡು ಮಾಡಬೇಕು. ಅಲ್ಲದೆ ಅವನೂ ಮಗನನ್ನು ಬಿಟ್ಟು ಮರುಳನಂತೆ ತಿರುಗಬಾರದಲ್ಲ. ಚಂದಪ್ಪನನ್ನು ನೇಯಿಗೆ, ಬಣ್ಣಗಾರಿಕೆ ಕಲಿಯಲು ಕಳುಹಿಸುತ್ತೇನೆ. ಅವನಿಗೆ ಇಂಗ್ಲಿಷು ಬೇಡವಷ್ಟೆ. ಅದರಂತೆ ಒಬ್ಬಿಬ್ಬರು ಕಸಬುದಾರನನ್ನು ಕರೆಯಿಸಿಕೊಳ್ಳಲು ಪತ್ರವ್ಯವಹಾರ ಮಾಡುತ್ತಿದ್ದೇನೆ. ಈ ಸಾರಿ ಏನಾದರೊಂದು ಆದೀತು."

"ಹೋ—ಹಣ ಸಾವಿರಗಟ್ಟಲೆಯಿಂದ ಸುರಿದರೆ, ಏನಾದರೂ ಆದೀತು. ಶ್ಯಾಮನ ಹಾಗೆ ಬಿಟ್ಟಿ ದುಡಿಯುವವರು ಮಾತ್ರ ಯಾರೂ ಸಿಗಲಿಕ್ಕಿಲ್ಲ."

"ಬಿಟ್ಟಿ ಯಾರನ್ನೂ ದುಡಿಯಿಸಬಾರದೆಂದು ನನ್ನ ಮನಸ್ಸು. ನಾವು ಮನೆಯ ಖರ್ಚಿನ ಯೋಚನೆಮಾಡಬಾರದೆಂದು, ಈ ಎಮ್ಮೆಗಳ ಸಂಸಾರವನ್ನು ದೊಡ್ಡದು ಮಾಡಿದ್ದು. ಹಣವಿದ್ದರೆ ಇದನ್ನು ಇನ್ನೂ ದೊಡ್ಡದು ಮಾಡಬಹುದು. ಜಾನುವಾರುಗಳಿಗೆ ಬೇಕಾಗುವ ಬೆಳೆಗಳನ್ನು ನಾವೇ ಬೆಳೆಯಬೇಕು. ಅವಕ್ಕೆ ಸದಾ ಹಸಿ ಹುಲ್ಲು ಸಿಗಬೇಕು. ಎಲ್ಲ ಗದ್ದೆಗಳಲ್ಲೂ ಅದನ್ನೇ ಬೆಳೆಯಬಹುದು. ಇಲ್ಲಿನ ಬಾವಿ ನೋಡಿದ್ದೀಯಾ? ನೀರು ಎಷ್ಟು ಮೇಲಕ್ಕಿದೆ ಗೊತ್ತೇ? ಆ ನೀರಿನ ಆಶ್ರಯದಿಂದ ಎಷ್ಟೋ ತರಕಾರಿಯನ್ನು ಬೆಳೆಯಬಹುದು. ಇಲ್ಲಿರುವ ನಾವಾಗಲೀ, ಇಲ್ಲಿಂದ ಕಲಿತು ಹೋಗುವ ಮಕ್ಕಳಾಗಲೀ, ಸ್ವಂತ ಜೀವನಕ್ಕೆ ಇನ್ನೊಬ್ಬನ ಮುಖವನ್ನು ನೋಡಬಾರದು. ಹಾಗಿರುವಾಗ, ಯಾರ ಬಿಟ್ಟಿಯೂ ಬೇಕಿಲ್ಲ. ಅಷ್ಟು ಮಾಡಬೇಕಾದರೆ ಹಣ, ಸಲಕರಣೆ, ಜನ ಎಲ್ಲವೂ ಹೆಚ್ಚಾಗಬೇಕು, ನಿಜ. ಆದರೆ ಈ ಬಾರಿ ಹಿಂದಿನಷ್ಟು ಅಧೈರ್ಯ ಕಾಣುತ್ತಿಲ್ಲ. ಕೆಲವರನ್ನು ಕಂಡು ಬಂದಿದ್ದೇನೆ–ನೋಡುವ, ಸಹಾಯ ಮಾಡುವ, ಎಂದಿದ್ದಾರೆ."

"ಹಿಂದಕ್ಕೂ ಹಾಗೆಯೇ ಅಂದವರಿಲ್ಲವೇ?"

"ಅದನ್ನೇ ನಂಬಿಲ್ಲ ನಾನು. ಆದರೆ ಪ್ರಾರಂಭಿಸುವ ಮೊದಲು, ಉತ್ತರ ಹಿಂದುಸ್ಥಾನಕ್ಕೆ ಹೋದ ಪ್ರಭುದೇವ ಹಿಂದಕ್ಕೆ ಬರಬೇಕು. ಅವನಿಂದ ಇನ್ನೂ ಸರಿಯಾದ ಕಾಗದ ಬಂದಿಲ್ಲ. ಆತನಿಗೆ ಇದನ್ನು ಭಾರಿಯ ಸಂಸ್ಥೆಯನ್ನಾಗಿ ಮಾಡುವ ಯೋಚನೆ ಇದೆ."

"ಯಾರು ಆ ದಿನ ರಾತ್ರಿ, ನಿದ್ದೆ ಬಿಟ್ಟು ಮಾತನಾಡಿದವರೇ?"

"ಹೂಂ ಅವರೇ; ಒಂದು ಪತ್ರಿಕೆಯ ಸಂಪಾದಕರೆಂದೆನಲ್ಲ, ಅವರಿಲ್ಲದಾಗ, ಅವರ ಪತ್ರಿಕೆಯನ್ನು ನಾನೇ ನೋಡಿಕೊಳ್ಳುತ್ತಿದ್ದೇನೆ. ನೋಡಿಕೊಳ್ಳುವುದು ಎಂದರೆ, ಹಣಕಾಸಿನ ಜವಾಬ್ದಾರಿಯನ್ನಲ್ಲ; ಬರೆಯುವ ಕೆಲಸವಷ್ಟೆ. ಅವರು ನಮ್ಮ ಕೆಲಸಕ್ಕಾಗಿ ಉತ್ತರ ಹಿಂದೂಸ್ಥಾನಕ್ಕೆ ಹೋಗಿದ್ದಾರೆ."

"ಅವರು ಹಣ ತುಂಬಿ ನಿಮ್ಮ ಕೆಲಸ ಆಗಬೇಕೇ? ನನಗೇಕೋ, ಯಾರ ಮಾತಿನಲ್ಲಿಯೂ ವಿಶ್ವಾಸವಿಲ್ಲ."

"ವಿಶ್ವಾಸ ಅತಿಯಾಗಿ ನನಗೂ ಇಲ್ಲ. ಆದರೆ ಹತ್ತು ಜನರು ಕೂಡಿ ಆಗಬೇಕಾದ ಕೆಲಸಕ್ಕೆ ನಾವು ಜನರಲ್ಲಿ ವಿಶ್ವಾಸವಿಡದೆ ಇರುವ ಹಾಗೂ ಇಲ್ಲ."

"ಇನ್ನು, ಹುಡುಗರು ಬೇಡವೇ?"

"ಶಾಲೆ ತೆರೆದರೆ ಹುಡುಗರಿಗೆ ಬರಗಾಲ ಬರಲಾರದು. ಇದು ಕಿರಿ ಪದವಲ್ಲ. ಪೇಟೆಯ ಬದಿ ಅಲ್ಲವೆ? ಅ, ಆ ದಿಂದಲೇ ಪಾಠ ತೊಡಗುವ ಮನಸ್ಸಿಲ್ಲ ನನಗೆ. ಕನ್ನಡ ಓದು ಬಂದಿರಬೇಕು. ಅಷ್ಟು ಬಂದಿರುವ ಹುಡುಗರಿಗೆ ಉದ್ಯೋಗ ಶಾಲೆ ಇದು." ಶ್ಯಾಮನು ಆಗ "ಅಣ್ಣಾ, ಎಲೆಯ ಮುಂದೆಯೇ ಕೈ ಒಣಗಿತು. ಕೈ ತೊಳೆದುಕೊಂಡು ಮಾತು ಮುಂದುವರಿಸಬಹುದಲ್ಲ?" ಎಂದನು. ಎಲ್ಲರೂ ಊಟದಿಂದ ಎದ್ದರು. ಮಕ್ಕಳು ಮಲಗಿ ನಿದ್ದೆಹೋದುವು. ಮಗ್ಗುಲ ಕೋಣೆಯಲ್ಲಿ, ಶ್ಯಾಮ ಕನ್ನಡ ಪತ್ರಿಕೆಯೊಂದನ್ನು ಹಿಡಿದು, ಕಲ್ಯಾಣಿಗೆ ವಿವರಿಸುವುದು ಕೇಳಿ ಬರುತಿತ್ತು. ಈಚೆ ಕೋಣೆಯಲ್ಲಿ ಸತ್ಯ, ಗೋಡೆಗೆ ಒರಗಿಕೊಂಡು, ರಾಧಾಕೃಷ್ಣನ ಮೈಗೆ ಒರಗಿ ಕುಳಿತು, 'ನಮ್ಮ ಅಪ್ಪನ ರೋಷ ಹೋಗಿಯೇ ಇಲ್ಲ. ಇಲ್ಲವಾದರೆ, ಅವರಿಗೆ ಏನಾದರೂ ಸಹಾಯಮಾಡಿ ಅನ್ನುತ್ತಿದ್ದೆ. ವಾಗ್ದೇವಿಯ ಗಂಡನಿಗೆ ಅವರು ಎರಡು ಸಾವಿರ ರೂಪಾಯಿ ಕೊಟ್ಟಿ

ದ್ದಾರಂತೆ. ಲಕ್ಷ್ಮಿಗೂ ಹುಡುಗನನ್ನು ನೋಡಿದ್ದಾರೆ. ಚಿನ್ನ, ನಗದು ಎಂದು ಎರಡು ಸಾವಿರ ರೂಪಾಯಿ ಕೊಡುತ್ತಾರೆ. ಅದನ್ನು ಕಂಡು ನನ್ನ ಪಾಲನ್ನು ಬೇಡುವ ಆಸೆಯಾಯಿತು" ಎಂದಳು.

"ಹೌದು, ಗಂಡಿನ ಕಡೆಯವರು ಬಲವಂತ ಮಾಡಿರಬಹುದು, ಕೊಟ್ಟಿದ್ದಾರು. . . ."

"ನೀವು ಮೂಕರೆಂದು ಕೊಡುವುದನ್ನು ಮರೆಯಬೇಕೇ?"

"ಹಾಗೆಲ್ಲ ತಿಳಿಯಬಾರದು. ನಾನೂ ಆಗ ಕೇಳುತ್ತಿದ್ದರೆ ಕೊಡುತ್ತಿದ್ದರು. ಇನ್ನು ಕೇಳುವುದು ತಪ್ಪು. ಒಮ್ಮೆ ಮದುವೆಯಾಗಿ ಬಂದ ಮೇಲೆ, ತವರಿನ ಕಡೆಗೆ ಗೋಣು ಬಗ್ಗಿಸಬಾರದು. ಇಲ್ಲಿ ನಮಗೇನು ಕಡಿಮೆಯಾಗಿದೆ? ಇಲ್ಲಿನ ಸಂಪಾದನೆ ನಮಗೆ ಸಾಕು. ಎರಡು ಬಿಡಾರ ಹೂಡಿದರೂ ನಮ್ಮ ಖರ್ಚಿಗೆ ಸಾಕು" ಎಂದನು. ಅಲ್ಲಿಂದ ಮುಂದೆ ಶ್ಯಾಮನ ಲಗ್ನದ ಕತೆಯನ್ನು ಹೇಳಿದ. ಶ್ಯಾಮನ ಹಣದಿಂದ ಭೂಮಿಯನ್ನು ತೆಗೆದುಕೊಂಡದ್ದನ್ನು ಹೇಳಿದ. ಹೀಗೆ ಸವಿ ಮಾತುಗಳಲ್ಲಿ ಆ ರಾತ್ರಿ ಸರಿಯಿತು.

ಮರುದಿನ ರಾಧಾಕೃಷ್ಣ ಪೇಟೆಗೆ ಹೋದಾಗ, ಉತ್ತರ ಹಿಂದುಸ್ಥಾನಕ್ಕೆ ಹೋಗಿದ್ದ ಪ್ರಭುದೇವನ ತಂತಿಯು ಬಂದಿತ್ತು. ಛಾಪಖಾನೆಯ ಸಾಣೆಕಲ್‌ರವರಿಗೆ "Arriving Friday, inform Radhakrishna" ಎಂದು ತಿಳಿಸಿದ್ದನು. ತಂತಿಯನ್ನು ಕಂಡ ಸಾಣೆಕಲ್ 'ಹೂಂ ಬದುಕಿದ್ದಾನೆ ಮಹರಾಯ, ಆಚೆ ಹೋದರೆ ಆಚೆಗೇ; ಈಚೆ ಏನಾಯಿತೆಂಬ ಗಮನವೇ ಇಲ್ಲ." ಎಂದರು. "ಆಗಲಿ ಬರುತ್ತಾರಲ್ಲ, ನಮ್ಮ ಭಾರ ಕಳೆಯಿತು. ಪತ್ರಿಕೆಗೆ ಏನು ಬರೆಯುವುದೆಂದು ತಲೆ ಕೆದರಿ, ಕೆದರಿ ಸಾಕಾಗುತ್ತಿತ್ತು" ಎಂದನು ರಾಧಾಕೃಷ್ಣ. ಅವನ ಮನಸ್ಸಿನಲ್ಲಿ, ಪ್ರಭು ಹೋದ ಕೆಲಸವೇನಾಗಿರಬಹುದು ಎಂದು ನಲಿಯುತ್ತಿದೆ. "ಇನ್ನೂ ಹುಟ್ಟಬೇಕಾದ ಒಂದು ಸಂಸ್ಥೆಗೆ ಸಹಾಯಮಾಡಲು, ಯಾರನ್ನೆಲ್ಲ ಕಂಡಿರಬಹುದೋ. ಉತ್ತರ ಹಿಂದುಸ್ಥಾನದವರು ಅದಕ್ಕೇನು ಮಾಡಿಯಾರು? ಆ ದೇಶವೆಲ್ಲಿ, ಇದೆಲ್ಲಿ? ಬರಿಗೈಯಿಂದ ಬಂದರೂ ಒಂದು ಆಶ್ಚರ್ಯವಿಲ್ಲ' ಎಂದು ಯೋಚಿಸುತ್ತಿದ್ದಾನೆ. ಅವನೂ ಇಷ್ಟು ದಿನ ಸುಮ್ಮನೆ ಕುಳಿತಿರಲಿಲ್ಲ. ಹಲವಾರು ಜನರನ್ನು ಭೇಟಿಯಾಗಿ, ಸ್ವಲ್ಪವಲ್ಲ ಸ್ವಲ್ಪ

ಸಹಾಯದ ಭರವಸೆಯನ್ನು ಅವರಿಂದ ಪಡೆದುಬಂದಿದ್ದಾನೆ.

ಪ್ರಭುದೇವ ಒಂದು ಕೆಲಸವನ್ನೇನೋ, ಒಳಿತಾಗಿ ಮಾಡಿದ್ದನು. ಅದೆಂದರೆ— ರಾಧಾಕೃಷ್ಣನ ಕುರಿತಾದ ಪ್ರಚಾರ. ಅದರಿಂದ ರಾಧಾಕೃಷ್ಣನಿಗೆ ಅತೃಪ್ತಿಯಾದರೂ, ಅವನ ಹೆಸರಿನಲ್ಲಿ ಕೆಲವರಿಗಾದರೂ, ಅಭಿಮಾನ ಹುಟ್ಟುವಂತಾಯಿತು. ಆವನು ಹೋಗಿ ಸಹಾಯಬೇಡಿದರೆ "ಇದೊಂದು ತಕಾರಿ ಮಾಲು" ಎಂದು ತಿಳಿಯುವ ಅವಕಾಶವಿಲ್ಲದಾಯಿತು. ಅವನ ಹೆಸರಿಗೆ ಈಗೊಂದು ಬೆಡಗು ಉಂಟಾಗಿದೆ ಆ ಊರಿನಲ್ಲಿ. ಅದರಿಂದಾಗಿ ಗೆಳೆಯರನ್ನು ಸಂಪಾದಿಸುವುದಾಗಲಿ, ಅವರೊಡನೆ ವಿಷಯಗಳನ್ನು ಚರ್ಚಿಸುವುದಾಗಲಿ ಕಷ್ಟವಾಗಲಿಲ್ಲ. ಉದ್ಯೋಗ ನಿವೃತ್ತರಾದ ಒಬ್ಬಿಬ್ಬರು ಮುದುಕರು "ನಿಮ್ಮದು ಬಹಳ ಒಳ್ಳೆಯ ಯೋಜನೆ— ಬನ್ನಿ, ನಿಮ್ಮನ್ನು ಡಾ। ನಂದರಲ್ಲಿಗೆ ಕರೆದುಕೊಂಡು ಹೋಗುತ್ತೇವೆ, ಮಾಜಿ ಡಿಸ್ಟ್ರಿಕ್ಟ್ ಕಲೆಕ್ಟರ್ ಪುರುಷೋತ್ತಮರಾಯರಲ್ಲಿಗೆ ಕರೆದುಕೊಂಡು ಹೋಗುತ್ತೇವೆ— ನಮ್ಮ ಸೇಟ್ ಲಾಲ್‌ಜೀ ಗಿರಿಧರರವರಿಗೆ ಇಂಥ ಕೆಲಸಗಳೆಂದರೆ ತುಂಬ ಪ್ರೀತಿ; ಡಾ। ನಂದರವರು ಅವರಿಗೆ ಒಂದು ಮಾತು ಹೇಳಿದರೆ, ಸೇಟ್‌ಜೀಯವರು ಒಂದು ಲಕ್ಷ ರೂಪಾಯಿಗಳನ್ನೇ ಸುರಿದಾರು. ಅವರಿಗೆ ಗೋಶಾಲೆಯೆಂದರೆ ಪ್ರಾಣ. ಕಸಾಯಿಗೆ ಹೋಗುವ ದನಗಳನ್ನೆಲ್ಲಕೊಂಡು, ಕಾಪಾಡಬೇಕೆಂಬ ಮನಸ್ಸು. ಸರಿಯಾದ ಜನ ಸಿಕ್ಕಿದರೆ ಅವರು ಏನೂ ಸಂಸ್ಥೆ ತೆರೆಯುವಂಥವರು, ಏನೂ ಮಾಡಿಯಾರು-ಎಂದರು. ಅವನ ಮಿತ್ರರಾದ, ರಿಟಾಯರ್ಡ್ ರಿಜಿಸ್ಟ್ರಾರ್ ರಾಮಕೃಷ್ಣಯ್ಯನವರು ತುಂಬ ಉತ್ಸಾಹಿಗಳು. ಅವರು ಸಹಕಾರಿ ಕ್ಷೇತ್ರದಲ್ಲಿ ತುಂಬ ದುಡಿದು, ಕೀರ್ತಿವಂತರಾಗಿ, ಮೊನ್ನೆ ತಾನೇ ಘನಸರಕಾರದಿಂದ ಯುಗಾದಿಯ ಬಿರುದುಪಟ್ಟಿಯಲ್ಲಿ ರಾವ್ ಬಹುದ್ದೂರ್ ಪದವಿಯನ್ನು ಗಳಿಸಿದ್ದಾರೆ. ತಾವು ಉದ್ಯೋಗದಲ್ಲಿದ್ದಾಗ ರಾವ್ ಸಾಹೇಬ್ ಆಗಿದ್ದರು. ತಮ್ಮ ನಿವೃತ್ತಕಾಲದ ಜೀವನವನ್ನು ಮಂಗಳೂರು ನಾಗರಿಕರ ಸಲುವಾಗಿ ಧಾರೆಯೆರೆಯಲು ಬದ್ಧಕಂಕಣರಾಗಿದ್ದಾರೆ. ಈಗಾಗಲೇ ಅವರು ನಾಲ್ಕು ಸಾರ್ವಜನಿಕ ಸಮಿತಿಗಳಲ್ಲಿ ಸದಸ್ಯರು. ಯಾವ ಒಂದು ಸಭೆಗೂ ಬಾರದಿರುವವರಲ್ಲ. ಹೋದಲ್ಲೆಲ್ಲ ತಮ್ಮ ಸಹಕಾರಿ ಅನುಭವವನ್ನು ಬಣ್ಣಿಸದೆ ಇರುತ್ತಿರಲಿಲ್ಲ.

ಮಾತನ್ನೇನೋ ತುಸು ಹೆಚ್ಚಾಗಿ ಆಡುತ್ತಾರೆ; ಇನ್ನೊಬ್ಬರ ಮಾತನ್ನೂ ಕೇಳುತ್ತಾರೆ. ತಮ್ಮ ಸಾವಿರಾರು ಯೋಚನೆಗಳನ್ನೂ ತಿಳಿಸುತ್ತಾರೆ. ನೀವು ವಾದಕ್ಕೆ ನಿಂತು "ಅದು ಹೇಗೆ ಸಾಧ್ಯ?" ಎಂದು, ಇರುವ ಎಡರುಗಳನ್ನು ತೋರಿಸಿದರೆ, ಒಪ್ಪಿಕೊಳ್ಳುತ್ತಾರೆ. ಕೂಡಲೇ ಇನ್ನೊಂದು ಯೋಚನೆ ಹೇಳುತ್ತಾರೆ. ಅವರಿಗೆ ಜನತೆಯನ್ನು ಉದ್ಧಾರಮಾಡಬೇಕೆಂಬ ಹಂಬಲ ಬಹಳ. ಜನತೆಯಲ್ಲಿಯೂ ತುಂಬ ವಿಶ್ವಾಸ ಅವರಿಗೆ. ತಮ್ಮಂಥ ಅನುಭವಿಗಳು ಮುಂದಾಗಿ ನಿಂತರೆ, ಎಷ್ಟೋ ಸಾರ್ವಜನಿಕ ಸಂಸ್ಥೆಗಳನ್ನು ನಡೆಯಿಸಬಹುದೆಂದು ತಿಳಿದಿದ್ದಾರೆ. ಮೊನ್ನೆ ದಿನ ಸಂಜೆ ಮನೆಗೆ ಹೊರಟಿದ್ದ ರಾಧಾಕೃಷ್ಣನನ್ನು ದಾರಿಯಲ್ಲೇ ತಡೆದು ಹಿಡಿದು, "ನಾನು ಈಗಾಗಲೇ ಡಾ। ನಂಧರಲ್ಲಿ ಪೀಠಿಕೆ ಹಾಕಿದ್ದೇನೆ. ಲಾಲಜೀ ಗಿರಿಧರವರಿಗೂ ತಿಳಿಸಿಬಿಟ್ಟಿದ್ದೇನೆ. ಅವರು, ನಾನು, ನೀವು ಇನ್ನು ಹಾಗೆಯೇ ಒಬ್ಬಿಬ್ಬರು ಅನುಕೂಲರಾದ ಜನರನ್ನು ಕೂಡಿಸಿಕೊಂಡು, ಒಂದು ಕಮಿಟಿ ಮಾಡಿದರೆ, ಹಣಕ್ಕೆ ಯಾವ ಯೋಚನೆಯನ್ನೂ ಮಾಡಬೇಕಾಗಿಲ್ಲ" ಎಂದು ಅವನಿಗೆ ಧೈರ್ಯಹೇಳಿದರು.

ಅವರೊಡನೆ ಕಾರ್ಯದ ವಿವರಗಳನ್ನು ಚರ್ಚಿಸುವುದಕ್ಕೆ ರಾಧಾಕೃಷ್ಣನಿಗೆ ಅನುಮಾನ. ಕೇವಲ ಪ್ರಭುದೇವನೊಬ್ಬನ ಬಡಾಯಿಯನ್ನು ನಂಬಿಯೇ ತಾನು ಮೋಸಹೋಗಬಾರದು ಎಂಬ ಶಂಕೆ ಬರುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ—ಪ್ರಭುದೇವನ ವಿಷಯದಲ್ಲಿ ಮಂಗಳೂರಿನ ಜನಕ್ಕೆ ಹೆಚ್ಚಿನ ಯಾವ ಆದರವೂ ಇಲ್ಲದಿರುವುದು. ಸಾಣೆಕಲ್ ನಂತಹ ಮಿತ್ರರೇ 'ಅದೊಂದು ಪಿರ್ಕಿ ಅಲ್ಲವೇ' ಎಂದು ಅನ್ನುವುದೂ ಉಂಟು. ಆದರೆ ತಾನು, ಅವನೊಡನೆ, ಒಂದು ಬಗೆಯ ಕರಾರನ್ನು ಮಾಡಿಕೊಂಡಿದ್ದೇನೆ. ಅವನಿಗೆ ತಿಳಿಸದೆ, ಅವನ ಒಪ್ಪಿಗೆ ಪಡೆಯದೆ, ಇತರರನ್ನು ಕೂಡಿ, ಯಾವ ವ್ಯವಸ್ಥೆಯನ್ನೂ ಮಾಡಬಾರದು ಎಂದು ತೋರುತ್ತಿದೆ. ಇಷ್ಟು ದಿನ ಇಲ್ಲದ ನೆಪ ಹೂಡಿ, ರಾವ್ ಬಹದ್ದೂರ್ ರಾಮಕೃಷ್ಣಯ್ಯನವರ ಆಗ್ರಹವನ್ನು ತಪ್ಪಿಸಿಕೊಂಡಿದ್ದ. ಅವರ ಹೇಳಿಕೆಯಂತೆ ಇನ್ನೂ ಯಾರನ್ನೂ ಕಂಡಿರಲಿಲ್ಲ. ಬಹುದಿನ ಹಾಗೆ ಮಾಡ ಬಂದೀತೇ? ಈಗ ಪ್ರಭುದೇವನ ತಂತಿ ಬಂದುದರಿಂದ ಸಂತೋಷವಾಯಿತು. ಅವನು ಬಂದರೆ, ಎಲ್ಲಾ ಸಂಗತಿಗಳು ತಿಳಿಯುತ್ತವೆ.

ಉಳಿದವರನ್ನು ಕಂಡು ಮಾತನಾಡುವುದು ಆ ಮೇಲೆಯೇ ಸರಿ—ಎಂದುಕೊಂಡ.

ಆ ವಿಷಯವನ್ನು ಮುಂದೆ ದೂಡುವುದರಲ್ಲಿ ರಾಮಕೃಷ್ಣಯ್ಯನವರಿಗೆ ಅಷ್ಟು ತಾಳ್ಮೆಯಿಲ್ಲ. ರಾಧಾಕೃಷ್ಣನ ಪರಿಚಯದಿಂದ ಉತ್ಸಾಹ ತಾಳಿದ ಅವರು, ಈಗಾಗಲೇ ಅವನ ಕನಸನ್ನು ತಮ್ಮ ಹಲವು ಗೆಳೆಯರ ಸೊತ್ತಾಗಿ ಮಾಡಿಬಿಟ್ಟಿದ್ದಾರೆ. ಲಾಲ್ ಜೀ ಗಿರಿಧರವರು 'ನೋಡುವ' ಎಂದಿದ್ದಾರೆ. ನಿವೃತ್ತ ಕಲೆಕ್ಟರ್ ಪುರುಷೋತ್ತಮರ ಯಾಕೆ? "ನಾವೇ ಏಕೆಮುತುವರ್ಜಿಯಿಂದ ಅಂತಹಸಂಸ್ಥೆಯೊಂದನ್ನುತೆರೆಯಬಾರದು" ಎನ್ನುತ್ತಿದ್ದಾರೆ. ಡಾ। ನಂದರವಮ "ರಾಧಾಕೃಷ್ಣ ನನ್ನ ಗೊತ್ತಿನವನೇ. ಅವನನ್ನು ಕರೆಯಿಸಿ ಮಾತನಾಡುತ್ತೇನೆ; ಅವನ ಯೋಚನೆಯನ್ನು ಮುಖತ:ಚರ್ಚಿಸಿ,ಅದು ಎಷ್ಟು ಭದ್ರವಾದುದು ಎಂದು ತಿಳಿದುಕೊಳ್ಳುತ್ತೇನೆ" ಎಂದುಬಿಟ್ಟಿದ್ದಾರೆ. ನಿವೃತ್ತ ಕಲೆಕ್ಟರವರನ್ನು ಬಿಟ್ಟರೆ, ರಾಧಾಕೃಷ್ಣನ ಆಗಮನವನ್ನು ಹಾರೈಸುತ್ತಿದ್ದಾರೆ. ಡಾ। ನಂದರು "ಅವನ ಮನೆ ತಿಳಿಸಿದರೆ ನಾನೇ ಹೋಗಿಬರುತ್ತೇನೆ. ಆತ ಹಿಂದೆ ಬಹುದೂರಕ್ಕೆ ಮನೆಮಾಡಿಕೊಂಡಿದ್ದ. ಆ ಮೇಲೆ ಉತ್ತರ ಕನ್ನಡಕ್ಕೆ ಹೋದನಂತೆ" ಅನ್ನುತ್ತಿದ್ದಾರೆ. ನಿವೃತ್ತ ಕಲೆಕ್ಟರವರು "ಮೊದಲು ಆತನಿಂದ ವಿವರವಾದ ಯೋಚನೆಗಳನ್ನು ತರಿಸಿಕೊಳ್ಳಿ. ಅನಂತರ ನಾವೇ ಅದನ್ನು ಮೀರಿಸುವಂತೆ ಒಂದು ಸಂಸ್ಥೆಯನ್ನು ತೆರೆದುಬಿಡುವ" ಎಂದಿದ್ದಾರೆ. ಅವರಿಗೆ ಕಚೇರಿಗಳನ್ನು ನಡೆಯಿಸಿ, ನಡೆಯಿಸಿ ಜಗತ್ತನ್ನೇ ತಾವು ಮುಷ್ಟಿಯಲ್ಲಿ ಹಿಡಿಯಬಹುದೆಂಬ ವಿಶ್ವಾಸವಿದೆ. ಅವರು ನಿವೃತ್ತರಾಗಿ ಬಂದು ಮೂರು ತಿಂಗಳಾದುವಷ್ಟೆ; ಇನ್ನೂ ಆಫೀಸರಿಕೆಯ ಕಾವು ಇಳಿದಿಲ್ಲ. ಅವರ ಕೋಮಿನವರಂತೂ, ಅವರನ್ನು ದೇವರೆಂದೇ ತಿಳಿದಿದ್ದಾರೆ. ಅವರ ಸ್ವಜಾತಿಯ ಬಾಂಧವರಲ್ಲಿ ಅವರ ಮಾತು ನಡೆಯುತ್ತದೆ.

ನಮ್ಮ ಪುರುಷೋತ್ತಮರು ತುಂಬ ವಿಚಿತ್ರವ್ಯಕ್ತಿ. ಬಾಯಿ ಎತ್ತಿದರೆ ಭಗವದ್ಗೀತೆಯ ಸುರಿಮಳೆ. ಕ್ಲಬ್ಬಿನಲ್ಲಿ ಇಸ್ಪೀಟು ಆಟವಾಡಿ ಸೋತರೆ, 'ಕರ್ಮಣ್ಯೇವಾಧಿಕಾರಸ್ತೇ' ಅನ್ನುತ್ತಾರೆ. ಶಾಲಾಕಾಲೇಜುಗಳಲ್ಲಿ ಉಪನ್ಯಾಸಕ್ಕೆ ಕರೆದರೆ, ಉಪನಿಷತ್ತು, ಗೀತೆಗಳಿಂದಲೇ ತಮ್ಮ ವಾಗ್ಬಾಣಗಳನ್ನಾಯುತ್ತಾರೆ. ಹೊರಗೆ ಮಾತ್ರವಲ್ಲ, ಅವರ ಧಾರ್ಮಿಕ

ಭಕ್ತಿ; ಮನೆಯಲ್ಲಿಯೂ ಹಾಗೆಯೇ. ಮನೆಯಲ್ಲಿ ತಮ್ಮ ಅ, ಆ, ಇ ಓದುತ್ತಿರುವ ಮಕ್ಕಳನ್ನು ಸಿನೇಮಾ ತಪ್ಪಿಸಿಯಾದರೂ, ಜತೆಯಲ್ಲಿ ಕುಳ್ಳಿರಿಸಿಕೊಂಡು ರಾಮಭಜನೆ ಮಾಡುತ್ತಾರೆ. ಮೊನ್ನೆ ಮೊನ್ನೆ ಅವರ ಪ್ರೀತಿಯ ಗುರುಗಳಾದ, ಶ್ರೀಕೃಷ್ಣ ಚೈತನ್ಯರವರ ವರ್ಧಂತಿಯನ್ನು ತಮ್ಮ ಮನೆಯಲ್ಲಿ ಜರುಗಿಸಿದರು. ಅವರ ಪೆಂಟ್‌ಲೆಂಡ್ ಪೇಟೆಯ ವಸತಿಗೃಹವು ಸಾಧುಸಂತರ ಬೀಡಾಗಿದೆ. ಬರುವ ವರ್ಷ ಕೃಷ್ಣ ಚೈತನ್ಯರ ಉತ್ಸವದಂತೆ, ಗೌರಾಂಗನ ಉತ್ಸವವನ್ನು ಮಾಡುವವರಿದ್ದಾರೆ. ಯಾವುದೋ ಬೆಟ್ಟದಲ್ಲಿ ಬಿಡಾರ ಮಾಡಿರುವ ಒಬ್ಬ ಸನ್ಯಾಸಿಯನ್ನು ಕರೆದುಕೊಂಡು ಒಂದು, ಪಾದಪೂಜೆಯನ್ನು ಮಾಡಬೇಕೆಂದು ನಿರ್ಧರಿಸಿದ್ದಾರೆ. ಇಂಥ ಧೈವಿಕ ಮನೋವೃತ್ತಿಯ ಪುರುಷೋತ್ತಮರಾಯರು ಸಮಾಜದಲ್ಲಿ ತುಂಬ ಗಣ್ಯ ವ್ಯಕ್ತಿಗಳೆನಿಸಿರುವುದರಲ್ಲಿ ಆಶ್ಚರ್ಯವಿಲ್ಲ.

ಅವರಿಗೆ ರಾಧಾಕೃಷ್ಣನನ್ನು ಕೂಡಿ ಕೆಲಸಮಾಡುವ ವಿಚಾರದಲ್ಲಿ ಒಂದೇ ಒಂದು ತೊಡಕು ಎಂದು ತಿಳಿದಿದ್ದಾರೆ. ಆತ ರಾಜದ್ರೋಹಿ; ಇನ್ನೂ ಖಾದಿ ಧರಿಸುತ್ತಾನೆ. ತಾನು ಕಲೆಕ್ಟರನಾಗಿದ್ದಾಗ, ಯಾವುದೋ ಒಂದು ನಗರದಲ್ಲಿ, ಮೆಜಿಸ್ಟ್ರೇಟನಾಗಿ ನಿಂತು "ಇಂಥ ಗಾಂಧಿ ನಾಯಿಗಳನ್ನು ಉಸಿರಿಲ್ಲದಂತೆ ಸಾಯಿಸಿಬಿಡಿ" ಎಂದು ಅಪ್ಪಣೆಕೊಟ್ಟು ಶಾಸನ ಮಾಡಿದವರು ಅವರು. ಅಂಥವರು ಪ್ರತ್ಯಕ್ಷವಾಗಿ ಇಂಥವನನ್ನು ಕರೆಯಿಸಿಕೊಂಡು, ಮಾತನಾಡಿಸಲು ಅನುಮಾನಿಸುವುದು ಸಹಜವೇ. ರಾಮಕೃಷ್ಣಯ್ಯನವರ ಒತ್ತಾಯಕ್ಕೋ ಏನೋ, "ಅವರನ್ನು ಕರೆದುಕೊಂಡು ಬನ್ನಿ; ಎರಡೇ ಮಾತಿನಿಂದ ಅದು ಜಳ್ಳೋ, ಗಟ್ಟಿಯೋ ಎಂದು ತಿಳಿಯುತ್ತೇನೆ" ಎಂದಿದ್ದಾರೆ.

ಅವರು "ಹಾಗೆ ನೀವು ಅನುಮಾನ ತಾಳಲೇಬೇಕಿಲ್ಲ. ಅದು ಒರೆಕಲ್ಲಿಗೆ ಬಿದ್ದು, ಮೇಲಕ್ಕೆ ಬಂದ ಅಪರಂಜಿ; ಕೆಲಸದ ಮಾತಲ್ಲದೆ, ಬೇರೆ ಒಂದನ್ನೂ ಆಡುವವರಲ್ಲ" ಎಂದಿದ್ದಾರೆ.

ಇಷ್ಟೊಂದು ಪೂರ್ವಭಾವಿ ಪ್ರಚಾರಕಾರ್ಯ ಆತನ ನವೀನ ವಿದ್ಯಾಲಯವನ್ನು ಕುರಿತು ನಡೆದಿತ್ತಾದರೂ, ಆತ ರಾಮಕೃಷ್ಣಯ್ಯನವರನ್ನಲ್ಲದೆ ಉಳಿದ ಯಾರನ್ನೂ ಕಂಡಿಲ್ಲ. ಅವರ ಮೂಲಕವಾಗಿ, ಉಳಿದವರನ್ನು ತಿಳಿದು ಕೊಂಡಿದ್ದಾನಷ್ಟೆ. 'ಇತರರಿಂದ ಇದಕ್ಕೆ ಸಹಾಯ

ದೊರಕೀತು — ಒಮ್ಮೆ ಪ್ರಭುದೇವನ ಮಾತು ನಿಷ್ಫಲವಾದರೆ' ಎಂದು ಕೊಂಡಿದ್ದನು. ಅದಕ್ಕಾಗಿ ಅವನ ಆಗಮನ ನಿರೀಕ್ಷೆ. "ಇನ್ನೇನು, ಬಂದೇ ಬಿಡುತ್ತಾನಲ್ಲ" ಎಂಬ ಸಮಾಧಾನ ಈಗ ಅವನಿಗಾಯಿತು.

ಆತ ಬರುವನೆಂದು ತಿಳಿಸಿದ್ದು ಶುಕ್ರವಾರಕ್ಕೆ. ಆದರೆ ಗುರುವಾರ ಸಂಜೆಯೇ ರಾಧಾಕೃಷ್ಣನ ಮನೆಯ ಹಿಂದಿನ ಗುಡ್ಡದಲ್ಲಿ, ಒಂದೇ ಸವನೆ ಮೋಟರು ಕಾರಿನ ಶಂಖ ಬಾರಿಸುತ್ತಿತ್ತು. ಯಾರೋ ಬಂದಿರ ಬೇಕೆಂದು ಶ್ಯಾಮ ಗುಡ್ಡವನ್ನೇರಿದ. ಬರುವಾಗ ಆತ ಡಾ। ನಂದ ರನ್ನು ಕರೆದುಕೊಂಡು ಕೆಳಕ್ಕಿಳಿದನು. ದೂರದಲ್ಲಿ ನಂದರನ್ನು ಕಂಡೊ ಡನೆಯೇ, ರಾಧಾಕೃಷ್ಣನ ಬಾಯಿಗೆ, ಬೇವಿನ ಚೂರನ್ನು ತುರುಕಿದಂತಾ ಯಿತು. ಡಾ। ನಂದರವರು ತಮ್ಮಲ್ಲಿ ಅಪೂರ್ವ ದರ್ಶನವನ್ನು ಕೊಡು ತ್ತಿರುವಾಗ, ತಾನು ಹೋಗಿ ಸ್ವಾಗತಿಸದಿದ್ದರೆ ಹೇಗೆ? ತೀರ ಹಳೆಯ ಗೆಳೆತನ. ಒಂದೇ ಊರಿನ ಮಹಾನುಭಾವರು ಇಬ್ಬರು. ಹುಟ್ಟಿದ ಊರು ಒಂದೇ ಆದರೆ, ಈಗ ನೆಲೆಸಿದ್ದು ಒಂದೇ ಊರಿನಲ್ಲಿ. ಅವರ ಪರಿ ಚಯದ ದೀರ್ಘ ಅವಧಿಯಲ್ಲಿ ಇಳಿತ ಉಬ್ಬರಗಳೆಷ್ಟೋ ಆಗಿಹೋ ದುವು. ಈಗಂತೂ ಲವಲೇಶ ಅಭಿಮಾನ ಉಳಿದಿಲ್ಲ. ಬರಿಯ ದಾಕ್ಷಿ ಣ್ಯಕ್ಕಾಗಿಯಷ್ಟೇ ಅವನು ಅವರನ್ನು ಮಾತನಾಡಿಸಬೇಕು. ಆದರೂ ತನ್ನಿಂದ ಶಿಷ್ಟಾಚಾರದ ಕೊರತೆ ಬರಬಾರದೆಂದು ಅವರನ್ನು ಬರಮಾ ಡಿಕೊಂಡನು. 'ಬನ್ನಿ' ಎಂದು ಎದುರಾದನು. ಅವರು ನಗುತ್ತ ಹಸ್ತ ಲಾಘವ ಮಾಡಿ "ಮಿ। ರಾಧಾಕೃಷ್ಣ ನಮ್ಮ ನಿಮ್ಮ ಭೇಟಿ ದೂರವಾ ದರೂ, ಮರೆತಿದ್ದೇನೆಂದು ತಿಳಿದಿರಾ? ಯಾವುದೇ ಒಂದು ಸಾರ್ವಜನಿಕ ಹಿತವನ್ನು ನೆನೆಯುವಾಗಲೂ, ನಿಮ್ಮ ನೆನಪೇ ಆಗುತ್ತಿತ್ತು. ಈ ಎರಡು ವರ್ಷಗಳಿಂದ ನಿಮ್ಮನ್ನು ಬಹಳವಾಗಿ ನೆನೆದಿದ್ದೆ. ನೀವು ಉತ್ತರ ಕನ್ನ ಡಕ್ಕೆ ಹೋಗಿ ತುಂಬ ಕೆಲಸ ಮಾಡಿದರಂತೆ. ಆದರೆ ನಿಮ್ಮದೇ ಆದ ಮಂಗಳೂರನ್ನು ಬಿಟ್ಟು ಹೋದುದು ಸರಿಯಲ್ಲ ಎಂದು ನನಗೆ ಕಾಣು ತ್ತದೆ. ಬನ್ನಿ, ಬನ್ನಿ — ನಿಮ್ಮ ಎಲ್ಲ ಕಾರುಭಾರುಗಳನ್ನು ತೋರಿಸಿ. ವಿರಾಮ ಮಾಡಿಕೊಂಡು ನೋಡುವುದಕ್ಕೆ ಬಂದಿದ್ದೇನೆ" ಎಂದರು.

"ಏನಿದೆ ಇಲ್ಲಿ ನೋಡಲಿಕ್ಕೆ? ನಾಲ್ಕು ಜೋಪಡಿಗಳು ಮಾತ್ರ."

"ನೀವು ಬಹಳ ಚೆನ್ನಾದ್ದೊಂದು ಗೋಶಾಲೆ ಕಟ್ಟಿದ್ದೀರಂತಲ್ಲ."

"ಏನು ಗೋಶಾಲೆಯೇ? ಗೋಶಾಲೆಯಲ್ಲ, 'ಎಮ್ಮೆಶಾಲೆಯು.' ಹೊಟ್ಟೆಯ ಪಾಡಿಗೊಂದು ದಾರಿಬೇಡವೇ, ನಾಲ್ಕೆಂಟು ಎಮ್ಮೆಗಳನ್ನು ಕಟ್ಟಿಕೊಂಡಿದ್ದೇನೆ—ಹಾಗೂ, ಹೀಗೂ ನಡೆಯುತ್ತಿದೆ. ಅಂತಹ ತೋರಿಸುವ ಕೆಲಸವೇನಿದೆ ಇಲ್ಲಿ"

"ನೀವು ಮೊದಲಿನಿಂದಲೂ ಹಿಂದೆ ಉಳಿದೇ ಕೆಲಸ ಮಾಡುವ ಸ್ವಭಾವದವರು. ಕೆಲಸ ಸಣ್ಣದೋ ದೊಡ್ಡದೋ ಎಂದು ನಮಗೆ ತಿಳಿಯುವುದಿಲ್ಲವೆ? ತೊಡಗುವಾಗ ಸಣ್ಣದಾಗಿ ತೊಡಗಬೇಕು. ಮುಂದೆ ಅದು ಬೆಳೆಯುತ್ತ ಹೋದರೆ ಚಂದ"

ಉಪಾಯವಿಲ್ಲದೆ ಅವರನ್ನು ಗೋಶಾಲೆಗೆ ಕರೆದೊಯ್ದನು. ಹಟ್ಟಿಯನ್ನು ತೋರಿಸಿದನು, ಕರುಗಳ ಮನೆಯನ್ನು ತೋರಿಸಿದನು. ಅವರು-ಅವುಗಳ ನೈರ್ಮಲ್ಯವನ್ನೂ, ಗಂಜಳ ಸಾಗಿಸಲು ಮಾಡಿದ ಗಚ್ಚಿನ ಕಣಿ, ಗೊಬ್ಬರದ ಹೊಂಡ, ಅವುಗಳ ಮುಚ್ಚು ಮರೆಗಳನ್ನೆಲ್ಲ ಕಂಡು "ಸಣ್ಣದಾದರೇನು, ತೀರ ಶಾಸ್ತ್ರೀಯವಾಗಿ ಮಾಡಿಸಿದ್ದೀರಿ" ಎಂದರು.

"ಎಷ್ಟು ಜಾನುವಾರುಗಳಿವೆ?"

"ಇವೆ-ಒಂದು ಹತ್ತು ಎಮ್ಮೆಗಳು. ಎಲ್ಲಾ ಊರಿನವೇ. ಸಾಮಾನ್ಯ ತೆರನವು. ಮುರ, ಸುರತಿ ಜಾತಿಯ ಪರವೂರ ಎಮ್ಮೆಗಳನ್ನು ತರಿಸಬಹುದಿತ್ತು. ಬಂಡವಾಳಕ್ಕೆ ಎಲ್ಲಿಗೆ ಹೋಗಲಿ? ಇವನ್ನೇ ಸಾಕುವುದು ಕಷ್ಟ- ಅವಕ್ಕೆ ಹಸಿಮೇವಿನ ಪೂರೈಕೆಯಾಗಬೇಕು. ಆಗ ಹಾಲಿನಲ್ಲಿ ಸತ್ವವೂ ಹೆಚ್ಚು, ರುಚಿಯೂ ಹೆಚ್ಚು, ಅವುಗಳ ಆರೋಗ್ಯಕ್ಕೂ ಚನ್ನ."

ಅಷ್ಟು ಹೊತ್ತಿಗೆ ಶ್ಯಾಮು "ಅಣ್ಣಾ ಅವರನ್ನು, ಗಿನಿಹುಲ್ಲು, ಆನೆ ಹುಲ್ಲು ಬೆಳೆಯಿಸಿದಲ್ಲಿಗೆ ಕರಕೊಂಡು ಹೋಗುವ" ಎಂದನು.

"ಹೋ, ಅದನ್ನು ಬೆಳೆಯಿಸಿದ್ದೀರಾ? ಕೃಷಿ ಇಲಾಖೆಯವರು ಬಾಯಿಯಲ್ಲಿ ಹೇಳುವುದನ್ನೆಲ್ಲಾ ನೀವು ಕಾರ್ಯಕ್ಕೆ ತಂದಿದ್ದೀರಿ—ನೋಡುವ ಅದನ್ನೆಲ್ಲ."

"ಎಲ್ಲರೂ ಸೇರಿ ಆ ಬೆಟ್ಟನ್ನು ಇಳಿದು ಎದುರಿನ ಗದ್ದೆಗಳಿಗೆ ಹೋದರು. ಗದ್ದೆಗಳಲ್ಲಿ ಆಳೆತ್ತರ ಬೆಳೆದ ಹುಲ್ಲುಗಳನ್ನು ಕಂಡು ಡಾಕ್ಟರರು "ಆ ಹುಲ್ಲು ಇಷ್ಟು ಎತ್ತರವಾಗಿ ಬೆಳೆಯುತ್ತದೆಯೇ? ಎಷ್ಟು ಜಾಗದಲ್ಲಿ ಬೆಳೆಸಿದ್ದೀರಿ?"

"ಈಗ ಎರಡು ಮುಡಿ ಗದ್ದೆಯಲ್ಲಿ ಅಂದರೆ, ಒಂದು ಎಕ್ರೆಯಷ್ಟು ಜಮೀನಿನಲ್ಲಿ ಬೆಳೆಸಿದ್ದೇವೆ. ಇನ್ನಿರುವ ಐದು ಮುಡಿ ಗದ್ದೆಯಲ್ಲಿಯೂ ಅದನ್ನೇ ಹಾಕಬೇಕೆಂದು ಮನಸ್ಸು. ಅಂದರೆ ಜಾಗ ಇರುವುದೇ ಅಷ್ಟು. ಜಾನುವಾರುಗಳನ್ನು ಹೆಚ್ಚಿಸಿಕೊಳ್ಳಬೇಕಾದರೆ, ಇದನ್ನೂ ಹೆಚ್ಚಿಸಿಕೊಳ್ಳಬೇಕು. ಆಚೀಚೆ ಇರುವುದು ಬೇರೆಯವರ ಜಾಗ."

"ಏನು? ಜಾಗವನ್ನು ಕೊಂಡಿರಾ?"

"ಇದೆಲ್ಲಾ ಕೊಂಡದ್ದೇ. ಈ ಗದ್ದೆಗಳು ನಮ್ಮ ಶ್ಯಾಮನವು. ಅವನು ತನ್ನ ಊರಿನ ಆಸ್ತಿಯನ್ನು ಮಾರಿ ಇಲ್ಲಿ ಕ್ರಯಕ್ಕೆ ಕೊಂಡ. "ಶ್ಯಾಮನೆಂದರೆ?"

"ಶ್ಯಾಮನೆಂದರೆ ಇವನೇ. ನಮ್ಮ ಹಳೆಯ ಶಾಲೆಯ ದಿವಸದಿಂದಲೂ ನನ್ನ ಜತೆಯಲ್ಲಿಯೇ ಇದ್ದಾನೆ. ಹೆಚ್ಚಾಗಿ ಇದರಲ್ಲಿ ದುಡಿಯುತ್ತಿರುವವನು ಅವನೇ. ನಾನು ಬಹು ದಿವಸ ಊರಿನಲ್ಲಿ ಇದ್ದಿರಲಿಲ್ಲವಲ್ಲ?"

"ಈ ಹುಡುಗನೇ! ಬಹಳ ಒಳ್ಳೆಯ ಕೆಲಸ ಮಾಡಿದಿರಿ. ನಮ್ಮ ಹುಡುಗರಿಗೆ ಈ ತೆರನ ಕಾಯಕ ಶಿಕ್ಷಣಬೇಕು. ಆದರೆ ಒಂದು ಮಾತು -ನಾನು ಟೀಕಿಸುತ್ತಿದ್ದೇನೆಂದು ತಿಳಿಯಬೇಡಿ.... ನೋಡಿ ನೀವು ಎಮ್ಮೆಗಳ ಬದಲು ಸಿಂಧಿ ದನಗಳನ್ನು ಸಾಕಬಾರದೇ?"

"ಸಾಕಬಹುದು. ಅವುಗಳನ್ನು ಹೊರಗಿನಿಂದ ಆಮದು ಮಾಡಬೇಕು. ಅಲ್ಲದೆ ನಮ್ಮ ಊರಿನಲ್ಲಿ ಎಮ್ಮೆಯ ಹಾಲಿಗೆ ಇರುವ ಗಿರಾಕಿ ಅದಕ್ಕಿಲ್ಲ. ಮಾರುವುದಕ್ಕೂ ಇದು ಸುಲಭ. ಒಬ್ಬಿಬ್ಬರು ಹೋಟೆಲಿನವರಿಗೆ ಕೊಟ್ಟರೆ ಸಾಕು."

"ಛೀ, ಛೀ, ನೀವು ಹಾಗೆ ಮಾಡಬಾರದು. ಊರಿನ ಮಕ್ಕಳು ಹಾಲಿಲ್ಲದೆ ಕ್ಷೀಣವಾಗುತ್ತಿರುವಾಗ, ಹೋಟೆಲಿನವರಿಗೆ ಯಾಕೆ ಕೊಡಬೇಕು? ಒಳ್ಳೆಯ ಹಾಲು ಕೊಟ್ಟರೆ, ಯಾವ ಮನೆಯವರು ಕೊಳ್ಳುವುದಿಲ್ಲ? ನೀವು ಅದರ ಏರ್ಪಾಡನ್ನು ಖಂಡಿತವಾಗಿ ಮಾಡಬೇಕು."

"ನಿಮ್ಮ ಅಭಿಪ್ರಾಯವೇನೋ ಸರಿಯೇ. ಆದರೆ ನನ್ನಲ್ಲಿ ದುಡಿಯುವವರು, ಹಂಚುವವರು ಬೇಕಲ್ಲ?"

ಹಾಗೆ ನೀವು ಹಸುವಿನ ಹಾಲಿನ ಪೂರೈಕೆ ಮಾಡುವದಿದ್ದರೆ, ನನ್ನ ಆಸ್ಥ

ತ್ರೆಗೆ ಬೇಕಾಗುವ ಯಾವತ್ತು ಹಾಲನ್ನು ನಿಮ್ಮಿಂದಲೇ ಕೊಳ್ಳುತ್ತೇನೆ. ನಾಲ್ಕೆಂಟು ಸಿಂಧಿ ದನಗಳನ್ನು ತರಿಸಿಬಿಡಿ; ಒಂದು ಉತ್ತಮ ಗೂಳಿ ಯೂ ಇರಲಿ; ಮಾದರಿ ಗೋಶಾಲೆಯಾಗಬಹುದು ಆಗ. ನಿಮ್ಮಂಥ ವರಿಂದಲೇ ಅದು ಸಾಧ್ಯ."

"ಮಂಗಳೂರಿನಂಥ ಊರಿಗೆ ನೂರು ದನ ಸಾಕಿದರೂ ಸ್ವಲ್ಪವೇ. ಆದರೆ ನಾನು ನನ್ನ ಶಕ್ತಿಯೊಳಗಿರುವ ಕೆಲಸವನ್ನೇ ಮಾಡಬಹುದು. ನನ್ನ ಹಾಸಿಗೆಗೂ ಮೀರಿ ಕಾಲು ಹೋಗಬಾರದಲ್ಲ?"

"ಏಕೆ, ಹಣದ ವಿಚಾರವನ್ನು ಯೋಚಿಸುತ್ತಿದ್ದೀರಾ?"

"ಎಲ್ಲದಕ್ಕೂ ಅದೇ ಮುಖ್ಯ. ಜನರನ್ನಾದರೂ ತರಬೇತಿಮಾಡ ಬಹುದು. ಇದರಲ್ಲಿ ಯೋಗ್ಯ ಜೀವನಕ್ಕೆ ದಾರಿ ಉಂಟೆಂದು ತೋರಿಸಿ ದರೆ ಜನರು ಬಂದಾರು."

"ಛೀ, ಹಣಕ್ಕೆ ಹೆದರಬೇಕಾದ ಕಾಲವುಂಟೇ? ಇರಲಿ, ಇನ್ನೇನು ಯೋಚನೆ ಮಾಡಿದ್ದೀರಿ? ಯಾವುದೋ, ಔದ್ಯೋಗಿಕ ಶಾಲೆ ಮಾಡು ತ್ತೀರಂತಲ್ಲ."

ಶ್ಯಾಮು ತಿರುಗಿ ನಡುವೆ ಮಾತನಾಡಿದ. ಅವನಿಗೆ ಅಣ್ಣನಲ್ಲಿ ಅಭಿ ಮಾನ. ಅದರಿಂದ "ಅವರಿಗೆ ತುಂಬ ಯೋಚನೆಗಳಿವೆ. ರೇಶ್ಮೆ ಹುಳ ಸಾಕುವಿಕೆ, ನೇಯುವ ಕೆಲಸ, ಬಣ್ಣಗಾರಿಕೆ, ಕಬ್ಬಿಣದ ಕೆಲಸ, ಇಂಥ ವನ್ನೆಲ್ಲ ನಡೆಸಿಕೊಂಡು ಹೋಗಬೇಕೆಂದಿದ್ದಾರೆ. ಓ ಅಲ್ಲಿ ತೋರು ತ್ತಿದೆಯಲ್ಲ, ಆ ಉದ್ದವಾದ ಗುಡಿಸಲು, ಅದೇನೆ ಶಾಲೆ. ಇನ್ನು ಸಲ ಕರಣೆ, ಸಾಮಾಗ್ರಿಗಳು ಎಷ್ಟೋ ಆಗಬೇಕು. ಹಣಕ್ಕಾಗಿ ಎಲ್ಲ ಕಾದು ನಿಂತಿವೆ" ಎಂದನು.

"ನೀವು ಮಿ। ರಾಧಾಕೃಷ್ಣ, ನನ್ನ ಹತ್ತಿರ ಒಂದು ಮಾತು ಹೇಳ ಬಹುದಿತ್ತಲ್ಲ? ಮುಂಚಿತವಾಗಿ ತಿಳಿಸಿದ್ದರೆ ಏನೂ ಮಾಡುತ್ತಿದ್ದೆ."

"ಬಹಳ ಹಿಂದೆ ನೀವು ನನಗೆ ಸಹಾಯ ಮಾಡುತ್ತೇನೆಂದುದು ನಿಜ. ಆದರೆ ಅದನ್ನು ನೀವು ಮರೆತಂತೆ ಅನಿಸಿತು. ನಾನು ಕಿರಿಪದವಿನಲ್ಲಿ ಸಾಧಾರಣ ಒಂಬತ್ತು ವರ್ಷ ಕಾಲ ಕಳೆದನಲ್ಲವೇ ವ್ಯರ್ಥವಾಗಿ."

"ಅದು ನಿಮ್ಮದೇ ತಪ್ಪು. ದಯಾನಂದ ರಾಯರ ಮಾತನ್ನು ಕೇಳಿ ಆ ಮೂಲೆಯನ್ನು ನೀವು ಹಿಡಿಯಬಾರದಿತ್ತು. ಯಾವ ಕೆಲಸ

ಮಾಡಿದರೂ, ಪೇಟೆಗೆ ಸಮೀಪವಾಗಿ, ಜನ ಬಂದು ಹೋಗುವಲ್ಲಿ ಮಾಡಬೇಕು. ಆ ದೃಷ್ಟಿಯಲ್ಲಿ ಇದಾದರೆ ಮಾದರಿಯ ಸ್ಥಳ."

"ನಿಮ್ಮ ಶಾಲೆಯ ಯೋಜನೆ ಏನೇನು ಮಾಡಿದ್ದೀರಿ, ಕೇಳುವ. ಇಷ್ಟೊಂದು ಹಳೆಯ ಕಾಲದ ಸ್ನೇಹಿತನಿಗೆ ತಿಳಿಸಬಾರದ ಸಂಗತಿಯುಂಟೇ? ನೀವು ನನ್ನ ಸಹಾಯವನ್ನು ಯಾವಾಗಲೂ ನಂಬಿಕೊಳ್ಳಬಹುದು. ನೋಡಿ--ದೇವರ ದಯೆಯಿಂದ ನನ್ನ ಯಾವ ಸಂಸ್ಥೆಯೂ ಹಾಳಾಗಿಲ್ಲ. ನನಗೆ ಹೆಸರನ್ನೂ ತಂದುವು. ಹಣವನ್ನೂ ತಂದಿವೆ. ಆದರೆ ನಿಜವಾಗಿ ನನ್ನ ಆಸಕ್ತಿ ಅವೆರಡರಲ್ಲಿಯೂ ಇಲ್ಲ. ಜನಕ್ಕೆ ಎಷ್ಟು ಪರೋಪಕಾರ ಸಾಧ್ಯವೋ ಅಷ್ಟನ್ನು ಮಾಡಬೇಕೆಂದು ನನ್ನ ಮನಸ್ಸು"

"ಮಾಡುತ್ತಲೇ ಇದ್ದೀರಲ್ಲ. ಆಸ್ಪತ್ರೆ, ಸೂತಿಕಾಗ್ರಹ, ಕಾರ್ಖಾನೆಗಳಿಂದು ನೂರಾರುಜನರಿಗೆ ಅನ್ನ ಕೊಡುತ್ತಿದ್ದೀರಿ, ಸಹಾಯಮಾಡುತ್ತಿದ್ದೀರಿ. ಕಾಂಗ್ರೆಸ್ಸಿನಲ್ಲಿಯೂ, ಸ್ಥಾನಿಕ ಸಂಸ್ಥೆಗಳಲ್ಲಿಯೂ ನಿಮ್ಮ ಹೆಸರು ಕೇಳುತ್ತಲೇ ಇದೆ."

"ಇಲ್ಲ ಎನ್ನುತ್ತೇನೆಯೇ? ಆದರೆ ಮಾಡಿದ್ದಕ್ಕಿಂತ ಹೆಚ್ಚಿಗೆ ಮಾಡಬಹುದಾದ ಕೆಲಸ ಎಷ್ಟಿಲ್ಲ. ಜನತೆ ಸ್ವತಂತ್ರ ಜೀವನವನ್ನು ನಡೆಯಿಸಿಕೊಂಡು ಹೋಗಬೇಕಾದುದು ಬಹಳ ದೊಡ್ಡ ವಿಷಯ. ಈಗಿನ ಶಿಕ್ಷಣ ಯಾವ ಪ್ರಯೋಜನದ್ದೂ ಅಲ್ಲ. ನಿಮ್ಮ ಯೋಚನೆಗಳಲ್ಲಿ ಅದರ ಬೀಜಾಂಕುರ ಕಾಣುತ್ತದೆ. ಅದರಿಂದಲೇ ನನಗೆ ಆಸಕ್ತಿಯುಂಟಾಗಿದೆ. ನನ್ನನ್ನು ಕೇಳಿ—ಈ ಹೊತ್ತು ನನ್ನ ಮಾತು ನಾಲ್ಕು ಜನರಲ್ಲಿ ನಡೆಯುತ್ತಿದೆ ಎಂಬುದರಿಂದ ಹೇಳುತ್ತಿದ್ದೇನೆ. ನಾಲ್ಕು ಜನರ ಸಹಾಯವನ್ನು ಇಂಥ ಕಾರ್ಯಕ್ಕೆ ಗಳಿಸಿಕೊಡಬಲ್ಲೆನೆಂಬ ವಿಶ್ವಾಸವು ನನಗೆ ಉಂಟಾಗಿದೆ. ಹಾಗೆ ಜನಸಹಾಯವಿಲ್ಲದೆ, ನನ್ನ ಯಾವ ಕೆಲಸ ತಾನೇ ಸಾಧ್ಯವಾಗುತ್ತಿತ್ತು? ಸಾವಿರಾರು ರೂಪಾಯಿ, ಜನರ ವಿಶ್ವಾಸದಿಂದ ಕೂಡಿದುವು. ನಾವು ಕೂಡಿ ಕೆಲಸಮಾಡಿದರೆ ಜನರ ಸಹಾಯವನ್ನು ಎಷ್ಟೂ ಪಡೆಯಬಹುದು. ನಿಮಗೇಕೋ ಮಂಗಳೂರಿನ ಜನರ ಮೇಲೆ ವಿಶ್ವಾಸವಿದ್ದಂತೆ ಕಾಣುವುದೇ ಇಲ್ಲ—ಅಲ್ಲವೇ?"

"ಹಾಗೇಕೆ ಹೇಳುತ್ತೀರಿ? ಹಾಗಿದ್ದರೆ ಇಲ್ಲಿ ಬಂದು ಬಿಡಾರ ಹೂಡುತಿದ್ದೆನೇ?"

"ನೀವು ಚಳವಳದ ಸಮಯದಲ್ಲಿ ಉತ್ತರ ಕನ್ನಡವನ್ನು ಸೇರಿದ್ದನ್ನು ಕೇಳಿದ್ದೆ. ನಮ್ಮ ಊರಲ್ಲಿಯೇ ಇದ್ದು ಎಷ್ಟೋ ಕೆಲಸಗಳನ್ನು ಮಾಡಬಹುದಿತ್ತು."

"ಏನೋ, ಆ ಸಮಯದಲ್ಲಿ ಊರಿನಲ್ಲಿದ್ದು ಹೆಚ್ಚೇನೂ ಆಗದು ಎಂದು ತೋರಿದುದರಿಂದ ಹೊರಟುಬಿಟ್ಟೆ."

"ಪ್ರಾಯಶಃ ನಿಮ್ಮ ದಲಿತಾಶ್ರಮದ ನೆನೆಪಿನಿಂದ ಇರಬೇಕು. ಅದು ಮೊದಲಿನಿಂದಲೂ ತಪ್ಪುದಾರಿಯಾಯಿತು. ನಮ್ಮ ದಯಾನಂದರಾಯರಿಗೆ ಯಾವಾಗಲೂ ಸೂಕ್ಷ್ಮ ದೃಷ್ಟಿ ಇಲ್ಲ. ಅವರು ತೊಡಗಿದ ಕೆಲಸಗಳೆಲ್ಲ ಹೀಗೆಯೇ ಆದುವು. ಅವರಿಗೆ ಉತ್ಸಾಹವೇನೋ ತುಂಬಾ ಇತ್ತು. ಅದನ್ನು ಹೊಗಳತಕ್ಕದ್ದೇ, ಆದರೆ ಫಲವೇನು?

"ಆ ಮಾತನ್ನು ಬಿಡುವ. ಏನೋ ಅವರಿಗೆ ತಿಳಿದಷ್ಟು ಕೆಲಸ ಮಾಡಿದರು. ತಮ್ಮದನ್ನೆಲ್ಲಾ ಕಳೆದುಕೊಂಡರು. ಆಯಿತು,ಹೋಯಿತು. ಚೆಲ್ಲಿದ ಹಾಲಿಗೆ ಜೊಲ್ಲು ಸುರಿಸಿ ಫಲವಿದೆಯೇ?"

ಅದು "ಸರಿಯಾದ ಮಾತು. ಹಾಗೆ ನಮ್ಮ ಸೋಲುಗಳು ನಮ್ಮ ಮುಂದಿನ ದಾರಿಯನ್ನು ತಿದ್ದಬೇಕು. ಇರಲಿ, ಈಗ ನಿಮ್ಮ ಯೋಚನೆಯನ್ನು ವಿವರಿಸಿ ಹೇಳಿ. ಅದನ್ನು ತಿಳಿಯುವ ಕುತೂಹಲ ಉಂಟಾಗಿಯೇ ಬಂದೆ."

ಮಾತನಾಡದೆ ರಾಧಾಕೃಷ್ಣನಿಗೆ ಗತ್ಯಂತರವಿಲ್ಲವಾಯಿತು. 'ಬಾಯಾರಿಕೆಗೆ ಏನು ತರಲಿ' ಎಂದು ಕೇಳಿದ. 'ಏನೂ ಬೇಡ.' "ಆದರೂ" ಎಂದು, ರಾಧಾಕೃಷ್ಣ ಶ್ಯಾಮುನಿಗೆ ಒಂದು ಥಾಲಿ ಬಿಸಿಹಾಲನ್ನು ತರುವುದಕ್ಕೆ ಹೇಳಿದ. "ಹೋ, ಹಾಲೆಂದರೆ ನನಗೆ ತುಂಬ ಇಷ್ಟ." ಎಂದು ಉದ್ಗರಿಸಿ ಹಾಲನ್ನು ಕುಡಿದರು. ಕಿಸೆಯಿಂದ ಒಂದು ಪುಸ್ತಕವನ್ನು ತೆಗೆದು ಗುರುತು ಹಾಕುತ್ತ "ಹೇಳಿ, ಒಂದು ಮಾದರಿಯ-ಗೋಶಾಲೆಗೆ ಪ್ಲೇನ್ ಹಾಕುವ. ಹೈನುಗಾರಿಕೆ ಕಲಿಯುವ ಹುಡುಗರಿಗೆ, ಜಾನುವಾರುಗಳ ಪ್ರತಿಯೊಂದೂ ತಿಳಿಯುವಂತಾಗಬೇಕು. ಮೇವು, ಹಾಲು, ಪೀಳಿಗೆ-ಪ್ರತಿಯೊಂದು ವಿಚಾರವೂ ತಿಳಿಯಬೇಕು" ಎಂದು, ಒಂದೊಂದಾಗಿ ಪ್ರಶ್ನೆ ಕೇಳಿ, ಉತ್ತರ ತರಿಸಿಕೊಂಡು, ಕಾಗದದಲ್ಲಿ ಅಂಕೆ, ಸಂಖ್ಯೆಗಳ ಗುರುತು ಹಾಕಿಕೊಂಡರು.

"ಇದನ್ನು ವಿಸ್ತರಿಸುವುದಾದರೆ, ಆಚೀಚಿನ ಗದ್ದೆಗಳನ್ನು ನಾವು ಗೇಣಿಗೋ, ಬೆಲೆಗೋ ಕೊಂಡುಕೊಳ್ಳಬಹುದು. ನೀವು ನೆರೆಕರೆಯ ಭೂಮಾಲಿಕರಾರೆಂದು ತಿಳಿದರೆ, ನಾನು ಸ್ವರ್ಗಮರ್ತ್ಯಗಳನ್ನು ತಲೆ ಕೆಳಗಾಗಿ ಮಾಡಿಯಾದರೂ ಅದನ್ನು ದೊರಕಿಸಿ ಕೊಡುತ್ತೇನೆ. ನನಗೆ ಇದನ್ನೇ ಒಂದು ಲಿಮಿಟೆಡ್ ಸಂಸ್ಥೆಯನ್ನಾಗಿ ಮಾಡಬೇಕೆಂದು ಆಸೆ. ಈ ಡಾಯರಿ ಶಾಲೆಯನ್ನು ಶಿಕ್ಷಣಸಾಧ್ಯ, ವ್ಯಾಪಾರ ಸಾಧ್ಯವನ್ನಾಗಿ ಮಾಡಬಹುದು.

"ನಾವೀಗ ಅದನ್ನು ತತ್ಕಾಲಕ್ಕೆ ಮನೆಯ ಕಸಬನ್ನಾಗಿ ಇಟ್ಟು ಕೊಂಡಿದ್ದೇವೆ."

"ನನ್ನ ಯೋಚನೆಯೆಂದರೆ—ನೀವು ಯಾವ ವಿಷಯದಲ್ಲಿಯೂ ಖಾಸಗಿ ಚಿಂತೆ ಹೊತ್ತುಕೊಳ್ಳಬಾರದು—ಎಂದು. ಇದರ ಆಯವ್ಯಯ ಗಳ ಭಾರಹೊರುವ ಕೆಲಸವು ಸಂಸ್ಥೆಯದಾಗಬೇಕು. ಆಗ ಮಾತ್ರ ನೀವು ನಿಶ್ಚಿಂತೆಯಿಂದ ಕೆಲಸ ಮಾಡಲು ಬರುತ್ತದೆ."

"ನನ್ನ ವಿಷಯದಲ್ಲಿ ನಿಶ್ಚಿಂತೆಯಾಗಿರಬೇಕೆಂದೇ ಇದನ್ನು ಮಾಡಿದ್ದು."

"ಅದಿರಲಿ, ಏನೋ ರೇಶ್ಮೆ ವ್ಯವಸಾಯ ಎಂದಿರಲ್ಲ?"

"ಆ ವಿಚಾರವನ್ನು ಇನ್ನೂ ನಾನು ಚೆನ್ನಾಗಿ ಯೋಚಿಸಿಲ್ಲ. ನಮ್ಮ ಶ್ಯಾಮನನ್ನು ಕೊಳ್ಳೆಗಾಲಕ್ಕೋ, ಚನ್ನಪಟ್ಟಣಕ್ಕೋ ಕಳುಹಿಸಿ ಇನ್ನು ಮುಂದೆ ಯೋಚಿಸಬೇಕು."

"ಮತ್ತೇನು ಅಂದಿರಿ?"

"ಔದ್ಯೋಗಿಕ ಶಾಲೆ."

"ಅದಂತೂ ಅದ್ವಿತೀಯ ಯೋಚನೆ. ನಮ್ಮ ಹುಡುಗರು S. S. L. C. ಮುಗಿಸಿ, ಗುಮಾಸ್ತಿಕೆಗಾಗಿ ಹೆಣಗಾಡುತ್ತಿರುವುದು ನನಗೆ ಸರಿತೋರುವುದಿಲ್ಲ. ನೀವು ದಯಾಳಬಾಗ್ ಉದ್ಯೋಗಶಾಲೆ ನೋಡಿದ್ದೀರಾ?" "ಇಲ್ಲ; ಕೇಳಿದ್ದೇನೆ." "ಶಾಲೆ ಆ ತೆರನಲ್ಲಿ ಮಾಡಬೇಕು ನೋಡಿ—ಕಮ್ಮಾರ ಕೆಲಸ, ಮರ ಕೆಲಸ, ನೆಯಿಗೆ, ಹೀಗೆ ಆರೆಂಟು ವಿಧದ ಉದ್ಯೋಗಗಳಿರಬೇಕು. ಅದಕ್ಕೆ ಬೇಕಾಗುವ ಯಂತ್ರ ಸಲಕರಣೆಗಳೆಲ್ಲ ಆಧುನಿಕವಾಗಿರಬೇಕು. ನಿಮ್ಮ ಈ ಕಟ್ಟಡ ಅದಕ್ಕೆ ಸಾಲದೇ

ಸಾಲದು. ವರ್ಷಕ್ಕೆ ನೂರು ಮಂದಿ ಹುಡುಗರನ್ನು ತರಬೇತು ಮಾಡ ಬೇಕು. ಈ ವಿಷಯದಲ್ಲಿ ನಾನು ಬಹಳ ವಿಚಾರ ಮಾಡಿದ್ದೇನೆ. ನನ್ನ ಎಣಿಕೆಯಂತೆ ಕಟ್ಟಡಕ್ಕೆ ಒಂದು ಇಪ್ಪತ್ತು ಸಾವಿರ ರೂಪಾಯಿ, ಸಲ ಕರಣೆಗಳಿಗೆ ಒಂದು ಹತ್ತು ಸಾವಿರ ರೂಪಾಯಿ, ನಡೆಯಿಸುವುದಕ್ಕೆ — ಉಪಾಧ್ಯಾಯರ ವೇತನ ಮೊದಲಾದುವಕ್ಕೆ ಐವತ್ತು ಸಾವಿರದ ಒಂದು ನಿಧಿ—ಹೆಚ್ಚು ಕಡಿಮೆ ಒಂದು ಲಕ್ಷ ರೂಪಾಯಿಗಳಿದ್ದರೆ, ಧಾರಾಳವಾ ಯಿತು. ನಮ್ಮ ಮಂಗಳೂರಿನ ಯೋಗ್ಯತೆಗೆ ಅದೇನೂ ಹೆಚ್ಚಲ್ಲ. ಏನು, —ಅಷ್ಟು ಹಣ ಬೇಡವೇ? ಆ ವಿಷಯ ನೀವು ಯೋಚಿಸಿಲ್ಲವೇ?"

"ಯೋಚಿಸಿದ್ದೇನೆ. ಹಣ ಇದ್ದವರು ಎಷ್ಟೂ ಖರ್ಚು ಮಾಡಲು ಬಂದೀತು. ನನ್ನಂಥವನು ಯೋಚಿಸುವಾಗ—ಇರುವ ಹಣಕ್ಕೆ ಸಮ ನಾಗಿ, ಆಯ ಬೆಳೆಯಿಸಿಕೊಂಡು ಹೋಗಬೇಕಾಗುತ್ತದೆ. ಮೊದಲು, ಇಲ್ಲಿಂದಲೇ ನಾಲ್ಕು ಮಂದಿಯನ್ನು ಹೊರಗೆ ತರಬೇತಿಗೆ ಕಳುಹಿಸಿ ಕೊಡಬೇಕೆಂದಿದೆ. ಸಾಕಷ್ಟು ವಿಧ್ಯಾರ್ಥಿಗಳು ನೇರಿ, ಜನರಿಂದಲೂ ಬೆಂಬಲ ಸಿಕ್ಕಿದರೆ—ಆಗ ಹೊರಗಿನಿಂದಲೇ ತಜ್ಞರನ್ನು ಕರೆಯಿಸಿಕೊಳ್ಳ ಬಹುದು."

"ನಾವು ಮೊದಲಿಗೇ ಹಾಗೆ ಮಾಡಬೇಕು. ಯೋಜನೆ ಬಿಸಿಯಿರು ವಾಗಲೇ ಇದು ಅಸ್ತಿತ್ವಕ್ಕೆ ಬರಬೇಕು. ದೊಡ್ಡ ಹಂಚಿಕೆಗಳಿರುವ ಮೋಹ ಕತೆ, ಸಣ್ಣ ಹಂಚಿಕೆಗಳಿಗೆ ಬರುವುದಿಲ್ಲ. ನಮ್ಮ ಕಲ್ಪನೆ ಎಷ್ಟು ದೊಡ್ಡ ವಾಗುತ್ತದೆಯೋ, ಅಷ್ಟು ಹೆಚ್ಚಿಗೆ ಸಹಾಯ ಬರುತ್ತದೆ. ನೋಡಿ ಅಮೇ ರಿಕದವರ ವಿಚಾರಗಳನ್ನು. ಅವರಂತೆ ದೊಡ್ಡ ಅಭಿಲಾಷೆಗಳನ್ನು ನಾವೂ ಇರಿಸಿಕೊಳ್ಳಬೇಕು. ಆಗ ಪ್ರಯತ್ನಮಾಡುವಾಗಲೂ ಹೆಚ್ಚಿನ ಉತ್ಸಾಹವಿದೆ."

"ಸರಿಯೇ."

"ಈಗ ನೀವು ಯಾವ ತೆರನಲ್ಲಿ ಮುಂದುವರಿಯುವವರು? ನೀವು ನನ್ನ ಮಾತಿನಲ್ಲಿ ಪೂರ್ಣ ವಿಶ್ವಾಸ ಇರಿಸಿ. ನಾನು ನನ್ನ ಬಿಡು ವನ್ನು ಉಪಯೋಗಿಸಿ ಒಳ್ಳೆಯ ಪಾಯ ಹಾಕಿಕೊಡುತ್ತೇನೆ. ನೀವು ಒಪ್ಪಿದರೆ, ಮುಂದಿನ ವಾರ ಕೆಲವು ಸ್ನೇಹಿತರನ್ನು ಕರೆಯಿಸುತ್ತೇನೆ. ಅವರನ್ನು ಉಪಾಹಾರಕ್ಕೆ ಮನೆಗೆ ಕರೆದು, ನಿಮಗೆ ಪರಿಚಯ ಮಾಡಿಸಿ

ಕೊಡುತ್ತೇನೆ. ನೀವು ಈ ಹಂಚಿಕೆಯನ್ನು ಅವರ ಮುಂದೆ ಇರಿಸಿ. ಅನಂತರದ ಕೆಲಸವನ್ನು ನನಗೆ ಬಿಡಿ. ಕುಳಿತಲ್ಲಿಯೇ ಇಪ್ಪತ್ತೈದು ಸಾವಿರ ರೂಪಾಯಿ ಕೂಡಿಸುವ ಧೈರ್ಯ ನನಗಿದೆ."

"ನನಗೆ ಒಂದು ವಾರ ಅವಕಾಶಕೊಡಿ. ನಾನು ಚೆನ್ನಾಗಿ ವಿಚಾರ ಮಾಡಿ, ಮುಂದಿನ ವಾರ ನಿಮಗೆ ಭೇಟಿಯಾಗುತ್ತೇನೆ."

"ಒಂದು ವಾರ ಬೇಕೇ? ನಿಮ್ಮ ಹಂಚಿಕೆ ಸಿದ್ಧವಾಗಿದೆ. ಒಮ್ಮೆಗೇ ಕೆಲಸ ತೊಡಗಬಹುದಲ್ಲ?"

"ಆದರೂ ಅವಸರ ಮಾಡಲಾರೆ. ಈ ವಿಷಯ ನನ್ನ ಒಬ್ಬಿಬ್ಬರು ಆತ್ಮೀಯರೊಡನೆ ಮಾತನಾಡಬೇಕು. ಅವರೀಗ ಊರಲ್ಲಿಲ್ಲ. ಅವರು ಬರುತ್ತಲೇ ಅವರನ್ನು ಜತೆಗೆ ಕರೆದುಕೊಂಡು ಬರುತ್ತೇನೆ. ಇದು ನನ್ನ ಒಬ್ಬನಿಂದಾಗುವ ಕೆಲಸವಲ್ಲವೆಂದು ನನಗೆ ಗೊತ್ತಿದೆ."

"ಯಾರದು? ಇಂಥ ವಿಷಯದಲ್ಲಿ ಉಮೇದುವಿರುವ ಜನರಿಲ್ಲವೆಂದಲ್ಲ. ಆದರೆ ಇದಕ್ಕೆ ಮಾತಿನ ಉಮೇದು ಪ್ರಯೋಜನವಿಲ್ಲ. ಎಲ್ಲವೂ ಹಣದಿಂದಲೇ ನಡೆಯಬೇಕಾದ ಕೆಲಸ."

ಅಂತು ಯಾವ ಬಗೆಯಿಂದ ಪ್ರೇರಿಸಿದರೂ, ರಾಧಾಕೃಷ್ಣ ಅವರಿಗೆ ಅಲ್ಲೇನೇ ಮಾತು ಕೊಡಲಿಲ್ಲ. ಹಾಗೆ ಮಾಡುವುದು ತಪ್ಪೆಂದು ಅವನಿಗೆ ಕಂಡಿತು. ಡಾ। ನಂದರವರು ಅಷ್ಟೆಲ್ಲ ಮಾತನಾಡಿದರೂ ಮಾತಿನ ಕಾಲಂಶ ನಡೆಯಿಸಿ ಕೊಟ್ಟರೂ ಅವನಿಗೆ ಸಂತೋಷವೇ. ಪಾರಮಾರ್ಥವನ್ನು ಲೌಕಿಕದಂತೆ ನಡೆಯಿಸುವ, ಚಾಕಚಕ್ಯತೆ ಅವರಿಗೆ ಇರುವುದನ್ನು ಬಲ್ಲ. ಆದರೂ ಅವರನ್ನು ಪೂರ್ಣವಾಗಿ ನಂಬಲಾರ. ಅಂದಿನ ಸ್ಥಿತಿಯಲ್ಲಿ ನಿರಾಕರಿಸಲಾರ. ಸಹಾಯಕ್ಕೆ ಮುಂದಾಗಿ ಬಂದ ವ್ಯಕ್ತಿಯನ್ನು ಬೇಡವೆಂದು ಓಡಿಸುವುದು ಮೂರ್ಖತನ. ಆದರೆ ಪ್ರಭುದೇವನಿಗೆ ಕೊಟ್ಟ ವಚನವನ್ನು ಮುರಿಯಲಿಕ್ಕೆ ಬಂದೀತೇ? ಆತನ ಮಾತಿನಲ್ಲಿ ಪೂರ ವಿಶ್ವಾಸವೆಂದಲ್ಲ; ಆದರೂ ಮಾತು ಸಂದಿದೆ. ನಾಳೆಯೇ ಆತನು ಬರುತ್ತಾನೆ. ಅಥವಾ ಒಂದೆರಡು ದಿನ ವಿಳಂಬವಾದೀತು. ಅಷ್ಟರಲ್ಲಿ ಆತುರಗೊಂಡು ಕೊಟ್ಟ ವಚನ ಮುರಿಯಬಾರದಲ್ಲ?

ನಂದರವರು ಕತ್ತಲೆಯಾಗುವ ತನಕ ಅಲ್ಲಿದ್ದರು. ತಿರುತಿರುಗಿ ಹೇಳಿದ್ದನ್ನೇ ಹೇಳಿದರು. ತನ್ನಿಂದ, ನಿಮ್ಮ ಕನಸು ನೆನಸು ಆಗುತ್ತದೆ

ಎಂದು ಆಸೆ ಹುಟ್ಟಿಸಿದರು. "ನಾಳೇನೆ ಗೋಶಾಲೆಯನ್ನು ಲಿಮಿಟೆಡ್ ಸಂಸ್ಥೆಯನ್ನಾಗಿ ಮಾಡಲು, ಆರ್ಟಿಕಲ್ಸ್ ಒಫ್ ಎಸೋಸಿಯೇಶನ್ ತಯಾರಿಸುತ್ತೇನೆ"ಂದು ಹೇಳಿದರು. ಮುಂದಿನ ಆದಿತ್ಯವಾರ ಖಂಡಿತ ಮನೆಗೆ ಬಂದು ಹೋಗಿ ಎಂದು ಆಮಂತ್ರಣವಿತ್ತರು. ಹೊರಡುತ್ತ "ಮಧ್ಯಾಹ್ನ ಸರಿ ಎರಡು ಘಂಟೆಗೆ, ಕಾರು ಕಳುಹಿಸುತ್ತೇನೆ. ನೀವು ಮಳೆಯಲ್ಲಿ ನೆನೆದು ಬರುವುದು ಬೇಡ" ಎಂದೂ ಹೇಳಿ ಹೋದರು.

ತನ್ನನ್ನು ತಾವಾಗಿ ದೂರವಮಾಡಿದ ನಂದರು, ತಿರುಗಿ ತಾವೇ ಮೇಲೆಬಿದ್ದು ಮಾತನಾಡಿಸುತ್ತಿರುವುದನ್ನು ಕಂಡು ಅವನಿಗೆ ವಿಸ್ಮಯ ವಾಯಿತು. ಶ್ಯಾಮನು ಇದನ್ನೆಲ್ಲ ಕಂಡು "ಅಣ್ಣ, ಅವರಿಗೆ ಬಹಳ ಉಮೇದು ಇರುವ ಹಾಗಿದೆ. ಅಲ್ಲದೆ ಊರಲ್ಲಿಯೂ ಅವರ ಮಾತು ನಡೆ ಯುತ್ತದೆ. ಚಳವಳದ ಸಮಯದಲ್ಲಿ ಜನ, ಅವರನ್ನು ಬಹಳವಾಗಿ ದೂರಿದ್ದರೂ, ಅವರು ಇಷ್ಟೆಲ್ಲ ಕೆಲಸ ಮಾಡಿರುವುದನ್ನು ಕಂಡಾಗ, ಜನರ ಮಾತು ಸುಮ್ಮನೆ ಎಂದೆನಿಸುತ್ತದೆ" ಎಂದನು.

ರಾಧಾಕೃಷ್ಣನ ಮನಸ್ಸು, ಅವರೆದುರಿಗೆ ಮಾತನಾಡುತ್ತ ಕುಳಿತಿ ರುವಾಗಲೇ ಅಂತರ್ಮುಖಿಯಾಗಿತ್ತು. ತನ್ನ ಹಿಂದಿನ ಅನುಭವದಿಂದ ಬಲು ಮಾತುಗಾರರಾದವರನ್ನು ನಂಬಲು ಆತ ಹಿಂಜರಿಯುತ್ತಿದ್ದ. ಆದರೆ ಸಾರ್ವಜನಿಕ ಜೀವನದಲ್ಲಿ ಜನರ ಒಡನಾಟವಿಲ್ಲದೆ ಬದುಕಲು ಸಾಧ್ಯವೇ? ನಂದರನ್ನು ಒಮ್ಮೆಗೆ ನಂಬಲೇ—ಎಂದು ವಿಚಾರಕ್ಕೆ ಗುರಿ ಯಾಗಿದ್ದಾನೆ. ಇನ್ನೊಮ್ಮೆ 'ಪ್ರಭುದೇವ ಬರಲಿ' ಎಂದು ಯೋಚಿಸು ತ್ತಾನೆ. ಮಾತುಗಾರಿಕೆಯಲ್ಲಿ ಇಬ್ಬರೂ ಸರಿಸಮರು. ಅಭಯವೀಯು ವುದರಲ್ಲಿ ಇಬ್ಬರೂ ಪ್ರತಿಸ್ಪರ್ಧಿಗಳು. ಒಂದು ರೀತಿಯಿಂದ ನಂದರು -ಕಾರ್ಯಸಾಧಕರು. ಈತ ಮಾತ್ರ ಶುದ್ಧ ಟಾಕೀ. ಈಗ ಅವನು ಬರುವ ತನಕ ಕಾದಿರಬೇಕು. ಅವರಿಬ್ಬರನ್ನು ಸೇರಿಸಿಯೇ ಯೋಚನೆ ಮಾಡಿ ದರೇನು? ಹತ್ತು ಜನರನ್ನು ಸೇರಿಸಬೇಕು. ಸಹಾಯ ಹೆಚ್ಚಾಗಿ ಕೆಲಸ ಕೆಡುವಂತಿದೆಯೇ?"

ಆತನಿಗೆ ಊಟಮಾಡಲು ಕುಳಿತಾಗಲೂ ಅದೇ ಯೋಚನೆ. ಊಟಮಾಡಿದ ಮೇಲೆಯೂ ಅದೇನೇ ತಲೆಯಲ್ಲಿ. ಚಂದ್ರ ಸಮೀಪಕ್ಕೆ ಬಂದು "ಅಪ್ಪಾ, ಒಂದು ಚಂದವಾದ ಕಥೆಯನ್ನು ಹೇಳು; ನಿನಗೆ ಚಂದ

ಚಂದ ಕತೆ ಬರುತ್ತದೆಯಂತೆ" ಎಂದು ಕೇಳುತ್ತಲೇ ಇದ್ದಾನೆ. ಮಗುವಿನ ಪೀಡೆಯನ್ನು ಮರೆತು, ಮನಸ್ಸು ವಿಚಾರಮಗ್ನವಾಗಿದೆ. ಸತ್ಯ ಅದನ್ನು ಕಂಡು "ಚಂದ್ರ ಮಾತನಾಡಿಸುತ್ತಿರುವುದು ಕಾಣುವುದಿಲ್ಲವೇ? ಎಂಥ ಭಾರಿ ಯೋಚನೆಯಲ್ಲಿದ್ದೀರಿ ನೀವು" ಎಂದಳು. 'ಆಂ' ಎಂದು ಧ್ಯಾನಭಗ್ನನಾದನು ಆತ. ಶ್ಯಾಮ ಎದುರಿಗಿದ್ದ ಇದೆಲ್ಲವನ್ನೂ ನೋಡುತ್ತಿದ್ದ. ಅಣ್ಣನ ತಲೆಯಲ್ಲಿ ಯಾವದೋ ಹೆದ್ದುಂಬಿ ಓಡುತ್ತಲಿದೆ ಎಂದು ಆತನ ಯೋಚನೆ. "ಅಮ್ಮಾ, ಡಾಕ್ಟರರು ಬಂದು ಹೋದ ಮೇಲೆ ಏನೋ ಬಹಳ ಯೋಚನೆ ಹತ್ತಿದೆ ಅವರಿಗೆ" ಎಂದನು.

"ಈಗ ಬಂದವರು ಡಾಕ್ಟರರೇ? ಯಾಕೆ ಬಂದರು?"

"ನಂದ ಅಂದರೆ ಅವರೇ."

"ಅವರೇ ಅದು? ಈಗ ನೆನಪಾಯಿತು. ನಮ್ಮ ಮಗು ಸತ್ತದ್ದು ಅವರ ಆಸ್ಪತ್ರೆಯಲ್ಲಿ ಅಲ್ಲವೇ? ಏನು ಬಂದರು ಅವರು? ಅವರು ಮಾತನಾಡುವುದನ್ನು ಕಂಡರೆ, ವರ್ಷದ ಮಾತನ್ನೆಲ್ಲ ದಿವಸದೊಳಗೇ ಮುಗಿಸುವವರ ಹಾಗೆ ಕಂಡಿತು."

"ಕೇಳಿದಿರಾ ಸತ್ಯಮ್ಮನ ಮಾತನ್ನು? ಅಮ್ಮ, ಮಾತಿನಲ್ಲಿ ಪ್ರಭುದೇವರು, ಅವರೂ ಒಂದೇ ಜಾತಿಯವರು."

ಈಗ ಸಂಪೂರ್ಣ ಎಚ್ಚರದಿಂದ ರಾಧಾಕೃಷ್ಣ ಮಾತನಾಡಿದನು. "ಇಲ್ಲ ಶ್ಯಾಮಾ. ಇವರು ತೀರ ಹಳೆಯ ಗುರುತಿನವರು. ಹೈಸ್ಕೂಲಿನಲ್ಲಿ ನನ್ನ ಶಾಲೆಯಲ್ಲಿಯೇ ಓದಿದವರು. ಅಸಹಕಾರ ಚಳವಳಿಯಲ್ಲಿ ನಾವು ಸ್ವಲ್ಪ ದಿನ ಜತೆಗೂ ಇದ್ದೆವು. ಆಗ ಎಂದೂ ಇಷ್ಟು ಮಾತನಾಡಿದವರಲ್ಲ. ಈ ಸಾರಿ ಮಾತ್ರ, ಅವರ ಕೈಯಿಂದ ಒಮ್ಮೆ ತಪ್ಪಿದರೆ ಸಾಕು ಎನ್ನುವಷ್ಟಾಯಿತು."

"ಇಲ್ಲ, ಅವರು ಹೇಳಿದುದರಲ್ಲಿ ತಪ್ಪೇನಿದೆ? ಅವರಂಥವರಿಂದ ಸಹಾಯ ಸಿಕ್ಕಿದರೆ ಒಳ್ಳೆಯದೇ ಅಲ್ಲವೇ? ಯಾಕೆ ನೀವೊಬ್ಬರೇ ದಣಿದು, ತಲೆಯನ್ನು ಕೆಡಿಸಿಕೊಳ್ಳಬೇಕು" ಎಂದನು ಶ್ಯಾಮ.

"ಹಾಗಲ್ಲ ಶ್ಯಾಮ, ಪ್ರಭುದೇವನೊಡನೆಯೂ ಮಾತನಾಡಿಲ್ಲವೇ ನಾವು?"

"ಪ್ರಭುದೇವರೊಡನೆ ಮಾತನಾಡಿದರೇನು? ಇವರಿಗೆ ಇರು

ವಷ್ಟು ಜನ, ಧನ, ಬಲಗಳು ಅವರಿಗೆ ಇಲ್ಲ. ಅವರು ಹೆಚ್ಚೆಂದರೆ ಪತ್ರಿಕೆಗಳಲ್ಲಿ ನಿಮ್ಮ ವಿಷಯ ಬರೆದು, ಹೊಗಳಿ ಪ್ರಚಾರ ಮಾಡಬಹುದು. ಅದರಿಂದ ಏನಾದರೂ ಕಾಸು ಹುಟ್ಟೀತೇ?"

"ಹಾಗೆ ಹೇಳಬಾರದು. ನಾವು ಯಾರನ್ನಾದರೂ ಒಮ್ಮೆಗೇ ತಿಳಿಯುವುದಕ್ಕಾಂಟೇ? ಒಬ್ಬೊಬ್ಬರ ಸ್ವಭಾವ ಒಂದೊಂದು ರೀತಿ. ಏನೋ ಒಂದು ಯೋಚನೆ ಅವನಿಗೆ ಕಾಣಿಸಿರಬೇಕು. ಅದರಿಂದ ಅಷ್ಟು ಧೈರ್ಯ ತಾಳಿದ್ದಾನೆ. ಅದಕ್ಕಾಗಿ ಪ್ರವಾಸ ಕೈಕೊಂಡಿದ್ದಾನೆ. ಆಗಲಿ, ಹೋಗಲಿ, —ಆತ ಪ್ರಯತ್ನ ಮಾಡುತ್ತಿರುವುದು ನಿಜವಷ್ಟೇ?"

"ಹೋಗಿ ಏನಾಯಿತೋ? ಅಲ್ಲಿಂದ ಒಂದೇ ಒಂದು ಕಾಗದವನ್ನಾದರೂ ಬರೆಯಬೇಡವೇ?"

"ನಾನು ನಿನಗೆ ಹೇಳಲೇ ಇಲ್ಲವೇ? ಆತ ನಾಳೆಯೋ ಬರುತ್ತಾನಂತೆ. ಅವನಿಂದ ತಂತಿ ಬಂದಿದೆ. ಬಹಳ ಕಾಯಬೇಕಿಲ್ಲ. ಅವನ ಹತ್ತಿರ ಮಾತನಾಡದೆ, ಮೊದಲು ಇವರ ಹತ್ತಿರ ಮಾತನಾಡುವ ಧೈರ್ಯ ನನಗಿಲ್ಲ. ಇಬ್ಬರೂ ಸೇರಿ ಒಟ್ಟಾಗಿ ಕೆಲಸ ಮಾಡಿದ್ದರೆ ಚೆನ್ನಾಗಿತ್ತು."

"ಯಾರು ಪ್ರಭುದೇವ ಮತ್ತು ನಂದರೇ? ಅವರಿಗೆ ಇವರ ಹೆಸರನ್ನು ಕೇಳಿದರೆ ಆಗುವುದಿಲ್ಲ." ಮೊದಲು ಅವರು ಹಾಗಿರಲಿಲ್ಲ. ಇಬ್ಬರೂ ಅಶ್ವಿನಿ ದೇವತೆಗಳ ಹಾಗೆ ತಿರುಗುತ್ತಿದ್ದರು. ಏನಾಯಿತೋ ಅವರವರೊಳಗೆ — ನಂದರ ಹೆಸರನ್ನು ಕೇಳಿದರೆ ಈಗ ಬಯ್ಯುತ್ತಾರೆ."

"ಹೌದೌದು. ತನ್ನ ಪತ್ರಿಕೆಯಲ್ಲಿ ಇವರಿಗೆ ಆತ ಮಂಗಳಾರತಿ ಮಾಡದಿರುವುದೇ ಪುಣ್ಯ. ಪ್ರಭುದೇವನಿಗೆ ಸಿಟ್ಟು ಬಂತೆಂದರೆ-ತಡವೇ ಇಲ್ಲ. ಬಾಯಿ ತುಂಬ ಬೈದು ಬರೆದು ಬಿಡುತ್ತಾನೆ."

"ಅದರಿಂದಲೇ, ವ್ಯವಹಾರ ಕಠಿಣ. ಆದರೂ ಒಂದೊಂದು ಬಾರಿ ಒಬ್ಬೊಬ್ಬರನ್ನು ನಂಬಿಯೇ ಪರೀಕ್ಷಿಸಬೇಕಾಗುತ್ತದೆ. ಮೊದಲಿಗೇನೆ ಏನನ್ನೂ ತೀರ್ಮಾನಿಸಬಾರದು" ಎಂದನು ರಾಧಾಕೃಷ್ಣ.

"ಹೌದು" ಎಂದಳು ಸತ್ಯ. ದೇವರು ನಿಮಗೆ ಆಯುಷ್ಯ ದೊಡ್ಡದು ಕೊಟ್ಟಿದ್ದಾನೆ. ಒಬ್ಬೊಬ್ಬರನ್ನು ನಂಬಿ ಮೋಸ ಹೋಗುವುದರಲ್ಲಿಯೇ ಅದನ್ನು ಕಳೆಯುತ್ತ ಬಂದರಾಯಿತು. ಈ ತನಕ ನಂಬಿದ ದೇವರುಗಳು ಕಡಿಮೆಯೇ? ಇನ್ನೂ ನಾಲ್ಕು ಹೊಸಬರನ್ನು ಹುಡುಕಿದರಾಯಿತು.

ರಾಧಾಕೃಷ್ಣನಿಗೆ ಏಕೋ ನಗು ಬಂದಿತು. "ಹಾಗಿದ್ದರೆ ನೀನು ನನ್ನನ್ನು ನಂಬುತ್ತೀಯಾಕೆ? ಪ್ರಪಂಚವೆಲ್ಲ ಮೋಸ ಕೊಡುತ್ತದೆ—ಎಂದು ಖಂಡಿತ ತೀರ್ಮಾನಿಸಿ ಬಿಡುವ. ಆ ಲೆಕ್ಕದಲ್ಲಿ ಈ ಶ್ಯಾಮು ನಮ್ಮನ್ನು ನಂಬಿದ್ದು ಸಹ ತಪ್ಪೇ."

"ಶ್ಯಾಮು ನಿಮ್ಮನ್ನು ನಂಬಿದುದಕ್ಕೂ, ಇದಕ್ಕೂ ವ್ಯತ್ಯಾಸವಿಲ್ಲವೇ? ಶ್ಯಾಮನಂತೆ ಇವರೇನು? ಇವರ ಬರಿಯ ಮಾತುಗಳಿಗೆ ಮರುಳಾಗಿಯೇ ನಂಬಬೇಕು."

"ನಿನ್ನ ಪಾಲಿಗೆ ಮೊದಲು ನಾನೂ ಹಾಗೆಯೇ ಇದ್ದಿಲ್ಲವೇ? ಅಷ್ಟೂ ಇಲ್ಲ! ಗುರುತಾದ ಮೇಲೆಯೇ ನಿನ್ನ ಮಾತಿನ ಪ್ರಾರಂಭ."

"ನನಗೇನು! ನಾವು ಹೆಂಗಸರು ಹೇಳಿದ ಮಾತನ್ನು ನೀವು ಕೇಳುತ್ತೀರಾ?"

"ಇಲ್ಲ, ಈಗಲೇ ಕೇಳುತ್ತೇನೆ—ಏನು ಮಾಡಬೇಕೆಂದು ಹೇಳಿ ಬಿಡು."

"ಅದನ್ನು ನಾನು ಹೇಗೆ ಹೇಳಲಿ?"

"ನಿನ್ನದು ಬರಿಯ ಆಕ್ಷೇಪಣೆ ಮಾತ್ರ ಎಂದು ಕಾಣುತ್ತದೆ."

---

# ಹದಿನೇಳನೆಯ ಅಧ್ಯಾಯ

ತಂತಿಗೆ ಸಮವಾಗಿ, ಆ ಶುಕ್ರವಾರವೇ ಪ್ರಭುದೇವನ ಆಗಮನವಾಯಿತು. ರಾಧಾಕೃಷ್ಣ ಶ್ಯಾಮನನ್ನು ಕೂಡಿಕೊಂಡು, ರೈಲ್ವೆ ನಿಲ್ದಾಣಕ್ಕೆ ಹೋಗಿದ್ದ. ಛಾಪಖಾನೆಯ ಮಿತ್ರ ಸಾಣೆಕಲಸೂ ಆದಿನ ಸ್ವಾಗತಕ್ಕೆ ಬಂದಿದ್ದನು. ರೈಲು ಬರುತ್ತಲೇ ಪ್ರಭುವು Second Class ಕೊಟಡಿಯಿಂದಲೇ ಇಳಿದ. ಇವರು, ತಮ್ಮ ಗೆಳೆಯ ಮೂರನೆಯ ತರಗತಿಯಲ್ಲಿ, ತಮ್ಮಂತೆ ಬಡವಾಯಿಯ ಹಾಗೆ ಪ್ರವಾಸ ಮಾಡಿಯಾನು—ಎಂದು ಆಚೀಚೆ ಆ ಜನಸಂದಣಿಯಲ್ಲಿ ಹುಡುಕಾಡುತ್ತಿದ್ದರು. ಕೊನೆಗೆ ಬಂಡಿಯಿಂದ ಇಳಿದ ಪ್ರಭುದೇವನೇ, ಅವರನ್ನು ಗುರುತಿಸಿ ಕರೆಯಬೇಕಾಯಿತು. ಹೊಸ ಹೊಲ್ಡಾಲ್, ಹೊಸ ಸೂಟು ಕೇಸುಗಳನ್ನು ಇಳಿಸಿ-ಮಡಿ, ಮಡಿಕೆಗಳಿಷ್ಟೂ ಕುಂದದ ಅರಿವೆಗಳನ್ನು ತೊಟ್ಟು ಇಳಿದ ಆತನು, ಮೂವರನ್ನೂ ಹಸ್ತಲಾಘವದಿಂದ ಸ್ವೀಕರಿಸಿದನು. ಮೂವರೂ ಸ್ಟೇಶನಿನ ಹೊರಕ್ಕೆ ಬಂದರು. ಜಟ್ಕಾ ಬಂಡಿಯು ಬಂದು ನಿಂತಿತು. ಆತ ಬಂಡಿಯನ್ನೇರುತ್ತ "ಮಿ। ರಾಧಾಕೃಷ್ಣ, ನಾಳೆ ನೀವು ಬರುತ್ತೀರಾ? ನಾನೇ ಬರಲೇ ನಿಮ್ಮ ಮನೆಗೆ?" ಎಂದು ಕೇಳಿದನು.

"ಹೋದ ಕೆಲಸವೇನಾಯಿತೆಂದು ಹೇಳಲೇ ಇಲ್ಲವಲ್ಲ!"

"ಹೋದವನು ಯಾರೆಂದು ಗೊತ್ತಿಲ್ಲವೇ?" ಎಂದು ಪ್ರಭುದೇವನಕ್ಕನು. "ಈ ಹೊತ್ತೇನೆ ನಿಮ್ಮಲ್ಲಿಗೆ ಬರುತ್ತಿದ್ದೆ. ತುಂಬ ಆಯಾಸವಾಗಿದೆ. ನಾಳೆ ಮನೆಗೆ ಬರುತ್ತೇನೆ. ಮನೆಯಲ್ಲಿದ್ದು ಬಿಡಿ" ಎಂದು ಹೇಳಿ ಹೊರಟು ಹೋದನು. ಆತನ ಮಾತು, ಮುಗುಳು ನಗೆಗಳಿಂದ ಇವರಿಗೆ ಹರ್ಷವುಂಟಾಯಿತಾದರೂ, ಇನ್ನು ಹದಿನೈದು ಇಪ್ಪತ್ತು ತಾಸುಗಳ ತನಕ ನಿರೀಕ್ಷಣೆಯಲ್ಲೇ ಕುಳಿತಿರಬೇಕಾಯಿತು. "ಆಗಲಿ, ಈ ಎರಡು ತಿಂಗಳು ಕಾದವನಿಗೆ ಇದು ಹೆಚ್ಚೇ" ಎಂದು ತೋರಿ, ತಂತಮ್ಮ ಮನೆಗೆ ಹಿಂದಿರುಗಿದರು. ಇವರ ಬರವನ್ನು ಸತ್ಯಳು ಆತುರದಿಂದ ಕಾದಿದ್ದಳು. ಬರುತ್ತಲೇ "ಬಂದರೇ? ಏನು ಹೇಳಿದರು?" ಎಂದರೆ, "ನಾಳೆ ತಾವೇ ಇಲ್ಲಿಗೆ ಬಂದು ಹೇಳುತ್ತಾರಂತೆ" ಎಂದೆನ್ನಬೇಕಾಯಿತು.

ಪಾಪ ಆ ರಾತ್ರಿಯ ನಿದ್ದೆಯಲ್ಲಿ 'ಸಂಶಯಕಲ್ಲೋಲ ನಾಟಕವಾಯಿತು. ಬೆಳಗಾಗುತ್ತಲೇ ಮಳೆಯ ಪರವೆಯಿಲ್ಲದೆ, ನಿತ್ಯದಂತೆ ಗೋಶಾಲೆಯನ್ನು ಸುತ್ತಾಡಿ ಬಂದನು. ಮಳೆಗಾಲವಾಗಿದ್ದರೂ ಈ ಎಂಟು ದಿನಗಳಿಂದ ತೀರ ಸಣ್ಣ ಹನಿಯ ತುಂತುರು ಮಳೆ ಉದುರುತ್ತಿತ್ತು. ಕೆಲಸ, ಓಡಾಟಗಳಿಗೆ ತಡೆಯೂ ಅಲ್ಲ. ಬೇಸರವೂ ಇಲ್ಲ.

ಮರುದಿನ ಗೋಶಾಲೆಯ ಮುಂದೆ ನಿಂತು ಆಳುಗಳಿಗೆ ಏನೋ ಕೆಲಸ ಹೇಳುತ್ತಿದ್ದಾಗ ಮೇಲಿನ ಗುಡ್ಡದಿಂದ ಮೋಟರಿನ ಧ್ವನಿ ಹೊರಟಿತು. ರಾಧಾಕೃಷ್ಣನಿಗೆ ದಿಗಿಲು ಬಿತ್ತು. "ಇದು ನಮ್ಮ ನಂದರ ಸವಾರಿ. ಯಾಕೆ ಬಂದರು ಇಷ್ಟು ಬೇಗ? ಮುಂದಿನ ಆದಿತ್ಯವಾರ ಹೇಳಿಕಳುಹಿಸುತ್ತೇನೆ ಅಂದಿದ್ದರು. ಈಗಲೇ ಏನು? ಪ್ರಭುದೇವನೊಡನೆ ನನಗಾದ ಸಂಧಾನ ಅವರಿಗೆ ತಿಳಿದಿರಬಹುದೇ? ಅವನು ಊರಿಗೆ ಬಂದ ವರ್ತಮಾನ ಇವರಿಗೆ ಸಿಕ್ಕಿರಬಹುದೇ? ಅವರೊಳಗೆ ಇಂಥ ಸ್ಪರ್ಧೆ ಯಾಕೆ? ಇದೊಂದು ಹಣ ತರುವ ವ್ಯವಹಾರವಾದರೆ, ಈ ಆಸಕ್ತಿ ಸಹಜ. ಇದು ಹಣವನ್ನು ಕಳೆದುಕೊಳ್ಳುವ ಏರ್ಪಾಡು. ಅದಕ್ಕೆ ಏಕೆ ಪಂಥ? ಎಂದು ಯೋಚಿಸುತ್ತಿರುವಾಗ, ಮೇಲಿಂದ ಅವತರಿಸಿದ ಆಸಾಮಿ ಡಾ। ನಂದರಲ್ಲ,ಪ್ರಭುದೇವ ಎಂಬುದು ಸ್ಪಷ್ಟವಾಯಿತು. ಅಚ್ಚಬಿಳಿಯ ಉಡುಗೆ ಧರಿಸಿಕೊಂಡು ಬಾಡಿಗೆಯ ಮೋಟರಿನಲ್ಲಿ ಆತ ಬಂದು ಬಿಟ್ಟಿದ್ದಾನೆ.

ರಾಧಾಕೃಷ್ಣ ಸ್ವಾಗತಿಸುತ್ತ "ಮೋಟಾರಿನ ಹಾರ್ನ್ ಕೇಳಿ,ನಂದರು ಬಂದರು ಎಂದುತಿಳಿದೆ." "ಅವರು ಬರುತ್ತಾರೆಯೇ ಇಲ್ಲಿಗೆ?" ಎಂದು ನುಡಿದನು ಪ್ರಭುದೇವ ಸ್ವಲ್ಪ ಅಸಮಾಧಾನದಿಂದ.

"ಮೊನ್ನೆ ಬಂದಿದ್ದರು, ಮೊನ್ನೆ ಅಲ್ಲ ನಿನ್ನೆ. ಅವರ ಬಾಯಿಂದ ಒಮ್ಮೆ ತಪ್ಪಿಸಿಕೊಳ್ಳುವುದಕ್ಕೆ ನಿಮ್ಮನ್ನೇ ಇದಿರು ಕಾದಿದ್ದೆ. ಬಂದು ನಾಲ್ಕು ತಾಸು ಕುಳಿತುಕೊಂಡು—ಹಾಗೆ ಮಾಡುವ, ಹೀಗೆ ಮಾಡುವ, ಎಂದು ಹಟಹಿಡಿದರು. ನಾನು ಅವರಲ್ಲಿಗೆ ಬರಬೇಕೆಂದೂ ಆಮಂತ್ರಣವಾಗಿದೆ.ಮುಂದಿನ ಆದಿತ್ಯವಾರ ನಾನು ಹೋಗಬೇಕಾಗುತ್ತಿತ್ತು. ನೀವು ಬರುವ ತನಕ ನನಗೆ ಉಸಿರಿನಲ್ಲಿ ಉಸಿರಿರಲಿಲ್ಲ."

"ನಾನು ಕಳೆದ ವಾರವೇ ಬರಬೇಕಿತ್ತು. ಒಂದು ವಾರ ತಡವಾ

ಯಿತು. ಅಷ್ಟು ಭಾರಿಯ ಸರ್ಕಿಟು ಮಾಡಿದೆ. ಪಂಜಾಬು, ಯು. ಪಿ. ಬಿಹಾರ್ ಎಂದು ಉತ್ತರ ಹಿಂದುಸ್ಥಾನವನ್ನೆಲ್ಲ ಪುಡಿಮಾಡಿ ಬಂದೆ. ಅನಂತರ ಕಲ್ಕತ್ತ, ಮದರಾಸುಗಳು ಇದ್ದೇ ಇವೆಯಲ್ಲ. ಅದರಿಂದ ತಡವಾಯಿತು."

"ಅದಿರಲಿ, ಹೋದ ಕೆಲಸವೇನಾಯಿತು."

"ಯಾಕೆ ಅನುಮಾನ? Grand success! ಹೋದವ ನಾನಲ್ಲವೆ. ಸುಮ್ಮನೆ ಊರು ನೋಡುವುದಕ್ಕೆ ಹೋದದ್ದಲ್ಲ. ಅಲ್ಲಿನ ಕೆಲವು ಸಮಾಜವಾದಿ ಗೆಳೆಯರು, ಕೆಲವು ಆರ್ಯ ಸಮಾಜ ಮುಖಂಡರುಗಳ ಗುರುತು ನನಗಿದೆ. ಅವರನ್ನು ಕರೆದುಕೊಂಡು, ಹಲವರನ್ನು ಕಂಡೆ. ಒಳ್ಳೆಯ ಭರವಸೆ ದೊರೆಯಿತು. ಇನ್ನೇನಿಲ್ಲ—ದುಡ್ಡಿನ ಯೋಚನೆಯಿಲ್ಲದೆ ಕೆಲಸ ಮುಂದುವರಿಸಬಹುದು. ಕೆಲಸಕ್ಕಾಗಿ ನಮ್ಮೂರಿನ ಒಬ್ಬ ಮಹಾನುಭಾವನ ತಂಟೆಯೂ ಬೇಡ. ನಮ್ಮವರು ಸಹಾಯ ಮಾಡದೆ ಹೋದರೂ ಚಿಂತೆಯಿಲ್ಲ; ಕಲ್ಲು ಎಸೆಯದಿದ್ದರೆ ಸಾಕು."

"ಅವರೇನು ಕಲ್ಲು ಎಸೆಯುತ್ತಾರೆ? ಇದೇನು ವ್ಯಾಪಾರವೇ?"

"ಅದಕ್ಕಿಂತ ಹೆಚ್ಚು. ನಿಮಗೆ ತಿಳಿಯದು-ಈ ಊರಿನ ಹಣೆಯ ಬರಹ. ಇಲ್ಲಿ ಪರೋಪಕಾರದಲ್ಲಿಯೇ ಪಂದ್ಯಾಟ. ಇನ್ನೊಬ್ಬ ಸಾರ್ವಜನಿಕ ಕೆಲಸ ಮಾಡಿದರೆ ಹೊಟ್ಟೆಯುರಿ. ಡಾ। ನಂದರು ಅದಕ್ಕೇನೇ ನಿಮ್ಮನ್ನು ಕಾಣಬಂದಿರಬೇಕು. ನಿಮ್ಮನ್ನು ತಮ್ಮ ಹಂಗಿನಲ್ಲಿ ಎಳೆದು ಕೊಳ್ಳುವುದಕ್ಕೆ. ಕೊನೆಗೆ ಯಾವನಾದರೂ ದೊಡ್ಡ ಮನುಷ್ಯ ಬಂದಾಗ ಇದೆಲ್ಲ ಡಾ। ನಂದರ ಪರೋಪಕಾರ ಸಾಮ್ರಾಜ್ಯ-ಎಂದು ತೋರಿಸುವುದಕ್ಕೆ."

"ಅವರ ಮಾತಿನಲ್ಲಿ ಅಂಥ ಛಾಯೆಯಿತ್ತು ನಿಜ; ಆದರೆ ಕೆಲಸ ಆಗಬೇಕಾದುದು ಮುಖ್ಯವಾಗಿರುವಾಗ, ತಮ್ಮ ಹೆಸರನ್ನು ಮೆರೆಯಿಸುತ್ತಾರೆ ಎಂದುಕೊಂಡರೆ ಆದೀತೇ?"

"ಯಾಕೆ ಹಾಗಾಗಬೇಕು? ಯಾರಾದರೂ ದುಡಿಯುವುದು;—ಅವರ ಶ್ರಮದ ಕಿರೀಟವನ್ನು ಬೇರೊಬ್ಬ ಬೊಜ್ಜು ಬೆಳೆದವನು ಧರಿಸಿಕೊಳ್ಳುವುದೇ? ನೋಡಿ, ಒಂದುಸಾರಿ ಈ ಡಾಕ್ಟರನ ಜುಟ್ಟು ಹಿಡಿದು ಕುಣಿಸಲಿಕ್ಕಿದ್ದೇನೆ. ಅವನ ಗುಟ್ಟನ್ನೆಲ್ಲ ಬಹಿರಂಗ ಮಾಡುತ್ತೇನೆ."

“ಅವರ ಮೇಲಿನ ದೂರನ್ನು ಬಿಟ್ಟುಬಿಡಿ. ಅವರ ಪಾಡು ಅವರಿಗೆ. ಅಯೋಗ್ಯರೆಂದು ತಿಳಿದರೆ, ಸಮೀಪಕ್ಕೆ ಹೋಗದಿದ್ದರಾಯಿತು. ನಮಗೆ ಅವರ ನಿಷ್ಠುರ ಒಳ್ಳೆಯದಲ್ಲ.”

“ಅವರನ್ನು ಬಿಡುವುದಲ್ಲ;— ಊರಿನಲ್ಲಿಯೇ ಇರಗೊಡಿಸಬಾರದು. ನಮ್ಮೂರಲ್ಲಿ ಕಳೆದ ಸಾರಿ ಸತ್ಯಾಗ್ರಹದ ಚಳವಳಿ ಹಾಳು ಮಾಡಿದವರು ಯಾರು? ತಾವು ಹಿಂದುಳಿದು, ಬಡವರ ಮಕ್ಕಳನ್ನು ಲಾಠಿಗೆ ಒಡ್ಡಿ, ಜನಕ್ಕೆ ಕಾಂಗ್ರೆಸ್ಸಿನಲ್ಲೇ ವಿಶ್ವಾಸ ಕೆಡಿಸಿದವರು ಯಾರು? ಕೊನೆಗೆ ಸತ್ಯಾಗ್ರಹಿಗಳ ಕುಟುಂಬಕ್ಕೆ ಒಂದು ಕಾಸೂ ಹೋಗಲಿಲ್ಲ. ನಂದರು ದೊಡ್ಡವರಾದ ದಾರಿಯೇ ಹೀಗೆ.”

“ಕಾಂಗ್ರೆಸ್ಸು ಒಬ್ಬರ ಸಂಸ್ಥೆಯೇ? ಅಲ್ಲಿ ಹತ್ತು ಮಂದಿ ಕೆಲಸ ಮಾಡುವಾಗ ಒಬ್ಬಿಬ್ಬರಾದರೂ ಸಂಭಾವಿತರಿಲ್ಲವೇ?”

“ನಾನು ಹಾಗೆನ್ನಲಾರೆ. ಯೋಗ್ಯರೂ ಇದ್ದಾರೆ. ಅಂಥ ಕೆಲವರು ಜೈಲನ್ನೂ ಸೇರಿದರು. ಮಿಕ್ಕವರು ಇವರ ಬಾಯ ರಂಗಿಗೆ ಮರುಳಾದರು. ಅದರ ಲೆಕ್ಕಪತ್ರ ಸಹ ಕೊಡಲಿಲ್ಲವೆಂದರೆ ಏನು ಅವಸ್ಥೆ ನೋಡಿ”

“ಹಾಗೆ ಹಿಂದಿನ ಸಾರಿಯ, ನೆರೆ ಹಾವಳಿಯ ಸಮಯದಲ್ಲಿಯೂ ಮೋಸವಾಯಿತು. ಎಷ್ಟೋ ಜನ, ಸಹಾಯಧನ ಪಡೆಯ ಬೇಕಾದವರಿಗೆ, ಹಣ ಹೋಗಲೇ ಇಲ್ಲ. ಕಮಿಟಿಯಲ್ಲಿನೋ ರಶೀದಿ ಹಾಜರಾಯಿತು. ವಿಚಾರಿಸಿದಾಗ ಹಣ ಹಲವರಿಗೆ ಮುಟ್ಟಿಲ್ಲವೆಂದು ತಿಳಿಯಿತು. ಹಣ ಯಾರು ತಿಂದವರೆಂದು ಹೇಳಬೇಕು?”

ನಂದರ ಮೇಲಿನ ಆಕ್ರೋಶವನ್ನು ತಿರುಗಿಸಿಕೊಂಡು, ತಮ್ಮ ಕೆಲಸದ ವಿಚಾರವಾಗಿ ಮಾತನಾಡುವುದಕ್ಕೆ ರಾಧಾಕೃಷ್ಣನಿಗೆ ಸ್ವಲ್ಪ ಸಮಯ ಹಿಡಿಯಿತು. ಇನ್ನೂ ಇನ್ನೂ ಪ್ರಭುದೇವ ಅವರ ಮೇಲಿನ ಸಿಟ್ಟನ್ನು ಕಾರುತ್ತಲೇ ಇದ್ದಾನೆ. ಅದಕ್ಕೆ ರಾಧಾಕೃಷ್ಣನೆಂದ—

“ನಿಮ್ಮ ಕೆಂಪು ತಾರೆಯ ಸಂಚಿಕೆ ನೋಡಿದಿರಾ? ನನಗೆ ಬರೆಯುವುದಕ್ಕೆ, ಸಾಕು ಬೇಕಾಯಿತು. ರಾಜಕೀಯದ ಸಂಪರ್ಕವಿಲ್ಲದೆ ಬಹಳ ಕಾಲವಾಗಿತ್ತು. ಈಚೆಗೆ ಆ ವಿಷಯದಲ್ಲಿ ಸಾಕಷ್ಟು ಪುಸ್ತಕಗಳನ್ನೂ ಓದಿಲ್ಲ. ಪತ್ರಿಕೆಗಳನ್ನೂ ಅಭ್ಯಾಸಮಾಡಿಲ್ಲ. ಹೇಗೋ ಬರೆದೆ. ಇನ್ನು ಆ ಜವಾಬ್ದಾರಿ ನಿಮಗೆ.”

"ಇಲ್ಲ, ಇಲ್ಲ. ಅದಕ್ಕೆ ನಿಮ್ಮ ಸಹಾಯ ಬೇಕೇಬೇಕು. ನಿನ್ನೆ ರಾತ್ರಿ, ಆರೆಂಟು ಸಂಚಿಕೆಗಳಲ್ಲಿ ನೀವು ಬರೆದ ಲೇಖಗಳನ್ನು ಓದಿದೆ. ಬಹಳ ಚೆನ್ನಾಗಿವೆ ಲೇಖನಗಳು. ನಾನೂ ಬರೆದೇನು. ಐಡಿಯಾಗಳಿಗೆ ಕಡಿಮೆ ಇಲ್ಲ. ಭಾವಕ್ಕೂ ಬರಗಾಲವಿಲ್ಲ. ಆದರೆ ಬರೆಯಲು ಕುಳಿತರೆ, ಏನೋ ತಡೆದು ಹಿಡಿಯುತ್ತದೆ. ಅದೂ ಕನ್ನಡದಲ್ಲಿ ಬರೆಯುವುದೆಂದರೆ ನನಗೆ ಪ್ರಾಣ ಸಂಕಟ. ಇಂಗ್ಲಿಷಿನಲ್ಲಾದರೂ ನಾಲ್ಕು ಪುಟ ಗೀಚಿಯೇನು. ಕನ್ನಡ ಬರೆಯುತ್ತೇನೆಂದರೆ ಲೇಖನಿಯಿಂದ ಮಸಿಯೇ ಇಳಿಯುವುದಿಲ್ಲ."

"ನೀವು ಕನ್ನಡದಲ್ಲಿ ಚುನಾವಣೆಯ ಕಾಲದಲ್ಲಿ ಉಪನ್ಯಾಸ ಮಾಡಿದುದನ್ನು ಕೇಳಿದ್ದೇನೆ. ಅದ್ಭುತವಾಗಿ ಮಾತನಾಡುತ್ತೀರಿ."

"ಅದು ಬಿಡಿ. ಆವೇಶ ಬಂದಾಗ ಕನ್ನಡ, ಹಿಂದಿ, ಇಂಗ್ಲಿಷು ಸೇರಿಸಿಯೇ ಮಾತನಾಡುತ್ತೇನೆ. ಇದು ಹಾಗಲ್ಲ. ಬರಹದ ಮೂಲಕ ನಮ್ಮ ಜುಟ್ಟನ್ನು ಓದುಗರ ಕೈಯಲ್ಲಿ ಕೊಡಬೇಕಲ್ಲವೆ? ಯಾವನಾದರೊಬ್ಬ 'ಇದೇನು ಕನ್ನಡವಪ್ಪಾ' ಅಂದರೆ? ಅಂದರೆ-ಅಲ್ಲ. ಅಂದಿದ್ದಾರೆ ನನ್ನ ಸ್ನೇಹಿತರೇ."

ಅಷ್ಟು ಹೊತ್ತಿಗೆ ಗುಡ್ಡವನ್ನಿಳಿದು ಶ್ಯಾಮನೂ ಬಂದನು. ಪ್ರಭುವಿಗಾಗಿ ಅಂಗಡಿಯಿಂದ ಕಾಫಿ ಹಿಡಿದುಕೊಂಡು ಬಂದನು. ಅವರ ಮನೆಯಲ್ಲಿ ಇನ್ನೂ ಗಾಂಧೀ ಕಾಫಿ ರಾಜ್ಯವಾಳುತ್ತಿತ್ತು. ಕಾಫಿಯನ್ನು ಕಂಡವನೇ ಪ್ರಭುದೇವ, "ನೋಡಿ ಆ ದಿವಸ ಕಿರಿಪದವಿನಲ್ಲಿ ಕಾಫಿ ಕೊಡದೆ ನನ್ನನ್ನು ಸಾಯಿಸಿಬಿಟ್ಟಿರಿ. ಇನ್ನು ಅಲ್ಲಿಗೆ ಬರುವುದಿಲ್ಲವೆಂದು ಆಗಲೇ ಪ್ರತಿಜ್ಞೆ ಮಾಡಿದ್ದೆ. ಈ ವಿಷಯದಲ್ಲಿ ನೀವು ಸುಧಾರಿಸಬೇಕು. ಎಮ್ಮೆಯ ಹಾಲು ಧಾರಾಳವಾಗಿರುವಾಗ, ಮನೆಯಲ್ಲೇ ಒಳ್ಳೆಯ ಡಿಕಾಕ್ಷನ್ ಕಾಫಿ ತಯಾರಿಸಬೇಕು. ಮಿಲ್ಕ್ ಕಾಫಿ ತಯಾರಿಸಿದರೂ ಸರಿಯೇ — ನಾನು ಬಂದಾಗ ಮಾತ್ರ. ನೀವು ಕುಡಿಯದಿದ್ದರೂ ಚಿಂತೆಯಿಲ್ಲ" ಎಂದು ಕಾಫಿಯನ್ನು ಕುಡಿದ. ಅನಂತರ ಒಂದು ಗೋಲ್ಡ್ ಫ್ಲೇಕ್ ಸಿಗರೇಟನ್ನು ಹೊತ್ತಿಸಿ "ಈಗ ಮಾತನಾಡುವ — ನಮ್ಮ ಸಂಸ್ಥೆಯ ವಿಷಯವನ್ನು. ಮೊದಲು ಅದಕ್ಕೆ ಏನು ಹೆಸರು ಇರಿಸುವುದೆಂದು ಮಾಡಿದ್ದೀರಿ? ನಿಮ್ಮ ಹಳೆಯ ಕಾಯಿಲೆಗಳು ಬೇಡ—'ದಲಿತ'

ವಿದ್ಯಾಪೀಠ!' ಹಾಗೆ ದಲಿತರು ನಮ್ಮ ಸಮಾಜದಲ್ಲೇ ಇರಕೂಡದು!

"ಅಂದರೆ, ಪಂಚಮರೇ ಇರಬಾರದೆನ್ನುತ್ತೀರಾ?"

"ಜನ ಇರುತ್ತಾರೆ,ಇರಲಿ. 'ದಾಲಿತ್ಯ'ಮಾತ್ರ ನಮ್ಮಕಾರ್ಯದಲ್ಲಿ ಹೆಜ್ಜೆ ಹಾಕಬಾರದು. ಹೆಸರಿನಲ್ಲಿಯೂ ಇರಬಾರದು. ಒಂದೊಂದು ಹೊಸ ಜಾತಿಯನ್ನು ನಾವು ನಿರ್ಮಾಣಮಾಡುವುದೇ ಹಾಗೆ. ಅವರನ್ನು ಹಿಂದುಗಳೆಂದರೆ ಸಾಕು. ಹೋಗಲಿ ಆ ವಿಷಯ. ಶಾಲೆಗೆ ಇರಿಸುವ ಹೆಸರು ಬಹಳ ಚೆನ್ನಾಗಿರಬೇಕು."

"ಹೆಸರಿನ ವಿಚಾರ ಕೊನೆಗೆ ಮಾಡುವ- ಮೊದಲು ಅದರ ವಿವರವಾದ ರಚನೆಯನ್ನು ಹೇಳುತ್ತೇನೆ"-ಹೀಗೆಂದು ತಾನು ಬರೆದಿರಿಸಿದ ವಿವರವಾದ ಸಂಘಟನೆಯನ್ನು ಅವನ ಮುಂದಕ್ಕಿರಿಸಿದನು. ಅದನ್ನು ಡಾ। ನಂದರ ಮುಂದೆಯೂ ಹಾಕಿರಲಿಲ್ಲ. ಅದನ್ನು ವಿವರಿಸುತ್ತ "ಇಷ್ಟೆಲ್ಲ ಅನುಕೂಲತೆ—ಕೃಷಿ ವಿಭಾಗಕ್ಕೆ ಬೇಕು; ಇದು ಹಯನುಗಾರಿಕೆಗೆ; ಇದು ಬಣ್ಣಗಾರಿಕೆ, ನೆಯಿಗೆಗಳ ಬಗ್ಗೆ. ಇಷ್ಟೆಲ್ಲ ಅನುಕೂಲತೆ, ಕಮ್ಮಾರ ಸಾಲೆ, ಅರಗು, ತೊಗಲಿನ ಕೆಲಸಕ್ಕೆ. ಇವುಗಳಲ್ಲಿ ಹೆಚ್ಚಿನ ಯಾವ ಉದ್ಯೋಗವೂ ನಮ್ಮೂರಲ್ಲಿಲ್ಲ. ಶಿಕ್ಷಕರಿಗೂ ಪತ್ರ ಬರೆದು ಉತ್ತರ ತರಿಸಿಕೊಂಡಿದ್ದೇನೆ. ಈ ವರ್ಷ ತೀರ ಬಡತನವೆಂದರೂ ಐದು ಸಾವಿರ ರೂಪಾಯಿ ಬೇಕು. ಒಮ್ಮೆಗೇ ಹಣ ಸುರಿದು ಅಳಬಾರದು. ಕಟ್ಟಡಗಳನ್ನು ಚೆನ್ನಾದ ರೀತಿಯಲ್ಲಿ, ಮುಂದೆ ಮಾಡಿಕೊಂಡರಾಯಿತು. ತಿಂಗಳಿಗೆ ಐನೂರು ರೂಪಾಯಿ ಖರ್ಚು ಬಂದೀತು. ಇಪ್ಪತ್ತು ಹುಡುಗರಿಗೆ ಇನ್ನೂರು; ಉಪಾಧ್ಯಾಯರಿಗೆ ಮುನ್ನೂರು" ಎಂದು ವಿವರಿಸಿ ಹೇಳಿದನು.

"ಹೂ, ಇಷ್ಟೇಯೆ ನಿಮ್ಮ ಯೋಜನೆ?" ಎಂದು ಪ್ರಭುದೇವ ತನ್ನ ವೆಲೆಟ್ ಬಿಡಿಸಿ ಒಂದು ಭಾವಚಿತ್ರವನ್ನು ಹೊರತೆಗೆದ. "ನೋಡಿ, ಇವರು ಯು.ಪಿ.ಯವರು, ಧರಮ್‌ಸಿಂಗ್ ಎಂಬ ಭಾರೀ ಶ್ರೀಮಂತರು; ನೂರಾರು ಧರ್ಮಸಂಸ್ಥೆಗಳನ್ನು ನಡೆಯಿಸುತ್ತಾರೆ. ಇದು ಅವರ ಕಾಗದ, ಫೋಟೋಗ್ರಾಫ್. ಅವರೊಡನೆ ಒಂದು ಲಕ್ಷ ಬೇಕೆಂದಿದ್ದೇನೆ. ಕೊಡುತ್ತೇನೆ ಎಂದಿದ್ದಾರೆ. ಒಬ್ಬರನ್ನೇ ನಂಬಬಾರದು ಎಂದು ನಾಲ್ಕು ಮಂದಿಯನ್ನು ಕೇಳಿದ್ದೇನೆ. ಹಣಕ್ಕೆ ಯಾವ ತೊಂದರೆಯೂ

ಇಲ್ಲ. ಅವರನ್ನು ಕಂಡು ಆಮೇಲೆ ದಯಾಲ್ ಬಾಗ್, ಆಲಿಘರ್, ದಯಾಳ್ ಜಯಪುರ ಮೊದಲಾದ ಊರುಗಳನ್ನು ಸಂಚರಿಸಿ ಬಂದೆ. ಬಾಗ್ ಮಾದರಿಯಲ್ಲಿ ನಮ್ಮ ಉದ್ಯೋಗ ಶಾಲೆಯನ್ನು ನಡೆಯಿಸಬೇಕು. ಧನಮಲ್ಲರನ್ನು ಮುಖ್ಯ ಆಶ್ರಯದಾತರನ್ನಾಗಿ ಮಾಡಿಕೊಂಡು, ಹೆಸರಿಗೆ ಮಾತ್ರ ನಾಲ್ಕಾರು ಜನರ ಕಮಿಟಿಯನ್ನು ಮಾಡಿಕೊಳ್ಳುವ. ಶಾಲೆಯ ವಿಭಾಗಕ್ಕೆ ನೀವು ಸರ್ವಾಧಿಕಾರಿಗಳು; ಹೊರಗಿನ ಸಂಬಂಧಕ್ಕೆ ನಾನು. ಹಣದ ಯೋಚನೆ ನನಗಿರಲಿ. ಆ ಭಾಗದಲ್ಲಿ ನಿಮಗೆ ಯೋಚನೆ ಬರಬಾರದು. 'ಎಲ್ಲಿಂದ ತಂದಿರಿ! ಹೇಗೆ ತಂದಿರಿ?' ಎಂಬುದನ್ನು ಮಾತ್ರ ಕೇಳಕೂಡದು. ಈಗ ಹೇಳಿ: ಶಾಲೆಯನ್ನು ಎಂದು ತೆರೆಯಲು ಸಾಧ್ಯವಾದೀತು?"

"ಹಣ ಒದಗಿದ ಮರುದಿನವೇ."

"ಅಬ್ಬಾ, ಎಂಥ ಜನ ನೀವು! ಹಣದ್ದೇ ಹೆದರಿಕೆ ನಿಮಗೆ" ಹೀಗೆಂದು ಸಾವಿರದ ಐದು ನೋಟುಗಳನ್ನು ಅವನ ಮುಂದಿರಿಸಿದರು. "ಇದಲ್ಲದೆ ಹತ್ತು ಸಾವಿರ ಬೇಂಕ್ ಎಕೌಂಟಿಗೆ ಸೇರಿಸಿದ್ದೇನೆ. ಅದರ ಇಮ್ಮಡಿ ವಾಗ್ದಾನವಾಗಿದೆ. ಶಾಲೆಯನ್ನು ನೀವು ಎಷ್ಟು ಬೇಗ ತೊಡಗುತ್ತೀರೋ ಅಷ್ಟು ಬೇಗ ತೊಡಗಿರಿ. ಈ ಜೋಪಡಿಗಳನ್ನೆಲ್ಲ ಕಿತ್ತು ಬಿಡಬೇಕು ನಾಳೆಯೇ. ನೋಡಿ, ಅದರ ನಕ್ಷೆ. ಮುಖ್ಯ ಕಟ್ಟಡದ ಚಿತ್ರ ಇದು" ಹೀಗೆಂದು ಕಟ್ಟಡ ಒಂದರ ಫೋಟೋ ಒಂದನ್ನು ಕೊಟ್ಟು "ಮೂರು ತಿಂಗಳಲ್ಲಿ ಕಂಟ್ರಾಕ್ಟಿಗೆ ಕೊಟ್ಟು ಇಂಥದೇ ಕಟ್ಟಡವನ್ನು ಮಾಡಿಸಿ ಕೊಡುವ ಭಾರ ನನ್ನದು" ಎಂದನು.

"ಇದು ಎಲ್ಲಿನ ಚಿತ್ರ? ಇದು ಯಾವುದೋ ಒಂದು ಶಾಲೆಯದೇ ಇರಬೇಕು. ಇಂಥದನ್ನು ಕಟ್ಟಿಸುವುದಕ್ಕೆ ಎಷ್ಟೆಲ್ಲ ಹಣ ಬೇಕೋ."

"ಅದೆಲ್ಲ ನಿಮಗೆ ಯಾಕೆ? ಕಟ್ಟಡ ಕಟ್ಟಿಸಿ ಕೊಟ್ಟರಾಯಿತಲ್ಲ?"

"ಇದೆಲ್ಲ ನನಗೆ ಕನಸಿನಂತೆ ಕಾಣುತ್ತದೆ."

"ಹಾಗಿದ್ದರೆ ನಿಮಗೆ ಕೊಟ್ಟ ನೋಟುಗಳು ರಕಾರಿಯೋ ಎಂದು ಖಾತ್ರಿ ಮಾಡಿಕೊಳ್ಳಿ."

"ಹಾಗಲ್ಲ ಪ್ರಭುದೇವ; ನನ್ನ ಆಯುಷ್ಯದಲ್ಲಿಯೆ ಹೀಗೆ ಐದು ಸಾವಿರ ರೂಪಾಯಿಗಳನ್ನು ಕೈಯಲ್ಲಿ ಹಿಡಿದವನಲ್ಲ. ಅಷ್ಟು ದೂರ

ದವರು ಯಾರನ್ನು ನಂಬಿ ಇಷ್ಟು ಹಣ ಸುರಿಯುತ್ತಾರೆಂದು ತಿಳಿಯು ದಾಗಿದೆ. ಅವರಿಂದ ಬೆರಗುಗೊಂಡಿದ್ದೇನೆ."

"ನಿಮಗಾದಂತೆ ನನಗೂ ಆಗಿತ್ತು. ಅಲ್ಲಿಯ ಜನ ನಮ್ಮೂರಿನವರ ಹಾಗಲ್ಲ. ಎಣಿಸಿ ಎಣಿಸಿ ಕೊಡುವವರಲ್ಲ. ನಾನು ಸರಿಯಾದ ಪರಿಚಯ ಪತ್ರಗಳನ್ನು ಹಿಡಿದುಕೊಂಡು ಹೋಗಿದ್ದೆ. ಲಲುಬೇನ್‌ರ ಕಾಗದ ತೆಗೆದುಕೊಂಡು ಹೋದುದರಿಂದ ಇಷ್ಟೆಲ್ಲ ಕೆಲಸವಾಯಿತು. ಇನ್ನು ನಿಮ್ಮ ಕೆಲಸ ಕೂಡಲೇ ಪ್ರಾರಂಭವಾಗಬೇಕು. ಈ ವಾರದಲ್ಲೇ ಕಟ್ಟಡದ ಕೆಲಸವನ್ನು ತೊಡಗಿಸಬೇಕು. ಹಣ ಕೇಳಿದಾಗ ಸುರಿಯುವ ಕೆಲಸ ನನ್ನದು."

"ಅಷ್ಟಿದ್ದರೆ ಏನೂ ಮಾಡಿಯೇನು."

"ಆದರೆ ನಾಳಿನ ದಿವಸ ಹಣ ಎಲ್ಲಿಂದ ತಂದಿರಿ? ಏನು ಮಾಡಿದಿರಿ? ಎಂದು ಕೇಳಬಾರದು. ಧನಮಲ್‌ರ ಸುದ್ದಿಯನ್ನು ಎತ್ತಬಾರದು. ಮಂಗಳೂರಿನವರ ಕಿವಿಗೆ ಆ ಸುದ್ದಿ ಬಿದ್ದರೆ, ಅಸೂಯೆಯಿಂದ ಅಲ್ಲಿಗೆ ಹೋದಾರು; ಅವರನ್ನು ಕಾಡಿ ಕೊಂದಾರು. ನಾಳೆ ನಮ್ಮಮೇಲೆ ಚಾಡಿ ಹೇಳಿ ನಮ್ಮ ಕೆಲಸಕ್ಕೆ ಕಲ್ಲು ಹಾಕಿಸಿಯಾರು. ಆ ವಿಷಯದಲ್ಲಿ ಯಾರು ಏನನ್ನೇ ಕೇಳಿದರೂ 'ನನಗೆ ಗೊತ್ತಿಲ್ಲ' ಅಂದುಬಿಡಿ."

"ನನಗೆ ಅದನ್ನು ತಿಳಿದೂ ಆಗಬೇಕೇನಿಲ್ಲ. ಹಣ ಯೋಚನೆಯಿಲ್ಲದೆ ಕೈಗೆ ಬರುವಾಗ, ನಾನು ನಿಮಗೆ ಋಣಿಯಾಗಬೇಕು, ವಿನಾ ಕೆಲಸಕ್ಕೆ ವಿಘ್ನ ಮಾಡಿಕೊಂಡೇನೇ?"

"ಅಂತೂ ಪ್ರಭುವಿನ ಬಡಾಯಿ ಬರಿದಾಗಲಿಲ್ಲ" ಎಂದು ಆತ ಹರ್ಷಗೊಂಡನು. ಶ್ಯಾಮನಂತೂ ಆ ದಿನ ನೆಲದಮೇಲೆಯೇ ಇರಲಿಲ್ಲ. "ಅಣ್ಣಾ, ಆಚೆ ನಮ್ಮ ಗುಡ್ಡದಲ್ಲಿ ಕಲ್ಲಿನ ಅಣೆ ಇದೆ. ಬೇಕೆನ್ನುವಷ್ಟು ಕಲ್ಲು ಕಡಿಸಿ ಭವ್ಯ ಕಟ್ಟಡ ಮಾಡಬಹುದು. ಪ್ರಭುದೇವ ದೊರಕಿದ್ದೆಂಬುದು ಒಂದು ನಿಧಿ ಸಿಕ್ಕಿದ ಹಾಗಾಯಿತು. ಅವರಿಗೆ ಅಷ್ಟೆಲ್ಲ ಸ್ನೇಹಿತರಿದ್ದಾರೆ; ಇದು ಸಾಧ್ಯ ಎಂಬುವನ್ನು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ." ಎಂದನು. ರಾಧಾಕೃಷ್ಣನಿಗೆ ಬೆಳಿಗ್ಗೆ ಬಡಿದ ದಂಗು ಸಂಜೆಯಾದರೂ ಇಳಿಯಲಿಲ್ಲ. ರಾತ್ರಿ, ಉಕ್ಕುವ ಸಂತೋಷದಲ್ಲಿ ನಿದ್ದೆಯೂ ಹತ್ತಲಿಲ್ಲ. ಬೆಳಗಾಗುವಾಗ ಪ್ರಭುದೇವ ತಿರುಗಿ ಮೋಟರಿನಲ್ಲಿಯೇ ಆಗ

ವಿಸಿದನು. ಅವನ ಜತೆಗೆ ಒಬ್ಬ ಕಂಟ್ರಾಕ್ಟರನೂ ಇದ್ದ. ಮನೆಯ ಜಗುಲಿಯಲ್ಲಿ ಕುಳಿತು, ನಕ್ಷೆ ತೋರಿಸಿ "ನಾಗಪ್ಪ ಮೇಸ್ತ್ರಿಗಳೇ, ನಿಮ್ಮ ಎಸ್ಟಿಮೇಟ್ ಹೇಳಿ. ಇದು ಮುಖ್ಯ ಕಟ್ಟಡ ಮತ್ತು ಉಪ ಕಟ್ಟಡಗಳ ನಕಾಸೆ. ಬರಿಯ ಮೂರು ತಿಂಗಳ ಅವಧಿ ಮಾತ್ರ ನಿಮಗೆ" ಎಂದನು.

ಅವರು ಒಂದು ಘಂಟೆಕಾಲ ಗುಣಿಸಿ ಲೆಕ್ಕ ಮಾಡಿದರು 'ಮರ ಗೆಲಸಕ್ಕೆ ಇಷ್ಟಾಗುತ್ತದೆ, ಗೋಡೆಗೆ ಹೀಗೆ ದರ, ಸಾರಣೆಗೆ ಹೀಗೆ, ಘನ ಅಡಿ ಲೆಕ್ಕದಲ್ಲಿ ಹೀಗಾಗುತ್ತದೆ. ಈ ದೊಡ್ಡ ಕಟ್ಟಡಕ್ಕೆ ಹತ್ತು ಸಾವಿರ ರೂಪಾಯಿಗಳ ಅಂದಾಜು ಹಿಡಿಯಬಹುದು. ಸಣ್ಣವುಗಳಿಗೆ ಎಂಟು ಸಾವಿರ' ಎಂದರು.

ಪ್ರಭುದೇವ "ಇವೆಲ್ಲವು ಸಾಮಾನ್ಯ ಕಟ್ಟಡಗಳೆಂದೇ ತಿಳಿಯಿರಿ. ಈ ಶಾಲೆಯನ್ನು ಬೆಳೆಯಿಸಿಕೊಂಡು ಹೋಗಿ, ಕಾಲೇಜನ್ನಾಗಿ ಮಾಡಿ ಬಿಡಬೇಕು. ಆಗ ಕಟ್ಟಡಕ್ಕೆ ಐವತ್ತು ಸಾವಿರ ರೂಪಾಯಿಗಳಾದರೂ ಬೇಕು" ಎಂದು ಬಡಾಯಿಹಾರಿಸಿದನು. ಕುಳಿತಲ್ಲಿಯೇ ನಾಗಪ್ಪ ಮೇಸ್ತ್ರಿಗಳಿಗೂ ಅವರಿಗೂ ಕರಾರು ನಡೆದು, ಒಕ್ಕಣೆ ಬರೆದೂ ಆಯಿತು. ಮೂರು ಸಾವಿರ ರೂಪಾಯಿಗಳನ್ನು ನಗದಿ ಕೊಟ್ಟು "ನಾಳಿನಿಂದಲೇ ಕೆಲಸಕ್ಕೆ ಪ್ರಾರಂಭ" ಎಂದು ಆಜ್ಞೆಯಾಯಿತು.

"ಸ್ವಾಮಿ, ನಾಳೆ ಕೆಲಸ ತೊಡಗುವುದು ಬೇಡ; ಭರಣಿ ಕೃತ್ತಿಕೆ. ನಾನು ಯಾವ ಕೆಲಸ ಮಾಡುವದಾದರೂ ದಿನ ನೋಡಿ ಮಾಡುವ ವನು. ನೂರು ಆಳುಗಳನ್ನು ಹಾಕಿ, ಒಂದು ಡಮ್ಮಿಗೆ ಕೆಲಸ ಮುಗಿಸಿ ಕೊಡುತ್ತೇನೆ. ವಾಯಿದೆಗೆ ಬಿಟ್ಟು ಕೊಡುವ ಭಾರ ನನ್ನದು" ಎಂದನು ನಾಗಪ್ಪ ಮೇಸ್ತ್ರಿ. ರಾಧಾಕೃಷ್ಣ ಆ ಕರಾರಿಗೆ ಸಾಕ್ಷಿ ಹಾಕಿದನು. ಅನಂತರ ಮೇಸ್ತ್ರಿಯು ಅಲ್ಲಿ ಉಪಹಾರ ಮಾಡಿ ಹೊರಟುಹೋದನು. ಅನಂತರ ಪ್ರಭುದೇವ ಇನ್ನೊಂದು ಕರಾರನ್ನು ಹೊರಗೆ ತೆಗೆದ. " 'ಧರಮ್‌ಸಿಂಗ್ ಪ್ರಭುದೇವ ಔದ್ಯೋಗಿಕ ಶಾಲಾ' ಎಂದು ಸಂಸ್ಥೆಗೆ ನಾಮಕರಣ ಮಾಡಿದ್ದೇನೆ. ನಿಮ್ಮ ಆಕ್ಷೇಪವಿಲ್ಲವಷ್ಟೇ?" ಎಂದು ಕೇಳಿದ. ರಾಧಾ ಕೃಷ್ಣ ಅದಕ್ಕೆ ಉತ್ತರವಾಗಿ "ಯಾವ ಹೆಸರಿಗೂ ನನ್ನ ಸಮ್ಮತವೇ. ನನಗೆ ಹೆಸರು ಮುಖ್ಯವಲ್ಲ; ಕೆಲಸ ಆಗಬೇಕಾದುದು ಮುಖ್ಯ" ಎಂದು ಸಮ್ಮತಿಸಿದನು. ಮುಂದೆ ತಾನು ಬರೆದು ತಂದ ಕರಾರು ಪತ್ರವನ್ನು

ಓದಿಹೇಳಿ, ಈ ಮೊದಲೇ ಚರ್ಚಿಸಿದ ನಿಯಮಗಳನ್ನು ಕುರಿತು ಬರೆದಿದ್ದ ಕರಾರು ಪತ್ರಕ್ಕೆ, ಅವನಿಂದ ಸಹಿ ಹಾಕಿಸಿಕೊಂಡನು. "ಸಾಕ್ಷಿಗೆ ಯಾರನ್ನಾದರೂ ಹಾಕಿಕೊಳ್ಳುವ" ಎಂದನು. ರಾಧಾಕೃಷ್ಣನ ಪಾಲಿಗೆ ಅದೆಲ್ಲ ಅಲ್ಲಾವುದ್ದೀನನ ದೀಪದ ಕನಸಾಗಿ ಕಂಡಿತು. ಪ್ರಭುವೂ ಹಿಗ್ಗಿನಿಂದ "ಇನ್ನು ಬೇಕಾದರೆ ನೀವು ನಂದರಲ್ಲಿಗೆ ಹೋಗಿ, ಹೀಗೆ ಹೀಗೆಲ್ಲ ಮಾಡಿದ್ದೇನೆ--ಅನ್ನಿ" ಎಂದನು.

"ಆ ಅಪನಂಬಿಕೆಯಿಂದ ನನ್ನ ಸಹಿ ಹಾಕಿಕೊಂಡಿರಾ? ನನ್ನ ಮಾತು ಸಾಲದೇ?"

"ಹಾಗಲ್ಲ. ಅವರ ವಿಷಯ ಯಾವ ಹೆಸರಿಕೆಯೂ ನನಗಿಲ್ಲ. ಅವರ ಹಂಗು ಎಂದೇ ತೊರೆದಿದ್ದೇನೆ. ನನ್ನ ವಿಷಯವಿಷ್ಟೆ! ಜೇರಿಯವರ ಹಣವನ್ನು ತಂದು ನಾವು ಸುರಿಯುವಾಗ, ಅವರ ಧೈರ್ಯಕ್ಕೆ ಸಮನಾದ ಕಾಗದ ಪತ್ರವಾದರೂ ಬೇಕು. ನಾವು ಯಾವ ಲೌಕಿಕಕ್ಕೆ ಹೋಗುವುದಾದರೂ ಸ್ಪಷ್ಟವಾದ ತಿಳುವಳಿಕೆ ಮೊದಲಿಂದಲೇ ಇರಬೇಕು."

"ಆ ಮಾತು ಸರಿಯಾದದ್ದೇ. ಇಂದು ಆದಿತ್ಯವಾರವಲ್ಲವೇ? ನಂದರ ಕಾರು ಬಂದರೂ ಬಂದೀತು. ನಾನು ನಿಮ್ಮೊಡನೆ ಸೇರಿದ್ದಕ್ಕೆ ಅವರಿಗೆ ಸಿಟ್ಟು ಬರುವುದಕ್ಕೂ ಸಾಕು. ಅವರ ಅನುಭವವು ನನಗೆ ಸಾಕಷ್ಟು ಇದೆ. ಹಳೆಯ ಸ್ನೇಹಿತರಲ್ಲವೇ!"

"ಹೋ, ಅದನ್ನೆಲ್ಲ ಶ್ಯಾಮ ಹೇಳಿದ್ದಾನೆ ನನಗೆ. ಎರಡು ವರ್ಷದಿಂದ ನಿಮ್ಮ ಹೆಸರನ್ನು ಮೇಲಕ್ಕೆ ತರಬೇಕೆಂಬ ಹಂಬಲ ನನಗಿತ್ತು. ನಿಮ್ಮಂಥವರಿಂದ ನಮ್ಮ ಊರು ಲಾಭ ಪಡೆಯಬೇಕು ಎಂಬ ಆಸೆ. ಆದರೆ ನಾನೂ ನಿಮ್ಮಂತೆ ಬರಿಗೈಯವನೇ. ಈಗ ಕೇವಲ ದೈವ ಸಹಾಯದಿಂದ, ನನ್ನ ಆಸೆ ಕೈಗೂಡಿತು. ನಿಮ್ಮ ಆಸೆಯೂ ಕೂಡಿದ ಹಾಗೆ" ಎಂದು ನಗುತ್ತ ಹೊರಬಿದ್ದನು. ರಾಧಾ, ಶ್ಯಾಮರಿಬ್ಬರೂ ಗುಡ್ಡದ ತನಕ ಹೋದರು. ಪ್ರಭು ಕಾರಿನಲ್ಲಿ ಕುಳಿತುಕೊಂಡನು. ರಾಧಾಕೃಷ್ಣ "ಪ್ರತಿ ಸಾರಿ ಬರುವುದಕ್ಕೆ ಕಾರಿಗೆ ಹಣ ವ್ಯಯಮಾಡಬೇಡಿ. ನಾವೇ ಅಲ್ಲಿಗೆ ಬರುತ್ತೇವೆ" ಎಂದನು. "No, No, ಇಲ್ಲಿಯ ಕೆಲಸಗಳೆಲ್ಲವು ಇಲ್ಲಿಯೇ ಆಗಬೇಕು. ನಮ್ಮ ಆಫೀಸಿನಲ್ಲಿ ಪತ್ರಿಕೆಯ ಕೆಲಸ ಮಾತ್ರ. ಈ ವಿಚಾರದ ಸುದ್ದಿ ಬರಕೂಡದು. ಅಲ್ಲಿ ಪತ್ರಿಕೆಯ ಕೆಲಸ."

“ಸುಮ್ಮನೆ ಮೋಟಾರಿಗೆ ಹಣವ್ಯಯಿಸಬೇಕೇಕೆಂದು ಹೇಳಿದೆ.”

“ಅದೇನು ವಿಶೇಷ. ನಾಳೆ ನನಗೂ ಒಂದು ಕಾರು ಬಂದೀತು. ಕಾರ್ ಎಂದರೆ ಈ ಬೋಜುವಾ ಜನಗಳ ಸ್ವಾಯುತ್ತವೇ! ಇರಲಿ, ಕೆಲಸ ಮಾಡುವ ದಿವಸ ಯೋಗ್ಯ ಭಟ್ಟರನ್ನು ಕರೆಯಿಸಿ, ಹೋಮಗೀಮ ಮಾಡಿಸಿ ಕೆಲಸ ತೊಡಗಿಸಬೇಕು.”

“ನೀವು ಅವನ್ನೆಲ್ಲ ನಂಬುತ್ತೀರಾ?”

“ಏನು, ನಾನು ಸಮತಾವಾದಿ ಎಂದ ಮಾತ್ರಕ್ಕೆ ಹಿಂದೂ ಸಂಸ್ಕೃತಿಗೇ ಎಳ್ಳು ನೀರು ಕೊಟ್ಟಿದ್ದೇನೆಂದು ತಿಳಿಯುತ್ತೀರಾ? ನನಗೆ ಜಾತಕದಲ್ಲಿ ತುಂಬ ವಿಶ್ವಾಸ. ಒಬ್ಬ ಜೋಯಿಸರು, ನಾನು ಹೊರಡುವಾಗ ಗಳಿಗೆ ನೋಡಿ ಹೇಳಿದ್ದರು, ನನ್ನ ಜಾತಕ ನೋಡಿ ಹೇಳಿದ್ದರು. ಅವರ ಹೇಳಿಕೆಯಂತೆ. ಈ ಬಾರಿ, ಪ್ರತಿಯೊಂದು ಕೆಲಸವೂ ಯಶಸ್ವಿಯಾಗಿ ನಡೆಯಿತು. ಒಳ್ಳೆಯ ಮುಹೂರ್ತ ನೋಡಬೇಕೆನ್ನುವುದು ಇಷ್ಟಕ್ಕೆ- ಅದೊಂದು ಉದಾಸೀನತೆಯಿಂದ ಕೆಲಸ ಕೆಡಬಾರದೆಂದು. ಶಂಖುಸ್ಥಾಪನೆಯ ಕೆಲಸವನ್ನು ನಾವೇ ಮಾಡುವ. ಅದಕ್ಕೆ ಯಾವ ಮಹನೀಯರೂ ಬೇಡ. ಶಾಲೆಯ ಅನಾವರಣಕ್ಕೆ ಸಾರ್ವಜನಿಕರಿಗೆ ಆಮಂತ್ರಣ; ಬಡವರಿಗೆ ಒಂದು ಔತಣ ಇಷ್ಟು ಮಾಡಿಸಬೇಕು. ನಾವು ನಮ್ಮ ಊರಿನ ಶ್ರೀಮಂತರನ್ನು ಹರದಾರಿ ದೂರದಲ್ಲಿ ನಿಲ್ಲಿಸಬೇಕು.” ಎಂದು ನುಡಿದು ಅದೃಶ್ಯನಾದನು.

ಮುಂದಿನ ಆ ಮೂರು ತಿಂಗಳಕಾಲವೆಂದರೆ ಸಂಪೂರ್ಣ ಕನಸಿನ ರಾಜ್ಯವಾಗಿತ್ತು. ದಿನ ರಾತ್ರಿ ಕಟ್ಟಡದ ಕೆಲಸ ನಡೆಯಿತು. ಪ್ರಭುದೇವ ಆಗಾಗ ಬಂದು ಮೇಲುತನಿಖಿ ನೋಡುತ್ತಿದ್ದ. ಹಿಂದು ಮುಂದೆನ್ನದೆ ಹಣ ವ್ಯಯಿಸುತ್ತಿದ್ದ. ಶಿಕ್ಷಣ ಸಲಕರಣೆ, ಉಪಾಧ್ಯಾಯರುಗಳ ವಿಚಾರವಾಗಿ ರಾಧಾಕೃಷ್ಣನೊಡನೆ ತರ್ಕ ನಡೆಯಿಸುತ್ತಿದ್ದ. ಮನೆಯವರೆಲ್ಲರಿಗೂ ‘ಕೊನಗೂ ಇಂಥದೊಂದು ಕೆಲಸ ಸಾಧ್ಯವಾಯಿತಲ್ಲ’ ಎಂಬ ಹಿಗ್ಗೇ ಹಿಗ್ಗು. ರಾಧಾಕೃಷ್ಣಗೆ ಎಲ್ಲಿಲ್ಲದ ವಿಶ್ವಾಸವು ಅದೃಷ್ಟ ದೇವತೆಯ ವಿಷಯದಲ್ಲಿ ಈಗ ಉಂಟಾಗುವಂತಾಯಿತು.

ಈ ಎಲ್ಲ ಸಂತೋಷದ ವೇಳೆ, ಒಂದೇ ಒಂದು ಅತೃಪ್ತಿಯನ್ನು ತರುವ ಕೆಲಸವಾಯಿತು. ಅದು ತೀರ ಅನಿವಾರ್ಯವಾಗಿತ್ತು. ಕೆಲಸ

ತೊಡಗಿದೆ ಎಂಟು ಹತ್ತು ದಿವಸಗಳಲ್ಲಿ ಡಾ। ನಂದರವರು ರಾಧಾಕೃಷ್ಣ ನನ್ನು ಕರೆಯಲು ಮೋಟರು ಕಳುಹಿಸಿದರು. ಆತ ಹೋಗದೆ ಗತ್ಯಂತರ ವಿದ್ದಿಲ್ಲ. ಕಾರಿನಿಂದ ಆತ ಇಳಿದ ಕ್ಷಣವೇ, ನಂದರು ಸ್ವಾಗತ ಮಾಡಿ ದರು. ಅವನನ್ನು ತಮ್ಮ ಖಾಸಗಿ ಬೈಟಕುಖಾನೆಗೆ ಕರೆದೊಯ್ದರು. ಅವನು ಮಾತನಾಡುವ ಮೊದಲೇ, ಅವನ ಮುಂದಕ್ಕೆ, ತಾವೇ ರಚಿಸಿ ರುವ ವಿಶದವಾದ ಸಂಘಟನೆ, ಕಾರ್ಯ ಸ್ವರೂಪ, ಆರ್ಥಿಕ ಅಂದಾಜು- ಎಲ್ಲವನ್ನೂ ಬಿಡಿಸಿ ಇಟ್ಟರು. ಅದರ ಮೇಲೆ ಉಪನ್ಯಾಸ ಪ್ರಾರಂಭಿಸಿ ದರು. "ಪ್ರತಿ ಒಂದನ್ನೂ ಯೋಚಿಸಿ ತಯಾರಿಸಿದ್ದೇನೆ. ನಾನೂ ನನ್ನ ಸ್ನೇಹಿತರೂ ಇದನ್ನು ಎರಡು ಲಕ್ಷ ರೂಪಾಯಿಗಳ ಟ್ರಸ್ಟಾಗಿ ಮಾಡಲು ನಿರ್ಧರಿಸಿದ್ದೇವೆ. ಶಾಲೆಯನ್ನು ನಡೆಯಿಸಿಕೊಂಡು ಹೋಗುವ ವಿಷಯ ದಲ್ಲಿ ನಿಮ್ಮ ಸಹಕಾರವಿದ್ದರೆ ಸಾಕು. ಏನನ್ನುತ್ತೀರಿ?"

"ನಿಮ್ಮ ಪ್ರೀತಿ ಉತ್ಸಾಹಗಳಿಗೆ ನಾನು ಎಷ್ಟು ಋಣಿಯಾದರೂ ಕಡಿಮೆಯೇ. ನಾನು ಮೊನ್ನೆ ದಿನ ಅಂದೆನಲ್ಲ-ನನ್ನ ಮಿತ್ರರೊಬ್ಬರನ್ನು ಕೇಳಬೇಕೆಂದು."

"ಕೇಳಲಿಲ್ಲವೇನು?"

"ಕೇಳಿದೆ, ಅವರು ಮೊನ್ನೆ ದಿನ ಬಂದರು. ಅವರ ಸಹಾಯ ದಿಂದಲೇ ಈ ಕೆಲಸ ಸಾಗಿಸಬೇಕೆಂದು ಮೊದಲು ಮಾತಾಡಿದಂತೆ ಆಗ ನಿರ್ಣಯವಾಯಿತು. ಅವರಿಗೆ ನಾನು ಮಾತುಕೊಟ್ಟಾಗಿದೆ."

"ಇಂಥ ಸಾಹಸಗಳಿಗೆ ಮಂಗಳೂರಿನಲ್ಲಿ ಇನ್ಯಾರಿಗೆ ಧೈರ್ಯ ಬಂದೀತು? ಸಾವಿರಾರು ರೂಪಾಯಿಗಳ ಕೆಲಸ ಇದು."

"ಒಬ್ಬರು ಮುಂದೆ ಬಂದರು; ಒಪ್ಪಿಕೊಂಡೆ."

"ನೀವು ಪ್ರಾಯಶಃ ಪ್ರಭುದೇವನನ್ನು ನಂಬಿರಬೇಕು. ಮೊನ್ನೆ ಬಂದಿದ್ದರೆ ಅವನೇಯೇ. ಗಾಳಿಗೋಪುರ ಕಟ್ಟುವುದಕ್ಕೆ, ತನ್ನ ಯೋ ಗ್ಯತೆಯನ್ನು ತಿಳಿಯದೆ ಮಾತುಕೊಡುವುದಕ್ಕೆ, ಅವನೇ ಮುಂದಾಗ ಬೇಕು. ಕೊನೆಗೆ ಸಿಗರೇಟಿನ ಹೊಗೆಯಷ್ಟು ಸುಲಭವಾಗಿ ಮಾತನ್ನು ಗಾಳಿಗೆ ತೂರಿಬಿಡುವುದಕ್ಕೂ ಅವನೇ ಆಗಬೇಕು."

"ಹೌದು ಅವರೇ. ಅವರೆಂಥವರಾದರೂ ನಾನು ಕೊಟ್ಟ ಮಾತು ತಪ್ಪಲಿಕ್ಕೆ ಬರುವುದಿಲ್ಲ. ಮಾತು ಮಾತೇ. ಮೊನ್ನೆಯೂ, ನಿಮ್ಮೊಡನೆ

ಮಾತನಾಡುವುದಕ್ಕೆ ನಾನು ಹಿಂಜರಿದುದು ಅದಕ್ಕೇನೇ."

"ನೀವು ಮೊದಲಿಗೇ ನನ್ನಲ್ಲಿ ಒಂದು ಮಾತು ಕೇಳಬೇಕಿತ್ತು. ನೀವು ಆರಿಸಿದ ಅಸಾಮಿ, ತೀರ ಅಪನಂಬಿಕೆಯದು; ಶೀರಾ ಪಡ ಪೋಶಿ. ಅವನಲ್ಲಿ ಸ್ವಂತವಾಗಿ ಒಂದು ಕಾಸೂಇಲ್ಲ. ಇನ್ನೊಬ್ಬರು ಅವ ನನ್ನು ಒಂದು ಕಾಸಿಗೆ ನಂಬುವ ಹಾಗೂಇಲ್ಲ."

"ಅದು ಹೇಗಿದ್ದರೂ ನಾನು ಮಾತಿಗೆ ತಪ್ಪುವವನಲ್ಲ. ಈಗ ಅವರು ಸ್ವಲ್ಪ ಹಣ ತಂದು ಹಾಕಿದ್ದಾರೆ."

"ಎಷ್ಟು ಐವತ್ತೇ, ಐನೂರೇ?"

"ಎಷ್ಟೋ ಇರಲಿ. ಆ ವಿಚಾರ ಮಾತನಾಡುವ ಅಧಿಕಾರ ನನಗಿಲ್ಲ. ಹಣ ತಂದುಕೊಟ್ಟಷ್ಟು ಕೆಲಸಮಾಡುತ್ತೇನೆ; ಇಲ್ಲವಾದರೆ ಇಲ್ಲ."

"ಇಲ್ಲ ತಿರುಗಿ ನೀವು ಬಾವಿಗೆ ಬೀಳುತ್ತೀರಿ. ದಯಾನಂದರಾ ಯರು ತೆಗೆದ ಒಂದು ಹೊಂಡದಿಂದ ನಿಮಗೆ ಪಾರಾಗುವುದಕ್ಕೆ ಎಷ್ಟು ವರ್ಷ ಬೇಕಾಗಲಿಲ್ಲ? ಅಷ್ಟು ನಿರಾಶೆ ಪಟ್ಟಿರಿ; ಹಣ ಹಾಳಾಯಿತು; ಆ ಯುಷ್ಯ ಹಾಳಾಯಿತು. ಈ ಬಾರಿ ಅದಕ್ಕಿಂತಲೂ ನಗೆಗೀಡಾಗುತ್ತೀರಿ. ನನಗೆ ಆಶ್ಚರ್ಯ ಮತ್ತೇನಿಲ್ಲ—ಆ ಪ್ರಭುವಿನ ಮಾತನ್ನು ನಂಬುವವ ರಿದ್ದಾರೆ ಎಂಬುದೇ. ಸಮನಾಗಿ ಅರ್ಧ ತಾಸು ಮಾತನಾಡಿದರೆ, ಅದು ಗಾಳಿಯ ಗುಳ್ಳೆ ಎನ್ನುವುದು ಗೊತ್ತಾಗುತ್ತದೆ."

"ಇರಲಿ, ಆ ವಿಷಯವನ್ನು ಬಿಟ್ಟುಬಿಡುವ. ತಪ್ಪೋ, ಸರಿಯೋ ನಂಬಿದ್ದೇನೆ. ಬೇರೆ ಏನಾದರೂ ಸ್ನೇಹಾಚಾರದ ವಿಚಾರ ಮಾತನಾ ಡುವ."

ಡಾ। ನಂದರವರ ಮಾತು ಕ್ಷೀಣವಾಯಿತು; ಮುಖ ಕಂದಿತು, ಕಣ್ಣಿನಲ್ಲಿ ನಿರಾಶೆಯ ಚಿಹ್ನೆ ತೋರಿತು. ಒಮ್ಮೆಗೆ ಸರ್ರನೆ ಒಳಗೆ ಹೋಗಿ ತಮ್ಮ ಬೀರುವಿನಿಂದ ಒಂದು ಡೈರಿ ತಂದರು. ಅದರ ಹಾಳೆಗಳನ್ನು ಬಿಡಿಸಿ ತೋರಿಸಿ, ನೋಡಿ "ಇಷ್ಟು ಹಣ ಆ ಅಸಾಮಿಗೆ ನಾನೇ ಕೊಟ್ಟಿ ದ್ದೇನೆ ಸಾಲವಾಗಿ. ಈ ತನಕ ಒಂದು ಬಿಡುಗಾಸೂ ಹಿಂದಕ್ಕೆ ಬಂದಿಲ್ಲ. ಹಿಂದಕ್ಕೆ ಬರುತ್ತದೆ ಎಂಬ ವಿಶ್ವಾಸದಿಂದಲೂ ಕೊಟ್ಟದ್ದಲ್ಲ. ನೀವು ನನ್ನನ್ನು ನಂಬಿರಿ; ಆತ ನಿಮ್ಮನ್ನು ನಡು ನೀರಿನಲ್ಲಿ ಬಿಟ್ಟುಬಿಡುತ್ತಾನೆ."

"ಆಗ ನಿಮ್ಮಂಥವರು ಕೈಬಿಡಲಾರರು."

"ಈಗ ನಮಗಿರುವ ಉಮೇದು, ಆಗಲೂ ಉಳಿದೀತೆಂದು ಹೇಗೆ ಹೇಳುವುದು?"

"ಇದ್ದರೆ ಆಯಿತು. ಇಲ್ಲವಾದರೂ ಸರಿಯೇ. ನನಗೆ ಸೋಲು, ಕಷ್ಟಗಳು ಸೋಜಿಗದ ಸಂಗತಿಗಳೇ ಅಲ್ಲ. ಎಲ್ಲರೂ ಯಶಸ್ವಿಗಳಾದರೆ ಸೋಲು ಯಾರ ಕೊರಳಿಗೆ ಬೀಳಬೇಕು ಹೇಳಿ?"

"ತಿಳಿದೂ ತಿಳಿದೂ ಸೋಲುವ ದಾರಿಯನ್ನೇ ಹುಡುಕಿದ್ದೀರಿ ನೀವು. ಅದಕ್ಕಾಗಿ ನನ್ನ ಬೇಸರ."

"ಆಗಲಿ ನಾನು ಹೊರಡುತ್ತೇನೆ" ಎಂದು ಆತನು ಎದ್ದು ನಿಂತ. ಅಲ್ಲಿಂದ ಹೊರಕ್ಕೆ ಬಂದನು. ಮೋಟರು ಡ್ರೈವರನು ಅಲ್ಲಿ ಕಾಣಿಸಲಿಲ್ಲ ವೆಂಬುದರಿಂದ ರಾಧಾಕೃಷ್ಣ ಅಲ್ಲಿಂದ ನಡೆದುಕೊಂಡು ಹೊರಟನು. ಈತ ಗೇಟಿಂದ ಹೊರಕ್ಕೆ ಬಂದುದೇ ತಡ, ಇನ್ನೊಂದು ಕಾರು ಸಿದ್ಧವಾಗಿತ್ತು. ಅವರ ಡ್ರೈವರನು "ನೀವಲ್ಲವೇ ರಾಧಾಕೃಷ್ಣರು? ಪ್ರಭುರಾಯರು ನಿಮ್ಮನ್ನು ಛಾಪಖಾನೆಗೆ ಕರಕೊಂಡು ಬರಲುಹೇಳಿದ್ದಾರೆ" ಎಂದನು. ರಾಧಾಕೃಷ್ಣನ ಮನಸ್ಸಿನಲ್ಲಿ ಪ್ರಭುದೇವನನ್ನು ಕುರಿತಾದ ನಿಂದೆಯ ನುಡಿಗಳನ್ನು ಕೇಳಿ ಬೇಸರವಾಗಿತ್ತು. ಒಡನೆ ಪ್ರಭುದೇವನಲ್ಲಿಗೆ ಹೋಗಲು ಬೇಸರ. ಅದರ ಜತೆಗೆ, "ಈತ ಇದಕ್ಕೆಲ್ಲ ಹಣ ಎಲ್ಲಿಂದ ತರುತ್ತಾನೆ" ಎಂಬ ಅನುಮಾನ. "ಆ ಪ್ರಶ್ನೆ ನನಗೇಕೆ? ಅವನ ಸ್ನೇಹಿತರು ಕಾರು ಕೊಡಲಾರರೇ, ಹಣ ಕೊಡಲಾರರೇ? ಆತ ಕಣ್ಣು ಮುಚ್ಚಿ ನನ್ನನ್ನು ನಂಬಿ ಹಣ ಸುರಿಯುತ್ತಿರುವಾಗ, ನಾನು ಅವನ ವಿಷಯದಲ್ಲಿ ಸಂಶಯ ಪಡಬೇಕೇಕೆ ಎಂದುಕೊಂಡು ಕಾರಿನಲ್ಲಿ ಕುಳಿತನು. ಅದು ಛಾಪಖಾನೆಯ ಮುಂದೆ ಹೋಗಿ ನಿಂತಿತು. ಪ್ರಭು ನಗುತ್ತ ಬಂದು ಸ್ವಾಗತ ಮಾಡಿದ. ಡ್ರೈವರೊಡನೆ "ಇಲ್ಲೇ ಇದ್ದು ಬಿಡು. ಅವರನ್ನು ಬಿಟ್ಟು ಬರಬೇಕು" ಎಂದು ಹೇಳಿದ.

"ಬೇಡ, ಬೇಡ, ನಾನು ನಡೆದುಕೊಂಡೇ ಹೋಗುತ್ತೇನೆ."

"ಕಾರು ನಿಮಗೆ ಬೇಡವಾದರೂ ನಮಗೆ ಬೇಕಾಗಿದೆ. ಸಂಜೆ ಸಿನೆಮಕ್ಕೆ ಹೋಗಲಿಕ್ಕೆ" ಎಂದನು.

"ಇಬ್ಬರೂ ಛಾಪಖಾನೆಯನ್ನು ಹೊಕ್ಕರು. ಪ್ರಭು ಎಲ್ಲಾದರೂ ಸಾಣೆಕಲ್‌ನ ಮುಂದೆ ನಂದರಾಯರಲ್ಲಿ ಸಂಭಾಷಣೆಯ ಫಲ ಏನಾಯಿ

ತೆಂದು ಕೇಳುತ್ತಾನೆಯೋ ಎಂದು ಅಂಜಿದ್ದ. ಆತ ಆ ವಿಷಯದ ಮಾತನ್ನೆತ್ತದೆ ಸಮಾಜವಾದಿ ಪ್ರಕಟನೆಗಳನ್ನು ಕುರಿತು ಮಾತನಾಡಿದನು. "ನನಗೆ ತಿಂಗಳಿಗೆ ಒಂದೊಂದು ಪುಸ್ತಕ ಹೊರಡಿಸಬೇಕೆಂದಿದೆ. ಸಮಾಜವಾದಿ ತತ್ವಗಳನ್ನು ಬಿಡಿಸಿ ಹೇಳಿ, ಜನವನ್ನು ನಾವು ಮುಂದಿನ ಕ್ರಾಂತಿಯುದ್ಧಕ್ಕೆ ಸಿದ್ಧಮಾಡಬೇಕಾಗಿದೆ. ಮಂಗಳೂರಿನಲ್ಲಿ ಕ್ರಾಂತಿಕಾರರ ಒಂದು ಗುಂಪನ್ನೇ ನಿರ್ಮಿಸಬೇಕು, ಮುಂದಿನ ಮುನ್ಸಿಪಲ್ ಚುನಾವಣೆಯಲ್ಲಿ ಇಲ್ಲಿನ ಸೊಕ್ಕಿನ ಮೃಗಗಳನ್ನು ಓಡಿಸಿಬಿಡಬೇಕು. ಮುನ್ಸಿಪಾಲ್ಟಿಯನ್ನು ಕೈವಶ ಮಾಡಿಕೊಂಡರೆ, ಜಿನಿವಾ ನಗರದಂತೆ ಎಷ್ಟೋ ಕೆಲಸ ಮಾಡಬಹುದು. Public housing, public-education, public health, insurance ಎಷ್ಟೋ ಕೆಲಸಗಳನ್ನು ಮಾಡಬಹುದು."

"ಅದು ಎಲ್ಲಿ ಸಾಧ್ಯ ಪ್ರಭುದೇವ್? ಜನರ ಸುಧಾರಣೆ ಅಷ್ಟು ಬೇಗ ಆಗುವದಿಲ್ಲ. ಅವರು ಅಲುಗಾಡುವುದು ಮೆಲ್ಲಗೆ. ನಮ್ಮ ಮುನ್ಸಿಪಲ್ ಮತದಾರರು ಮುಂಡಾಸು, ಮೋಟರು ನೋಡಿ ಓಟು ಕೊಡುತ್ತಾರೆಯೇ ಹೊರತು, ಮನುಷ್ಯನನ್ನು ನೋಡಿ ಕೊಡುವುದಿಲ್ಲ."

"ಅದೇನು ದೊಡ್ಡ ಕೆಲಸ. ಮುಂದಿನ ಚುನಾವಣೆಯ ವೇಳೆಗೆ ಮೋಟರನ್ನು ನಾನೂ ಕೊಂಡೇನು; ಮುಂಡಾಸು ಮಾತ್ರ ಬೇಡ. ನನಗೆ ಈ ಸಾದಾ ಟೊಪ್ಪಿಗೆಯೇ ಸಾಕು."

ಅವರು ಕುಳಿತು ಮಾತನಾಡಿದ ಒಂದು ತಾಸಿನಲ್ಲಿ ಎರಡಾವರ್ತಿ ಕಾಫಿಯನ್ನು ತರಿಸಿ ಕುಡಿದಾಯಿತು. ಪ್ರಭುದೇವನ ಸಂತೋಷಕ್ಕಾಗಿ ರಾಧಾಕೃಷ್ಣನು ಕಾಫಿ ಪಾನವನ್ನು ಮಾಡಿದ. ಪ್ರಭುದೇವನೆಂದ "ಈಗ ನನಗೆ ತುಂಬ ತೃಪ್ತಿಯಾಯಿತು. ಹೊಟ್ಟೆಗೆ ಚನ್ನಾಗಿ ತಿನ್ನಲಾರದ ದೇಶಸೇವೆಯಲ್ಲಿ ನನಗೆ ತೃಪ್ತಿಯಿಲ್ಲ. ನಾವು ಚೆನ್ನಾಗಿ ತಿನ್ನಬೇಕು; ಇತರರಿಗೂ ತಿನಿಸಬೇಕು" ಎಂದು ತತ್ವೋಪದೇಶ ಮಾಡಿ, ಅವನನ್ನು ಕರೆದುಕೊಂಡು ಹೋಗಿ ಕಾರಿನಲ್ಲಿ ಕುಳಿತ. ಕದ್ರಿಗೆ ಹೋಗುವ ತನಕವೂ ಆತ ಮಾತನಾಡಲಿಲ್ಲ. ರಾಧಾಕೃಷ್ಣನ ಮನೆ ಸಮೀಪಿಸುತ್ತಲೇ ಹೇಳಿದ "ನಾಡಿದು ಬೆಳಿಗ್ಗೆ ಎಂಟು ಗಂಟೆಗೆ ಕಟ್ಟಡದ ಪಂಚಾಂಗಕ್ಕೆ ಮುಹೂರ್ತ ಚನ್ನಾಗಿದೆ ಎಂದಿದಾರೆ. ನೀವು ಏನೇನು ಬೇಕೋ ಅವನ್ನೆಲ್ಲ ತಯಾರಿಸಿ

ಬಿಡಿ. ನಾನು ಆ ಸಮಯಕ್ಕೆ ಸರಿಯಾಗಿ ಭಟ್ಟರನ್ನು ಕರೆದುಕೊಂಡು ಬರುತ್ತೇನೆ" ಎಂದನು.

ಆಗಲಿ, ಎಂದು ಈತ ಒಪ್ಪಿದ ಮೇಲೆ ಅವನು ಹೊರಟು ಹೋದನು. ಡಾಕ್ಟರರ ವಿಚಾರವನ್ನು ಈತ ಕೇಳಿಯಾನು ಎಂದು ಎಣಿಸಿದ್ದ ಅವನಿಗೆ, ಆ ವಿಷಯ ಮಾತನಾಡದಿದ್ದುದನ್ನು ನೋಡಿ ತುಂಬ ಆಶ್ಚರ್ಯವಾಯಿತು. ಹಾಗಿದ್ದರೆ ಗೇಟಿನ ಬಳಿಯಲ್ಲೇ ಕಾರನ್ನು ಏಕೆ ನಿಲ್ಲಿಸಬೇಕಿತ್ತು?- ಎಂದು ತೋರಿತು, ತಾನಾಗಿ ಆ ವಿಷಾದದ ಸಂಗತಿಯನ್ನು ಹೇಳುವುದಕ್ಕೂ ಮನಸ್ಸಾಗಲಿಲ್ಲ. ಆ ದಿನ ಹೋದ ಪ್ರಭುದೇವ ತಿರುಗಿ ಬಂದುದು ಅಸ್ತಿವಾರವನ್ನು ಹಾಕಲಿರುವ ಮುಹೂರ್ತಕ್ಕೆ ಸಮನಾಗಿ. ಅವನ ಜತೆಯಲ್ಲಿ ಮಿ। ಸಾಣೆಕಲ್, ನಾಗಪ್ಪಮೇಸ್ತ್ರಿ, ಒಬ್ಬ ಪುರೋಹಿತ ಭಟ್ಟರು — ಇಷ್ಟು ಮಂದಿ ಬಂದಿದ್ದರು. ಹೂ, ಹಣ್ಣುಕಾಯಿಗಳನ್ನು ತೆಗೆದುಕೊಂಡು ಬಂದಿದ್ದರು. "ಅವನ್ನೇಕೆ ತಂದಿರಿ, ಇಲ್ಲಿ ತಯಾರಿಸಿದ್ದೇವಲ್ಲ" ಎಂದು ರಾಧಾಕೃಷ್ಣ ಹೇಳಿದನು. "ಎರಡೆರಡು ಪೂಜೆ ನಡೆದರೆ ಕೆಟ್ಟದಿದೆಯೇ" ಎಂದು ಈತ ನಗುತ್ತ ನುಡಿದ. ಎಲ್ಲರೂ ಕಟ್ಟಡಕ್ಕಾಗಿ ಗುರುತು ಮಾಡಿದ ತಾವಿಗೆ ಬಂದರು. ಆಗ ಮನೆಯಿಂದ ಹುಡುಗರೂ ಸುಮಂಗಲೆಯರೂ ಬಂದರು. ಕಲಲನ ಪರಿವಾರವೂ ಆಳುಗಳೂ ಬಂದು ನಿಂತಿದ್ದರು. ಪುರೋಹಿತರು ಮಂತ್ರ ತೊಡಗಿದ ಕ್ಷಣವೇ, ಕೈ ಜೋಡಿಸಿ ನಿಂತ ರಾಧಾಕೃಷ್ಣ — ನಾಗಪ್ಪ ಮೇಸ್ತ್ರಿ ಕಲ್ಲು, ಗಾರೆ ಕಲಿಸಿ ಕೊಟ್ಟು ಪ್ರಭುದೇವ ಸ್ವತಃ ಶಂಖುಸ್ಥಾಪನೆಯನ್ನು ಮಾಡುವ ತನಕ — ಕೈ ಬಿಡಿಸಲಿಲ್ಲ.

ಅಲ್ಲಿ ತಂದ ಹಣ್ಣು ಹಂಪಲುಗಳನ್ನು ಹಂಚಿದರು, ಹೂವನ್ನು ಕೊಟ್ಟರು. ಬೇರೆ ಉಪಹಾರ, ಉಪನ್ಯಾಸಗಳೇನೂ ನಡೆಯಲಿಲ್ಲ. ಆತ ಪುರೋಹಿತರನ್ನು ಕಳುಹಿಸಿಕೊಟ್ಟು, ಮೇಸ್ತ್ರಿಯನ್ನು ಕೆಲಸಕ್ಕೆ ತೊಡಗಿಸಿ "ನನ್ನ ಊಟ ಇವತ್ತು ನಿಮ್ಮಲ್ಲಿಯೇ, ಎಂದು ಹೇಳಿ ಅವನೊಡನೆ ಮನೆಗೆ ಬಂದನು. ಚಾವಡಿಯಲ್ಲಿ ಕುಳಿತು, ಸಿಗರೇಟು ಪೆಟ್ಟಿಗೆಯನ್ನು ಎದುರಿಗಿರಿಸಿಕೊಂಡನು. ಈಚೆ ಇನ್ನೊಂದು ಕಾಗದದ ಪೊಟ್ಟಣವನ್ನಿರಿಸಿ "ಶ್ಯಾಮಾ ಇದು ಕಾಫಿ ಹುಡಿ. ಮೊನ್ನೆ ನೀನು ತಂದು ಕೊಟ್ಟ ಕಾಫಿ ನನಗೆ ಏನೂ ಹಿಡಿಯಲಿಲ್ಲ. ನಾನು Extra strong ಕಾಫಿಯವನು.

ಒಂದು ಕಪ್ಪಿಗೆ ಮೂರು ಚಮಚ ಪುಡಿ ಹಾಕಿದರೆ ಸಾಕಾಗುತ್ತದೆ ನೋಡು" ಎಂದು ಕಾಫಿಯನ್ನು ಆಮಂತ್ರಿಸಿದ.

ಶ್ಯಾಮ ಕಾಫಿ ಮಾಡುವುದಕ್ಕೆ ತಾನೇ ಹೋದನು. ತನ್ನ ಹಳ್ಳಿಯ ಹೆಂಡತಿ, ಪುಡಿ ಚೌಕಶಿಮಾಡಿ ನೀರು ಹೆಚ್ಚು ಹಾಕಬಾರದಲ್ಲ! ಪ್ರಭು ದೇವ ರಾಧಾಕೃಷ್ಣನನ್ನು ಕುರಿತು, "ಮಿ। ಇಲ್ಲಿ ನಾಲ್ಕು ಇಸಿಚೆಯರ್ ಹಾಕಿಸಬೇಕು. ನಿಮ್ಮ ಚಾವಡಿಯ ನೆಲ ಚೆನ್ನಾಗಿದ್ದರೂ, ನೆಲದಮೇಲೆ ಕೂತುಕೊಳ್ಳುವ ಅಭ್ಯಾಸ ಮರೆತುಹೋಗಿದೆ. ಕುರ್ಚಿಯಲ್ಲೇ ಕುಳಿತು ಕೊಳ್ಳುವ ಚಟ ನನಗೆ. ಅದರಲ್ಲಿಯೂ ಆರಾಮ ಕುರ್ಚಿ."

"ಎಲ್ಲಿಂದಾದರೂ ತರಿಸುವ ಒಂದನ್ನು, ಕೊಂಡರೂ ಆಯಿತು"

"ಹೂಂ, ಈಗ ಹೇಳಿ, ನಮ್ಮ ನಂದ ಸಾಹೇಬರೊಡನೆ interview ಏನಾಯಿತು? ಎಲ್ಲವನ್ನೂ ಬಿಡಿಸಿ ಹೇಳಿ."

"ನೀವು ಮೊನ್ನೆಯೇ ಕೇಳುತ್ತೀರಿ ಎಂದು ನಾನು ಎಣಿಸಿದ್ದೆ. ಅವರು ಕೇಳಿದರು, ನಾನು ನಿಮಗೆ ಮಾತುಕೊಟ್ಟಿದ್ದೇನೆ, ಇನ್ನು ಯಾರನ್ನೂ ಕೂಡಿಕೊಳ್ಳುವಹಾಗಿಲ್ಲ-ಎಂದೆ" ಎಂದನು. ಉರಿಯುವ ಬೆಂಕಿಗೆ ತುಪ್ಪ ಸುರಿಯಬಾರದು ಎಂಬುದು ಅವನ ಸ್ವಭಾವ. ಆದುದರಿಂದ ನಂದರ ನಿಂದೆ, ನಂಜುಗಳನ್ನು ತೇಲಿಸಿಬಿಟ್ಟು "ಅವರು ಹಟ ಹಿಡಿದರು, ನಾನು ಆಗುವುದಿಲ್ಲವೆಂದು ಖಂಡಿತ ಹೇಳಿಬಿಟ್ಟೆ." ಆದರೆ ಪ್ರಭು ಅಷ್ಟಕ್ಕೆ ಬಿಟ್ಟಾನೆಯೇ? ಒಂದೊಂದಾಗಿ ಪ್ರಶ್ನೆ ಕೇಳಿದನು. ಕೊಕ್ಕೆ ಮಾತು ಗಳಿಂದ ಎಲ್ಲ ಸಂಗತಿಗಳನ್ನೂ ಎಳೆದು ತೆಗೆದನು. ಆದರೂ ಹೇಳುವು ದಕ್ಕೆ ರಾಧಾಕೃಷ್ಣನಿಗೆ ಮನಸ್ಸಿಲ್ಲ. "ಏನು ಮಾಡುತ್ತೀರಿ ಅವರ ಸಂಗತಿ ಯನ್ನು ಕಟ್ಟಿಕೊಂಡು" ಎಂದು ಹೇಳಿದನು.

"ಅವರ ವಿಚಾರ ನನಗೆ ತಿಳಿದಷ್ಟು ಇನ್ನಾರಿಗೂ ತಿಳಿದಿಲ್ಲ. ನಿಮ್ಮ ಅವರ ಮಾತಿನ ಪ್ರತಿ ಶಬ್ದವೂ ನನ್ನ ಕಿವಿಗೆ ಮುಟ್ಟಿದೆ. ನೀವು ಅವರ ಮರ್ಯಾದೆಯನ್ನು ಉಳಿಸಲಿಕ್ಕೆ ಪ್ರಯತ್ನ ಮಾಡುತ್ತೀರಷ್ಟೆ. ಅವರು ಹೇಳಿದುದೆಲ್ಲ ನನಗೆ ಗೊತ್ತು. ಪ್ರಭುವನ್ನು ನಂಬಿ ಮೋಸ ಹೋಗು ತ್ತೀರಿ ಎಂದರಲ್ಲವೆ. ತಮ್ಮ ಧೈರಿಯನ್ನೂ ತೋರಿಸಿರಬೇಕು. ಇಷ್ಟು ಹಣ ಪ್ರಭುವಿನಿಂದ ಬರಬೇಕೆಂದೂ ತಿಳಿಸಿರಬೇಕು.............................. ಅದು ಅವರ ಕ್ರಮ. ನಿಜಕ್ಕೂ ಅನ್ನುತೇನೆ, ಒಂದು ದಿವಸಆ ಮನುಷ್ಯ

ನನ್ನು ಅವನದೇ ಉರುಳಿನಲ್ಲಿ ಸಿಕ್ಕಿಸಿ ಕುಣಿಸಬೇಕೆಂದಿದೆ ನನಗೆ.

"ಯಾಕೆ ಪ್ರಭುದೇವ್, ಅವರ ವಿಷಯದಲ್ಲಿ ಮನಸ್ಸನ್ನು ಕಹಿ ಮಾಡಿಕೊಳ್ಳುತ್ತೀರಿ. ಅಂಥವರು ಸಾವಿರ ಜನರಿದ್ದಾರೆ ಜಗತ್ತಿನಲ್ಲಿ. ಎಲ್ಲ ತೆರನ ಜನ ಸೇರಿದರೇನೇ ಜಗತ್ತು. ಪ್ರಪಂಚವೇ ಹಾಗೆ. ಕಹಿ ಸಿಹಿಗಳ ಬೆರಕೆ; ಸುರೂಪ, ಕುರೂಪಗಳ ಸೇರಿಕೆ."

"ನಿಮ್ಮದು ಇದ್ದೇ ಇದೆಯಲ್ಲ ಗಾಂಧಿಯ ಮಾರ್ಗ; ಅಹಿಂಸಾ ವಾದ! ನನಗೆ ಅದಿಲ್ಲ; ಅದರಲ್ಲಿ ನನಗೆ ವಿಶ್ವಾಸವೂ ಇಲ್ಲ. 'ಶಠಂ ಪ್ರತಿ ಶಾಠ್ಯಂ' ಜಾತಿ ನನ್ನದು. ಇಲ್ಲವಾದರೆ ಈ ಸೊಕ್ಕಿನ ಜನರಿಗೆ ಬುದ್ಧಿ ಬರುವದಿಲ್ಲ. ನಮ್ಮ ನಂಪ ಸಾಹೇಬರು ತಮ್ಮ ವ್ಯಾಪಾರಿ ಯಶಸ್ಸಿನಿಂದ ಕೊಬ್ಬಿದ್ದಾರೆ. ಈ ಊರಿನಲ್ಲಿ ತಮ್ಮನ್ನು ಬಿಟ್ಟು, ತಮ್ಮ ಅಪ್ಪಣೆಯಿಲ್ಲದೆ ಯಾವ ಸಾರ್ವಜನಿಕ ಕೆಲಸವೂ ಆಗಬಾರದೆಂದು ಅವರ ಮನಸ್ಸು. ಈಗಂತೂ ಅವರದೊಂದು ಗ್ಯಾಂಗೇ(gang)ಹೊರಟಿದೆ. ಯಾರ್ಯಾರು ಗೊತ್ತೇ?"

"ನನಗೇನು ಗೊತ್ತು?"

"ಹಾಗಾದರೆ ಹೇಳುತ್ತೇನೆ. ಅವರಂತೆಯೇ ಇನ್ನೊಬ್ಬರಿದ್ದಾರೆ; ನಮ್ಮ ರಂಗವಿಠಲ್ ಸಾಹುಕಾರರು. ಈ ಲಿಮಿಟೆಡ್ ಸಂಸ್ಥೆಯ ಪ್ರಭೃತಿಗಳೊಡನೆ, ಒಬ್ಬಿಬ್ಬರು ಪೆನ್ಶನ್‌ದಾರರೂ ಸೇರಿಕೊಂಡಿದ್ದಾರೆ. ಒಂದು ನಮ್ಮ ಮಾಜೀ ಕಲೆಕ್ಟರರು ಪುರುಷೋತ್ತಮ ........"

"ಒಮ್ಮೆ ಆ ಪುರುಷೋತ್ತಮ ರಾಯರ ಹೆಸರನ್ನು ಯಾರೋ ಒಬ್ಬ ಸ್ನೇಹಿತರು ಹೇಳಿದ್ದರು ನನಗೆ—'ಅವರಲ್ಲಿಗೆ ಹೋಗಿ; ನಿಮ್ಮ ಯೋಜನೆಗಳಿಗೆ ತಕ್ಕ ಬೆಂಬಲ ಕೊಟ್ಟಾರು.' ನನಗೆ ಜನಗಳ ಪರಿಚಯ ಸ್ವಲ್ಪವಾದರೂ ಇಲ್ಲದಿರುವಾಗ ಹೋಗಿ, ಮಾತಾಡುವುದಕ್ಕೆ ಮನಸ್ಸಿರಲಿಲ್ಲ. ಅಲ್ಲದೆ ಅವರು ರಿಟಾಯರ್ಡ್ ಐ.ಸಿ.ಎಸ್. ಆಫೀಸರರು; ಅಂಥವರನ್ನು ಕೂಡಿಕೊಂಡು ಕೆಲಸಮಾಡುವುದು ಕಷ್ಟವಾದೀತು. ಆಫೀಸ್ ಜರ್ಬನ್ನು ಮರೆಯುವದಕ್ಕೆ ಅವರಿಂದಲೂ ಸಾಧ್ಯವಾಗದು. ಅಂಥವರ ಕೆಳಗೆ ಕೆಲಸಮಾಡುವದಕ್ಕೆ ನನಗೂ ಇಷ್ಟವಾಗದು."

"ಅದು ಯಾರು, ನಿಮ್ಮನ್ನು ಅಲ್ಲಿಗೆ ಹೋಗಬೇಕೆಂದವರು?"

"ನಮ್ಮ ರಾಮಕೃಷ್ಣಯ್ಯ."

"ರಾವಬಹದ್ದೂರರೋ, ಸರಿಯೇ. ಅವರು ಸಹ ಈ ಗೇಂಗಿನಲ್ಲಿ ಒಬ್ಬರು. ಆದರೆ ಕೀರ ಹಲ್ಲಿಲ್ಲದ ಹಾವು. ಉಳಿದವರು ಸರ್ಪಗಳಾದರೆ ಇವರು ಕೇರೆ. ಅವರಂಥವರಿಂದ ನಾವು ಏನೂ ಕೆಲಸ ಮಾಡಿಸಿಕೊಳ್ಳ ಬಹುದು. ಇಷ್ಟೇ — ಪರಿಮಳವೂ ಇಲ್ಲ; ಅವರಿಗೆವಾಸನೆಯೂ ಇಲ್ಲ. ಉಳಿದ ಮೂವರಿದ್ದಾರಲ್ಲ; ನಂದ,ರಂಗಪ್ಪ,ಪುರುಷೋತ್ತಮ ರಾಯರು ಭಯಂಕರ ವ್ಯಕ್ತಿಗಳು" ಎಂದು ಅರ್ಧತಾಸಿನ ತನಕ ಅವರ ನಿಂದೆಯ ಲ್ಲಿಯೇ ಕಾಲ ಕಳೆದನು. ಮೂಕನಂತೆ ಅದನ್ನು ಕೇಳುತ್ತ ರಾಧಾಕೃಷ್ಣ ಕುಳಿತಿರಬೇಕಾಯಿತು. ಪ್ರಭುದೇವನ ಸಾಹಸ, ಪರೋಪಕಾರಗಳನ್ನು ಕಂಡು ಸಂತೊಷವಾದರೂ, ಈ ತೆರನ ವ್ಯಕ್ತಿದ್ವೇಷದಲ್ಲಿ ಸಹನೆ ಇರ ಲಿಲ್ಲ. ಅದನ್ನು ಕಂಡು ಇಲ್ಲದ ಸಮಾಧಾನ ತಂದುಕೊಳ್ಳಬೇಕಾಯಿತು. "ಪಾಪ, ಏನಾದರೂ ತುಂಬ ಉಪದ್ರವ ಕೊಟ್ಟಿರಬೇಕು. ಈಗ ಜಿದ್ದು ಬಿದ್ದಿದೆ. ಅದು ಉರಿದು ನಾಶವಾಗಬೇಕೇ ಹೊರತು ತನ್ನಂತೆ ಹೋ ಗುವ ಸ್ಥಿತಿ ಇಲ್ಲ" ಎಂದುಕೊಂಡನು.

ಅವರು ತಮ್ಮ ಊಟವಾದ ನಂತರ ತಮ್ಮ ಉದ್ಯೋಗ ಮಂದಿ ರದ ಚರ್ಚೆ ನಡೆಯಿಸಿದರು. ಯೋಗ್ಯ ಶಿಕ್ಷಕರನ್ನೂ ಸಲಕರಣೆಗಳನ್ನೂ ರಾಧಾಕೃಷ್ಣನು ಪ್ರವಾಸಮಾಡಿ ಕರತರಬೇಕೆಂದು,ಅಂಥ ಔದ್ಯೋಗಿಕ ಸ್ಥಳಕ್ಕೆ ಅವನು ಹೋಗಿ ಬರಬೇಕೆಂದೂ ಪ್ರಭುದೇವನ ಒತ್ತಾಯವಾ ಯಿತು. "ಹೇಗೂ ಮನೆಯ ಚಿಂತೆ ಇಲ್ಲ ನಿಮಗೆ. ಮನೆ ನೋಡುವು ದಕ್ಕೆ ಶ್ಯಾಮರಾಯನಿದ್ದಾನೆ. ನೀವೇ ಈ ಕೈಗಾರಿಕೆಗಳು ನಡೆಯುವಲ್ಲಿಗೆ ಹೋಗಿಬಂದರೆ ಏನೇನು ಬೇಕೆಂಬ ಅಂದಾಜು ಸಿಗುತ್ತದೆ. ಕರೆತರುವ ತಜ್ಞರ ಯೋಗ್ಯತೆಯೂ ತಿಳಿಯುತ್ತದೆ. ಕೆಲಸ ಚೆನ್ನಾಗಿ ಗೊತ್ತಿದ್ದವರು ಬರಬೇಕು. ಸಂಬಳಕ್ಕೆ ಹೆದರಿಕೊಳ್ಳಬಾರದು. ನಾಲ್ಕು ವರ್ಷದಲ್ಲಿ ನಮ್ಮ ಹುಡುಗರೇ ತಯಾರಾಗುತ್ತಾರೆ. ಆಗ ಕರೆತಂದವರನ್ನು ಬಿಟ್ಟು ಬಿಡಬಹುದು.

*　　*　　*　　*

ಮಿಂಚಿನ ವೇಗದಿಂದ ಕಟ್ಟಡ ಸಾಗಿತು. ನಾಗಪ್ಪ ಮೇಸ್ತ್ರಿಯು ನೂರು ಆಳುಗಳನ್ನು ತಂದು ನಿಲಿಸಿದ. ಮಳೆಗಾಲ ಮುಗಿಯದಿದ್ದರೂ ಆ ಮಳೆಯಲ್ಲೇ ಕೆಲಸವೆಲ್ಲ ಸಾಗಿತು. ರಾಧಾಕೃಷ್ಣ ಪ್ರವಾಸಕ್ಕೆ ಹೊರ

ಟನು. ಮನೆಯ ಭಾರ ಶ್ಯಾಮನಿಗೆ ಬಿದ್ದಿತು. ಶಾಲೆಯ ಮುಖ್ಯ ಕಟ್ಟಡವು ಪ್ರಭುದೇವ ತೋರಿಸಿದ ಚಿತ್ರಕ್ಕೆ ತದ್ರೂಪವಾಗಿ ನಿರ್ಮಾಣವಾಯಿತು. ವಿದ್ಯಾರ್ಥಿಗಳ ವಸತಿಗೃಹ, ಉಪಮಂದಿರಗಳು ಆಗುತ್ತ ಬಂದುವು. ರಾಧಾಕೃಷ್ಣ ಮರಳಿ ಊರಿಗೆ ಬರುವುದರೊಳಗೆ ಹೊಸ ಗೋಶಾಲೆಯೊಂದಕ್ಕೆ ಪಾಯ ಹಾಕಿಯೂ ಆಗಿತ್ತು. ಆಚಾರ್ಯರ ಮನೆಯನ್ನೂ ಆತ ಕಟ್ಟಿಸುವವನಿದ್ದನು. ಆದರೆ ಅವನ ಕೋಪಕ್ಕೆ ಅಂಜಿ ಸುಮ್ಮನಾದ.

ಇತ್ತ ರಾಧಾಕೃಷ್ಣ ತನ್ನ ಪ್ರವಾಸವನ್ನು ಮುಗಿಸಿಕೊಂಡು ಹಿಂದಿರುಗುವಾಗ ಎರಡು ತಿಂಗಳ ಕಾಲ ಸರಿಯಿತು. ಅವನ ಜತೆಗೆ ಹೊಸ ಉಪಾಧ್ಯಾಯರೂ ಬರುವ ನಿಶ್ಚಯವಾಗಿತ್ತು. ಇಬ್ಬರು ಆಗಲೇ ಬಂದರು. ಇನ್ನಿಬ್ಬರು ಶಾಲೆಯ ಪ್ರಾರಂಭಕ್ಕೆ ಬರುವವರು. ಶಾಲೆಗೆ ಬೇಕಾಗುವ ಔದ್ಯೋಗಿಕ ಸಾಧನೆ, ಸಲಕರಣೆಗಳಿಗೆ ಆರ್ಡರನ್ನೂ ಕೊಟ್ಟು ಬಂದಾಯಿತು. ಇನ್ನೇನು? ವಿಧ್ಯಾರ್ಥಿಗಳನ್ನು ಕೂಡಿಸಿ, ಉದ್ಯೋಗ ಮಂದಿರವನ್ನು ಪ್ರಾರಂಭಿಸುವುದು ಮಾತ್ರ ಉಳಿದಿದೆ. ಪ್ರಭುವಿನ ಜೋಯಿಸರು ಅದಕ್ಕೆ ಅದ್ವಿತೀಯ ಲಗ್ನವನ್ನು ಹೇಳಬೇಕು. "ಆ ಘಂಟೆಗೆ, ಆ ನಿಮಿಷಕ್ಕೆ ಪ್ರಾರಂಭೋತ್ಸವ ಮಾಡುವ" ಎನ್ನುತ್ತಿದ್ದಾನೆ ಪ್ರಭುದೇವ.

* * * *

ಒಮ್ಮಿಂದೊಮ್ಮೆಗೆ 'ಕೆಂಪುತಾರೆ'ಯಲ್ಲಿ ಧರಮ್ ಸಿಂಗ್ ಉದ್ಯೋಗ ಮಂದಿರವನ್ನು ಕುರಿತು ಹಲವು ಲೇಖನಗಳು ಪ್ರಕಟವಾಗತೊಡಗಿದುವು. ಅದರ ಹಲವಾರು ಚಿತ್ರಗಳು, ಕಾರ್ಯಕಲಾಪದ ವಿವರಗಳು ವಿದ್ಯಾರ್ಥಿಗಳಿಗಾಗಿ ಕರೆಯು ಪ್ರಕಟವಾದುವು. ಪ್ರಭುದೇವನು ಉಳಿದ ಪತ್ರಕರ್ತರಿಂದಲೂ ಆ ವಿಷಯವಾಗಿ ಲೇಖನಗಳನ್ನು ಬರೆಯಿಸಿದನು. ಮರುವಾರವೇ ಆ ಹೊಸ ಮಂದಿರಕ್ಕೆ ಜನ ಸಹಾಯ ಮಾಡಿದ ಮಹನೀಯರುಗಳ ಹೆಸರುಗಳು ಪ್ರಕಟವಾದುವು. ಧರಮ್ ಸಿಂಗರವರ ಹೆಸರಿನಲ್ಲಿ ಇಪ್ಪತ್ತೈದು ಸಾವಿರ ರೂಪಾಯಿಗಳ ಆಶ್ವಾಸನ ಅಂಕಿತವಾಗಿತ್ತು. ಅದರಂತೆ ಉತ್ತರ ಹಿಂದುಸ್ಥಾನದ ಹಲವು ಹೆಸರುಗಳ ಮುಂದೆ ಸಾವಿರ, ಎರಡು ಸಾವಿರ, ಐದು ಸಾವಿರವೆಂದು ಅಂಕೆಗಳು ಪ್ರಕಟವಾದುವು. ಮಂದಿರವು ಭದ್ರವಾದ ತಳಹದಿಯ ಮೇಲೆ ನಿಂತಿದೆ

ಎಂಬುದಕ್ಕೆ ಇನ್ನೇನು ಬೇಕು? ಮುಖ್ಯದಾನಿಗಳಾದ ಧರಮ್ ಸಿಂಗರ ಜೀವನ ಚರಿತ್ರೆಯು ಪ್ರಕಟವಾಯಿತು. ಈ ಎಲ್ಲ ಪ್ರಕಟನೆಗಳ ಬೆನ್ನು ಗಡೆಯೇ—'ನಾಳಿನ ಸೋಮವಾರ ಪ್ರಾತಃಕಾಲ ಹತ್ತುಘಂಟೆಗೆ ಉದ್ಯೋಗ ಮಂದಿರದ ಪ್ರಾರಂಭೋತ್ಸವ ನಡೆಯುವುದೆಂದೂ, ಆ ದಿನ ಊರಿನ ಬಡವರಿಗೆ ಅನ್ನದಾನವಿದೆ'ಯೆಂದೂ, ಸುದ್ದಿ ಪ್ರಕಟವಾಯಿತು. ಎಲ್ಲ ಪತ್ರಗಳಲ್ಲಿಯೂ ಸಂಚಾಲಕನಾದ ಪ್ರಭುದೇವನ ಹೆಸರು ಪ್ರಕಾಶವಾಗಿ ಬಂದಿತು. ಪ್ರಕಟನೆಗಳನ್ನು ಕಂಡ ಊರಿನ ಮಹಾನುಭಾವರ ಕಣ್ಣು ಕುಕ್ಕದೆ ಇರಲಿಲ್ಲ. ಇಷ್ಟೊಂದು ಧನ ಸಹಾಯವನ್ನು ಮಾಡಿದ ಮಹನೀಯರೆಲ್ಲರೂ ಉತ್ತರ ಹಿಂದುಸ್ಥಾನದವರೇ ಎಂಬುದನ್ನುಕಂಡು ನಮ್ಮನ್ನು ಕೇಳಿದರೆ ನಾವೇನು ಸಹಾಯಮಾಡುತ್ತಿರಲಿಲ್ಲವೇ? ಬರಿಯ ಇನ್ನೂರು ರೂಪಾಯಿಗಳ ಮೇಲೆ ಹಣ ಕೊಟ್ಟವರ ಹೆಸರನ್ನು ಚಂದ್ರ ಕಾಂತ ಶಿಲೆಯಲ್ಲಿ ಕೆತ್ತಿಸಿ ಹಾಕುತ್ತೇವೆ ಎಂದಿದ್ದರೆ—ಯಾರು ಸಹಾಯ ಮಾಡುತ್ತಿರಲಿಲ್ಲ.? ಊರಲ್ಲಿಯೇ ಕುಳಿತು, ಇಷ್ಟು ಹಣವನ್ನು ಒಟ್ಟು ಮಾಡಬಹುದಿತ್ತು. ಇದು ಊರವರನ್ನು ಅಪಮಾನ ಮಾಡುವುದಕ್ಕೇ ಮಾಡಿದ ಕೆಲಸ" ಎಂಬ ಉದ್ಗಾರವು ಹೊರಟಿತು.

ಅಂಥ ಮಾತುಗಳನ್ನುಕೇಳಿದರೆ ಪ್ರಭುದೇವನಿಗೆ ಒಂದುಬಗೆಯ ಸಂತೋಷ. ಪ್ರಾರಂಭೋತ್ಸವದ ಹೊರೆಯು ರಾಧಾಕೃಷ್ಣನ ಮೇಲೆ ಸಾಕಷ್ಟು ಇದ್ದುದರಿಂದ-ಈ ವಿಷಯದಲ್ಲಿ ಪ್ರಪಂಚ ಏನು ಅಂದೀತು ಎಂಬ ಗೊಡವೆಯಲ್ಲಿ ಆತನಿರಲಿಲ್ಲ. ಈಗ ಆ ಶುಭದಿನವೇ ಬಂದಿದೆ. ಊರ ಪ್ರಮುಖರೆಲ್ಲರಿಗೂ ಆಮಂತ್ರಣ ಹೋಗಿತ್ತು. ರಾಧಾಕೃಷ್ಣನ ಬಲವಂತದಿಂದ ಡಾ। ನಂದರವರಿಗೂ ಆಮಂತ್ರಣ ಕಳುಹಿಸಿದ್ದರು. ಅವರು ಸ್ವಾಭಾವಿಕವಾಗಿ 'ಊರಲ್ಲಾಗುವ ಇಂಥ ಕೆಲಸಗಳಿಗೆ ತಮ್ಮಂತಹರನ್ನು ಅನಾವರಣ ಮಾಡಲು ಕರೆಯಬಹುದು, ಎಂದು ಎಣಿಸಿದ್ದರು. ಪ್ರಭುದೇವ ಅನಾವರಣದ ಪ್ರಶ್ನೆಯನ್ನೇ ಸೂಚಿಸಿರಲಿಲ್ಲ.

ಆ ಬಗೆಯ ಶಾಲೆಯೇ ಊರಿಗೆ ನವೀನ. ಮಿಂಚಿನ ವೇಗದಿಂದ ಶಾಲೆ ಮೊಳೆತು ತಲೆ ಎತ್ತಿದುದರಿಂದಂತು ಜನರ ಕೂತೂಹಲ ಇನ್ನಷ್ಟು ಹೆಚ್ಚಿತು. ಜೀವನಕ್ಕಾಗಿ ಹೋರಾಡುತ್ತಿರುವ ಹಲವರು—ತಮ್ಮ ಮಕ್ಕಳಿಗೆ, ಉದ್ಯೋಗ ಶಿಕ್ಷಣ ದೊರೆತು, ಮುಂದಿನ ಜೀವನಕ್ಕೊಂದು

ದಾರಿಯಾಗಲಿ – ಎಂದು ಬಯಸಬಹುದಾದ್ದು ಸ್ವಾಭಾವಿಕ. ಮೊದಲ ವರ್ಷವೇ ಐವತ್ತು ಮಕ್ಕಳಿಗೆ ಪ್ರವೇಶ ದೊರೆಯಬಹುದು. ಅವರಲ್ಲಿ ತೀರ ಬಡವರಾದ ಇಪ್ಪತ್ತು ಮಂದಿಗೆ ಅಲ್ಲಿಯೇ ಊಟ ವಸತಿಗಳ ಏರ್ಪಾಡು ನಡೆದಿತ್ತು. ಅನ್ನ, ಶಿಕ್ಷಣ ಎರಡೂ ದೊರೆಯುವಾಗ ಹಾತೊರೆಯುವ ಜನ ಕಡಿಮೆಯೇ?

ಶಾಲೆಯ ಪ್ರಾರಂಭೋತ್ಸವವು, ಅದರ ಪಾಯ ಹಾಕುವ ದಿವಸ ಮಾಡಿದಂತೆಯೇ—ಗಣ ಹೋಮ ಪೂಜೆಗಳಿಂದ ತೊಡಗಿತು. ಪ್ರಭುದೇವ ಬಂಧು-ಅತಿಥಿಗಳನ್ನು ಸ್ವಾಗತ ಮಾಡಿದನು. ಅವರೆಲ್ಲರ ಸಭೆಯೂ ಜರಗಿತು. ಸಭೆಯ ಮುಂದೆಕ್ಕೆ ಜನರಿಗೆ ತೀರ ನವೀನವಾಗಿ ಕೇಳಿಸಿದ ಹಲವಾರು ಹಿರಿಯರ, ಶುಭಸಂದೇಶಗಳನ್ನು ಕೋರಿ ಬರೆದ ತಂತಿಗಳನ್ನೂ ಓದಲಾಯಿತು. ಅನಂತರ ಪ್ರಭುದೇವನು "ನಮ್ಮ ಈ ಉದ್ಯೋಗ ಮಂದಿರದ ಪ್ರಿನ್ಸಿಪಾಲರು ಇವರು" ಎಂದು ರಾಧಾಕೃಷ್ಣನನ್ನು ಕುರಿತಾಗಿ ಅನುರೂಪವಾದ ಪ್ರಶಂಸೆಗಳನ್ನು ಸಲ್ಲಿಸಿದನು. ಅನಂತರ "ನಾವು ಕ್ಷಿಪ್ರದಲ್ಲಿಯೇ ಒಂದು ವಿಶಾಲವಾದ ಗೋಶಾಲೆಯನ್ನೂ, ಕೃಷಿಶಾಲೆಯನ್ನೂ ತೆರೆಯಲು ಸಂಕಲ್ಪಿಸಿದ್ದೇವೆ ಎಂದು ನುಡಿದನು."

ನಮ್ಮ ರಾವ್ ಬಹದ್ದೂರ ರಾಮಕೃಷ್ಣಯ್ಯನವರು ರಾಧಾಕೃಷ್ಣನ ಬೆನ್ನನ್ನು ಹಿಡಿದು, ನಾಲ್ಕು ಹಿತವಚನಗಳನ್ನು ನುಡಿಯುವ ಅವಕಾಶ ಗಳಿಸಿದರು. ಅವರಿಗೆ ಈ ಸುಸಂಧಿಯನ್ನು ಕಂಡು ಆನಂದಾಶ್ರುಗಳು ಉದುರಿದುವು. ಅವರು ಇಂಥ ಯಾವ ಕೆಲಸವನ್ನಾದರೂ ಮೆಚ್ಚುವವರೇ. ತಮ್ಮ ಕೆಲವೇ ಮಾತುಗಳಲ್ಲಿ "ಎಂಥೆಂಥ ಶ್ರೀಮಂತರು ಮಾಡಬೇಕಾದ ಈ ಕೆಲಸವನ್ನು, ಇಬ್ಬರು ತರುಣ ಸಾಹಸಿಗಳು ಸಾಧ್ಯಮಾಡಿ ತೋರಿಸಿದ್ದಾರೆಂದರೆ, ನಮ್ಮ ತರುಣರ ಕರ್ತೃತ್ವ ಶಕ್ತಿಯನ್ನು ತೋರಿಸುತ್ತದೆ. ನಾಳಿನ ಹಿಂದುಸ್ಥಾನವನ್ನು ನಡೆಯಿಸಲು ಇವರೇ ತಕ್ಕವರು — ನಮ್ಮಂಥ ಮುದುಕರು, ನಿವೃತ್ತರು ಈ ಮಹಾ ಕೆಲಸವನ್ನು ಹರಸುವುದಕ್ಕೆ ಮಾತ್ರ" ಎಂದು ನುಡಿದು, ತಾವೇ ಮುಂಮುವರಿದು ನೂರು ರೂಪಾಯಿಗಳ ದಾನವನ್ನು ಕೊಟ್ಟು, "ತಾವೆಲ್ಲರೂ ಸಹಕರಿಸಬೇಕು" ಎಂದು ತಮ್ಮ ಸಹಕಾರಿ ಆತ್ಮಕ್ಕೆ ತೃಪ್ತಿ ತಂದುಕೊಂಡರು. ಪ್ರಭುವಿಗೆ ತುಂಬ ಆನಂದವಾಯಿತು. ಅಲ್ಲಿಯೇ ಸಿದ್ಧನಾಗಿದ್ದ ಒಂದು ಹಾರವನ್ನು

ಅವರ ಕೊರಳಿಗೆ ಹಾಕಿ, "ತಮ್ಮಂತಹ ಹಿರಿಯರ ಆಶೀರ್ವಾದ ತೀರ ಅವಶ್ಯ" ಎಂದು ನುಡಿದನು.

ಅನಂತರ ಅಲ್ಲಿ ನೆರೆದ ಅತಿಥಿ, ಅಭ್ಯಾಗತರಿಗೆ ಶಾಲೆಯ ವಿವಿಧ ಇಲಾಖೆಗಳನ್ನೂ, ಈಗಿನ ಗೋಶಾಲೆಯನ್ನೂ, ಹುಲ್ಲು ಬೆಳೆದ ಜಾಗ ವನ್ನೂ ತೋರಿಸಿ, ಹೊಸ ಶಿಕ್ಷಕರ ಪರಿಚಯ ಮಾಡಿಕೊಟ್ಟದ್ದಾಯಿತು. ಮಧ್ಯಾಹ್ನದ ತನಕ-ನೆರೆದವರಿಗೆ ಉದ್ಯೋಗ ಶಾಲೆಯ ವಿವಿಧ ಕಾರ್ಯ ಕಲಾಪಗಳನ್ನು ವಿವರಿಸುವ ಕೆಲಸವಾಯಿತು. ಅನಂತರ ಹಸಿದವರಿಗೆ ಅನ್ನದಾನದ ಕಾರ್ಯಕ್ರಮ. 'ಪ್ರಾಣದಾನಕ್ಕೂ,ಅನ್ನದಾನಕ್ಕೂ ವ್ಯತ್ಯಾಸವಿಲ್ಲ'ವೆಂದು ತಿಳಿದ ರಾಮಕೃಷ್ಣಯ್ಯನವರು ತುಂಬ ಹಿಗ್ಗಿಹೋದರು. ನಡುವನ್ನು ಬಿಗಿದು, ಊಟಕ್ಕೆ ಕುಳಿತವರಿಗೆ ಅನ್ನವನ್ನು ಬಡಿಸಿದರು. ಅದೆಲ್ಲ ಮುಗಿದಬಳಿಕ, ಸಭೆಗೆ ಬಂದು, ಹಿಂದಿರುಗಲು ಇಷ್ಟಪಡದೆ ಕುಳಿತವರ ಊಟ ಉಪಚಾರಗಳು ನಡೆದುವು. ಸಂಜೆಯ ತನಕ ರಾಮಕೃಷ್ಣಯ್ಯನವರು ಅಲ್ಲಿಯೇ ಇದ್ದರು. ಹೊರಡುವಾಗ "ನನಗೆ, ಮುದುಕನಿಗೆ ವಿರಾಮ ತುಂಬಾ ಇದೆ. ನಿತ್ಯವೂ ಬಂದು ಹೋಗುತ್ತೇನೆ. ನಿಮ್ಮದೇನಾದರೂ ಬರವಣಿಗೆ, ಲೆಕ್ಕ ಪತ್ರಗಳನ್ನು ಇರಿಸಬಲ್ಲೆ. ನಿಮ್ಮಂತಹ ಕೆಲಸಗಾರರ ಜತೆಯಲ್ಲಿ ಸೇರಿ ಒಂದಿಷ್ಟಾದರೂ ಸೇವೆ ಸಲ್ಲಿಸಬೇಕೆಂಬುದು ನನ್ನ ಆತುರ" ಎಂದು ಹೋದರು.

ಪ್ರಭುದೇವನಿಗೂ ಅವರ ನಡತೆಯನ್ನು ಕಂಡು ಆಶ್ಚರ್ಯವಾಯಿತು. ಅವರ ವಿಷಯದಲ್ಲಿ ಅವನಿಗೆ ಬೇರೆಯೇ ಅಭಿಪ್ರಾಯವಿತ್ತು. ಪುರುಷೋತ್ತಮ, ನಂದ ಮೊದಲಾದವರ ಪಂಗಡಕ್ಕೆ ಅವರನ್ನು ಸೇರಿಸಿದ್ದನು. ಅವರು ಹಾಗೆ ಒಡನಾಡುತ್ತಿದ್ದುದೂ ಉಂಟು. ಆ ದಿನ ಡಾ। ನಂದರಾಗಲಿ, ಶ್ರೀ ಪುರುಷೋತ್ತಮರಾಗಲಿ ತಮ್ಮ ಆಮಂತ್ರಣವನ್ನು ಮನ್ನಿಸಿ ಬಾರದುದರಿಂದ, ಇವರೊಬ್ಬರ ಆಗಮನವನ್ನು ಕಂಡು "ಇವರು ನಂದರ ಸಿ. ಐ. ಡಿ. ಆಗಿ ಬಂದಿದ್ದಾರೆ" ಎಂದಿದ್ದ. ಆದರೆ ಆ ದಿನ ಅವರು ಆಡಿದ ಮಾತುಗಳು, ಮಾಡಿದ ದಾನ, ಇವುಗಳಿಂದಾಗಿ, ಅವರು ತೀರ ನಿಷ್ಕಪಟಿಗಳು ಎಂದು ಅಭಿಪ್ರಾಯಪಡುವಂತಾಯಿತು. ಅದೇ ಮಾತನ್ನೇ ಆತ ರಾಧಾಕೃಷ್ಣನೊಡನೆ ಚರ್ಚಿಸುತ್ತಿದ್ದ. ರಾಧಾಕೃಷ್ಣ ನುಡಿದನು: "ಅವರು ತೀರ ಸರಳರು. ಎಲ್ಲರನ್ನೂ ನಂಬು

ತ್ತಾರೆ, ಎಲ್ಲವನ್ನೂ ನಂಬುತ್ತಾರೆ. ಹಾಗಾಗಿ ದೊಡ್ಡ ಮಾತುಗಳನ್ನು ಆಡುವವರಲ್ಲಿ ನಂಬಿಕೆ ಇಡುತ್ತಾರೆ. ಈಗೀಗ ಅವರಿಗೂ ತಿಳಿದಿದೆ—ಅವರೆಲ್ಲ ಹೆಸರಿಗಾಗಿ ಒದ್ದಾಡುವವರೆಂದು; ಅಧಿಕಾರಕ್ಕಾಗಿ ಬಾಯಿ ಬಿಡುವವರು ಎಂದು. ಆದರೆ ಹಳೆಯ ಸ್ನೇಹವನ್ನು ಮುರಿಯಲಾರರು; ಇದ್ದ ಸ್ನೇಹ ಹೆಚ್ಚಿಸಲಾರರು."

ಮರುದಿವಸದಿಂದ ಶಾಲೆಗೆ ವಿದ್ಯಾರ್ಥಿಗಳನ್ನು ಸೇರಿಸುವ ಕೆಲಸವಾಯಿತು. ಇದರಲ್ಲಿ ರಾಧಾಕೃಷ್ಣನ ಹಳೆಯ ಅನುಭವವು ಸಹಾಯವಾಯಿತು. ಇದೊಂದು ದಲಿತ ವಿದ್ಯಾಪೀಠವೋ, ರಾಷ್ಟ್ರೀಯ ಶಾಲೆಯೋ ಆಗಿ ನಶಿಸಬಾರದೆಂದು ಅವನ ಹಾರೈಕೆ. ಆದುದರಿಂದ ಓದು ಬರಹ ಬಾರದ ಮಕ್ಕಳಿಗೆ ಅಲ್ಲಿ ಪ್ರವೇಶ ಕೊಡಲು ಧೈರ್ಯಪಡಲಿಲ್ಲ. ಅನೇಕ ಪ್ರವೇಶ ಅರ್ಜಿಗಳನ್ನು ಇರಿಸಿಕೊಂಡು, ಹುಡುಗರನ್ನು ಕರೆದು, ಅವರ ಸ್ಥಿತಿಗತಿಗಳನ್ನು ಚರ್ಚಿಸಿ, ಆರಿಸುತ್ತ ಬಂದನು. ಅರ್ಜಿಗಳು ರಾಶಿಗಟ್ಟಲೆ ಬಂದಿದ್ದವು. ಪ್ರಭುದೇವನಂತೂ "ಆ ಕೆಲಸವೆಲ್ಲ ನಿಮ್ಮ ಮೇಲೆ. ದುಡ್ಡು ಬೇಕೋ ನನ್ನನ್ನು ಕೇಳಿ" ಎಂದು ಹೇಳಿ ಹೋದನು.

ಎಷ್ಟೋ ಮಂದಿ ಬಾಲಕರು ಅವನ ಕಾಲುಕಟ್ಟಿ ನಿಂತಿದ್ದರು. ಪ್ರಭುದೇವನ ಪ್ರಚಾರದಿಂದಾಗಿ ಬಂದವರ ಸಂಖ್ಯೆ ಅಧಿಕ. ಅವರನ್ನು ಆರಿಸುವ ಕೆಲಸವೂ ಸುಲಭವಾಗಲಿಲ್ಲ. ಅವರಲ್ಲಿ ಅನೇಕರು "ಇವನು ಬಡವ, ಧರ್ಮಾರ್ಥ ವಸತಿ ಶಿಕ್ಷಣಗಳಿಗೆ ಯೋಗ್ಯ" ಎಂದು ಬರೆಯಿಸಿಕೊಂಡು ಬಂದಿದ್ದರು. ಊರಿನ ಅಧಿಕಾರಿಗಳು, ಮಾತುಗಾರರು, ಎಲ್ಲರೂ ಬೇಕಾದವರಿಗೆ ಬೇಕಾದಂತೆ ಶಿಫಾರಸು ಪತ್ರ ಕೊಟ್ಟಿದ್ದರು. ಅವರಲ್ಲಿ ಅರ್ಜಿದಾರರ ಪರಿಚಯವಿಲ್ಲದವರ ಪತ್ರಗಳೇ ಬಹಳ. ಈ ಬಗೆಯ ವಾಕ್‌ಸಹಾಯವನ್ನು ಹಲವರು ಮಾಡಿದ್ದರು. ಈತ ಬಂದವರಲ್ಲಿ ತೀರ ಬಡವರಾದವರನ್ನೂ, ಮನೆ ಬಹಳ ದೂರ ಇರುವವರನ್ನೂ ವಸತಿ ಗೃಹಕ್ಕೆ ಸೇರಿಸಿಕೊಂಡನು.

ಈಗ ಅವನಿಗೆ ತನ್ನ ನವೀನವಾದ ಲೋಕದ್ದೇ ಕಲ್ಪನೆ. ಮನೆ ತೀರ ಸಮೀಪವಿದ್ದರೂ ಹತ್ತು ನಿಮಿಷ ವಿರಾಮವಾಗಿ ಕಾಲ ಕಳೆಯಲಾರ. ಚಂದ್ರ ಕಾಡಿದರೂ ಅವನೊಡನೆ ಮಾತನಾಡುವ ಬಿಡುವಿಲ್ಲ. ಒಂದು ತಿಂಗಳೊಳಗಾಗಿ ಸತ್ಯ, "ಈ ನಿಮ್ಮ ಹೊಸ ಕೆಲಸವೆಂದರೆ ಕುಳಿ

ತಲ್ಲಿಯೋ ಕಟ್ಟಿಕೊಂಡ ಜೈಲು" ಎಂದು ಎನ್ನುವಂತಾಯಿತು.

"ಕೆಲಸ ಕಟ್ಟಿಕೊಂಡ ಮೇಲೆ ಅದು ಒಂದು ಜೈಲೇ" ಎಂದು ನಗುತ್ತಾನೆ ಅವನು. ಪತಿಯು ಈ ಶಿಕ್ಷಣ ವೃತ್ತಿಯಲ್ಲಿ, ಸತ್ಯಳಿಗೆ ಯಾವ ಕೆಲಸವೂ ಇಲ್ಲ. ಅವಳ ದಾರಿಯೂ ಬೇರೆ; ತಿಳಿವೂ ಬೇರೆ. ಅವಳಿಗೀಗ ಮನೆ ಕೆಲಸದಲ್ಲಿ ವಿರಾಮವಿದೆ. ಜತೆಗೆ ದುಡಿಯಲು ಶ್ಯಾಮನ ಹೆಂಡತಿ ಕಲ್ಯಾಣಿ ಇದ್ದಾಳೆ. ಆದುದರಿಂದ ಗೋಶಾಲೆಯಲ್ಲಿ ಹೆಚ್ಚಿನ ಸಮಯ ಕಳೆಯುತ್ತಾಳೆ. ನಾಲ್ಕಾರು ಸುಂದರ ಹಸುಗಳೂ ಅಲ್ಲಿಗೆ ಬಂದಿದ್ದುವು. ಹಿಂಪಸಿಗೆ ಅವುಗಳ ಕರುಗಳೊಡನೆ ಆಟವಾಡುವುದೆಂದರೆ ಇಷ್ಟ. ಈಕೆ ಹಸಿ ಹುಲ್ಲನ್ನು ಹೆರೆದು ತರುತ್ತಾಳೆ. ಶ್ಯಾಮ ಅದನ್ನು ಕಂಡು "ಬೇಡವ್ಮ, ಆಳುಗಳಿಲ್ಲವೇ? ನಾಲ್ಕು ದಿನವಾದರೂ ಸುಮ್ಮನೆ ಕುಳಿತಿರಬಾರದೇ?" ಎಂದು ಕೇಳಿದರೆ "ಹಾಗೆ ಕೆಲಸವಿಲ್ಲದೆ ಕುಳಿತರೆ ಹುಚ್ಚು ಹಿಡಿದೀತು. ಅಡುಗೆ ಮನೆಗೆ ಬಂದರೆ ಕಲ್ಯಾಣಿ 'ನೀವು ಬಿಡಿ' ಎಂದು ಗದರಿಸುತ್ತಾಳೆ. ಇಲ್ಲಿ ನೀನು ಗದರಿಸುತ್ತೀಯಾ. ನಾನೇನು ನೇಣು ಹಾಕಿಕೊಳ್ಳಬೇಕೇ — ಕೆಲಸವಿಲ್ಲದೆ" ಎಂದು ನಗುತ್ತಾಳೆ.

ಈ ನಡುವೆ ಒಮ್ಮೊಮ್ಮೆ ಅವಳಿಗೆ ಕೆಲವೊಂದು ಹೊಸ ಯೋಜನೆಗಳು ಬರುತ್ತವೆ. ಅವುಗಳನ್ನು ಕುರಿತು ಗಂಡನೊಡನೆ ಚರ್ಚಿಸಲು ಅವಕಾಶವೇ ಸಿಗುವುದಿಲ್ಲ. "ಶ್ಯಾಮಾ, ನೀನೂ ಅವರಷ್ಟೇ ಗಡಿಬಿಡಿಯಲ್ಲಿದ್ದರೆ ನಾನು, ಕಲ್ಯಾಣಿ ಗೋಡೆಯ ಹತ್ತಿರ ಮಾತನಾಡಬೇಕೆಂದು ಕಾಣುತ್ತದೆ."

"ಏನು ಸಂಗತಿ ಅಮ್ಮ ಅದು?"

"ಸಂಗತಿ ಏನಿಲ್ಲ-ಚಂದ್ರನಿಗೆ ಆರೇಳು ವರ್ಷವಾಯಿತು. ಜಂಡ ಪ್ರಸಾದರೆ ನಿಮ್ಮ ಶಾಲೆಗೆ ಹೋಗಿ ಕಟಕಟ ಮಾಡುತ್ತಾನೆ. ನಮ್ಮ ಮಗು ಹೀಗೆಯೇ ಇರುವುದೇ? ಅವನಿಗೆ ಓದುಬರಹ ಬೇಡವೇ? ಅವನೂ ಕಡಕಟ ಮಾಡಬೇಕೇ? ಓದು ಬರಹ ಬಾರದೆ, ನಿನ್ನ ಅಣ್ಣನ ಶಾಲೆಯಲ್ಲಿ ಅದಕ್ಕೂ ಬಿಡುವಂತಿಲ್ಲ" ಎಂದಳು.

"ಅವನಿಗೀಗ ಏಳು ವರ್ಷವಾಯಿತೇ? ಯಾರಿಗೆ ಗೊತ್ತು ಆ ಲೆಕ್ಕ. ಅಣ್ಣನಿಗೆ ಹೇಳುತ್ತೇನೆ. ಅವರಿಗಂತು ಪುರುಸೊತ್ತಾಗಲಿಕ್ಕಿಲ್ಲ. ಇಲ್ಲಿಂದ ಶಾಲೆಗೆ ಸ್ವಲ್ಪ ದೂರವಿದೆ. ಯಾರಾದರೂ ಉಪಾಧ್ಯಾಯರನ್ನು

ನೇಮಿಸದಿದ್ದರೆ ಅವನ ವಿದ್ಯೆ ಹಾಳಾದೀತು" ಎಂದನು. ಆ ವಿಷಯ ವನ್ನು ಶ್ಯಾಮನೊಡನೆ ಚರ್ಚಿಸುವುದಕ್ಕೂ ವಿರಾಮ ಬೇಕಾಗಿತ್ತು. ಪತಿಯ ತಲೆಯಲ್ಲಂತೂ ಸದಾ ಕವಸ್ಸ್ವಾರಸಾಲೆ ನಲಿಯುತ್ತಿದೆ.

ಇನ್ನೊಂದು ದಿವಸ ಸತ್ಯ "ಶ್ಯಾಮಾ, ಇಲ್ಲಿ ನೀರು ಇಷ್ಟು ಮೋರಿ ಕ್ಕಿದೆ. ಒಂದು ತರಕಾರಿ ಹಿತ್ತಿಲು ಮಾಡಬೇಕೆಂದಿದೆ. ಎತ್ತರದ್ದೊಂದು ದರೆ ಹಾಕಿಸಿಕೊಡು. ಆ ಮೇಲಿನ ಜವಾಬ್ದಾರಿ ನನ್ನದು. ದರೆ ಇಲ್ಲದೆ ಹೋದರೆ, ನಿನ್ನ ಗೋಶಾಲೆಯ ಮೆಂಬರರು ಬಂದು, ಒಂದು ಹೂರನ್ನೂ ಇರಿಸಲಾರರು" ಎಂದಳು. ಅವನಿಗೂ ಅದರ ಅವಶ್ಯಕತೆ ಕಾಣುತ್ತಿತ್ತು. ಈಗ ಮನೆ, ವಸತಿಗೃಹಗಳಿಗೆ ಬೇಕಾದುದನ್ನೆಲ್ಲ ಪೇಟೆಯಿಂದಲೇ ತರಿಸಿಕೊಳ್ಳುತ್ತಿದ್ದಾರೆ. "ನಾವೇಕೆ ತರಕಾರಿಗಳನ್ನು ಬೆಳೆಯಿಸಬಾರದು" ಎಂಬುದನ್ನು ಆತ ಒಪ್ಪಿದ.

"ಹಾಗೆ ದೊಡ್ಡ ಹಿತ್ತಿಲು ಮಾಡಿ, ಆಳು ಗೀಳು ಹಾಕಿಸುವ ಕೆಲ ಸಕ್ಕೆ ನಾ ಇಲ್ಲ. ಮನೆಗೆ ಬೇಕಾದಷ್ಟು ಬೆಳೆಸುವ ಎಂದಿದೆ. ಸುಮ್ಮನೆ ಕುಳಿ ತಿರುವ ಬದಲು ಕೆಲಸ ಮಾಡುತ್ತಿರಬಹುದಲ್ಲ. ಯಾಕೋ ಶ್ಯಾಮು, ಕಿರಿ ಪದವಿನಿಂದ ಬಂದ ಮೇಲೆ, ಅದರಲ್ಲಿಯೂ ಊರಿಗೆ ಹೋಗಿ ಬಂದ ಮೇಲೆ, ಮೈ ಜಡಕಟ್ಟಿ ಹೋಗಿದೆ. ಎಷ್ಟು ದುಡುಕಿದ್ದೆ ನಾನು. ಈಗ ಸೋಮಾರಿಯಾಗಿ ಕಾಣುತ್ತೇನೆ" ಎಂದಳು.

"ಅಮ್ಮಾ, ನಿಮ್ಮ ಆಯುಷ್ಯಕ್ಕೇನೆ ಸಾಕಾಗುವಷ್ಟು ಕೆಲಸವನ್ನು ಎಂಟು ವರ್ಷದಲ್ಲಿ ಮುಗಿಸಿದ್ದೀರಿ. ಸ್ವಲ್ಪ ಕಾಲ ಹಾಗೆಯೋ ಕುಳಿತಿರಿ"

"ಆಗ ಶ್ಯಾಮು, ನೀನೂ ನನ್ನಂತೆ ದುಡಿಯಲಿಲ್ಲವೆ? ಆಗ ಉಪಾಯವಿಲ್ಲದೆ ದುಡಿದೆವು. ದುಡಿಯದಿದ್ದರೆ ದಿನ ಹೋಗುವ ಹಾಗಿರಲಿಲ್ಲ. ರಾತ್ರಿ ಕಳೆದರೆ ಬೆಳಗಿನದು ನಡೆಯುತ್ತಿರಲಿಲ್ಲ; ಬೆಳಗು ಕಳೆದರೆ ರಾತ್ರಿಯದು ನಡೆಯುತ್ತಿರಲಿಲ್ಲ. ಈಗ ಸುಮ್ಮನೆ ಕುಳಿತರೆ ಬೇಸರವಾಗುತ್ತದೆ. ಅಷ್ಟಕ್ಕಾದರೂ ಸಾಕಷ್ಟು ಕೆಲಸ ಬೇಡವೇ?"

ಅಂತೂ ಅವಳ ಹಟದಿಂದ ಚಿಕ್ಕದೊಂದು ಆವರಣಕ್ಕೆ ದರೆಯನ್ನು ಹಾಕಿಸಿಕೊಟ್ಟ. ದರೆ ಆದೊಡನೆಯೆ ಆಕೆ "ಶ್ಯಾಮಾ, ಅಪ್ಪಣೆ ಇಲ್ಲದೆ ನನ್ನ ಈ ಹಿತ್ತಿಲಲ್ಲಿ ಯಾರಿಗೂ ಪ್ರವೇಶವಿಲ್ಲ. ಬದರ ನಟ್ಟಿ, ಗೊಬ್ಬರ, ನೀರು ನನ್ನ ಜವಾಬ್ದಾರಿ" ಎಂದು ನಕ್ಕಳು.

"ಹಾಗಾದರೆ ನನ್ನ ಗೋಶಾಲೆಯಲ್ಲಿ ಇನ್ನಾರಿಗೂ ಪ್ರವೇಶವಿಲ್ಲ" ಎಂದನು ಶ್ಯಾಮು.

"ಅದನ್ನು ಮೊದಲು ತೊಡಗಿದವಳು ನಾನು; ಅದರಿಂದ ನನ್ನನ್ನು ಬರಕೊಡದೆನ್ನುವ ಅಧಿಕಾರ ನಿನಗಿಲ್ಲ" ಎಂದು ಅವನನ್ನು ಮಾತಿನಲ್ಲಿ ಸೋಲಿಸಿದಳು.

ರಾಧಾಕೃಷ್ಣನ ಹೇಳಿಕೆಯಂತೆ ಸಮಯ ಕಳೆಯಲು ಆಕೆ ಅಷ್ಟು ಒದ್ದಾಡಬೇಕಾಗಿರಲಿಲ್ಲ. ಆತ ಅವಳಿಗೆ ಹೇಳುತ್ತಿರುವ "ಏನಾದರೂ ಪುಸ್ತಕ ಓದಬಾರದೇ" ಎಂದು. ಕಾಲಕ್ಷೇಪಕ್ಕೆ ಅದು ಅವನ ಚಿಕಿತ್ಸೆ. ಆದರೆ ಅವಳ ಸ್ವಭಾವ ಬೇರೆ. ಮೊದಲಿನಿಂದಲೂ ಮುಡಿತವೇ ಅವಳ ಓಮು; ಈಗ ಹೊಸ ಚಾಳಿ ಯಾವುದೂ ಅವಳಿಗೆ ಒಗ್ಗುವಂತಿರಲಿಲ್ಲ. ಅದಕ್ಕಾಗಿಯೇ ತರಕಾರಿ ತೋಟವನ್ನು ಬಯಸಿದಳು. ಆದರೆ ಸ್ವಲ್ಪ ಸಮಯದಲ್ಲಿಯೇ ಅವಳ ರಾಜ್ಯ ವಿಸ್ತರಿಸಬೇಕಾಯಿತು. ವಸತಿ ಗೃಹದಲ್ಲಿ—ಆ ಹುಡುಗನಿಗೆ ಕಾಯಿಲೆ, ಇವನು ಮಲಗಿಕೊಂಡಿದ್ದಾನೆ-ಎಂಬ ಕರೆ ಬರುತ್ತಲೇ, ಓಡಾಡಬೇಕಾಯಿತು. ಅದು ಅವಳ ಮೆಚ್ಚಿಗೆಯ ಕೆಲಸ. ಅವರನ್ನು ತಮ್ಮ ಮನೆಯ ಒಂದು ಕೋಣೆಯಲ್ಲಿ ತಂದು ಮಲಗಿಸಿ, ಶುಶ್ರೂಷೆ ಮಾಡುವುದು ಅವಳ ಭಾರ. ಕ್ರಮೇಣ ವಸತಿ ಗೃಹದ ಮಕ್ಕಳಿಗೆಲ್ಲ ಅವಳೇ ತಾಯಿಯಾದಳು. ಹೀಗೆ ವಾತ್ಸಲ್ಯ ಬೆಳೆದುದರ ಫಲವಾಗಿ, ಅವಳು ಬೆಳೆಯಿಸಿದ ತರಕಾರಿ ತೋಟ, ಕೆಲಸಕ್ಕೆ ಸಣ್ಣದಾಯಿತು. ಅವಳನ್ನು ಕೇಳುವ ಮೊದಲೇ ಹುಡುಗರು ಬಂದು ಗಿಡಕ್ಕೆ ನೀರೆರೆದು ಹೋಗುತ್ತಿದ್ದರು. "ನೀವು ಹೋಗಿ ಆಟವಾಡಿ" ಎಂದರೆ ಅವರು "ಹಾಗಾದರೆ ನಮಗೊಂದು ಹಿತ್ತಿಲು ಮಾಡಿಕೊಡಿ. ನಮ್ಮಲ್ಲಿಗ ಬೇಕಾದುದನ್ನು ನಾವು ಬೆಳೆಯುತ್ತೇವೆ. ನೀವು ದುಡಿಯುವಷ್ಟು ನಾವು ದುಡಿಯಬೇಡವೆ?" ಎನ್ನುತ್ತಾರೆ.

ಒಂದು ವರ್ಷ ಕಳೆಯುವುದರೊಳಗಾಗಿ—ಸತ್ಯ ಇನ್ನೊಮ್ಮೆ, ಮಕ್ಕಳಿರುವ ಹಿರಿಯ ಸಂಸಾರದ ಯೋಚನೆ, ನಗುಗಳನ್ನು ಹೊತ್ತು ನಲಿಯುವಂತಾಯಿತು. ರಾಧಾಕೃಷ್ಣನೀಗ ತೀರ ಹಸನ್ಮುಖಿಯು. "ನನ್ನ ಬದುಕಿನಲ್ಲಿ ಇಂಥ ಸುಖದ ದಿನವನ್ನು ಕಂಡಿರಲಿಲ್ಲ" ಎಂದು ಹಣೆಯ ಬೆವರನ್ನು ಬೆರಳಿನಿಂದ ಗೀಸುತ್ತ ನುಡಿಯುತ್ತಿದ್ದಾನೆ. ಸತ್ಯ

ಆ ನಡೆನುಡಿಯ ವಿಪರ್ಯಾಸವನ್ನು ತೋರಿಸಿಕೊಡುತ್ತ "ಹೋ, ಬೆರಳಿನಿಂದ ಸವರಿ ಸಿಡಿಯುತ್ತಿರುವುದು ಆನಂದಭಾಷ್ಪವನ್ನೇ" ಎಂದು ಪರಿಹಾಸ್ಯಮಾಡುತ್ತಾಳೆ.

ಅವರ ಆವರಣದಲ್ಲಿ, ಅಯಾಚಿತವಾಗಿ ಕೆಲಸಕ್ಕೆ ಒದಗುತ್ತಿದ್ದ 'ಅತಿಥಿಗಳೆಂದರೆ ರಾ। ಬ। ರಾಮಕೃಷ್ಣಯ್ಯನವರು. ಎಷ್ಟೋ ಬಾರಿ ಅಲ್ಲಿಗೆ ಬಂದು 'ಕೆಲಸ—ಏನಿದೆ?'ಎಂದು ಬೇಡಿ, ಮಾಡಿಕೊಟ್ಟು ಹೋಗುತ್ತಾರೆ. ರಾಧಾಕೃಷ್ಣನ ಪತ್ರವ್ಯವಹಾರಕ್ಕೆ ಅವರು ಸಹಾಯಕರು. ಹಣದ ಲೆಕ್ಕಾಚಾರ ಬರೆಯುವುದಕ್ಕೂ ಅವರ ಮೇಲ್ಪಂಕ್ತಿ. ಎಲ್ಲಿ ಏನು ಕೊರತೆ ಇದ್ದರೂ ತಮಗೆ ತಿಳಿದಷ್ಟು ದುಡಿಯುತ್ತಾರೆ. ಕೆಲವು ಬಾರಿ ಅನ್ನುತ್ತಾರೆ—"ಮಿ। ರಾಧಾಕೃಷ್ಣ, ನನ್ನ ಆಯುಷ್ಯ ನಿಮ್ಮ ಜತೆಗೆ ಸೇರಿ ನಾಲ್ಕು ವರ್ಷ ಹೆಚ್ಚಿತು" ಎಂದು.

"ಅಷ್ಟೊಂದು ಹಣ ಸರಕಾರಕ್ಕೆ ನಷ್ಟವಾಗಲೆಂದೇ? ಪೆನ್‌ಶನ್ ಕೊಡಬೇಡವೇ ಅವರು?"

"ಪೆನ್‌ಶನ್ ಬರುತ್ತದೆ,ಇದ್ದಷ್ಟು ದಿವಸ.ಮನೆಯವರಿಗೆ ಕೊಟ್ಟರೆ ಪುಡಿಮಾಡಿ ಹಾಕುತ್ತಾರೆ. ನನಗೆ ದಿನವೆಲ್ಲ ಆಫೀಸಿನಲ್ಲಿ ದುಡಿದು ಅಭ್ಯಾಸವಲ್ಲವೇ? ಪೆನ್‌ಶನ್ ಕಾಲ ಬಂದುದು, ಸಜೆ ಕೊಟ್ಟಂತಾಯಿತು. ಊರಿಗೆ ಬರುವಾಗ ಇಲ್ಲಿ ಏನಾದರೂ ಕೆಲಸಮಾಡಬಹುದು ಎಂಬ ಆಸೆಯಿತ್ತು. ಇಲ್ಲಿಯ ಮಹಾನುಭಾವರನ್ನು ನಂಬಿದೆ. ಅವರಲ್ಲಿ ಮಾತೇ ಸರಿ; ಕೆಲಸ ಕಡಿಮೆ. ಮಾಡಿಸುವವರೇ ಎಲ್ಲರು, ಮಾಡುವವರು ಅಲ್ಲ. ಒಮ್ಮೆ ಕೆಲಸವಿದ್ದರೂ ತಮ್ಮ ಜನರನ್ನು ಹೊರತು ಅನ್ಯರನ್ನು ನಂಬುವುದಿಲ್ಲ. ನನ್ನ ಜಾತಿಯ ಅಂಕಿತ ಬೇರೆಯೇ ಅಲ್ಲವೇ? ಇಲ್ಲಿ ಮಾತ್ರ ನೀವು ಯಾವ ಜಾತಿ ಅನುಮಾನವನ್ನೂ ಇಟ್ಟುಕೊಂಡಿಲ್ಲ. ನನಗೆ ದುಡಿದು ಸಮಯ ಹೋಗುತ್ತದೆ. ಸುಮ್ಮನೆ ಕುಳಿತವನಿಗೆ ಅರ್ಧಾಯುಷ್ಯವಲ್ಲವೇ?" ಎನ್ನುತ್ತಾರೆ.

ಅವರ ಮಾತಿಗೆ ಮೊದಲಿಗೆ ಒಪ್ಪಿಗೆ ಕೊಡುವವಳು ಸತ್ಯ. ರಾಧಾಕೃಷ್ಣನ ಒಪ್ಪಿಗೆ ಕೃತಿಯಲ್ಲಿಯೇ ಕಾಣಿಸುತ್ತದೆ. ಶ್ಯಾಮ ದುಡಿತದಲ್ಲಿ ಮೊದಲಿನಿಂದಲೂ ನುರಿತವನು. ರಾಮಕೃಷ್ಣಯ್ಯ "ಇಷ್ಟವಾದ ಕೆಲಸ, ಇಷ್ಟವಾದ ಸ್ನೇಹಿತರು ಸಿಕ್ಕಿದರೆ ಅವರ ಜತೆಗೆ ಕೆಲಸಮಾಡು

ವುದರಲ್ಲಿರುವ ಸುಖ ಉಂಡು ತೇಗುವುದರಲ್ಲಿಲ್ಲ" ಅನ್ನುತ್ತಾರೆ.

ಇವರಿಗೆಲ್ಲರಿಗೂ ವಿರುದ್ಧವಾದ ರೀತಿ ನಮ್ಮ ಪ್ರಭುದೇವನದು. ಅವನು ಆಗಾಗ ಅಲ್ಲಿಗೆ ಬರುತ್ತಿರುತ್ತಾನೆ. ಅವನಿಗೆ ಬಾಯಿ ತುಂಬ ಮಾತನಾಡಬೇಕು. ಯಾರೊಡನೆಯೂ ಸರಿಯೇ, ಮಾತಿಲ್ಲದೆ ಸಮಯ ಹೋಗದು. ರಾಧಾಕೃಷ್ಣ ಬಿಡುವಿಲ್ಲದೆ ದುಡಿಯುವುದನ್ನು ಕಂಡು "ನೀವು ಇನ್ನೊಬ್ಬರು ಸಹಾಯಕರನ್ನು ತೆಗೆದುಕೊಳ್ಳಿ. ಹಣಕ್ಕೆ ತೊಂದರೆಯಿಲ್ಲ. ಎಲ್ಲ ದುಡಿತವನ್ನೂ ಒಂದೇ ದಿವಸ ಮುಗಿಸುವವರಂತೆ ಯಾಕೆ ಮಾಡುತ್ತೀರಿ? ಅತಿಯಾದ ಶ್ರಮದಿಂದ ಆರೋಗ್ಯ ಕೆಟ್ಟೀತು. ನೀವೆಲ್ಲಾದರೂ ಒಂದು ದಿನ ಕಾಯಿಲೆಬಿದ್ದರೆ ಇಲ್ಲಿಯ ಕೆಲಸ ನಿಂತೀತು. ನೀವು ಸಮನಾದ ವಿಶ್ರಾಂತಿಯನ್ನು ತೆಗೆದುಕೊಳ್ಳಬೇಕು. ದಿನಕ್ಕೆ ಒಂದು ತಾಸಾದರೂ, ಯೋಚನೆ ಬಿಟ್ಟು, ನನ್ನ ಹಾಗೆ ಬತ್ತಿ ಹೊತ್ತಿಸಿ ಉಸ್ಸೆಂದು, ನಾಲ್ಕು ಹೆಜ್ಜೆ ತಿರುಗಾಡಲಿಕ್ಕೆ ಹೊರಡಬೇಕು. ರಸ್ಯಾದೇಶದಲ್ಲಿಯೂ ಕೆಲಸದ ಸಮಯಕ್ಕೆ ಮಿತಿ ಇದೆ. ನೀವು ಹಾಗೆ ಮಿತಿಮೀರಿ ಕೆಲಸಮಾಡಬಾರದು" ಎಂದು ಹೇಳುತ್ತಾನೆ.

ಆ ವಿಷಯದಲ್ಲಿ ತರ್ಕ ಮಾಡಲು ರಾಧಾಕೃಷ್ಣನೇನೋ ಸಿದ್ಧ. ಆದರೆ ಅವನಿಗೆ ತರ್ಕಕ್ಕೆ ನಿಲ್ಲುವುದಕ್ಕೂ ಸಮಯ ಸಿಗಬೇಕಲ್ಲ.

ಪ್ರತಿ ತಿಂಗಳು ವೆಚ್ಚಕ್ಕೆ ಬೇಕಾದಷ್ಟು ಹಣವನ್ನು ತಂದುಕೊಡುವಷ್ಟು ಕಾಲ, ಅವನಿಗೆ ಚರ್ಚೆ ಬೇಕಿರಲಲ್ಲ. ಪ್ರಭುದೇವನ ಮಾತಿಗೆ ಅವನು ಪ್ರತ್ಯುತ್ತರವನ್ನೂ ಹೇಳುತ್ತಿರಲಿಲ್ಲ.



# ಹದಿನೆಂಟನೆಯ ಅಧ್ಯಾಯ

ಡಾ| ನಂದರು ಇತ್ತೀಚೆಗೆ ತೀರ ತುಂಬ ಕಳವಳಕ್ಕೊಳಗಾಗಿದ್ದಾರೆ. ಅವರಿಗೆ, ಇಷ್ಟೊಂದು ಕಾಲ ತನ್ನ ಬೆನ್ನಹಿಂದೆ ಬಾಲ ಅಲ್ಲಾಡಿಸಿಕೊಂಡು ತಿರುಗುತ್ತಿದ್ದ ಪ್ರಭುದೇವ, ತನ್ನನ್ನು ಕೆಂಪು ತಾರೆಯಲ್ಲಿ ಬಹಿರಂಗವಾಗಿ ದೂಷಿಸುತ್ತಿರುವುದಲ್ಲದೆ, ಕಾಂಗ್ರೆಸ್ಸಿನಲ್ಲೂ ಇತರ ಸಾರ್ವಜನಿಕ ಚಟುವಟಿಕೆಗಳಲ್ಲೂ ಸ್ಪರ್ಧಿಸುತ್ತಿದ್ದಾನೆಂದು, ನೋವುಂಟಾಗಿದೆ. ಅವರು ಹಲವು ಗುಪ್ತ ವಿಚಾರಗಳನ್ನು ಅವನೊಡನೆ ಚರ್ಚಿಸಿದ್ದುಂಟು. ಅಂಥ ವ್ಯಕ್ತಿಯು ತನಗೆ ಎದುರಾಗಿ ನಿಲ್ಲುವುದರಲ್ಲಿ ಹಿತವಿಲ್ಲ. ಹೇಗಾದರೂ ಅವನ ಬಾಯನ್ನು ತಡೆಗಟ್ಟಬೇಕಾಗಿದೆ. ಇವರ ಹೇಳಿಕೆಯಂತೆ ನಡೆಯುವ ಪತ್ರಿಕೆಗಳು ಇಲ್ಲವೆಂದಲ್ಲ. ಅವುಗಳ ಮೂಲಕ ಪ್ರಭುದೇವನನ್ನು ಖಂಡಿಸಲು ಬರುವುದಿಲ್ಲವೆಂದಲ್ಲ. ಹಾಗೆ ಮಾಡಿದಲ್ಲಿ ಅವರ ಮಾತು ಅವರನ್ನೇ ಕಚ್ಚುವ ಪ್ರಸಂಗ ಬಂದೀತು. ಈಗೀಗ ಪ್ರಭುದೇವ ಊರಿನ ಶ್ರಮಗಾರರನ್ನು ಸೇರಿಸಿಕೊಂಡು, ಸಂಘ, ಸಭೆಗಳನ್ನು ನಡೆಯಿಸುವುದನ್ನು ನೋಡಿದರೆ, ಅವರು ಗಾಬರಿಯಾಗುವ ಸ್ಥಿತಿಯೇ ಬಂದೊದಗಿದೆ. ಮೊನ್ನೆ ದಿನ ಅವರ ಆಸ್ಪತ್ರೆಯ ಕೆಲಸಗಾರರು, ಕೆಂಪು ತಾರೆಯ ಕಚೇರಿಯಲ್ಲಿ ಸಭೆ ಸೇರಿದ್ದರಂತೆ. ಮೈದಾನಿನಲ್ಲಿ ಬೀಡಿ ಕೆಲಸಗಾರರಿಗೆ ಅವನ ಉಪನ್ಯಾಸವಿತ್ತಂತೆ. ಬೇರೊಂದು ದಿನ ಮಂಗಳೂರಿನ ಟಾಂಗಾವಾಲರನ್ನು ಸೇರಿಸಿ, ಸಂಘ ಸ್ಥಾಪಿಸಿದ್ದಾನಂತೆ. ಹಿಂದಿನ ತಿಂಗಳು ಹೋಟೇಲು ಕೆಲಸಗಾರರ ಸಂಘ, ಕೆಲವು ಕಾರ್ಖಾನೆಗಳ ಕೆಲಸಗಾರರ ಸಂಘ, ಅವನ ನಾಯಕತ್ವದಲ್ಲಿಯೇ ವ್ಯವಸ್ಥೆಗೊಂಡಿದ್ದುವು. ಅದರಿಂದಾಗಿ, ಒಂದು ದಿನ ನಂದರು ನಡೆಯಿಸುತ್ತಿರುವ ಕಾರ್ಖಾನೆಗಳಲ್ಲೋ, ಸಂಸ್ಥೆಗಳಲ್ಲೋ ಆತನು ಅಡಚಣೆಯನ್ನು ಒಡ್ಡದಿರಲಾರನು. ಅದಕ್ಕಾಗಿ ಅವರು ಪ್ರತಿಸಂಚಿನ ಏರ್ಪಾಡಿಗಾಗಿ ಒಂದು ಸಭೆಯನ್ನು ಕರೆಯಲು ನಿಶ್ಚಯಿಸಿದರು.

ಇಂದು ಅವರ ಸಭೆಯ ದಿನ; ಸಭೆ ಎಂಬುದು ಅದಕ್ಕೆ ದೊಡ್ಡ ಮಾತಾಯಿತು. ತಮ್ಮಂತೆಯೇ ಬಂಡವಳುಗಾರರಾದ ಕೆಲವರ ಕೂಟ. ಅಧ್ಯಕ್ಷರೂ, ಸಭೆ ಕರೆದವರೂ ಅವರೇ. ಅವರೀಗ ನೋಟಕ್ಕೆ ಗಡು

ತರವಾಗಿದ್ದಾರೆ. ಸುಖ, ಯಶಸ್ಸಿನ ಗುರುತಾಗಿ ಬೊಜ್ಜೂ ಬಂದಿದೆ. ಜ್ಞಾನದ ಸೂಚನೆಯಾಗಿ ಕೆಲವು ನೆರೆಗೂದಲುಗಳೂ ಕಾಣುತ್ತಿವೆ. ಆವೇಶವಿಲ್ಲದೆ ಎಣಿಕೆಯ ಮಾತುಗಳನ್ನಾಡುವ ಸ್ವಭಾವ ಬಂದಿದೆ. ಅವರ ಮಗ್ಗುಲಲ್ಲಿ, ಆರಾಮ ಕುರ್ಚಿಯಲ್ಲಿ ಲೋಲಾಯಮಾನರಾಗಿ, ರಂಗವಿಠಲರು ಕುಳಿತಿದ್ದಾರೆ. ಅವರು ಇನ್ನಷ್ಟು ಸ್ಥೂಲಕಾಯರು. ಹಿಂದೆ ಬಹು ಕಷ್ಟಪಟ್ಟವರಂತೆ. ಆರು ರೂಪಾಯಿಯ ಗುಮಾಸ್ತಿಕೆಯಲ್ಲಿ ಜೀವನ ತೊಡಗಿ, ಈಗ ಮಂಗಳೂರಿನ ಲಕ್ಷ್ಮೀಪುತ್ರರಲ್ಲೊಬ್ಬರಾಗಿದ್ದಾರೆ. ತುಂಬ ಮಾಂಸ ಶಿಥಿಲವಾದ ದೇಹ. ಕತ್ತಿನಲ್ಲೂ ಮಾಂಸದ ಮಡಿಕೆಗಳಿವೆ. ಕಪೋಲಗಳಿಂದಲೂ ಕೊಬ್ಬಿನ ಸಂಪತ್ತು ತೂಗುತ್ತಿದೆ. ಅವನ್ನು ಬೆಳಗಿಸಲು ಇಕ್ಕಡೆಗಳಲ್ಲಿ ವಜ್ರದ ವಂಟಿಗಳಿವೆ. ತಲೆಯಮೇಲೆ ಜರಿಯ ರುಮಾಲು. ರುಮಾಲನ್ನು ಕಳಚಿ ಮಗ್ಗುಲಿನ ಮಣೆಯ ಮೇಲೆ ಇರಿಸಿ ಕುಳಿತಿದ್ದಾರೆ. ಕಡೆಯುವ ಕಲ್ಲಿನಂತೆ ದುಂಡಗಾದ ತಲೆ; ಜೀವಕ್ಕೆ ಜೋತು ಬಿದ್ದ ಸಂಸಾರಿಗಳಂತೆ ಇದರ ಬೆಂಗಡೆಯಲ್ಲಿ ಇನ್ನೂ ಬಿಳಿ ಕೂದಲುಗಳು ಅಂಟಿಕೊಂಡಿವೆ. ಹೊಟ್ಟೆ ರಟ್ಟೆಗಳೆಲ್ಲ ಮುಖವನ್ನು ಗಾತ್ರದಲ್ಲಿಯೂ, ಬಂಧದಲ್ಲಿಯೂ ಒಪ್ಪುವಂಥವು. ವಯಸ್ಸು ಐವತ್ತಕ್ಕೆ ಮೀರಿದೆ. ಐವತ್ತೈದೂ ಇರಬಹುದು. ಆದರೆ ರೂಪ ಅರವತ್ತೋ ಎಪ್ಪತ್ತೋ ಎನ್ನುವಂತಿದೆ.

ಈಗ ಬಿಸಿಲಿನಲ್ಲಿ ಮೋಟರು ಓಡಿಸಿಕೊಂಡು ಬಂದು, ಕುಳಿತು, ಫೇನ್ ತಿರುಗಿಸಿ ಗಾಳಿಸೇವನೆ ಮಾಡುತ್ತಿದ್ದಾರಷ್ಟೆ. ಬಂದವರೇ ಕೇಳಿದರು: “ನಮ್ಮ ಶಾಂತವಿಠಲ ಬಂದನೇ?” ಎಂದು. ಶಾಂತವಿಠಲ ಅವರ ನಾಲ್ಕನೆಯ ತಮ್ಮ. ಅವರು ಒಟ್ಟಿಗೆ ಐದು ಮಂದಿ ಸಹೋದರರು. ಇವರು ಮನೆಯ ಹಿರಿಯರು; ಯಜಮಾನರು. ಎಲ್ಲರ ಯೋಗಕ್ಷೇಮ ನೋಡುವವರು. ವ್ಯವಹಾರದಲ್ಲಿ—ಅವರ ಎಲ್ಲ ವಹಿವಾಟುಗಳೂ ಖಾಸಗಿ ಲಿಮಿಟೆಡ್ ಸಂಸ್ಥೆಗಳು. ಎಲ್ಲವೂ ವಿಠಲಮಯವಾಗಿ ನಡೆಯತಕ್ಕವು. ಆದರೆ ಬೇರೆ ಬೇರೆ ವ್ಯವಹಾರಗಳ ಇಲಾಖೆಗಳನ್ನು ಒಬ್ಬೊಬ್ಬ ತಮ್ಮಂದಿರಿಗೆ ಒಪ್ಪಿಸಿದ್ದಾರೆ. ರಂಗವಿಠಲರ ಆಡಳಿತೆಯಲ್ಲಿ ಗೇರುಬೀಜ ಮತ್ತು ಹಂಚಿನ ಕಾರ್ಖಾನೆಗಳಿವೆ. ಊರಲ್ಲಿಯ ಹತ್ತೆಂಟು ಛಾಪ್, ಗ್ರಾಸರೀ ಶಾಪುಗಳು ಎರಡನೆಯ ಸಹೋದರ ರಾಮವಿಠಲರ

ಆಡಳಿತೆಯಲ್ಲಿ. ಮೂರನೆಯ ಅನಂತವಿಠಲ ಇನ್ಶೂರೆನ್ಸ್ ಮತ್ತು ಹಲವು ಕಂಪೆನಿಯ ಏಜನ್ಸಿಗಳ ನಾಯಕ. ಅವನ ಕೆಳಗೆ ನೇಯಿಗೆ ಮತ್ತು ಬೀಡಿ ಕಾರ್ಖಾನೆಗಳೂ ಇವೆ. ಶಾಂತವಿಠಲ ಅವರ ಮೋಟರು ಲಾರಿ ಇಲಾಖೆಯ ಮೇಲುತನಿಖೆಯವ. ಐದನೆಯವನಾದ ಲಕ್ಷ್ಮಣ ವಿಠಲನು ವಿಠಲ್ ಬೇಂಕಿನ ಮುಖಂಡ. ಇವೇ ಅಲ್ಲದೆ ಅವರ ಅನೇಕ ಸಣ್ಣಪುಟ್ಟ ಸಂಸ್ಥೆಗಳೂ ಇವೆ. ಅವರು ಇತರ ಸಸ್ಥೆಂಗಳ ಪಾಲುಗಾರರೂ ಅಹುದು. ಯಾವುದೋ ಸಲಹೆ ಕೇಳುವುದಕ್ಕಾಗಿ ಡಾಕ್ಟರರ ಮನೆಗೆ ಬಂದಿದ್ದಾರೆ. ಶಾಂತವಿಠಲ ಬರುತ್ತಲೇ ಕೇಳಿದರು—"ಏನು, ನೀನು ಒಬ್ಬನೇ ಬಂದೆ. ಅವನನ್ನು ಕರೆದು ತರಲಿಲ್ಲವೇ?" ಎಂದು.

"ಇಲ್ಲ. ನಾನು ಛಾಪಖಾನೆಯ ಎದುರಿಗೆ ಹಾದು ಬರುವಾಗ, ಪ್ರಭುದೇವ ಅಲ್ಲಿಯೇ ಇದ್ದ. ಆದುದರಿಂದ ಕೈಸನ್ನೆ ಮಾಡಿ ಬಂದೆನಷ್ಟೆ. ಪ್ರಭುದೇವ ಊಟಕ್ಕೆ ಹೋಗುವ ಸಮಯವಾಯಿತು. ತಕ್ಷಣವೇ ಬಂದು ಬಿಟ್ಟಾನು"

"ನೀನು ಅವನ ಹತ್ತಿರ ಮುಂಚಿತವಾಗಿ ಮಾತನಾಡಲಿಲ್ಲವೇ?"

"ಆಡಿದ್ದೇನೆ. ಛಾಪಖಾನೆ ಅವನ ಹೆಸರಿನಲ್ಲಿಯೇ ಇದೆಯಂತೆ. ಅವನದ್ದೇ ಹಣ. ಪತ್ರಿಕೆ ಮಾತ್ರ ಪ್ರಭುವಿನದಂತೆ. ಯೋಗ್ಯ ಸಂಬಳದ ಮೇಲೆ ಅವನನ್ನು ಮೇನೇಜಿಂಗ್ ಏಜಂಟನನ್ನಾಗಿ ಮಾಡಿದರೆ ಆಗ ಬಹುದು ಎಂದಿದ್ದಾನೆ."

"ಅದು ಮುಖ್ಯವಲ್ಲ." ಎಂದರು ನಂದರು. ಪತ್ರಿಕೆಯ ಡಿಕ್ಲರೇಶನ್ ಯಾರದ್ದು? ಸಾಣೆಕಲ್‌ನದೇ ಇರಬೇಕಲ್ಲವೆ? ಅವನೇ ಬಂದನಲ್ಲ" ಎನ್ನುತ್ತಿರುವಾಗ ಸಾಣೆಕಲ್ ಅಲ್ಲಿಗೆ ಬಂದನು. "ರಾಯರು ಇದ್ದಾರೆಯೇ" ಎಂದು ಕೇಳಿದನು. ಡಾಕ್ಟರರು ಅವನನ್ನು ಸ್ವಾಗತಿಸಿ ಬನ್ನಿ ಮಿ। ಸಾಣೆಕಲ್. ನಾನು ಇವರ ಹತ್ತಿರ ಎಲ್ಲ ಮಾತನಾಡಿದ್ದೇನೆ- ಅವರಿಗೆ ಸ್ವಂತ ಛಾಪಖಾನೆಮಾಡುವ ವಿಚಾರವಿತ್ತು. ನಾನು ಅದನ್ನು ಬೇಡವೆಂದಿದ್ದೇನೆ. ಛಾಪಖಾನೆಯ ಕೆಲಸವೇನೋ ಕಷ್ಟವಲ್ಲ. ಆದರೆ ಹೊಸತಾಗಿ ಪತ್ರಿಕೆ ಮಾಡುವುದು ಕಷ್ಟ."

"ಅದು ಬೇಡವಪ್ಪಾ, ನಾನು ಅದನ್ನೆಲ್ಲ ಹೇಳುತ್ತೇನೆ. ನಿಮಗೆ ಬೇಕಾದ ಅಂಶ ಯಾವುದೆಂದು ಹೇಳಿ."

"ಈಗ ಪತ್ರಿಕೆ ಸಂಪಾದಕರು ಯಾರು? ಅವನೇ ಅಲ್ಲವೇ?'

"ಸರಿ."

"ಪ್ರೆಸ್ಸಿನ ಮುದ್ರಕರು, ಪ್ರಕಾಶಕರು ಯಾರೆಂದಿದೆ?"

"ಅವು ನನ್ನ ಹೆಸರಿನಲ್ಲಿಯೇ ಇದೆ. ಪ್ರೆಸ್ಸಿಗೆ ಸಂಪೂರ್ಣ ಹಣ ಹಾಕಿದವನು ನಾನು, ಆರಂಭದಲ್ಲಿ ಬೇರೆಯವರ ಹೆಸರಿನಲ್ಲಿ ಪ್ರಕಟಣೆ ನಡೆದಿತ್ತು. ಆತ ಪ್ರವಾಸಕ್ಕೆ ಹೋದಾಗ ನನ್ನ ಹೆಸರಿನಲ್ಲಿಯೇ ಅದನ್ನು ಮಾಡಿಕೊಂಡೆ. ಹಿಂದಿನಿಂದಲೂ ಅವನಿಂದ ಬಹಳ ಹಣ ಬರಬೇಕು ನನಗೆ. ಆ ಹಣವೆಲ್ಲ ಇನ್ನೂ ಬಾಕಿಯೇ. ಈಗ ಅವನಿಗೆ ದುಡ್ಡಿಗೆ ಯಾವ ಬರಗಾಲ ಇದೆಯೆಂದೂ ಕಾಣುವುದಿಲ್ಲ."

"ಹಣಕ್ಕೇನು ಮಾಡುತ್ತಾನೆ ಆತ? ಎಲ್ಲಿನ ಹಣ ಅವನ ಕೈಗೆ ಬರುತ್ತಾ ಇದೆ? ಸಾಮ್ಯವಾದಿ ಸಂಗಡದಿಂದ ಏನಾದರೂ ಬರುತ್ತಿದೆಯೇ?"

"ಅದು ನನಗೂ ತಿಳಿಯುವದಿಲ್ಲ. ಈಗ ಸ್ವಂತಕ್ಕೇನೆ ತಿಂಗಳಿಗೆ ಐನೂರು ರೂಪಾಯಿ ಖರ್ಚು ಮಾಡುತ್ತಿದ್ದಾನೆ. ಮೋಟಾರು ಬಾಡಿಗೆಗೆ ಸುರಿಯುವ ಹಣಕ್ಕೆ ಲೆಕ್ಕವಿಲ್ಲ. ಇನ್ನು ಶಾಲೆಗೆ ಎಷ್ಟು ಖರ್ಚು ಮಾಡುತ್ತಿದ್ದಾನೆಯೋ ದೇವರೇ ಬಲ್ಲ."

"ಅವನಿಗೆ ಹಣ ಎಲ್ಲಿಂದ ಬರುತ್ತದೆ ಎಂದು ತಿಳಿವರೆ ಉಪಾಯವಾಗಿ ಅವನನ್ನು ಹಿಡಿಯಬಹುದು. ಎಲ್ಲ ಉತ್ತರ ಹಿಂದುಸ್ಥಾನದ ಹಣ, ನಿಜ. ಅವನ ಬೇಂಕ್ ಲೆಕ್ಕದ ವಾಸನೆ ಹಿಡಿಯುವ ಪ್ರಯತ್ನ ಮಾಡಿದೆ. ಎಲ್ಲ ಪರವೂರುಗಳಿಂದ ಬರುತ್ತಿರುವ ಹಣವೆಂದಿಷ್ಟೇ ತಿಳಿಯಿತು.

"ಆ ಮಾತಿರಲಿ; ನೀವು ಮುಖ್ಯ ವಿಷಯ ಹೇಳಿ. ನಾಲ್ಕು ಘಂಟೆಯೊಳಗೆ ತಿರುಗಿ ನಾನು ಅಲ್ಲಿರಬೇಕಾಗಿದೆ."

"ಅದು ನಿಮಗೆ ಬಿಟ್ಟ ವಿಷಯ. ನಾನು ಕರಾರು ಬರೆದು ಸಿದ್ಧ ಮಾಡುತ್ತೇನೆ. ನೀವು ಓದಿ ಸಹಿ ಮಾಡಿದರೆ ಆಯಿತು. ಈಗ ನಿಮ್ಮ ಪ್ರೆಸ್ಸಿನ ಮೌಲ್ಯವೆಷ್ಟು? ಅಂದಾಜು ಬೆಲೆ ಹೇಳಿ."

"ಐದಾರು ಸಾವಿರ ಆಗಬಹುದು."

"ಹಾಗಿದ್ದರೆ ಅದನ್ನು ಬಡಾಯಿಸಲು ಹದಿನೈದುಸಾವಿರಗಳನ್ನೋ ಇಪ್ಪತ್ತು ಸಾವಿರಗಳನ್ನೋ ನಾವು ಹಾಕುತ್ತೇವೆ. ಹತ್ತು ವರ್ಷಗಳ ತನಕ

ನೀವೇ ಮೇನೇಜಿಂಗ್ ಏಜೆಂಟ್ ಆಗಿರಿ. ನಿಮ್ಮ ಶರ್ತಗಳೇನು ಹೇಳಿ,, ಸಂಬಳ, ಕಮಿಶನ್ ಈ ವಿಚಾರಗಳಲ್ಲಿ........"

"ಸಂಬಳ ನನಗೆ ಈಗ ನೂರೈವತ್ತಾದರೂ ಬೇಕು. ಮುಂದೆ ಬಡತಿಗೆ ಅವಕಾಶವಿರಬೇಕು. ಅಷ್ಟಾದರೆ ಕಮಿಶನ್ ಬೇಡ. ಇಲ್ಲವಾದರೆ ನೂರು ರೂಪಾಯಿ ಸಂಬಳ, ಸೇಕಡಾ ಇಪ್ಪತ್ತರ ಲಾಭಾಂಶ. ಹೇಗೆ ಒಪ್ಪುತ್ತಿರೋ ಹಾಗೆ."

ಅನಂತರ ಇಬ್ಬರು ವಿಠಲರು, ಡಾಕ್ಟರು ಸೇರಿ ಖಾಸಗಿ ಮಾತಾಡಿಕೊಂಡು "ನೂರೈವತ್ತನ್ನೇ ಕೊಡುತ್ತೇವೆ. ಕರಾರು ರಿಜಿಸ್ಟ್ರಿಯಾದ ಮರುದಿನ ಇವರ ಪೈಕಿ ಒಬ್ಬರು ಅಲ್ಲಿ ಬಂದು ಕುಳಿತಿರುತ್ತಾರೆ. ಆಗ ಆತ ತನ್ನಂತೆಯೇ ಛಾಪಖಾನೆಯಿಂದ ಕಾಲು ಕೀಳಬೇಕಾಗುತ್ತದೆ. ಅನಂತರ ಛಾಪಖಾನೆ, ಪತ್ರಿಕೆಗಳನ್ನು ನಾವೇ ನಡೆಸಬಹುದು. ಈ ಕರಾರಿನ ವಿಚಾರ ಸದ್ಯ ಯಾರಿಗೂ ಹೇಳಬೇಡಿ. ಆರು ತಿಂಗಳು ಹೋದರೂ ಸುಮ್ಮನಿರಬಹುದು—ಹೊಸ ಯಂತ್ರೋಪಕರಣಗಳು ಬರುವ ತನಕ. ಅಲ್ಲಿಯ ತನಕ ಒಂದು ಉಪಾಯ ಮಾಡಬಹುದು. ನಮಗೆ ವಿರೋಧವಾಗಿ ಏನಾದರೂ ಪತ್ರಿಕೆಯಲ್ಲಿ ಬಂದರೆ, 'ಅದನ್ನು ಅಚ್ಚುಹಾಕುವುದಿಲ್ಲ; ನಾಳೆ ಮಾನ ನಷ್ಟಕ್ಕೆ ಹೋದಾರು' ಎಂದುಬಿಡಿ. ನಿಮ್ಮ ಹಣ ಐದು ಸಾವಿರದಷ್ಟನ್ನು, ನೀವು ಕರಾರಿಗೆ ಸಹಿ ಮಾಡುವಾಗ ತಗೆದುಕೊಳ್ಳಬಹುದು."

ಈ ವ್ಯವಹಾರದಿಂದ ಸಾಣೆಕಲ್‌ಗೆ ಏನೂ ನಷ್ಟವಾಗುವಂತಿಲ್ಲ. ಕೊಟ್ಟ ಬೆಲೆಗಿಂತ ಹೆಚ್ಚೇ ಬಂದಿತು ಹಣ. ಅದರ ಹೆಸರಿಗಾಗಿ ಮೂರು ಸಾವಿರ ರೂಪಾಯಿಗಳ ಉಚಿತ; ಮೇಲೆ ತನಗೇನೇ ಯಜಮಾನಿಕೆಯ ಪಟ್ಟ. ಇಷ್ಟೆಲ್ಲ ಲಾಭ ಅವನು ಬಿಟ್ಟಾನೆಯೇ? ಹಾಗಾಗಿ ನಾಡಿದ್ದು ಬರುವೆನೆಂದು ಹೇಳಿ ಹೊರಟುಹೋದ.

ಡಾಕ್ಟರರು ತುಂಬ ಉತ್ಸಾಹಗೊಂಡರು. ತಮ್ಮ ಕಾರ್ಯದರ್ಶಿಯನ್ನು ಕರೆದರು. ಕರಾರುಗಳನ್ನೆಲ್ಲ ಒಂದೊಂದಾಗಿ ಬರೆಯಿಸಿದರು. ಹಣ ಹಾಕುವವರು-ಇವರು ವಿಠಲರು, ಮತ್ತು ಡಾ। ನಂದರು. ಇದು ತಮ್ಮ ಪ್ರತಿ ಸ್ಪರ್ಧಿಯಾದ ಪ್ರಭುದೇವನ ಮೇಲೆ ಅವರು ಹೂಡಿದ ಮೊದಲನೆಯ ಅಂಬು.

ಅವರ ಸಂಚಿನ ಫಲವು ಆಗಾಗಲೇ ಕಾಣಿಸಬೇಕೆಂಬುದು ಅದರ ಉದ್ದೇಶವಿರಲಿಲ್ಲ. ಅದಷ್ಟು ತೀವ್ರವಾಗಿ ಸಾಣೆಕಲ್‌ನೊಡನೆ ಸಂಧಾನ ನಡೆಯಿಸುವುದೇ ಅವರ ಆತುರ. ಅವನ ಮೂಲಕ ಪ್ರಭುದೇವನ ಗುಟ್ಟನ್ನು ಕಂಡು ಹಿಡಿಯಬೇಕೆಂಬುದು ಅವರ ಛಲ. ಇಷ್ಟೆಲ್ಲ ನಿರ್ಣಯವಾದ ಬಳಿಕ, ಅವರು ಬೇರೆಯ ವಿಚಾರಕ್ಕೆ ಹೊರಳಿದರು. ಆ ಮೇಲೆ ಡಾಕ್ಟರರು "ಇರಲಿ ರಂಗವಿರಲರೇ, ನಮಗೆ ಯಾವ ತಾರೀಕಿನ ತನಕ ಗೇರು ಬೀಜ ರಫ್ತು ಮಾಡುವುದಕ್ಕೆ ಅವಕಾಶವಿದೆ ಎನ್ನುತ್ತೀರಿ" ಎಂದು ವ್ಯವಹಾರದ ಮಾತಿಗೆ ಬಂದರು. "ಖಾಸಗಿ ಸಂಗತಿಗಳು ಎಷ್ಟೇ ಇರಲಿ -- ವ್ಯವಹಾರ ಮುಖ್ಯವಷ್ಟೆ" ಎಂದರು. "ನಾನು ಹೇಳಲಿಲ್ಲವೇ ನಿಮಗೆ? ಒಂದೇ ಒಂದು ಡಬ್ಬಿ ಹೊರಗೆ ಹೋಗದೆ ತಿಂಗಳೊಂದಾಯಿತು. ಈಗ ಒಂದು ತಿಂಗಳಿನಿಂದಲೂ ಮಾಲು ಇಲ್ಲಿ ದಾಸ್ತಾನವಾಗಿದೆ. ನಿತ್ಯ ಐನೂರು ಜನರಿಗೆ ಸಂಬಳ ತುಂಬಿಸಲು ಹೇಗೆ ಸಾಧ್ಯ? ಬಡ್ಡಿ ತೆರಬೇಡವೇ ಬೇಂಕಿಗೆ? ಹೀಗೆಯೇ ಮೂರು ತಿಂಗಳ ಕಾಲ ಹಾಕಬೇಕಾದೀತು. ಇತ್ತ ಕೆಲಸವೂ ಇಲ್ಲ, ಅತ್ತ ಹೊರಗಿಂದ ಆರ್ಡರೂ ಇಲ್ಲ. ತುಂಬ ಜವಾಬ್ದಾರಿಯ ಕೆಲಸ. ಮೂರು ತಿಂಗಳಿನಲ್ಲಿಯೇ ಮುಗಿಯುತ್ತದೆ ಎಂದು ಹೇಳುವ ಹಾಗೂ ಇಲ್ಲ. ಅಲ್ಲದೆ ಎಬ್‌ಸೀನಿಯಾ ಗದ್ದಲ ತೊಡಗಿದೆ. ಹೊರಗಿನ ಸ್ಟೀಮರಿನ ಚಳವಳಗಳು ಹೇಗೆ ನಿಂತೀತೆಂದು ಹೇಳಲು ಬರುವುದಿಲ್ಲ. ಕಾಫೀ ಬಜಾರಿನಲ್ಲಿ ತೊಂದರೆ ಬಂದ ಹಾಗೆ, ನಮಗೂ ಬಂದರೆ?"

ಹಾಗಾದರೆ ನೀವು ಒಂದು ಕೆಲಸ ಮಾಡಿ. ಕೂಲಿಗಳನ್ನು ಹೊರಗೆ ಕಳುಹಿಸುವ ಉಪಾಯವನ್ನು ಮಾಡಬೇಕು. ಇನ್ನು ಬರುವುದು ಮಳೆಗಾಲ. ನಿಮ್ಮಲ್ಲಿ ಜಾಗವೂ ಸಾಲದು. ಅದಕ್ಕೊಂದು ಸಮವಾದ ಉಪಾಯ ಹೇಳುತ್ತೇನೆ. ಎಲ್ಲಾ ಗೋದಾಮುಗಳಲ್ಲಿಯೂ ಖಾಲಿ ಪೆಟ್ಟಿಗೆಗಳನ್ನು ತುಂಬಿಸಿಬಿಡಿ. ಕೆಲಸ ಮಾಡುವ ಶೆಡ್ಡಿನ ಹಂಚನ್ನು ಒಮ್ಮೆ ತೆಗೆಯಿಸಿ, ತಿರುಗಿ ಹೊದೆಯಿಸಿದರೆ ನಿಮ್ಮ ಕೆಲಸವಾಯಿತು. ಮಳೆಗೆ ಒಳಗೆಲ್ಲ ನೀರು ಬರುವ ಹಾಗೆ ಮಾಡಿದರೆ, ಮುಂದಿನ ಕೆಲಸ ತನ್ನಿಂತೆಯೇ ಆಗುತ್ತದೆ."

"ಅದರಿಂದೇನು ಪ್ರಯೋಜನ?"

"ನಾನು ಹೇಳಿದಂತೆ ಮಾಡಿ. ನಾವಾಗಿ ಅವರ ಸಂಬಳ ನಿಲ್ಲಿಸಿ lock out ಮಾಡುವ ಹಾಗಿಲ್ಲ. ಅದರ ಬದಲು ಅವರೇ ನಮ್ಮೊಡನೆ ಜಗಳ ತೆಗೆಯುವ ಹಾಗೆ ಮಾಡಬೇಕು. ಒಳಗೆ ಮಳೆ ನೀರು ಬೀಳುತ್ತಾ ಇದ್ದರೆ ಅವರಾಗಿ ಮುಷ್ಕರ ಹೂಡುವುದಕ್ಕೆ ಒಂದು ನೆಪವಾಗುತ್ತದೆ."

*   *   *   *

ಡಾಕ್ಟರರಲ್ಲಿ ನಮ್ಮ ಗೆಳೆಯರ ಈ ಸಭೆಯು ನಡೆದು ಒಂದು ವಾರ ಕಳೆಯಿತು. ಮಳೆಗಾಲ ತೊಡಗಿದೆ. ಒಂದೇ ಸವನೆ ಜಡಿಮಳೆ ಬೀಳುತ್ತಿದೆ. ಸಾಣೆಕಲ್ ನಿತ್ಯದಂತೆ ಛಾಪಖಾನೆಯಲ್ಲಿ ಕುಳಿತು ಪರಿಹಾಸ್ಯ ಮಾಡುತ್ತಿದ್ದಾನೆ. "ಒಳ್ಳೆಯ ಮರ್ಜಿ ನಿಮ್ಮದು ಪ್ರಭು. ನೀವು ಕೆಲಸಗಾರರ ಮುಖಂಡರಂತೆ. ಆಚೀಚೆ ತಿರುಗಾಡುವಾಗಲೆಲ್ಲ ಸಿಡಾನ್ ಕಾರಿನಲ್ಲಿ ಕುಳಿತು ತಿರುಗುತ್ತೀರಿ. ಚಳಿ, ಮಳೆ ಬಂದರೂ ತಗಲುವುದಿಲ್ಲ ನಿಮಗೆ. ನಿಮ್ಮ ಕೆಲಸಗಾರರ ಅವಸ್ಥೆ ಏನೆಂದು ಮಾತ್ರ ನಿಮಗೆ ಗೊತ್ತೇ ಆಗುವುದಿಲ್ಲ" ಎಂದು ಚುಚ್ಚಿ ನುಡಿದ.

"ಮಳೆಯಲ್ಲಿ ನಾನು ಅವರನ್ನು ಕಾರಿನಲ್ಲಿಯೇ ಕರೆದುಕೊಂಡು ಹೋಗಬೇಕೇನು? ಅಥವಾ ಕೆಲಸಗಾರರಿಗೆಲ್ಲ ಧರ್ಮಾರ್ಥ ಒಂದೊಂದು ಕೊಡೆ ತರಿಸಿಕೊಡಬೇಕೇನು?"

"ನೀವು ಕೊಡೆ ತರಿಸಿಕೊಡುವುದೂ ಬೇಡ. ಅಥವಾ ಕಾರ್ಖಾನೆಯವರು ರಸ್ತೆಗೆ ಮಾಡುಹಾಕಿಸುವುದೂ ಬೇಡ. ಅವರು ಮಾಡಬೇಕಾದ ಕೆಲಸಮಾಡಿದರೆ ಸಾಕು. ನಿಮಗೆ ರಂಗವಿಠಲರ ಕಾರ್ಖಾನೆಯ ಸುದ್ದಿಯೇ ಮುಟ್ಟಿಲ್ಲವೆಂದು ಕಾಣುತ್ತದೆ."

"ಹೋ ಆ ವಿಚಾರವೇ? ಮಳೆಯಿಂದ ಕಟ್ಟಡವೆಲ್ಲ ಸೋರುತ್ತಿದೆ, ಒಳಗೆ ನಿಂತಿರಲು ಜಾಗವಿಲ್ಲವೆಂದೇ?" "ಆ ಚಳಿ, ತಂಡಿಯಲ್ಲೇ ಜನರು ಕೆಲಸ ಮಾಡಬೇಕಾಗಿದೆ. ಹೊರಗಿನ ಮಳೆಯೆಲ್ಲ ಕಾರ್ಖಾನೆಯ ಒಳಗೇನೇ. ಹಂಚಿನ ಚಾವಣಿ ದುರಸ್ತಿ ಮಾಡಿಸಿ-ಎಂದರೆ ಮಳೆಗಾಲದಲ್ಲಿ ಹಂಚು ತೆಗೆದರೆ, ಸಾವಿರ ಹಂಚು ಪುಡಿಯಾದೀತು ಅನ್ನುತ್ತಾರೆ. ಹಾಗೆ ಮಳೆಸುರಿಯುವಾಗ, ಕೂಲಿಹೆಂಗಸರು ಅಲ್ಲಿ ದಿನವೆಲ್ಲ ದುಡಿಯಬೇಕೇ? ನಾಳೆ ನಿಮೋನಿಯಾ ಆಗಿ ಆಸ್ಪತ್ರೆಗೆ ಹೋದರೆ, ಅವರ

ಕುಟುಂಬವನ್ನು ಸಾಕುವವರು ಯಾರು?" ಎಂದು ಸಾಹೆಕಲ್ ಮೇಲಿಂದ ಮೇಲೆ ಹಂಗಿಸತೊಡಗಿದನು.

"ಹಾಗಿದೆಯೇ? ತಡೆಯಿರಿ. ಇವತ್ತೇನೆ ಒಂದು ಅಗ್ರಲೇಖ ಬರೆಯುತ್ತೇನೆ. ಅಲ್ಲದೆ ಅಲ್ಲಿನ, ಲೀಡರ್ ಯಾರು? ವೆಂಕಟದಾಸ ಅಲ್ಲವೇ? ಸಂಜೆ ನನ್ನನ್ನು ಕಾಣಬೇಕೆಂದು ಅವನಿಗೆ ಹೇಳಿ ಕಳುಹಿಸಿ."

"ನಾನೆನ್ನುತ್ತೇನೆ, ಅವರು ಬರಿದೆ ಶೆಡ್ ದುರಸ್ತಿ ಮಾಡಿಸಿದರೂ ಸಾಲದು. ಸ್ಟ್ರೈಕಿನ ಬೆದರಿಕೆ ತೋರಿಸಿದರೆ ಹಾಗೆ ಮಾಡಿಯಾರು. ಮಳೆಗಾಲದಲ್ಲಿ ಕೆಲಸಗಾರರು ಅಲ್ಲಿಗೆ ನೆನೆದು ಬರುತ್ತಾರೆ. ಆಗ ಅವರಿಗೆ ಉಡುವುದಕ್ಕೆ ಒಣ ಬಟ್ಟೆ ಬೇಡವೇ? ಮಳೆಗಾಲದ ಮಟ್ಟಿಗಾದರೂ ಒಂದೊಂದು ಸೆಟ್ ಹೊಸ ಬಟ್ಟೆ ಕೊಡಬೇಕೆಂದು ಹಟ ಹಿಡಿಯಬೇಕು. ಎಲ್ಲ ಕಾರ್ಖಾನೆಗಳ ವಿಷಯದಲ್ಲಿಯೂ ಈ ಕೇಳಿಕೆಯನ್ನು ಹೊರಡಿಸಬೇಕು. ಗಂಡಸರು ಹೇಗೂ ದಿನ ಕಳೆದಾರು. ಮೈತುಂಬ ಒದ್ದೆ ಬಟ್ಟೆ ಉಟ್ಟುಕೊಂಡು ಹೆಂಗಸರು ಕೆಲಸ ಮಾಡುವುದು ಸಾಧ್ಯವೇ?"

"ಅದೇ ಸಮನಾದ ಯೋಚನೆ. ನೀವು ವೆಂಕಟದಾಸನಿಗೆ ಸೈಕಲ್ ಮೇಲೆ ಜನ ಕಳುಹಿಸಿ ಅರ್ಜೆಂಟಾಗಿ ಬರಬೇಕೆಂದು ತಿಳುಹಿಸಿ"

ಹಾಗೆ ಜನಹೋಯಿತು. ಪ್ರಭುದೇವ ಬಂಡುವಳುಗಾರರ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಇದು ಸಮಸಾದ ಸಂಧಿ ಎಂದು ತಿಳಿದುಕೊಂಡ. ಮಂಗಳೂರಿನಲ್ಲಿ ಗೇರುಬೀಜದ ಉದ್ಯೋಗದಲ್ಲಿ ಆರೇಳು ಸಾವಿರ ಜನ ದುಡಿಯುತ್ತಿದ್ದಾರೆ. ಅವರಿಂದ ಸಂಪು ಹೂಡಿಸಿದರೆ ತನ್ನ ವರ್ಚಸ್ಸು ಹೆಚ್ಚುತ್ತದೆ. ಒಂದು ಪಂಗಡ ಮುಷ್ಕರ ಹೂಡಿದರೆ, ಉಳಿದವರಿಂದ ಸಹಾನುಭೂತಿಗಾಗಿ ಸಂಪು ಹೂಡಿಸಬಹುದು. ಈ ಸಂಪು ಡಾ। ನಂದರವರ ಫಾರ್ಮಸೂಟಿಕಲ್ಸ್, ಆಸ್ಪತ್ರೆಗಳನ್ನೂ ಬಿಡತಕ್ಕುದಲ್ಲ. ಅದರಲ್ಲಿಯೂ ಮಂಗಳೂರಿನ ಕೆಲಸಗಾರರು ಈ ಬಂಡವಳುಗಾರರಿಂದ ಒಂದು ರೈನ್ ಕೋಟನ್ನು, ಬದಲಿಸಲು ಬಟ್ಟೆಗಳನ್ನು ಕೇಳುವುದೇ ತಪ್ಪು? ಬಡವರು ತಾವಾಗಿ ಅದನ್ನು ಕೊಳ್ಳಲು ಸಾಧ್ಯವೇ—ಎಂದು ಅವನಿಗೆ ಸಹಜವಾಗಿ ತೋರಿತು. ಆ ದಿನವೆಲ್ಲ ಪ್ರಭುದೇವನ ಮನಸ್ಸು ತುಂಬ ಉದ್ವೇಗಗೊಂಡಿತ್ತು. ಆವೇಶ ಉಕ್ಕುತಿತ್ತು. ಮಂಗಳೂರಿನಂಥ ಊರಿನಲ್ಲಿ ತನ್ನ ಹಿರಿಮೆಯನ್ನು ಹೇಗೆ

ಸಾಧಿಸಬಹುದೆಂಬ ಸ್ವಾರ್ಥವೂ ಅದರಲ್ಲಿ ಇಲ್ಲದೆ ಇಲ್ಲ. ಬಡವರ ಮೇಲಿನ ಅವನ ಕನಿಕರವು ನಿಜವಾದದ್ದೇ. ತಾನು ಸಿರಿವಂತಿಕೆಯ ದಾರಿಯಲ್ಲಿದ್ದೇನೆ ಎಂಬುದನ್ನು ಅವನು ಅರಿತವನಾದರೂ, ಹಿಂದೆ ಇದೇ ಶ್ರೀಮಂತರು ತನ್ನ ಮತ್ತು ತನ್ನ ಲೇಖನಗಳ ಕಡೆಗೆ ತೋರಿದ ತಾತ್ಸಾರವನ್ನು ಮರೆಯಲಾರ. ಯಾವುದೇ ಸಾರ್ವಜನಿಕ ಸಂಸ್ಥೆ ಇರಲಿ—ಅಲ್ಲಿ ತನ್ನಂಥ ಬಡವರನ್ನು ಬರಗೊಡದೆ ತಾವೇ ಮೆರೆದಾಡು ವುದನ್ನು ಅವನು ಕಂಡಿಲ್ಲವೇ? ಅಂಥವರ ಮೇಲೆ ಕಾಳಗಕ್ಕೆ ನಿಲ್ಲಲು ಈಗ ಅವನಿಗೆ ಅವಕಾಶ ದೊರೆತಿದೆ ಎಂದೆನಿಸಿಕೊಂಡ. ಕೆಲಸಗಾರರ ಮುಂದಾಳುವಾದ ವೆಂಕಟದಾಸ ಬರುವ ತನಕ ಪ್ರಭುವಿನ ಆತುರ ವನ್ನು ಹೇಳಿತೀರದು.

ಸಂಜೆ ಕಳೆದು ಕತ್ತಲು ಕವಿದ ಮೇಲೆಯೇ ಆತ ಕೆಲಸಬಿಟ್ಟು ಬಂದನು. ಛಾಪಖಾನೆಯ ಮಹಡಿಯಲ್ಲಿ ಆ ಮೂವರು ಗುಪ್ತಾಲೋ ಚನೆ ನಡೆಯಿಸಿದರು. ಶ್ರಮಗಾರರ ತೊಡಕು, ತೊಂದರೆ, ಬಟ್ಟೆಯ ಅಭಾವ, ಇವೆಲ್ಲ ನಿತ್ಯದ ಸಂಗತಿಗಳಾದುದರಿಂದ, ಅವುಗಳ ಸಲು ವಾಗಿ ಬೇಡಿಕೆಗಳನ್ನು ಹೂಡಲು ವಿಶೇಷ ಧೈರ್ಯ ಬೇಕಿರಲಿಲ್ಲ. ಈಗ ಅದಕ್ಕೊಂದು ಸ್ವರ್ಣ ಸಂಧಿ ದೊರಕಿದೆ. ಅದೊಂದು ಸತ್ವ ಪರೀಕ್ಷೆಯ ಕಾಲ ಬಂದಿದೆ. ತಮ್ಮ ಊರಿನ ಯಾವತ್ತು ಮಜೂರರನ್ನು ಒಟ್ಟುಗೂ ಡಿಸಿ, ಒಗ್ಗಟ್ಟಾಗಿ ಸಂಪುಹೂಡುವ ಸುಸಂಧಿಬಂದಿದೆ. ಅದಕ್ಕೆ ಯಶಸ್ಸು ಬಂದುದಾದರೆ ಮುಂದೆ ಅದೇ ಅಸ್ತ್ರವನ್ನು ಮೇಲಿಂದ ಮೇಲೆ ಹೂಡ ಬಹುದಷ್ಟೆ.

ಆದರೂ ವೆಂಕಟದಾಸನಿಗೇನೋ ಅಂಜಿಕೆ. "ಅವರಾಗಿ ಕಾರ್ಖಾ ನೆಯನ್ನು ಮುಚ್ಚಲಿ; ನಾವಾಗಿ ಸಂಪು ಹೂಡಿದೆವು ಎನ್ನಲಿ—ಫಲ ಒಂದೇನೆ. ಒಂದು ತಿಂಗಳು ಕೆಲಸ ಇಲ್ಲದೆ ಹೋದರೆ, ಇಷ್ಟು ಜನರ ಹೊಟ್ಟೆಪಾಡಿನ ಗತಿಯೇನು?" ಎಂಬ ಬಡತನ ಸಹಜವಾದ ಭೀತಿಯು ವೆಂಕಟದಾಸನಿಗೆ.

"ಏನಿಲ್ಲ, ಅವರನ್ನು ಬಗ್ಗುಬಡಿಯಲಿಕ್ಕೆ ತಿಂಗಳ ಕಾಲ ಬೇಕೇ? ನಾಲ್ಕು ದಿನ ಸಂಪು ಹೂಡಿದರೆ ಹೆದರಿ ಕಂಗಾಲಾಗುತ್ತಾರೆ. ಆಗ ಮುಷ್ಕರ ಕಾಲದ ವೇತನವನ್ನೂ ಕೇಳಿದರಾಯಿತು. ನೀನು ಮಾತ್ರ

ಎಲ್ಲ ಕಾರ್ಖಾನೆಗಳ ಮುಖಂಡರನ್ನು ಕಂಡು ಮಾತನಾಡಿ ಬಾ."

"ಎಲ್ಲರೂ ಒಮ್ಮೆಗೇ ಸಂಪುಹೂಡುವುದೆಂದು ನಿಮ್ಮ ಅಭಿಪ್ರಾಯವೇ?"

"ಎಲ್ಲರೂ ಈಗಲೇ ಬೇಕಿಲ್ಲ. ಅದಕ್ಕೆ ತಯಾರಿದ್ದರೆ ಸಾಕು. ಮೊದಲು ರಂಗವಿಠಲರ ಕಾರ್ಖಾನೆಯಲ್ಲಿ ಮುಷ್ಕರ ತೊಡಗುವ. ಜಯವಾದೊಡನೆ ಅದನ್ನು ಬೇರೆ ಕಡೆಗಳಿಗೆ ಹಬ್ಬಿಸಬೇಕು. ಅವರು ಬಗ್ಗದೆ ಹೋದರೆ ಮಾತ್ರ, ಸಾರ್ವತ್ರಿಕ ಮುಷ್ಕರ ಹೂಡಬೇಕಾದೀತು. ರಂಗವಿಠಲರಲ್ಲ; ಅವರ ಅಪ್ಪನೂ ಬಗ್ಗುತ್ತಾನೆ." ಹೀಗೆಂದು ವೆಂಕಟದಾಸನಿಗೆ ಧೈರ್ಯಕೊಟ್ಟಾಯಿತು.

ಮೂರೇ ಮೂರು ದಿನಗಳಲ್ಲಿ ಅವರು ಬಿತ್ತಿದ ಬೀಜ ಮೊಳೆಯಿತು. ರಂಗವಿಠಲರ ಕಾರ್ಖಾನೆಗೆ,ಒಂದುಬೆಳಗ್ಗೆ ಎಲ್ಲ ಕೆಲಸಗಾರರು ಬಂದಿದ್ದರು. ಹಾಜರಿಯನ್ನುಕರೆದಾಯಿತು. ಆ ಬಳಿಕ ಜನ,"ಸೋರುವ ಮಾಡಿನ ಕೆಳಗೆ ಕುಳಿತು ಕೆಲಸಮಾಡುವುದಕ್ಕೆ ನಮಗೆ ಸಾಧ್ಯವಿಲ್ಲ" ಎಂದು ಹೇಳಿ ಗುಂಪಾಗಿ ಹೊರಕ್ಕೆ ಬಂದರು. ಆ ಐನೂರು ಮಂದಿ ಹೀಗೆ ಹೊರಬಿದ್ದು, ಕೆಂಪು ಬಾವುಟ ಹಿಡಿದು,ಮಳೆಯಲ್ಲಿ ಮೆರವಣಿಗೆ ಹೊರಟರು. ಆಗ ಧನಿಗಳು ಕಾರ್ಖಾನೆಗೆ ಬಂದಿರಲಿಲ್ಲ. ಅಲ್ಲಿ ಉಳಿದವರು, ಮೇಸ್ತ್ರಿಗಳು, ಗುಮಾಸ್ತರು ಮಾತ್ರ. ಅವರೊಡನೆ ವೆಂಕಟದಾಸ "ಈ ಸೋರುವ ಮಾಡಿನ ಕೆಳಗೆ ನಾವು ಕೆಲಸಮಾಡುವ ಹಾಗಿಲ್ಲ. ಅದಕ್ಕಿಂತ ಗದ್ದೆಯಲ್ಲಿ ನಾಟಿ ನಡಬಹುದು. ಇವು ನಮ್ಮ ಕೇಳಿಕೆಗಳು—೧. ಈ ಮಾಡು ಕೂಡಲೆ ದುರಸ್ತಿ ಆಗಬೇಕು. ೨. ಕಾರ್ಖಾನೆಯವರು ಮಜೂರರಿಗೆ ಇಲ್ಲಿ ಉಡುವ ಸಲುವಾಗಿ ಬಟ್ಟೆಗಳನ್ನು ಒದಗಿಸಬೇಕು. ೩. ಮಜೂರರ ಬಟ್ಟೆ ಒಣಗಿಸುವುದಕ್ಕೂ, ಬಟ್ಟೆ ಬದಲಿಸುವುದಕ್ಕೂ ಬೇರೆ ಕೊಠಡಿಗಳಾಗಬೇಕು. ಮಳೆಗಾಲ ಕಳೆದ ಬಳಿಕ, ಇನ್ನೊಂದು ಮಳೆಗಾಲ ಬರವತನಕ, ನೀವು ಕೊಟ್ಟ ಉಡುಪುಗಳನ್ನು ನೀವೇ ಇರಿಸಿಕೊಳ್ಳಬಹುದು."ಹೀಗೆಂದು ತಮ್ಮ ಕೇಳಿಕೆಗಳನ್ನು ಅವರ ಮುಂದಿರಿಸಿ ನಿಂತನು.

ಕಾರ್ಖಾನೆಯ ಮೆನೇಜರರು ಗಾಬರಿಯಾದರು. "ಸಾಹುಕಾರರು ಬಂದ ಮೇಲೆ ಇದನ್ನು ಅವರಿಗೆ ತೋರಿಸಿ, ಅವರೇನು ಅನ್ನುವ

ರೆಂದು ಕೇಳಿ, ಆಗ ಹೋರಟು ಹೋಗಬಹುದಿತ್ತು. ಬದಲು ಹೀಗೆ ಮಾಡುವುದು ಸಮನಲ್ಲ" ಎಂದರು.

"ನಾವು ನೀರಲ್ಲಿ ನೆನೆದು ದುಡಿಯುತ್ತಿರುವಾಗ, ನೋಡಿ ತಿಳಿಯುವುದಕ್ಕೆ ನಿಮ್ಮ ಸಾಹುಕಾರರಿಗೆ ಕಣ್ಣಿಲ್ಲವೇ?" ಎಂಬ ಪ್ರತ್ಯುತ್ತರ ಬಂದಿತು. ವೆಂಕಟದಾಸನೂ ಹೊರಟ. ಮೆರವಣಿಗೆಯನ್ನು ನಡೆಯಿಸಿಕೊಂಡು ಊರಿನ ಹಲವು ಕಾರ್ಖಾನೆಗಳ ಮುಂದೆ ಹಾದು ಹೋದ. ಸಂಜೆಯೂ ಇದೇ ರೀತಿ ಮೆರವಣಿಗೆ ಜರಗಿತು. ಸಂಜೆ ಮಳೆ ಬಿಟ್ಟಿತ್ತು. ಊರ ಮೈದಾನಿನಲ್ಲಿ ಕೆಲಸಗಾರರ ಸಭೆ ಸೇರಿತು. ಊರಿನ ಇತರ ಕಾರ್ಖಾನೆಗಳ ಜನರು ಬರುವ ತನಕ ಕಾದು ಕುಳಿತಿದ್ದು, ಅನಂತರ ಕಾರ್ಯಕ್ರಮ ತೊಡಗಿದರು. ಐದು ಸಾವಿರ ತಲೆಗಳು ಅಲ್ಲಿ ನೆರೆದವು. ಪ್ರಭುದೇವನೇ ಅದರ ಅಧ್ಯಕ್ಷತೆಯನ್ನು ವಹಿಸಿದನು. ಶ್ರೀ ಸಾಣೆಕಲ್, ಶ್ರೀ ವೆಂಕಟದಾಸ್, ಇವರುಗಳ ಉಪನ್ಯಾಸವಾಯಿತು. ಪ್ರಭುದೇವನು ತುಳುವಿನಲ್ಲಿ ಉಜ್ವಲವಾದ ಭಾಷಣ ಮಾಡಿದನು. ಮಜೂರರ ಹಕ್ಕು ಬಾಧ್ಯತೆಗಳ ವಿಷಯವಾಗಿ ಹೊಸ ಸಂದೇಶಗಳನ್ನು ಮುಟ್ಟಿಸಿದನು. ಮುಂಬಯಿ ಮುಂತಾದ ನಗರಗಳಲ್ಲಿ—ಹೇಗೆ ಶ್ರಮಗಾರರು ಸಂಘಬಲದಿಂದ, ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಿರುವರೆಂದು ವಿವರಿಸಿದನು. ಕ್ರಾಂತಿಕಾರಕ ಜಯ ಘೋಷಗಳಿಂದ ಆ ಸಭೆಯು ಮುಕ್ತಾಯವಾಯಿತು.

ಒಂದು ದಿನವಲ್ಲ, ಏಳು ದಿನಗಳ ತನಕವೂ ಇದೇ ಮಾದರಿಯಲ್ಲಿ ಮುಷ್ಕರ ಮುಂದಕ್ಕೆ ಸಾಗಿತು. ನಿತ್ಯವೂ ಮೆರವಣಿಗೆಗಳಾದುವು. ರಂಗವಿಠಲ ಕಾರ್ಖಾನೆಯವರ ಮೇಲೆ ಅನೇಕ ಆರೋಪಗಳನ್ನು ಹೊರಿಸಿ ಪತ್ರಿಕೆಗಳಲ್ಲಿ ಲೇಖ ಬಂದುವು. ಕೆಂಪು ತಾರೆಯಲ್ಲಿ-ರಂಗವಿಠಲರ ವಿವಿಧ ಸಂಸ್ಥೆಗಳೂ, ಕೆಲಸಗಾರರ ಬೆವರಿನ ಮೇಲೆ ನರ್ತಿಸುತ್ತಿರುವ ತಾಂಡವವನ್ನುಕುರಿತು ಕವನ, ಅಗ್ರಲೇಖಗಳು ಉದಯಿಸಿದವು. ಮೇಲೆ ಜಡಿಮಳೆ ಬಡಿಯುತ್ತಿದ್ದರೂ, ನೆಲದಲ್ಲಿ ಅಲುಗಾಡದ ಕಪ್ಪೆಯಂತೆ ಕುಳಿತಿದ್ದರು ರಂಗವಿಠಲರು. ಅವರಿಗೆ ಉಪದೇಶ ಮಾಡಲು ಬಂದ ಸ್ನೇಹಿತರೊಡನೆ "ನಡೆಯಲಿ, ಹೀಗೆ ಎಷ್ಟು ದಿನ ನಡೆಯುತ್ತದೆ ಎಂದು ನೋಡುವ. ಬಡವನ ಸಿಟ್ಟು ದವಡೆಗೆ ಮಾರಿ" ಎಂದು ಉತ್ತರ

ವಿತ್ತರು. ಈ ಮಾತುಗಳನ್ನು ಕುರಿತೇ ಟೀಕೆ ಟಿಪ್ಪಣಿಗಳಾದುವು. 'ಇವರಿಗೆ ಬುದ್ಧಿ ಬರಬೇಕಾದರೆ ಎಲ್ಲ ಕಾರ್ಖಾನೆಗಳ ಮಜೂರರಿಂದ ಅನುತಾಪದ ಮುಷ್ಕರ ಹೂಡಿಸಬೇಕೆ'ಂದು ಪ್ರಭುದೇವ ನಿಶ್ಚಯಿಸಿದನು. ಅದರಂತೆ ಉಳಿದ ಕೂಲಿಗಾರರ ಮುಖಂಡರಿಗೆ ಆಜ್ಞೆ ಮಾಡಿದನು.

ಅವನ ಇಚ್ಛೆ ರಾಜಾಜ್ಞೆಯಾಯಿತು. ಆರುಸಾವಿರ ಕೆಲಸಗಾರರು ಒಮ್ಮೆಗೇ ಸಂಪು ಹೂಡಿದರು. ಅಲ್ಲಲ್ಲಿ ಸಭೆಗಳಾದುವು. ಡಾಮರು ಬಳಿದ ಊರಿನ ರಸ್ತೆಗಳಲ್ಲಿ ಕ್ರಾಂತಿಕಾರಕ ಕೂಗುಗಳು ಮೂಡಿದುವು. ಹೀಗೆಯೇ ಚಳವಳ ಮುಂದುವರಿದರೆ ಊರಿನಲ್ಲಿ ಡೊಂಬಿಯಾದೀತು ಎಂಬ ಭೀತಿ ಜನಕ್ಕೆ ಕಾಣಿಸಿತು. ಒಂದು ವಾರ ಹೋಗಿ ತಿಂಗಳಾಯಿತು. ಕಾರ್ಖಾನೆಗಳ ಮಾಲಿಕರು ಕೂಡಿ ಸಭೆ ಸೇರಿದರೆಂದು ಪ್ರಭುದೇವನಿಗೆ ಗುಪ್ತವಾರ್ತೆ ದೊರಕಿದೆ. ಪ್ರಭುವು ಇನ್ನೂ ಬಲವಾದ ಅಸ್ತ್ರ ಹೂಡುವೆನೆಂದು ಮಹಾಸಭೆಯೊಂದನ್ನು ನೇರಿಸಿ,ಉಗ್ರವಾದ ಭಾಷಣವನ್ನು ಮಾಡಿದನು. ಸಭೆಯ ಪರವಾಗಿ ಕೇಂದ್ರ ಸರಕಾರಕ್ಕೆ, ಪ್ರಾಂತೀಯ ಸರಕಾರಕ್ಕೆ, ಶ್ರಮಗಾರರ ಮುಖಂಡರಿಗೆ ತಂತಿಗಳ ಮೇಲೆ ತಂತಿಗಳು ಹೋದುವು.

ಅನೇಕ ಕೆಲಸಗಾರರು ಉದ್ಯೋಗವಿಲ್ಲದೆ, ಪೇಟೆಯಲ್ಲಿ ಹಾಗೆಯೇ ದಿನ ಕಳೆಯಲಾರದೆ ತಮ್ಮ ಹಳ್ಳಿಗಳಿಗೆ ಹಿಂದಿರುಗಿದರು. ಕೊಯಿಲಿನ ತನಕ ಊರಲ್ಲಿಯೇ ಕಾದಿದ್ದು ಅನಂತರವೇ ಪೇಟೆಗೆ ಬರುವ ನಿಶ್ಚಯ ಮಾಡಿದರು.

ಪ್ರಾಂತೀಯ ಸರಕಾರದ ಮಂತ್ರಿಗಳು ಮುಷ್ಕರದ ತನಿಖೆಗಾಗಿ ಒಬ್ಬ ಅಧಿಕಾರಿಯನ್ನು ಕಳುಹಿಸಿಕೊಟ್ಟರು. ಅವರನ್ನು ಒಲಿಸುವುದಕ್ಕೆ ರಂಗ ವಿಠಲರು ತಮ್ಮ ಮೋಟರಿನಲ್ಲಿ ರೈಲ್ವೆ ನಿಲ್ದಾಣಕ್ಕೆ ಹೋದರು. ಪ್ರಭು ತನ್ನ ಗಾಡಿಯನ್ನು ನಡೆಯಿಸಿದನು. ಏಕ ಕಾಲದಲ್ಲಿ ಅಧಿಕಾರಿಯ ಮುಖಾಬಿಲೆಯನ್ನು ಮಾಡಿದರು. ಇಬ್ಬರದೂ ಸ್ವಾಗತ ಸತ್ಕಾರಗಳಾದುವು. ಅಧಿಕಾರಿಗಳು ಬೇರೆಯೇ ಒಂದು ಮೋಟರಿನಲ್ಲಿ ತಮ್ಮ ಬಂಗಲೆಗೆ ತೆರಳಿದರು. ಹೋಗುತ್ತ ಅವರು ಇಂಥ ಸಮಯಕ್ಕೆ ಬಂದು ತನ್ನನ್ನು ಕಂಡು ಮಾತನಾಡತಕ್ಕುದೆಂದು ಇಬ್ಬರಿಗೂ

ತಿಳಿಸಿದರು. ಮರುದಿನ ಪ್ರಭುದೇವ ರಂಗವಿಠಲರಿಬ್ಬರೂ ಅಧಿಕಾರಿಗಳ ದರ್ಶನ ಮಾಡಿದರು. ಎಲ್ಲರೂ ಅವರ ಕಾರ್ಖಾನೆಗೆ ತೆರಳಿದರು. ಆಗ ಮಳೆ ಏನೂ ಇದ್ದಿರಲಿಲ್ಲವಾದುದರಿಂದ ಪ್ರಭುದೇವ ಸೋರುವ ಮಾಡಿನ ಆರೋಪವನ್ನು ಖಚಿತಪಡಿಸಲಾರದೆ ಹೋದನು. ಅಲ್ಲದೆ ಅವರು ಬರುವ ಕಾಲದಲ್ಲಿ ಎರಡು ದೊಡ್ಡ ಚಾವಡಿಗಳಿಗೆ "workers rest quarters" ಎಂದು ಬರೆದುದೂ ಕಾಣಿಸಿತ್ತು. ಈಗ ಪ್ರಭುದೇವ ಮಾತಿಲ್ಲದಾದ. ಆದರೂ "ಅವರು ಸೋರುವ ಮಾಡನ್ನು ದುರಸ್ತಿ ಪಡಿಸದೆ ಹೋದುದು ತಪ್ಪಲ್ಲವೇ?" ಎಂದು ವಾದಹೂಡಿದ. ಅಧಿಕಾರಿಗಳು "ಅದಕ್ಕೆ ನನ್ನ ವರೆಗೆ ಬರಬೇಕಿರಲಿಲ್ಲ. ಸ್ಥಳೀಯ ಹೆಲ್ತಾಫೀಸರರನ್ನು ಕಂಡು ಮಾತನಾಡಿದ್ದರಾಗುತ್ತಿತ್ತಲ್ಲ" ಎಂದರು.

ಅನಂತರ—ಬದಲಿಸಲು ವಸ್ತ್ರ, ಕೊಡೆ ಇವುಗಳ ಸಲುವಾಗಿ ದೀರ್ಘ ಸಂಧಾನ ನಡೆಯಿತು.ಬೇರೆ ಕೆಲವು ಕಾರ್ಖಾನೆಗಳ ಮಾಲಕರು ಅಲ್ಲಿಗೆ ಬಂದಿದ್ದರು. ಅವರ ಪ್ರತಿವಾದ ಹೀಗಿತ್ತು—"ಇವರು ಹಳ್ಳಿಯಲ್ಲಿಯೇ ಕೆಲಸಮಾಡುವ ಜನರು. ಹಳ್ಳಿಯಲ್ಲಿ ಕೆಲಸಕ್ಕೆ ಹೋದಲ್ಲೆಲ್ಲ ಇವರಿಗೆ ಬೇರೆ ಬಟ್ಟೆ ಕೊಡುತ್ತಾರೆಯೇ?" ಎಂದು. ಅಧಿಕಾರಿಗಳು "ಈ ವಿಷಯದಲ್ಲಿ ನೀವು ಸಾವಕಾಶವಾಗಿ ಯೋಚಿಸಿ ಸಂಧಾನಕ್ಕೆ ಬನ್ನಿ. ಈ ವರ್ಷ ಮಳೆಗಾಲ ಮುಗಿಯುತ್ತ ಬಂದಿತು ಅನ್ನುತ್ತೀರಿ. ಇನ್ನು ಎಂಟು ತಿಂಗಳೊಳಗೆ ನೀವು ಒಪ್ಪಿಗೆಗೆ ಬರುವುದು ಕಷ್ಟವಲ್ಲ" ಎಂದು ನುಡಿದರು.

"ಕೆಲಸಗಾರರ ಸಂಪಿನ ಕಾಲದ ವೇತನವನ್ನೂ ಕೊಡಿಸಬೇಕು" ಎಂದನು ಪ್ರಭುದೇವ.

ಅದನ್ನಂತೂ ಯಾವ ಬಂಡವಳುಗಾರನೂ ಒಪ್ಪಲಿಲ್ಲ. ರಂಗವಿಠಲರರು ಉಪಾಯವಾಗಿ "ಅವರು ನಮಗೆ ಸಮನಾದ ನೋಟೀಸು ಕೊಟ್ಟು, ನಾವು ಅವರ ಆಕ್ಷೇಪಗಳನ್ನು ತಿದ್ದದೇ ಹೋಗಿದ್ದರೆ ಆಗ ಸಂಪು ಹೂಡಿದಲ್ಲಿ ಒಂದು ಕ್ರಮವಿತ್ತು. ನಾವು ಸಂಪಿನ ಕಾಲದ ವೇತನ ಕೊಡಬೇಕಾದೀತು. ಇವರು ಅವಸರ ಮಾಡಿ ಮೊದಲು ಮುಷ್ಕರ ಹೂಡಿ, ಆಮೇಲೆ ನೋಟೀಸು ಕೊಟ್ಟರು. ಈಗ ನಮ್ಮಲ್ಲಿ ಸಂಬಳ ಕೇಳುವುದರಲ್ಲಿ ಯಾವ ನ್ಯಾಯವಿದೆ? ಬದಲು ಕೆಲಸಗಾರರಿಂದ

ನಮಗಾದ ನಷ್ಟವನ್ನು ತುಂಬಿಸಿಕೊಳ್ಳಲು ನಾವು ಕೇಳಬಹುದಲ್ಲ" ಎಂದರು.

ಪ್ರಭುದೇವ ಮಾತಿಲ್ಲದಾದ. ಬಂದ ಅಧಿಕಾರಿಗಳು "ನೀವು ಸಂಪಿನ ನೋಟೀಸನ್ನು ಮುಂಚಿತವಾಗಿ ಕೊಡಬೇಕಿತ್ತು. ಅಲ್ಲದೆ ಎಲ್ಲ ಕಾರ್ಖಾನೆಗಳಲ್ಲಿಯೂ ಮುಷ್ಕರ ಹೂಡಿದ್ದು ತಪ್ಪು. ನೀವು ಮುಷ್ಕರ ಕಾಲದ ವೇತನ ಕೇಳುವುದರಲ್ಲಿ ನ್ಯಾಯವಿಲ್ಲ. ಆದರೂ ರಿಯಾಯಿತಿಯಿಂದ ಒಂದು ವಾರದ ವೇತನ ನಿಮಗೆ ಕೊಡುವ ಹಾಗೆ ಮಾಡುತ್ತೇನೆ" ಎಂದು ತೀರ್ಮಾನವಿತ್ತರು.

ಪ್ರಭುವಿನ ಪಾಲಿಗೆ ಅದೇನೆ ಒಂದು ದಿಗ್ವಿಜಯವಾಯಿತು. ಆತ ಮುಷ್ಕರ ಹೂಡಿದವರಿಗೆ, ಒಂದು ವಾರಕ್ಕೆ ಇಪ್ಪತ್ತೈದು ಸಾವಿರ ರೂಪಾಯಿಗಳಷ್ಟು ಲಾಭವನ್ನು ತಾನು ದೊರಕಿಸಿಕೊಟ್ಟಿದ್ದೇನೆ ಎಂದು ಹಿಗ್ಗುವಂತಾಯಿತು. 'ರಂಗವಿಠಲರು ಒಬ್ಬರೇ ಮೂರು ಸಾವಿರ ರೂಪಾಯಿ ದಂಡ ತೆರಬೇಕಾಯಿತೆಂದೂ, ಮುಷ್ಕರ ಕಾಲದ ವ್ಯಾಪಾರ ನಷ್ಟದಿಂದ ಅವರಿಗೆ ಕನಿಷ್ಠ ಹತ್ತು ಸಾವಿರ ರೂಪಾಯಿಗಳಾದರೂ ನಷ್ಟವಾಗಿರಬೇಕೆ'ಂದೂ ಹಿಗ್ಗಿ ನುಡಿದನು. ಸಂಪಿನ ಮಂಜು ಕರಗಿ ಶ್ರಮಗಾರರು ತಿರುಗಿ ಕೆಲಸಕ್ಕೆ ಬರುವಾಗ ಮೂರು ತಿಂಗಳ ಕಾಲ ಕಳೆಯಿತು. ಪ್ರಭುದೇವ ಅವರ ಸಭೆಯಲ್ಲಿ ತಮಗೆ ದೊರಕಿದ ನೈತಿಕ ವಿಜಯಕ್ಕಾಗಿ ಆತ್ಮ ಪ್ರಶಂಸೆ ಮಾಡಿಕೊಂಡ. ಅದೇ ರೀತಿ ರಂಗವಿಠಲರೂ ಸಂತೋಷಪಡುವುದಕ್ಕೆ ಅವಕಾಶವಿತ್ತು. ಈಗ ಅಮೇರಿಕದಿಂದ ಗೇರುಬೀಜಕ್ಕೆ ತಿರುಗಿ ಗಿರಾಕಿ ಬರತೊಡಗಿದೆ.

ಒಂದು ಕಡೆ ಪ್ರಭುದೇವ ತನ್ನ ನೈತಿಕ ವಿಜಯಕ್ಕಾಗಿ ಹಾರಾಡುತ್ತಿದ್ದರೆ ಇನ್ನೊಂದೆಡೆ ಡಾ। ನಂದ, ರಂಗವಿಠಲ ಮೊದಲಾದವರು ತಮ್ಮ ಮನೆಯೊಳಗೇನೆ ಕುಳಿತು "ವಾಸ್ತವಿಕ ಜಯ ನಮ್ಮದೇ" ಎಂದು ಹಿಗ್ಗುತ್ತಿದ್ದರು. ಆ ಮೂರು ತಿಂಗಳ ಸಂಪು ಇಲ್ಲದೆ ಹೋಗಿದ್ದರೆ ಅವರು ಗೇರು ಬೀಜದ ಮೇಲೂ, ಕೂಲಿಗಳ ಮೇಲೂ ತುಂಬ ಹಣ ಸುರಿಯಬೇಕಿತ್ತು. ಆ ಅನಿಶ್ಚಯ ಕಾಲದ ಭಾರ ಅವರಿಗೂ ತಪ್ಪಿತು.

ಇತ್ತ ಪ್ರಭುದೇವನ ಗೆಳೆಯನಾದ ಸಾಣೆಕಲ್ ಛಾಪಖಾನೆಯನ್ನು ಮಾರಿಕೊಂಡು ಎರಡೆರಡು ಲೆಕ್ಕಗಳನ್ನಿರಿಸುತ್ತ ಡಾ। ನಂದ ಮೊದಲಾದ

ವರ ಸ್ನೇಹವನ್ನು ಬೆಳೆಸಿದ. ತೋರಿಕೆಗೆ ಇನ್ನೂ ಛಾಪಖಾನೆ ಅವನದೇ. ಕೆಂಪುತಾರಿ ಅಲ್ಲಿಯೇ ಅಚ್ಚಾಗುತ್ತಲಿದೆ. ಬಂಡವಳುಗಾರರನ್ನೂ, ಶ್ರೀ ಮಂತರನ್ನೂ ಮೊದಲಿನಂತೆ ದೂರುತ್ತಿದೆ. ಬಹಿರಂಗದ ಸಹಾನುಭೂತಿ ಇನ್ನೂ ಶ್ರಮಗಾರರ ಮೇಲೆಯೇ ಉಳಿದಿದೆ.

ಈ ಸೋಗನ್ನು ಕಳಚುವುದಕ್ಕೆ ಒಂದು ಅನುಕೂಲ ಸಂಧಿಯು ದೊರೆಯಿತು. ಸಾಣೆಕಲ್ ಮತ್ತು ಪ್ರಭುದೇವರಲ್ಲಿ ಸ್ನೇಹಕ್ಕೆ ಕೊನೆ ಉಂಟಾಗಲು ಬೇರೆಯೇ ಒಂದು ಪ್ರಸಂಗ ಬಂದು ಒದಗಿತು. ರಂಗ ವಿಠಲರೂ ಅವರ ಸ್ನೇಹಿತರೂ ಮುನ್ಸಿಪಲ್ ಚುನಾವಣೆಯಲ್ಲಿ ಭಾಗ ವಹಿಸುವರೆಂದು, ಅಧ್ಯಕ್ಷ ಪಟ್ಟಕ್ಕೆ ಡಾ। ನಂದರನ್ನು ಇರಿಸುವರೆಂದು ಪ್ರಭುದೇವನಿಗೆ ಸುದ್ದಿ ಸಿಕ್ಕಿತು. ಬಹು ಹಿಂದಿನಿಂದಲೂ ನಂದರು ಆ ಪದವಿಗಾಗಿ ಬಾಯಿ ಬಿಟ್ಟವರು. ಆದರೂ ಕಾಂಗ್ರೆಸ್ಸು ಕಾರ್ಯಕ್ಷೇತ್ರ ದಿಂದ ಸ್ಥಾನಿಕ ಸ್ವರಾಜ್ಯಕ್ಕೆ ಅವರು ಕಾಲಿರಿಸಲಿಲ್ಲ. ಇತರರನ್ನು ಮುಂ ದಕ್ಕೆ ಒಡ್ಡಿ ತಾವು ಹಿಮ್ಮೇಳಕ್ಕೆ ನಿಲ್ಲುತ್ತಿದ್ದರು. ಈ ಬಾರಿ ಅವರು ಚುನಾವಣೆಗೆ ಖಂಡಿತ ನಿಲ್ಲುತ್ತಾರೆಂದು ಅವರ ಮನೆಯ ಅಡುಗೆ ಹುಡು ಗನಿಂದ ಪ್ರಭುದೇವನಿಗೆ ವರ್ತಮಾನ ದೊರಕಿತು. ಅದನ್ನು ಅಸಾಧ್ಯ ವಾಗಿ ಮಾಡಬೇಕೆಂಬುದೇ ಪ್ರಭುದೇವನ ಹಟ. ಸ್ಥಳಿಕ ವಿಚಾರಗಳು ಮುಂದೆ ಬಂದಾಗ, ಊರವರ ರಾಷ್ಟ್ರೀಯತ್ವವೆಲ್ಲ — ಜಾತೀಯತೆಗೋ ದಕ್ಷಿಣೆಗೋ, ಇನ್ನಾವುದ ಹಂಗು ಸ್ವಾರ್ಥಗಳಿಗೋ ಬಲಿಯಾಗುತ್ತ ದೆಂಬುದನ್ನು ಅರಿತವನು ಪ್ರಭುದೇವ. ಆದುದರಿಂದ ಈ ಬಾರಿ ಯಾವ ದಾರಿಯಿಂದ ಇವರನ್ನು ತುಳಿಯಲಿ ಎಂದು ಯೋಚಿಸುತ್ತಿದ್ದ. ಕಾಂಗ್ರೆಸ್ ಮಂಡಲದಲ್ಲಿ ಅವನಿಗೆ ಸಾಕಷ್ಟು ಬಂಬಲವಿದೆ. ಸ್ಥಳೀಯ ಕಾಂಗ್ರೆಸ್ಸಿಗರಲ್ಲಿ ಅರೆವಾಸಿ ಮಂದಿ ಅವನ ಗೆಳೆಯರು. ಅದರಲ್ಲಿ ಡಾ। ನಂದರನ್ನು ಆದರಿಸಿದ ಸ್ನೇಹಿತರೂ ಉಂಟು. ಆದರೆ ಈ ಬಾರಿ ಆತ ಮಂಗಳೂರಲ್ಲಿ ತನ್ನ ವರ್ಚಸ್ಸನ್ನು ಸಾಧಿಸುವ ಸಲುವಾಗಿ ಬೇರೆಯೇ ಹಾದಿಯನ್ನು ಹುಡುಕಿದ್ದಾನೆ. ಕಾಂಗ್ರೆಸ್ಸು ಸದಸ್ಯತನಕ್ಕೆ ತಾನೇ ಹಣ ಕೊಟ್ಟು, ನೂರಾರು ಮಂದಿ ಶ್ರಮಗಾರರನ್ನೂ, ಕರಣಿಕರನ್ನೂ ಸೆಳೆದು ಕೊಂಡು ಅವರಿಂದ ತನ್ನ ಪಂಗಡ ಬೆಳೆಯಿಸಿದ್ದಾನೆ. ಉಳಿದ ಕಾಂಗ್ರೆಸ್ ಪ್ರತಿನಿಧಿಗಳು-ಚುನಾವಣೆಯಲ್ಲಿ ಯಾರಾದರೇನು ಎಂಬ ಔದಾಸಿ

ತಾಳಿದ್ದರೂ, ಈತನ ಜನರು ಪ್ರತಿಯೊಂದು ಸಭೆಗೂ ಹಾಜರಾಗುವವರು. ಡಾ। ನಂದರು ಸ್ಥಳಿಕ ಸಮಿತಿಯ ಅಧ್ಯಕ್ಷರಾದರೂ ಇವನು ಬೆದರಬೇಕಾಗಿರಲಿಲ್ಲ. ಈ ಬಾರಿ ನಂದರನ್ನೇ ವಿರೋಧಿಸಿ, ತಮ್ಮ ಜನಗಳನ್ನು ಚುನಾಯಿಸಬೇಕೆಂಬುದು ಅವನ ನಿಶ್ಚಯ. ಸಭೆಯಲ್ಲಿ ಅವನದೇ ಬಹುಮತವಾಗಿತ್ತು.

ಡಾ। ನಂದರವರೂ ತಮ್ಮ ಪಟ್ಟಿಯೊಂದನ್ನು ನಿರ್ಮಿಸಿ ಚುನಾವಣೆಗೆ ಉಮೇದ್ವಾರರನ್ನು ನಿಲ್ಲಿಸಿದಾಗ, ಬೇರೆಯೇ ಒಂದು ಪಟ್ಟಿಯನ್ನು ಪ್ರಭುದೇವ ಮುಂಡಿಸಿದನು. ಒಂದು ವಾರವೆಲ್ಲ, ಸಭೆ, ತಿಕ್ಕಾಟ, ಸಲಾಮುಗಳಲ್ಲಿ ಕಳೆದವು. ಉಭಯ ಪಂಗಡದವರೂ ದಾಕ್ಷಿಣ್ಯ, ದಾನ, ಭೇದಗಳಿಂದ ಕಾರ್ಯ ಸಾಧಿಸಿದರು. ಹೀಗಾಗಿ ಮೂಲತಃ ಆರಿಸಿದ ಹದಿಮೂರು ಹುರಿಯಾಳುಗಳಲ್ಲಿ, ನಂದರ ಪಂಗಡಕ್ಕೆ ಸೇರಿದವರು ಎಂಟು ಮಂದಿ ಎಂದು ಆ ಮೇಲೆ ತಿಳಿಯಿತು. ಇಲ್ಲಿಂದ—ಮುಂದೆ ಹೋದರೆ ಇತರ ಸ್ವತಂತ್ರ ಸ್ಪರ್ಧಿಗಳೂ ಬರುತ್ತಾರೆ. ಆಗ ಕಾಂಗ್ರೆಸ್ಸು ಜಯಿಸುವುದೋ, ಹಣ, ಜಾತಿಗಳ ಪ್ರಭಾವ ಮೇಲಕ್ಕೆ ಬರುವುದೋ ಯಾರು ಬಲ್ಲರು?

ಒಂದು ವಾರದ ಮೊದಲು ಪ್ರಭುದೇವನಿಗೆ ಎಷ್ಟು ಆಸೆಯಿತ್ತೋ, ಈಗ ಅಷ್ಟೇನೇ ನಿರಾಶೆಯಾಗಿದೆ. ಅವನ ಪಂಗಡದ ನಾಲ್ವರು ಕಾಂಗ್ರೆಸು ಹುರಿಯಾಳುಗಳಲ್ಲಿ ಅವನೂ ಒಬ್ಬ. ಆ ನಾಲ್ವರ ಸಲುವಾಗಿ ಚುನಾವಣೆಯಲ್ಲಿ ಅವನೇ ಹಣ ಸುರಿಯಬೇಕಾದೀತು. ಅದಕ್ಕೆ ಅವನು ಸಿದ್ಧ. ತನಗೆ ಸೋಲಾದರೂ ಬೇಸರ ಪಡುವವನಲ್ಲ. ಉಳಿದ ವಾರ್ಡುಗಳಲ್ಲಿನ ಕಾಂಗ್ರೆಸ್ಸ್ ಪ್ರತಿನಿಧಿಗಳು ರಂಗವಿಠಲ, ಡಾ। ನಂದರಂತಹ ಶ್ರೀಮಂತರು. ಅವರಲ್ಲಿ ಬಹುಮಂದಿ, ಕೆಲಸಕ್ಕೆ ಬಾರದವರಾದರೂ ಚುನಾವಣೆಯ ಪಟ್ಟ ಅವರಿಗೇನೇ ನಿಶ್ಚಯ. ಡಾಕ್ಟರರ ತತ್ವ ಹೀಗಿತ್ತು—ತಾವು ಎಂಥ ಮಂದಿಯನ್ನೇ ಕಾಂಗ್ರೆಸ್ಸಿನ ಹೆಸರಿನಲ್ಲಿ ಇರಿಸುವುದಾದರೂ ಅವರು ವ್ಯಕ್ತಿಶಃ ಜಯಿಸುವಂತಹ ವ್ಯಕ್ತಿಗಳೇ ಇರಬೇಕು; ಇಲ್ಲವಾದರೆ ಕಾಂಗ್ರೆಸ್ಸಿಗೆ ಅಪಮಾನ. ಗೆಲ್ಲುವ ಕುದುರೆಗಳ ಬಾಲ ಹಿಡಿಯಬೇಕು ಎಂಬುದು ಅವರ ತತ್ವ. ಅವರ ಪಂಗಡಕ್ಕೆ ಜಯ ದೊರಕೀತು ಎಂಬ ಭೀತಿಯೂ ಪ್ರಭುದೇವನಿಗಿದೆ. ಅವನ ತರ್ಕ

ಸರಣಿ ಬೇರೆ-ನಂದರು ಆರಿಸಿರುವ ವ್ಯಕ್ತಿಗಳು ಕಾಂಗ್ರೆಸಿಗೆ ಅಪಮಾನ ತರುವ ವ್ಯಕ್ತಿಗಳು. ರಾಷ್ಟ್ರದ ಯಾವ ಕೆಲಸವನ್ನೂ ಮಾಡಿದವರಲ್ಲ. ಸಮಯ ಬಂದಾಗ ಮಾತ್ರ ಖಾದಿ ಅರಿವೆ ಉಡುವವರು—ಎಂದು. ಈ ನಡುವೆ ಪ್ರಭುದೇವನ ಮಿತ್ರರು ಅವನಿಗೆ ಸಮಾಧಾನ ಹೇಳುತ್ತಾರೆ- "ಅವರು ಅಂಥವರೇನೋ ನಿಜ. ಆದರೆ ರಾಜಕೀಯದಲ್ಲಿ ಬರಿಯ ಧ್ಯೇಯಕ್ಕೆ ಮನ್ನಣೆಯುಂಟೇ? ಜನರು ಯಾರನ್ನು ಮಾನಿಸುತ್ತಾರೆಂದು ನಾವು ನೋಡಿಕೊಳ್ಳಬೇಕು. ಹೊಸ ಜನರನ್ನು ನಿರ್ಮಿಸಲು ಬಂದೀತೇ? ವರ್ಚಸ್ಸುಳ್ಳವರನ್ನು ಕಾಂಗ್ರೆಸ್ಸಿಗೆ ಸೇರಿಸಿಕೊಂಡು ಅವರನ್ನು ಸುಧಾರಿಸುವ ಪ್ರಯತ್ನಮಾಡಬೇಕು" ಎಂದು.

ಅಂತೂ ಪ್ರಭುದೇವನ ಮಿತ್ರರ ಯಶಸ್ಸು ಅನುಮಾನಕರವಾಗಿ ಕಾಣಿಸತೊಡಗಿತು. ಈ ಚುನಾವಣೆಗೆ ವ್ಯಯಿಸುವ ಹಣ, ಬೇರೆ ಏನಾದರೂ ಒಳ್ಳೆಯ ಕೆಲಸಕ್ಕೆ ಹಾಕಬಹುದಲ್ಲ ಎಂದೂ ತೋರಿತು. ಆದರೆ ಅವನ ದ್ವೇಷ ಬುದ್ಧಿಯು ಹೋಗಲಾರದು. ರಂಗವಿಠಲರಂತಹ ವ್ಯಕ್ತಿಗಳು ಕಾಂಗ್ರೆಸ್ಸಿನ ಹೆಸರಿನಲ್ಲಿ ಚುಣಾವಣೆಗೆ ನಿಂತರೂ, ಅಂಥವರಿಗೆ ಯಶಸ್ಸು ಬರಕೂಡದೆಂಬುದು ಅವನ ಹಟ. ಅದಕ್ಕಾಗಿ ಬೇರೆ ದಾರಿಯನ್ನು ಹುಡುಕಿದನು.

ಈ ಬಾರಿಯ ಚುನಾವಣೆಯ ಕಲಾಪಗಳಿಗೆ ಇನ್ನೊಬ್ಬ ಹೊಸ ಮಿತ್ರರು ಅವನಿಗೆ ನೆರವಾದರು. ಅವನ ಈ ಮಿತ್ರ ಸ್ವಾಮಿರಾಯರು ಎಳೆಯರು. ಇವನಂತೆ ಕಾಂಗ್ರೆಸ್ಸಿನ ಅಭಿಮಾನಿಗಳು; ವಕೀಲರು; ತುಂಬ ಬುದ್ಧಿಶಾಲಿ. ಈಗೀಗ ಅವನ ಸಭೆಗಳೆಲ್ಲ ಸ್ವಾಮಿರಾಯರ ಮನೆಯಲ್ಲಿಯೇ ನಡೆಯುತ್ತಿದೆ. ಪ್ರಭುವಿಗೆ ಸಾಣೆಕಲ್‌ನ ವಿಷಯದಲ್ಲಿ ತುಸು ಅನುಮಾನವೂ ಬಂದಿದೆ. ಆತ ಡಾ। ನಂದರಲ್ಲಿಗೆ ಹೋಗಿ ಬರುತ್ತಿದ್ದಾನೆಂಬ ವರ್ತಮಾನ ಸಿಕ್ಕಿದೆ. ಅದುದರಿಂದ ಸಾಣೆಕಲ್‌ನನ್ನು ಅನುಮಾನ ದೃಷ್ಟಿಯಿಂದ ಆತ ನೋಡತೊಡಗಿದ್ದಾನೆ.

ಪ್ರಭುದೇವ ಸ್ವಾಮಿರಾಯರ ಮನೆಗೆ ಹೋದಾಗ "ಮಿ। ಸ್ವಾಮಿರಾವ್, ನನಗೊಂದು ಸಂಗತಿ ಕಾಣಿಸುತ್ತದೆ. ನೆಟ್ಟಗಿನ ದಾರಿಯಲ್ಲಿ ಹೋದರೆ ನಮ್ಮ ಕೆಲಸವಾಗಲಾರದು. ನಾವು ಪಾರ್ಟಿಯ ಒಳಗಡೆ ಕುಳಿತು ನಂದರನ್ನು ಇದಿರಿಸಲಾರೆವು. ಅಲ್ಲದೆ ಕಾಂಗ್ರೆಸ್ಸು ಸಂಘಟಕ

ಸೇರಿದವರಾದ ನಾವು ಮಾತನಾಡುವಂತಿಲ್ಲ. ಡಾ। ನಂದರ ಜನಗಳಿಗೆ ಗೆಲವು ಸಿಗದಂತೆ, ಏನು ಮಾಡಬೇಕು ಹೇಳಿ? ಯೋಚಿಸಿ ಯೋಚಿಸಿ ನನ್ನ ತಲೆ ಬಿಸಿಯಾಗಿದೆ." ಎಂದನು.

ಅದಕ್ಕೆ ಸ್ವಾಮಿರಾಯರು "ಪ್ರಭು, ನಾನು ಈ ವಿಷಯ ತುಂಬ ಯೋಚನೆ ಮಾಡಿದ್ದೇದೆ. ಈ ಮುನ್ಸಿಪಲ್ ಕಾಳಗವೆಂದರೆ ಜೋಡಾಟ ಇದ್ದಹಾಗೆ. ಜನ ಇಲ್ಲಿ ನೋಡಿದರೆ ಅಲ್ಲಿ ನೋಡುವುದಿಲ್ಲ; ಅಲ್ಲಿನ ಆಟ ನೋಡಿದರೆ ಇಲ್ಲಿನದನ್ನು ನೋಡುವುದಿಲ್ಲ. ನಿನಗೆ ಪ್ರತಿಸ್ಪರ್ಧಿ ಯಾರು? ಸೋಮಪ್ಪ. ಅವನನ್ನು ರಂಗವಿಠಲರ ಎದುರು ನಿಲ್ಲುವಂತೆ ಉಪಾಯ ಮಾಡುವ. ಡಾ। ನಂದರ ಎದುರಿಗೆ ಡಾ। ಅಲ್‌ವಾರಿಸ್‌ರನ್ನು ತಳ್ಳ ಬೇಕು" ಎಂದರು.

"ಅಷ್ಟು ಸುಲಭದಲ್ಲಿ ಅವರು ಅದಕ್ಕೆ ಒಪ್ಪಿಯಾರೇ?"

"ಅದಕ್ಕೆಲ್ಲ ನಾನು ಉಪಾಯ ಹೇಳುತ್ತೇನೆ. ಇವರು ಆರಿಸಿದಂತೆ ನಾವೂ ವರ್ಚಸ್ಸು ಉಳ್ಳವರನ್ನು ಮುಂದಕ್ಕೆ ದೂಡಿ ಸ್ವತಂತ್ರ ಉಮೇದುವಾರರಾಗಿ ನಿಲ್ಲುವಂತೆ ಮಾಡಬೇಕು"

"ನನ್ನ ಮುಖ್ಯ ಹಗೆಗಳೆಂದರೆ ಡಾ। ನಂದ, ಶಾಂತ, ಮತ್ತು ರಂಗ ವಿಠಲರು. ಅವರನ್ನು ಇದಿರಿಸುವ ಜನ ಗಟ್ಟಿಯಾಗಿರಬೇಡವೇ?"

"ಜನ ಗಟ್ಟಿಯಾಗಿಯೂ ಇರಬೇಕು, ನಾವು ಅವರಿಗೆ ಸಹಾಯ ವನ್ನೂ ಮಾಡಬೇಕು."

"ಹಾಗೆ ಕಾಂಗ್ರೆಸ್ ಪಂಗಡಕ್ಕೆ ಸೇರದವರಿಗೆ ನಾವು ಸಹಾಯ ಮಾಡಲು ಬರುತ್ತದೆಯೇ?"

"ಅದೆಲ್ಲ ವಿಚಾರಗಳನ್ನು ನನಗೆ ಬಿಡು. ಅದಕ್ಕೆ ಬೇರೆ ಉಪಾಯ ಮಾಡಬಹುದು. ಅಲ್ಲದೆ ನಿನ್ನಿಂದ ಆಗ ಬೇಕಾದ ಕೆಲಸವು ಬಹಳ ಇದೆ. ನೀನು ನಾನು ಹೇಳಿದ ಕೆಲಸ ಮಾಡುವಂತಿದ್ದರೆ, ನಿನ್ನ ಕೆಲಸ ವನ್ನು ಸುಲಭವಾಗಿ ಸಾಧ್ಯಮಾಡಬಹುದು."

"ನಾನೇನು ಮಾಡಬೇಕೆನ್ನುತ್ತೀರಿ?"

"ಈಗ ನೀನು ನಮ್ಮೂರಿನ ಮಜೂರರ ಮಟ್ಟಿಗೆ ಲೆನಿನು ಇದ್ದ ಹಾಗಲ್ಲವೆ? ಅವರ ಬಲವನ್ನು ಈಗ ಹೊರಕ್ಕೆ ತೆಗೆಯ ಬೇಕು."

"ಹಾಗೆ ಮಜೂರರಲ್ಲಿ ಎಷ್ಟು ಮಂದಿಗೆ ಓಟಿದೆ? ಅವರಲ್ಲಿ ಏನಾದರೂ ಸೇಕಡ ಒಬ್ಬಿಬ್ಬರು ಮತದಾರರಿರಬಹುದು. ಹೇಗಾದರೂ ಆ ಓಟು ನಮಗೇನೇ. ಆದರೆ ಅಷ್ಟರಿಂದ ಏನು ಕೆಲಸವಾಗುತ್ತದೆ?"

"ಅದನ್ನು ನಾನು ಹೇಳಿದ್ದಲ್ಲ. ನನ್ನ ಸೂಚನೆ ನಿನಗೆ ತಿಳಿಯಲೇ ಇಲ್ಲವೇ? ಇಲೆಕ್ಷನಿಗೆ ಏಳು ದಿವಸ ಇರುವಾಗ ನಮ್ಮ ಊರಲ್ಲಿ ಈ ಸಾಹುಕಾರರ ಮರ್ಯಾದೆ ಇಷ್ಟಿಷ್ಟು ಉಳಿಯದಂತೆ ಮಾಡಬೇಕು. ಚುನಾವಣೆಯ ಸಮಯದಲ್ಲಿ ಅಂಥ ಗದ್ದಲವೇನಾದರೂ ಆದರೆ, ಆಗ ನಮ್ಮ ಕೆಲಸವಾಗುತ್ತದೆ. ಮುಂದಿನ ಕೆಲಸ ಮುಂದೆ."

ಮುಂದೆ ಅವರು ಮಾತನಾಡುವುದರೊಳಗೆ ದರಿದ್ರ ಕಕ್ಸಿಗಾರನೊಬ್ಬನು ಅಲ್ಲಿ ಉದಯಿಸಿದನು. ಅವನೊಡನೆ ಕಾಲು ತಾಸು ಮಾತನಾಡಿ ಅವನನ್ನು ಕಳುಹಿಸಿ ಕೊಟ್ಟ ಬಳಿಕ, ಅವರು ತುಂಬ ಹೊತ್ತು ಮಾತನಾಡಿದರು. ಅಲ್ಲದೆ ಮಧ್ಯವರ್ತಿಗಳ ಮೂಲಕ, ಸೋಮಪ್ಪನೊಡನೆಯೂ ಅಲ್ವಾರೀಸ್‌ರೊಡನೆಯೂ ಸಂಧಾನ ನಡೆಯಿಸಿದರು

ಇದರ ಫಲವಾಗಿ ಚುನಾವಣೆಗೆ ನಾಮ ಪತ್ರ ಹಾಕುವಾಗ ಸೋಮಪ್ಪನವರು ಮತ್ತು ಅಲ್ವಾರಿಸ್, ರಂಗವಿಠಲ್, ಡಾ| ನಂದರವರಿಗೆ ಇದುರಾಳಿಗಳಾದರು. ಅದರಂತೆ ಇನ್ನಿಬ್ಬರು ತಮ್ಮನ್ನು ಸ್ಪರ್ಧಿಸುವಂತೆ ಕಾಣುವ ಹಾಗೆ ತಮ್ಮೆದುರಿಗೂ ನಿಲ್ಲಿಸಿಕೊಂಡರು. ಒಮ್ಮಿಂದೊಮ್ಮೆಗೆ ಕೆಂಪು ತಾರೆಯಲ್ಲಿ ಇನ್ನೂ ಕೆಲವು ವರ್ತಮಾನಗಳು ಬಂದುವು. ರಂಗವಿಠಲರ ಕಾರ್ಖಾನೆಯ ಹಲವು ಕೆಲಸಗಾರರು ಸಮನಾದ ವೇತನ ವಿರಾಮಗಳಿಗಾಗಿ ನೋಟೀಸು ಕೊಟ್ಟು ಸಂಪು ಹೂಡುವರೆಂಬ ವರದಿ ಪ್ರಕಟವಾಯಿತು. ಅದೇ ಬಗೆಯಲ್ಲಿ ಡಾ| ನಂದರವರ ಆಸ್ಪತ್ರೆಯ ಕೆಲಸಗಾರರೂ, ಫಾರ್ಮಸೂಟಿಕಲ್ಸಿನ ಕೆಲಸಗಾರರೂ ಸಂಪು ಹೂಡುತ್ತಾರೆಂದು ಸುದ್ದಿ ಹೊರಟಿತು. ಈ ಎಲ್ಲ ಶ್ರಮಗಾರರ ಬೇಡಿಕೆಗಳು ಆಯಾ ಬಂಡವಳುಗಾರರನ್ನು ಸೇರಿದುವು. ವಿಠಲರವರು, ಡಾ| ನಂದರು ತಮ್ಮ ಕೆಲಸಗಾರರೊಡನೆ ಅದಕ್ಕೆ ಸಮಯಬೇಕೆಂದು ಕೇಳಿದರು. ಚುನಾವಣೆ ಕಳೆದ ಬಳಿಕ ಅವರ ತಗಾದೆಗಳಿಗೆ ಸಮನಾದ ಗಮನಕೊಡುತ್ತೇವೆಂದು ಭರವಸೆ ಕೊಟ್ಟರು. ಆದರೆ ಕೆಲಸಗಾರರು ಅಷ್ಟೊಂದು ವಿರಾಮ ಕೊಡುವುದಕ್ಕೆ ಒಪ್ಪಲಿಲ್ಲ.

ಚುನಾವಣೆಗೆ ನಾಲ್ಕು ದಿನವಿರುವಾಗ ಎಲ್ಲ ಸಂಸ್ಥೆಗಳಲ್ಲೂ ಮುಷ್ಕರ ಪ್ರಾರಂಭವಾಯಿತು. ಮಾಲಕರುಗಳ ಮೇಲಿನ ಆರೋಪ ಅವಹೇಳನಗಳು ಪತ್ರಿಕೆಗಳಲ್ಲಿ ಪ್ರಕಟವಾದುವು. ಸ್ವಾಭಾವಿಕವಾಗಿ ಅವುಗಳು ಕೆಂಪು ತಾರೆಯಲ್ಲಿ ಮೊದಲಿಗೆ ಹೊರಡಬೇಕಿತ್ತು. ಪ್ರಭುದೇವನು "ಡಾ| ನಂದರವರೇ, ನಿಮ್ಮ ಆಸ್ಪತ್ರೆಗಳಲ್ಲಿನ ದಾದಿಯರ ಮಾನ ಉಳಿಸಿ" ಎಂಬ ವ್ಯಂಗ್ಯಾರ್ಥಪರವಾದ ಲೇಖನವನ್ನು ಬರೆದು ಜೋಡಣೆಗೆ ಕೊಟ್ಟಿದ್ದನು. ಸಾಹೇಕಲ್‌ರೊಡನೆ "ಈ ವಾರದ ಪ್ರತಿಯನ್ನು ಮೂರು ಸಾವಿರವಷ್ಟು ಹೆಚ್ಚಿಗೆ ಹಾಕಿಸಿ, ನನ್ನ ಅಗ್ರಲೇಖ ಸಹಿತ ಹೊಡೆಯಿಸಿ" ಎಂದು ಅಪ್ಪಣೆಮಾಡಿ ಸ್ವಾಮಿರಾಯನಲ್ಲಿಗೆ ಹೋದನು. ರಾತ್ರಿಯೆಲ್ಲ ಅವರು ಮುಷ್ಕರವನ್ನುಕುರಿತು ಹಿಗ್ಗಿನಿಂದ ಚರ್ಚಿಸಿದರು. ಚುನಾವಣೆಯ ದಿನದವರೆಗೆ ಮುಷ್ಕರ ನಡೆದರೆ ಸಾಕು. ಆ ದಿನ ಜಟ್ಕಾಬಂಡಿಯವರ ಸಂಪು ಹೂಡತಕ್ಕದ್ದು. ಕೊನೆಯ ಗಳಿಗೆಯಲ್ಲಿ ಇವರು ನಿಲ್ಲಿಸಿದ ಬಿನಾಮಿ ಜನಗಳು ಪ್ರಭುದೇವ, ಅವರ ಮಿತ್ರರಿಗೆ ಅನುಕೂಲವಾಗುವಂತೆ ತಮ್ಮ ಸ್ಪರ್ಧೆಯನ್ನು ಹಿಂತೆಗೆಯಲು ಒಪ್ಪಿದ್ದಾರೆ ಎಂದು ಸಾರಿ ಬಿಟ್ಟರಾಯಿತು.

ಅವರು ಹೂಡಿದ ಮುಷ್ಕರಗಳ ಫಲವಾಗಿ ಡಾ|ನಂದರಿಗೂ, ಅವರ ಗೆಳೆಯರಿಗೂ, ಚುನಾವಣೆಯ ವಿಷಯದಲ್ಲಿ ಪರಿಶ್ರಮ ವಹಿಸುವುದು ಸಾಧ್ಯವಾಗಲಿಲ್ಲ. ಆ ಕೆಲಸವನ್ನು ತಮ್ಮ ದಲ್ಲಾಳಿಗಳಿಗೆ ಒಪ್ಪಿಸಬೇಕಾಯಿತು. ಇಂಥ ವೇಳೆಯಲ್ಲಿ ಜನರ ಮನಸ್ಸು ಉದ್ವೇಗಗೊಳ್ಳಬಾರದೆಂದು ಅವರು ಪ್ರಯತ್ನಿಸಿದರು. ಕೆಲಸಗಾರರು ಈ ಬಂಡವಾಳಗಾರರನ್ನು ಬಯ್ಯುತ್ತ ದಿನನಿತ್ಯ ಮೆರವಣಿಗೆ ಹೂಡಿದರು. ನಂದರ ಆಸ್ಪತ್ರೆಯ ಸ್ಥಿತಿಯನ್ನು ಹೇಳಿತೀರದು. ಅವರು ರೋಗಿಗಳನ್ನು ಹೊರಗೆ ಅಟ್ಟುವುದಕ್ಕೂ ಇಲ್ಲ; ಉಪಚರಿಸುವದಕ್ಕೂ ಇಲ್ಲ. ಇದ್ದ ಸಹನೆ ತಪ್ಪಿ 'ಕೆಲಸಗಾರರನ್ನು ಕೆಲಸದಿಂದ ತಗೆದು ಹಾಕುತ್ತೇವೆ' ಎಂದು ಬೆದರಿಕೆ ಹಾಕಿದರು. ಆ ಸಮಯಕ್ಕೆ ಸರಿಯಾಗಿ ಸಾಹೇಕಲ್ ಅಲ್ಲಿಗೆ ಓಡಿಬಂದನು. ಪ್ರಭುದೇವನು ಬರೆದುಕೊಟ್ಟ ಲೇಖವನ್ನು ಅವರಿಗೆ ತೋರಿಸಿದನು. ಡಾಕ್ಟರರವರಿಗೆ ಈಗ ಮುಷ್ಕರದ ಅರ್ಥವಾಯಿತು. ಅವರು ಉಲುರೇಗಾಡಿದರು. ಆ ಲೇಖನ ಮುದ್ರಿಸಬಾರದೆಂದು ನುಡಿದು ಅದೇ

ಗಳಿಗೆಯಿಂದ ಛಾಪಖಾನೆಯ ನಿಜವಾದ ಬಣ್ಣ ಹೊರಕ್ಕೆ ತೋರಿಸಿ,. ಅಂದಿನ ಸಂಚಿಕೆಯು ಸಾಣೇಕಲ್‌ನ ಸಂಪಾದಕತ್ವದಲ್ಲಿ ಹೊರಡಬೇಕೆಂದು ನಿರ್ಣಯವಾಯಿತು. ಸಾಣೇಕಲ್ ಆ ಸಂಪಿನ ವಿಚಾರವಾಗಿ ಮಾತನಾಡುತ್ತಾ "ಎಲ್ಲರೂ ಪ್ರಭುದೇವನ ಕಡೆಯವರೆಂದು ತಿಳಿಯಬೇಡಿ. ಅಲ್ಲಿ ನನ್ನ ಸ್ನೇಹಿತರೂ ಇದ್ದಾರೆ. ಅವರಲ್ಲಿ ಇಬ್ಬಣಕ್ಕೆ ಅವಕಾಶವಿದೆ. ನಾವು ಸಾವಿರ ರೂಪಾಯಿ ಖರ್ಚು ಮಾಡಿದರೆ ಸಂಪನ್ನು ಮುರಿಯಬಹುದು" ಎಂಬ ಸೂಚನೆಯನ್ನು ಕೊಟ್ಟ. ಡಾಕ್ಟರರು "ಒಂದಲ್ಲ, ಮೂರು ಸಾವಿರ ಖರ್ಚುಮಾಡಲು ತಯಾರಿದ್ದೇನೆ. ಪ್ರಭುದೇವನ ಆಟಕ್ಕೆ ಕೊನೆಯನ್ನು ತರಲೇ ಬೇಕು." ಎಂದು ಒಂದು ಚೆಕ್ ಬರೆದು ಕೊಟ್ಟು, ಸಾಣೇಕಲನನ್ನು ಕಳುಹಿಸಿಕೊಟ್ಟರು.

ಮರುದಿನ ತನ್ನ ಅಗ್ರಲೇಖನವಿರುವ ಪತ್ರಿಕೆಯನ್ನು ನೋಡುವ. ಸಲುವಾಗಿ ಪ್ರಭು ಛಾಪಖಾನೆಗೆ ಬಂದರೆ, ಅಲ್ಲಿನ ಬಾಗಿಲೇ ತೆರೆದಿರಲಿಲ್ಲ. ಕಾದು ಕಾದು ಬೇಸರವಾಯಿತು. ಅಲ್ಲಿಂದ ಸಾಣೇಕಲನ ಮನೆಗೆ ಹೋದ. ಆತ ಮನೆಗೇ ಬಂದಿರಲಿಲ್ಲವೆಂಬ ವಾರ್ತೆ ಸಿಕ್ಕಿತು. ತೀರ ನಿರಾಶನಾಗಿ ಸ್ವಾಮಿರಾಯರಲ್ಲಿಗೆ ಹೋದ.

ಅವರನ್ನು ಕೋರ್ಟಿಗೆ ಕಳುಹಿಸಿ ಕೊಟ್ಟು, ಹಿಂದಿರುಗುವಾಗ ದಾರಿಯಲ್ಲಿ, ಕೂಗಿ ಕೂಗಿ ಕೆಂಪುತಾರೆಯನ್ನು ಮಾರುತ್ತಿದ್ದ ಹುಡುಗರು ಸಿಕ್ಕಿದರು. ತಾನೇ ಪತ್ರಿಕೆಯನ್ನು ಬೆಲೆಗೆ ಕೊಂಡುಕೊಂಡ. ಅದನ್ನು ಬಿಡಿಸಿ ನೋಡುತ್ತಲೆ ಸಿಡಿಲು ಬಡಿದಂತಾಯಿತು. ಅವನ ಪತ್ರಿಕೆಯಲ್ಲಿಯೇ "ಪ್ರಭುದೇವ ಚುನಾವಣೆಯ ಸಾಧನೆಗಾಗಿ ಮುಷ್ಕರ ಹೂಡಿಸಿದ್ದಾನೆ" ಎಂಬ ಅಗ್ರಲೇಖವಿತ್ತು. ಪತ್ರಿಕೆಯಲ್ಲಿ ತನ್ನ ವಿರುದ್ಧವಾದ ಲೇಖನಗಳು ಬಂದಿದ್ದುವು. ಸಂಪಾದಕನ ಹೆಸರು ಮಿ। ಸಾಣಕಲ್ ಎಂದಿತ್ತು. ಛಾಪಖಾನೆಯ ಒಡೆತನವೂ ಬದಲಾಗಿದೆ. ಅಲ್ಲಿಂದಲೇ ಜಟ್ಕಾ ಮಾಡಿಕೊಂಡು ಕೋರ್ಟಿಗೆ ಧಾವಿಸಿದನು. ವಕೀಲ ಮಿತ್ರರನ್ನು ಹೊರಗೆ ಕರೆದು, ತೋರಿಸಿ "ಸಾಣೆಕಲ್ ಈ ರೀತಿ ದ್ರೋಹ ಮಾಡುತ್ತಾನೆಂದು ತಿಳಿದಿರಲಿಲ್ಲ. ನಮ್ಮ ಎಲ್ಲಾ ಹಂಚಿಕೆಗಳು ಅವನಿಂದ ಡಾ। ನಂದರಿಗೆ ತಿಳಿದಿರಬೇಕು. ಪ್ರೆಸ್ಸನ್ನು ನಮಗೆ ಗೊತ್ತಿಲ್ಲದ ಹಾಗೆ ಮಾರಿಬಿಟ್ಟ. ಕೊನೆಯ ಗಳಿಗೆಯಲ್ಲಿ ಇಷ್ಟೊಂದು ವಿಶ್ವಾಸಘಾತ ಮಾಡಿ

ತ್ತಾನೆಂದು ಯಾರು ತಿಳಿದಿದ್ದರು?" ಎಂದು ವಿಸ್ಮಯ ವ್ಯಕ್ತಮಾಡಿದನು. ಸ್ವಾಮಿರಾಯನಿಗೆ ಅದರ ಇಮ್ಮಡಿ ಆಶ್ಚರ್ಯವಾಯಿತು.

ಈಗ ಮುಂದಿನ ಸಂಚಿಕೆಯನ್ನು ಹೊರಡಿಸುವ ದಾರಿ ಇರಲಿಲ್ಲ. ಪತ್ರಿಕೆ ಅವನ ಹೆಸರಿನಲ್ಲಿದೆ. ಛಾಪಖಾನೆ ಹೇಗೂ ಅವನದೇ. ಹಾಗೆಯೇ ಬಿಟ್ಟರೆ ಪ್ರಯೋಜನವಿಲ್ಲ. ಅವನ ಸಂಪಾದಕತ್ವವನ್ನು ತಪ್ಪಿಸುವ ದಾರಿ ಏನು? ಕೋರ್ಟು ಮೂಲಕ ತತ್ಕಾಲಿಕವಾದ ಇಂಜಕ್ಷನ್ ತರಲು ಬರುವುದಿಲ್ಲವೇ?" ಎಂಬ ಸೂಚನೆಯನ್ನು ಮಾಡಿದನು.

ನಿಂತ ಮೆಟ್ಟಿನಲ್ಲಿಯೇ ಯಾವ ನಿರ್ಧಾರಕ್ಕೂ ಬರುವುದು ಶಕ್ಯವಾಗಲಿಲ್ಲ. ಸ್ವಾಮಿರಾಯನ ಕೈತುಂಬ ಕೆಲಸಗಳಿದ್ದುವು. "ರಾತ್ರಿ ಬನ್ನಿ, ನೋಡುವ" ಎಂದು ಅವನನ್ನು ಕಳುಹಿಸಿಕೊಟ್ಟನು.

ಆ ರಾತ್ರಿ ಹದಿನೆರಡು ತಾಸಿನತನಕ ಅವರಿಬ್ಬರು ಮಾತನಾಡುತ್ತ ಕುಳಿತರು. ಮುಂದಣ ದಾರಿ ಕಷ್ಟನೆಂದೇ ತೋರಿತು. ಆ ಸ್ಥಿತಿಯಲ್ಲಿ ಕೆಂಪುತಾರೆ ಅವನ ಕೈಗೆ ಬರುವಂತಿಲ್ಲ. ಉಳಿದ ಒಂದೇ ಒಂದು ಮಾರ್ಗವೆಂದರೆ ಆ ವಾರದೊಳಗಾಗಿ, ಬೇರೆಯ ಪತ್ರಿಕೆಯನ್ನು ಹೊರಡಿಸುವುದು; ಸಂಚಿಕೆಯ ಮುದ್ರಕರನ್ನು ಆರಿಸುವುದು. ಮರುದಿನ ಅವರಿಬ್ಬರಿಗೂ ಅದೇನೆ ಕೆಲಸ. ಉಸಿರಿಗೂ ಬಿಡುವಿಲ್ಲದಂತೆ ದಣಿದು, ಇನ್ನೊಂದು ಛಾಪಖಾನೆಯ ಗೆಳೆತನಮಾಡಿ ಮೂರುತಿಂಗಳ ಮುಂಗಡ ಅವರಿಗೆ ಕೊಟ್ಟು, ಜಿಲ್ಲಾ ಮೇಜಿಸ್ಟ್ರೇಟರ ಮುಂದೆ ಡಿಕ್ಲೆರೇಶನ್ ಹಾಕಿದರು. ಚುನಾವಣೆಗೆ ಎರಡುದಿನ ಮುಂಚಿತವಾಗಿ ಪ್ರಭುದೇವನ ಸಂಪಾದಕತ್ವದಲ್ಲಿ, ಪ್ರಕಾಶತ್ವಗಳಲ್ಲಿ 'ಕ್ರಾಂತಿ ತಾರೆ' ಎಂಬ ನವೀನ ವಾರಪತ್ರಿಕೆ ಹೊರಟೇ ಬಿಟ್ಟಿತು.

ಆ ಪತ್ರಿಕೆಯ ಆ ತುದಿಯಿಂದ ಈ ತುದಿಯ ತನಕ ಪ್ರಭುದೇವನ ಮನಸ್ಸಿನ ಉರಿಯೆಲ್ಲವೂ ಹಬ್ಬಿಕೊಂಡಿತ್ತು. ನಂದರ ಮೇಲಿನ ಆರೋಪಗಳು, ರಂಗವಿಠಲರ ಕಾರ್ಖಾನೆಯ ವಿಚಾರಗಳು, ಚುನಾವಣೆಯ ದ್ವೇಷಗಳು ಎಲ್ಲವೂ ತುಂಬಿದ್ದುವು. ಕನ್ನಡ ಬರೆಯಲು ಬಾರದ ಸಾಣೆಕಲ್‌ನನ್ನು ಕುರಿತು "ನಂಬಿದವರನ್ನು ಕೊರೆಯುವುದೇ ಸಾಣೆಕಲ್ಲಿನ ಸ್ವಭಾವ. ಅದರ ದ್ವೇಷ ಹೆಚ್ಚಿದಂತೆ ಕತ್ತಿಯ ಹರಿತವೂ ಹೆಚ್ಚುತ್ತದೆ" ಎಂಬ ಅಗ್ರಲೇಖವನ್ನು ಪ್ರಕಟಿಸಿದನು. ಇದೇ ವೇಳೆಗೆ ನಂದರ ನಿವೃತ್ತ

ಮಿತ್ರ ಶ್ರೀ ಪುರುಷೋತ್ತಮರಾಯರು, ಚುನಾವಣೆಗೆ ನಿಂತವರು, ತಮ್ಮ ಹಿರಿಯ ಹುಡುಗನಿಗೆ ಕಾಯಿಲೆ ಎಂದು ದೆಹಲಿಯಿಂದ ಒಮ್ಮಿಂದೊಮ್ಮೆ ತಂತಿಬಂದುದರಿಂದ, ಚುನಾವಣೆಯ ರಂಗದಿಂದ ಒಮ್ಮೆಗೇ ಕಾಲು ಕೀಳಬೇಕಾಯಿತು. ಚುನಾವಣೆಯ ದಿನ ಬೇರೊಂದು ತಂತಿ ಬಂದಿತು. ಮೊದಲಿನ ತಂತಿ ಸುಳ್ಳು ತಂತಿ ಎಂದು ಅವರ ಮನೆಯವರಿಗೆ ತಿಳಿಯಿತು. ತಿರುಗಿ ಇನ್ನೊಂದು ತಂತಿ. ಪುರುಷೋತ್ತಮರು ಯಾವುದೋ ಅವಘಡದಲ್ಲಿ ಕಾಲುಮುರಿದು ಕೊಂಡಿದ್ದಾರೆಂದು. ಆ ಎಲ್ಲ ತಂತಿವಾರ್ತೆಗಳನ್ನು ಸೂಚಿಸುವ ಪ್ರಭುದೇವನ ಅಗ್ರಲೇಖವು ಬೇರೆ.—ಅದರಲ್ಲಿ ಚುನಾವಣೆಯ ಕಾಲದಲ್ಲಿ ಪುರುಷೋತ್ತಮರು ಭಾಗವಹಿಸಲಾರದುದಕ್ಕಾಗಿ ವ್ಯಥೆಯನ್ನು ವ್ಯಕ್ತಪಡಿಸಿದ್ದನು.

ಅಂತೂ ಚುನಾವಣೆಯ ದಿವಸ ಯಾರೊಬ್ಬರಿಗೂ ಬುದ್ಧಿ ಸ್ಥಿಮಿತದಲ್ಲಿರಲಿಲ್ಲ. ಶಾಂತವಿಠಲ, ರಂಗವಿಠಲರು ಮುಷ್ಕರದ ದೆಸೆಯಿಂದಲೂ ಕೂಲಿಕಾರರ ಉಪದ್ರದಿಂದಲೂ ಚುನಾವಣೆಯಲ್ಲಿ ಉತ್ಸಾಹವನ್ನು ಕಳೆದುಕೊಂಡಿದ್ದರು. ಪುರುಷೋತ್ತಮರವರು ಊರಿನಲ್ಲಿಲ್ಲದ ನಿಮಿತ್ತ ಚುನಾವಣೆಯನ್ನು ಕೆಡಿಸಿಕೊಂಡರು. ಸ್ವಾಮಿರಾವ್ ಪ್ರಭುದೇವರ ಪ್ರತಿಕಕ್ಷಿಗಳು ಸ್ಪರ್ಧೆ ಹಿಂದೆಗೆದರು. ಕಾಂಗ್ರೆಸ್ಸಿನ ಕಡೆಯಿಂದ ನಿಂತ ಹದಿಮೂರು ಹುರಿಯಾಳುಗಳಲ್ಲಿ ನಾಲ್ವರು ಸೋತರು. ಆ ನಾಲ್ವರೂ ಡಾಕ್ಟರರ ಕಡೆಯುವರೇ, ಸೋತವರ ವಿಷಯವಾಗಿ ಬರೆಯುತ್ತ ಪ್ರಭುದೇವನು "ಗೆಲ್ಲುವ ಕುದುರೆಗಳೆಂದು, ಚುನಾವಣೆಯಲ್ಲಿ ಪ್ರಯತ್ನ ಮಾಡದೆ ಕಾಂಗ್ರೆಸ್ಸಿನ ಮರ್ಯಾದೆಯನ್ನು ಕಳೆದರು" ಎಂದು ತನ್ನ ಕ್ರಾಂತಿ ತಾರೆಯಲ್ಲಿ ಆರೋಪ ಹೂಡಿದನು. ಚುನಾವಣೆಯ ಸಮಯ ಕಳೆಯಿತು. ಇನ್ನು ಪ್ರಭುದೇವನ ಉಸಿರು ಆಸಕ್ತಿಗಳೆಲ್ಲ ನಿರಾತಂಕವಾಗಿ ಮುಷ್ಕರ ನಡೆಯಿಸುವುದರ ಕಡೆಗೆ ಹರಿಯಬಹುದು. ಈ ತನಕ ಅವನಿಗೂ ಬಿಡುವಿರಲಿಲ್ಲ. ಆದರೆ ಇದೇ ಸಮಯವನ್ನು ಡಾ। ನಂದ ಮತ್ತು ಸಾಣೆಕಲ್ ಹೊಂಚು ಹಾಕಿ ಕುಳಿತಿದ್ದರು. ಸಾಣೆಕಲ್ ಕೂಲಿಕಾರ ಮುಖಂಡರಿಗೆ ಹಣ ಲಂಚ ತೆತ್ತು, ಕೆಲಸವನ್ನು ಸಾಧಿಸಿದರು. ಕೆಲಸಗಾರರು ಒಬ್ಬೊಬ್ಬರಾಗಿ ದುಡಿಯಲು ಬರತೊಡಗಿದರು. ಅವರ ಹಿರಿಯರಲ್ಲಿ ಭಿನ್ನಾಭಿಪ್ರಾಯಗಳು ಉದಯಿಸಿದುವು. ಇದರಿಂದಾಗಿ ಪ್ರಭುದೇವನ ವಚ/

ಸ್ಸಿಗೂ ಪೆಟ್ಟು ಬಂದಿತು. ಲಂಚದ ಬಲದಿಂದ ಕೂಲಿಕಾರರ ಯಾವತ್ತು ಚರ್ಚೆ ತೀರ್ಮಾನಗಳು ಡಾ। ನಂದರ ಮತ್ತು ಅವರ ಗೆಳೆಯರ ಕಿವಿಗೆ ಬೀಳುವುದು ಸಾಧ್ಯವಾಯಿತು.

ಪ್ರಭುದೇವ ವಾಸ್ತವವಾಗಿ ಗಳಿಸಿದ ಜಯವು ಒಂದಾದರೆ, ಕಳೆದು ಕೊಂಡದ್ದು ಎರಡು.



# ಹತ್ತೊಂಭತ್ತನೆಯ ಅಧ್ಯಾಯ

ರಾಧಾಕೃಷ್ಣನಿಗೆ ಧರವನ್ ಸಿಂಗ್ ಔದ್ಯೋಗಿಕ ಶಾಲೆ ಎಂಬುದು ತನ್ನ ಹೆಮ್ಮೆಯ ಹೆಗ್ಗುರುತು ಎಂಬ ಭಾವನೆ ಉಂಟಾಗಿದೆ. ಅದು ಪ್ರಾರಂಭವಾದಂದಿನಿಂದ ಅವನಿಗೆ ಬಿಡುವೆಂಬುದೂ ಇಲ್ಲ; ಬೇಸರವೆಂಬುದೂ ಇಲ್ಲ. ಈತನಕ ಜೀವನವನ್ನು ಕವಿದ ನಿರಾಶೆಗಳು ತೊಲಗಿ, ಉತ್ಸಾಹ ಸಂತೋಷಗಳಿಗೆ ಎಡೆಯುಂಟಾಗಿದೆ. ಶಾಲೆಯ ಪ್ರಾರಂಭ ನಿರ್ವಿಘ್ನವಾಗಿ ಜರುಗಿತು. ಬಯಸದ ಎಡೆಗಳಿಂದ ಸಹಾಯ ಬಂದಿತು. ತೊಡಗುವಾಗಲೇ ಭವ್ಯ ರೂಪದಿಂದ ಶಾಲೆ ತೊಡಗಿತ್ತು. ವಿದ್ಯಾರ್ಥಿಗಳಿಂದ ತುಳುಕಿತು. ಎರಡನೆಯ ವರ್ಷ ಅದನ್ನು ಸೇರಲು ಬಂದವರ ಸಂಖ್ಯೆ ಇಮ್ಮಡಿಯಾಯಿತು. ಮೂರನೆಯ ವರ್ಷ ಬಂದಿದೆ; ವಿದ್ಯಾರ್ಥಿಗಳ ಸಂಖ್ಯೆ ಇನ್ನೂ ಬೆಳೆದಿದೆ. ಪ್ರಭುದೇವ ಅದನ್ನು ಕಾಲೇಜು ಮಾಡಬೇಕೆನ್ನುತ್ತಿದ್ದಾನೆ. ಪ್ರತಿ ತರಗತಿಯೂ ಐದು ವಿಷಯಗಳಿಂದ ಕೂಡಿದ್ದು ನೂರು ಮಂದಿ ಬಾಲಕರಿದ್ದಾರೆ. ಆ ಸಂಖ್ಯೆ ಇಮ್ಮಡಿಯಾಗಬೇಕಂತೆ. ವಸತಿಗೃಹವನ್ನೂ ಬೆಳೆಯಿಸಬೇಕಂತೆ. “ಅದನ್ನು ಸಂಪೂರ್ಣ ನಿವಾಸಕ್ಕನುಕೂಲವಾದ ವಿದ್ಯಾಲಯವನ್ನಾಗಿ ಮಾಡಬೇಕು. ಹಾಗೆ ಮಾಡಿದರೆ ಶಾಂತಿನಿಕೇತನ, ಹಿಂದೂ ವಿಶ್ವವಿದ್ಯಾಲಯ — ಇವುಗಳನ್ನು ಮೀರಿಸುವ ದಿನ ಬಂದೀತು” ಎಂಬ ಮಾತು ಪ್ರಭುವಿನ ಬಾಯಲ್ಲಿ ಬರುತ್ತಲೇ ಇರುತ್ತದೆ. ಅಂಥ ಉತ್ಸಾಹವನ್ನು ತಡೆದು ಹಿಡಿಯುತ್ತಿರುವವನೆಂದರೆ ರಾಧಾಕೃಷ್ಣನೇ. ಅದನ್ನು ವಿಸ್ತರಿಸಬಾರದೆಂದು ಅವನ ಇಚ್ಛೆಯಲ್ಲ. ಬರಿದೆ ಶಾಲೆ ವಿಸ್ತರಿಸಿದರೆ ಸಾಕೇ? ಆದಾಯ ವಿಸ್ತರಿಸಬೇಡವೇ? ಎಲ್ಲಿಂದ ಹಣ ಬರಬೇಕು- ಎನ್ನುತ್ತಾನೆ ರಾಧಾಕೃಷ್ಣ. “ಈ ತನಕ ಯಾರು ಕೊಟ್ಟರು? ಅವರೇ. ನಮ್ಮವರಲ್ಲ; ಉತ್ತರ ಹಿಂದುಸ್ಥಾನದ ಶೇಟಜೀಗಳು. ನಾಳೆಯೂ ಅವರೇ ಕೊಟ್ಟಾರು” ಎನ್ನುತ್ತಾನೆ ಪ್ರಭುದೇವ. ಆದರೆ ಅದೊಂದು ವಿಷಯದಲ್ಲಿ ರಾಧಾಕೃಷ್ಣನಿಗೆ ತೊಡಕು ಬಂದಿರಲಿಲ್ಲವಾದರೂ ಇನ್ನೂ ಧೈರ್ಯ ಉಂಟಾಗಿಲ್ಲ. ಈ ಮೂರು ವರ್ಷಗಳಲ್ಲಿ ಅವನ ವೆಚ್ಚಕ್ಕೆ ಬೇಕಾದಷ್ಟು ಹಣ ಬಂದಿದೆ. “ಇಂಥವರು ಇಂತಿಷ್ಟು ಕೊಟ್ಟ

ದ್ದಾರೆ-ಎಂದು ಪ್ರಭುದೇವನೇ ತಂದುಕೊಡುತ್ತಿದ್ದ. ಆ ಲೆಕ್ಕಕ್ಕೆ ಆತ ಇನ್ನೂ ಕೈಹಾಕಿರಲಿಲ್ಲ. ಆದರೆ ಮನಸ್ಸಿನಲ್ಲಿ ಒಂದು ಅನುಮಾನವಿತ್ತೇ ಇತ್ತು. ಬರುತ್ತಿರುವ ಎಲ್ಲಾ ಹಣವೂ ತನ್ನಲ್ಲಿಗೆ ಬರುತ್ತಿದೆಯೋ ಎಂದು. ದಾನಿಗಳ ಹೆಸರನ್ನು ಅವನೇ ಹೇಳುವವನು, ದಾನದ ಹಣವನ್ನು ಅವನೇ ತಿಳಿಸುವವನು. ಅಷ್ಟೇ ಅಲ್ಲದೆ, ಈ ಮೂರು ವರ್ಷಗಳಲ್ಲಿ ಬೇರೆ ಯಾವ ಕಾಗದ ಪತ್ರಗಳನ್ನೂ ಅವನು ಕಂಡಿಲ್ಲ. ಮೂಲ ಸಹಿಯುಳ್ಳ ಯಾವ ಚೆಕ್ಕನ್ನೂ ನೋಡಿಲ್ಲ. ಇದರಿಂದಲೇ ಅನುಮಾನ. ಇನ್ನೊಮ್ಮೆ ತಾನು ಇಂಥ ಅನುಮಾನಕ್ಕೆ ಎಡೆಕೊಡಕೂಡದೆಂದು ತರ್ಕಿಸುತ್ತಾನೆ.

ಅಲ್ಲದೆ ಎರಡು ಮೂರು ವರ್ಷಕಾಲ ಪ್ರಭು ತನ್ನ ವಿಲಾಸಕ್ಕಾಗಿ ವೆಚ್ಚಮಾಡುತ್ತಿರುವ ಹಣ ಅವನ ಕಣ್ಣು ತೆರೆದಿದೆ. ಅವನ ಪತ್ರಿಕೆಯಿಂದ ಅಷ್ಟೊಂದು ಸಂಪಾದನೆ ಆಗಲು ಸಾಧ್ಯವೇ? ಉತ್ತರ ಹಿಂದುಸ್ಥಾನದ ಪ್ರವಾಸವನ್ನು ಮುಗಿಸಿ ಬಂದವನೇ, ದಿನ ನಿತ್ಯವೆಂಬಂತೆ ಮೋಟರಿನಲ್ಲೇ ಓಡಾಟ ತೊಡಗಿದನು. ಬಾಡಿಗೆಗೆ ತುಂಬ ಹಣ ವೆಚ್ಚವಾಗಿರಬೇಕು. ಒಂದು ವರ್ಷ ಕಳೆಯುವುದರೊಳಗಾಗಿ ಸ್ವಂತ ಮೋಟರು ಕಾರನ್ನು ಕೊಂಡಾಯಿತು. ಇತರ ಖರ್ಚು ವೆಚ್ಚಗಳಿಗೂ ಮಿತಿ ಇರಲಿಲ್ಲ. ಈ ಚುನಾವಣೆಯಲ್ಲಿ ಹಣ ನೀರಿನಂತೆ ಖರ್ಚಾಗಿರಬೇಕು. ಈ ಎಲ್ಲ ಸಂಪಾದನೆ ಎಲ್ಲಿಂದ ಬರಬೇಕು? ಕ್ರಾಂತಿ ತಾರೆಯೊಂದೇ ಅವನ ವ್ಯವಸಾಯ. ಅದರಿಂದ ಅಷ್ಟು ಸಂಪತ್ತು ಅವನ ಕೈ ಸೇರುವುದು ಸಾಧ್ಯವೇ? ಇವುಗಳಿಂದಾಗಿ ರಾಧಾಕೃಷ್ಣನ ಅನುಮಾನ ಹೆಚ್ಚಾಗುತ್ತಿದೆ. ಶಾಲೆಗಾಗಿ ಬರುತ್ತಿರುವ ಹಣದಲ್ಲಿಯೇ ಒಂದಂಶ ಈ ವಿಲಾಸಗಳಿಗಾಗಿ ಕರಗುತ್ತಿರಬಹುದೇ-ಎಂಬ ಸಂಶಯ ಬಲವಾಗುತ್ತಿದೆ. ಹೀಗೆ ಸಾರ್ವಜನಿಕ ಹಣ ಅಪವ್ಯಯವಾಗುವುದಾದರೆ ತಾನೇನು ಮಾಡಬೇಕು? ಶಾಲೆಯನ್ನು ವಿಸ್ತರಿಸುವುದೇ? ಪ್ರಭುದೇವನನ್ನು ತಪ್ಪಿಸಿ ತಾನಾಗಿ ಅದನ್ನು ನಡೆಯಿಸುವುದೇ? ಹಾಗೆ ಮಾಡಲು ದಾನಿಗಳ ವಿಳಾಸಗಳಾದರೂ ಅವನಿಗೆ ತಿಳಿದಿರಬೇಕಲ್ಲ. ಇಷ್ಟೊಂದು ಕಾಲ ತಾನು ಈ ವಿಷಯದಲ್ಲಿ ಮೌನ ತಾಳಿದುದು ಸರಿಯೇ ಎಂಬ ವಿಚಾರ ಅವನಲ್ಲಿ ಮೂಡುತ್ತದೆ.

ಅವನ ಸಂಶಯಗಳಿಗೆ ತಿದಿಯೂದುವಂತೆ ಗೆಳೆಯ ರಾಮಕೃಷ್ಣಯ್ಯನವರೂ ಮಾತನಾಡುತ್ತಾರೆ. 'ನಮಗೆ ಹಣ ಕೊಡುವವರ ಸಮ

ನಾದ ವಿಳಾಸ ತಿಳಿಯಬೇಡವೇ?' ಇಷ್ಟು ಹಣ ಬರುತ್ತಿದೆ ಎಂಬುದನ್ನು ನಂಬುವುದೇ ಕಷ್ಟವಾಗಿದೆ. ಬಂದ ಹಣಕ್ಕೆ ಸಮನಾದ ಲೆಕ್ಕಪತ್ರಗಳನ್ನಿರಿಸಿ-ಎಷ್ಟು ಕೈಯಲ್ಲಿದೆ; ಎಷ್ಟು ಬಂದಿತ್ತು; ಎಷ್ಟು ವೆಚ್ಚವಾಗಿದೆ—ಇವುಗಳ ವರದಿಯನ್ನು ನಾವು ದಾಸಿಗಳಿಗೆ ಒಪ್ಪಿಸಬೇಡವೇ' ಅನ್ನುತ್ತಾರೆ. ಇನ್ನೊಮ್ಮೆ-'ನಾನೆನ್ನುವ ಸಂಗತಿಯನ್ನು ವಿಚಾರಮಾಡಿ; ಬರುವ ಹಣದ ವಿವರ ನಮಗೆ ತಿಳಿಯಬೇಡವೇ? ಅವರು ತಂದುಕೊಟ್ಟು ನಾಲ್ಕಾರು ಹೆಸರು ಹೇಳಿದರೆ ಸಾಕೇ? ನಾಳೆ ಅವರಿಗೇನಾದರೂ ಆಯಿತು. ಈ ಮುಷ್ಕರದಿಂದಾಗಿ ಅವರನ್ನು ಬಂಧನದಲ್ಲಿ ಇರಿಸಿದರೆಂದು ತಿಳಿಯುವ; ಆಗ ನಮ್ಮ ಗತಿಯೇನು? ನಾವು ಕೆಲಸವನ್ನೆಲ್ಲ ನಿಲ್ಲಿಸಿ ಬಿಡಬೇಕಾಗುತ್ತದೆಯಲ್ಲ' ಎಂದು ಅನುಮಾನ ಹೆಚ್ಚಿಸುವರು. ಒಮ್ಮೊಮ್ಮೆ ಇಂಥ ಮಾತು ಬಂದಿತೆಂದರೆ ಬಹು ದಿನಗಳ ತನಕ ಆತ ಮರುಳನಂತೆ, ಬೆರಳಿಂದ ಹಣೆಯನ್ನು ಕುಟ್ಟುತ್ತಾ, ತನ್ನಷ್ಟಕ್ಕೆ ವಿಚಾರ ಮಾಡುತ್ತಿರುತ್ತಾನೆ. ಒಮ್ಮೊಮ್ಮೆ ಹೀಗೂ ಅನಿಸುತ್ತದೆ—ಪ್ರಭುವು ತಾನಾಗಿ ಸಹಾಯಕ್ಕೆ ಬಂದವ; ಹಣದ ಭಾರವನ್ನು ಹೊತ್ತವನು. ಇಂಥ ಒಂದು ಸಂಸ್ಥೆಯನ್ನು ಸಾಧ್ಯವಾಗಿ ಮಾಡಿಕೊಟ್ಟವನು. ನಾವಾಗಿ ಏನು ಮಾಡುವಂತಿದೆ? ತಿಂಗಳಿಗೆ ಆರ್ನೂರು, ಎಂಟ್ನೂರು ರೂಪಾಯಿಗಳನ್ನು ಎಲ್ಲಿಂದ ತಂದು ಸುರಿಯಬಹುದು? ಊರವರು ಕೊಟ್ಟಾರೆಯೇ? ಊರಿನಲ್ಲಿ ಸಾವಿರ ಜನರನ್ನು ಆಶ್ರಯಿಸಬೇಕಾದೀತು. ನಡೆದಷ್ಟು ದಿನ ಇದು ನಡೆಯುತ್ತದೆ. ನಮಗೆ ತೊಂದರೆಯಾಗದಷ್ಟು ಕಾಲ, ಆತ ಎಷ್ಟು ತಿಂದು ಹಾಕಿರಬಹುದೆಂಬ ಅನುಮಾನವೇಕೆ? ಹಣದ ವಿಷಯದಲ್ಲಿ ಕೈ ಹಾಕುವುದಿಲ್ಲವೆಂದು ಮೊದಲೇ ಹೇಳಿದ್ದೆನಲ್ಲ, ಎಂದು ತಾಳ್ಮೆ ತಂದುಕೊಳ್ಳುತ್ತಾನೆ.

ಇಂಥ ತಾಳ್ಮೆಯು, ಒತ್ತಾಯದಿಂದ ತಂದುಕೊಳ್ಳುವಂತಹದು. ಆದರೆ ಮನಸ್ಸಿನ ಅಶಾಂತಿಯು ಹೋಗಲೊಲ್ಲದು. ಬೇರೆ ಹಾದಿಯಿಂದ ಅದನ್ನು ಕಳೆದುಕೊಳ್ಳಬೇಕು. ಮನೆಯಲ್ಲಿ ಎಲ್ಲ ಸಂತೋಷವಾಗಿದೆ. ಚಂದ್ರ ಬೆಳೆಯುತ್ತಿರುವ ಹುಡುಗ; ಈಗ ಎರಡು ವರ್ಷದ ಕೂಸೊಂದು ದಾಂಪತ್ಯದಲ್ಲಿ ಫಸಿಲದೆ. ಹೆಣ್ಣು ಕೂಸು ಅ ತಾರೆ. ತಾರೆ ತನ್ನ ತಂದೆಯನ್ನು ಮುದ್ದಾದ ನಗುವಿನಿಂದ ಸಂತೋಷಗೊಳಿಸಿದರೆ, ಚಂದ್ರ ತನ್ನ ವಿಚಿತ್ರ ತರ್ಕ ಸರಣಿಯಿಂದ ಅವನನ್ನು ನಗಿಸುತ್ತಾನೆ. ಅಪ್ಪನಂತೆ ಅವನೂ

ದೊಡ್ಡ ಶಾಲೆ ಮಾಡುವವನಂತೆ. ಹುಡುಗರಿಗೆ ಮೋಟಾರು, ವಿಮಾನ ಗಳನ್ನು ನಿಡೆಯಿಸಲು ಕಲಿಸುವನಂತೆ. ಆ ಮಾತುಗಳನ್ನು ಕೇಳಿ ಈತ ನಿಗೂ ಒಮ್ಮೊಮ್ಮೆ ಮೋಟರು ವಿಜ್ಞಾನದ ಇಲಾಖೆಯನ್ನು ತೆರೆಯುವ ಆಸೆಯಾಗುತ್ತದೆ. ಆದರೆ ಅಷ್ಟು ಧೈರ್ಯ ಬರಲೊಲ್ಲದು. ಈ ಮೂರ ನೆಯ ವರ್ಷ ಕಳೆದರೆ, ಮೊದಲ ವಿದ್ಯಾರ್ಥಿ ತಂಡವು ಹೊರಕ್ಕೆ ಬರು ತ್ತದೆ. ತಾನು ತಯಾರಿಸಿದ ಹುಡುಗರಿಗೆ ಮುಂದೆ ಉದ್ಯೋಗ ದೊರ ಕುವುದು ಎಂಬುದನ್ನು ತಿಳಿದುಕೊಂಡಮೇಲೆ, ಇಂತಹ ಹೆಚ್ಚಿನ ಕನಸು ಗಳನ್ನು ಕಾಣಬೇಕು. ವಿಶ್ವವಿದ್ಯಾಲಯದ ಪದವೀಧರರನ್ನು ಗಿರಾಕಿ ಯಿಲ್ಲದ ಪ್ರಪಂಚಕ್ಕೆ ಅಟ್ಟುವ ಹಾಗೆ ತಾನೂ ಮಾಡಬಾರದು ಎಂದು ತೋರುತ್ತದೆ. ಆ ಮಾತನ್ನು ಗೆಳೆಯರಾದ ಶ್ಯಾಮು, ರಾಮಕೃಷ್ಣಯ್ಯ ನವರು ಪುಷ್ಟೀಕರಿಸುತ್ತಾರೆ.

ಸತ್ಯಳ ಪ್ರಪಂಚ ಈಗ ಸಂಶಯ ಸಂದೇಹಗಳಿಂದ ದೂರವಾ ಗಿದೆ. ಚಂದ್ರನ ಸ್ಥಾನವನ್ನು ನಗುವ ತಾರೆ ಅಪಹರಿಸಿದ್ದಾಳೆ. ಮಗ್ಗುಲ ಕೋಣೆಯಲ್ಲಿ ಇನ್ನೊಂದು ಕೂಸು ಉದಯಿಸಿದೆ. ಅದು ಶ್ಯಾಮು ಮತ್ತು ಕಲ್ಯಾಣಿಯರ ಸಂಪತ್ತು. ಅದು ಗಂಡು ಕೂಸು. ಇನ್ನೂ ಮೂರು ತಿಂಗಳಾಗಿಲ್ಲ. ಚಂದ್ರನಿಗೆ ಪ್ರತಿಸ್ಪರ್ಧಿಯಾಗಿಯೋ ಏನೋ, ಅದಕ್ಕೆ ಸೂರ್ಯ ಎಂದು ನಾಮಕರಣವಾಗಿದೆ. ಈ ಎಲ್ಲ ಮಕ್ಕಳಿಂದಾಗಿ ರಾಧಾಕೃಷ್ಣನಿಗೆ ಮನೆಯ ಆಕರ್ಷಣೆ ಹೆಚ್ಚಾಗಿದೆ. ಮನಸ್ಸಿನ ಅನು ಮಾನ ಮರೆಯುವುದಕ್ಕೇ ಇರಲಿ, ಮಕ್ಕಳ ಮೋಹಕ್ಕಾಗಿರಲಿ, ಆತ ಒಂದು ತಾಸು ಕಾಲವಾದರೂ ಸತ್ಯಳೊಡನೆ, ಮಕ್ಕಳೊಡನೆ ಆಟವಾ ಡುತ್ತಿರುತ್ತಾನೆ. ಶಾಲೆಯ ಕೆಲಸ ಪ್ರಾರಂಭದಲ್ಲಿ ಹೆಚ್ಚಾಗಿದ್ದರೂ ಅಲ್ಲಿನ ರೂಢಿ ನೆಲೆಸಿದ ಮೇಲೆ, ಇವನಿಗೆ ತುಸು ಬಿಡುವು ದೊರೆಯತೊಡಗಿದೆ. ರಾಮಕೃಷ್ಣಯ್ಯನವರು ಮಧ್ಯಾಹ್ನ ಅಲ್ಲಿಯೇ ಉಳಿದುಕೊಂಡು ಅರೆ ವಾಸಿ ಶ್ರಮವನ್ನು ತಾವೇ ಹೊರುತ್ತಾರೆ. ಮೊದಲಿನಂತೆಯೆ ಕಾರ್ಯ ಕ್ರಮ ಯೋಚಿಸಿ ದಣಿಯ ಬೇಕಾಗಿರಲಿಲ್ಲ. ಅನುಕೂಲವಾದ ಉಪಾ ಧ್ಯಾಯರು ಅವನಿಗೆ ದೊರಕಿದ್ದಾರೆ. ಅವರ ಪ್ರೀತಿ, ಸಹಕಾರಗಳು ಸಾಕಷ್ಟು ದೊರೆಯುತ್ತಿವೆ.

ರಾಧಾಕೃಷ್ಣ ಮಕ್ಕಳನ್ನು ಹಿಡಿದುಕೊಂಡು ತನ್ನ ಆವರಣವಾದ

ಬಯಲು, ಬೆಟ್ಟ, ಗುಡ್ಡಗಳಲ್ಲಿ ಅಲೆದಾಡುವುದೂ ಉಂಟು. ಬೆಳಗ್ಗೆ ಗೋಶಾಲೆಯ ದರ್ಶನ ಮಾಡುತ್ತಾನೆ. ಈ ಮೂರು ವರ್ಷಗಳ ಅವಧಿಯಲ್ಲಿ ಗೋಶಾಲೆಯಲ್ಲಿ ಇಪ್ಪತ್ತು ಎಮ್ಮೆಗಳೂ, ಹತ್ತು ದನಗಳೂ ಸೇರಿಕೊಂಡಿವೆ. ಅವಕ್ಕಾಗಿ ಹುಲ್ಲು ಬೆಳೆಯುವ ಜಾಗವನ್ನು ಇನ್ನೂ ವಿಸ್ತರಿಸಿದ್ದಾರೆ. ಆತ ಮಕ್ಕಳನ್ನು ಕಟ್ಟಿಕೊಂಡು, ಗೋಶಾಲೆಯ ಬಳಿ ಕುಳಿತು ದನಕರುಗಳನ್ನು ಮಾತನಾಡಿಸುತ್ತಾನೆ. ಅವುಗಳ ಮುಖಗಳನ್ನು ಸವರುತ್ತಾನೆ. ಗಂಗೆದೊಗಲನ್ನು ತುರಿಸುತ್ತಾನೆ—ಆಟವಾಡುತ್ತಾನೆ. ಕರುಗಳಿಗೆ ಅವನ ಮೇಲೆ ತುಂಬ ನೆಚ್ಚು. ಇವನು ಹೋದಲ್ಲೆಲ್ಲ ಹಿಂಬಾಲಿಸಿ 'ಕತ್ತು ತುರಿಸು' ಎಂದು ಅವು ಬೇಡಿಬರುತ್ತವೆ. ಒಮ್ಮೆ ಆತ ಶಾಲೆಯಲ್ಲಿ ಪಾಠ ಹೇಳುವಾಗ, ನೆಟ್ಟಗೆ ಶಾಲೆಯೊಳಗೇನೇ ಒಂದು ಕರು ಪ್ರವೇಶ ಮಾಡಿತು. ಮಕ್ಕಳೆಲ್ಲ 'ಶೂ ಶೂ' ಎಂದು ಗದ್ದಲಮಾಡಿದರು. ಕರು ನೆಟ್ಟಗೆ ರಾಧಾಕೃಷ್ಣನ ಬಳಿಗೆ ಬಂದು ಕತ್ತನ್ನು ನೀಡಿತು. ಆತ ನಗುತ್ತ ಅದರ ಹಣೆ, ಕೊರಳುಗಳನ್ನುಜ್ಜಿ ತೃಪ್ತಿಪಡಿಸಿ ಹೊರಕ್ಕೆ ಕಳುಹಿಸಿದನು.

ಪರೀಕ್ಷೆಗೆಂದು ಈಗ ಸ್ವಲ್ಪ ರೇಶ್ಮೆಹುಳಗಳನ್ನು ಸಾಕಿದ್ದಾನೆ. ಆ ಹುಳುಗಳ ಜೀವನಕ್ರಮ ನೋಡುವುದರಲ್ಲಿ ಅವನಿಗೆ ತುಂಬಾ ಇಷ್ಟ. ಸತ್ಯ ಅದನ್ನು ಕಂಡು "ಅಬ್ಬಾ ಇವೇನು ತಿಂದಾವು? ಮನುಷ್ಯನು ಈ ಹುಳುಗಳ ಹಾಗೆ ಆಹಾರ ತಿನ್ನತೊಡಗಿದರೆ ಪ್ರಪಂಚದಲ್ಲಿನ ಆಹಾರ ಮೂರೇ ಮೂರು ದಿನಕ್ಕೆ ಬರಿದಾಗಬಹುದು" ಎನ್ನುತ್ತಾಳೆ ನಗುತ್ತ. ಈತ ಪ್ರತ್ಯುತ್ತರವಾಗಿ "ಹೌದೌದು, ಮನುಷ್ಯ ಇದಕ್ಕೂ ಹೆಚ್ಚಿಗೆ ತಿಂದಾನು. ಆದರೆ ಇವುಗಳಷ್ಟು ಪ್ರಯೋಜನ ಕೊಡುವುದು ಮಾತ್ರ ಅನುಮಾನ" ಎನ್ನುತ್ತಾನೆ. ಕೆಲವೊಮ್ಮೆ ತಾವು ಹೊಸತಾಗಿ ತೊಡಿಸಿದ ಕೆರೆಯ ಬಳಿಗೆ ಹೋಗುತ್ತಾನೆ. ತೋಟಗಾರಿಕೆಯಲ್ಲಿ ನಿರತರಾದ ಹುಡುಗರೊಡನೆ ಸೇರುತ್ತಾನೆ. ಬೆವರು ಸುರಿಸುತ್ತಿದ್ದವರಿಗೆ ಬಿಡುಗಡೆ ಕೊಡುತ್ತಾನೆ. "ಹಾಗೆ ಯಾರೂ ಬೇಸರಬರುವತನಕ ಕೆಲಸಮಾಡಬಾರದು; ಬೇಕಾದರೆ ಆಳುಗಳನ್ನು ಸೇರಿಸಿಕೊಳ್ಳಬಹುದು. ಬೇಸರದಿಂದ ಮಾಡಿದ ಕೆಲಸ ಫಲವಿಲ್ಲ. ಇಲ್ಲಿ ಮಾಡುವಷ್ಟು ಕೆಲಸ ನಾಳೆ ನಿಮ್ಮ ಮನೆಯಲ್ಲಿ ಸ್ವಂತವಾಗಿ ಮಾಡಿದರೇನೇ ಪ್ರಯೋಜನ. ಅಲ್ಲದೆ ನಿಮ್ಮ ಉತ್ಸಾಹಕ್ಕೂ ಒಂದು

ಮಿತಿ ಬೇಕು. ತುಂಬ ದುಡಿದು ದಣಿದರೆ ನಾಳೆ ಕೆಲಸವೇ ಬೇಡ ಎಂದೆನಿಸೀತು.” ಅನ್ನುತ್ತಾನೆ.

ಶ್ಯಾಮನು ಒಂದು ಗಳಿಗೆಯಾದರೂ ಮಾತಿಗೆ ವಿರಾಮವಿಲ್ಲದವನಂತೆ ಶ್ರಮಿಸುತ್ತಾನೆ. ರಾಧಾಕೃಷ್ಣ ಅವನನ್ನು ಗದರಿಸುವುದೂ ಉಂಟು. “ದುಡಿಮ, ದುಡಿದು ಅಗಸನ ಕತ್ತೆಯಾಗುತ್ತೀಯಾ” ಎಂದು ಚೇಷ್ಟೆಮಾಡುತ್ತಾನೆ. “ಆದರೇನಂತೆ?” ಎನ್ನುತ್ತಾನೆ ಅವನು. ಅವನಿಗೆ ಶರೀರ ಶ್ರಮದಲ್ಲಿ ಹೆಚ್ಚಿನ ಉತ್ಸಾಹ. ನೀರು ಜಗ್ಗುವುದು, ಹುಲ್ಲು ಕತ್ತರಿಸುವುದು, ಹಾಲು ಹಿಂಡುವುದು, ಅಳತೆ ಮಾಡುವುದು — ಎಲ್ಲದಕ್ಕೂ ಅವನು ಸಿದ್ಧನೇ. ತನ್ನ ಅಲ್ಪ ಸ್ವಲ್ಪ ಓದನ್ನು ವ್ಯರ್ಥಮಾಡುತ್ತಲೂ ಇಲ್ಲ. ಮಂಗಳೂರಿಗೆ ಹೋಗಿ ಆಗಾಗ ಕೃಷಿ ಇಲಾಖೆಯವರನ್ನು, ಪಶು ವೈದ್ಯರನ್ನೂ, ಕಂಡು ಬರುತ್ತಾನೆ. ಕೃಷಿ ಪಶುಪಾಲನೆಗಳಿಗೆ ಸಂಬಂಧಿಸಿದಂತೆ ಅವರೊಡನೆ ಚರ್ಚಿಸುತ್ತಾನೆ. ಅವರಿಂದ ಕೇಳಿಯಾದರೂ ಆ ವಿಷಯವಾದ ಹೊಸ ಜ್ಞಾನವನ್ನು ಗಳಿಸಬೇಕೆಂಬುದು ಅವನ ಹಂಬಲ. ಅವನಿಗೆ ಇಂಗ್ಲಿಷು ಬಾರದು. ಆದುದರಿಂದ “ಥೂತ್, ನಮ್ಮ ದರಿದ್ರ ಕನ್ನಡದಲ್ಲಿ ಈ ವಿಷಯಗಳಲ್ಲಿ ಒಂದೇ ಒಂದು ಪತ್ರಿಕೆಯಿಲ್ಲ.” ಎಂದು ಉದ್ಗರಿಸುತ್ತಾನೆ. ಕೆಲವೊಮ್ಮೆ ಪ್ರಭುದೇವನು ಬಂದಾಗ “ಪ್ರಭುರಾವ್, ನಿಮ್ಮ ಕೆಂಪು ತಾರೆಯಲ್ಲಿ ಇಲ್ಲಿಲ್ಲದ ರಾಜಕೀಯ ತತ್ವ ಹಾರಿಸುವ ಬದಲು, ನಮ್ಮ ಕೃಷಿಕರ ಸಂಪತ್ತು ಹೆಚ್ಚುವುದಕ್ಕೆ ಏನಾದರೂ ಜ್ಞಾನ ಕೊಡಬಾರದೇ? ಕೃಷಿ, ಪಶುಪಾಲನೆ ಮೊದಲಾದುವುಗಳಲ್ಲಿ ಎಷ್ಟೋ ಸುಧಾರಣೆ ಆಗಿದೆಯಲ್ಲಾ. ಅದನ್ನೋದಿದರೆ ಜನ ಸುಧಾರಿಸುವುದಿಲ್ಲವೇ? ಜನರ ಸುಖಕ್ಕೆ, ಶ್ರೀಮಂತರ ಹಣವನ್ನು ಸುಲಿದು ಹಂಚಿಕೊಳ್ಳುವುದು ಒಂದೇಒಂದು ದಾರಿಯೇ? ಶಾಸ್ತ್ರೀಯವಾದ ಜ್ಞಾನದಿಂದ ತಮ್ಮ ಸಂಪತ್ತನ್ನು ತಾವೇ ಹೆಚ್ಚಿಸಿಕೊಂಡು ಅವರು ಸುಖಿಗಳಾಗಬಾರದೇ?” ಎಂದು ಕೇಳುತ್ತಾನೆ. ಪ್ರಭುದೇವ ನಗುತ್ತಾನೆ. “ಅದೆಲ್ಲ ಶ್ಯಾಮಾ, ಒಬ್ಬೊಬ್ಬರೇ ಮಾಡುವ ಕೆಲಸವಲ್ಲ. ದೇಶದಲ್ಲಿ ಸಮಾಜವಾದ ನೆಲಸಿ ಬಿಟ್ಟರೆ, ಎಲ್ಲಾ ಸುಧಾರಣೆಗಳು ತನ್ನಂತೆಯೇ ಆಗುತ್ತವೆ. ನೀನು ರಸ್ಯದ ಐದು ವರ್ಷದ ಯೋಜನೆಯ ವಿಚಾರ ಕೇಳಿಲ್ಲ. Simply Grand' ಎಂದು ಬಿಡುತ್ತಾನೆ.

ಅಯ್ಯೋ, ದೇಶದಲ್ಲಿದ್ದ ಸಂಪತ್ತನ್ನು ಹಂಚಿಕೊಂಡರೆ ತಲಾ ಒಂದರ ಅರುವತ್ತು ರೂಪಾಯಿಯ ವರಮಾನ ಬಂದೀತಂತೆ. ಈ ಭಿಕ್ಷುಕ ಸಂಪತ್ತಿಗೆ ಬಾಯಿಬಿಟ್ಟು ಏನು ಪ್ರಯೋಜನ? ಇಲ್ಲದ ಸಂಪತ್ತನ್ನು ಹಂಚಿಕೊಳ್ಳುವ ಯೋಚನೆಗಿಂತ ಇದ್ದ ಉತ್ಪನ್ನ ಹೆಚ್ಚಿಸುವ ಪ್ರಯತ್ನ ಶ್ರೇಯಸ್ಕರವೆಂದು ನನಗೆ ಕಾಣುತ್ತದೆ" ಎನ್ನುತ್ತಾನೆ ಶ್ಯಾಮು.

"ನಿಮ್ಮದೆಲ್ಲ ಡೊಂಕು ವಾದ. ರಸ್ಯಾದಂತೆ ಇಲ್ಲಿ ಕ್ರಾಂತಿ ಬರ ಬೇಕು. ಆಗ ಎಲ್ಲ ಕೆಲಸ ತನ್ನಂತೇ ಆಗುತ್ತದೆ. ಇನ್ನು ನೀನು ಹೇಳುವ ಸಂಗತಿ ಅರ್ಥವಿಲ್ಲದ್ದೆಂದು ನಾನು ಹೇಳುವುದಿಲ್ಲ. ಆದರೆ ಪತ್ರಿಕೆಯಲ್ಲಿ ಬರೆಯಬೇಕಾದ ವಿಷಯ ಅದಲ್ಲ. ಪತ್ರಿಕೆಯು ಇರಬೇಕಾದುದು ಜನ ಜಾಗ್ರತಿಗಾಗಿ. ರಾಜಕೀಯ ಕ್ರಾಂತಿ ಅದರ ಗುರಿ. ನೀನು ಹೇಳುವ ವಿಚಾರ--ನೀನೇ ಕಾರ್ಯತಃ ಮಾಡಿ ತೋರಿಸುತ್ತಿದ್ದೀಯಲ್ಲ! ನೂರು ನೂರು ಪುಟ ಬರೆಯುವುದೂ ಸಮ- ನೀನು ಇಲ್ಲಿ ಮಾಡಿತೋರಿಸುತ್ತಿರುವ ಒಂದೊಂದೂ ಕೆಲಸವೂ ಸಮ."

"ಹೋ, ಈಗ, ಈ ಹೊಗಳಿಕೆ ನನಗೆ ಲಂಚವೋ? ಅದಕ್ಕೆ ನಾನು ಬಲಿಯಾಗಲಾರೆ. ಕೃಷಿ ಕೈಗಾರಿಕೆಗಳು ಮಾತ್ರ ಪ್ರಚಾರಕ್ಕೆ ಯೋಗ್ಯ ವಲ್ಲ ಅನ್ನುತ್ತೀರಾ? ಆ ಲೆಕ್ಕದಲ್ಲಿ ರಾಜಕೀಯವೂ ಹಾಗೇನೇ ಇರ ಬೇಕು. ನೂರು ಬಾರಿ ಸಮತಾವಾದವನ್ನು ಸಾರುವುದಕ್ಕಿಂತ, ಒಮ್ಮೆ ಇದ್ದ ಬಾಳ್ವೆಯಲ್ಲಿ ಸಮತೆಯನ್ನು ಆಚರಿಸಿ ತೋರಿಸುವುದು ಲೇಸು."

"ಅಹುದು. ಅದೂ ಹಾಗಿರಬೇಕು."

"ಹಾಗಾದರೆ, ನೀವು ನಿಮ್ಮ ಕಾರನ್ನು ಬಿಟ್ಟು ಬಡವರಂತೆಯೇ ನಡೆದು ಬರಬೇಕು. ಇಲ್ಲವೆ ನಿಮ್ಮ ಕಾರಿನಲ್ಲಿ ಬಡವರನ್ನು ತುಂಬಿಸಿ ಕೊಂಡು ತಿರುಗಾಡಬೇಕು."

ಸರಳ ಸ್ವಭಾವಿಯಾದ ಶ್ಯಾಮನು ಈ ತೆರನಲ್ಲಿ ಮಾತನಾಡು ವಾಗ ಪ್ರಭುದೇವನಿಗೆ ಸಿಟ್ಟು ಬರುವುದೆಂಬುದಿಲ್ಲ. ಪ್ರಭುವು ನಗು ತ್ತಲೇ ಮಾತನಾಡುತ್ತಿರುತ್ತಾನೆ. ತನ್ನ ಕೈಯಲ್ಲಿ ದುಡ್ಡು ಓಡಾಡುತ್ತಿದೆ ಯೆಂಬ ಹೆಮ್ಮೆ ಅವನಿಗಿಲ್ಲ. ಅವನ ಸಮತಾವಾದವಾದರೂ ಉಳಿದ ಹಲವರ ಸಮತಾವಾದದಂತೆಯೇ ಬಾಯಲ್ಲಿ. ಮೊದಲು ಕ್ರಾಂತಿಯಾಗ ಬೇಕು. ಒತ್ತಾಯದಿಂದ ಸಂಪತ್ತಿನ ಹಂಚಿಕೆಯಾಗಬೇಕು. ಅಲ್ಲಿಯು

ತನಕ ಸಮತಾವಾದಿಗಳು ಬೇಕೆನ್ನುವಷ್ಟು ಶ್ರೀಮಂತಿಕೆಯಿಂದಿರಬಹುದು.' ಪ್ರಭುವು ಪ್ರಶಂಸೆಗೆ ಸುಲಭವಾಗಿ ಬಲಿಯಾಗುವ ಪ್ರಾಣಿ. ಆದರೆ ಹಾಗೆ ಹೊಗಳುವ ಸ್ವಭಾವ, ರಾಧಾಕೃಷ್ಣನಿಗಾಗಲೀ, ಶ್ಯಾಮನಿಗಾಗಲೀ ಇಲ್ಲ. ಆದರೆ ಆ ವಿಷಯದಲ್ಲಿ ರಾಮಕೃಷ್ಣಯ್ಯನವರಿಗೆ ಬಾಯಿ ಚಲಾಕಿ ತುಂಬಾ ಇದೆ. ಅಧಿಕಾರದ ಏಣಿಯಲ್ಲಿ ತುದಿಯನ್ನು ಮುಟ್ಟಬೇಕಾದರೆ ಅಂಥ ಗುಣಗಳು ಬೇಕೇ ಬೇಕು. ಮೇಲಿನವರನ್ನು ಒಲಿಸಿಕೊಂಡಲ್ಲಿ ತಾವೂ ಮೇಲಕ್ಕೆ ಹೋಗಬಹುದು. ಆದುದರಿಂದ ಅವರು ಪ್ರಭುದೇವನೊಡನೆ "ನಿಮ್ಮಂತಹ ಉದಾರಿಗಳು, ಉತ್ಸಾಹಿಗಳು ಇನ್ನೂ ನಾಲ್ಕು ಮಂದಿ ಇದ್ದರೆ, ಮಂಗಳೂರನ್ನು ಮುಂಬಯಿಯನ್ನಾಗಿ, ಮಾಡಬಹುದು ಅನ್ನುತ್ತಾರೆ."

ಬೇರೊಂದು ದಿವಸ ಪ್ರಭುದೇವನೊಡನೆ "ಪ್ರಭುರಾವ್, ಚುನಾವಣೆಯಲ್ಲಿ ನೀವು ಅತಿರಥ ಮಹಾರಥರನ್ನೇ ಸೋಲಿಸಿ ಗೆದ್ದು ಬಂದರಲ್ಲವೆ! ಜನಕ್ಕೆ ಈಗಲಾದರೂ ನಿಮ್ಮ ಶಕ್ತಿ ತಿಳಿಯಿತು. ನಮ್ಮ ಊರವರು ಸಂಪಾದಕರೆಂದರೆ ಗುಮಾಸ್ತರೆಂದು ಈ ತನಕ ತಿಳಿದಿದ್ದರು. ಈಗ ನಿಮ್ಮ ಒರಪಕ್ಕೆ ಬೆಲೆ ಬಂದಿದೆ ಎನ್ನಲು ಅನುಮಾನವಿಲ್ಲ. ನಿಮ್ಮ ಪತ್ರಿಕೆಯು ಒಕ್ಕಣೆ ಎಂದರೆ ಕತ್ತಿಯ ಏಟು. ಪೆಟ್ಟೊಂದು, ತುಂಡು ಎರಡು. ಅಂಥ ಎದೆಗಾರಿಕೆ ಬೇಕು ಮನುಷ್ಯನಲ್ಲಿ. ತಾವು ಹೇಳುವ ನುಡಿ ಸತ್ಯವಾದದ್ದಾದರೆ ಮಾತ್ರ ಆ ಕೆಚ್ಚು ಸಾಧ್ಯ. ಬರಿಯ ಜೀವನಕ್ಕಾಗಿ ದುಡಿಯುವ ಸಂಪಾದಕರಿಗೆ ಅದು ಸಾಧ್ಯವೇ?' ಎಂದರು. ಇನ್ನೊಮ್ಮೆ "ಮಿ। ಪ್ರಭು, ನಮ್ಮ ಶಾಲೆಯ ಮೂರನೆಯ ವರ್ಷಪೂರ್ತಿ ದಶಂಬರದ ಕೊನೆಗೆ ಬರುತ್ತದೆ ನೋಡಿ. ಶಾಲೆ ಪ್ರಾರಂಭವಾದುದು ಜನವರಿಯಲ್ಲಿ ಅಲ್ಲವೇ? ಮೊದಲಿನ ಪಂಗಡದ ಹುಡುಗರು ಈ ವರ್ಷ ಹೊರ ಬೀಳುತ್ತಾರೆ. ನಮ್ಮ ಶಾಲೆಗೆ ಬಹು ದೊಡ್ಡ ದಿವಸ ಅದು" ಎಂದರು. ಆತನಿಗೆ ಒಮ್ಮೆಗೇ ಆವೇಶ ಬಂದು "ಮಿ। ರಾಮಕೃಷ್ಣಯ್ಯ ನಮ್ಮ ಯುನಿವರ್ಸಿಟಿಗೆ ತಕ್ಕ ಕೊನ್‌ವೊಕೇಶನ್ ಮಾಡಬೇಕು. ನೀವು ಮುಂದಾಗಿ ಅದರ ನೆನಪು ಹುಟ್ಟಿಸಿದ್ದು ಸರಿಯಾಯಿತು. ಆ ದಿನ ಪ್ರಾರಂಭೋತ್ಸವ ಆದ ಮೇಲೆ, ನಾವು ಯಾವ ಹಬ್ಬವನ್ನೂ ಜರುಗಿಸಲಿಲ್ಲ. ಈ ಉತ್ಸವವನ್ನು ಮಾತ್ರ ಜೋರಾಗಿ ಮಾಡಬೇಕು. ಎಷ್ಟು

ಹಣ ಖರ್ಚಾದರೂ ಚಿಂತೆಯಿಲ್ಲ" ಎಂದನು.

"ಹಣಗಿಣ ಖರ್ಚುಮಾಡುವುದು ಬೇಡ. ಊರವರಿಗೆ ಒಂದು ಆಮಂತ್ರಣ ಕೊಟ್ಟು, ಸಭೆ ಮಾಡುವ. ಉಪನ್ಯಾಸ ಅಭಿನಂದನೆಗಳಾದರೆ ಸಾಕು"

"ಸ್ವಾಮಿ, ನಿಮ್ಮ ಸಹಕಾರಿ ಸಂಘಗಳ ಸಾಮಾನ್ಯ ಸಭೆಯನ್ನೂ ಎಷ್ಟು ಗಡದ್ದಿನಿಂದ ಮಾಡುತ್ತಾರೆ! ಕಾಮನ್ ಗುಡ್ ಫಂಡಿನಿಂದ ನಾಲ್ಕು ಕಾಸು ತೆಗೆದು — ಒಂದು ಸಿಂಗಲ್ ಕಾಫಿ, ಚರಾ ಮುರಿ ಉಪ್ಕರಿಯನ್ನಾದರೂ ಕೊಡುತ್ತಾರೆ. ನಮ್ಮ ಸಂಸ್ಥೆ ಅದಕ್ಕೂ ಕಡಿಮೆಯೇ?

"ಛೀ, ಛೀ, ನಾನು ಕಡಿಮೆ ಎಂದೇನೇ? ಹಾಗಲ್ಲ, ಇಷ್ಟು ಹಣ ಖರ್ಚು ಮಾಡುವವರು ಅದಕ್ಕೆ ಹಣ ಖರ್ಚುಮಾಡಲು ಹಿಂದಾಗುತ್ತಾರೆಂದು ನಾನು ಹೇಳಲಿಲ್ಲ. ಆದರೆ ನಾವು ಹೊರಗಿನ ಆಡಂಬರಕ್ಕೆ ಹೆಚ್ಚು ಹಣ ವೆಚ್ಚಮಾಡಬಾರದು. ಆ ಹಣ ಉಳಿಸಿಕೊಂಡರೆ, ಇನ್ನೂ ನಾಲ್ಕು ವಿದ್ಯಾರ್ಥಿಗಳಿಗೆ ವೇತನ ಕೊಡಬಹುದಲ್ಲಾ?"

"ಛೀ, ಛೀ, ಹಾಗಲ್ಲ; ಮದುವೆಯ ಖರ್ಚು ಮದುವೆಗೆ; ಸಾವಿನದು ಸಾವಿಗೆ. ಇದಕ್ಕಾಗಿ ಖರ್ಚುಮಾಡುವುದನ್ನು ಇದಕ್ಕೆ ಮಾಡಬೇಕು. ಅದಕ್ಕೆ ಮಾಡುವುದನ್ನು ಅದಕ್ಕೆ ಮಾಡಬೇಕು. ಈ ಸಂಸ್ಥೆ ಅಭಿವೃದ್ಧಿಗೊಂಡು ಪರವೂರಿನಿಂದಲೂ ವಿದ್ಯಾರ್ಥಿಗಳು ಇಲ್ಲಿಗೆ ಬರಬೇಕು. ಇಲ್ಲಿ ಸಾವಿರ ವಿದ್ಯಾರ್ಥಿಗಳಿರುವ ತನಕ ನಮಗೆ ತೃಪ್ತಿ ಇರಬಾರದು. ಅದಕ್ಕಾಗಿ ಉತ್ಸವ ಬೇಕು. ವಿಜೃಂಭಣೆ ಬೇಕು. ಜಾಹೀರಾತು ಬೇಕು. ಜಾಹೀರಾತಿಲ್ಲದೆ ಹಣ ಬರುತ್ತದೆಯೇ?—

"ಇಲ್ಲ, ಇವತ್ತೇ ಕುಳಿತು ಅದರ ಹಂಚಿಕೆ ಹಾಕುವ" ಎಂದು ಬಳಿನಿಂತ ಹುಡುಗನೊಬ್ಬನನ್ನು ಕರೆದು, "ನಿಮ್ಮ ಪ್ರಿನ್ಸಿಪಾಲರನ್ನು ಬರಹೇಳು. ಹಾಗೆ ಶ್ಯಾಮಣ್ಣನವರನ್ನೂ ಕರೆದುಕೊಂಡು ಬಾ" ಎಂದನು. ಅವರು ಬಂದೊಡನೆಯೇ ಈ ತ್ರೈವಾರ್ಷಿಕೋತ್ಸವವನ್ನು ಕುರಿತಾದ ಚರ್ಚೆಯನ್ನು ಮುಂದುವರಿಸಿದನು. ಜತೆಗೆ ಶಾಲಾ ವಿಸ್ತರಣದ ಕಲ್ಪನೆಯನ್ನು ಬಿಡಿಸಿದನು. "ಇದಕ್ಕೆಲ್ಲ ಸಮನಾದ ಜಾಹಿರಾತು ಬೇಕು. ನಾಲ್ಕು ಪತ್ರಿಕೆಗಳಲ್ಲಿ ದೊಡ್ಡ ದೊಡ್ಡ ಪ್ರಕಟಣೆಗಳನ್ನು ಕೊಟ್ಟು ಊರೂರಿಗೆ ತಿಳಿಯುವ ಹಾಗೆ ಮಾಡಬೇಕು. ನಮಗೆ ದಾನ ಮಾಡಿದವರು ಅವನ್ನು

ಕಂಡು ತಮ್ಮ ಸಹಾಯ ಸಫಲವಾಗಿದೆಯೆಂದು ತಿಳಿದುಕೊಳ್ಳಬೇಕು. ಅದಕ್ಕಾಗಿಯೇ ನನ್ನ ಕ್ರಾಂತಿತಾರೆಯ ಒಂದು ವಿಶೇಷ ಸಂಚಿಕೆ ಹೊರ ಡಿಸುತ್ತೇನೆ. ಅದರಲ್ಲಿ ಆರ್ಟ್‌ಪೇಪರಿನ ಮೇಲೆ ಚಿತ್ರಗಳನ್ನು ತುಂಬಿಸಿ ಸಾವಿರಾರು ಪ್ರತಿಗಳನ್ನು ಅಚ್ಚುಹಾಕಿಸಿ ಹಂಚುತ್ತೇನೆ. ಅದರ ಒಂದು ಹಿಂದೀ ಅನುವಾದವನ್ನೂ ಹೊರಡಿಸಬೇಕು" ಎಂದನು.

"ಯಾಕೆ ಅಷ್ಟೆಲ್ಲ ಖರ್ಚಿನ ಯೋಜನೆ?" ಎಂದನು ರಾಧಾಕೃಷ್ಣ.

"ನಾನೂ ಹಾಗೇನೇ ಅಂದೆ. ಅವರು ಮಾತ್ರ ಮದುವೆಯ ಖರ್ಚು ಮದುವೆಗೆ ಶ್ರಾದ್ಧದ್ದು ಶ್ರಾದ್ಧಕ್ಕೆ ಎನ್ನುತ್ತಾರೆ." ಎಂದರು ರಾಮಕೃಷ್ಣ ಯ್ಯನವರು.

"ಮಿ।ರಾಧಾಕೃಷ್ಣ, ನಿಮಗೆ ಇದನ್ನು ಬೆಳೆಯಿಸಿ ಬರುವ ಆಶೆ ಇದ್ದರೆ, ಈ ಗರೀಬತನ ಬಿಡಬೇಕು. ಬೇಡಲಿಕ್ಕೆ ಹೋಗುವುದಾದರೂ ಶ್ರೀಮಂತರಾಗಿಯೇ ಹೋಗಬೇಕು. ಚಿಂದಿ ಅರಿವೆಯನ್ನುಟ್ಟು ಬೇಡು. ವವಸಿಗೆ ನಾವು ಕೊಡುವುದು ಕಾಲಾಣೆ; ಬದಲು ಹೇಟ್, ಬೂಟ್ ಧರಿಸಿ,'ಮಿಸ್ಟರ್, ಪರ್ಸ್ ಕಳೆದುಹೋಯಿತು. ರೈಲಿನ ಖರ್ಚಿಗೆ ಇಲ್ಲ' ಎಂದು ಕೈಯೊಡ್ಡಿದರೆ ರೂಪಾಯಿ, ಎರಡು ರೂಪಾಯಿ ಕೊಡುತ್ತೇವೆ. ಪ್ರಾಪಂಚಿಕವಾದ ಯಶಸ್ಸಿಗೆ ಡಂಭ, ಡೌಲು, ಗದ್ದಲ, ಗೌಜಿಗಳು ಬೇಕೇ ಬೇಕು. ಅವಿಲ್ಲವಾದರೆ ಠಾಗೂರರೂ, ಮಾಲವೀಯರೂ ಕೋಟಿ ಗಟ್ಟಲೆ ರೂಪಾಯಿಯನ್ನು ಕೂಡಿಸುವುದು ಸಾಧ್ಯವಿತ್ತೇ?

"ಅದು ಅವರ ಹಿರಿಮೆಯಿಂದ. ಅರಸರು, ಶ್ರೀಮಂತರು ಲಕ್ಷ ಗಟ್ಟಲೆಯಿಂದ ತೆತ್ತರೆಂದು..............."

"ಆ ಹಿರಿಮೆ ನಮಗೂ ಇದೆ. ಜಗತ್ತಿಗೆ ಅದು ತಿಳಿದಿಲ್ಲವಷ್ಟೆ. ನನ್ನ ಎಣಿಕೆಯಲ್ಲಿ ನೀವು ಮಿ।ರಾಧಾಕೃಷ್ಣ,ಮಾಲವೀಯರಂತೆಯೇ.ಅದನ್ನು ಈಗಲ್ಲನಾದರೂ ನಾಳೆ ಜಗತ್ತು ತಿಳಿದೀತು. ಅದು ತಾನಾಗಿ ಜಗತ್ತಿಗೆ ತಿಳಿಯುವ ತನಕ ಪ್ರಕಟಣೆ, ಪ್ರಚಾರದ ಕೆಲಸಗಳು ತೀರ ಅವಶ್ಯ"

"ಅದೂ ಒಂದು ರೀತಿಯಿಂದ ನಿಜವೇ." ಎಂದು ರಾಮಕೃಷ್ಣಯ್ಯ ನವರು ಪ್ರಭುದೇವನ ಕಡೆಗೆ ಒಲಿದರು.

ಜಗಪ್ರಭು ಇನ್ನಷ್ಟು ಉಬ್ಬಿದನು." ರಾಧಾಕೃಷ್ಣ, ನಿಮಗೆ ಮನು ಷ್ಯರ ಸ್ವಭಾವ ಏನೂ ತಿಳಿದಿಲ್ಲ. ತಾನಾಗಿ—ದಾನಧರ್ಮಕ್ಕೆ ಯಾರೂ

ಕೈ ಮುಂದೆ ನೀಡುವುದಿಲ್ಲ. ದಾನಧರ್ಮ ಮಾಡುವುದು ಸಹಾಯ ಮಾಡುವ ಉದ್ದೇಶದಿಂದಲ್ಲ. ಕೀರ್ತಿಯ ಆಸೆಯಿಂದ. ಆದುದರಿಂದ ಹಣಕೂಡಿಸುವುದಕ್ಕೆ ಸೋಗು ಬೇಕು, ನಾಟಕವಾಗಬೇಕು. ನಮ್ಮದು ಬರಿಯ ಮಾತಲ್ಲ.ತೋರಿಸಲು ಬರುವಷ್ಟು ಕೆಲಸವನ್ನೂ ಮಾಡಿದ್ದೇವೆ. ಅದರಿಂದಾಗಿ ತುಸು ನಾಟಕವನ್ನು ಆಡಿದರೂ ತಪ್ಪಿಲ್ಲ. ಅದರಿಂದ ನಾಚಿಕೆಯೂ ಇಲ್ಲ. ಹಾಗೆ ಹಣ ಬರುವುದು. ನಿಮಗೆ ಬೇಡವೋ? ಅದಕ್ಕೆ ಬೇರೊಂದೇ ದಾರಿ ಇದೆ. ನಾಳೆಯಿಂದ ಹೆಂಡತಿ ಮಕ್ಕಳನ್ನು ತವರಿಗೆ ಕಳುಹಿಸಿಬಿಡಿ. ಕಾವಿಯುಟ್ಟು ಎಂಟು ದಿವಸ ಊಟ ಒಂದು ಕಡೆ ಬಿಟ್ಟು ಕುಳಿತುಕೊಳ್ಳಿ. ಆ ಮೇಲೆನೋಡಿ. ಊರಿಂದೂರೇ ನಿಮ್ಮ ಸುತ್ತಲು ಜಮಾಯಿಸುತ್ತದೆ. ಮಕ್ಕಳನ್ನು ಕೇಳುವವರು, ಅಳಿಯನನ್ನು ಬೇಡುವವರು, ಬಿಡ್ಡಿನ ನಂಬರು ಕೇಳುವವರು, ಜೀವನದಲ್ಲಿ ಇಷ್ಟ ಬಂದ ಹಾಗೆ ಇದ್ದು ಮುಪ್ಪು ಬಂದೊಡನೆ ಭಗವದ್ಗೀತೆ ಓದುವವರು, ಎಲ್ಲರೂಬಂದು ಕಲೆಯುತ್ತಾರೆ.ನೀವು ಕೇಳದೇನೆ ನಿಮ್ಮ ಕಾಲುಬುಡಕ್ಕೆ ಹಣವನ್ನು ತಂದು ಸುರಿಯುತ್ತಾರೆ" ಎಂದನು.

"ಹೋ, ಹಾಗೆ ಮಾಡಿದರೆ ಹಣ ಬಂದೇ ಬರುತ್ತದೆ. ಈಗಲೇ ನೋಡುತ್ತಿದ್ದೇವಲ್ಲ? ಅಲ್ಲಲ್ಲಿನ ಆಶ್ರಮಗಳು, ಮಹರ್ಷಿಗಳು, ಮಹಾರಾಜರು, ತಪಸ್ವಿಗಳ ಹಾವಳಿಯನ್ನು. ಆಗ ಮಾತ್ರ ಶಾಲೆ ನಡೆಯಿಸುವುದು ಸಾಧ್ಯವಾಗಲಾರದು. ಭೋಜನ ಶಾಲೆ, ಭಜನಾ ಮಂದಿರಗಳನ್ನು ನಡೆಯಿಸಬಹುದು" ಎಂದನು ಶ್ಯಾಮ.

ಎಲ್ಲರೂ ನಕ್ಕರು. ಕೊನೆಗೆ ಪ್ರಭುವಿನ ಮೂಲಸೂಚನೆಗೆ ಮನ್ನಣೆ ದೊರೆಯಿತು. ತ್ರೈವಾರ್ಷಿಕ ಉತ್ಸವನ್ನು ಜರುಗಿಸಿ, ಅದಕ್ಕೆ ಒಬ್ಬ ಪ್ರಸಿದ್ಧ ದೇಶಭಕ್ತನನ್ನೋ, ವಿಜ್ಞಾನಿಯನ್ನೋ ಕರೆಯಿಸಬೇಕೆಂಬ ಪ್ರಭುವಿನ ಸೂಚನೆಗೆ ರಾಮಕೃಷ್ಣಯ್ಯನವರು "ಯಾಕೆ ಸ್ವಾಮಿ ಅಷ್ಟೆಲ್ಲ ದೂರ ಹೋಗಬೇಕು? ಸ್ವಾಮಿ ಜ್ಞಾನಾನಂದರನ್ನು ಕರೆಯಿಸುವ. ಅವರು ಅಮೇರಿಕಕ್ಕೆ ಹೋಗಿಬಂದವರು. ಎಷ್ಟೋ ಶಾಲೆ, ಹೋಸ್ಟೆಲು, ಆಸ್ಪತ್ರೆಗಳನ್ನು ನಡೆಯಿಸುತ್ತಿದ್ದಾರೆ. ಬಹು ಯೋಗ್ಯ ವ್ಯಕ್ತಿ." ಎಂದರು ರಾಮಕೃಷ್ಣಯ್ಯ.

"ಅವರೇ? ಯಾರೂ ಸಿಗದೆ ಹೋದರೆ ಅವರಾಗ ಬಹುದು.

ಸ್ವಾಮಿಗಳ ಪೈಕಿ ಅವರು ವಾಸಿ. ಆದರೂ ನನಗೆ ಒಂದು ಅನಿಸುತ್ತದೆ "ವೇದಾಂತಿಗಳ ತಂಟೆಯೇ ನಮಗೆ ಬೇಡವೆಂದು. ಅವರಿಗೆ ಲೌಕಿಕವಿಲ್ಲ. ತಾವು ಹೋಗುವುದು ಎಂಥ ಸಭೆಗೇ ಆಗಲಿ-ತಾಸು ತಾಸುಗಳ ತನಕ ವೇದಾಂತದ ಮೇಲೆ ಉಪನ್ಯಾಸ ಮಾಡುವ ಸ್ವಭಾವ ಅವರದ್ದು. ನಮ್ಮ ಅಧ್ಯಕ್ಷತೆಗೆ ಬರಿಯ ಪ್ರಾಪಂಚಿಕರು ಸಾಕು. ಈ ಸ್ವಾಮಿಗಳ ಗುತ್ತಿಗೆಯನ್ನು ನಾವೂ ತೆಗೆದುಕೊಂಡರೆ, ಪುರುಷೋತ್ತಮರಂತಹವರು ಏನು ಮಾಡಬೇಕು?"

"ಅವರು ನಮಗೇನು ಮಾಡುತ್ತಾರೆ?" ಎಂದರು ರಾಮಕೃಷ್ಣಯ್ಯ. ಇತ್ತೀಚೆಗೆ ರಾಮಕೃಷ್ಣಯ್ಯನವರು ಪುರುಷೋತ್ತಮರ ಮನೆಗೆ ಹೋಗುತ್ತಲಿಲ್ಲವಾದರೂ, ಹಿಂದೆ ಹಲವು ಬಾರಿ ಹೋಗಿ ಬಂದವರು. ಅವರಿಗೆ ಗೀತೆ, ಸನ್ಯಾಸಿಗಳೆಂದರೆ ತುಂಬ ಪ್ರೀತಿ ಎಂದು ಬಲ್ಲರು. ಅವರ ಸ್ವಭಾವ ತಿಳಿದಿದ್ದ ರಾಮಕೃಷ್ಣಯ್ಯನವರು "ಪುರುಷೋತ್ತಮರಾಯರು ಮೆಚ್ಚಿದ ಸ್ವಾಮಿಗಳೆಂದರೆ ಹರಿಕೃಷ್ಣದಾಸರಲ್ಲವೇ" ಎಂದರು.

"ನಾನು ಅದನ್ನು ಕೇಳಿದ್ದಲ್ಲ. ಅವರ ಹೊಸ ಹೆರಿಗೆಯ ಕತೆ ಹೇಳುತ್ತಿದ್ದೇವೆ latest delivery"

"ಏನು ಅವರ ಮನೆಯಲ್ಲಿ ಜನನವಾಯಿತೇ? ಅವರಿಗೆ ಎರಡನೆಯ ಹೆಂಡತಿಯಾದರೂ, ಹೆರಿಗೆಯ ಪ್ರಾಯ ಕಳೆದಿದೆ."

"ರಾಮಕೃಷ್ಣಯ್ಯ - ಪ್ರಾಯ ಹೋಗುತ್ತ ನೀವು ಶಿಶುಗಳಾಗುತ್ತಿದ್ದೀರಿ. ನಾನು ಅವರ ಹೆಂಡತಿಯ ಹೆರಿಗೆಯ ವಿಚಾರವನ್ನು ಹೇಳಿದ್ದಲ್ಲ. ಅವರ ಮಿತ್ರಮಂಡಲದವರ ಹೆರಿಗೆಯ ಕತೆ ಹೇಳುತ್ತಿದ್ದೇನೆ"

"ನನಗೆ ಅದು ಹೇಗೆ ತಿಳಿಯಬೇಕು? ನಿಮ್ಮ ವ್ಯಂಗ್ಯಭಾಷೆ? ಅಲ್ಲದೆ ನಾನು ಅವರಲ್ಲಿಗೆ ಹೋಗದೆ ಬಹಳ ದಿನಗಳಾದುವು. ಅವರು ಬೇಸರ ಮಾಡಿರಲೂ ಬಹುದು."

"ಈಗ ನಾನು ಹೇಳುವ ಕತೆಯನ್ನು ಕೇಳಿ. ನಮ್ಮೂರಿನ ಮಹಾಪ್ರಭೃತಿಗಳು ಅಂದರೆ ರಂಗವಿಠಲ್, ಡಾ। ನಂದ, ಪುರುಷೋತ್ತಮ್, ಇನ್ನಿಬ್ಬರು-ಒಟ್ಟಿಗೆ ಊರಿಗೆ ಪಂಚಮಹಾಭೂತಗಳು ಸೇರಿ ಇನ್ನೊಂದು ಹೊಸ ಸ್ಕೀಮ್ ಹೊರಡಿಸಿದ್ದಾರೆ."

"ಇನ್ನೊಂದು joint stock ಕಂಪೆನಿಯೇ? ಆ ಹೆರಿಗೆ ಅವರನ್ನೊ

ಪ್ಪಿದ ಕೆಲಸ. ಈಗಾಗಲೇ ಹತ್ತು ಹದಿನೈದು ಸಂಸ್ಥೆಗಳು ಅವರ ಕೈಯಲ್ಲಿವೆ. ಇನ್ನೂ ಒಂದೆರಡು ಆಗಬಹುದು. ಅದರಲ್ಲಿ ಏನಾಶ್ಚರ್ಯ?"

"ಛೀ, ಹಾಗೆ ಎಂದುದಲ್ಲ. ಈಚೆ ನಮ್ಮ ಚುನಾವಣೆಯಲ್ಲಿ ಅವರಿಗೆಲ್ಲ ಮಂಗಳಾರತಿ ಆಯಿತಲ್ಲ? ಪತ್ರಿಕೆಗಳಲ್ಲಿ,ಮುಷ್ಕರದ ದೆಸೆಯಿಂದಾಗಿ ತುಂಬಾ ಅವಹೇಳನಬಂದಿತಲ್ಲ? ಅವರ ಮನಸ್ಸಿಗೇನೆ, ತಾವು ಕಳ್ಳರೆಂಬುದು ಗೊತ್ತಾಗಿದೆ. ಅದನ್ನೆಲ್ಲ ಉಪಾಯವಾಗಿ ಮರೆಯಿಸುವುದಕ್ಕೆ ಒಂದು ದೊಡ್ಡ ಹಂಚಿಕೆ ತೆಗೆದಿದ್ದಾರೆ. ಒಂದು ರೀತಿಯ 'ಪರೋಪಕಾರ ಲಿಮಿಟೆಡ್' ಕಂಪೆನಿ ಹೊರಡಿಸುವ ಯೋಚನೆ ಮಾಡಿದ್ದಾರೆ"

"ನಿಜಕ್ಕೂ ಅದೇ ಹೆಸರೇ?"

"ಅದೇ ಹೆಸರಲ್ಲ, ಅಂಥ ಇನ್ನೊಂದು ಹೆಸರು. ಈಗ P. S. G. charities ಎಂಬತಹ ಸಂಸ್ಥೆಗಳಿಲ್ಲವೇ? ಹಾಗೆ ಮಾಡುವ ಯೋಚನೆ. ಈ ಪುಡಾರಿಗಳು ಸೇರಿದ ಎಲ್ಲ ಲಿಮಿಟೆಡ್ ಸಂಸ್ಥೆಗಳ ಲಾಭಾಂಶವನ್ನು ಹಾಕಿ,ಲಾಭಾಂಶ ಅಂದರೆ'ಸುಲಿದ ರಕ್ತ'ಹಾಕಿ; ಮಾಡುವ ಸಂಸ್ಥೆ ಇದು. ಒಂದು ದೊಡ್ಡ ಟ್ರಸ್ಟ್. ಮಂಗಳೂರಿನ ಯಾವತ್ತು, ಧಾರ್ಮಿಕ ಸಂಸ್ಥೆಗಳನ್ನೂ, ಸಾರ್ವಜನಿಕ ಸಂಸ್ಥೆಗಳನ್ನು ಅಧೀನ ಪಡಿಸಿಕೊಂಡು, ಅವಕ್ಕೆ ಬೇಕಾದ ಸಹಾಯಧನ ಒದಗಿಸಿ ಮೆರೆಯ ಬೇಕೆಂಬ ಆಸೆ ಅವರದ್ದು."

"ಅಂದರೆ?" ಎಂದರು ರಾಮಕೃಷ್ಣಯ್ಯ.

"ಅಂದರೆ,ಇದು ನಮ್ಮಊರಿನ ಕರ್ಣರೂ,ಶಿಬಿ ಚಕ್ರವರ್ತಿಗಳೂ ಸೇರಿ ನಡೆಯಿಸುವ ಸಂಸ್ಥೆ. ಅವರ ಹತೋಟಿಯನ್ನು ತಪ್ಪಿ ಯಾವ ಸಾರ್ವಜನಿಕ ಸಂಸ್ಥೆಯೂ ಉಳಿಯಬಾರದೆಂಬ ಹಟ ಅವರಿಗೆ. ಈ ಊರಲ್ಲಿ ಛತ್ರ ನಡೆಯಲಿ, ಶಾಲೆಗಳು ನಡೆಯಲಿ, ಅನಾಥಾಲಯಗಳು ನಡೆಯಲಿ, ಸ್ಮಶಾನವೇ ನಡೆಯಲಿ—ಎಲ್ಲವೂ ಅವರ ಕೃಪೆಯಿಂದ ನಡೆಯಬೇಕು. ಅವರ ನೇತೃತ್ವದಲ್ಲಿ ನಡೆಯಬೇಕು-ಎಂಬ ಉದ್ದೇಶ"

"ನಿಜವೇ?"

"ಸುಳ್ಳು ಹೇಳುತ್ತೇನೆಯೇ?ಆ ಬಗ್ಗೆ ಹಂಚಿಕೆ ಸಿದ್ಧವಾಗಿ ಮೂರು ಲಕ್ಷರೂಪಾಯಿಗಳ, ವಚನವೂ ಬಂದಿದೆ"

"ಯಾರು ನಂದ ಮೊದಲಾದವರು ಕೊಟ್ಟರೇ?"

"ಅವರೆಲ್ಲಿಂದ ಕೊಡುತ್ತಾರೆ-ಅಷ್ಟನ್ನು? ಸಲ್ಪವಾದರೂ ಕೊಟ್ಟಾರು. ಅವರೂ ಮುಖ್ಯ ಟ್ರಸ್ಟಿಗಳು ಅವರೇ. ಈಗಾಗಲೇ ಗಂಡ ಸತ್ತ ವಿಧವೆಯರಿಂದ – ಬೇಡಿ ಹೊಗಳಿ, ಹಲವು ದಾನ ಶಾಸನ ಮಾಡಿಸಿಕೊಂಡಿದ್ದಾರೆ. ತಾವೇ ತೆರದೆ ಹೋದರೆ ಏನು? ಪರರಿಂದ ತೆರಿಸಿಕೊಳ್ಳುವ ಕೆಲಸದಲ್ಲಿ ಅವರು ನಿಪುಣರು. ಯಾವ ಜಾತಿಯವರಾರೂ ಆ ಸಂಸ್ಥೆಗೆ ಧನಸಹಾಯ ಮಾಡಬಹುದಂತೆ. ಆದರೆ ಸಂಸ್ಥೆಯ ಆಡಳಿತೆ ಮಾತ್ರ – ಈ ಪಂಚ ಮಹಾಭೂತಗಳ ಕೈಯಲ್ಲಿ."

"ಒಂದು ವಿಷಯಕ್ಕೆ ಅದು ಒಳ್ಳೆಯದೇ ಅಲ್ಲವೇ? ನೂರಾರು ಸಂಸ್ಥೆಗಳು ನಡೆದು, ಹಣವಿಲ್ಲದೆ ಸಾಯುವುದಕ್ಕಿಂತ, ಹೀಗೇನಾದರೂ ಒಂದು ಸಹಾಯಕ ವ್ಯವಸ್ಥೆ ಇದ್ದರೆ" ಎಂದರು ರಾಮಕೃಷ್ಣಯ್ಯ.

"ಇದು ತಿಮಿಂಗಿಲಗಳ ನ್ಯಾಯ. ಸಾವಿರ ಸಣ್ಣ ಮೀನುಗಳು ಜೀವನಕ್ಕಾಗಿ ಹೆಣಗಾಡುವ, ಬದಲು ದೊಡ್ಡದೊಂದು ತಿಮಿಂಗಿಲ ಉಳಿದರೆ ಸಾಕೆನ್ನುತ್ತೀರಿ ನೀವು. ಪರೋಪಕಾರದಲ್ಲಿಯೂ ಬಂಡವಳುಗಾರಿಕೆ ತಲೆ ದೋರಿದಂತೆ ಇದು."

"ಅಂದರೆ ಅವರಿಂದ ಕೇಡಾದೀತೆಂದು ಹೇಳುತ್ತೀರಾ?"

"ನಾಳೆ ಅನುಭವಿಸಿದರೆ ತಿಳಿದೀತು."

"ಮನುಷ್ಯನ ಒಳಗನ್ನು ನೋಡಿದರೆ ಹೊರಗಿನದು ತನ್ನಂತೆಯೇ ಸ್ಪಷ್ಟವಾಗುತ್ತದೆ. ಅವನ ಹೊರಗಿನ ಸೋಗನ್ನು ನಂಬಿ ನಾವು ಪ್ರಯೋಜನವಿಲ್ಲ. ಡಾ। ನಂದರಾಗಲೀ, ಅವರ ಸ್ನೇಹಿತರಾಗಲೀ, ನಿತ್ಯ ಜೀವನದಲ್ಲಿ ಹೇಗಿದ್ದಾರೆ? ಅವರಲ್ಲಿ ಯಾವ ದೊಡ್ಡ ಗುಣವಿದೆ?—ಕಾಣುವುದಿಲ್ಲವೇ? ಆ ಗುಣಗಳು ಒಳಗಿದ್ದರೆ ಹೊರಗೆ ಬಂದಾವು. ಡಂಭಕ್ಕೆ ಇಂಥ ವೇಷ ಕಟ್ಟಬೇಕಾಗಿಯೂ ಇಲ್ಲ." ಎಂದನು ರಾಧಾಕೃಷ್ಣ.

"ಅದೇ ವಿಷಯವನ್ನೇ ನಾನೆನ್ನುವುದು. ರಾಮಕೃಷ್ಣಯ್ಯ, ಮೊದಲು ಅವರ ಮನೆಯ ಕೆಲಸಗಾರರಿಗೆ ಸಮನಾಗಿ ಕಾಫಿ, ಅನ್ನ ಕೊಡುತ್ತಾರೆಯೋ ಕೇಳಿ? ನಮ್ಮ ನಿಮ್ಮಂಥವರಿಗೆ, ಇನ್ನೂ ಶ್ರೀಮಂತರಿಗೇನೆ ಅವರು ಟೀ ಪಾರ್ಟಿ ಕೊಡುವುದು ಆಶ್ಚರ್ಯವಲ್ಲ; ಅದಕ್ಕೆ ಬೇರೆಯೇ ಎಣಿಕೆ ಇರುತ್ತದೆ. ಹತ್ತು ಜನರ ಹಣಕ್ಕೆ ಗಾಳಹಾಕಿ, ಅದರಿಂದ ಇವರ

ಧರ್ಮಬುದ್ಧಿ ಪ್ರಕಟವಾಗಬೇಕಿಲ್ಲ. ಇವರು ತಮ್ಮಲ್ಲಿದ್ದುದನ್ನು ಕೊಟ್ಟರೆ ಸಾಕು. ಇವರ ಕೈಯಲ್ಲಿ ಅನಾಥಾಲಯದಂತಹ ಒಂದು ಸಂಸ್ಥೆ ಸಿಕ್ಕಿದರೆ— ಅಲ್ಲಿದ್ದವರನ್ನು ಓಡಿಸಿ, ತಮ್ಮ ಕುಟುಂಬದವರಿಗೆ ಕೆಲಸ ಕೊಟ್ಟಾರು. ತಮಗೆ ಹೊರೆಯಾಗುವ ನಂಟರ ಮಕ್ಕಳನ್ನು ಅಲ್ಲಿ ತುಂಬಿಸಿಯಾರು. ಈ ಪರೋಪಕಾರದ ಲಕ್ಷಣ ಚೆನ್ನಾಗಿ ನನಗೆ ಗೊತ್ತಿದೆ" ಎಂದನು ಪ್ರಭುದೇವ. ಈ ಪಂಚಮಹಾಭೂತಗಳ ಸ್ಮರಣೆಯಿಂದ ಕೆರಳಿ ಬಹು ಹೊತ್ತು ಮಾತನಾಡಿದನು ಆತ. ಆ ಗಲಭೆಯಲ್ಲಿ ತ್ರೈವಾರ್ಷಿಕೋತ್ಸವದ ಮರವೆಯಾಯಿತು. ಅಲ್ಲಿಂದ ಹೊರಡುವಾಗ ರಾಮಕೃಷ್ಣಯ್ಯನವರನ್ನು ಕಾರಿನಲ್ಲಿ ಕುಳ್ಳಿರಿಸಿಕೊಂಡು, ಶ್ಯಾಮನನ್ನು ಕರೆದು "ನೋಡು ಶ್ಯಾಮ-ಕಾರಿನಲ್ಲಿ ಒಬ್ಬನೇ ಹೋಗುತ್ತಲಿಲ್ಲ. ಇವರಿದ್ದಾರೆ. ಬೇಕಾದರೆ ಕದ್ರೆಯಿಂದ ನಾಲ್ವರನ್ನು ತುಂಬಿಸಿಕೊಂಡು, ಹೂಮಾರ್ಕೆಟಿನ ತನಕ ಬಿಟ್ಟುಬರುತ್ತೇನೆ" ಎಂದು ನಕಲಿ ಮಾಡಿ ಹೊರಟು ಹೋದನು.

ರಾತ್ರೆ ಊಟವಾದ ಬಳಿಕ ಶ್ಯಾಮ, ರಾಧಾಕೃಷ್ಣರು ಉಳಿದ ಅಧ್ಯಾಪಕರನ್ನು ಮನೆಗೆ ಕರೆಯಿಸಿಕೊಂಡು ಉತ್ಸವದ ಪ್ರಸ್ತಾಪವನ್ನು ಮಾಡಿದರು. ಉಪಾಧ್ಯಾಯರು ಅಲ್ಲಿಯೇ ಸಮೀಪವಾಗಿ ವಾಸಮಾಡುತ್ತಿದ್ದುದರಿಂದ ಬೇಕಾದ ಹಾಗೆ ಬಂದುಹೋಗುವ ಅನುಕೂಲತೆ ಇತ್ತು. ಉತ್ಸವದ ಯೋಚನೆಯನ್ನು ಎಲ್ಲರೂ ಒಪ್ಪಿದರು. ಆದರೆ ಅದನ್ನು ಯಾವ ರೀತಿಯಿಂದ ನಡೆಯಿಸಲಿ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದುವು. ಒಬ್ಬ ಉಪಾಧ್ಯಾಯರು ಆ ಸಮಯ 'ಒಂದು ನಾಟಕ ಆಡಬೇಕು' ಎಂದರು. ಶ್ಯಾಮನು ಅದಕ್ಕೆ "ನಾಟಕ ಗೀಟಕ ಬೇಡ. ನಮ್ಮಲ್ಲಿ ಆದ ಒಡವೆಗಳ ಪ್ರದರ್ಶನ, ನಮ್ಮ ಹುಡುಗರು ಸ್ವತಂತ್ರವಾಗಿ ಮಾಡಬಹುದಾದ ವಸ್ತುಗಳ ಪ್ರದರ್ಶನ, ಕೃಷಿ, ಪಶುಪಾಲನೆಗೆ ಸಂಬಂಧಪಟ್ಟ ಪ್ರದರ್ಶನ-ಇಷ್ಟನ್ನು ಮಾಡುವ. ಇನ್ನೂ ಮೂರು ತಿಂಗಳ ಸಮಯವಿದೆ. ನಾವು ಸಮನಾದ ಹಂಚಿಕೆ ಹಾಕಿಕೊಂಡು, ಕೆಲಸ ಮಾಡಿದರೆ ಒಳ್ಳೆಯ ಒಂದು ಪ್ರದರ್ಶನವಾದೀತು. ಅದನ್ನು ನೋಡ ಬಂದವರಿಗೂ ಒಂದು ವಿದ್ಯಾಭ್ಯಾಸವಾಯಿತು. ಊರಿನ ಜನರ ಆದರ ಸಂಸ್ಥೆಯಲ್ಲಿ ಹೆಚ್ಚೀತು" ಎಂದನು. ಅದನ್ನೇ ಎಲ್ಲರೂ ಅನುವೇದಿಸು

ವಂತಾಯಿತು. ತಮ್ಮ ತ್ರೈವಾರ್ಷಿಕೋತ್ಸವಕ್ಕೆ, ತ್ರೈಮಾಸಿಕ ಯೋಜನೆಯೊಂದನ್ನು ಮಾಡಿ, ಮರುದಿನದಿಂದ ದುಡಿಯಬೇಕೆಂಬ ನಿರ್ಧಾರ ಮಾಡಿಕೊಂಡು ಅವರು ಚೆದರಿದರು.

ಶ್ಯಾಮು, ರಾಧಾಕೃಷ್ಣರಿಬ್ಬರು ಮಲಗಿ ನಿದ್ರೆಹೋದರು. ಮಲಗಿದರೂ ಅವರ ಸವಿಗನಸುಗಳು ಅವರನ್ನು ಕಾಡದೆ ಇರಲಿಲ್ಲ. ನಿದ್ರೆಯಲ್ಲಿ ಶ್ಯಾಮು ನಗುತ್ತಲ್ಲಿದ್ದ, ತುಂಬ ಮಾತನಾಡುತ್ತಲಿದ್ದ. ರಾಧಾಕೃಷ್ಣನ ಕನಸಿನ ಸಾಮ್ರಾಜ್ಯದಲ್ಲಿ ನಗು ಸಂತೋಷಗಳು ಮಾಯವಾಗಿ, ಏನೋ ಭೀತಿ ಮೊಳೆಯಿತು. ನಿದ್ರೆಯಲ್ಲಿಯೇ ಗಟ್ಟಿಯಾಗಿ "ಬಿತ್ತು, ಚಪ್ಪರ ಕುಸಿಯಿತು" ಎಂದು ಚೀರಿಹೇಳಿದ. ಸತ್ಯ ಅದರಿಂದ ಎಚ್ಚತ್ತಳು 'ಏನು ಏನು' ಎಂದು ಗಾಬರಿಯಿಂದ ಕೇಳಿದಳು. ರಾಧಾಕೃಷ್ಣ ಮೆಲ್ಲಗೆ ನಿದ್ದೆ ತಿಳಿದು, ಕನಸನ್ನು ನೆನೆದು ಹೇಳತೊಡಗಿದ "ಏನೋ ದರಿದ್ರ ಕನಸು, ಉತ್ಸವದ ವಿಚಾರ ಮಾಡುತ್ತಿದ್ದೆ; ಅದರದ್ದೇ ಕಾಟ. ಉತ್ಸವ ನಡೆಯುತ್ತಾ ಇದೆ, ಊರಿಂದೂರೇ ಅಲ್ಲಿಗೆ ಬಂದಿದೆ. ಯಾರೋ ಮಹಾನುಭಾವರು ಮಾತನಾಡುವ ವೇಳೆಗೆ ಮೇಲಿನ ಚಪ್ಪರ ಕುಸಿದು ಬಿದ್ದ ಹಾಗೆ ಕನಸಾಯಿತು" ಎಂದನು. ಆಕೆ "ನಿಮಗೆ ಸುಖವಾಗಿ ನಿದ್ರೆ ಮಾಡುವುದಕ್ಕೂ ಅದೃಷ್ಟವಿಲ್ಲ" ಎಂದು ಹೇಳಿ ನಕ್ಕು, ಮಲಗಿಕೊಂಡಳು. ರಾಧಾಕೃಷ್ಣನು ತಿರುಗಿ ಮಲಗಿಕೊಂಡರೂ ಅವೇ ಕನಸುಗಳು ಅವನನ್ನು ಕಾಡಿದವು. ಬೆಳಗಾಗಿ ಅಲೆದಾಡುತ್ತಿರುವಾಗಲೂ ತಲೆಯಲ್ಲಿ ಸ್ವಪ್ನಗಳ ವಿಚಾರವೇ. ಬದುಕಿನಲ್ಲಿ ದೊರೆಯದ ಸುಖಗಳನ್ನು ಕನಸುಗಳು ದೊರಕಿಸಿ ಕೊಡುತ್ತವೆ ಎಂದು ಅವನೆಲ್ಲೋ ಕೇಳಿದ್ದಾನೆ. ಈಗ ಅದರ ಪ್ರತಿ ವಿರೋಧವಾಯಿತು. ಬದುಕಿನಲ್ಲಿ ತನಗೆ ದೊರೆತ ಸುಖವನ್ನು ಸ್ವಪ್ನ ಕೆಡಿಸತೊಡಗಿದೆಯಲ್ಲ ಎಂದು ತೋರಿತು.

ವಿರಾಮವಿರುವವರ ಪಾಲಿಗೆ ಇಂಥ ಸ್ವಪ್ನಗಳು ಸಮಸ್ಯೆಯಾಗಬಹುದು. ಆದರೆ ಹಲವಾರು ಕೆಲಸಗಳಲ್ಲಿ ಪ್ರವೃತ್ತನಾದ ರಾಧಾಕೃಷ್ಣನನ್ನು ಅವು ಏನುಮಾಡಬಹುದು? ಸ್ವಪ್ನದ ಸ್ಥಾನದಲ್ಲಿ ದಿನಚರಿಯ ಯೋಚನೆಗಳು ಬಂದುವು. ಮಧ್ಯಾಹ್ನ ಅವನು ತಿರುಗಿ ಸಹಪಾಠಿಗಳನ್ನು ಕೂಡಿಸಿಕೊಂಡು ಉತ್ಸವದ ವಿವರಗಳನ್ನು ಚರ್ಚಿಸಿದನು. ಯಾರ ಕಾರ್ಯಭಾಗಗಳು ಏನೇನು ಎಂಬುದನ್ನು ಹಂಚಿಕೊಟ್ಟನು.

ತಮಗೆ ಅನುಕೂಲವಾದ ಶಿಷ್ಯರನ್ನು ಕೂಡಿಕೊಂಡು ಪ್ರದರ್ಶನ ತಯಾರಿಯ ಕೆಲಸ ಆಗಿನಿಂದಲೇ ನಡೆಯ ತೊಡಗಿತು.

ಆರೆಂಟು ದಿವಸಗಳ ತನಕ ಪ್ರಭುದೇವ ಆ ಕಡೆಗೆ ಸುಳಿಯಲಿಲ್ಲ. ಉತ್ಸವದ ವಿಚಾರ ಕೈಕೊಂಡ ಬಳಿಕ, ರಾಧಾಕೃಷ್ಣ ಪೇಟೆಗೆ ಕಾಲಿರಿಸಲೂ ಇಲ್ಲ. ತಮ್ಮ ವಿದ್ಯಾರ್ಥಿಗಳೊಡನೆ ಆ ವಿಷಯವಾಗಿ ಚರ್ಚಿಸಿದನು. ಅವರು ಉತ್ಸಾಹಿತರಾದರು.

ಪ್ರಭುದೇವ ತಿರುಗಿ ಅಲ್ಲಿಗೆ ಬಂದುದು ಹದಿನೈದು ದಿವಸಗಳಾದ ಮೇಲೆ. ಆಗ ಶಾಲೆಯು ಜೇನು ಗೂಡಿನಂತೆ, ಬೆಳಗಿನಿಂದ ಸಂಜೆಯ ತನಕ ದುಡಿಯುತಿತ್ತು. ಪ್ರತಿಯೊಂದು ಪಂಗಡದವರೂ ಪ್ರದರ್ಶನದ ವಸ್ತುಗಳನ್ನು ತಯಾರಿಸುತ್ತ ಕುಳಿತಿದ್ದರು. ಸುಂದರವಾದ ತರಕಾರಿ ಪ್ರದರ್ಶನಕ್ಕಾಗಿ, ಕೃಷಿವಿಭಾಗದವರು ದಣಿಯುತಿದ್ದಾರೆ. ಮರಗೆಲಸ, ಕಬ್ಬಿಣದ ಕೆಲಸ ಮೊದಲಾದ ಪ್ರತಿಯೊಂದು ಶಾಖೆಯಲ್ಲಿಯೂ — ತಾವು ಉಪಯೋಗಿಸುವ ವಸ್ತುಗಳು, ಅವುಗಳಿಂದ ತಯಾರಿಸ ಬಹುದಾದ ಪಕ್ಕಾ ಮಾಲುಗಳು, ನಿತ್ಯೋಪಯೋಗಿ ಸಲಕರಣೆಗಳು, ಸಣ್ಣಪುಟ್ಟ ಯಂತ್ರ ಸಾಮಾಗ್ರಿಗಳು ಇವುಗಳ ನಿರ್ಮಾಣದಲ್ಲಿ ತಲ್ಲೀನರಾಗಿದ್ದರು. ಆ ಮೂರು ವರ್ಷದ ಶಿಕ್ಷಣದಲ್ಲಿ ವಿದ್ಯಾರ್ಥಿಗಳು ಏನೆಲ್ಲವನ್ನು ಮಾಡಬಹುದೋ ಅಷ್ಟನ್ನೆಲ್ಲ ಮಾಡಿತೋರಿಸ ಬೇಕೆಂಬ ಹಟ ಅವರಿಗೆ ಉಂಟಾಗಿತ್ತು.

ಪ್ರಭುದೇವ ಬಂದಾಗ ವಿದ್ಯಾರ್ಥಿಗಳೂ ಉಪಾಧ್ಯಾಯರೂ, ಬಿರುಸಿನಿಂದ ಕೆಲಸಮಾಡುತ್ತಿದ್ದದನ್ನು ಕಂಡು ತುಂಬ ಸಂತೋಷಿಸುತ್ತಿದ್ದನು. ಪ್ರದರ್ಶನದ ವಿಚಾರದಲ್ಲಿ ಅವನಿಗೆ ಹೆಚ್ಚಿನ ಸಂತೋಷವಾಯಿತು. ಕ್ರಾಂತಿ ತಾರೆಯಲ್ಲಿ ಆ ವಿಷಯವನ್ನು ಕುರಿತು ಬರೆಯುವೆನೆಂದುಕೊಂಡ. ರಾಧಾಕೃಷ್ಣನೊಡನೆ "ಇದರ ಏರ್ಪಾಡನ್ನೆಲ್ಲ ನೀವೇ ಮಾಡುತ್ತಿದ್ದೀರಲ್ಲಾ! ಹೆಚ್ಚಿನ ಜವಾಬ್ದಾರಿ ನನಗಿಲ್ಲ. ಖರ್ಚಿಗೆ ಬೇಕಾದರೆ ತಿಳಿಸಿ, ಹಣ ಕೊಡಿಸುವ ಕೆಲಸ ನನ್ನದು. ಅಧ್ಯಕ್ಷರ ವಿಚಾರ ಇನ್ನೂ ನಾನು ಯೋಚನೆ ಮಾಡಿಲ್ಲ. ಯೋಚಿಸಿ ಯೋಗ್ಯರನ್ನು ಬರಮಾಡಿಕೊಂಡರೆ ಆಯಿತು. ಅವರನ್ನು ಕರೆಯಿಸಿ ಅವರ ಕೈಯಿಂದಲೇ ಮುಂದಿನ ವಿಸ್ತರಣಕ್ಕೆ ಅಸ್ತಿವಾರ ಹಾಕಿಸಬೇಕು. ಮೋಟರು ಯಂತ್ರ ವಿಜ್ಞಾನ

ಶಾಖೆ, ಮುಂದುವರಿದ ಕೃಷಿ ಶಾಖೆ-ಇವೆರಡನ್ನು ಬರುವ ವರ್ಷದಿಂದ ತೊಡಗಲೇ ಬೇಕು" ಎಂದನು.

"ಆ ಯೋಚನೆಗೆ ಇನ್ನೂ ಎರಡು ವರ್ಷಗಳು ಹೋಗಲಿ. ನನಗೂ ಅದು ಬಹಳ ಮನಸ್ಸಿರುವ ಕೆಲಸವೇ. ಆದರೆ ಮೊದಲು ನಮ್ಮ ಶಾಲೆಯನ್ನು ಬಿಟ್ಟ ಹುಡುಗರ ಪಾಡು ಏನಾಗುತ್ತದೆಂದು ನೋಡಿಕೊಳ್ಳುವ. ಅವರಿಗೆ ಸಮನಾದ ಉದ್ಯೋಗಗಳು ದೊರೆಯುತ್ತವೆಯೇ, ಅವರಿಂದ ಸ್ವತಂತ್ರ ಜೀವನ ಆಗುತ್ತದೆಯೇ ಎಂಬುದನ್ನು ಕಾಯ್ದು ನೋಡಬೇಕಾಗಿದೆ. ಅದಕ್ಕೂ ಮೊದಲು ಸಂಸ್ಥೆಯನ್ನು ವಿಶಾಲಿಸಿ ಉಪಯೋಗವಿಲ್ಲ" ಎಂದನು ರಾಧಾಕೃಷ್ಣ.

"ಅದೆಲ್ಲ ನೀವು ಮಾಡುವ ಪ್ರದರ್ಶನದಿಂದಲೇ ಜನ ತಿಳಿದುಕೊಂಡಾರು" ಎಂದನು ಪ್ರಭುದೇವ. ಹೇಗಿದ್ದರೂ ರಾಧಾಕೃಷ್ಣನಿಗೆ ಸಮ್ಮತಿ ಕೊಡುವ ಮನಸ್ಸಿರಲಿಲ್ಲ. ಪ್ರಭುದೇವನ ಉತ್ಸಾಹವನ್ನು ತಡೆಯುವುದಕ್ಕೂ ಧೈರ್ಯವಿರಲಿಲ್ಲ. ಅದಕ್ಕಾಗಿ ಆತ "ಪ್ರಭು, ಸ್ವಲ್ಪ ನಿಧಾನಿಸು; ನಾನು ಹೊಸಬ. ನನಗೆ ಇದಕ್ಕೆ ಧೈರ್ಯ ಸಾಲದು. ಈ ಬಾರಿಯ ರಜೆಯಲ್ಲಿ ನಾಲ್ಕು ಊರುಗಳನ್ನು ಸುತ್ತಿಕೊಂಡು ಇಂಥ ಕೆಲವು ಸಂಸ್ಥೆಗಳನ್ನು ನೋಡಿಕೊಂಡು ಬರುತ್ತೇನೆ. ಯಾವ ಯಾವ ದಾರಿಯಲ್ಲಿ ಇತರರು ಹೋಗುತ್ತಾರೆ ಎಂಬುದನ್ನು ತಿಳಿದರೆ ಧೈರ್ಯ. ಈ ತನಕ ಕುರುಡರಂತೆ ನಾವು ಹೊಡದ್ದೇ ದಾರಿಯಾಗಿದೆ. ಇಷ್ಟೆಲ್ಲ ಹಣ ವ್ಯಯಿಸುವಾಗ, ನಮಗೂ ಒಂದು ಧೈರ್ಯ ಬರಬೇಕು. ನಮ್ಮ ಹಣವೂ ವ್ಯರ್ಥವಾಗಬಾರದು, ಶ್ರಮವೂ ವ್ಯರ್ಥವಾಗಬಾರದು" ಎಂದನು.

"ಆಗಲಿ, ಅದಕ್ಕೆ ನನ್ನ ಒಪ್ಪಿಗೆ. ನೀವು ಬೆನಾರಿಸ್, ಆಗ್ರ ಮುಂತಾದ ಊರುಗಳನ್ನು ತಿರುಗಿ ಬನ್ನಿ, ನಿಮ್ಮ ಅನುಭವಕ್ಕೂ ಆಯಿತು; ಆರೋಗ್ಯಕ್ಕೂ ಆಯಿತು" ಎಂದನು ಪ್ರಭುದೇವ.

* * * * *

ಇನ್ನೊಮ್ಮೆ ಪ್ರಭುದೇವ ಶಾಲೆಗೆ ಮುಖ ಹಾಕಿದ್ದು, ಇನ್ನೂ ಒಂದು ತಿಂಗಳ ನಂತರ. ಆತನ ಕಣ್ಣೆಲ್ಲ ಉತ್ತರ ಹಿಂದುಸ್ಥಾನದ ಮೇಲೆ-ಅಲ್ಲಿಂದಲೇ ಒಬ್ಬ ಪ್ರಸಿದ್ಧ ಅಧ್ಯಕ್ಷರನ್ನು ಕರೆಯಿಸುವ ಯೋಚನೆ ಅವನದ್ದು. ಅನೇಕ ಉದ್ಯೋಗ ಸಂಸ್ಥೆಗಳ ಪಿತರಾದ ಸರದಾರ್ ಗುಲಾಬ್

ಚಂದ್, ಧುನೀ ಚಂದ್ ಇವರ ಹೆಸರನ್ನು ಕೇಳಿ, ಪತ್ರವನ್ನು ಬರೆದ- ತಂತಿಗಳ ಮೇಲೆ ತಂತಿಗಳು ಹೋಗಿ ಅವರು ಬರಲು ಒಪ್ಪಿಕೊಂಡರು. ಅವರಿಗೆ ಈ ದೇಶ ಹೊಸತು, ಜನಹೊಸತು. ಅವರು ನಡೆಯಿಸುತ್ತಿರುವ ಶಾಲೆಗಳು ಬೇರೆ. ಇಂಥ ಕೆಲಸಗಳಲ್ಲಿ ಅವರಿಗೆ ತುಂಬ ಆಸಕ್ತಿ. ಅದಕ್ಕಾಗಿ ಒಪ್ಪಿಕೊಂಡರೋ ಏನೋ. ಹಾಗೆ ಅವರು ಒಪ್ಪಿಕೊಂಡ ಮರುದಿನದಿಂದ ಕ್ರಾಂತಿ ತಾರೆಯಲ್ಲಿ ಗುಲಾಬ್ ಚಂದರ ಕುರಿತಾದ ಲೇಖನಗಳು ಬರತೊಡಗಿದುವು. ಉತ್ಸವ ಪ್ರದರ್ಶನಗಳನ್ನು ಕುರಿತು ಲೇಖನಗಳು ಪ್ರಕಟವಾದುವು. ಈ ಲೇಖನಗಳನ್ನೆಲ್ಲ ನೋಡಿ ರಾಧಾಕೃಷ್ಣ ಪ್ರಭುದೇವನೊಡನೆ "ಕಡೆಗೂ ನೀವು ಅಧ್ಯಕ್ಷತೆಗೆ ಹುಡುಕಿದುದು ಬಂಡುವಳುಗಾರರೊಬ್ಬರನ್ನು" ಎಂದು ಪರಿಹಾಸ್ಯಮಾಡಿದ. ಅದಕ್ಕೆ ಆತ "ಅಂಥವರ ಕೈಯಿಂದೇನಾದರೂ ಹಣ ಸೆಳೆಯಲು ಬರುತ್ತದೆ. ಅಲ್ಲದೆ ಇವರು ಹಲವು ಔದ್ಯೋಗಿಕ ಶಾಲೆಗಳನ್ನು ನಡೆಯಿಸುತ್ತಿದ್ದಾರೆ. ಬರಿಗೈಯ ಭೂಪತಿಯನ್ನು ಪಟ್ಟಕ್ಕೆ ಏರಿಸಿದರೆ, ಕಾಸಿನ ಲಾಭ ಯಾರಿಗೂ ಇಲ್ಲ. ಅಗ್ಗದ ಗೌರವಕ್ಕೆ ಕೊಕ್ಕರೆ ಕತ್ತನ್ನು ನೀಡುವ ಹಲವು ಮಹಾನುಭಾವರು ನಮ್ಮಲ್ಲಿಯೇ ಇದ್ದಾರೆ. ಹೊರಗಿನವರು ಬಂದು, ಸಾವಿರಗಟ್ಟಲೆಯಿಂದ ಹಣ ದಾನಮಾಡುವಾಗ, ಇವರಾದರೂ, ದಾನದ ರೀತಿ ಹೇಗೆಂದು ತಿಳಿಯಲಿ" ಎಂದನು. ಸಂಸ್ಥೆಗೆ ಹಣ ಸಂಪಾದಿಸುವ ವಿಚಾರದಲ್ಲಿ ಪ್ರಭುದೇವನಿಗಿಂತ ತನಗೇನು ಹೆಚ್ಚುಗೊತ್ತಿದೆ—ಎಂದು ರಾಧಾಕೃಷ್ಣ ಮೌನ ತಾಳಿದನು.

*            *            *            *            *

ಶಾಲೆಯ ತ್ರೈವಾರ್ಷಿಕೋತ್ಸವದ ದಿನವೇ ಬಂದೊದಗಿದೆ. ಉದ್ಯೋಗಮಂದಿರದ ಯಾವತ್ತು ಆವರಣವನ್ನು ಸಿಂಗರಿಸಿದ್ದಾರೆ. ಪ್ರದರ್ಶನಕ್ಕಾಗಿ ವಿಶಾಲವಾದ ಒಂದು ಚಪ್ಪರವನ್ನು ಹಾಕಿಸಿದ್ದಾರೆ. ಪುರಜನರಿಗೆಲ್ಲ ಆಮಂತ್ರಣ ಹೋಗಿದೆ- ಗುಲಾಬ್ ಚಂದ್ ಧುನೀ ಚಂದ್ ಯಾರೆಂದು ಊರವರಿಗೆ ತಿಳಿಯದೆ ಹೋದರೂ, ಪಂಜಾಬಿನ ಕುಬೇರ ಪುತ್ರರೊಬ್ಬರು ಬರುತ್ತಾರೆಂದು ನೋಡಬಂದವರುಂಟು. ಇತರ ಶಾಲೆಗಳ ವಾರ್ಷಿಕೋತ್ಸವಗಳಂತೆ ಎಂದು ತಿಳಿದು, ಉದಾಸೀನರಾಗಿ ಮನೆಯಲ್ಲಿ ಕುಳಿತವರೂ ಉಂಟು. ಪ್ರಭುದೇವ ಮಾತ್ರ ತನ್ನ ಉತ್ಸಾಹ

ವನ್ನು ಸಡಿಲಿಸಲಿಲ್ಲ. ಆತ ಅವರಿಗಾಗಿ ಮೆರವಣಿಗೆ ಹೊರಡಿಸಿದನು. ತನ್ನ ಪಕ್ಷದ ಶ್ರಮಗಾರರು ಮೆರವಣಿಗೆ ತುಂಬುವಂತೆಮಾಡಿ, ಅವರ ಸಂಘಕ್ಕೆ ಐನೂರು ರೂಪಾಯಿಗಳ ದಾನದೊರಕಿಸಿ ಕೊಡುವೆನೆಂದನು. ಉತ್ಸವಕ್ಕೆ ಮೊದಲೇ ಶ್ರಮಗಾರರ ಸಂಸ್ಥೆಗಳನ್ನೆಲ್ಲ ಅವರಿಂದ ಭೇಟಿ ಮಾಡಿಸಿ ಅವರ ಬಗ್ಗೆ ಆ ಪ್ರತಿಯೊಂದು ಸಂಸ್ಥೆಗೂ, 'ಒಂದೊಂದು ಚೆಕ್ ದಯಪಾಲಿಸುತ್ತಾರೆ'ಂದು ಆಶೆ ಹುಟ್ಟಿಸಿದನು. ಮೊದಲ ದಿನದ ಈ ಎಲ್ಲ ಪ್ರಸಾರದಿಂದಾಗಿ ಉದ್ಯೋಗ ಮಂದಿರವು ಒಂದು ಯಾತ್ರಾ ಸ್ಥಳವಾಯಿತು. ಅಂತಹದೊಂದು ಸಂಸ್ಥೆಯು ತಮ್ಮ ಊರಿನಲ್ಲಿ ಇದೆ ಎಂದು ಆ ದಿನವೇ ಕಣ್ಣು ತೆರೆದವರೂ ಉಂಟು. "ನಮ್ಮ ಊರಿನಲ್ಲಿ ಇಷ್ಟೆಲ್ಲ ಕೆಲಸ ಮಾಡುವುದು ಸಾಧ್ಯವೋ" ಎಂದು ನೋಡಿ, ಬೆರಗಾದ ವರೂ ಹಲವು ಮಂದಿ. ಮೂರು ದಿನಕಾಲ ನಡೆದ ಪ್ರದರ್ಶನವು ದೊಡ್ಡ ಸಂತೆಯಂತೆ ಜನರಿಂದ ಕಿಕ್ಕಿರಿಯಿತು. ಗುಲಾಬ್ ಚಂದರು ಈ ಎಲ್ಲ ಕಾರ್ಯ ಭಾಗಗಳನ್ನು ನೋಡಿ ಸಂತೋಷಪಟ್ಟರು.

ಮೊದಲ ದಿನ ಮಧ್ಯಾಹ್ನ ಉತ್ಸವವಿತ್ತು. ಶಾಲಾ ಬಾಲಕರು ಸಾಲಾಗಿ ನಿಂತು ಅಧ್ಯಕ್ಷರನ್ನು ಬರಮಾಡಿ ಕೊಂಡರು. ತಮ್ಮ ಸಾಹಸಕ್ಕಾಗಿ ಧುನೀ ಚಂದರಿಂದ ಬೆನ್ನು ಚಪ್ಪರಿಸಿಕೊಂಡರು. ಸಭೆಯಲ್ಲಿ ಪ್ರಭುದೇವನು, ಧುನೀ ಚಂದರನ್ನು ಅವರ ದೊಡ್ಡಸ್ತಿಕೆ ಔದಾರ್ಯಗಳಿಗಾಗಿ ಕೊಂಡಾಡಿದನು. "ಎಲ್ಲ ಶ್ರೀಮಂತರಂತೆ ಇವರಲ್ಲ. ತಮ್ಮ ಶ್ರಮಗಾರರನ್ನು ಬಹಳ ಚೆನ್ನಾಗಿ ನೋಡುತ್ತಿದ್ದಾರೆ. ಅಂಥವರು ತೀರ ವಿರಳ" ಎಂದು ಕೊಂಡಾಡಿದನು. ಅಧ್ಯಕ್ಷರು ಪ್ರತಿಯಾಗಿ ಪ್ರಭುದೇವನ ಸಾಹಸವನ್ನು ಕೊಂಡಾಡಿದರು. ಶಾಲೆಯ ಕೆಲಸಗಳನ್ನು ಸ್ತುತಿಸಿದರು. ಹೀಗೆ ಉಭಯ ಕುಶಲೋಪರಿಗಳಾಗಿ,ಮೊದಲದಿನದ ಉತ್ಸವ ಮುಗಿಯಿತು. ಪರವೂರಿನ ಮಾನ್ಯ ವ್ಯಕ್ತಿಗಳೊಬ್ಬರು ಬಂದು ತಮ್ಮ ಕೆಲಸವನ್ನು ಕೊಂಡಾಡಿದರೆಂದು ಉಪಾಧ್ಯಾಯರು ಸಂತುಷ್ಟರಾದರು.

ಆ ದಿನ ರಾತ್ರಿ ಪ್ರಭುದೇವ ಧುನೀ ಚಂದರ ಜತೆಯಲ್ಲೇ ವಾಸವಾಗಿದ್ದ. ಅವರಿಗೆ ನಿದ್ರಿಸುವುದಕ್ಕೂ ಬಿಡದೆ ಉಪನ್ಯಾಸ ಮಾಡಿದ. ತಮ್ಮ ಕಾರ್ಯ ವಿಸ್ತರಣವನ್ನು ಕುರಿತು ಹೇಳಿದ. ತಮ್ಮ ಯೋಜನೆ ಪೂರ್ಣವಾಗುವುದಕ್ಕೆ ಐದು ಲಕ್ಷ ರೂಪಾಯಿಗಳಾದರೂ ಬೇಕೆಂದು

ವಿವರಿಸಿದನು. ಅವರು ಅವನ ಮಾತುಗಳನ್ನು ಕೇಳಿದರು.

ಅದಕ್ಕೆ ಅವರು ಪ್ರತಿಯಾಗಿ "ಒಂದೊಂದು ದೊಡ್ಡ ಪಟ್ಟಣದಲ್ಲಿಯೂ ಇಂಥ ಒಂದೊಂದು ಸಂಸ್ಥೆ ಇರಬೇಕು. ಸರಕಾರದಿಂದ ಅಂಥ ಕೆಲಸಗಳಾಗಬೇಕೆಂದು ನಾವು ಕಾದೇ ಉಪಯೋಗವಿಲ್ಲ" ಎಂದರು.

"ಇದು ಮಂಗಳೂರಿನವರು ನಡೆಯಿಸುತ್ತಿರುವ ಸಂಸ್ಥೆಯೆಂದು ತಾವು ತಿಳಿದಿರಾ? ಇಲ್ಲಿಯವರಿಗೆ ಅಂಥ ಉತ್ಸಾಹವೆಲ್ಲಿ? ಹಣವೆಲ್ಲಿ? ಇದು ನಡೆಯುತ್ತಿರುವುದು ತಮ್ಮಂಥ ಮಹಾನುಭಾವರುಗಳ ಕೃಪೆಯಿಂದ" ಎಂದು ಪ್ರಭುದೇವ ನುಡಿದನು.

ಈ ಬಗೆಯ ಉಪಚಾರಗಳಿಂದ ಅವರನ್ನು ತುಂಬ ಉಪಚರಿಸಿ ಮರುದಿನ ರೈಲಿನಲ್ಲಿ ಅವರನ್ನು ಫಸ್ಟ್‌ಕ್ಲಾಸಿನಲ್ಲಿ ಕುಳ್ಳಿರಿಸಿ ಬೀಳ್ಕೊಡುವ ಗಳಿಗೆಗೆ ಅವರು ಇವನ ಕೈಯಲ್ಲಿ ಒಂದು ಲಕೋಟೆಯನ್ನಿಟ್ಟರು. ಹಾರ ಸಮರ್ಪಣೆಯ ಕಾಲಕ್ಕೆ ರಾಧಾಕೃಷ್ಣನೂ ಬಂದಿದ್ದನು. ಬೀಳ್ಕೊಡುವಾಗ ರಾಧಾಕೃಷ್ಣನಿಗೂ ಒಂದು ಹಸ್ತಲಾಘವ ದೊರಕಿತು. ಬಂಡಿ ಹೊರಟೊಡನೆಯೇ ಪ್ರಭುದೇವ ಲಕೋಟೆಯನ್ನು ಒಡೆದು ನೋಡಿದನು. ಅದರಲ್ಲಿದ್ದ ಚೆಕ್ಕಿನಲ್ಲಿ ಬರಿಯ ಐನೂರರ ಅಂಕೆ ಮಾತ್ರ ಇತ್ತು. ಪ್ರಭುದೇವನ ಮುಖ ಸಪ್ಪಗಾಯಿತು. ಆದರೆ ಅದನ್ನು ಗೆಳೆಯರೊಡನೆ ತೋರಿಸಿಕೊಳ್ಳಲಿಲ್ಲ.

ಆದರೆ ಆ ವಾರದ ಕ್ರಾಂತಿತಾರೆಯಲ್ಲಿ ಧುನೀಚಂದರು ಐದು ಸಾವಿರ ರೂಪಾಯಿಗಳನ್ನು ದಾನವಾಗಿಕೊಟ್ಟರೆಂದು, ಮುಂದೆ ವರ್ಷಾಶನ ಕೊಡುವ ಭರವಸೆ ಇದೆಯೆಂದೂ ಬರೆದನು. ಪ್ರಭುದೇವನ ಬಳಿಯೇ ನಿಂತಿದ್ದ ಶ್ಯಾಮಣ್ಣನ ಕಣ್ಣಿಗೆ ಆ ಅಂಕೆ ಏನೋ ಗೋಚರಿಸಿತ್ತು. ಆತ ಮನಗೆ ಬಂದವನೇ, "ಅಣ್ಣಾ, ಪ್ರಭುವು ಅವರು ಕೊಟ್ಟದ್ದು ಐದು ಸಾವಿರಚಕ್ ಎಂದು ಬರೆದಿದ್ದನಲ್ಲ. ತೆಗೆಯುವಾಗ ನಾನು ಅಲ್ಲಿದ್ದೆ. ಅದರಲ್ಲಿದ್ದುದು ಬರಿಯ ಐನೂರು" ಎಂದನು.

'ಹಾಗೆ ಪ್ರಭು ಏಕೆ ಸುಳ್ಳು ಹೇಳಬೇಕು? ನಾಲ್ಕುವರೆ ಸಾವಿರ ಪ್ರಭು ಕೈಯಿಂದ ಹಾಕುತ್ತಾನೆಯೇ' ಎಂದನು ರಾಧಾಕೃಷ್ಣ. ಅದರಿಂದ ಶ್ಯಾಮನಿಗೆ ಸಮಾಧಾನವಾಗಲೊಲ್ಲದು. ನನ್ನ ಕಣ್ಣು ನನಗೆ ಸುಳ್ಳು ಹೇಳುತ್ತದೆಯೇ, ಎಂದು ಆತ ತನ್ನನ್ನು ತಾನೇ ಪ್ರಶ್ನಿಸುವಂತಾಯಿತು.

*  *  *  *  *

ಉತ್ಸವದ ಶ್ರಮ ಕಳೆಯಿತು. ಮುಂದಿರುವುದು ರಜಾ ದಿನ. ವಿದ್ಯಾರ್ಥಿಗಳು ತಮ್ಮ ತಮ್ಮ ಊರನ್ನು ಸೇರಿದರು. ಪರವೂರಿನಿಂದ ಬಂದ ಉಪಾಧ್ಯಾಯರು ಸ್ವಂತ ಊರುಗಳಿಗೆ ಹೋದರು. ತೀರ ಬಡವರಾದ ಕೆಲವೊಂದು ಬಾಲಕರು, ಅಲ್ಲಿದ್ದರೆ ಹೊಟ್ಟೆ ತುಂಬ ಅನ್ನವಾದರೂ ದೊರಕೀತೆಂಬ ಆಸೆಯಿಂದು ರಾಧಾಕೃಷ್ಣನ ಅನುಮತಿಯನ್ನು ಪಡೆದು ವಸತಿ ಗೃಹದಲ್ಲಿ ಉಳಿದುಕೊಂಡರು. ರಾಧಾಕೃಷ್ಣನಿಗೂ ಬಿಡುವಿದೆ. ಉದ್ಯೋಗ ಕಡಿಮೆಯಾದರೆ ಅವನಿಗೆ ಏನು ಮಾಡುವುದೆಂದು ತೋರುವುದಿಲ್ಲ. ಆತ ಹೆಂಡತಿಯೊಡನೆ "ಸತ್ಯ, ನೀನು ಊರಿಗೆ ಹೋಗಿ ಬಾ. ಈಗ ಹೋಗಿ ಬಂದು ಮೂರು ವರ್ಷಗಳಾಗಲಿಲ್ಲವೇ? ಅವರೂ ಬರೆಯುತ್ತಲಿದ್ದಾರೆ. ಮನೆಯನ್ನು ಶ್ಯಾಮಣ್ಣ ನೋಡಿಕೊಂಡಿರುತ್ತಾನೆ" ಎಂದನು.

"ನೀವು"

"ನಾನು ಅಂದಿಲ್ಲವೇ ನಿನಗೆ? ಹೇಳಲಿಲ್ಲ ಎಂದು ಕಾಣುತ್ತದೆ. ನನಗೂ ಕುಳಿತಲ್ಲೇ ಕುಳಿತು ಬೇಸರ ಬಂದು ಹೋಗಿದೆ. ಶಾಲೆಯನ್ನು ವಿಸ್ತರಿಸಬೇಕೆಂಬ ಆಸೆ ಪ್ರಭುವಿಗೆ. ಒಮ್ಮೆ ನಾಲ್ಕಾರು ಊರು ಸುತ್ತಿ ಬರುತ್ತೇನೆ. ಬೇರೆ ಬೇರ ಔದ್ಯೋಗಿಕ ಸಂಸ್ಥೆಗಳನ್ನು ಕಂಡು ಬಂದರೆ ಮುಂದಿನ ದಾರಿ ತಿಳಿದೀತು. ಅಲ್ಲದೆ ಒಮ್ಮೆ ನಾಗೇನಹಳ್ಳಿಗೂ ಹೋಗಿ ಬರಬೇಕು. ಅವರೆಲ್ಲ ಹೇಗಿದ್ದಾರೆಯೋ?"

"ಅಹುದು. ನನಗೂ ಗಂಗೆ ಶಾರದೆಯರ ನೆನಪು ಆಗಾಗ ಆಗುತ್ತಿದೆ. ಅವಕ್ಕೆ ಮದುವೆಯ ಪ್ರಾಯ. ಇಷ್ಟರಲ್ಲೇ ಮದುವೆ ಆಗಿದ್ದರೂ ಆಗಿರಬಹುದು. ಆದರೆ ಕಾಗದವೇ ಬರಲಿಲ್ಲ ಅವರಿಂದ" ಎಂದಳು. "ಅದೂ ಅಲ್ಲದೆ ಚಂದಪ್ಪ ಇನ್ನೂ ಇಲ್ಲಿಯೇ ಇದ್ದಾನಲ್ಲ. ಇಲ್ಲೀಗೇ ಮೂರು ವರ್ಷಗಳ ಶಿಕ್ಷಣ ಪಡೆದಿದ್ದಾನೆ. ಆದರೆ ಅವನ ತಂದೆಯಿಂದ ಈ ತನಕ ಯಾವ ಕಾಗದವೂ ಬಂದಿಲ್ಲ. ಇನ್ನು ಹುಡುಗ ಹೇಗಾದರೂ ದಿನ ಕಳೆದಾನು. ಅವನನ್ನು ಊರಿಗೆ ಮುಟ್ಟಿಸುವ ಎಂಬ ಯೋಚನೆಯೂ ಬಂದಿತು" ಎಂದ. ಆದರೆ ಚಂದಪ್ಪನನ್ನು ಕೇಳಿದರೆ "ನನಗೆ ಯಾರೂ ಇಲ್ಲ, ಅಪ್ಪನಿದ್ದರೆ ಇಷ್ಟು ದಿನ ಕಾಗದವನ್ನಾದರೂ

ಬರೆಯುತ್ತಿರಲಿಲ್ಲವೇ? ಅಜ್ಜಿ ಎಂದೇ ಸತ್ತುಹೋದಳು. ಇವರು ಇನ್ನೊಂದು ಮದುವೆಯಾಗಿ ಎಲ್ಲಾದರೂ ಸುಖದಿಂದ ಇರಬಹುದು. ನನ್ನ ಯೋಚನೆ ಅವರಿಗೆ ಯಾಕೆ ಬರಬೇಕು?" ಎನ್ನುತ್ತಾನೆ. ರಾಧಾ ಕೃಷ್ಣ ಅದಕ್ಕೆ "ಹಾಗೆಲ್ಲ ಯೋಚಿಸಬಾರದು. ನೀನು ಊರಿಗೊಮ್ಮೆ ಹೋಗಿ ಬಾ. ಈಚಣ್ಣ ಭಟ್ಟರಿಗೆ ಕಾಗದ ಕೊಡುತ್ತೇನೆ. ಅಲ್ಲಿ ನಿನಗೆ ಸಮನಾಗಿ ಅನುಕೂಲವಾಗದಿದ್ದರೆ ಇಲ್ಲಿಗೇನೆ ಬಾ" ಎಂದನು.

*   *   *   *   *

ರಾಧಾಕೃಷ್ಣನ ಪ್ರವಾಸತೊಡಗಿತು. ಅರ್ಧದಾರಿಯಿಂದ ಚಂದ್ರನನ್ನು ಶಿರ್ಶಿಯ ಮಾರ್ಗವಾಗಿ ನಾಗೇನಹಳ್ಳಿಗೆ ಆತ ಕಳುಹಿಸಿಕೊಟ್ಟನು. ಅಲ್ಲಿಂದ ತನ್ನ ಪಯಣವನ್ನು ನೇರಾಗಿ ಮುಂಬಯಿಗೆ ಹೂಡಿದನು. ಅಲ್ಲಿಂದ ಅಜ್ಮೀರ್, ಜಯಪುರ, ಢಿಲ್ಲಿ, ಲಾಹೋರ್, ಆಗ್ರಾ, ಶಾಂತಿನಿಕೇತನ ಮೊದಲಾದ ಊರುಗಳನ್ನು ಸಂದರ್ಶಿಸಿದನು. ಹೊರಡುವಾಗ ಜತೆಯಲ್ಲಿ, ತಮಗೆ ದಾನಮಾಡಿದ ವ್ಯಕ್ತಿಗಳ ಹೆಸರಿನ ಪಟ್ಟಿಯೊಂದನ್ನು ಹಿಡಿದುಕೊಂಡಿದ್ದನು. ಅವರ ಪೂರ್ತಿ ವಿಳಾಸಗಳು ತಿಳಿದಿಲ್ಲವಾದರೂ, ಅವನ್ನು ಗೊತ್ತು ಹಚ್ಚಿ, ಅವರೆಲ್ಲರನ್ನು ಭೇಟಿಯಾಗಬೇಕೆಂಬ ಕಾಂಕ್ಷೆಯಲ್ಲಿದ್ದನು. ಸಂಚಾರ ಮಾಡುತ್ತಿದ್ದಂತೆ, ಇಂಥ ಹೆಸರಿನ ಮಹನೀಯರು ಇದ್ದಾರೆಯೋ ಎಂದು ವಿಚಾರಿಸ ಹತ್ತಿದನು. ಆಗ ಬುದ್ಧಿ ಭ್ರಮಣೆಗೊಳ್ಳುವಂತ ವಿಚಿತ್ರ ಅವನ ಪಾಲಿಗೆ ಎದುರಾಯಿತು. ಅವನ ಮುಖ್ಯ ದಾತರಾದ ದನಮಲ್,ಧರಮ್ ಸಿಂಗರವರು — ಪ್ರಭುವಿನಿಂದ ಆಗ್ರಾದವರೆಂದು ಕೇಳಿ, ತಿಳಿದುಕೊಂಡಿದ್ದ. ಅಲ್ಲಿಗೆ ಹೋದರೆ, ಆ ಹೆಸರಿನವರೇ ಇದ್ದಿರಲಿಲ್ಲ. ಅವನು ತಂದ ಪಟ್ಟಿಯಲ್ಲಿ ಯಾವ ಹೆಸರನ್ನು ಪತ್ತೆಹಚ್ಚುವುದೂ ಅಸಾಧ್ಯವಾಯಿತು. ಎಷ್ಟು ಪ್ರಯತ್ನ ಪಟ್ಟರೂ, ಆ ವ್ಯಕ್ತಿಗಳೆಲ್ಲ ಕಲ್ಪನೆಯ ವ್ಯಕ್ತಿಗಳೆಂದು ಊಹಿಸಬೇಕಾಯಿತು. ಹಾಗೆ ದಾರಿಯಲ್ಲಿ ಸಿಕ್ಕಿದ ಒಬ್ಬ ಮಿತ್ರರೊಡನೆ ಆತ ಚರ್ಚೆಗೆ ನಿಲ್ಲಬೇಕಾಯಿತು. "ನೀವು ಧರಮ್ ಸಿಂಗರಿಲ್ಲ ಎನ್ನುತ್ತೀರಿ. ನಮ್ಮ ಶಾಲೆಗೆ ಐವತ್ತು ಸಾವಿರ ರೂಪಾಯಿ ವಾಗ್ದಾನ ಮಾಡಿದ್ದಾರೆ. ಅರೆವಾಸಿ ಹಣ ನಗದಿ ಕೊಟ್ಟಿದ್ದಾರೆ, ಅವರು ಕೊಟ್ಟ ದುಡ್ಡನ್ನು ನಾವು ಖರ್ಚುಮಾಡಿದ್ದೇವೆ, ಅದೂ ಸುಳ್ಳೇ" ಎಂದು ಕೇಳಿದನು.

"ಯಾವ ಶಾಲೆ? ಎಲ್ಲಿನದು?"

"ಧರಮ್ ಸಿಂಗ್, ಪ್ರಭು ಜೀ ಉದ್ಯೋಗ ಮಂದಿರ, ಮಂಗಳೂರಿನದು"

ಅದೇ, ಬಹು ದೊಡ್ಡ ಶಾಲೆ ಇರಬೇಕಲ್ಲವೇ? ಕಲ್ಕತ್ತಾ, ಅಲಹಾಬಾದ್ ದೈನಿಕಗಳಲ್ಲಿ ಅದನ್ನು ಕುರಿತು ದೊಡ್ಡ ಜಾಹೀರಾತುಗಳು ಬರುತ್ತಿವೆ. ಇಡೀ ಪುಟದ ಜಾಹೀರಾತುಗಳು! ಅಷ್ಟೇನೋ ನನಗೆ ಗೊತ್ತು" ಎಂದರು. ಅದನ್ನು ಕೇಳಿ ರಾಧಾಕೃಷ್ಣನಿಗೆ ವಿಸ್ಮಯವಾಯಿತು, ಆತನಿಗೆ ಕಲ್ಕತ್ತ ನಗರದಲ್ಲಿ ಅಂಥ ಒಂದು ಜಾಹೀರಾತು ನೋಡುವುದಕ್ಕೂ ಸಿಕ್ಕಿತು. ಒಂದು ದೈನಿಕದಲ್ಲಿ ಅರ್ಧ ಪುಟ ತುಂಬ, "ನಿಮ್ಮ ಮಕ್ಕಳ ಅಭಿವೃದ್ಧಿಗಾಗಿ ಒಂದೇ ಒಂದು ಯೋಗ್ಯ ಸ್ಥಳವಿದೆ—ಅದು ಧರಮ್ ಸಿಂಗ್ ಪ್ರಭು ಜೀ ಉದ್ಯೋಗ ಮಂದಿರ, ಮಂಗಳೂರು" ಎಂದಿತ್ತು. ಅವನ ಯಾತ್ರೆಯು ಪೂರ್ಣವಾಗುತ್ತಾ ಬರುವಾಗ ಪ್ರಭುವು ಶಾಲೆಗೆ ಹಣವನ್ನು ಈ ಪ್ರಕಟಣೆಗಳ ಬಲದಿಂದಲೇ ದೊರಕಿಸುತ್ತಿದ್ದಾನೆ ಎಂಬ ಭಾವನೆಯುಂಟಾಯಿತು. ಆದರೆ ದಾನಿಗಳ ಹೆಸರು ಸುಳ್ಳಾಗಬೇಕೇಕೆ ಎಂಬ ಅನುಮಾನ ಹೊರಟಿತು. ಆಗ ಶ್ಯಾಮನೆಂದ ಮಾತು ನೆನಪಾಯಿತು—ಧುನೀ ಚಂದರು ಕೊಟ್ಟ ಐನೂರನ್ನು ಐದು ಸಾವಿರವೆಂದು ಪ್ರಭುದೇವ ಪ್ರಕಟಿಸಿದ ಸಂಗತಿ. ಅದರಿಂದ ಅವನ ಸಂಶಯ ಬಲವಾಯಿತು. ಕಲ್ಕತ್ತೆಯ ಮಾರ್ಗವಾಗಿ ಮದರಾಸನ್ನು ಸೇರುವ ತನಕ ಅವನ ಮನಸ್ಸು ಅಶಾಂತಿಯಿಂದ ತುಂಬಿತ್ತು. ಹೋದ ಕೆಲಸದಲ್ಲಿ ಔದಾಸೀನ್ಯ ಪ್ರಾಪ್ತವಾಗಿತ್ತು. ಪ್ರಭುದೇವ ಶಾಲೆಯ ಹೆಸರನ್ನು ಯಾವುದೋ ತೆರನ ಸುಲಿಗೆಗಾಗಿ ಬಳಸುತ್ತಿದ್ದಾನೆಂದು ಆತ ಅನುಮಾನಿಸ ಬೇಕಾಯಿತು.

ಆತ ಬೆಜವಾಡ ನಗರವನ್ನು ದಾರಿಯಲ್ಲಿ ಸಂದರ್ಶಿಸಿದಾಗ, ಅವನಿಗಿದ್ದ ಅನುಮಾನಗಳು ಸ್ಪಷ್ಟವಾಗುವ ಸಂದರ್ಭ ದೊರಕಿತು. ಅಲ್ಲಿ ಊಟಕ್ಕೆಂದು ಉಡುಪಿ ಕೃಷ್ಣಭವನಕ್ಕೆ ಹೋದನು. ಅಲ್ಲಿ ಹೊಟೇಲಿನ ಮಾಲಕರು ಯಾರೊಡನೆಯೊ ಲಾಟರೀ ಟಿಕೇಟಿನ ವ್ಯಾಪಾರ ನಡೆಯಿಸುತ್ತಿದ್ದುದು ಕಾಣಿಸಿತು. ಅಂಥ ಟಿಕೇಟುಗಳಿಗೆ ಸರಕಾರ ಬಹಿಷ್ಕಾರ ಹಾಕಿದ್ದ ಕಾಲ ಅದು. ಈಗ ನಡೆಯುತ್ತಿದ್ದುದು ಗುಪ್ತ ವ್ಯಾಪಾರ. ಈತ

ಹೊಟೇಲಿನ ಮಾಲಕರನ್ನು ತುಳುವಿನಲ್ಲಿ 'ಗೋವ ಲಾಟರಿಯೇ' ಎಂದು ಕೇಳಿದ. 'ಅಲ್ಲ ನಮ್ಮೂರಿನದು' ಎಂಬ ಉತ್ತರ ಅವರಿಂದ ಬಂದಿತು. ಊರಿನವರಾದುದರಿಂದ ಅವರೊಂದು ಟಿಕೇಟನ್ನು ತೋರಿಸಿದರು. ನೋಡಿ ಅವನ ಮುಖ ಸಪ್ಪಗಾಯಿತು. ಧರಮ್ ಸಿಂಗ ಪ್ರಭು ಜೀ ವಿದ್ಯಾಲಯಕ್ಕಾಗಿ ನಡೆಯಿಸುತ್ತಿದ್ದ ಸೋಡ್ತಿ ಅದು! ಅದರ ಪ್ರಥಮ ಬಹುಮಾನವೇ ಐವತ್ತು ಸಾವಿರ.

"ಇದು ನಮ್ಮೂರಿನದಲ್ಲವೇ? ಇಲ್ಲಿ ತುಂಬ ಖರ್ಚಾಗುತ್ತಿದೆಯೇ" ಎಂದು ವಿಚಾರಿಸಿದ.

"ಮೊದಲಿಗೆ ಪ್ರತಿತಿಂಗಳು ಸಾವಿರ ರೂಪಾಯಿಗಳ ಟಿಕೇಟನ್ನು ನಾನೇ ತರಿಸುತ್ತಿದ್ದೆ. ಚೆನ್ನಾಗಿ ಕಮಿಶನ್ ಕೊಡುತ್ತಾರೆ. ಶೇಕಡಾ ಇಪ್ಪತ್ತೈದರಂತೆ. ಆದರೆ ಈ ಕಡೆಯವರೊಬ್ಬರಿಗೂ ಬಹುಮಾನ ಬಂದುದಿಲ್ಲ. ಹೀಗಾಗಿ ಈಗ ತಿಂಗಳಿಗೆ ನೂರು ರೂಪಾಯಿಗಳ ವ್ಯಾಪಾರವೂ ಆಗುತ್ತಲಿಲ್ಲ" ಎಂದರು.

ಅಲ್ಲಿಂದ ರಾಧಾಕೃಷ್ಣ ಆ ವಿಷಯವನ್ನು ಬದಲಿಸಿ, ಊರು ಮನೆಯ ವಿಚಾರವನ್ನು ಎತ್ತಿಕೊಂಡು ಮಾತನಾಡತೊಡಗಿದನು. ಅವನ ಸ್ವಂತ ಊರವರೆಂಬ ಅಭಿಮಾನದಿಂದ ಹೋಟೆಲಿನ ಯಜಮಾನರು ಅವನನ್ನು ತಮ್ಮ ಮನೆಗೆ ಕರೆದೊಯ್ದರು. ಎಂಟು ದಿನ ತಮ್ಮಲ್ಲಿ ಇರುವಂತೆ ಆಗ್ರಹ ಪಡಿಸಿದರು. ಪ್ರಭುವಿನ ರೀತಿ ನೀತಿಗಳಿಗಾಗಿ ಉದ್ವಿಗ್ನನಾದ ರಾಧಾಕೃಷ್ಣನಿಗೆ ತನ್ನ ಊರಿಗೆ ಮರಳುವುದಕ್ಕೇ ನಾಚಿಗೆಯಾಗಿತ್ತು. ಆ ಪರಿಸ್ಥಿತಿಯಲ್ಲಿ ಅವರ ಆಮಂತ್ರಣವನ್ನು ಸ್ವೀಕರಿಸಿ ಎಂಟು ದಿನ ತಲೆ ಮರೆಸಿಕೊಂಡು ಇರಲು ಆತ ಒಪ್ಪಿದುದರಲ್ಲಿ ಆಶ್ಚರ್ಯವಿಲ್ಲ. ಸ್ನೇಹಿತರ ಉಪಚಾರವನ್ನು ಸ್ವೀಕರಿಸಿ, ಮರುಳನಂತೆ ದಿನವೆಲ್ಲಾ ಬಜಾಡದ ಪೇಟೆಯಲ್ಲಿ ಅಲೆದಾಡಿದನು. ಮುಂದೇನು ಮಾಡುವುದೆಂದೂ ಆತಗೆ ತೋರಲಿಲ್ಲ. ಅಲ್ಲಿಂದ ಮದರಾಸಿಗೆ ಹೋದನು.

ಮದರಾಸಿನಲ್ಲಿ ಪರಿಚಯಸ್ಥರಾದ ಊರವರು ಸಿಕ್ಕಿಯೇ ಸಿಕ್ಕುತ್ತಾರೆ. ತನ್ನ ಶಾಲೆಯ ವಿಷಯ ಕೇಳಿದರೆ ಏನು ಹೇಳಬೇಕು ಅವರಿಗೆ? ಆ ಯೋಚನೆ ಬಂದೊಡನೆಯೇ, ಅಲ್ಲಿ ನಿಲ್ಲುವುದು ಬೇಡವೆಂದು ಎಣಿಸಿ ಬೆಂಗಳೂರಿಗೆ ಹೊರಟನು. ಬೆಂಗಳೂರಿನಿಂದ ನೆಟ್ಟಗೆ ಹಾವೇರಿಯ

ಮಾರ್ಗವಾಗಿ ಶಿರ್ಶಿಗೆ ಹೋದನು. ಡಾ। ನಾಡಕರ್ಣಿಯವರ ಮನೆಗೆ ಆತ ಹೋದಾಗ, ಅವನ ಮುಖ ಚಹರೆಯನ್ನು ಕಂಡೇ ಅವರು ಗಾಬರಿಯಾದರು. ಅವನ ಹೃದಯದ ವೇದನೆಗಳೆಲ್ಲ ಮುಖದಲ್ಲಿ ಅಂಕಿತವಾಗಿದ್ದುವು. ಅವರು "ಏನು, ಏನಾಗಿದೆ ನಿಮಗೆ" ಎಂದು ಕೇಳಿದರೆ, ಆತ ಸೊಲ್ಲೆತ್ತಲಾರ. "ಏನಿಲ್ಲ" ಎನ್ನುತ್ತಾನೆ. ಎದೆಯ ತಿವಿತದಿಂದ ನರಳುತ್ತಿದ್ದಂತೆ ಕಾಣುತ್ತಿತ್ತು, ಅವನ ನಡೆನುಡಿ. ಡಾಕ್ಟರರೊಡನೆ ಅವನಿಗೆ ನಾಲ್ಕು ದಿನಗಳನ್ನು ಕಳೆಯುವುದಾಗಲಿಲ್ಲ. "ಡಾಕ್ಟರರೇ, ನಾಗೇನಹಳ್ಳಿಯನ್ನು ಕಾಣುವ ಆಸೆಯಾಗಿದೆ. ಹೋಗಿ ಬರಲೇ"? ಎಂದನು.

"ಆಗಲಿ ಹೋಗಿ ಬನ್ನಿ. ನೆಟ್ಟಗೆ ಅಲ್ಲಿಂದಲೇ ನಿಮ್ಮ ಊರಿಗೆ ಹೋಗಬಾರದು, ನೀವು ತುಂಬ ನೊಂದುಕೊಂಡಿದ್ದೀರಿ. ಬಾಯಿಂದ ಅದನ್ನು ಹೇಳದಿದ್ದರೂ, ನಿಮ್ಮ ಮುಖದಿಂದ ಗೊತ್ತಾಗುತ್ತದೆ. ಇಲ್ಲಿಗೆ ಬಂದೇ ಊರಿಗೆ ಹೋಗಬೇಕು" ಎಂದರು.

ಆತ ಮಾತನಾಡಲಿಲ್ಲ.

"ಹಿಂದಕ್ಕೆ ಬಂದು ಹೋಗುತ್ತೀರಷ್ಟೇ?"

"ನೋಡುವ."

"ನೋಡುವಾ ಎಂದರೆ ಆಗದು."

"ಆಗಲಿ."

"ಇಲ್ಲ ಖಂಡಿತ, ಬರುತ್ತೇನೆಂದು ಮಾತು ಕೊಡಬೇಕು."

"ಆಗಲಿ."

ಅವರನ್ನು ಬೀಳ್ಕೊಟ್ಟು ಬಸ್ಸಿನಲ್ಲಿ ಕುಳಿತಾಗ, ಆತ ಮಾಂಸದ ಮುದ್ದೆಯಾಗಿ ಕುಸಿದು ಹೋಗದಿದ್ದುದೇ ಆಶ್ಚರ್ಯ.



# ಇಪ್ಪತ್ತ್ತನೆಯ ಅಧ್ಯಾಯ

ರಾಧಾಕೃಷ್ಣ ಶಿರ್ಶಿಯಲ್ಲಿ ಬಸ್ಸನ್ನೇರಿ ಕುಳಿತವನು ಸಿದ್ಧಾಪುರದ ತನಕವೂ ಮೂಕನಂತಿದ್ದ. ಆಚೀಚೆ ಕುಳಿತವರೊಡನೆ ಮಾತೆಂಬುದಿಲ್ಲ. ಆ ಅಪರಿಚಿತ ಜಗತ್ತು ಅವನಿಗೆ ಬೇಡವಾಗಿತ್ತು. ಪರಿಚಿತವಾದ ಜಗತ್ತಿನಲ್ಲಿ ಇನ್ನಷ್ಟು ಅಸಹ್ಯ ಹುಟ್ಟಿತ್ತು. ರೈಲಿನಲ್ಲಿ ಕುಳಿತಿದ್ದಾಗಲೂ ಸರಿಯೇ, ಈಗಲಾದರೂ ಸರಿಯೇ, ತನ್ನೆದುರಿಗೆ ಸಾಗುತ್ತಿದ್ದ ಗಿಡಮರಗಳು, ತನ್ನನ್ನು ಮೂದಲಿಸಲು ಬಂದಂತೆ, ತನ್ನೆದುರಿಗೆ ಕೈ ಮಾಡುವಂತೆ, ತನ್ನ ಹಿಡಿತದಿಂದ ಸಿಕ್ಕಿಯೂ ಓಡುವ ನಿಸರ್ಗದ ಅಣಕಾಟದಂತೆ ಕಾಣುತಿತ್ತು. ಆ ಗಿಡಮರಗಳಂತೆಯೇ ಮಾನವೀ ಜಗತ್ತು ತನ್ನನ್ನು ಅಪಹಾಸ್ಯಕ್ಕೆ ಗುರಿಮಾಡುತ್ತಿದೆಯಲ್ಲ ಎಂದು ಅನಿಸುತ್ತಿತ್ತು. ಹೊರಗಿನ ವಿಶ್ವ ಪ್ರವಾಹವು ತನ್ನನ್ನು ಸುಲಿಯಲು ಹೊರಟಂತೆ ಕಾಣಿಸುತಿತ್ತು. ಆಚೀಚೆ ಜನರೊಡನೆ ಕುಳಿತಿದ್ದರೂ ತಾನಾರು, ಅವರಾರು ಎಂಬ ಭೇದ ಚೆನ್ನಾಗಿ ಕಾಣುತಿತ್ತು. ಪ್ರಪಂಚದಲ್ಲಿ ಮಿತ್ರ ಶತ್ರುಗಳೊಳಗಿನ ಭೇದವೆಂಬುದು ಅವನ ಪಾಲಿಗೆ ಮಾಯವಾಗಿದೆ. ನಡುವೆ ಒಮ್ಮೊಮ್ಮೆ ಯಾರದ್ದಾದರೂ ಗಟ್ಟಿ ಮಾತಿನಿಂದಾಗಲಿ, ಮೋಟರು ಹಾರ್ನಿನಿಂದಾಗಲಿ, ಎಚ್ಚೆತ್ತನೆಂದರೆ "ಹೀಗೆ ತಾನು ಚಿಂತಿಸುತ್ತ ಕುಳಿತಲ್ಲಿ ಹುಚ್ಚು ಹಿಡಿಯಲಾರದೇ" ಎಂದೆನಿಸುತ್ತಿತ್ತು. ಆಗ ನಗು ಬರುವುದು. ಇಷ್ಟರ ತನಕ ಹೇಗಿದ್ದೆ? ಒಬ್ಬ ಹುಚ್ಚನನ್ನು ಜಗತ್ತು ಎಷ್ಟು ಸುಲಭವಾಗಿ ವಂಚಿಸಬಹುದೋ ಅದಕ್ಕೂ ಸುಲಭವಾಗಿ ಪ್ರಭುದೇವನು ತನ್ನನ್ನು ವಂಚಿಸಲಿಲ್ಲವೇ? ಜಗತ್ತಿನಲ್ಲಿ ಉದಾರತೆಗಿಂತ ಹೆಚ್ಚಿನ ಅಪಹಾಸ್ಯ ಇನ್ನಿಲ್ಲವೆಂದು ಕಾಣುತ್ತದೆ. ಇದೇ ಬಗೆಯಲ್ಲಿ ಸುಂಟರ ಗಾಳಿಯಂತೆ ಅವನ ವಿಚಾರಗಳು ಮನಸ್ಸನ್ನು ಸುತ್ತಿದುವು. ಸಿದ್ಧಾಪುರದಲ್ಲಿ ಬಸ್ಸಿನಿಂದ ಇಳಿಯುತ್ತೇನೆಂದು ಯೋಚಿಸಿದವನು "ಬೇಡ, ನಾಗೇನಹಳ್ಳಿಗೆ ಏನು ಸಂತೋಷ ಪಡುತ್ತಿದ್ದೇನೆಂದು ಹೋಗಬೇಕು" ಎಂದು ಪ್ರವಾಸ ಮುಂದಕ್ಕೆ ಬೆಳೆಯಿಸಿದನು. ಅಲ್ಲಿಂದ ಜೋಗಕ್ಕೆ ಬಂದನು. ಮೋಟರಿನಿಂದ ಇಳಿದು, ನದಿಯನ್ನು ದಾಟಿ, ತಿರುಗಿ ನಡೆದು, ಜಲಪಾತ ದರ್ಶನವಾ

ಗುವ ತನಕ ಅವನ ಮನಸ್ಸು ಸ್ಥಿಮಿತದಲ್ಲಿರಲಿಲ್ಲ. ಅಲ್ಲಿ ಹೋಗಿ ಎದು ರಿನ ಅಗಾಧ ಕಣಿವೆಯನ್ನು ನೋಡುತ್ತಲೇ, ವಿಶ್ವದ ಆಳವೇ ತನ್ನ ಮುಂದೆ ನಿಂತಂತೆ ಕಂಡಿತು. ಅದನ್ನು ಅಳೆಯುವುದಕ್ಕೆ ಹೊರಟ ಶರಾ ವತಿಯ ಧುಮುಕಾಟವನ್ನು ಕಂಡು ಮನಸ್ಸು ವಿಸ್ಮಯಗೊಂಡಿತು. ತುಟಿ ಯಲ್ಲಿ ನಗು ಕೊನರಿತು. ಅವನ ಮನಸ್ಸು ನದಿಯ ನೀರಿನೊಡನೆ ಪಾತಾ ಳಕ್ಕೆ ಹಾರಿತು. ಅಂಬಿನ ವೇಗದಿಂದ ಕೆಳಕ್ಕೆ ಧುಮುಕಿ, ಆಳವನ್ನಳೆದೆ ನೆಂಬ ಹಿಗ್ಗಿನಿಂದ ತುಂತುರುವಾಗಿ ಮಂಜಿನ ಮುಗಿಲೊಡನೆ ಬೆರೆತು ಬಿಟ್ಟಿತು. ತಾಸುತಾಸುಗಳ ತನಕ, ಸೋಪಾನ ಒಂದರಲ್ಲಿ ಕಾಲು ನೀಡಿ, ಒರಗಿಕೊಂಡು ತನ್ನೆದುರಿನ ನೋಟವನ್ನು ನೋಡುತ್ತಿದ್ದಾನೆ. ವಿಚಾರ ಶಕ್ತಿ ಲೋಪಗೊಂಡು ಮಂಕನಂತೆ ಕುಳಿತಲ್ಲಿಂದ ಕದಲಲಿಲ್ಲ. ನಟ್ಟ ದೃಷ್ಟಿ ಕದಲಿಸಲಿಲ್ಲ. ಕಾಲಪಟಲದಲ್ಲಿ ಸರಿದು ಸಾಗುವ ನಿಮಿಷ, ಕ್ಷಣ, ತಾಸುಗಳು ಸ್ಮೃತಿಪಥಕ್ಕೆ ಬರಲಿಲ್ಲ. ತೂಕಡಿಕೆ ಬಂದವರಂತೆ ಕಣ್ಣೆವೆ ಯನ್ನು ಮುಚ್ಚಿ, ಮಂಜುಗಣ್ಣಿನಿಂದ ಎದುರಿನ ನೋಟವನ್ನು ನೋಡು ವಾಗ, ಅಲ್ಲಿ ಚಲನೆ ಎಂಬುದಿರಲಿಲ್ಲ. ಬಾನು, ಮುಗಿಲು, ನದಿ, ಜಲ ಪಾತ, ಕಣಿವೆ ಇವೆಲ್ಲ ಒಂದುಗೂಡಿ ಚಿರವಾದ ನಗುವಿನಲ್ಲಿ ಬೆರೆತಂತೆ ಕಾಣಿಸುತ್ತಿತ್ತು.

ಸಂಜೆಯ ಹೊಂಬಣ್ಣ ಬೆಟ್ಟದ ಹಸುರನ್ನು ಬೆಳಗಿದೆ. ನೀರಿನಲ್ಲಿ ಪ್ರತಿಫಲಿಸಿದೆ. ಅದು ಕಾಡಿನ ಒಳಕ್ಕೂ ನುಗ್ಗಿ ಕಣ್ಣುಮುಚ್ಚಾಲೆಯಾಡ ತೊಡಗಿದೆ. ಸೃಷ್ಟಿ ಇನ್ನೂ ನಗುತ್ತಿದೆ. ಆ ನಗುವಿಗೆ ಹೊಂಬಣ್ಣ ಬಂದಿ ದೆಯಷ್ಟೆ. ಇನ್ನೊಂದು ಗಳಿಗೆಯಲ್ಲಿ ಬಾನಿನ ಚುಕ್ಕಿಗಳು ಕಾಣಿಸಿದುವು. ಜಲಪಾತದ ಉಸಿರು ಧ್ವನಿಯಿಂದ ಕೇಳಿಸುತಿತ್ತು. ಬಾನು ಕಡು ನೀಲ ವಾಗಿ ಹಲವು ನಗುವತಾರೆಗಳಿಂದ ಕೂಡಿತ್ತು. ಸಮಾಧಿಯೊಡೆದವನಂತೆ ರಾಧಾಕೃಷ್ಣ "ಎಲ್ಲಿದ್ದೇನೆ ನಾನು? ಈಗ ಎಷ್ಟು ಹೊತ್ತಾಗಿರಬಹುದು?" ಎಂದು ತನಗೆ ತಾನೇ ಕೇಳುತ್ತಿದ್ದಾನೆ. ಆಚೀಚೆ ಜನರಾರೂ ಇದ್ದಿಲ್ಲ. ದೂರದ ಬಂಗ್ಲೆಯಲ್ಲಿ ದೀಪವೊಂದು ಮಿನುಗುತ್ತಿದೆ. "ಇಲ್ಲಿಯೂ ಜನ ರಿದ್ದಾರೆ" ಎಂದು ನಕ್ಕ. ಮೆಲ್ಲಗೆ ನಡೆದು ಬಂದು, ಬಂಗ್ಲೆಯ ಜಗುಲಿ ಯ ಮೇಲೆ ಮಲಗಿಕೊಂಡನು. ನಿದ್ದೆ ಎಚ್ಚರಗಳು ಒಂದಾಗಿದ್ದುವು ಅವನಿಗೆ. ಬೆಳಕು ಹರಿಯಿತು. ಸೂರ್ಯ ರಶ್ಮಿಗಳು ಅವನ ಮುಚ್ಚಿದ

ರೆಪ್ಪೆಗಳನ್ನು ಕುಕ್ಕಿ ತೆರೆದುವು. ಎದ್ದು ಕುಳಿತನು. ಈಗೇನು ಮಾಡಲಿ ಎಂದುಕೊಂಡನು. ಈಚೆ ನಡೆದು ಬಂದು, ಇನ್ನೊಮ್ಮೆ ಪ್ರಪಾತವನ್ನು ನೋಡ ತೊಡಗಿದನು. ಅಲ್ಲಿಂದಲೇ ಮರುಳನಂತೆ ಬೆಟ್ಟದ ಕಾಲು ದಾರಿಯಲ್ಲಿ ಎತ್ತೆತ್ತಲೋ ಸುತ್ತಿ ಬಂದನು. ಕಾಲುಗಳು ದಣಿದುವು. ಹೊರಟಲ್ಲಿಗೆ ಬಂದನು. ಅಲ್ಲಿ ನೆಲದಲ್ಲಿ ಕುಳಿತು ಕಾಲನ್ನು ಮಣಿಸಿ, ಮೊಣಕಾಲಿನ ಮೇಲೆ ಗಲ್ಲವನ್ನೂರಿದನು. ಅವನ ತಲೆಯು ಕತ್ತು ತನ್ನನ್ನೆತ್ತಿ ಹಿಡಿಯಲಾರದೆಂಬ ಅಪನಂಬಿಕೆಯಿಂದ, ಮಣಿ ಗಂಟಿನ ಮೇಲೆ ಬಂದು ಕುಳಿತಂತಿತ್ತು. ಹೀಗೆ ಕುಳಿತು ಬೇಸರ ಬಂದು, ನೆಲದಲ್ಲಿ ಕಡ್ಡಿಯಿಂದ ಚಿತ್ರ ಬರೆಯತೊಡಗಿದ. ಆದರೂ ಕತ್ತನ್ನು ಕೀಳಲಾರ. ಕುಳಿತಲ್ಲಿಂದಲೇ ಆಚೀಚೆ ಕೈಚಾಚಿ ಬರೆಯುವುದು, ಉಜ್ಜುವುದು ಅವನ ಕೆಲಸ. ಆ ದಿನವೆಲ್ಲ ಹಾಗೆಯೇ ಸರಿಯಿತು. ಹಸಿವು, ನೀರಡಿಕೆ, ಸ್ನಾನ ಯಾವುದರ ಅಪೇಕ್ಷೆಯೂ ಅವನಿಗೆ ಇದ್ದಂತೆ ಇಲ್ಲ. ಕಣ್ಣಾಲಿಗಳು ಅರಳಿ, ಕೆಂಪಾಗಿ ಭ್ರಾಂತುಗೊಂಡಂತೆ ಊದಿ ನಿಂತಿದ್ದುವು. ತಲೆಗೂದಲು ಬೆರಳಾಡಿಸದೆ, ಬಾಚದೆ, ಧೂಳಿನಿಂದ ತುಂಬಿ ಕೆದರಿಕೊಂಡಿತ್ತು. 'ತನಗೆ ಯಾವುದೇತಕ್ಕೆ?' ಎಂದು ಅವನ ಮನಸ್ಸು ಸತತವಾಗಿ ಪ್ರಶ್ನೆ ಮಾಡುತ್ತಲೇ ಇತ್ತು.

ಮರುದಿನ ಒಂದು ವಿಚಿತ್ರ ಸಂಧಿ ಸಂಭವಿಸಿತು. ಆತ ಹಿಂದಿನಂತೆ ಒಂದು ಶಿಲಾಸನದ ಮೇಲೆ ಕುಳಿತು, ಎದುರಿನ ಪ್ರಪಾತವನ್ನು ನೋಡುತ್ತಿದ್ದ. ರಾಜಾ ತಡಸಲು ಅವನ ದೃಷ್ಟಿಯನ್ನು ಹಿಡಿದು ತಡೆದಿದೆ. ಬೇಸಗೆ ಯಾದುದರಿಂದ ಅಷ್ಟೊಂದು ನೀರಿಲ್ಲವಾದರೂ, ಈತನ ಮನಸ್ಸು ಅದರಲ್ಲಿ ನೀರನ್ನು ತುಂಬಿದೆ. ಒಂದೇ ನೆಗೆತದಲ್ಲಿ ಪಾತಾಳವನ್ನು ಸೀಳಲು ಹೊರಟ 'ರಾಜ' ಎಂಥ ಧೀರ ಎಂದು ಕಾಣಿಸುತ್ತಲಿದೆ. ಆಗ ಯಾರೋ ನವದಂಪತಿಗಳು ಆ ಹಾದಿಯಾಗಿ ಬಂದು, ಸ್ವಲ್ಪ ದೂರದಲ್ಲಿ ನಿಂತುಕೊಂಡರು. ಹೊಸತಾಗಿ ಬಂದ ಅವರಲ್ಲಿ ಮದುವಣಗಿತ್ತಿಯೊಬ್ಬಳು, ಇನ್ನೊಬ್ಬ ಅವಳ ಪತಿಯೆಂದು ಹೇಳಬೇಕಿಲ್ಲ. ಸಾಮಾನ್ಯವಾಗಿ ದಶಂಬರ ತಿಂಗಳಿನಲ್ಲಿ ದೂರದೂರದ ಊರುಗಳಿಂದ ಅಲ್ಲಿಗೆ ನಿಸರ್ಗಪೂಜೆಗಾಗಿ ಜನರು ಬಂದೇ ಬರುತ್ತಾರೆ. ಇದು ಕಟ್ಟ ಕಡೆಯ ಬೇಸಿಗೆ. ಪ್ರತಿವರ್ಷದಂತಾದರೆ, ಜಲಶೂನ್ಯಪಾತವದು. ಈ ಬಾರಿ

ಏನೋ ಒಂದೆರಡು ಮಳೆಗಳಾಗಿದ್ದುದರಿಂದ ಶರಾವತಿಯಲ್ಲಿ ಸ್ವಲ್ಪವಾದರೂ ನೀರು ಹರಿಯುತಿತ್ತು. ಆದರೂ ಜನರು ನೋಡ ಬರುವ ವೇಳೆಯಲ್ಲ. ಈಗ ಬಂದ ದಂಪತಿಗಳು, ಮೊನ್ನೆ ತಾನೇ ಮದುವೆಯಾದವರು. ತಮ್ಮ ಸರಸವಿಹಾರಕ್ಕೆ ಮುಂದಿನ ದಶಂಬರವನ್ನು ಕಾಯಬೇಕೇ? ಮದುವೆಯ ಹೊಸತರಲ್ಲೇ ನಲಿವು, ಚೆಲುವು! ಅಲ್ಲದೆ ಅವರು ಸಮೀಪದ ಊರಿನವರು. ಜೋಗಿಗೆ ಹೋಗಿ ಬಂದಿದ್ದೇವೆಂದಾದರೂ ಹೇಳುವುದಕ್ಕಾಯಿತಲ್ಲ?

ವರನಿಗೆ ಇಪ್ಪತ್ತು ಇಪ್ಪತ್ತೆರಡು ವರ್ಷಗಳಾಗಬಹುದು. ಕಾಲೇಜನ್ನು ಸುತ್ತಿ ಬಂದ ಹುಡುಗ; ಕುಳ್ಳ, ಬಿಳುಪುದೇಹ. ಅಷ್ಟೊಂದು ಸುಂದರನಲ್ಲವಾದರೂ, ಉಡುಗೆ ತೊಡುಗೆಗಳ ಬಲದಿಂದ ಚನ್ನಿಗಾಗಲು ಯತ್ನಿಸಿದ್ದಾನೆ. ಅವನ ಸಹಚರಿ, ಕಿಶೋರಿ; ಪೇಟೆಕಂಡವಳಲ್ಲ. ಬಿಳುಪಿನವಳು, ನಾಕಷ್ಟು ಚೆಲುವೆಯೂ ಅಹುದು. ಆದರೆ ಹಣೆಯ ಕುಂಕುಮ, ಕತ್ತಿನ ಅಲಂಕಾರಗಳಿಂದಾಗಿ ಉತ್ತರಕನ್ನಡದ ಹಳ್ಳಿಯ ಹುಡುಗಿಯೆಂದು ಬರೆದು ಬಿಟ್ಟಿದೆ. ಅವರು ಆ ಬೆಳಗ್ಗೆ ಅಲ್ಲಿಗೆ ಬಂದು ಅತಿತ್ತ ಅಲೆದಾಡಿ, ತಡಸಲನ್ನು ನೋಡಿ ಸಂತೋಷಗೊಂಡರು. ಹರಟುತ್ತ ಸಮಯ ಕಳೆದರು. ನಿಂತು, ನಲಿದು, ಪರಿಹಾಸ್ಯ ಮಾಡಿದರು. ಕಾಲು ಸೋತಿತೋ, ಏನೋ, ಶಿಲಾಸನ ಒಂದರ ಮೇಲೆ ಬಂದು ಕುಳಿತರು. ಅಲ್ಲೇನೇ ತುಸು ಸಮೀಪದಲ್ಲಿ ರಾಧಾಕೃಷ್ಣ ಕುಳಿತಿದ್ದ. ಹುಡುಗ ತನ್ನ ಗೆಳತಿಯನ್ನು ನೋಡಿ, ರಾಧಾಕೃಷ್ಣನಿಗೆ ಬೆರಳು ತೋರಿಸಿ "ನೋಡಿದೆಯಾ" ಎಂದು ಕುಹಕವಾಗಿ ಮಾತನಾಡಿದ. ಕತ್ತು ತಿರುಗಿಸಿ ಆಕೆ ಆತನನ್ನು ನೋಡಿದಳು. ತಿರುಗಿ ತಿರುಗಿ ಅವನನ್ನೇ ನೋಡುವ ಮನಸ್ಸಾಯಿತು. ಈತ ಮೆಲುವಾಗಿ ಅವಳನ್ನು ಮಾತನಾಡಿಸಿದರೆ ಆಕೆ ಒಂದೇ ಸವನೆ ಅವನನ್ನು ನೋಡುತ್ತಿದ್ದಾಳೆ. ತನ್ನ ಪ್ರಶ್ನೆಗೆ ಮೂಕಳಾದುದನ್ನು ಕಂಡು ಆತ "ಏನು ಅವನನ್ನೇ ನೋಡುವುದು? ಪಾಪ ಏನಾಗಿ ಸಡಿಲಾಯಿತೋ" ಎಂದನು. ಆತನ ಮನಸ್ಸಿನಲ್ಲಿ ಅಲ್ಲಿ ಕುಳಿತ ವ್ಯಕ್ತಿಯು ಒಬ್ಬ ಹುಚ್ಚನೆಂದು ಖಚಿತವಾಗಿತ್ತು. ಆಕೆಯು ಮಾತ್ರ ಅನುಮಾನಿಸಿ 'ಅಲ್ಲ' ಎಂದು ನುಡಿದಳು.

"ಏನು ಅಲ್ಲ? ಖಂಡಿತವಾಗಿಯೂ ಅವನಿಗೆ ದುರಸ್ತಿ ಇಲ್ಲ. ಹೆದರಿ

ನೋಡುತ್ತಿದ್ದಿ ಏಕೆ?"

"ಹೆದರಿಕೆ ಅಲ್ಲ. ಅವರನ್ನು ಎಲ್ಲೋ ಕಂಡ ನೆನಪು. ತೀರ ಗುರುತಿನ ಮುಖ. ಹೋಗಿ ಯಾರೆಂದು ಕೇಳುತ್ತೀರಾ?"

"ನಮಗೇಕೆ?"

"ಹಾಗಲ್ಲ, ಎಲ್ಲಿಯೋ ನೋಡಿದ ನೆನಪು. ಎಲ್ಲಿಯೆಂದು ಗೊತ್ತಾಗುವುದಿಲ್ಲ; ಮಾತನಾಡಿಸಿ ನೋಡುವ"

ಕೇವಲ ಅವಳ ಆಸೆಯನ್ನು ಸಲಿಸುವುದಕ್ಕಾಗಿ ಕುಳಿತಲ್ಲಿಂದಲೇ "ಯಾರು ನೀವು"? ಎಂದು ಆತ ವಿಚಾರಿಸಿದ.

"ಆಂ" ಎಂದು ಎಚ್ಚತ್ತು ಅವರ ಕಡೆಗೆ ದೃಷ್ಟಿಯನ್ನು ತಿರುಗಿಸಿದ.

ತಿರುಗಿ ಅದೇ ಪ್ರಶ್ನೆ ಬಂದಿತು. "ಯಾರು ನೀವು? ಯಾವ ಊರಾಯಿತು?" ಎಂದು.

ಆತ ಉದಾಸೀನನಾಗಿ "ಯಾರು ಅಂದಿರಾ? ಯಾರಾದರೇನು" ಎಂದು ಸುಮ್ಮನಾದ.

ಆಕೆಯ ಮನಕ್ಕೆ ತೃಪ್ತಿ ಬರಲಿಲ್ಲ. ಅವಳ ಮನಸ್ಸಿನಲ್ಲಿ ಆತನಾರೆಂಬುದು ಮಿಂಚಿತು. ಥಟ್ಟನೆ ಎದ್ದು ಅವನೆದುರಿಗೆ ಹೋಗಿ ನಿಂತಳು. ಪತಿ ಇದೇನೆಂದು ಯೋಚಿಸುವುದರೊಳಗಾಗಿ, ಹೊಸ ಮದುವಣಿಗಿತ್ತಿಯ ಸಾಂಪ್ರದಾಯದಂತೆ ಬಗ್ಗಿ ಅವನಿಗೆ ಅಭಿವಂದಿಸಿದಳು. ಪತಿಯು ಇದೇನೆಂದು ಚಕಿತನಾದನು.

ರಾಧಾ ಎದ್ದು ನಿಂತು ಅವಳನ್ನು ಪರಸಿದನು. "ನನಗೇಕೆ ನಮಸ್ಕರಿಸುತ್ತೀಯಾ, ದೇವರಿಗೆ ನಮಸ್ಕಾರ ಮಾಡು. ಮನುಷ್ಯರಿಗೆ ಏನು ಮಾಡಿದರೂ ಒಂದೇ" ಎಂದನು.

ಈಗ ಸ್ವರದ ಗುರುತಂತೂ ಅವಳಿಗೆ ತೀರ ಸ್ಪಷ್ಟವಾಯಿತು. ಅವಳು "ಅಣ್ಣಾ, ನಾನಲ್ಲವೇ ಗಂಗೆ; ಮದುವೆಗೆ ಬರುತ್ತೇನೆ ಅಂದಿದ್ದಿರಿ. ಅಪ್ಪ ನಿಮ್ಮೂರಿಗೆ ಕಾಗದ ಹಾಕಿರಬೇಕು" ಎಂದಳು.

ಆತನಿಗೂ ಥಟ್ಟನೆ ನೆನಪು ಹೊರಬಿತ್ತು. ಕಿರಿಪದವಿನಲ್ಲಿ ಸತ್ಯಳ ಹಿಂದೆ, ಅಕ್ಕಾ, ಅಕ್ಕಾ, ಎಂದು ಕೂಗಿ ಕರೆಯುತ್ತಿದ್ದ ಆ ಕರುಳನ್ನು ಅವನು ತಕ್ಷಣ ಗುರುತಿಸಿದನು.

"ಯಾರು ಮಗು, ನೀನು ಗಂಗೆಯಲ್ಲವೇ? ಇನ್ನೊಬ್ಬಳು ಶಾರದೆ

ಯಲ್ಲವೇ?" ಎಂದು ಕೇಳಿದನು.

"ಮರೆತು ಹೋಯಿತೇ?"

"ನಾಗೇನಹಳ್ಳಿಯನ್ನು ನಾನು ಮರೆಯುವುದೇ? ನಿಮ್ಮೂರಿಗೆಂದೇ ಹೊರಟಿದ್ದೆ. ಏನೋ ತುಂಬ ಬೇಸರವಾಗಿತ್ತು. ಬೇಡವೆಂದು ಇಲ್ಲಿಗೆ ಬಂದೆ. ಬಾ ಕುಳಿತುಕೋ ಮಗು. ಇದು ಯಾರು? ನಿನ್ನ ಯಜಮಾನರೇ? ತಂಗಿಗೆ ಲಗ್ನವಾಯಿತೇ? ತಂದೆ, ಹೇಗಿದ್ದಾರೆ? ಚಿಕ್ಕಪ್ಪ ಹೇಗಿದ್ದಾರೆ?"

ಅವಳಿಗೆ ಯಾಕೋ ಕಂಬನಿ ತುಂಬಿ ಬಂದಿತು. "ಯಾಕೆ ಅಳುತಿದ್ದೀಯಾ? ಬೇಸರವೆ?"

"ನೀವು ಚಿಕ್ಕಪ್ಪನನ್ನು ಕೇಳಿದಿರಿ. ಅವರನ್ನು ನೆನೆದುಕೊಂಡು ದುಃಖ ಬಂತು. ಅವರಿಗೆ ನೀವು ಆ ದಿನ ಅಷ್ಟೆಲ್ಲ ಬುದ್ಧಿ ಹೇಳಿ ಕಳುಹಿಸಿದಿರಿ. ಅವರು ನಮ್ಮನ್ನು ಊರಲ್ಲಿ ಬಿಟ್ಟು ನಾಳೆ ಬರುತ್ತೇನೆಂದು ಹೋದರು. ತಿರುಗಿ ಬರಲಿಲ್ಲ. ಯಾವುದೋ ಊರಿಗೆ ಹೋಗಿ ನೇಣು ಹಾಕಿಕೊಂಡು ಸತ್ತರೆಂಬ ಸುದ್ದಿ ಬಂದಿತು."

"ಯಾರು ಮಹಾಬಲಯ್ಯನೇ?"

"ಊಂ, ಅಲ್ಲಿಂದ ನಮ್ಮಪ್ಪ ಮಹಾದೇವನನ್ನು ಅವನನ್ನು ಎಲ್ಲರನ್ನೂ ಮನೆಗೇನೆ ಕರೆದುಕೊಂಡು ಬಂದರು. ಈಗ ಎಲ್ಲರು ಒಟ್ಟಿಗೇ ಇದ್ದೇವೆ. ನಾವು ಸತ್ಯಕ್ಕನನ್ನು ನೆನೆಯದ ದಿವಸವಿಲ್ಲ. ಅವರು ತೋರಿಸಿದ ಪ್ರೀತಿಯನ್ನು ನಮಗೆ ಯಾರೂ ತೋರಿಸಿರಲಿಕ್ಕಿಲ್ಲ. ಮದುವೆಯ ದಿನ ನಿಮ್ಮಿಬ್ಬರ ನೆನಪೂ ಆಯಿತು. ಅಕ್ಕ ಹೇಗಿದ್ದಾರೆ? ಕಾಗದ ಹಾಕಿದರೆ ಖಂಡಿತವಾಗಿ ಬರುತ್ತೀರಿ ಎಂದು ಅಪ್ಪನಿಗೆ ಹೇಳಿದೆ. ಅವರು ಹಾಕಿರಲಿಕ್ಕಿಲ್ಲ. ಮಕ್ಕಳ ಮಾತನ್ನು ಯಾರು ಕೇಳುತ್ತಾರೆ?"

"ಹಾಕಿರಬಹುದು ಮಗು. ನಾನು ನಮ್ಮೂರನ್ನು ಬಿಟ್ಟು ತಿಂಗಳೆರಡಾಯಿತು."

"ನಿಮ್ಮ ಆಶ್ರಮ ಚೆನ್ನಾಗಿದೆಯೇ? ಚಂದ್ರು ಹೇಗಿದ್ದಾನೆ? ಅಕ್ಕನಿಗೆ ಬೇರೆ ಮಕ್ಕಳಾಗಿವೆಯೇ? ಶ್ಯಾಮಣ್ಣ?"

"ಇದ್ದಾರೆ ಮಗು, ಎಲ್ಲರೂ ಚೆನ್ನಾಗಿದ್ದಾರೆ. ನಮಗೆ ಇನ್ನೊಂದು ಹುಡುಗಿ ಹುಟ್ಟಿದೆ. ಎರಡು ವರ್ಷದ್ದು. ಶ್ಯಾಮಣ್ಣನಿಗೆ ಮದುವೆಯಾ

ಗಿದೆ; ಒಂದು ಮಗು ಹುಟ್ಟಿದೆ. ಆಶ್ರಮ ಮಾತ್ರ ಅಲ್ಲಿ ಇಲ್ಲ. ಮಂಗಳೂರಿಗೆ ಸಮೀಪವಾಗಿ ಒಂದು ಶಾಲೆ ತೆರೆದಿದ್ದೇವೆ. ಅಲ್ಲಿಯೇ ಇದ್ದೇವೆ."

ಅನಂತರ ಆತ ನರಕದಿಂದ ನೆಲಕ್ಕೆ ಬಂದವನಂತೆ ನಾಗೇನಹಳ್ಳಿಯ ವಿಚಾರವನ್ನು ಕೇಳಿದನು. ಗಂಗೆಯ ಗಂಡನನ್ನು ಸಮೀಪಕ್ಕೆ ಕರೆದು ಮಾತನಾಡಿಸಿದನು. ಅವರು ಹೊರಡುವ ವೇಳೆಯಾಯಿತು. ಆತ "ಗಂಗೆ ಹೋಗುವ, ಆ ಕಡೆ ಹೊಳೆದಾಟುವಾಗ ಬಸ್ಸು ಬಂದೀತು" ಎಂದನು. ಗಂಗೆಯು "ಅಣ್ಣಾ, ನೀವು ಯಾವ ಕಡೆಗೆ? ನಾವು ಶಿರ್ಶಿಗೆ ಹೋಗಬೇಕು. ಅಲ್ಲಿ ನಮ್ಮ ಮನೆ. ಬಂದರೆ ಬರಬೇಕು ನಮ್ಮ ಮನೆಗೆ" ಎಂದು ಅಂದು ಹೋದಳು. ರಾಧಾಕೃಷ್ಣನ ರೂಪ ನೋಡಿ ಅವಳಿಗೆ ತುಂಬಾ ಕೊರಗು ಉಂಟಾಗಿತ್ತು. ಏನೆಂದು ತಿಳಿಯಬೇಕೆಂಬ ಆತುರ ಅವಳಿಗೆ. ಆದರೆ ಬಸ್ಸಿನ ಆತುರ, ಪತಿಯ ಸಾನ್ನಿಧ್ಯ ಎರಡೂ ತಡೆ ಮಾಡಿದುವು. ಆಕೆಯ ಆಮಂತ್ರಣಕ್ಕೆ ರಾಧಾಕೃಷ್ಣ "ಆಗಲಿ ನೋಡುವ" ಎಂದನು. ಅವರಿಬ್ಬರು ಹೊರಟು ಹೋದರು. ದಾರಿಯಲ್ಲಿ ಗಂಗೆ ಪತಿಯೊಡನೆ ರಾಧಾಕೃಷ್ಣನ ವಿಚಾರವನ್ನು ವಿವರಿಸಿ ಹೇಳುತ್ತಲೇ, ಆತ ಸ್ತಂಭಿತನಾದನು. ತಾನೆಂಥ ಮೂರ್ಖನು ಎಂದು ಅವನಿಗೆ ತೋರಿತು. ಹೆಂಡತಿಯೊಡನೆ ಹಿಂದಕ್ಕೆ ಹೊರಟು ರಾಧಾಕೃಷ್ಣನಿರುವಲ್ಲಿಗೆ ಬಂದು "ಇಲ್ಲ, ನೀವು ನಮ್ಮ ಜತೆಗೇನೇ ಶಿರ್ಶಿಗೆ ಬರಬೇಕು. ಇಲ್ಲವಾದರೆ ನಾಗೇನಹಳ್ಳಿಗೆ ಹೋಗಿ ಅಲ್ಲಿಂದ ಜತೆಯಲ್ಲಿ ಶಿರ್ಶಿಗೆಹೋಗುವ" ಎಂದು ಇಬ್ಬರೂ ಅಂಗಲಾಚಿ ಬೇಡಿದರು.

ಆತ "ಯಾಕೆ ಬಲವಂತ ಮಾಡುತ್ತೀರಿ? ನಾನು ಬರುತ್ತೇನೆ. ಇವತ್ತಿನ ಮನಸ್ಸಿನ ಸ್ಥಿತಿಯಲ್ಲಿ ನಾನೆಲ್ಲಿದ್ದರೂ ಸಂತೋಷ ಪಡಲಾರೆ. ಬರುತ್ತೇನೆ ನಾಳೆಯೋ, ನಾಡಿದ್ದೋ" ಎಂದನು.

"ನೀವು ಈಗಲೇ ಬಂದರೆ ಆಗುತ್ತಿತ್ತು. ಇಲ್ಲಿ ಏನು ಮಾಡುತ್ತೀರಿ? ಅನ್ನವೇ, ಊಟವೇ; ನಿಮಗೆ ಬೇಸರವೂ ಹೋದೀತು. ನೀವು ತುಂಬ ಚಿಂತೆಯಲ್ಲಿರುವ ಹಾಗೆ ಕಾಣುತ್ತದೆ. ನಮ್ಮಲ್ಲಿಗೆ ಬನ್ನಿ. ನಾಗೇನಹಳ್ಳಿಗೇ ಹೋಗುವ ಮೊದಲು. ನಿಮ್ಮ ಹೆಸರನ್ನು ನಾಗೇನಹಳ್ಳಿಯವರು ಸಾವಿರಾರು ಸಾರಿ ಹೇಳುತ್ತಾರೆ" ಎಂದು ಆತನೂ ಬಲವಂತ ಮಾಡಿದನು.

ರಾಧಾಕೃಷ್ಣ "ಆಗಲಿ, ಎಲ್ಲಾದರೇನು? ಬರುತ್ತೇನೆ. ಊರಿಂದ ಬರುವಾಗ ನಾಗೇನಹಳ್ಳಿಗೆ ಹೋಗುತ್ತೇನೆ ಎಂದುಕೊಂಡಿದ್ದೆ. ಶಿರ್ಶಿಯಿಂದ ಹೊರಟದ್ದೂ ಅಲ್ಲಿಗೇನೇ. ಆದರೆ ಸಿದ್ಧಾಪುರಕ್ಕೆ ಬರುವಾಗ ಯಾವುದೂ ಬೇಡವೆಂದು ಕಂಡಿತು" ಎಂದು ಎದ್ದು ನಿಂತನು. ಅವರೆಲ್ಲ ಹೊರಟರು. ಗಂಗೆಗೆ ಆತನ ಮುಖನೋಡಿ ತುಂಬ ಕರುಣೆಯುಂಟಾಯಿತು. 'ಏನಾಗಿದೆ' ಎಂದು ಕೇಳುವ ಆತುರ. ಆದರೆ ಧೈರ್ಯಸಾಲದು. ತಂದೆ ಎಂಬಷ್ಟು ಮಮತೆಯಿಂದ ಅವನ ಕೈಯನ್ನು ಹಿಡಿದುಕೊಂಡು ಮಾತನಾಡಿಸುತ್ತ ನಡೆದಳು. ಈತ ಮೆಲ್ಲಗೆ ನಾಗೇನಹಳ್ಳಿಯ ಈಚಣ್ಣನವರು, ತಿಮ್ಮ, ಗೋಪಣ್ಣಭಟ್ಟರು, ಗುಡಿಗಾರ- ಎಲ್ಲರನ್ನೂ ಕುರಿತು ಕೇಳುತ್ತಿದ್ದ.

ಗುಡಿಗಾರನ ಮಾತು ಬರುತ್ತಲೇ ಆಕೆ "ಆತನಿಗೆ ಈಗ ಎರಡನೆಯ ಲಗ್ನವಾಗಿ ಊರಿನಲ್ಲಿದ್ದಾನೆ ಸಂತೋಷದಲ್ಲಿ" ಎಂದಳು.

"ಚಂದಪ್ಪ ಬಂದನೇ ಊರಿಗೆ? ಹೋಗೆಂದು ಕಳುಹಿಸಿದ್ದೆನಲ್ಲ?"

"ಅಹುದು ಬಂದಿದ್ದಾನೆ. ಒಂದು ಎರಡು ತಿಂಗಳು ಸುಮಾರು ಆಯಿತು."

ಶರಾವತಿ ನದಿಯನ್ನು ದಾಟಿ, ಶಿರ್ಶಿಯ ಬಸ್ಸನ್ನು ಹಿಡಿದು ಅವರು ಸಿದ್ಧಾಪುರಕ್ಕೇ ಹೊರಟರು. ಅಲ್ಲಿ ಇಳಿದು, ಹೊಟೇಲು ಒಂದರಲ್ಲಿ ಉಪಾಹಾರವನ್ನು ಮುಗಿಸಿ ಅಲ್ಲಿಂದ ಬಿಸಿಲು ಕಡಿಮೆಯಾಗುತ್ತಲೇ ನಾಗೇನಹಳ್ಳಿಯ ಹಾದಿಯನ್ನು ತುಳಿಯತೊಡಗಿದರು. ಗಂಗೆಯು ತಮ್ಮ ಮನೆಗೆ ಹೋಗಬೇಕೆಂದು ಬಲವಂತ ಮಾಡಿದರೂ, ರಾಧಾಕೃಷ್ಣ ಅವರನ್ನು ಈಚಣ್ಣನವರ ಮನೆಗೇ ಕರೆದುಕೊಂಡು ಹೋದ. ತುಂಬ ಸೊರಗಿದ ರಾಧಾಕೃಷ್ಣನನ್ನು ಕಂಡು, 'ಏನಾಯಿತು, ಏನಾಯಿತು' ಎಂದು ಈಚಣ್ಣಯ್ಯ ಕೇಳುತ್ತಲೇ ಇದ್ದರು. ಗಂಗೆ ತವರಿಗೆ ಹೋಗಿ, ತಂದೆಯನ್ನು ಕರೆದುಕೊಂಡು ಬಂದಳು. ಕತ್ತಲು ಕವಿಯುವುದರೊಳಗೆ ಊರಿನ ಹಲವಾರು ಮಿತ್ರರು ತಮ್ಮ ದೇವರನ್ನು ಕಾಣುವುದಕ್ಕೆಂಬಂತೆ ಅಲ್ಲಿ ಬಂದು ನೆರೆದರು. ಅವರೊಡನೆ ಹಳೆಯ ನೆನಪುಗಳನ್ನು ಕೆದರುತ್ತ ಅವರ ಋಣಭರಿತ ಮಾತುಗಳನ್ನು ಕೇಳುತ್ತ, ಅವನ ಚಿಂತೆ ಹತ್ತಕ್ಕೆ ಐದಾಯಿತು. ಚಂದಪ್ಪ ತಂದೆಯನ್ನು ಕರೆದುಕೊಂಡು ಅಲ್ಲಿಗೆ ಓಡಿ

ಬಂದ. ಗುಡಿಗಾರ ಅತಿ ವಿನಯದಿಂದ "ಅಯ್ಯಾ, ನನ್ನ ಮಗುವನ್ನು ಜೋಪಾನಮಾಡಿ ಮನುಷ್ಯನನ್ನಾಗಿ ಮಾಡಿದಿರಿ. ನಾನು ಇದ್ದೇನೆ ಇಲ್ಲಿ ದಿನ ಸಾಗಿಸುತ್ತ. ಬೇರೆ ಮದುವೆಯಾದೆ. ಅವಳಲ್ಲಿಯೂ ಎರಡು ಮಕ್ಕಳಿವೆ" ಎಂದು ಮಾತಿನ ಕಾಣಿಕೆ ಸಲ್ಲಿಸಿದನು.

ಊಟ ಮುಗಿಯಿತು. ಬರಿಯ ಊಟವಲ್ಲ, ಔತಣ. ರಾಧಾಕೃಷ್ಣ ಯಾಂತ್ರಿಕವಾಗಿ ಪ್ರತಿಯೊಂದು ತುತ್ತನ್ನೂ ಬಾಯಿಗೆ ಇರಿಸಿದನು. ಅಲ್ಲಿಂದ ಗೋಪಣ್ಣ ಭಟ್ಟರು ಅವನನ್ನು ತಮ್ಮ ಮನೆಗೆ ಕರೆದೊಯ್ದರು. ಶಾರದೆ, ಮಹಾದೇವ ಎಲ್ಲರೂ ಅವನ ಬರವನ್ನು ಕಾದಿದ್ದರು. ಶಾರದೆಯಂತೂ ಈಗ ನಾಚಿಕೆಯ ಮುದ್ದೆ. ಅವಳಿಗೆ ಮಾತನಾಡುವುದಕ್ಕೆ ಅಂಜಿಕೆ. ಗಂಗೆ ಅವಳನ್ನು ಎಳೆದು ತಂದು ಅಣ್ಣನ ಎದುರಿಗೆ ನಿಲ್ಲಿಸಬೇಕಾಯಿತು. "ಏನೇ ಇದು? ನಾಚಿಕೆಯೆಲ್ಲ ನಿನಗೇ ಮಾರಿಹೋಯಿತೆ? ಇದು ನಿಜವಾದ ನಾಚಿಕೆಯೇ? ಅಲ್ಲ—ಅಕ್ಕನಿಗೆ ಲಗ್ನವಾಯಿತು; ತನಗೆ ಆಗಲಿಲ್ಲವೆಂಬ ಸಿಟ್ಟೇ?" ಎಂದು ಅವಳನ್ನು ನಗಿಸಿದನು. ಅವರೊಡನೆ ಕುಳಿತು ಹಳ್ಳಿಯ ಹಳೆಯ ನೆನಪಿನ ಪಗಡೆ ಆಟವನ್ನು ಆಡಿದನು.

ರಾತ್ರಿ ಕಳೆಯಿತು. ಮರುದಿನ ಬಂದು ಸರಿಯಿತು. ಅಲ್ಲಿದ್ದು ಅವನ ನೋವುಗಳು ಎಷ್ಟೋ ಮರವೆಯಾದುವು. ಜೋಗಿನ ಮುಂದೆ ಕುಳಿತಾಗ 'ತಡಸಲಿನ ನೀರಿನೊಂದಿಗೆ ಹಾರಿ ಮಾಯವಾದರೇನು? ಈ ವ್ಯಥೆ, ಅನುಮಾನ ತಪ್ಪುತ್ತಿತ್ತಲ್ಲಾ' ಎಂದು ತೋರಿತ್ತು. ಈಗ ಆತನ ಮಾತಿಗೆ, ವೇದನೆಗೆ ತೀಕ್ಷ್ಣತೆಯು ತಪ್ಪಿದೆ. ಪ್ರವಾಸದ ಕಾಲದಲ್ಲಿ ನಿರಾಶೆ, ನೋವುಗಳು ತುಂಬಿದುದರಿಂದ ಸತ್ಯಳಿಗೆ ಕೊನೆಕೊನೆಗೆ ಪತ್ರವನ್ನೇ ಬರೆದಿರಲಿಲ್ಲ. "ಇನ್ನು ಶಿರ್ಶಿಗೆ ಹೋಗಿ, ಅವಳಿಗೊಂದು ಕಾಗದ ಬರೆಯುತ್ತೇನೆ" ಎಂದುಕೊಂಡ.

ನಾಗೇನಹಳ್ಳಿಯ ಮಿತ್ರರನ್ನು ತಣಿಸಿ, ತನ್ನ ಮನಸ್ಸನ್ನೂ ತಣಿಸಿಕೊಂಡ. ಅಲ್ಲಿಂದ ಗಂಗೆ ಮತ್ತು ಗಂಗೆಯ ಮದುವಣಿಗನೊಡನೆ ಶಿರ್ಶಿಗೆ ಪಯಣ ಬೆಳೆಸಿದನು. ಶಿರ್ಶಿಯಲ್ಲಿ ಮೊದಲ ದರ್ಶನ ಡಾ॥ ನಾಡಕರ್ಣಿಯವರದು. ರಾತ್ರಿ ಊಟಮಾಡಿ ಕುಳಿತಾಗ ನಾಡಕರ್ಣಿಯವರು ಅವನ ಮನಸ್ಸಿನ ಒಳಗನ್ನು ಬಿಚ್ಚಿನೋಡುವುದಕ್ಕೆ ಪ್ರಯತ್ನ

ಮಾಡಿದರು. 'ಏಕೆ ಕುಗ್ಗಿದ್ದೀರಿ? ಏನು ಚಿಂತೆ?' ಎಂಬ ಹಟವನ್ನು ಸಾಧಿಸಿದರು. ಅದನ್ನೆಲ್ಲ ತಿಳಿಸುವ ತನಕ ಅವರು ಸುಮ್ಮನಿರಲಿಲ್ಲ. ಈತ ಬೇಸರದಿಂದ ಒಂದೊಂದಾಗಿ ಹೇಳುತ್ತ ಬಂದನು. ಮುಗಿಸುವಾಗಲಂತೂ ಅಳಲಿನಿಂದ ನುಡಿ ಹೊರಡುತ್ತಿರಲಿಲ್ಲ.

"ಅದಕ್ಕೇನು ಮಾಡುತ್ತೀರಿ? ಪ್ರಪಂಚವೇ ಹಾಗಿದೆ. ಎಲ್ಲಿಯೂ ಸರಳ ಮಾರ್ಗವಿಲ್ಲ; ವಕ್ರ ಗತಿಗಳೇ."

ಆತ ಮೌನವಾಗಿಯೇ ಇದ್ದ.

ಈಗ ನಾಡಕರ್ಣಿಯವರು "ಮನುಷ್ಯ ಭೂಮಿಯದೇ ಒಂದು ಪ್ರಾಣಿ. ಭೂಮಿಯ ಆಕಾರಗಳಲ್ಲಿ ಡೊಂಕು ಹೆಚ್ಚು. ಆ ಸ್ವಭಾವವೇ ಮನುಷ್ಯನಲ್ಲಿಯೂ ಕಾಣಿಸುತ್ತದೆ. ಸರಳತನ, ಸತ್ಯ ಇವು ಆಕ್ಷೇಪಗಳು; ಸಾಮಾನ್ಯ ನಿಯಮಗಳಲ್ಲ" ಎಂದರು.

"ನಿಜ ನೀವೆನ್ನುವುದು. ವಿಶ್ವದಲ್ಲಿ ಗ್ರಹತಾರೆಗಳೆಲ್ಲ ಡೊಂಕಾದ ಗತಿಯುಳ್ಳವು. ನೆಟ್ಟಗೆ ಕಾಣಿಸುವ ಬೆಳಕು ಸಹ ಡೊಂಕು ದಾರಿಯದಂತೆ. ಆದರೆ ಆ ಡೊಂಕಿಗೊಂದು ರೀತಿ ಉಂಟು. ಅದನ್ನು ಅಳೆಯಬಹುದು. ಆದರೆ ಮನುಷ್ಯನ ಡೊಂಕು ಅಳತೆಗೆ ಮೀರಿದ್ದು. ಅದು ಇನ್ನಷ್ಟು ವಕ್ರ. ಬಹುಮುಖವಾದ ವಕ್ರ ಗತಿ ಅದಕ್ಕೆ. ಅದನ್ನು ನಂಬುವುದೇ ಕಷ್ಟ."

ಡಾಕ್ಟರರ ಮನೆಯಲ್ಲಿ ಕಳೆದ ಪ್ರಥಮ ರಾತ್ರಿಯಲ್ಲಿ ಆತನ ಮನಸ್ಸಿನ ಭಾರ ಇನ್ನಷ್ಟು ಕಡಿಮೆಯಾಯಿತು. ತನ್ನ ದುಃಖವನ್ನು ಬಚ್ಚಿಟ್ಟುಕೊಂಡರೆ, ಮನುಷ್ಯ ಆ ಹೊರೆಯಿಂದ ಕುಗ್ಗುತ್ತಾನೆ. ಆತ್ಮೀಯರಲ್ಲಿ ಆ ಭಾರ ಹಂಚಿದನೆಂದರೆ ವೇದನೆ ಅಸಹನೀಯವಿದ್ದುದು ಸಹನೀಯವಾಗುತ್ತದೆ. ನಾಡಕರ್ಣಿಯವರು ಅಂಥ ಗೆಳೆಯರು. ಅವರಿಗೆ ಇವನಲ್ಲಿ ಹೆಚ್ಚಾದ ಅಭಿಮಾನ. ಇವನಿಗೂ ಅವರಲ್ಲಿ ಅಭಿಮಾನ. ಅಲ್ಲಿ ಕುಳಿತು ವಿರಾಮವಾಗಿ ದಿನವನ್ನು ಕಳೆಯುವೆನೆಂದುಕೊಂಡ. ತಲೆಯನ್ನು ಬಿಸಿ ಮಾಡಿಕೊಂಡರೆ ಪ್ರಯೋಜನವಿಲ್ಲವೆಂದೂ ಹೊಳೆಯಿತು. ಇಷ್ಟು ದಿನ, ದಿನ ವಾರಗಳ ಎಣಿಕೆ ಇಲ್ಲದೆ ಕುಳಿತ್ತಿದ್ದ ಆತ, ಅದನ್ನು ಎಣಿಕೆ ಹಾಕತೊಡಗಿದ. ತನ್ನ ಶಾಲೆ ಪ್ರಾರಂಭವಾಗುವುದಕ್ಕೆ ಇನ್ನು ಎಂಟು ದಿನಗಳು ಉಳಿದಿವೆ ಎಂದು ತೋರಿತು."ಆದರೆ ಊರಿಗೆ ಹೋಗಲಾರೆ.ಹೇಗೆ ಹೋ

ಗಬೇಕು" ಎನ್ನುತ್ತಿದ್ದ. "ನೀವು ಹೋಗಲೇ ಬೇಕು. ಶಾಲೆಯ ಸಂಸರ್ಗ ಬೇಡವಾದರೆ ನಿಮಗೇನು? ಬಿಟ್ಟು ಬಿಡಿ. ನಿಮ್ಮ ಸಂಸಾರವನ್ನು ಕೂಡಿ ಕೊಂಡಿರಬಹುದಲ್ಲ? ಅವರೇನು ತಪ್ಪು ಮಾಡಿದ್ದಾರೆ?" ಎಂದು ಡಾಕ್ಟರರು ಅವನನ್ನು ಗದರಿಸಿ ಕರ್ತವ್ಯದ ಕಡೆಗೆ ಮುಖಮಾಡಿ ನಿಲ್ಲಿಸಿದರು. "ಆಗಲಿ" ಎಂದು ಆತ ಹೊರಟೇಬಿಟ್ಟ. ಎರಡು ದಿನಗಳ ಬಸ್ಸಿನ ಪಯಣದಲ್ಲಿ ತಿರುಗಿ ಏಕಾಂತ ಬುದ್ಧಿಯು ಮೊಳೆಯಿತು. ಇನ್ನೊಮ್ಮೆ ಚದರಿದ ನೋವು ಕಲೆತು ಮುಖ ಮನಸ್ಸುಗಳನ್ನು ಆವರಿಸಿತು.

ನೆಟ್ಟಗೆ ಬಸ್ಸಿನಿಂದಿಳಿದು ಮನೆಗೆ ಹೊರಟನು. ಮೊದಲಿಗೆ ಆದುದೇ ಶ್ಯಾಮನ ಭೇಟಿ. ಕೆದರಿದ ಕ್ರಾಫ್, ಬಾಡಿದ ಮುಖ, ಅರಳಿದ ಕಣ್ಣುಗಳು, ಕ್ಷೌರವಿಲ್ಲದ ಗಲ್ಲ—ಇವನ್ನು ಕಂಡೇ ಶ್ಯಾಮು ಗಾಬರಿಯಾದ. "ಏನು ಕಾಯಿಲೆಯೋ? ಹುಶಾರಿದ್ದಂತೆ ಕಾಣಿಸುವುದಿಲ್ಲವಲ್ಲ? ಒಬ್ಬರೇ ಬಂದಿರಾ? ಸತ್ಯಕ್ಕ ಊರಿಂದ ಬರಲಿಲ್ಲ. ತಂತಿ ಹಾಕಲೇ?" ಎಂದು ಶ್ಯಾಮು ಬಡಬಡಿಸಿದನು.

"ಏನೂ ಬೇನೆಯಿಲ್ಲ; ಚೆನ್ನಾಗಿದ್ದೇನೆ. ಏನೂ ಗಾಬರಿ ಮಾಡಬೇಡ. ವಿರಾಮವಾಗಿ ಮಾತನಾಡುವ. ಮೊದಲೊಂದು ಸ್ನಾನಮಾಡಿ ನಾಲ್ಕು ತಾಸು ನಿದ್ದೆ ಮಾಡುತ್ತೇನೆ. ಅನಂತರ ಮಾತನಾಡಿಸು. ರಾಮಕೃಷ್ಣಯ್ಯನವರ ಮನೆಗೆ ಹೋಗಿ, ನಾನು ಬಂದಿದ್ದೇನೆ—ಬರಬೇಕೆಂದು ಹೇಳು. ಪ್ರಭುವಿಗೆ ಮಾತ್ರ ಯಾವ ಸುದ್ದಿಯನ್ನೂ ತಿಳಿಸಬೇಡ."

"ಯಾಕಣ್ಣಾ, ಅವರು ಮೂರುಸಾರಿ ಬಂದು ನಿಮ್ಮನ್ನು ವಿಚಾರಿಸಿ ಹೋದರು. ನನಗೂ ಕಾಗದವಿಲ್ಲ. ನಿನಗೇನಾದರೂ ಉಂಟೇ ಎಂದು ಕೇಳಿ ಹೋದರು."

"ಸಾಯಲಿ ಅವನು" ಎಂಬ ಕರ್ಕಶ ನುಡಿ ಅವನ ಬಾಯಿಂದ ಬಂದಿತು. ಆಗ ರಾಧಾಕೃಷ್ಣನ ಹಲ್ಲು ಕಚ್ಚಿತ್ತು; ಮುಖ ನಡಗುತ್ತಿತ್ತು.

ಶ್ಯಾಮನಿಗೆ ಅಗ—'ಅಣ್ಣನಿಗೆ ಏನೋ ಆಗಿದೆ' ಎಂಬೀ ಪ್ರಜ್ಞೆ ಬಂದಿತು. ಮುಂದೆ ಮಾತನಾಡಿಸಲಿಲ್ಲ. ಸ್ನಾನದ ಮನೆಗೆ ಕರೆದೊಯ್ದನು. ಅಲ್ಲಿಂದ ಅಡುಗೆಯ ಮನೆಗೆ ಕರೆದೊಯ್ದು ಒತ್ತಾಯದಿಂದ ಇಷ್ಟು ಊಟ ಮಾಡಿಸಿದನು. ಮಲಗುವುದಕ್ಕೆ ಹಾಸಿಗೆ ಹಾಕಿಕೊಟ್ಟನು.

ತನ್ನ ಕೂಸು ಎಲ್ಲಿಯಾದರೂ ಅವನ ನಿದ್ದೆಯನ್ನು ಕೆಡಿಸೀತೆಂದು ಅದನ್ನು ದೂರಕೊಯ್ದು ಎತ್ತಿ ಮುದ್ದಾಡಿಸಿದನು. ಸಂಜೆಯಾಯಿತು. ಮಗುವನ್ನು ಮನೆಗೆ ತಂದು, ಹಾಲುಕುಡಿಸಿ ಕಲ್ಯಾಣಿ ಮಲಗಿಸಿದಳು. ಶ್ಯಾಮನು ತಾನು ಪೇಟೆಗೆ ಹೋಗಿ ಬರುತ್ತೇನೆಂದು ಹೇಳಿ ಹೊರಟು ಹೋದನು. ಅವನು, ಮನಸ್ಸಿನಲ್ಲಿ ಅಣ್ಣನಿಗೆ ಯಾವುದೋ ವಿಧವಾದ ಬೇನೆಯಿಂದ ಆರೋಗ್ಯ ಕೆಟ್ಟಿರಬೇಕು ಎಂದುಕೊಂಡನು. ರಾಮಕೃಷ್ಣಯ್ಯನವರ ಮನೆಗೆ ಹೋಗಿ ಸಂಗತಿ ತಿಳಿಸಿ ಬಂದನು. ಆದರೆ ಪ್ರಭುದೇವನ ವಿಚಾರದಲ್ಲಿ ಹಾಗೇಕೆ ನುಡಿದನೆಂದು ತಿಳಿಯಲಿಲ್ಲ. ಮನೆಗೆ ಬಂದು, ಊಟ ಮುಗಿಸಿ ರಾಧಾಕೃಷ್ಣನಿಗೆ ಸಮೀಪವಾಗಿ ತಾನೂ ಮಲಗಿಕೊಂಡನು. ತುಸು ದೂರದಲ್ಲಿ ಉರಿಸಿದ ದೀಪವಿತ್ತು; ಆಗಾಗ ಎದ್ದು ಅವನಿಗೆ ಎಚ್ಚರವಿದೆಯೋ ಎಂದು ಇಣಿಕಿ ನೋಡುತ್ತಿದ್ದನು. ಆದರೆ ರಾಧಾಕೃಷ್ಣನಿಗೆ ಎಚ್ಚರವಾದುದು ಮರುದಿನ ಪ್ರಾತಃಕಾಲ ಕಳೆದು ಬಲು ಹೊತ್ತಾದಮೇಲೆ. ರಾಮಕೃಷ್ಣಯ್ಯನವರು ಬಂದು, ಹೊರಗೆ ಕಾದಿದ್ದರು. ವಸತಿಗೃಹದ ಬಾಲಕರು ಬಂದು ಒಂದೆರಡುಬಾರಿ ಇಣಿಕಿ ಹೋದರು. ರಾಮಕೃಷ್ಣಯ್ಯ 'ಯಾರಾದರೂ ಡಾಕ್ಟರರನ್ನು ಕರೆಯೋಣವೇ' ಎಂದು ಸೂಚಿಸಿದರು. ಅದಕ್ಕೆ ಶ್ಯಾಮ "ಬೇಡ, ಬೇಡ; ಅವರನ್ನು ಕೇಳದೆ ಏನು ಮಾಡುವುದೂ ಬೇಡ" ಎಂದನು.

ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ರಾಧಾಕೃಷ್ಣ ಎಚ್ಚರಗೊಂಡು ಕುಳಿತನು. ಆಗಲೇ ಕಾದಿದ್ದ ಮಿತ್ರರ ದರ್ಶನವಾಯಿತು. ರಾಮಕೃಷ್ಣಯ್ಯ "ಶ್ಯಾಮಣ್ಣಾ" ಎಂದು ಕರೆದರು. ಆತ ಬರುವುದರೊಳಗೆ ರಾಧಾಕೃಷ್ಣ ಎದ್ದು ಈಚೆಗೆ ಬಂದು "ಬರುತ್ತೇನೆ, ಮುಖ ತೊಳೆದುಕೊಂಡು" ಎಂದು ಹೋದವನು ಮುಖ ಮಜ್ಜನಗಳನ್ನು ಮುಗಿಸಿ ಬಂದನು. ಉಪಹಾರವಾಯಿತು. ಆ ಬಳಿಕ ರಾಧಾಕೃಷ್ಣ "ಶ್ಯಾಮಾ, ಬಾ" ಎಂದು ಅವರಿಬ್ಬರನ್ನೂ ಕರೆದುಕೊಂಡು ಗೋಶಾಲೆಯ ದರ್ಶನಕ್ಕೆ ಹೊರಟನು. ಅಲ್ಲಿಂದ ಹಿಂದೆ ಬರುತ್ತಾ ಒಂದು ಮರದ ನೆರಳಲ್ಲಿ ನಿಂತು ಅವರೊಡನೆ:"ರಾಮಕೃಷ್ಣಯ್ಯ, ನಿಮ್ಮ ಅನುಮಾನವೇ ನಿಜವಾಯಿತು. ಆತನಿಂದಾಗಿ ನಮ್ಮ ಒಬ್ಬರ ಮಾನವೂ ಉಳಿಯದ ಹಾಗಾಗಿದೆ" ಎಂದನು.

"ಏನು ಸಂಗತಿ? ಯಾರ ವಿಷಯ ಹೇಳುತ್ತಿದ್ದೀರಿ?" ಎಂದು ಅವರು ಗಾಬರಿಯಾಗಿ ಕೇಳಿದರು.

"ನಮ್ಮ ದೇವರು ಕೊಟ್ಟ ಕೆಲಸವನ್ನು ಹೇಳುತ್ತಿದ್ದೇನೆ" ಎಂದು ರಾಧಾಕೃಷ್ಣ ಸವಿಸ್ತಾರವಾಗಿ ಅವರ ಮುಂದೆ ಎಲ್ಲ ಸಂಗತಿಗಳನ್ನೂ ಬಿಡಿಸಿದನು. ಹತ್ತು ನಿಮಿಷಕಾಲ ಯಾರೊಬ್ಬರೂ ಬಾಯಿ ತೆರೆಯದ ಮೂಕರಾದರು. ಅಲ್ಲಿಂದ ನಡೆದು, ಮನೆಯತನಕ ಹೋಗಿ, ಕೋಣೆಯಲ್ಲಿ ಕುಳಿತುಕೊಂಡರು. ರಾಧಾಕೃಷ್ಣ ಚೀಲವೊಂದರಿಂದ— ಜಾಹೀರಾತು, ಸುಳ್ಳು ವರದಿ, ಲಾಟರೀ ಟಿಕೇಟುಗಳು-ಇವುಗಳನ್ನೆಲ್ಲ ಸಾಕ್ಷಿಗಾಗಿ ಅವರ ಮುಂದಕ್ಕೆ ಬಿಡಿಸಿದನು. ರಾಮಕೃಷ್ಣಯ್ಯ ಒಂದೊಂದನ್ನೇ ಎತ್ತಿ ನೋಡಿದರು. ಶ್ಯಾಮು "ಅಣ್ಣಾ, ಇದನ್ನೆಲ್ಲ ಹೊರಗೆ ಹಾಕಿದರೆ ಒಂದು ಕ್ರಿಮಿನಲ್ ಕೇಸೇ ಆಗಲಿಕ್ಕಿಲ್ಲವೇ?" ಎಂದು ಕೇಳಿದ.

"ಆಗಬಹುದು; ಅದೇನೂ ಕಷ್ಟವಲ್ಲ. ಆದರೆ ಅವನನ್ನು ಹಾಳು ಮಾಡಿ ನಮಗೆ ಬರುವ ಲಾಭ ಯಾವುದೂ ಇಲ್ಲ."

ರಾಮಕೃಷ್ಣಯ್ಯ "ಛೀ, ಛೀ, ಹಾಗೆ ಮಾಡಲು ಬರುವಂತಿಲ್ಲ. ನಾಳೆ ಆತ ನಮ್ಮೆಲ್ಲರ ಕಪಟಗೂ ಕೈಮಾಡಿ ತೋರಿಸಿ, ನಮ್ಮನ್ನೇ ಸಿಕ್ಕಿಸಿ ಹಾಕಬಹುದು. ಎಲ್ಲರಿಗೂ ತೊಂದರೆಗೆ ಬಂದೀತು" ಎಂದರು.

"ಅದು ಸಮವೇ! ಅವನ ಸುಲಿಗೆಯ ದುಡ್ಡಿನಲ್ಲಿ ಪಾಲು ಪಡೆದು ಕುಳಿತವರು ನಾವಲ್ಲವೇ? ನಾವು ಮಾಡಿದ್ದು ಸದ್ವ್ಯಯವಾದರೂ ಹಣ ಕಳ್ಳತನದ್ದು!"

"ಅದು ತಪ್ಪಾದೀತೇ?" ಎಂದನು ಶ್ಯಾಮು.

"ಯಾರನ್ನೋ ಸುಲಿದು ಯಾರಿಗೋ ದಾನಮಾಡುವುದರಿಂದ ಸುಲಿಗೆಯ ಅಪರಾಧ ತಪ್ಪೀತೇ?" ಎಂದನು ರಾಧಾಕೃಷ್ಣ. ಅವನ ಧ್ವನಿ ಮೆಲ್ಲಗಾಯಿತು. "ಇಷ್ಟನ್ನು ತಿಳಿದಮೇಲೆ ಅವನಿಂದ ಹಣ ಪಡೆದರೆ, ಅವನ ಸಂಪರ್ಕ ಇರಿಸಿಕೊಂಡರೆ, ಈ ದುಷ್ಟತನಕ್ಕೆ ನಾವೇ ಜವಾಬ್ದಾರರಾಗುತ್ತೇವೆ. ತಿಳಿಯದೆ ಆದುದು ಬೇರೆ; ತಿಳಿದು ಆಗುವುದು ಬೇರೆ"

"ಇನ್ನು ಬೇಡಪ್ಪಾ ಅವರ ತಂಟೆ" ಎಂದರು ರಾಮಕೃಷ್ಣಯ್ಯ.

"ಹಾಗಾದರೆ ಅವನ ಮುಖಕ್ಕೇನೇ ಅಂದು ಬರಬೇಕಾಯಿತು-

ನಿನ್ನ ಕಾಸನ್ನು ಇನ್ನು ಮುಟ್ಟುವುದಿಲ್ಲ ಎಂದು" ಎಂದನು ಶ್ಯಾಮು.

"ಅನ್ನದೇ ಸುಮ್ಮನೆ ಇರಲು ಬಂದೀತೆ?"

"ಸುಮ್ಮನೆ ಇರಬಹುದು. ಆದರೆ ಅವನ ಮುಖಕ್ಕೇನೇ ಹಾಗೆ ಹೇಳದೆ ಹೋದರೆ ನನ್ನ ಆತ್ಮಕ್ಕೇನೇ ಸಮಾಧಾನವಿಲ್ಲ. ಬರಿದೆ ಅವನ ಸಂಸರ್ಗವನ್ನು ದೂರ ಮಾಡುವುದರಲ್ಲಿಯೂ ಅರ್ಥವಿಲ್ಲ. ನಮ್ಮನ್ನು ಬಳಸಿಕೊಂಡ ಈ ರೀತಿಯನ್ನು ನೋಡಿದರೆ, ಅವನನ್ನು ಕೊಂದೇ ಬಿಡೋಣ ಎಂಬ ಉದ್ವಿಗ್ನತೆ ತೋರುತ್ತದೆ."

ಅವರು ಮೂವರು ವಿಚಾರಮಾಡುತ್ತ ಕುಳಿತರು. ರಾಧಾಕೃಷ್ಣ 'ಒಂದು ಪತ್ರವನ್ನು ಬರೆದು ಅವನಿಗೆ ರಿಜಿಸ್ಟರಾಗಿ ಕಳುಹಿಸೋಣ' ಎಂದು ಸೂಚನೆ ಮಾಡಿದನು. 'ಹಾಗೆಯೇ ಕಳುಹಿಸುವುದು ಒಳ್ಳೆಯುದಲ್ಲ. ಬರಿಯ ಬಾಯಿ ಮಾತೂ ಪ್ರಯೋಜನವಿಲ್ಲ. ನಾಳೆ ಯಾವ ಕಾರಣದಿಂದಲಾದರೂ ಇವನ ಆಟ ಬಯಲಾಗಿ ನಾವೂ ಸಿಕ್ಕಿಬೀಳ ಬಾರದಷ್ಟೇ?' ಎಂಬುದರಿಂದ ರಿಜಿಸ್ಟರ್ಡ್ ಪತ್ರವೇ ಒಳ್ಳೆಯುದೆಂದು ತೀರ್ಮಾನವಾಯಿತು. ಅವರು ತರ್ಕಿಸಿ ಅದರ ಒಕ್ಕಣೆಯನ್ನೆಲ್ಲ ಬರೆದು, ಶ್ಯಾಮುನೊಡನೆ ಅಂಚೆಗೆ ಕೊಟ್ಟು ಕಳುಹಿಸಿಯೂ ಆಯಿತು. ಹಾಗೇನೇ ಸತ್ಯಳಿಗೆ ಒಂದು ಕಾಗದವನ್ನು ಬರೆದು ಕಳುಹಿಸಿಕೊಟ್ಟನು.

ಅವರಿಬ್ಬರೂ ಸೇರಿ ಮುಂದಿನ ದಾರಿಯನ್ನು ಯೋಚಿಸತೊಡಗಿದರು. ತಮ್ಮ ಸಾಹಸದ ಗಿಡ, ರೆಂಬೆಯೊಡೆದು ಫಲಕಾಣಿಸುತ್ತಿರುವ ಗಳಿಗೆಯಲ್ಲಿಯೇ, ಅದರ ಬುಡಕ್ಕೆ ಇಂಥ ಕೊಡಲಿ ಏಟು ಬಿತ್ತೇ-ಎಂಬ ಚಿಂತೆಗೆ ಒಳಗಾದರು. ರಾಮಕೃಷ್ಣಯ್ಯ ವಿಚಾರ ಮಾಡುತ್ತ ಅನ್ನುತ್ತಾರೆ—"ಅದರ ಬಡಾವಣೆ, ಗಿಡಾವಣೆ ಏನೂ ಬೇಕಿಲ್ಲ. ಈಗಿನಂತೆ ನಡೆದುಕೊಂಡು ಹೋದರೂ ಸಾಕು. ಶಾಲೆ ತೆರೆಯುವುದಕ್ಕಿನ್ನೂ ಐದು ದಿನಗಳಿವೆ. ಮೊದಲಿನ ತಿಂಗಳೇ ವೆಚ್ಚಕ್ಕೆ ಎಲ್ಲಿಂದ ಹಣ ತರಲಿ-ಎಂದು ಯೋಚಿಸಬೇಕಾಯಿತು. ತಿಂಗಳಿಗೆ ಎಂಟು ನೂರು ರೂಪಾಯಿಗಳೆಂದರೆ ಸುಮ್ಮನಾಗುತ್ತದೆಯೇ?" ಎಂದು ಕಾತರಗೊಂಡರು ಅವರು.

ಅವಕ್ಕೆ ಉತ್ತರವಾಗಿ ರಾಧಾಕೃಷ್ಣ "ನಮಗೆ ಸಂಸ್ಥೆಯನ್ನು ನಡೆಯಿಸಿಕೊಂಡು ಹೋಗಬೇಕೆಂಬ ಹಟವಿದ್ದರೆ ಒಂದೇ ಒಂದು ದಾರಿ ಕಾಣುತ್ತದೆ. ನಾವಾಗಿ ಬೇಡಿ, ಅಷ್ಟು ಹಣ ಕೂಡಿಸುತ್ತೇವೆ ಎಂಬ ಭ್ರಮೆ

ನಮಗಿಲ್ಲ. ಆದರೆ ನಮ್ಮ ಅಭಿಮಾನವನ್ನು ಮುದ್ದೆಮಾಡಿ, ಮೂಲೆ ಗಿರಿಸಿ, ಮಾಡಬಹುದಾದ ಒಂದು ಕೆಲಸ ಇದೆ."

"ಏನದು? ಡಾ। ನಂದರ ಶರಣು ಹೋಗುವುದು ಎನ್ನುತ್ತೀರಾ?" ಎಂದು ತಾವೇ ಊಹಿಸಿ ಹೇಳಿದರು. "ನನಗೆ ಆ ಯೋಚನೆ ಬರಲಿಲ್ಲ. ಇವರಂತೆ ಅವರು ಸಹ ನಾಳೆ ದಿನ ನಮ್ಮನ್ನು ಇನ್ನೊಂದು ಹೊಂಡಕ್ಕೆ ಇಳಿಸುವವರೇ. ಅಲ್ಲದೆ ಇಷ್ಟೊಂದು ಬೆಳೆದ ಕೂಸನ್ನು ಅವರ ಕೈಯಲ್ಲಿ ಕೊಟ್ಟು ಕೊಲ್ಲುವುದಕ್ಕಿಂತ, ಅದರ ಸಾವನ್ನು ನಾವು ಕಂಡರೂ ದುಃಖ ವಿಲ್ಲ."

"ಬೇರೆ ದಾರಿ ಏನಿದೆ? ಖರ್ಚನ್ನು ಎಷ್ಟು ಕಡಿಮೆ ಮಾಡಿದರೂ ಐನೂರು ರೂಪಾಯಿಗೆ ಇಳಿಸಬಹುದು. ವಸತಿ ಗೃಹ ನಿಲ್ಲಿಸಬಹುದು. ಅಥವಾ ಧರ್ಮಾರ್ಥ ಅನ್ನ ನಿಲ್ಲಿಸಬಹುದು. ಶಾಲೆಯನ್ನು ನಿಲ್ಲಿಸುವು ದಕ್ಕೆ ಬಂದೀತೇ? ಒಂದೆರಡು ತಿಂಗಳಿಗಿಂತ ಹೆಚ್ಚಿಗೆ ನಾವು ನಡೆಯಿಸ ಲಾರೆವು. ಎರಡೂ ಮನಸ್ಸಿಗೆ ಬಾರದ ಸಂಗತಿ. ವಿಚಾರಕ್ಕೆ ಹೆಚ್ಚಿನ ಅವಕಾಶವೂ ಇಲ್ಲ."

ಅವರಿಬ್ಬರಿಗೂ ಸಿಹಿಯಾಗಲೀ, ಕಹಿಯಾಗಲೀ ತತ್ಕಾಲದ ಸಹಾಯ ನಂದರಿಂದ ಹೊರತು ಇನ್ನಿಲ್ಲ ಎಂದು ತೋರಿತು.ಆದರೆ ಅಷ್ಟು ಕ್ಷಿಪ್ರದಲ್ಲಿ ಅವರನ್ನು ಒಲಿಸಬಹುದೇ ಎಂಬ ಅನುಮಾನ ಉಳಿಯಿತು. ರಾಮಕೃಷ್ಣಯ್ಯ ಅಲ್ಲಿಯೇ ಊಟಕ್ಕೆ ಉಳಿದುಕೊಂಡರು. ಶ್ಯಾಮ ಮರಳಿ ಬಂದನು. ಬಂದವನೇ "ದಾರಿಯಲ್ಲಿ ಪ್ರಭುದೇವರು ಸಿಕ್ಕಿ ದರು. ನೀವು ಬರಲಿಲ್ಲವೇ? ಎಂದು ಕೇಳಿದರು. ಬಂದಿದ್ದಾರೆ, ಅಷ್ಟು ಆರೋಗ್ಯ ಚೆನ್ನಾಗಿಲ್ಲ. ಒಂದೆರಡು ದಿವಸಗಳಲ್ಲಿ ಬಂದು ನೋಡುತ್ತಾರೆ" ಎಂದು ಹೇಳಿದೆ. ಅವರಿಗೇನೇ ಕಾಗದ ಹಾಕಿ, ಬಂದಿಲ್ಲ ಎಂದು ಹೇ ಳಲಿಕ್ಕಾಗುತ್ತದೆಯೇ?" ಎಂದನು.

ಹಾಗಿದ್ದರೆ ಅವನೇ ಬರುತ್ತಾನೆ. ಹೇಗೂ ಪತ್ರ ಬರೆದು ಅಂಚೆಗೆ ಹಾಕಿದ್ದೇವೆ; ಸಂದರ್ಭ ಕಂಡರೆ ಎದುರಿಗೇನೇ ಹೇಳುವ. ಇಲ್ಲವಾ ದರೆ ಲೋಕಾಭಿರಾಮವಾಗಿ ಮಾತನಾಡಿ ಅವನನ್ನು ಕಳುಹಿಸಿ ಕೊ ಡುವ. ಬಂದರೆ—ಪತ್ರ ಕಾಣುವ ಮೊದಲೇ ಬರಬೇಕು. ಆ ಮೇಲೆ ಬರಲಾರನಷ್ಟೆ" ಎಂದನು ರಾಧಾಕೃಷ್ಣ. ಆತ ಬಂದರೆ ಹೇಗೆ ಮಾತ

ನಾಡಿಸಬೇಕು? ಏನು ಮಾತನಾಡಬೇಕು? ಎಂಬೆಲ್ಲ ವಿಚಾರಗಳನ್ನು ಕುರಿತು ಮನಸ್ಸು ಯೋಚಿಸುತ್ತಿತ್ತು. ಅವನನ್ನು ತಿರುಗಿ ಸಂಧಿಸುವ ಎಣಿಕೆ ಬಂದೊಡನೆಯೇ "ಅಯ್ಯೋ ಅವನು ಬಾರದಿರಲಿ" ಎಂಬ ಬಯಕೆ ಯುಂಟಾಯಿತು.

ಪ್ರಭುವಿಗೆ ತಾಪತ್ರಯ ಹೆಚ್ಚಿದುದರಿಂದಲೋ ಏನೋ, ಆ ದಿನ ಆತ ಬರಲೇ ಇಲ್ಲ. ಮರುದಿನ ಕ್ರಾಂತಿ ತಾರೆಯ ಕಚೇರಿಯಲ್ಲಿ ಕುಳಿತಾಗ ಇವರು ಕಳುಹಿಸಿದ ಪತ್ರ ಅವನಿಗೆ ದೊರೆಯಿತು. ರಿಜಿಸ್ಟರ್ಡ್ ಕಾಗದ. ರಾಧಾಕೃಷ್ಣನ ಬರಹ. ಇದೇನು ಸೋಜಿಗ! ಎಂದು ತೆರೆದು ನೋಡಿದನು. ಓದಿ ಅವನ ರೋಷ ಉಕ್ಕಿತು. ತನ್ನಷ್ಟಕ್ಕೆ "ಉಪಕಾರವಿಲ್ಲದ ನಾಯಿಗಳಿವು. ಪ್ರಾಯಶಃ ನಂದರ ಬಲೆಗೆ ಆತ ಬಿದ್ದಿರಬೇಕು. ಇಲ್ಲವಾದರೆ ನನ್ನನ್ನು ಇಷ್ಟೆಲ್ಲ ಮೂದಲಿಸಿ, ನನ್ನ ಸಂಬಂಧವನ್ನು ತೊಲಗಿಸಿಕೊಳ್ಳಲು ಯತ್ನಿಸುತ್ತಿರಲಿಲ್ಲ. ನಾನೊಂದು ಹುಚ್ಚನೆಂದು ತಿಳಿದುಕೊಂಡಿದ್ದಾನೆಯೇ, ಸಾವಿರಾರು ರೂಪಾಯಿಗಳನ್ನು ಸುರಿದು ಕಟ್ಟಿಸಿದ ಸಂಸ್ಥೆಯನ್ನು ಇವನಿಗೆ ಇಲ್ಲವೆ ನಂದನಿಗೆ ನಾನು ಧಾರೆಯೆರೆಯುತ್ತೇನೆಯೇ? ಇವರೆಲ್ಲರನ್ನು ಓಡಿಸಿ ಶಾಲೆ ನಡೆಯಿಸುವ ತ್ರಾಣ ನನಗಿದೆ" ಎಂದು ಕುಪಿತನಾದನು. ತಾನು ವೇಳೆ ಮಾಡಿದ್ದಾದರೆ ಶಾಲೆ ನಂದರ ಪಾಲಿಗೆ ಹೋದೀತು ಎಂಬ ಭೀತಿ ಉಂಟಾದುದರಿಂದ, ಸಿಟ್ಟಿನ ಕಾವು ಆರುವುದರೊಳಗಾಗಿ ರಾಧಾಕೃಷ್ಣನಿರುವಲ್ಲಿಗೇ ಹೋದನು. ಕಾಗದವನ್ನು ತೋರಿಸಿ "ನಿಮ್ಮ ಪತ್ರದ ಅರ್ಥವೇನು? ನಾವು ಮಾತನಾಡಿ ಮುಗಿಸಲಾರದ ಸಂಗತಿ ಬಂದಿದ್ದರೆ ಆಗ ಈ ನೋಟೀಸನ್ನು ಕೊಡಬಹುದಿತ್ತು. ಒಮ್ಮಿಂದೊಮ್ಮೆಗೇ 'ಶಾಲೆಯ ವಿಷಯದಲ್ಲಿ ನಿಮ್ಮ ಸಂಬಂಧ ಇರಿಸಿಕೊಳ್ಳಲು ಇಷ್ಟವಿಲ್ಲ' ಎಂದು ಬರೆದಿದ್ದೀರಲ್ಲ? ಈ ತನಕ ಹಣ ಸುರಿಯುವುದಕ್ಕೆ ನಾನು ಬೇಕಾಯಿತು. ಈಗ ಬೇಡವಾದೆನೆ ?" ಎಂದು ಕೇಳಿದ.

ರಾಧಾಕೃಷ್ಣ ಬಹಳ ಹೊತ್ತು ಮಾತನಾಡಲಿಲ್ಲ. ಪ್ರಭುವೇ ಮಾತನಾಡುತ್ತಿದ್ದ. ಕೊನೆಗೆ 'ನಿಮ್ಮ ತಲೆಗೆ ಡಾ। ನಂದರೋ, ಆ ಪಂಚ ಮಹಾಭೂತಗಳ ಪ್ರತಿ ಇನ್ನಾರೋ ಕೈಯನ್ನು ಎಳೆದಿರಬೇಕು. ಇಲ್ಲದೆ ಹೋದರೆ ಇದಕ್ಕೆ ಬೇರೆ ಅರ್ಥ ಕಾಣುವುದಿಲ್ಲ" ಎಂದನು. ಆಗಲೂ

ರಾಧಾಕೃಷ್ಣ ಹೆಚ್ಚು ಮಾತನಾಡಲಿಲ್ಲ. ಕಡೆಗೆ "ನಾನು ಕಾಗದದಲ್ಲಿ ಬರೆದುದೇ ಕೊನೆಯ ಮಾತು" ಎಂದು ಬಿಟ್ಟ. ಪ್ರಭುವಿನ ಉಗ್ರ ಮಿತಿ ಮೀರಿತು. ತಾಳ್ಮೆ ಕೆಡಿಸುವಷ್ಟು ಕೆಟ್ಟ ಮಾತುಗಳನ್ನಾಡಿದನು. ಸ್ವಾಭಾವಿಕವಾಗಿ, ಅವನ ಹಲವೊಂದು ಕನಸಿನ ಗೋಪುರಗಳು ನಿಂತಿರುವ ಈ ನೆಲ ಕುಸಿಯುತ್ತಿರುವುದನ್ನು ಕಂಡು ಹೇಗೆ ಸಹನೆ ಬಂದೀತು? ಆದರೆ ರಾಧಾಕೃಷ್ಣನ ತಾಳ್ಮೆಗೂ ಒಂದು ಮಿತಿಯಿತ್ತು. ಆತ ಹಲ್ಲು ಕಡಿದುಕೊಂಡು "ನಿಮಗೀಗ ಎಷ್ಟು ತಲೆ ಕರಡಾಗಿದೆಯೋ ಅದರ ನೂರ್ಮಡಿ ಭ್ರಾಂತ ನಾನಾಗಿದ್ದೇನೆ. ಹುಚ್ಚನಂತಾಗಿದ್ದೇನೆ ನಾನು. ಆದರೆ ಯಾವ ಕೆಟ್ಟ ಮಾತು ಆಡುವುದಕ್ಕೂ ಮನಸ್ಸಿಲ್ಲ. ಈ ತನಕ ನಾನು, ನೀವು ಯಾವ ರೀತಿಯಿಂದ ಹಣವನ್ನು ತಂದು ಶಾಲೆಗೆ ಸುರಿದಿರಿ,ಎಂಬುದನ್ನು ತಿಳಿಯದೆ ಹೋಗಿದ್ದೆ. ಅದು ಈಗ ತೀರಾ ತಿಳಿದಿದೆ. ನಾನು ಅಷ್ಟೆಲ್ಲ ಹುಡುಕಿ ಹೋದರೂ, ನೀವು ಹೇಳಿದ ಹೆಸರಿನ ಒಂದೇ ಒಂದು ದಾನಿಯನ್ನು ಕಂಡಿಲ್ಲ. ಕಲ್ಕತ್ತಾ ಅಲಹಾಬಾದುಗಳಲ್ಲಿ ನಡೆಯುತ್ತಿದ್ದ ನಿಮ್ಮ ಜಾಹೀರಾತುಗಳು, ಲೋಟರಿಗಳು ತಿಳಿದು ಬಂದಿವೆ. ಶಾಲೆಯ ಹೆಸರಿನಲ್ಲಿ ಯಾವ ತೆರನ ಅನ್ಯಾಯದ ಸುಲಿಗೆಯೂ ನನಗೆ ಬೇಕಿಲ್ಲ." ಎಂದನು.

ಅಷ್ಟರಲ್ಲಿ ಪ್ರಭುವು ನಡುವೆ ಬಾಯಿ ಹಾಕಿ-"ನಾನು ಹೇಗೆ ಹಣ ಸಂಪಾದನೆ ಮಾಡಿದರೆ ನಿಮಗೇನು? ಹಣದ ವಿಚಾರದಲ್ಲಿ ಅದು ಹೇಗೆ ಬಂತೆಂದು ಕೇಳಬಾರದೆಂದು ಕಟ್ಟು ಮಾಡಿದ್ದೇ ಅದಕ್ಕೆ. ಹಣ ಸಂಪಾದಿಸುವವರು ಹೇಗೆ ಸಂಪಾದಿಸುತ್ತಾರೆಂದು ನೋಡಿ, ಅವರಿಂದ ದಾನ ಪಡೆಯುವವರೋ ನೀವು? ಹಾಗಿದ್ದರೆ ಪ್ರಪಂಚದಲ್ಲಿ ಒಂದೇ ಒಂದು ಸಾರ್ವಜನಿಕ ಸಂಸ್ಥೆ ನಡೆಯಲಾರದು" ಎಂದನು.

"ಅದು ಸರಿಯೆ. ನೀವಾಗಿ ಹೇಗೆ ಹಣ ಸಂಪಾದಿಸಿದರೂ ಬೇರೆ ಸಂಗತಿ ಆಗುತಿತ್ತು. ಆದರೆ ಈ ಎಲ್ಲ ಸುಲಿಗೆಗಳನ್ನು ತಾವು ಶಾಲೆಯ ಹೆಸರಿನಲ್ಲಿ ನಡೆಯಿಸಿದ್ದೀರಿ. ಆ ಅನ್ಯಾಯಕ್ಕೆ ನಾನು ಪಾಲುಗಾರನಾಗಲಾರೆ. ಆ ಸೋಡ್ತಿಗಳು ಅಧಿಕೃತವಾದವುಗಳೂ ಅಲ್ಲ! ಸತ್ಯವಾದುವೂ ಅಲ್ಲ. ಎಲ್ಲ ದೃಷ್ಟಿಯಿಂದಲೂ ಅದು ಅನ್ಯಾಯವೇ. ನಾಳೆ ಬಯಲಾದರೆ — ಜೈಲಿಗೆ ಹೋಗುವ ದಾರಿ ಅದು."

"ಓ - ಆ ಹೆದರಿಕೆಯೋ ನಿಮಗೆ?"

"ನನಗೆ ನೀತಿಯ ಹೆದರಿಕೆ ಇನ್ನೂ ಉಳಿದಿದೆ. ಹೇಗಾದರೂ ಮಾಡಿ ಬದುಕಬೇಕು, ಸಂಸ್ಥೆ ನಡೆಯಿಸಬೇಕೆಂಬ ಹಟ ಇಲ್ಲ. ಯಾಕೆ ನನ್ನನ್ನು ನೋಯಿಸುತ್ತೀರಿ?"

"ಹಾಗಾದರೆ ನಾನು ಇಷ್ಟೆಲ್ಲ, ಕಟ್ಟಡ ಕಟ್ಟಿಸಿಕೊಟ್ಟದ್ದು, ಹಣ ಸುರಿದದ್ದು ವ್ಯರ್ಥವಾಯಿತೇ?"

"ನೀವೇ ಅದನ್ನು ಕಟ್ಟಿಸಿದವರು ಎಂದು ತಿಳಿದುಕೊಂಡದ್ದಾದರೆ ನಿಮಗೆ ತುಂಬ ನಷ್ಟವೂ ಅಹುದು, ಅನ್ಯಾಯವೂ ಅಹುದು. ಕ್ಷಮಿಸಿ. ನನ್ನನ್ನು ಮಾತ್ರ ಬಿಟ್ಟುಬಿಡಿ" ಹೀಗೆಂದು ನೇರಾಗಿ ತನ್ನ ಕೊಟಡಿಯೊಳಕ್ಕೆ ಹೋಗಿ ಕದವಿಕ್ಕಿ ಕುಳಿತುಕೊಂಡನು. ಪ್ರಭುವು ಶ್ಯಾಮನನ್ನು ಇದಿರಿಸಿ ಅವನೊಡನೆ ತನ್ನ ಕ್ರೋಧ ಆವೇಶಗಳನ್ನು ತೋಡಿಕೊಂಡನು. ಶ್ಯಾಮನಂತೂ "ಆದುದಾಯಿತು, ಏನೋ ದೈವ ಇಚ್ಛೆಯಿತ್ತು. ಒಂದು ರೀತಿಯಿಂದ ಸೇರಿಕೊಂಡು ಕೆಲಸ ಮಾಡಿದೆವು. ಮುಂದೆ ಇದು ನಡೆದೀತು ಎಂಬ ಭರವಸೆಯೇ ಹೋಗಿದೆ; ಈ ತನಕ ನಡೆದಂತೆ ನಡೆಯಬಾರದಷ್ಟೆ" ಎಂದು ಹೇಳಿದ.

ಆದರೂ ಪ್ರಭುವು ಅವನನ್ನು ಕಠಿಣ ನುಡಿಗಳಿಂದ ಕೊರೆದು ಹೊರಟು ಹೋದನು. ಇಷ್ಟು ದಿನ ಒಲಿದವನ ಮುಂದೆ ಈಗ ಮುನಿದನೆಂದು ರಾಧಾಕೃಷ್ಣ ಜಗಳ ಕಾಯಲೇ?

ಪ್ರಭುವು ಹೊರಟೇನೋ ಹೋದನು. ಆದರೆ ರಾಧಾಕೃಷ್ಣನ ಮುಂದೆ ಕವಿದ ಕತ್ತಲೆ ಮತ್ತಷ್ಟು ದಟ್ಟವಾಯಿತು. "ಯಾರನ್ನು ನಂಬಿ ನಾಳೆಯೋ, ನಾಡಿದ್ದೋ ಶಾಲೆಯನ್ನು ತಿರುಗಿ ಪ್ರಾರಂಭಿಸಬೇಕು? ತಮ್ಮ ಸ್ವಂತದ ಗೋಶಾಲೆಯ ಲಾಭವನ್ನು ಹಾಕಿದರೂ ಐವತ್ತು ರೂಪಾಯಿಗಳಷ್ಟು ಹಾಕಬಹುದು. ತಿಂಗಳಿಗೆ ಐನೂರು ರೂಪಾಯಿಗಳನ್ನು ತಿನ್ನುವ ಸಂಸ್ಥೆಯನ್ನು ತಾವು ಪೊರೆಯುವುದಂತೂ ಅಶಕ್ಯವೇ ಸರಿ" ಎಂಬ ಯೋಚನೆಗಳೇ ಬಲವಾದುವು.

ಪ್ರಭುವಿನಿಂದ ಮೋರೆ ತಿರುಗಿಸಿದರೆ ಡಾ। ನಂದರ ಕಡೆಗೆ ಶರಣು ಹೋಗಬೇಕು. ಅಲ್ಲಿಯೂ ವಿಶ್ವಾಸವಿಲ್ಲ. ಹೋಲಿಕೆಯಿಂದ-ಇವನಿಗಿಂತ ಅವರು ಉತ್ತಮವೆಂದು ತೋರಬಹುದು. ಆದರೆ ಒಪ್ಪಿಗೆ:

ದುಡುಕುವುದು ಸರಿಯಲ್ಲ. ಒಂದೆರಡು ತಿಂಗಳ ಕಾಲ ಊರವರನ್ನು ಬೇಡಿ, ಉಪಾಯದಿಂದ ತಳ್ಳಿ, ಮೆಲ್ಲಗೆ ಮುಂದಿನ ಆಲೋಚನೆಯನ್ನು ಮಾಡುವೆನೆಂದುಕೊಂಡ. ಪತ್ರಿಕೆಗಳಲ್ಲಿ ಪ್ರಕಟಣೆ ಕೊಟ್ಟು ಒಂದು ತಿಂಗಳ ಕಾಲ ಶಾಲೆಯ ಪ್ರಾರಂಭವನ್ನು ಮುಂದೆ ದೂಡಿದನು. ಅನಂತರ ರಾಮಕೃಷ್ಣಯ್ಯನವರನ್ನು ಕೂಡಿಕೊಂಡು ಭಿಕ್ಷಾಟನೆ ಮಾಡುತ್ತ, ಊರಿನ ಶ್ರೀಮಂತರ ಮನೆಯನ್ನು ಸುತ್ತಿದನು. ವಂತಿಗೆ ಪಟ್ಟಿಯಲ್ಲಿ ಹಲವಾರು ಅಂಕೆ ಸಂಖ್ಯೆಗಳು ಬಿದ್ದುವು. ಒಟ್ಟು ಮಾಡಿದರೆ ತಿಂಗಳಿಗೆ ಐವತ್ತು ರೂಪಾಯಿಗಳೂ ಆಗಲೊಲ್ಲವು. ರಾಮಕೃಷ್ಣಯ್ಯ ಬೆರಗುಗೊಂಡು ಅನ್ನುವಂತಾಯಿತು:“ನನ್ನ ಪೆನ್ಶನ್ ನಿಂದ ನೂರು ರೂಪಾಯಿ ನಾನು ಕೊಟ್ಟೇನಪ್ಪ. ಆದರೆ ಜನರ ವಂತಿಗೆ ಇದಕ್ಕೂ ಕಡಿಮೆಯಾದರೆ ಏನು ಮಾಡಬೇಕು? ಡಾ। ನಂದರವರೂ, ನಿವೃತ್ತ ಕಲೆಕ್ಟರ್ ಪುರುಷೋತ್ತಮರೂ, ಹೋದರೆ ಕಣ್ಣುಮುಚ್ಚಿ ಸಾವಿರ ರೂಪಾಯಿ ದಾನ ಮಾಡಬಹುದು.”

ಅದಕ್ಕೆ ರಾಧಾಕೃಷ್ಣನೆಂದ “ಇಷ್ಟೆಲ್ಲ ಕೆಲಸ ತೋರಿಸಿದ ಮೇಲೆಯೂ, ನಾವು ಹೋಗಿ ಬೇಡಿದರೆ ಸಾವಿರ ಕೊಡಬಹುದಾದವರು ಹತ್ತು ರೂಪಾಯಿ ಕೊಡಲು ಹಿಂಜರಿಯುತ್ತಾರೆ”—ಎಂದು ಆಶ್ಚರ್ಯವನ್ನು ವ್ಯಕ್ತಮಾಡಿದರು.

“ಅದು ನನಗೂ ತಿಳಿಯದ ಸಂಗತಿ. ಬೇಡುವವನೂ ಕೂಡ ಶ್ರೀಮಂತನಾಗಬೇಕೆಂಬ ಮಾತು ತೀರ ಸತ್ಯ, ಆದರೆ ಮುಂದಿನ ದಾರಿ ಏನು ಹೇಳಿ? ನಮ್ಮಿಂದ ಇದು ಆಗದ ಕೆಲಸವೆಂದು ಖಂಡಿತವಾಯಿತಷ್ಟೆ?” ಎಂದು ರಾಧಾಕೃಷ್ಣ ನುಡಿದ. ಅವರಿಬ್ಬರು ತುಂಬ ಹೊತ್ತು ತರ್ಕಿಸಿ ಕೊನೆಗೆ, ರಾಮಕೃಷ್ಣಯ್ಯನವರು ಪುರುಷೋತ್ತಮರಲ್ಲಿಗೆ ರಾಯಭಾರಿಯಾಗಿ ಹೋಗಬೇಕೆಂಬ ನಿರ್ಣಯವಾಯಿತು.

ರಾಮಕೃಷ್ಣಯ್ಯ ತಮ್ಮ ಕೆಲಸಕ್ಕೆ ತಡಮಾಡಲಿಲ್ಲ. ಪ್ರಭುವಿನ ಹೆಸರನ್ನು ಬಯಲಿಗೆ ಎಳೆಯದೆ, ಉಪಾಯವಾಗಿ ಮಾತು ತೆಗೆದರು. ಪುರುಷೋತ್ತಮರು‘ನೀವು ನಿಮ್ಮಯಾವ ಸೂಚನೆಗಳಿವೆಯೋ ಅದನ್ನು ಬರಹ ಮೂಲಕವಾಗಿ ಒಪ್ಪಿಸಿದರೆ ನಮ್ಮ ಟ್ರಸ್ಟಿನ ಮುಂದೆ ಇರಿಸುತ್ತೇವೆ, ಅವರ ತೀರ್ಮಾನ ತಿಳಿಸುತ್ತೇವೆ.” ಎಂದು ಹೇಳಿದರು.

ಅದನ್ನು ಕೇಳಿ ರಾಧಾಕೃಷ್ಣ, ರಾಮಕೃಷ್ಣಯ್ಯ ತುಂಬ ವಿಚಾರ ಮಾಡಬೇಕಾಯಿತು. ತಮ್ಮ ಸಂಸ್ಥೆಯನ್ನು ತಲೆಕೆಳಗೆ ಮಾಡುವ ಯಾವ ರೀತಿಯ ವ್ಯವಸ್ಥೆಗೂ ಅವರ ಮನಸ್ಸು ಒಪ್ಪದಾಯಿತು. ಆದುದರಿಂದ ಬರಹ ಮೂಲಕವಾದ ಸೂಚನೆಗಳನ್ನು ಕೊಡಲು ತುಂಬ ಹಿಂದೆ ಮುಂದೆ ನೋಡಿದರು.

ಆದರೆ ಪುರುಷೋತ್ತಮರಾಯರು ಸುಮ್ಮನೆ ಕುಳಿತಿರಲಿಲ್ಲ. ಅಂದೇ ಡಾ| ನಂದರಲ್ಲಿಗೆ ಧಾವಿಸಿದರು. ರಾಮಕೃಷ್ಣಯ್ಯನವರ ರಾಯಭಾರವನ್ನು ಕುರಿತು ತಿಳಿಸಿದರು. ಡಾ| ನಂದರ ಪಾಲಿಗೆ ಅದೇ ಸುದಿನವೆಂದು ತೋರಿತು. ಪ್ರಭುದೇವ ಕಟ್ಟಿದ ಹೆಮ್ಮೆಯ ಅರಮನೆ ಅವನ ಕೈಯಿಂದ ತಪ್ಪುತ್ತಿದೆ ಎಂಬುದಕ್ಕೆ ಆನಂದವಾಯಿತು. ಆ ಆನಂದದೊಡನೆ ಸುಗಮವಾಗಿ ಬೆಳೆದು ಬಂದ ಒಂದು ಸಂಸ್ಥೆ ಅಷ್ಟು ಸುಲಭದಲ್ಲಿ ತಮ್ಮ ಕೈಗೆ ಬರುತ್ತದೆಯೆಂಬ ಹಿಗ್ಗು. ರಾಧಾಕೃಷ್ಣನಿಂದ ಕೇಳಿಕೆ ಬರುವ ಮೊದಲೇ, ತಮ್ಮ ಪರೋಪಕಾರ ಸಮಿತಿಯನ್ನು ಕರೆಯಿಸಿಕೊಂಡರು. "ಅವರವರೊಳಗೇನೋ ಕಚ್ಚಾಟ ಬಂದಿದೆಯಂತೆ. ಸಂಸ್ಥೆ ಸುಲಭದಲ್ಲಿ ನಮ್ಮ ಕೈಗೆ ಬರುವ ಹಾಗಿದೆ. ತುಂಬ ಹೆಸರು ಪಡೆದ ಸಂಸ್ಥೆಯಾದುದರಿಂದ ಎಲ್ಲೆಲ್ಲಿಂದಲೋ ಅದಕ್ಕೆ ಹಣ ಬರುತ್ತಾ ಇದೆ. ನಾವು ಹೊಸ ಸಂಘಮಾಡಿದ್ದಕ್ಕೂ, ಇದು ನಮ್ಮ ಕೈಗೆ ಬರಲು ತಯಾರಾದುದಕ್ಕೂ ಒಳ್ಳೆಯ ಸಂಧಿ ಎಂದು ತಿಳಿಯಬೇಕು" ಎಂದರು. ತುಂಬ ಹೊತ್ತು ವಿಚಾರಮಾಡಿ, ರಾಧಾಕೃಷ್ಣನ ಮನಸ್ಸು ಚಂಚಲವಾಗಿರುವಾಗಲೇ ಅವನನ್ನು ವಶಗೊಳಿಸಿಕೊಳ್ಳಬೇಕೆಂದು ಡಾ| ನಂದರಿಗೆ ಸಮಿತಿಯವರು ಕೆಲಸ ಒಪ್ಪಿಸಿದರು. ಅದು ಮನಸ್ಸಿಗೆ ಬಂದ ಗಳಿಗೆಯಲ್ಲಿಯೇ ಡಾಕ್ಟರರು ಮೋಟಾರನ್ನು ಏರಿ ರಾಧಾಕೃಷ್ಣನ ಮನೆಗೆ ಓಡಿದರು.

ಅವರಿಂದ ರಾಧಾಕೃಷ್ಣನಿಗೆ ತಾನಾಗಿ ಅರ್ಜಿ ಹಿಡಿದು ತಿರುಗಾಡುವ ತಾಪತ್ರಯ ತಪ್ಪಿತು. ತಾಸು ತಾಸುಗಳ ತನಕ ಅವರಲ್ಲಿ ಚರ್ಚೆ ಆಯಿತು. ಡಾ| ನಂದರು ಸಂಸ್ಥೆಯ ಹೊಲ, ಮನೆ, ಕಟ್ಟಡ, ಜನ, ಧನ ಎಲ್ಲ ಕೊಳ್ಳುವವರಂತೆ ಮಾತನಾಡಿದರು. ತಮ್ಮ ಹಣ ಸುರಿಯುತ್ತೇವೆ ಎಂದರು. ಅಷ್ಟೆಲ್ಲ ಸೊತ್ತುಗಳಿಗೆ ಮೂವತ್ತು ಸಾವಿರ ರೂಪಾಯಿಗಳ ಬೆಲೆ ಕಟ್ಟಿ, ಅದಕ್ಕೆ ಮೂವರಿಗೆ ಪ್ರಾತಿನಿಧ್ಯಕೊಟ್ಟು, ತಾವು ಐವತ್ತು

ಸಾವಿರ ರೂಪಾಯಿಗಳನ್ನು ಕೂಡಿಸಿ, ಅವಕ್ಕೆ ಸಮನಾಗಿ ಐವರರು ಪ್ರತಿನಿಧಿಗಳನ್ನು ಆರಿಸುತ್ತೇವೆ—ಎಂದು ಹೇಳಿದರು. ಹೀಗೆ ಎಂಟು ಮಂದಿ ಆಡಳಿತೆಗಾರರ ಉಪಸಂಸ್ಥೆಯು ತಮ್ಮ ಪರೋಪಕಾರ ಸಂಘದ ಆಶ್ರಯದಲ್ಲಿ ನಡೆಯುವುದೆಂದು ಸೂಚನೆಯನ್ನು ಮಾಡಿದರು.

ಆದರೆ ರಾಧಾಕೃಷ್ಣ ಈ ಎಲ್ಲ ವಿಚಾರಗಳನ್ನು ಹಿಂದು ಮುಂದು ಇಲ್ಲದೆ ಒಮ್ಮೆಗೇ ಒಪ್ಪಿಕೊಳ್ಳಲಾರ. ಆತನೆಂದ "ನಿಮಗೆ ಇಷ್ಟವಿದ್ದರೆ ಅದರ ದೈನಂದಿನ ಆಡಳಿತೆ ನಡೆಯಿಸಿರಿ. ಅದಕ್ಕೆ ಬೇಕಾದ ಹಣವನ್ನು ಒದಗಿಸಿರಿ. ಎಂದಿನಂತೆ ನಾವು ಶಾಲೆಯ ಕೆಲಸವನ್ನು ಮಾಡುತ್ತೇವೆ. ನಾನೂ, ಶ್ಯಾಮ ಪ್ರತಿಫಲ ಇಲ್ಲದೆಯೆ ದುಡಿಯುತ್ತೇವೆ. ಅದರಂತೆ ಒಪ್ಪಂದವಾಗಲಿ. ಮುಂದೆ ಕೆಲಸ ನಡೆಯುವ ವಿಶ್ವಾಸ ಉಂಟಾದರೆ ಯಾವ ಪರಿವರ್ತನೆಗೂ ನಾನು ಸಿದ್ಧನೇ. ಶಾಲೆಯ ಹಿತಕ್ಕಾಗಿ ಏನನ್ನೂ ಮಾಡುತ್ತೇನೆ. ಈ ಭೂಮಿ ಸ್ಥಳ ನನ್ನದು, ಶ್ಯಾಮನದು; ಮುಂದೆ ನಮಗೆ ವಿಶ್ವಾಸವಾದರೆ ಈ ಸಂಸ್ಥೆಯು ಹೀಗೆಯೇ ನಡೆಯುತ್ತದೆ ಎಂದು ತೋರಿದರೆ ಅದನ್ನೂ ಬಿಟ್ಟು ಕೊಡುತ್ತೇವೆ. ಅಲ್ಲಿಯ ತನಕ ನೀವು ಉಪಾಧ್ಯಾಯರ ವೇತನ ವಸತಿ, ಗೃಹಗಳ ಭಾರ ವಹಿಸಿ ಕೊಂಡರಾಗುತಿತ್ತು."

ಹಿಂದೊಮ್ಮೆ ಇವೇ ಮಾತುಗಳನ್ನೊಪ್ಪಿದ್ದ ಡಾಕ್ಟರರು ಈಗ ಅನುಮಾನ ತಾಳಿದರು. "ಈ ಶರ್ತಗಳ ಮೇಲೆ ಟ್ರಸ್ಟಿನವರು ಒಪ್ಪುವುದು ಹೇಗೋ; ಅಂತೂ ನಿಮ್ಮ ಸೂಚನೆಗಳನ್ನು ಅವರ ಮುಂದೆ ಇರಿಸುತ್ತೇನೆ" ಎಂದರು.

ಅವರು ಹೊರಟು ಹೋದಮೇಲೆ ರಾಮಕೃಷ್ಣಯ್ಯನೂ, ರಾಧಾಕೃಷ್ಣನೂ ಲೌಕಿಕರಂತೆ ಒಂದು ಉಪಾಯ ಹೂಡಿದರು. ಅದು ರಾಮಕೃಷ್ಣಯ್ಯನವರ ಪ್ರೇರಣೆ. ಅವರು ಹೋಗಿ "ಡಾಕ್ಟರರೇ, ನೀವು ಹೇಗೆ ಮಾಡುವಿರೋ ಮಾಡಿ. ಇಲ್ಲಿ ಹುಟ್ಟಿದ ಸಂಸ್ಥೆಯನ್ನು ಈ ಊರಿನವರು ನಡೆಯಿಸಿಕೊಂಡು ಹೋಗಬೇಕೆಂಬುದು ನಮ್ಮ ಇಷ್ಟ. ರಾಧಾಕೃಷ್ಣನವರು ಪಂಜಾಬಿನತನಕ ಹೋಗಿದ್ದರು. ಅಲ್ಲಿನ ಆರ್ಯ ಸಮಾಜದವರು ಇದನ್ನು ನಡೆಯಿಸಿಕೊಂಡು ಹೋಗುವುದಕ್ಕೆ ಒಪ್ಪಿದ್ದಾರೆ. ಊರವರೇ ಆ ಭಾರವನ್ನು ವಹಿಸಿದರೆ ಅವರ ಸಹಾಯವನ್ನು ನಾವು ಬೇಡಬೇಕಿಲ್ಲ.

ಆದರಿಂದ ನೀವು ಬೇಗನೆ ವಿಚಾರಮಾಡಿ ತಿಳಿಸಿದರೆ ಒಳಿತು" ಎಂದರು. "ಆಗಲಿ, ನೋಡುವ" ಎಂದರು ಡಾಕ್ಟರು. ರಾಮಕೃಷ್ಣಯ್ಯನವರದ್ದು ಕೇವಲ ಲೌಕಿಕ; ಬರಿಯ ಮಾತಿನಲ್ಲಿ ಹೇಳುವುದಾದರೆ ಠಕ್ಕು. ಅವರಿಗೆ ಅನುಮಾನವಿಷ್ಟೆ — ಡಾ। ನಂದರ ಸೂಚನೆ ವ್ಯಾಪಾರಿಗಳ ಸೂಚನೆ. ಪಾಲುಬಂಡವಳ ಸಂಸ್ಥೆ ಹೊರಡಿಸುವ ರೀತಿಯಂತೆ, ಸಂಸ್ಥೆಯ ಮೌಲ್ಯ ಮಾಡಿ, ಪ್ರಾತಿನಿಧ್ಯ ಕೊಟ್ಟು, ತಾವು ಬಹುಮತ ಕೈಯ್ಯಲ್ಲಿಟ್ಟು ಕೊಂಡು ಕುಣಿಸುವ ರೀತಿ ಪರೋಪಕಾರದ ಲಕ್ಷಣವಾಗಿ ಕಾಣಿಸಲಿಲ್ಲ. ಅದರಿಂದ ನಾಳೆ ಬರುವ ಹಾನಿಯನ್ನು ಇಂದೇ ಮನಗಾಣುವುದು ಸುಲಭವಿತ್ತು. ಅವರಂತೆ ರಾಧಾಕೃಷ್ಣನು ಆ ಸೂಚನೆಗೆ ತಲೆವಾಗಲಾರ.

ಡಾ। ನಂದರು ತಮ್ಮೆಲ್ಲ ಗೆಳೆಯರ ಮುಂದೆ ಉದ್ಯೋಗ ಶಾಲೆ ತಮ್ಮ ಕೈಗೆ ಬಿತ್ತೆಂಬಷ್ಟು ಧೈರ್ಯದಿಂದ "ನಾವು ಟೆಕ್ನಿಕಲ್ ಕಾಲೇಜು ನಡೆಯಿಸುತ್ತೇವೆ. ಹೊಸ ಶಾಂತಿನಿಕೇತನ ಸೃಷ್ಟಿಸುತ್ತೇವೆ" ಎಂದು ಹೆಗ್ಗಳಿಕೆಯನ್ನು ಕೊಚ್ಚಿಕೊಂಡದ್ದಾಯಿತು. ತಮ್ಮ ಆಸೆ ಸಾಧಿಸುವುದೆಂಬ ಧೈರ್ಯದಿಂದ ಪ್ರಭುದೇವನ ಮೇಲಿನ ಸೇಡು ತೀರಿಸುವುದಕ್ಕೋ ಆರ್ಯ ಸಮಾಜದವರ ಬರಬಹುದಾದ ಕೈಯ್ಯನ್ನು ತಡೆಯುವುದಕ್ಕೋ-ಉಪಾಯವೆಂದು ರಾಧಾಕೃಷ್ಣನ ಹೇಳಿಕೆಯನ್ನು ಒಪ್ಪಿಕೊಂಡರು. ಆತ ಅದರ ಆರ್ಥಿಕ ಆಡಳಿತೆಯನ್ನು ಅವರ ವಶಕ್ಕೆ ಒಪ್ಪಿಸಿ ಶಾಲೆಯ ದುರ್ವಿಧಿಯನ್ನು ಒಂದು ವರ್ಷಕಾಲ ಮುಂದೆ ತಳ್ಳಿದನು.

ನಾಲ್ಕನೆಯ ವರ್ಷ ಅವರ ಉದ್ಯೋಗ ಶಾಲೆ ತೊಡಗಿತು. ತಮ್ಮ ಟ್ರಸ್ಟಿನ ವರವಾಗಿ ನಿವೃತ್ತ ಪುರುಷೋತ್ತಮರು ದಿನಂದಿನ ಹೊಸ ಸಂಸ್ಥೆಯನ್ನು ಸಂದರ್ಶಿಸತೊಡಗಿದರು. ತಮಗೆ ಅವರಲ್ಲಿರುವ ಪರಮಾಸಕ್ತಿಯನ್ನು ಒಮ್ಮೆಗೇ ಸುರಿದರು. ಬರಿಯ ಎಂಟು ದಿನದೊಳಗಾಗಿ ನೂರಾರು ಟೀಕೆ, ಟಿಪ್ಪಣಿ, ಸಲಹೆಗಳನ್ನು ದಯಪಾಲಿಸಿದರು. ನಿತ್ಯವೂ ರಾಧಾಕೃಷ್ಣನ ಕಿವಿಯಲ್ಲಿ "ನೀವು ಇದನ್ನು ಸಂಪೂರ್ಣವಾಗಿ ನಮಗೆ ಒಪ್ಪಿಸಿ ಕೊಟ್ಟರೆ ನಿಮಗೆ ಯಾವ ಚಿಂತೆಯೂ ಇಲ್ಲ. ನಾಳೆಗೆ ಈ ಗೋಶಾಲೆಯನ್ನು ಐನೂರು ಹಸುಗಳ ಒಂದು ಡೈರಿ ಫಾರ್ಮಾಗಿ ಮಾರ್ಪಡಿಸಿ ಬಿಡುತ್ತೇನೆ. ನಮ್ಮ ಟ್ರಸ್ಟಿನಲ್ಲಿ ಐದು ಲಕ್ಷ ರೂಪಾಯಿಗಳ ಬಂಡವಳವಿದೆ. ಇನ್ನು ಐದು ಲಕ್ಷಗಳ ವಚನ ಬಂದಿದೆ. ಏನು

ಬೇಕಾದರೂ ಮಾಡಬಹುದು" ಎಂದರು. ಅದಕ್ಕೆ ರಾಧಾಕೃಷ್ಣ "ಏನು ಮಾಡಲಿ? ನಾನೂ ಸಂಸಾರಿಗ; ನಮ್ಮ ಶ್ಯಾಮನೂ ಹಾಗೆಯೆ. ಮಕ್ಕಳು ಮರಿಗಳಿವೆ. ಗೋಶಾಲೆಯೇ ನಮ್ಮ ಜೀವನದ ದಾರಿ. ಅದನ್ನು ಮಾರಿಕೊಂಡು ಪರರ ಮುಖವನ್ನು ನೋಡುವ ಇಷ್ಟ ನಮಗಿಲ್ಲ. ಅದು ಜೀವನಕ್ಕಿದ್ದರೆ ಆಗ ಶಾಲೆಯ ಕೆಲಸವನ್ನು ನಾವು ಧರ್ಮಾರ್ಥವಾಗಿ ಮಾಡಬಹುದು" ಎಂದನು. ಅದಕ್ಕವರು "ಹಾಗಲ್ಲ ನಾನು ಅಂದದ್ದು. ನೀವು ಶಾಲೆಯಲ್ಲಿ ವೇತನ ತಗೆದುಕೊಂಡು ಕೆಲಸ ಮಾಡಬೇಕು. ಆಗ ಸ್ವಂತ ಲಾಭ, ನಿಮ್ಮ ಸ್ವಂತ ಯೋಚನೆಗಳು ಯಾವುದೂ ಇರುವುದಿಲ್ಲ. ಅಂದರೆ ಪೂರ್ಣ ಮನಸ್ಸಿನಿಂದ ಕೆಲಸ ಮಾಡಲಿಕ್ಕೆ ಬರುತ್ತದೆ."

"ಸ್ವಾಮಿ, ಪೂರ್ಣ ಮನಸ್ಸಿನ ವಿಚಾರ ನೀವು ಹೇಳುತ್ತೀರಿ. ಅಷ್ಟೆಲ್ಲ ಮನಸ್ಸು ಹಾಕದಿರುತ್ತಿದ್ದರೆ ಮೂರು ವರ್ಷದೊಳಗೆ ನೀವು ಈ ಅಭಿವೃದ್ಧಿಯನ್ನು ಕಾಣುವುದು ಶಕ್ಯವೇ ಇದ್ದಿಲ್ಲ" ಎಂದನು.

ಅಂತೂ ಇದೇ ರೀತಿಯಲ್ಲಿ ಅವರೊಳಗೆ ಆಗಾಗ ಚರ್ಚೆಯು ನಡೆಯುವ ಸಂಭವ ಬಂದಿತು. ಇತ್ತ ಪ್ರಭುದೇವ ಕೈಬಿಟ್ಟಂದಿನಿಂದ ಹೊರಗಿನ ಸಹಾಯವು ಸಂಪೂರ್ಣವಾಗಿ ನಿಂತಿದೆ. ಅವನು ಕೊಡುತ್ತಿದ್ದ ಹಣ ಅದಕ್ಕೆ ಸಂಪೂರ್ಣ ಆಶ್ರಯವಾಗಿತ್ತು. ಹೊರಗಿನಿಂದ ಬೇಕಾದಷ್ಟು ಹಣ ಬರುತ್ತಾ ಇದೆ. ಅದನ್ನು ಬಳಸಿಯೇ, ಉದ್ಯೋಗ ಶಾಲೆ ನಡೆಯಿಸಬಹುದು ಎಂಬ ಡಾ। ನಂದರವರ ತರ್ಕಕ್ಕೆ ಕೊನೆ ಬಂದಿತು. ಅವರು ಸಭೆಯ ಆರ್ಥಿಕ ಸುಧಾರಣೆಗಾಗಿ ಒಂದು ವರದಿಯನ್ನು ತಯಾರು ಮಾಡುವರೆ ಪುರುಷೋತ್ತಮರನ್ನು ಕೇಳಿದರು. ಅಂಥ ವರದಿಯೊಂದನ್ನು ಪುರುಷೋತ್ತಮರು ಚಾಣಾಕ್ಷ್ಯತನದಿಂದ ತಯಾರಿಸಿ ತಮ್ಮ ಸಭೆಯ ಮುಂದಿಟ್ಟರು. ಆ ಸಭೆಯು ಉದ್ಯೋಗಮಂದಿರದಲ್ಲಿಯೇ ಒಂದುದಿನ ನಡೆಯಿತು. ಪರೋಪಕಾರ ಸಂಘದ ಐವರು ಮಹಾನುಭಾವರೂ, ರಾಮಕೃಷ್ಣಯ್ಯ, ರಾಧಾಕೃಷ್ಣ, ಶ್ಯಾಮ, ಇಷ್ಟು ಜನ ಅದಕ್ಕೆ ಹಾಜರಿದ್ದರು. ಪ್ರಾರಂಭದಲ್ಲಿ ಪುರುಷೋತ್ತಮರ ಉಪನ್ಯಾಸವಾಯಿತು. ಗಾಂಧೀಜಿಯವರ ಹೆಸರನ್ನು ಎತ್ತಿದರು. ವಾರ್ಧಾ ಶಿಕ್ಷಣದ ಉಪನ್ಯಾಸ ಮಾಡಿದರು. ವಿದ್ಯಾರ್ಥಿಗಳ ದುಡಿಮೆಯಿಂದಲೇ ಉದ್ಯೋಗ ಶಾಲೆ ಆರ್ಥಿಕ ಸ್ವಾತಂತ್ರ್ಯ ಪಡೆಯುವುದು ಸಾಧ್ಯ" ಎಂದರು.

"ಹುಡುಗರು ದುಡಿದಲ್ಲಿ, ಯೋಗ್ಯ ಒಡವೆಗಳನ್ನು ತಯಾರಿಸಿ ಮಾರಾಟ ಮಾಡಿದಲ್ಲಿ, ಹೊರಗಿನಿಂದ ಹೆಚ್ಚು ಹಣ ತಂದು ಸುರಿಯಬೇಕಾಗಿಲ್ಲ" ಎಂದು ಸೂಚಿಸಿದರು. ವಸತಿ ಗೃಹದ ಅಭಿವೃದ್ಧಿಗಾಗಿಯೂ ಸೂಚನೆಗಳು ಬಂದುವು. "ಇಲ್ಲಿರುವವರು ತೀರ ಬಡವರ ಮಕ್ಕಳು. ಅವರ ಸಲುವಾಗಿ ಇಷ್ಟೊಂದು, ವೆಚ್ಚಮಾಡಬೇಕಾಗಿಲ್ಲ. ಮನೆಯಲ್ಲಿ ಅವರ ಊಟ ಹೇಗಿರಬಹುದೆಂದು ಗೊತ್ತೇ ಇದೆ. ನಾಳೆ ಅವರು ಮನೆಗೆ ತಿರುಗಿ ಹೋದಮೇಲೆ ಬಡತನದಲ್ಲೇ ಬಾಳಬೇಕಾದವರು. ಹಾಲು, ಮಜ್ಜಿಗೆ, ಉಪಾಹಾರಗಳೆಂದು ಶ್ರೀಮಂತರ ಮಕ್ಕಳಹಾಗೆ ಅವರನ್ನು ಬೆಳೆಯಿಸಿಕೊಂಡು ಹೋಗುವುದರಲ್ಲಿ ಅರ್ಥವಿಲ್ಲ. ಅಲ್ಲಿನ ಖರ್ಚು ವೆಚ್ಚ ಕಡಿಮೆ ಮಾಡಲೇಬೇಕು. ಧರ್ಮಾರ್ಥ ಊಟವನ್ನು ಅಲ್ಲಿದ್ದವರೆಲ್ಲರಿಗೂ ಹಾಕುವ ಆವಶ್ಯಕತೆ ಕಾಣುವುದಿಲ್ಲ. ಅಲ್ಲದೆ ಉಪಾಧ್ಯಾಯರ ವೇತನ ತುಂಬ ಹೆಚ್ಚಿನದೆಂದು ನನಗೆ ಕಾಣುತ್ತದೆ. ಇಂಥ ಪರೋಪಕಾರದ ಕೆಲಸದಲ್ಲಿ ಅವರ ತ್ಯಾಗ ಇಷ್ಟಾದರೂ ಇರಬೇಡವೇ? ನಾನು ಹೆಚ್ಚಿನ ತ್ಯಾಗವನ್ನು ಅವರಿಂದ ಅಪೇಕ್ಷಿಸುವುದಿಲ್ಲವಾದರೂ, ಸಂಬಳದಲ್ಲಿ ಶೇಕಡಾ ಇಪ್ಪತ್ತೈದರಷ್ಟಾದರೂ ಕಡಿತಕ್ಕೆ ಒಪ್ಪಲೇ ಬೇಕು. ಅಲ್ಲದೆ ಇನ್ನೊಂದು ಮುಖ್ಯವಾದ ಸೂಚನೆಯಿದೆ-ಈ ಶಾಲೆಗೆ ಕೃಷಿ, ಹಯನುಗಾರಿಕೆ ಸ್ವಂತವಾಗಿ ಬೇಕೇಬೇಕು. ಶಾಲೆಯ ಹಿತದ ದೃಷ್ಟಿಯಿಂದ, ರಾಧಾಕೃಷ್ಣನವರು ಅವುಗಳನ್ನು ಶಾಲೆಗೇನೇ ಬಿಟ್ಟುಕೊಡಬೇಕು" ಎಂದರು. ಡಾ। ನಂದರವರು ಅದನ್ನು ಅನುಮೋದಿಸುತ್ತ ಇನ್ನೊಂದು ಉಪನ್ಯಾಸವನ್ನು ಮಾಡಿದರು. ರಾಧಾಕೃಷ್ಣನಿಗಾಗಿ ತಮ್ಮ ಹೊಗಳಿಕೆಯನ್ನೆಲ್ಲ ವೆಚ್ಚಮಾಡಿದರು. ಈ ಕಾಲದಲ್ಲಿ ಸ್ತಬ್ಧರಾಗಿ ಕೇಳುತ್ತಿದ್ದ ವ್ಯಕ್ತಿಗಳೆಂದರೆ ರಾಧಾಕೃಷ್ಣ, ಶ್ಯಾಮ ಮತ್ತು ರಾಮಕೃಷ್ಣಯ್ಯ ಮಾತ್ರ.

ನಿತ್ಯವೂ ಹಣಕಾಸಿನ ಪ್ರಪಂಚದಲ್ಲಿ ಕೇಳಾಡುತ್ತಿದ್ದ ಉಳಿದ ಮೂರು ಮಂದಿ ಒಮ್ಮೆಗೇ ಆ ಸೂಚನೆಗಳನ್ನು ಅಂಗೀಕರಿಸಿದರು. ಪುರುಷೋತ್ತಮರ ಸೂಚನೆಗಳನ್ನು ತಾವು ಸ್ವೀಕರಿಸಿದ್ದೇ ಆದರೆ, ಯಾವ ಹೆಚ್ಚಿನ ಶ್ರಮವೂ ಇಲ್ಲದೆ ಉದ್ಯೋಗ ಮುಂದಿರ ನಡೆಯುತ್ತದೆ; ಅದನ್ನು ನಡೆಯಿಸಿಕೊಂಡು ಹೋಗುವ ಕೀರ್ತಿ ಮಾತ್ರ ಸುಲಭವಾಗಿ ತಮ್ಮದಾಗುತ್ತದೆ ಎಂಬುದು ಅವರ ಅಂತರಂಗದ ಆಸೆಯಾಗಿತ್ತು. ಅದನ್ನು ಮರಿ

ಯಿಸುವುದರ ಸಲುವಾಗಿ, ತಮ್ಮ ಅಭಿಮಾನಗಳನ್ನೆಲ್ಲ ವ್ಯಕ್ತಪಡಿಸಿದರು. ಒಬ್ಬೊಬ್ಬರು ಒಂದೊಂದು ಉಪನ್ಯಾಸಮಾಡಿದರು. ಪುರುಷೋತ್ತಮರು ಸಭೆ ಮುಗಿಯುವ ಸಮಯದಲ್ಲಿ "ಇಲ್ಲಿ ಕಲಿಸುವ ಔದ್ಯೋಗಿಕ ಶಿಕ್ಷಣ ಹೆಚ್ಚಿನದಲ್ಲ. ಮನುಷ್ಯನೆಂಬ ಜೀವಿಗೆ ಆತ್ಮವಿದೆ. ಔದ್ಯೋಗಿಕ ಶಿಕ್ಷಣದ ಜತೆಗೆ ನಾವು ಧಾರ್ಮಿಕ ಶಿಕ್ಷಣವನ್ನೂ ಕೊಡಬೇಕು. ಪ್ರತಿ ದಿನ ಅರ್ಧ ತಾಸಾದರೂ ಮಕ್ಕಳಿಗೆ ಭಗವದ್ಗೀತೆಯ ಶಿಕ್ಷಣ ಕೊಡಬೇಕು. ಅವರಲ್ಲಿ ಜ್ಞಾನೋದಯವಾಗಬೇಕು" ಎಂದು ತಮ್ಮ ಪಾರಮಾರ್ಥ ಬುದ್ಧಿಯನ್ನೂ ಪ್ರದರ್ಶಿಸಿದರು.

ಡಾ। ನಂದರವರು ಇಲ್ಲಿಯ ತನಕವೂ ಮೌನವಾಗಿದ್ದ ರಾಧಾಕೃಷ್ಣನನ್ನು ನೋಡಿ "ನಿಮ್ಮ ಅಭಿಪ್ರಾಯವನ್ನು ನೀವು ಹೇಳಲೇ ಇಲ್ಲವಲ್ಲ?" ಎಂದರು. ಆತ ಎದ್ದು ನಿಂತು "ನಾನು ಈ ಒಂದು ವರ್ಷ ಕಳೆಯುವ ತನಕ, ಮಧ್ಯದಲ್ಲಿ ಯಾವ ಬದಲಾವಣೆಯೂ ಬೇಡವೆನ್ನುತ್ತೇನೆ. ಈಗಾಗಲೇ ಮೂರು ತಿಂಗಳ ಕಾಲ ಕಳೆದಿದೆ. ಇನ್ನು ನಡೆಯಬೇಕಾದುದು ಏಳು ತಿಂಗಳು. ಅಲ್ಲಿಯ ತನಕ ಕಾದು ನೋಡಿ, ಇಂಥ ಬದಲಾವಣೆ ಅವಶ್ಯವಾದರೆ ಮಾಡಿ ನೋಡಬಹುದು. ನಡುವೆ ಏನಾದರೂ ಮಾಡಿದಲ್ಲಿ ವಿದ್ಯಾರ್ಥಿಗಳಿಗೂ ಕಷ್ಟ, ಇಲ್ಲಿನ ಉಪಾಧ್ಯಾಯರಿಗೂ ತೊಂದರೆಯೇ" ಎಂದನು.

ಅದಕ್ಕೆ ಪುರುಷೋತ್ತಮರು "ನಾನು ಹೇಳಿದ ಮಾರ್ಗವನ್ನು ಆಚರಣೆಗೆ ತಂದುದಾದರೆ ಏಳು ತಿಂಗಳ ಅವಧಿಯಲ್ಲಿ ಸುಮಾರು ಎರಡುಸಾವಿರ ರೂಪಾಯಿಗಳಷ್ಟು ಉಳಿಸಲು ಬರುತ್ತದೆ" ಎಂದು ನುಡಿದರು. ಅವರೆಲ್ಲರ ಹಟವೂ ಒಂದೇ ಬಗೆಯಾಗಿ ತೋರಿಯುತ್ತಿದ್ದುದನ್ನು ಕಂಡು ರಾಧಾಕೃಷ್ಣ ಸ್ಪಷ್ಟವಾದ ಉತ್ತರವನ್ನು ಹೇಳಬೇಕಾಗಿ ಬಂದಿತು. ಆತ "ಸ್ವಾಮಿ, ತಾವು ಗಾಂಧಿಯವರ ಹೆಸರನ್ನು, ವಾರ್ಧಾ ಶಿಕ್ಷಣದ ಹೆಸರನ್ನೂ ಹೇಳುತ್ತಿದ್ದೀರಿ. ಆ ಹೆಸರುಗಳಿಗೆ ನನ್ನ ಮನ್ನಣೆ ಇದೆ. ಆದರೆ ಇಷ್ಟೆಲ್ಲ ಕೆಲಸ ಮಾಡಿದುದರ ಮೇಲೆ ನನ್ನ ಅಭಿಪ್ರಾಯ ಬೇರೆಯೇ ಆಗಿದೆ. ಹುಡುಗರು ನೂರಾರು ಪದಾರ್ಥಗಳನ್ನು ಮಾಡುವಾಗ ಕಲಿಯುವ ಕಾಲಕ್ಕೆ ಅವುಗಳಲ್ಲಿ ಹಾಳಾಗುವುವೇ ಹೆಚ್ಚು. ಅವರಿಂದ ಕಾರ್ಖಾನೆಯಲ್ಲಿ ದುಡಿಸುವ ಹಾಗೆ, ಒಂದೇ ರೀತಿಯ ಮಾಲನ್ನು

ಮಾಡಲು ವಿಧಿಸಿದರೆ ಆಗದು. ಅವರು ತಮ್ಮ ಕಸಬಿಗೆ ಸಂಬಂಧಪಟ್ಟ ಎಲ್ಲ ವಿದ್ಯೆಗಳನ್ನು ತಿಳಿಯುವಂತೆ, ಹಲವಾರು ಪ್ರಯೋಗಗಳನ್ನು ರೂಪಿಸಬೇಕಾಗುತ್ತದೆ. ಹಾಗಿರುವಲ್ಲಿ ಕೃಷಿಯೊಂದನ್ನು ಬಿಟ್ಟರೆ, ಉಳಿದವುಗಳಿಂದ ಹಣ ಸಂಪಾದನೆಯಾದೀತೆಂದು ನಾನು ತಿಳಿಯುವುದಿಲ್ಲ. ಸಂಪಾದನೆಗಿಂತ ಹಾಳಾಗುವುದೇ ಹೆಚ್ಚು.

"ಇನ್ನು ಉಪಾಧ್ಯಾಯರ ವೇತನದ ವಿಷಯ ತಮ್ಮ ಅಭಿಪ್ರಾಯ ಕೇಳಿದೆ. ನಾನು ವೇತನ ಅಪೇಕ್ಷಿಸುತ್ತಲಿಲ್ಲ ಎಂದು ತಮಗೆ ಗೊತ್ತು. ಉಳಿದವರ ಸಂಸಾರದ ಸುಖದುಃಖಗಳನ್ನು ನಿತ್ಯ ನೋಡುತ್ತಿದ್ದೇನೆ. ಅವರು ಪಡುತ್ತಿರುವ ಶ್ರಮಕ್ಕೆ ನಾವು ಕೊಡುತ್ತಿರುವ ವೇತನ ಸಾಲದು. ಹೊಟ್ಟೆಗೆ ಸಾಕಷ್ಟು ಇರುವವರಿಂದ ನಾವು ತ್ಯಾಗ ಬೇಡಬೇಕು; ಇಲ್ಲದವರಿಂದಲ್ಲ. ಇನ್ನು ವಸತಿಗೃಹದ ವಿಚಾರವಾಗಿ ತಾವು ಹೇಳಿದ್ದೂ ತಿಳಿಯಿತು. ಇಲ್ಲಿ ಹುಡುಗರು ಕೂತು ಓದುತ್ತಲಿಲ್ಲ. ಐದಾರು ತಾಸು ಶರೀರಶ್ರಮ ಪಡುತ್ತಿದ್ದಾರೆ. ಆ ದುಡಿತಕ್ಕೆ ತಕ್ಕಂತೆ ಹೊಟ್ಟೆಗೆ ಅನ್ನಬೀಳಬೇಕು. ಬೆಳೆಯುವ ಕಾಲಕ್ಕೆ ಅವರ ಶರೀರವನ್ನು ಕುಂದಿಸಬಾರದು. ಇಲ್ಲಿ ಅವರಿಗೆ ಪಾಯಸ, ಪರಮಾನ್ನಗಳ ಊಟ ಹಾಕುತ್ತಲಿಲ್ಲ. ಅವರಿಗೆ ಕೊಡುತ್ತಿರುವ ಮಜ್ಜಿಗೆ, ತರಕಾರಿಗಳೇ ಹೆಚ್ಚೆಂದು ನೀವು ತಿಳಿಯಬಾರದು" ಎನ್ನುತ್ತಲೇ ಪುರುಷೋತ್ತರು ಆಕ್ಷೇಪಿಸುತ್ತ "ಅವರು ಮನೆಯಲ್ಲಿ ಅಷ್ಟೆಲ್ಲವನ್ನು ತಿನ್ನುವವರಾದರೆ ಹೇಳಿ" ಎಂದರು. ಆತ ಅದಕ್ಕೆ "ಮನೆಯಲ್ಲಿ ಉಪವಾಸವಿರುವುದಕ್ಕೂ ಸಾಕು. ಇಲ್ಲಿ ನಾವು ಸಮನಾಗಿ ಉಂಡು ಬದುಕಿರುವಷ್ಟು ಕಾಲ, ಈ ನ್ಯಾಯ ಮಾಡಲು ಬರುವುದಿಲ್ಲ" ಎನ್ನಬೇಕಾಯಿತು. ಪುರುಷೋತ್ತಮರ ಮುಖ ಗಂಟಾಯಿತು. ನಂದರವರು 'ವಿಷಯವನ್ನು ಮುಂದಿನ ಸಭೆಗೆ ಇರಿಸುವ' ಎಂದರು. ಬಾಗಿಸುವಲ್ಲಿ, ಬಲವಂತ ಮಾಡಿದರೆ ಅದು ಬಾಗದೆ ಮುರಿದೀತು, ಎಂದು ಅಂದಾಜು ಮಾಡಿದರು.

ಈ ವಿರಸದ ದೆಸೆಯಿಂದಾಗಿ ಪುರುಷೋತ್ತಮರ ಕಡ್ಡಾಯದ ಭಗವದ್ಗೀತೆಯ ಶಿಕ್ಷಣ ವಿಚಾರ ಮರತೇ ಹೋಯಿತು. ಸಭೆ ಚದರಿತು.

ಅಲ್ಲಿಂದ ಮುಂದೆ ಶಾಲೆಗೆ ಪುರುಷೋತ್ತಮರು ದಿನದಿಂದ ದಿನ ಬರುವುದನ್ನು ನಿಲ್ಲಿಸಿಬಿಟ್ಟರು. ಆದರೆ ಮುಖ್ಯ ಸಂದರ್ಭಗಳಲ್ಲಿ ಬಂದೇ

ಬರುತ್ತಿದ್ದಾರೆ. ಅಷ್ಟೇ ಅಲ್ಲ-ಮಂಗಳೂರಿಗೆ, ದೊಡ್ಡವನೆಂಬ ಯಾವ ಮನುಷ್ಯ ಬರಲಿ, ಅವನನ್ನು ಮೋಟರಿನಲ್ಲಿ ಕುಳ್ಳಿರಿಸಿಕೊಂಡು ತನ್ನ ಉದ್ಯೋಗ ಮಂದಿರದ ದರ್ಶನಕ್ಕೆ ಕರತರುತ್ತಾರೆ. ಪೋಲೀಸ್ ಐ. ಜಿ. ಬಂದರೆ ಅವರು, ವಿದ್ಯಾಮಂತ್ರಿ ಬಂದರೆ ಅವರು, ದೇಶಭಕ್ತರು ಬಂದರೆ ಅವರು, ಹೈಕೋರ್ಟು ಜಡ್ಜಿಗಳು ಬಂದರೆ ಅವರು, ಸ್ವಾಮಿಗಳು ಬಂದರೆ ಅವರು—ಒಟ್ಟಿನಿಂದ ಸಮಾಜಗಣ್ಯರು ಯಾರು ಊರಿಗೆ ಬಂದರೂ ಸರಿಯೇ, ಅವರನ್ನು ಕರೆದು ತಂದು-"ಇಂಥ ಭಾರಿಯ ಸಂಸ್ಥೆಯನ್ನು ನಡೆಯಿಸುತ್ತಿದ್ದೇವೆ, ಲಕ್ಷಾಂತರರೂಪಾಯಿ ವೆಚ್ಚಮಾಡಿದ್ದೇವೆ, ಆದರ್ಶ ಡೈರಿ ಇರಿಸಿದ್ದೇವೆ, ಅನಾಥ ಬಾಲಕರಿಗೆ ಆರೋಗ್ಯ ಪೂರ್ಣ ಅನ್ನ ಹಾಕುತ್ತಿದ್ದೇವೆ" ಎಂದು ಸಂಸ್ಥೆಯ ಹೆಮ್ಮೆಯ ಹಾರಕ್ಕೆ ಮಾತ್ರ ತಲೆಯೊಡ್ಡುತ್ತಿದ್ದರು. ಅಲ್ಲಿ ಬಂದು ಹೋಗುವ ನಂದರಾಗಲೀ, ಇವರಾಗಲೀ, ಒಂದು ದಿನವಾದರೂ ಆ ಸಂಸ್ಥೆಗೆ ಬೆವರು ಸುರಿಸಿ, ಶ್ರಮಿಸಿದ ವ್ಯಕ್ತಿಗಳ ವಿಚಾರದಲ್ಲಿ ಸ್ಮರಣೆಯ ಮಾತುಗಳನ್ನಾಡಲಿಲ್ಲ. ಬಂದ ಅತಿಥಿಗಳಿಗೆ ಉಪಾಹಾರ ಏರ್ಪಡಿಸಿದರೆ, ಅವರೊಡನೆ ಪಂಚ ಮಹಾಭೂತಗಳಾದ ತಾವು ಕುಳಿತಿದ್ದು, ರಾಧಾಕೃಷ್ಣ, ರಾಮಕೃಷ್ಣಯ್ಯನವರ ಇರುವಿಕೆಯನ್ನು ಉಪಾಯವಿಲ್ಲದೆ, ಸಹಿಸುತ್ತಿದ್ದರು.

ಹಾಗೂ ಹೀಗೂ ಆ ವರ್ಷ ಕೊನೆಗೊಂಡಿತು. ಆಡಳಿತೆ ಮಂಡಳದವರ ಮನಸ್ಸಿನಲ್ಲಿ ಕಳೆದ ವರ್ಷಕ್ಕಿಂತ ಹೆಚ್ಚಿನ ವಾರ್ಷಿಕೋತ್ಸವವನ್ನು ಜರುಗಿಸಬೇಕೆಂಬ ಆಸೆಯಾಯಿತು. ಯೋಜನೆಯಾದ ಮೂರು ದಿವಸಗಳಲ್ಲೇ ದಿನ ನಿಶ್ಚಯವಾಯಿತು. ಯಾವುದೋ ಪೀಠದ ಸ್ವಾಮಿಯವರ ಆಗಮನಕ್ಕೂ, ಅದಕ್ಕೂ ಗಂಟು ಬಿದ್ದಿತು. ಉತ್ಸವದ ದಿನ ಅನೇಕ ಮೋಟರು ಕಾರುಗಳು ಬಂದುವು. ಹಳೆಯ ನೆನಪಿನಿಂದ ಜನಗಳೂ ಕಿಕ್ಕಿರಿದರು. ಡಾಕ್ಟರರವರು ಸ್ವಾಗತ ಭಾಷಣದಲ್ಲಿ 'ನಾವು ಇಂಥ-ದೊಡ್ಡ ಸಂಸ್ಥೆಯ ಭಾರವನ್ನು ಹೊತ್ತಿರುವಾಗ, ಸಾರ್ವಜನಿಕರು ಧನ ಸಹಾಯ ಮಾಡಬೇಕೆ'ಂದು ಕೇಳಿಕೊಂಡರು. ರಾಧಾಕೃಷ್ಣನು ಮುಂದೆ ಬಂದು ವಾರ್ಷಿಕ ವರದಿಯನ್ನೋದಿದನು. ಹಿಂದೆ ವೇದಿಕೆಯಲ್ಲಿ ಸ್ಥಾಪಿತರಾದ ಪಂಚಮಹಾಭೂತರು ಹರಟೆಯಲ್ಲಿ ಮಗ್ನರಾಗಿದ್ದರು. ರಾಧಾಕೃಷ್ಣನು ಮುಂದೆ ಬಂದು, ತನ್ನ ವೇದನೆಯನ್ನು ತೋಡಿಕೊಂಡನು.

"ಮಹಾಶಯರೇ, ತಾವು ಈ ಸಂಸ್ಥೆಯ ವಾರ್ಷಿಕೋತ್ಸವಕ್ಕೆ ಬಂದಿದ್ದೀರಿ. ತಮಗೆ ಸ್ವಾಗತವು. ಕಳೆದ ವರ್ಷದ ವರದಿ ವಾಚನದಲ್ಲಿ ಹೆಚ್ಚಿನ ಆಸೆ, ಭರವಸೆ, ನಿರೀಕ್ಷೆಗಳನ್ನು ನಾನು ನಿವೇದಿಸಿದ್ದೆ. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಬಹಳ ದುಃಖದಿಂದ ಹೇಳತಕ್ಕ ಮಾತಿದು: ಈ ದಿನ ಇದು ಸಂಸ್ಥೆಯ ವರ್ಷಾಂತ್ಯವು ಮಾತ್ರವಲ್ಲ; ಜೀವಾಂತ್ಯವೂ ಆಗಿದೆ. ಇದನ್ನು ನಾವು ತೊಡಗಿ ಈ ತನಕ ಬೆಳೆಯಿಸಿಕೊಂಡೇನೋ ಬಂದೆವು; ಹೇಗೋ ದಿನ ಸಾಗಿತು. ನಮ್ಮ ಊರಿನ ಔದಾರ್ಯದ ಫಲವಾಗಿ ಇಂದೇ ಶಾಲೆಯ ಅಂತಿಮ ದಿನವೆಂದು ವಿಷಾದದಿಂದ ಹೇಳುತ್ತಿದ್ದೇನೆ" ಎಂದು ಈಚೆಗೆ ಬಂದನು. ಅವನ ಕಪೋಲಗಳಲ್ಲಿ ಕಣ್ಣೀರು ಹರಿಯುತ್ತಿತ್ತು. ನೆಟ್ಟಗೆ ಬಂದು, ಎದುರಿಗೆ ಕುಳಿತಿದ್ದ ರಾಮಕೃಷ್ಣಯ್ಯನವರ ಬಳಿಯಲ್ಲಿ ತಾನೂ ಕುಳಿತನು. ಅಲ್ಲಿ ಕುಳಿತಿರುವುದೂ ಸಾಧ್ಯವಾಗಲಿಲ್ಲ. ಅಲ್ಲಿಂದ ಇಬ್ಬರೂ ಹೊರಟು ಹೋದರು.

ಈ ಉಪನ್ಯಾಸ ಕೇಳಿ,ಸಭಾಧ್ಯಕ್ಷರು ಕಕ್ಕಾಬಿಕ್ಕಿಯಾದರು. ನೆರೆದವರಿಗೂ ಅದು ಏನೆಂದು ತಿಳಿಯಲಿಲ್ಲ. ಹಿಂದೆ ಮಾತಿನಲ್ಲಿ ಮಗ್ನರಾದ ಮಹಾಶಯರು ಹೀಗೆ ತಟಸ್ಥವಾದ ಸಭೆಯನ್ನು ಕಂಡು 'ಏನು, ಏನು' ಎಂದು ಕೇಳಬೇಕಾಯಿತು. ಕೇಳಿ, ತಿಳಿದು ಗಾಬರಿಯಾಯಿತು. ಅಪಮಾನವಾಯಿತು; ಕೋಪವೂ ಬಂದಿತು.

ರಾಧಾಕೃಷ್ಣ ರಾಮಕೃಷ್ಣಯ್ಯ ಶ್ಯಾಮರೊಡನೆ ಸಭೆಯನ್ನು ಬಿಟ್ಟು ಹೋಗಿಯೇ ಬಿಟ್ಟಿದ್ದನು. ಎದುರಿಗೆ ಕುಳಿತಿದ್ದ ವಿದ್ಯಾರ್ಥಿವೃಂದವೆಲ್ಲ, ಗುರುವಿನ ನಿರ್ಧಾರವನ್ನು ತಿಳಿದವರಾದುದರಿಂದ, ಸಾಮೂಹಿಕವಾಗಿ ಆ ಸಭೆಯನ್ನು ಬಿಟ್ಟು ಹೋಯಿತು. ಸಭೆಯು, ಅಸ್ತ್ಯವ್ಯಸ್ತ್ಯವಾಯಿತು. ಜನರು ಗುಲ್ಲು ಎಬ್ಬಿಸಿ ಹೊರಟು ಹೋದರು.

ಆಚರೆ ನಂದರವರು, ಅವರ ಗೆಳೆಯರು ವೇದಿಕೆಯ ಮೇಲೆ ಕುಳಿತು ಅಧ್ಯಕ್ಷರ ಭಾಷಣ ಕೇಳಿದರು. ತಾವು ಯಾರಿಗೂ ಬೆದರುವವರಲ್ಲವೆಂಬುದನ್ನು ಪ್ರಕಟಿಸುವುದಕ್ಕೋ ಏನೋ, ಕಾರ್ಯ ಸಮಿತಿಯ ವಿಶೇಷ ಸಭೆಯನ್ನು ಅಲ್ಲಿಯೇ ಕೂಡಿಸಿದರು.ಅಲ್ಲಿ ಆವೇಶಯುಕ್ತವಾದ ಭಾಷಣಗಳಾದುವು. ಪುರುಷೋತ್ತಮರು ತಂದಂಥ, ಸುಧಾರಣೆಯ ಸೂತ್ರಗಳನ್ನು ಒಪ್ಪಿ ಉದ್ಯೋಗ ಶಾಲೆಯನ್ನು ನಡೆಯಿಸುವ ನಿರ್ಣ

ಯುವಾಯಿತು. ಅಂತು ಸಭೆಯು ಯಶಸ್ವಿಯಾಗಿ ನಡೆದು ಅವರೆಲ್ಲರೂ ಹೊರಟು ಹೋದರು.

ಆದರೆ ಅವರಾರೂ ಮುಂದೆ ಆ ನೆಲವನ್ನು ತುಳಿಯಬೇಕಾದ ಪ್ರಸಕ್ತಿ ಬಂದೊದಗಲಿಲ್ಲ.



# ಇಪ್ಪತ್ತೊಂದನೆಯ ಅಧ್ಯಾಯ.

ಸತ್ಯ ಆ ದಿನದ ಪ್ರಾರಂಭೋತ್ಸವಕ್ಕೆ ಹೋಗಿರಲಿಲ್ಲ. ಅದು ಹೇಗೆ ಕೊನೆಗಂಡೀತೆಂದು ಅರಿತಿದ್ದ ಅವಳು, ಪತಿಯ ಆಗಮನವನ್ನೇ ಇದಿರು ಕಾದಿದ್ದಳು. ಆ ಸಭೆ ಮುಗಿಸಿಕೊಂಡು, ಅವರು ಮೂವರು ಅಲ್ಲಿಗೆ ಬರುತ್ತಲೇ "ಬಂದ ವಿನಾಯಕನನ್ನು ನಾಲ್ಕು ದಿನ ಪೂಜೆಮಾಡಿ ಇಂದು ಬಾವಿಗೆ ತಳ್ಳಿ ಬಂದಿರಾ?" ಎಂದು ರಾಧಾಕೃಷ್ಣನನ್ನು ಅರೆನಗು, ಅರೆ ನೋವುಗಳಿಂದ ಮಾತನಾಡಿಸಿದಳು. ಅವನೇನು ಮಾಡಿಯಾನು? "ಹೌದು, ಹಾಗೆಯೇ ಆಯಿತು. ಆವಾಹನೆಯೂ ಆಯಿತು; ವಿಸರ್ಜನೆಯೂ ಆಯಿತು" ಎಂದು ಮುಖ ತಗ್ಗಿಸಿ ನುಡಿದ. ಬಹು ಹೊತ್ತಿನವರೆಗೆ ಯಾರೂ ಮಾತನಾಡಲಿಲ್ಲ. ಮಾತನಾಡುವುದನ್ನೆಲ್ಲ ಹಿಂದೇನೇ ಮಾತನಾಡಿದ್ದರು. ಶಾಲೆಯ ನವೀನ ಆಡಳಿತೆಗೆ ಕೊನೆತರಬೇಕೆಂದು ನಿಶ್ಚಯವಾಗಿತ್ತು. ರಾಮಕೃಷ್ಣಯ್ಯನವರು ಇನ್ನೊಮ್ಮೆ ಸಭೆ ನಡೆಯುವಲ್ಲಿಗೆ ಹೋಗಿ ಅಲ್ಲಾದುದನ್ನೆಲ್ಲ ಕಂಡು, ಕೇಳಿ ಬಂದರು. ಆಮೇಲೆ "ಅಲ್ಲಿಯೇ ಹಾಗೆ ಯಾಕೆ ಹೇಳಬೇಕಿತ್ತು? ಪ್ರಭುವಿಗೆ ತಿಳಿಸಿದ ಹಾಗೆ ಇವರಿಗೆ ನಾವು 'ಇನ್ನು ನಿಮ್ಮ ಸಹಾಯ ಸಾಕು; ನಿಮ್ಮ ಹೇಳಿಕೆಯಂತೆ ಶಾಲೆಯನ್ನು ನಡೆಯಿಸುವುದಕ್ಕಿಂತ ಮುಚ್ಚುವುದೇ ಲೇಸು' ಎಂದು ಬರೆದಿದ್ದರೆ ಆಗುತ್ತಿತ್ತಲ್ಲ" ಎಂದರು.

"ಹೇಗಾದರೇನು! ಈಗಂತು ಕೆಲಸ ಮುಗಿಸಿಬಿಟ್ಟಾಯಿತಲ್ಲ. ಅವರ ವಿಚಾರ, ತೀರ್ಮಾನಗಳು ನಮಗೆ ಮೊದಲೇ ಗೊತ್ತಿವೆ. ನಾವು ತೊಡಕಿನಲ್ಲಿದ್ದೇವೆ ಎಂಬುದನ್ನು ಕಂಡು, ಶಾಲೆಯನ್ನು ತಮ್ಮ ಹೆಸರಿಗೆ ಬರೆಯಿಸಿಕೊಳ್ಳಬೇಕೆಂಬ ಹಟ ಅವರದ್ದು. ಮೇಲೆ, ನಮ್ಮ ಜೀವನಕ್ಕೆಂದು ಕಟ್ಟಿಕೊಂಡ ಹೊಲ, ಗೋಶಾಲೆಗಳನ್ನು ಉಂಬಳಿಯಾಗಿ ಪಡೆದು, ಅದರ ಮೇಲಿಂದ ತಮ್ಮ ಪರೋಪಕಾರವನ್ನು ಮೆರೆಯಿಸಬೇಕೆಂಬ ಬುದ್ಧಿಯಿದ್ದ ಹಾಗೆ ಕಾಣುತ್ತದೆ. ಅವರು ಹೊರಿಸುವ ಬದಲಾವಣೆಗಳನ್ನು ಒಪ್ಪಿಕೊಂಡರೆ ಶಾಲೆ ನಮ್ಮ ಇಷ್ಟದಂತೆ ನಡೆಯಲಾರದು; ನಮ್ಮ ಕಲ್ಪನೆ ಅಲ್ಲಿ ಉಳಿಯಲಾರದು. ಉಪಾಯವಿಲ್ಲವೆಂದು ಅವರಿಗೆ

ಬಿಟ್ಟು ಕೊಟ್ಟರೆ, ನಮ್ಮನ್ನು ಓಡಿಸುವುದಕ್ಕೂ ಅಡ್ಡಿಯಿಲ್ಲ. ಈ ತೆರನ ವಿದ್ಯೆ ಬೇಕಾದುದು ಬಡವರಿಗೆ; ಶ್ರೀಮಂತರಿಗಲ್ಲ. ವೇತನ ಕೊಡುವ ಶಕ್ತಿ ಅವರಿಗಿದೆಯೇ? ಅದಿಲ್ಲವೆಂದು ಕೂಲಿಗಳಂತೆ ದುಡಿದು, ಶಾಲೆಯ ವೆಚ್ಚವನ್ನು ಅವರು ತಗ್ಗಿಸಬೇಕೇ? ಇಲ್ಲಿಯ ಉತ್ಪನ್ನದಿಂದಲೇ ಈ ಶಾಲೆ ನಡೆಯುವುದು ಸಾಧ್ಯವಾದರೆ, ನಮಗೇನೆ ಆ ಕೆಲಸ ಮಾಡಲು ಬರುವುದಿಲ್ಲವೇ? ಎಲ್ಲವನ್ನು ಬಿಟ್ಟು ಬಡವರ ಅನ್ನಕ್ಕೂ ಅವರ ಕಣ್ಣು ನಟ್ಟಿದೆ. ಅಗ್ಗದ ಕೀರ್ತಿಗೆ ಮಾತ್ರ ಕೊರಳೊಡ್ಡುವ ಜನಗಳು ಅವರು. ಈ ಒಂದು ವರ್ಷದ ಒಡನಾಟದಿಂದ ನನಗೆ ಅದೇನೇ ಖಚಿತವಾಯಿತು. ಅವರ ದಾನ, ಧರ್ಮಗಳು ದೊಡ್ಡಸ್ತಿಕೆಯ ಪ್ರಚಾರಕ್ಕೆ; ಗೀತೆ, ಭಗವದ್ಗೀತೆಗಳು ಒಳಗಿನ ಕಪಟವನ್ನು ಅಡಗಿಸುವುದಕ್ಕೆ. ಹೊಸ್ತಿಲಿನಲ್ಲಿ ಹಾಲು, ಮಜ್ಜಿಗೆ ಬೇಡೆನ್ನುವ ಇವರಿಂದ ಬಡವರಿಗೇನಾದೀತು? ತಾವು ಮಾಡಲಾರದ ತ್ಯಾಗವನ್ನು ಬಡ ಉಪಾಧ್ಯಾಯರಿಂದ ಬಯಸುತ್ತಾರೆ ಇವರು. ಅಂಥವರ ಸಹವಾಸ ಸಾಕು."

"ಅವರ ಹಂಗು ಬೇಡವೆಂಬುದು ಖಂಡಿತವೆ. ಆದರೆ ಶಾಲೆಯನ್ನು ಸಣ್ಣ ತೆರನಲ್ಲಾದರೂ ನಡೆಯಿಸಬೇಡವೇ? ಇಷ್ಟೆಲ್ಲ ಮಾಡಿದ್ದು ವ್ಯರ್ಥವಾಗಬೇಕೇ?" ಎಂದರು ರಾಮಕೃಷ್ಣಯ್ಯ.

"ಏನು ಸಣ್ಣ ತರಹ? ಉಪಯೋಗವಿಲ್ಲದೆ, ಹೆಸರಿಗೆ ತಕ್ಕ ಶಾಲೆಯಾಗಬೇಕೆ? ನಾವಿರುವ ಸ್ಥಿತಿಯೇ ಬಡತನ. ಉಪಯುಕ್ತತೆಯಿಲ್ಲದ ಮಿತವ್ಯಯವು ಪ್ರಯೋಜನವಿಲ್ಲ. ಶಿಕ್ಷಣ ಎಂಬುದು ನಾಳೆ ಫಲಕೊಡುವ ಗಿಡಗಳ ಪೋಷಣೆ. ನೀರು ಹಾಕಿದಾಗಲೇ, ನೀರು ಹಾಕಿದವರಿಗೇನೇ ಅದು ಪ್ರತಿಫಲ ಕೊಟ್ಟೀತೇ? ಇಲ್ಲಿ ಬಡತನವಾದರೂ ಎಲ್ಲಿ ಸಾಧ್ಯ? ಉದ್ಯೋಗ ಶಾಲೆಯೆಂದರೆ ಕಚ್ಚಾಮಾಲು ಬೇಕು; ಸಾಮಗ್ರಿಗಳು ಬೇಕು. ಅವನ್ನು ಹಾಳು ಮಾಡುತ್ತ ಮಕ್ಕಳು ಕಲಿಯಬೇಕು. ಯಾವ ಬಗೆಯ ಪ್ರತ್ಯಕ್ಷ ಶಿಕ್ಷಣವಾಗಲೀ ಅಗ್ಗದಲ್ಲಿ ಆಗುವುದಿಲ್ಲ. ಸುಮ್ಮನೆ ಜೀವ ಎಳೆದು ನರಳಿ ನರಳಿ ಸಂಸ್ಥೆಗೆ ಸಾವು ಬರಬೇಕೇಕೆ? ನಾವು ಕರುಣೆಯಿಂದ ಅದನ್ನು ಕೊಂದಹಾಗಾಯಿತು. ಪರರಿಗೆ ಅನ್ಯಾಯವಾಗಿಲ್ಲವಷ್ಟೆ?"

"ಅವರು ತುಂಬ ರೇಗಿ ಹೋದರು. ಎಷ್ಟೆಂದರೂ ಊರಿನ ಪ್ರಮು

ಖರು. ನಾಳೆ ಈ ಅಪಮಾನದ ಸೇಡನ್ನು ತೀರಿಸದೆ ಬಿಡುತ್ತಾರೆಯೇ?"

"ಉಪಕಾರ ಮಾಡುವ ಯೋಗ್ಯತೆ ಇಲ್ಲದವರು, ಉಪದ್ರವ ಮಾಡುವುದಾದರೆ ಅನುಭವಿಸುವ. ಅದರಿಂದ ಅವರೇ ನಗೆಗೀಡಾಗ ಬಹುದು." ಆ ಸಂಗತಿಯೇ ಸಾಕೆಂದು ಆತ ಬೇರೆಯೇ ಕಡೆಗೆ ಮಾತನ್ನು ಕೊಂಡುಹೋದ. "ಆ ವಿಚಾರವನ್ನು ಮರೆತುಬಿಡಿ. ನೀವು ಪ್ರಪಂಚ ವನ್ನು ಕಂಡವರು. ಕೆಲವರು ಜಯಿಸುವುದಕ್ಕಾಗಿ ಹುಟ್ಟುತ್ತಾರೆ; ಕೆಲ ವರು ಸೋಲುವುದಕ್ಕಾಗಿ. ಅದರಲ್ಲಿ ನಾಚಿಕೆಯೇನು? ಒಂದು ಗಿಡ ದಲ್ಲಿ ಹುಟ್ಟಿದ ಸಾವಿರ ಬೀಜಗಳಲ್ಲಿ ಉಳಿಯುವುವು ನಾಲ್ಕಾದರೆ, ಅಳಿ ಯುವುವು ಒಂಬೈನೂರ ತೊಂಬತ್ತಾರು. ಅಂಥ ಬಹುಸಂಖ್ಯೆಗೆ ಸೇರು ವವ ನಾನೊಬ್ಬ. ಕೆಲಸ ಮಾಡದಿರುವುದು ಅಪಮಾನ; ಸೋಲುವುದು ಅಪಮಾನವಲ್ಲ."

ಹೀಗೆ ಮುಂದೆ ದಾರಿ ಕಾಣದುದಕ್ಕಾಗಿ ತನ್ನ ಮನಸ್ಸಿಗೆ ನೆಮ್ಮದಿ ತಂದು ಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಚಿಂತೆ ಮರೆಯುವುದಕ್ಕಾಗಿ ಗೋಶಾಲೆ, ಗದ್ದೆಗಳಲ್ಲಿ ಶ್ರಮಿಸುತ್ತಾನೆ. ಆದರೂ ಮನದೊಳಗಿನ ಬೇನೆ ಹೋಗಲೊಲ್ಲದು. ಹುಲ್ಲು ತರಿಯುವಾಗ ಕೈ ನಿಂತುಬಿಡುತ್ತದೆ. ಮಣ್ಣು ಅಗೆಯುವಾಗ ಗುದ್ದಲಿ ಹೂತುಕೊಳ್ಳುತ್ತದೆ. ನೀರೆರೆಯುವಾಗ ಕೊಡ ಜಾರಿ ಬೀಳುತ್ತದೆ. ತಿರುಗಿ ಕೆಲಸ ತೊಡಗುವುದಕ್ಕೆ-ಮನಸ್ಸನ್ನು ಎಳೆಯಬೇಕಾಗುತ್ತದೆ. ನಿಟ್ಟುಸಿರಿನಿಂದ ಶರೀರದ ಭಾರವನ್ನು ಕಡಿಮೆ ಮಾಡಬೇಕಾಗುತ್ತದೆ. ಸೋಲುಗಣ್ಣಿನಿಂದ ಸಾರ್ವಜನಿಕ ಜೀವನವನ್ನು ಕಂಡ ಅವನಿಗೆ ವ್ಯಥೆಯಾಗುತ್ತದೆ. ಎಷ್ಟೋ ಕೆಲಸಕ್ಕೆ ಅವಕಾಶವಿರುವ ಸಮಾಜ; ಕರ್ತವ್ಯ ಬುದ್ಧಿಯಿರುವ ಜನರು ಸೇರಿಕೊಂಡಲ್ಲಿ ಏನೂ ಸಾಧಿಸಬಹುದಾದ ಅವಕಾಶ; ಹೀಗಿರುವಾಗ ಹತ್ತು ಜನರ ಕೆಲಸ ಕ್ಕಾಗಿ ಒಬ್ಬಿಬ್ಬರು, ಶ್ರೀಮಂತರ ಮುಂದೆ ಜೋಳಿಗೆ ಹಿಡಿದು ನಿಂತು ಅವರ ದಯದಿಂದಲೇ ಜಗತ್ತು ಬದುಕುತ್ತಿದೆ ಎಂದು ತೋರಿಸಬೇಕೆ? ಈ ರೀತಿಯ ಭಿಕ್ಷಾಟಣೆ ಅಪಮಾನವಲ್ಲವೇ? ಅದು ಸಹ್ಯವೇ? ಮೈಯಲ್ಲಿ ತ್ರಾಣವಿರುವ ವ್ಯಕ್ತಿ ತಿರುಪೆಯೆತ್ತಿ ಬದುಕುವುದು ಎಷ್ಟು ಅಪ ಮಾನವೋ, ಕರ್ತವ್ಯವೆಂದು ದಾನಕೊಡದೆ ತಿರುಪೆ ಎತ್ತುವವರ ಮುಖ ನೋಡಿ, ಅವರಿಂದ ಬರುವ ಕೀರ್ತಿಯನ್ನು ಗುಣಿಸಿ, ದಾನ ಕೊಡುವುದು

ಅಷ್ಟೇನೆ ಅಪಮಾನವಲ್ಲವೇ? ಅಂಥ ಸಹಾಯ ದೊರಕಿಸಿಕೊಳ್ಳು ವುದೂ ಅಷ್ಟೇ ಅಪಮಾನ. ಆ ಒಂದು ತಿಂಗಳ ಕಾಲವನ್ನು ಕಳೆಯು ವುದೆಂಬುದು ಅವನಿಗೆ ಸಾಕುಸಾಕಾಯಿತು. ತನ್ನನ್ನು ನಂಬಿ ಬಂದ ಪರವೂರಿನ ಉಪಾಧ್ಯಾಯರನ್ನು ಬೀಳ್ಕೊಡಬೇಕಾಯಿತು. ಆಸೆಯಿಂದ ಬಂದ ವಿದ್ಯಾರ್ಥಿಗಳಿಗೆ ಸಮಾಧಾನ ಹೇಳಬೇಕಾಯಿತು. ಸೂತಕದ ಮನೆಯವನು ಸೂತಕದವನಿಗೆ ಸಮಾಧಾನ ಹೇಳುವಂತಿತ್ತು ಅವನ ಪಾಡು.

ಕೆಲವು ದಿನಗಳಲ್ಲಿಯೇ ಅವನ ಜತೆಯಲ್ಲಿ ದುಡಿದ ಉಪಾಧ್ಯಾಯರೊಬ್ಬರು ಅಲ್ಲಿಗೆ ಬಂದರು. "ನಮ್ಮ ಪರೋಪಕಾರ ಸಂಘದ ಟ್ರಸ್ಟಿಗಳೇ ಸೇರಿಕೊಂಡು,ಒಂದು ಹೊಸ ಉದ್ಯೋಗ ಮಂದಿರ ತೆರೆಯು ತ್ತಾರಂತೆ. ಸ್ಥಳ, ದಿನ ಎಲ್ಲಾ ಗೊತ್ತಾಗಿದೆಯಂತೆ. ನನ್ನನ್ನು ಕರೆದಿದ್ದಾರೆ. ಇನ್ನೂ ಪ್ರಾರಂಭ; ಮೂವತ್ತು ರೂಪಾಯಿ ಕೊಡಬಹುದು. 'ಶಾಲೆ ಅಭಿವೃದ್ಧಿ ಆದ ಮೇಲೆ ನೋಡುವ' ಎಂದಿದ್ದಾರೆ; ಹೋಗಲೇ" ಎಂದು ಕೇಳಿದರು.

"ನಾನೇನು ಅನ್ನಲಿ? ನಿಮ್ಮ ಸಂಸಾರಕ್ಕೆ ಮೂವತ್ತು ರೂಪಾಯಿ ಸಂಬಳ ಸಾಕೇ?"

"ಇಲ್ಲಿ ಐವತ್ತು ಕೊಡುತ್ತಿದ್ದಾಗ ಅಲ್ಲಿಂದಲ್ಲಿಗೆ ಆಗುತ್ತಿತ್ತು. ಈಗ ಸಾಕಾಗುವುದುಂಟೇ? ಬೇರೆ ಉದ್ಯೋಗ ದೊರೆಯುವ ತನಕ ಕಾಲ ಹಾಕುವುದು"

ಅಂತೂ ಆ ಉಪಾಧ್ಯಾಯರು 'ಪರೋಪಕಾರ ಟ್ರಸ್ಟ್ ಔದ್ಯೋಗಿಕ ಶಾಲಾ' ಎಂಬ ಹೊಸತಾದ ಸಂಸ್ಥೆಯನ್ನು ಸೇರಿಕೊಂಡರು. ಉದ್ಯೋಗ ಮಂದಿರದ ವಿದ್ಯಾರ್ಥಿಗಳಲ್ಲಿ ಹಲವರು ತಮ್ಮತಮ್ಮ ಊರನ್ನುಸೇರಿದರು. ಕೆಲವರು ಹೊಸ ಶಾಲೆಯನ್ನು ಸೇರಿಕೊಂಡರು. ಆ ಹುಡುಗರು ಆಗಾಗ ರಾಧಾಕೃಷ್ಣನಲ್ಲಿಗೆ ಬಂದು ತಮ್ಮ ಹೊಸ ಶಾಲೆಯ ವಿಚಾರಗಳನ್ನು ತಿಳಿಸುತ್ತಲೇ ಇದ್ದರು.

"ನಿಮ್ಮ ಅಭಿವೃದ್ಧಿ ಚೆನ್ನಾಗಿ ಆಗಬೇಕಾದರೆ ಹೀಗೆ ಐದುತಾಸು ದುಡಿದರೆ ಸಾಲದು. ಇದೇನು ಹೈಸ್ಕೂಲು ವಿದ್ಯೆಯೇ! ಎಲ್ಲ ಕಾರ್ಯದಿಂದ ಮಾಡಿ ಕಲಿಯಬೇಕಾದ ವಿದ್ಯೆ. ಅಭ್ಯಾಸ ಹೆಚ್ಚಬೇಕು. ನೀವು

ದಿನಕ್ಕೆ ಏಳು ತಾಸಾದರೂ ದುಡಿಯಬೇಕು." ಎಂದು ಹೇಳುತ್ತಾರೆಂದು ದೂರಿಟ್ಟರು ಒಂದು ದಿನ.

"ಕಮ್ಮಾರ ಶಾಲೆಯಿಂದ ವಿಶೇಷ ಪ್ರಯೋಜನವಿಲ್ಲ. ಲೇತ್, ಪ್ಲೇನರ್ ಇವೆಲ್ಲ ದೊರೆಯುವ ತನಕ, ಅದನ್ನು ಮುಚ್ಚುವುದು ಲೇಸು" ಎಂದು ಹೇಳಿದರೆಂದು ತಿಳಿಸಿದರು ಒಂದು ದಿನ.

"ಮುಂದಿನ ಟರ್ಮಿನಿಂದ ವೇತನ ಕೊಡಬೇಕಾಗುತ್ತದೆ, ಅಲ್ಲದೆ ಇಷ್ಟೊಂದು ಸಾಮಾನು ಹರಿದು, ಕೆತ್ತಿ ಹಾಳುಮಾಡಿದರೆ, ತುಂಬಾ ನಷ್ಟ ವಾಗುತ್ತದೆ. ಹುಡುಗರು Exercise book ತರುವ ಹಾಗೆ ಅವರು ಅವರೇ ಕಚ್ಚಾ ಮಾಲುಗಳನ್ನು ಕೊಂಡುಕೊಳ್ಳಬೇಕು" ಎಂದರಂತೆ ಇನ್ನೊಂದು ದಿನ.

ವರ್ಷಾಂತ್ಯವಾಗುವುದರೊಳಗೆ ಆತನ ಭಯ ಭೀತಿಗಳೆಲ್ಲ ನ್ಯಾಯವಾಗಿದ್ದುವೆಂದೇ ಅನಿಸಿತು. ಹುಡುಗರನ್ನು ದುಡಿಸಿ, ಶಾಲೆಯನ್ನು ಸ್ವಾವಲಂಬಿಯನ್ನಾಗಿ ಮಾಡುವುದು ಅವರ ಕನಸು. ಕೆಲವೊಂದು ಮಂದಿಗೆ ವಿದ್ಯಾವೃತ್ತಿ ಕೊಟ್ಟರೂ ಅವರ ಕುಲಗೋತ್ರಗಳನ್ನು ನೋಡಿಯೇ ಉದಾರರಾದರು. ಆಗಾಗ ಅವರ ಮೇಲ್ವಿಚಾರಕರಾದ ಪುರುಷೋತ್ತಮರು ಆ ಶಾಲೆಗೆ ಬರುತ್ತಿದ್ದರಂತೆ. ಬಂದು ಉಪಾಧ್ಯಾಯರೊಡನೆ, ಆಳುಗಳೊಡನೆ ಜಂಬ ತೋರಿಸಿ ಮೂದಲಿಸಿ ಮಾತನಾಡುತ್ತಿದ್ದರಂತೆ.

ಒಂದು ಸಮಾಧಾನ ರಾಧಾಕೃಷ್ಣನಿಗೆ— ತಾನಿದ್ದಷ್ಟು ದಿನ ತಮ್ಮ ಉದ್ಯೋಗ ಶಾಲೆ ಆ ಸ್ಥಿತಿಗೆ ಮುಟ್ಟಲಿಲ್ಲವೆಂಬುದೇ ಸಂತೋಷ.

ಈ ಒಂದು ವರ್ಷದ ದೀರ್ಘಕಾಲದಲ್ಲಿ ಮಾನಸಿಕ ಮೌಢ್ಯದಿಂದ ಆತನು ಮನೆಯಲ್ಲೇ ಅಲೆದಾಡಿದನು. ಕೆಲವು ದಿನ ತುದಿಮೊದಲಿಲ್ಲದಷ್ಟು ಓದುತ್ತಲೇ ಇರುತ್ತಾನೆ. ಇನ್ನು ಕೆಲವು ದಿನ ಗದ್ದೆಗೆ ಇಳಿದರೆ ಮೇಲಕ್ಕೆ ಬರುವುದೇ ಇಲ್ಲ. ಅಣ್ಣ ಆ ರೀತಿ ದುಡಿಯುವುದನ್ನು ಕಂಡು ಶ್ಯಾಮ "ನೀವು ಇಲ್ಲಿಗೆ ಬರಲೇ ಬೇಡಿ. ಆಳುಗಳಿದ್ದಾರೆ, ನಾನಿದ್ದೇನೆ." ಎಂದು ಕಳುಹಿಸಿ ಬಿಡುತ್ತಾನೆ. ಅವನನ್ನು ಕಂಡಾಗಲೆಲ್ಲ "ಓದಿಯೂ ಬೇಸರ ಬರುತ್ತದೆ. ಮಾಡುವುದೇನು? ಶಾಲೆ ಹಾಗಾದ ಮೇಲೆ, ಬದುಕು ವ್ಯರ್ಥವೆಂದು ಕಾಣುತ್ತಿದೆ. ನಮ್ಮ ಕೈಯಲ್ಲಿ ಏನಿ

ದ್ದರೂ ಶಾಲೆಗಾಗಿ ಸುರಿಯ ಬಹುದಿತ್ತು. ಆದರೆ ಜನರನ್ನು ನಂಬಿಯೇ ಕೆಟ್ಟೆವು ಎನ್ನುತ್ತಾನೆ." ಅವನ ಮನಸ್ಸಿನಲ್ಲಿ ದಿನದಿನಕ್ಕೆ ಏರು ಇಳಿತಗಳುಂಟಾಗುತ್ತವೆ. ಸುಮ್ಮನೆ ಕುಳಿತಿರಲಾರ; ಕೆಲಸ ಮಾಡಲಾರ. ಸದಾ ಯೋಚನೆಗಳೇ!

ಎಷ್ಟು ಸಮಯ ಹೀಗೆ ಸರಿಯಿತೋ! ಒಂದು ದಿನ ಥಟ್ಟನೆ ಎದ್ದು "ಶ್ಯಾಮಾ ಹೀಗೆಯೇ ಕೋಣೆಯಲ್ಲಿ ಕುಳಿತು ಪುಸ್ತಕಕ್ಕೆ ಅಂಟಿಕೊಂಡಿದ್ದರೆ, ಬುದ್ಧಿ ಭ್ರಮಣೆಯಾದೀತು. ನಮ್ಮ ಜೀವ ಯಾರಿಗೆ ಬೇಡದೆ ಹೋದರೆ ಹೋಗಲಿ. ನಮಗೆ ಬೇಡವೇ? ಇನ್ನು, ನಮಗಾಗಿಯಾದರೂ ದುಡಿಯುವ ಆಲೋಚನೆ ಮಾಡುವ" ಎಂದನು.

"ಹಾಗೆಂದರೆ?"

"ನೋಡು ನಮ್ಮ ಜಾಗದಲ್ಲಿ ನೀರು ತೀರ ಮೇಲಕ್ಕಿದೆ. ನಮ್ಮ ಜಾಗ ಬರಿದಾಗಿ ಇಷ್ಟು ವಿಶಾಲವಾಗಿದೆ. ಹುಡುಗರಿರುವಾಗ ತರಕಾರಿ ತೋಟವನ್ನಾದರೂ ಮಾಡಿದ್ದರು. ಈಗ ಮನೆಗೆ ಬೇಕಾಗುವಷ್ಟನ್ನೇ ಬೆಳೆಯುತ್ತಿದ್ದೇವೆ. ನಾವೇನು ಶ್ರೀಮಂತರೇ? ತರಕಾರಿ ಮಾರಬಾರದು ಎಂದಿದೆಯೇ? ಈ ಎರಡೂ ಎಕರೆಗಳಲ್ಲಿ ಯಾಕೆ ಕಾಯಿಪಲ್ಯ ಬೆಳೆಯಿಸಬಾರದು?" ಎಂದನು.

ಮರುದಿನವೇ ವಿಶಾಲವಾದ ಆವರಣದ ಕೆಲಸವನ್ನು ತೊಡಗಿಸಿದರು. ದೊಡ್ಡದಾದ ಬಾವಿ ಮೊದಲೇ ನಿರ್ಮಿತವಾಗಿತ್ತು. ಎಲ್ಲಿಂದಲೋ ಒಂದು ಎಂಜಿನು, ಪಂಪು ಬೆಲೆಗೆ ಕೊಂಡನು. ಅದನ್ನು ಬಾವಿಯ ಬಳಿ ಸ್ಥಾಪಿಸಿ, ನಡೆಯಿಸುವ ರೀತಿಯನ್ನು ಕಲಿತು, ನೀರಾವರಿಯ ಸಿದ್ಧತೆ ಮಾಡಿದನು. "ಇಷ್ಟು ಚೆನ್ನಾಗಿ ಗೊಬ್ಬರವಿದೆ, ನೀರಿದೆ, ನೆಲವಿದೆ. ಒಂದು ವರ್ಷದಲ್ಲಿ ಇದೆಲ್ಲವೂ ತರಕಾರಿ ತೋಟವಾಗಬೇಕು" ಎಂದು ಕೆಲಸ ತೊಡಗಿಯೇ ಬಿಟ್ಟನು. ತಿರುಗಿ ಸತ್ಯಳನ್ನು ಕೂಡಿ, ಬೆಳಗಿನಿಂದ ಸಂಜೆಯ ತನಕ— ಸಾಲು ತೆಗೆಯುವ, ನೀರು ಹರಿಯಿಸುವ, ಬೂದಿ ಬಿಕ್ಕುವ, ಬಿತ್ತು ನಡುವ, ಚಪ್ಪರ ಹಾಕುವ ಕೆಲಸಗಳು ತೊಡಗಿದುವು. ಜತೆಗೆ ಆಳುಗಳಿಂದಲೂ ದುಡಿಸಿದರು, ತಾವೂ ದುಡಿದರು. ಈ ಕೆಲಸವು ಸುಲಭವೇನೋ ಆಗಲಿಲ್ಲ. ಮನೆಯ ಜಾನುವಾರುಗಳ ಹಾವಳಿಯನ್ನು ತಡೆಯಬೇಕು. ಅವನ್ನು ತಡೆದರೆ ರಾತ್ರಿ ಮೊಲಗಳು ಬಂದು

ಮೊಳಕೆ ತಿಂದು ಹೋಗುವುದನ್ನು ಕಂಡು ಕಾವಲಿಡಬೇಕು. ಇನ್ನೊಮ್ಮೆ ಯಾವುದೋ ಹುಳುಗಳ ಉಪದ್ರ. ಮಳೆಗಾಲದಲ್ಲಿ ಇನ್ನಿತರ ಸಮಸ್ಯೆಗಳು ಬಂದುವು. ಮಳೆ ಹೆಚ್ಚಾಗಿ, ಗಿಡಗಳ ಬೇರು ಕೊಳೆಯುತ್ತದೆ. ಹುಳ ಹೆಚ್ಚಾಗಿ, ಗಿಡ ಸಾಯುತ್ತದೆ. ಹೀಗೆ ನಿಸರ್ಗದೊಡನೆ ಸಣ್ಣ ಪುಟ್ಟ ಕಾದಾಟ ನಡೆಯಿಸಲೇ ಬೇಕಾಯಿತು. ಅವನ್ನು ಕಂಡಾಗಲೆಲ್ಲ ಆತ ನಗುತ್ತ ಶ್ಯಾಮಾ -- 'ಮನುಷ್ಯ, ಮನುಷ್ಯನನ್ನು ಸುಮ್ಮಗೆ ಕುಳಿತಿರಲು ಬಿಡುವುದಿಲ್ಲವಂತೆ. ಈ ಹುಳುಗಳೂ ಮೊಲ,ಹಕ್ಕಿಗಳೂ ಬಿಟ್ಟಾವೆಯೇ' ಅನ್ನುತ್ತಿದ್ದ. ಆದರೆ ಬೆಳೆದ ಗಿಡಗಳೆಲ್ಲವೂ ಸಾಯುತ್ತಾವೆಯೇ? ಉಳಿದುವನ್ನು ನೋಡುತ್ತಾನೆ. ಅವುಗಳ ಹೂ ಮಿಡಿಗಳನ್ನು ಕಂಡು ಹಿಗ್ಗುತ್ತಾನೆ. ಅವು ಫಲಕ್ಕೆ ಬಂದಂತೆ, ವ್ಯಾಪಾರಿಯ ಎಣಿಕೆ ಹಾಕುತ್ತಾನೆ. "ಶ್ಯಾಮಾ ಇವತ್ತು ತೊಂಡೆ ಕಾಯಿಯಿಂದ ಮೂರು ರೂಪಾಯಿ ಬಂತು. ಬೆಂಡೆ ಮಾತ್ರ ಬೆಳೆದುದು ಹೆಚ್ಚಾಯಿತು. ಅಲಸಂದೆಯ ಬೆಳೆಯೇ ಬೆಳೆ! ಟೊಮೆಟೊ ಮಳೆಗಾಲದಲ್ಲಿ ಹುಟ್ಟುವುದಿಲ್ಲವೇ? ಹುಟ್ಟಿದಿದ್ದರೂ ಗಿಡ ಸೊಕ್ಕಿದುದೇಕೆ? ಮಳೆತಪ್ಪಿದರೆ ಆಗುತ್ತದೆಯೋ ಏನೋ. ಹಿಂಗಾರಿಗೆ ತಿಂಗಳವರೆ ನಟ್ಟರಾದೀತೇ" ಎಂದು ಯೋಚನೆ ಮಾಡುತ್ತಾನೆ.

ಒಂದೊಂದು ದಿವಸ ಅವನ ಗೋಶಾಲೆಯ ಯಾವುದಾದರೊಂದು ಕರುವೋ, ದನವೋ ಮೇವಿಗೆ ಹೋದುದು ರಾತ್ರಿಗೆ ತಡವಾಗಿ ಬಂದು, ಬೇಲಿ ಮುರಿದು ಪಾರುಪತ್ಯ ನಡೆಯಿಸುವುದುಂಟು. ಒಂದೊಂದು ದಿನ ಹುಲ್ಲಿನ ಗದ್ದೆಗಳನ್ನು ನುಗ್ಗಿ ಬಿಡುವುದುಂಟು. ಇನ್ನೊಂದು ದಿನ ಶ್ಯಾಮ ಬಂದು "ಆ ಪಪ್ಪಾಯಿ ಗಿಡದಲ್ಲಿ ಕಳಿತ ನಾಲ್ಕು ಕಾಯಿಗಳನ್ನು ನೋಡಿದ್ದೆ. ಇಂದು ಏನಾಯಿತು?" ಎನ್ನುತ್ತಾನೆ. "ಯಾರದ್ದಾದರೂ ಕಾಲಿನ ಗುರುತು ಉಂಟೇ ನೋಡು ಅದರ ಬುಡದಲ್ಲಿ" ಎನ್ನುತ್ತಾನೆ ಈತ. ತರಕಾರಿ ಬೆಳೆಯಿಸುವ ಕೆಲಸದ ಜತೆಗೆ ಅವರ ಪತ್ತೇದಾರಿ ಕೆಲಸ ಪ್ರಾರಂಭವಾಗುತ್ತದೆ. "ಹೌದು, ತಾವು ಬೆಳೆದು ತಿನ್ನುವುದೆಂದರೆ ತುಂಬ ಕಷ್ಟ. ಬೇಡವೆಂದು ಎಸೆದರೂ ಆಗುವ ಗಿಡ ಪಪ್ಪಾಯಿ. ಆದರೆ ಜನಕ್ಕೆ ನಟ್ಟು ಬೆಳೆಯಿಸಿದ ಹಣ್ಣಿನಲ್ಲಿ ರುಚಿಯಿಲ್ಲ. ಅಷ್ಟು ಕಷ್ಟ ಯಾಕೆ ಪಡಬೇಕು? ಇನ್ನೊಬ್ಬನ ದುಡಿತದ ಮೇಲೆ ಬದುಕುವುದು ಸುಖವೆಂದು ಕಾಣುತ್ತದೆ. ಅವರನ್ನೇನು ದೂರಲಿ? ಅಂಥ ದೊಡ್ಡವರೇ

ಬಂದು ನಮ್ಮ ಗೋಶಾಲೆ, ಮರಕ್ಕೆ ಕಣ್ಣಿಡಲಿಲ್ಲವೇ? ಇವರು ನಣ್ಣ ಕಳ್ಳರು. ಹೊಟ್ಟೆಯ ಹಸಿವಿಗಾಗಿ ವಪ್ಪಾಯಿ ಕದ್ದರು" ಎಂದು ನಕ್ಕು. ವ್ಯಂಗ್ಯ ತಾಳ್ಮೆಯನ್ನು ತಂದು ಕೊಳ್ಳುತ್ತಾನೆ. ಒಂದು ದಿವಸ ತುಂಬ ಬೇಸರವಾಯಿತು ಅವನಿಗೆ. ಹೊತ್ತೇರುವ ತನಕ ತೋಟದಲ್ಲಿ ಅಗತೆ ಮಾಡುತ್ತಿದ್ದ. ಮೈ ಬೆವರುತ್ತಿತ್ತು. ಬಿಸಿಲು ಬಹಳವಾಗಿ ಕೊರೆಯುತ್ತಿತ್ತು. ಸ್ವಲ್ಪ ನೆರಳಿಗೆ ಹೋಗುತ್ತೇನೆಂದು ಶಾಲೆಯ ಜಗುಲಿಗೆ ಹೋಗಿ ಕುಳಿತುಕೊಂಡ. ಎಷ್ಟೋ ದಿನವಾಗಿತ್ತು, ಅದನ್ನು ಕಂಡರೂ ಅಲ್ಲಿ ಕಾಲಿಡದೆ. ಮೈಯ ಬೇಗೆಯು ತಣಿಯುತ್ತಲೇ ಮನಸ್ಸು ಏಕಮುಖವಾಗಿ ಓಡಿತು. ಓಡಿದುದು ಶಾಲೆಯ ವಿಚಾರಕ್ಕೆ. "ಐದು ಮಿನಿಟಿಗೆ ಇಲ್ಲಿಗೆ ಬಂದೇ ಇಷ್ಟು ತಂಪಾಯಿತು. ಈ ಶಾಲೆಯೂ ನಡೆಯುತ್ತಲಿದ್ದರೆ ಎಷ್ಟು ತಂಪು ಇರುತ್ತಿತ್ತು?" ಎಂದುಕೊಂಡ. ಅದೇ ವಿಚಾರವೇ ಮನಸ್ಸಿನಲ್ಲಿ ಸುಳಿದಾಡಿತು. ಮನೆಗೆ ಬಂದನು. ಮೈ ತೊಳೆದುಕೊಂಡನು. ಊಟಕ್ಕೆ ಕುಳಿತುಕೊಂಡನು. ಸತ್ಯ ಅನ್ನ ಬಡಿಸಿದಳು. ಈತ ಅನ್ಯಮನಸ್ಕನಾಗಿ, ಊಟ ತೊಡಗುವ ಬದಲು ಅಗುಳುಗಳನ್ನು ಒಂದೊಂದಾಗಿ ಬಿಡಿಸುತ್ತಿದ್ದಾನೆ. ಚಂದ್ರ ನಗುತ್ತ "ಅಪ್ಪಾ, ಅನ್ನದ ಅಗುಳನ್ನು ಲೆಕ್ಕ ಮಾಡುತ್ತಿದ್ದೀಯಾ" ಎಂದು ಕೇಳಿದ. ಕೇಳಿ ನಗು ಬಂದಿತು. "ಹೌದು ಮಗು. ಒಬ್ಬನ ಹೊಟ್ಟೆಗೆಷ್ಟು ಅಗುಳು ಬೇಕೆಂದು ಲೆಕ್ಕ ಹಾಕುತ್ತಿದ್ದೇನೆ" ಎಂದನು. ಆದರೆ ನಿಜವಾಗಿಯೂ ಅವನ ಮನಸ್ಸು ಹಾಗೆ ಓಡಿರಲಿಲ್ಲ. ಅದು ಪ್ರಭುದೇವನೆಂದ ಒಂದು ಮಾತನ್ನು ನೆನೆಯುತ್ತಿತ್ತು. ತನ್ನ ಮತ್ತು ಅವನ ಋಣಾನುಬಂಧ ಮುಗಿಸುವ ಗಳಿಗೆಯಲ್ಲಿ ಆತ ನುಡಿದ ಮಾತದು. "ಹಣ ಸುಮ್ಮನೆ ಬರುವುದಿಲ್ಲ. ಸುಲಿದೇನೆ ಬರುವುದು" ಎಂದುದು. ಸುಲಿಗೆಗೆ ಬೇರೊಂದು ದಾರಿ ಹೇಳಿದುದೂ ನೆನಪಾಯಿತು. ಹಿಂದೆಂದೋ ಆತನಾಡಿದ ಮಾತುಗಳನ್ನು ಕೇಳಿ ಆತ ನಕ್ಕಿದ್ದ. ತಿರುಗಿ ನಗು ಬಂದಿತು. "ಸನ್ಯಾಸಿಯಂತೆ ಮರ ಹಾಕಿ ಕುಳಿತರೆ ಕೇಳದೇನೆ ಹಣ ಬಂದು ಸುರಿದೀತು" ಎಂದು ಹೇಳಿದ್ದ. ಅದಕ್ಕಾಗಿ ನಗು ಬಂತು. ತೀರ ವಿಕಟವಾದ ಆ ಸತ್ಯವನ್ನು ನೆನೆದು ಊಟ ಮುಂದುವರಿಸುವುದಕ್ಕೂ ಆಗಲಿಲ್ಲ. ಹಾಗೆಯೇ ಅರ್ಧ ಊಟದಿಂದ ಹೊರಕ್ಕೆ ಬಂದು, ಕೈ ತೊಳೆದನು. ಸತ್ಯ ತನ್ನ ಊಟ ಮುಗಿಸಿ ಅವನ ಬಳಿಯಲ್ಲೇ ಕುಳಿ

ತಳು. "ಏನು ಯೋಚನೆ ಮಾಡುತ್ತಿದ್ದೀರಿ? ಊಟವನ್ನೇ ಮಾಡಲಿಲ್ಲ" ಎಂದಳು. ಶ್ಯಾಮು ಎದುರಿಗಿದ್ದ. "ಶ್ಯಾಮು, ನೀನೂ ಬಾ; ಒಂದು ಕತೆ ಹೇಳುತ್ತೇನೆ. ಹಳೆಯ ಕತೆ. ಹಿಂದೆ ಪ್ರವಾಸಕ್ಕೆ ಹೋಗಿದ್ದೆನಲ್ಲ; ಆಗ ಕಂಡ ಸಂಗತಿಯಿದು. ಆಗ ಸಾರನಾಥಕ್ಕೊಮ್ಮೆ ಹೋಗಿದ್ದೆ. ಕಾಶಿಗೆ ಏಳೆಂಟು ಮೈಲು ದೂರದ ಊರು. ಅದು ಬುದ್ಧ ಉಪದೇಶ ಮಾಡಿದ ಸ್ಥಳವಂತೆ. ಹಳೆಯಕಾಲದ ಸ್ತೂಪಗಳಿವೆ. ಈಗಿನ ಕಾಲದ ಒಂದು ದೇವಾಲಯವೂ ಇದೆ. ಹಾದಿಯಲ್ಲಿ ಹೋಗುತ್ತ ಬೇರೊಂದು ಗುಡಿಯನ್ನು ನೋಡಿದ್ದೆ. ಅಲ್ಲೊಬ್ಬ ಸನ್ಯಾಸಿ ಇದ್ದ. ಆತ 'ಮೌನಸನ್ಯಾಸಿ'ಯೆಂದು ಊರಲ್ಲೆಲ್ಲ ಪ್ರಚಾರ. ಆದರೂ ಒಂದೆರಡು ಮಾತುಗಳನ್ನಾಡಿದ್ದನ್ನು ನಾನು ಕೇಳಿದ್ದೇನೆ. ಆತ ಆ ಊರಲ್ಲಿ ಬಂದು ನೆಲೆಸಿ ಹತ್ತು ವರ್ಷಗಳಾಗಿದ್ದುವಂತೆ. ಅವನನ್ನು ನೋಡಲಿಕ್ಕೆ ಬರುವವರು ಎಷ್ಟು ಮಂದಿ! ಸಾರನಾಥಕ್ಕೂ ಅಷ್ಟು ಜನ ಹೋಗಲಾರರು. ಯಾವ್ಯಾವ ಊರುಗಳಿಂದ ಎಂಥೆಂಥ ಜನರು ಬರುತ್ತಿದ್ದರು. ಬಂದು ಅವನ ಎದುರಿಗೆ, ಕೇಳದೇನೆ ಹಣ ಸುರಿದು ಹೋಗುತ್ತಿದ್ದರು. ಆತ ತನ್ನ ಭಕ್ತರಿಗಾಗಿಯೇ ಒಂದು ಧರ್ಮಛತ್ರ ನಡಯಿಸುತ್ತಿದ್ದಾನೆ. ನನ್ನ ಎಣಿಕೆಯಂತೆ ಅವನಿಗೆ ದಿನಕ್ಕೆ ಸಾವಿರ ರೂಪಾಯಿಗಳಾದರೂ ವರಮಾನವಿರಬೇಕು.

"ಜನ ಮೋಟರುಗಳಲ್ಲಿ ಬರುತ್ತಾರೆ, ನಡೆದು ಬರುತ್ತಾರೆ, ಟಾಂಗಾ ಮಾಡಿಕೊಂಡು ಬರುತ್ತಾರೆ. ಸಾಲಕೊಟ್ಟವರು, ಕೊಂಡವರು, ಪ್ರೇಮಪೀಡಿತರು, ಪೆನ್ಶನ್ ಪ್ರಾಪ್ತಿಯಿಂದ ಭಕ್ತಿಮಯರಾದವರು, ಎಲ್ಲರೂ ಬರುವವರೇ. ಎಲ್ಲರಿಗೂ ಆತ ಮಾಡುತ್ತಿದ್ದ ಉಪದೇಶ ಒಂದೇನೇ. 'ರಾಮ ಜಪ' ಎಲ್ಲದಕ್ಕೂ ಮದ್ದು ಎನ್ನುತ್ತಾನೆ. ಏನು ನಂಬಿಕೆ ಜನರದ್ದು! 'ಹಾಗಾಗುತ್ತದೆ, ಆಗಿದೆ' ಎಂದು ತಿಳಿಯುತ್ತಾರೆ. ರಾಮನಾಮದಿಂದ ಸಂತತಿ ಪಡೆದು, ಮನಿಯಾರ್ಡರು ಮೂಲಕ ಅವನಿಗೆ ಕಾಣಿಕೆ ಕಳುಹಿಸುವವರು ಉಂಟು. ಪ್ರೇಮ ಕಲಹವನ್ನು ಗೆದ್ದು, ಕಾಣಿಕೆ ಸಲ್ಲಿಸುವವರು ಉಂಟು. ಅನೇಕ ಸಾಹುಕಾರರು–ತಮ್ಮ ಲಾಭದಲ್ಲಿ ರೂಪಾಯಿಗೆ ಒಂದಂಶವನ್ನು ತೆಗೆದಿರಿಸಿ ಅವನಿಗೆ ಕಳುಹಿಸುತ್ತಿದ್ದರಂತೆ. ಈಗ ನೆನಪಾಯಿತು. ಅವನ ಹೆಸರು 'ಶಿರಿರಾಮ್ ಮಹಾರಾಜ್' ಎಂದು. ಆತ ಬಂದಾಗ ಬರಿಗೈಯಿಂದಲೇ, ಆ ಊರಿಗೆ ಬಂದಿದ್ದ. ನಾನು ಹೋಗಿ

ನೋಡಿದಾಗ ಅವನದೊಂದು ಕಚೇರಿಯೋ ನಡೆದಿತ್ತು. ಅವನ ಕಾರ್ಯದರ್ಶಿಗಳೆಷ್ಟು ಮಂದಿ! ಪತ್ರ ವ್ಯವಹಾರ ಎಷ್ಟು ಭಾರಿಯದು-ನೋಡಿದರೆ ಆಶ್ಚರ್ಯವಾಗುತ್ತಿತ್ತು. ತೊಟ್ಟದ್ದು ಕೌಪೀನವಾದರೂ ದಪ್ಪನಾದ ರೇಶ್ಮೆ ಹಾಸಿಗೆಯ ಮೇಲೆ ಕುಳಿತು, ರೇಶ್ಮೆ ದಿಂಬಿಗೆ ಒರಗಿರುತ್ತಾನೆ. ನಾಲ್ಕು ಸುತ್ತು ಕಾಲು ತಿಕ್ಕುವ ಭಕ್ತರು, ಅವನನ್ನು ಅಲಂಕರಿಸಿ, ಚಿನ್ನದ ಕಿರೀಟ ತೊಡಿಸಿ, ಮೆರವಣಿಗೆ ಮಾಡಿಸುವ ಭಕ್ತರು ತುಂಬಿರುತ್ತಾರೆ. ವಿದ್ಯುದಲಂಕಾರ ಮಾಡಿದ ಬಂಗ್ಲೆ ಅವನದು-ಅವನ ಮಹಿಮೆಗೆ ಹೆಚ್ಚೇನು ಸಾಕ್ಷಿ ಬೇಕು" ಎಂದನು.

"ಒಂದು ದಿನ ಪ್ರಭು ಅಂದಿಲ್ಲವೇ – ಹಾಗೇನಾದರೂ ನಾವೂ ಮಾಡಿದರೆ ಕಾಸಾಗುತ್ತದೆಯೆಂದು. ಎಷ್ಟೋ ಬಾರಿ, ಶ್ಯಾಮ, ಜನರಿಂದ ಹಣ ಗಳಿಸುವುದಕ್ಕೆ ಅಂಥ ಸೋಗನ್ನೇ ಹಾಕಬೇಕೆನ್ನಿಸುತ್ತದೆ. ಅಪ್ರಾಪಂಚಿಕನು ಎಂದು ತೋರಿಸಿಕೊಂಡೂ ಪ್ರಪಂಚ ನಡೆಯಿಸಲು ಬರುತ್ತದೆ ಎನ್ನುವುದಕ್ಕೆ ಇದು ಉದಾಹರಣೆ. ನಾವು ಇಷ್ಟೆಲ್ಲ ಜನರನ್ನು ಬೇಡುವ ಬದಲು, ಹೀಗೇನಾದರೂ ಮಾಡಿದರೆ ನಮ್ಮ ಮನೆ, ಈ ಮಠ ಎರಡೂ ನಡೆಯುತ್ತಿತ್ತಲ್ಲವೇ?" ಎಂದು ನಕ್ಕನು.

ಮರುಗಳಿಗೆಯಲ್ಲಿ ಅವನ ದೃಷ್ಟಿ ನಾಸಾಗ್ರಕ್ಕೆ ನಟ್ಟಿತು. ತುಟಿ ಅಲುಗಾಡದಿದ್ದರೂ ಕಣ್ಣಿಂದ ನೀರು ದಳದಳನೆ ಸುರಿಯಿತು. ಸತ್ಯ ಆಗ "ನೀವು ಇನ್ನೂ ಮರೆತಿಲ್ಲವೇ ಶಾಲೆಯನ್ನು?" ಎಂದಳು. "ಕೇಳಿದರೆ, ಅದರ ಮರವೆಯಾಗಿದೆ. ಹೋದದ್ದು ಹೋಯಿತು; ಅಳುವುದೇತಕ್ಕೆ ಎನ್ನುತ್ತೀರಿ." ಎಂದಳು. ಅವನ ಶಾಲೆಯು ನತ್ತು ಈಗ ಎರಡು ವರ್ಷಗಳು ಕಳೆದು, ಮೇಲೆ ಇನ್ನೊಂದು ವರ್ಷವೂ ಸರಿದಿದೆ. ಆದರೂ ಅದರ ನೆನಪು ಅಳಿಯದು. ಶ್ಯಾಮನಿಗೆ ಥಟ್ಟನೆ ಹಿಂದಿನ ದಿನದ ನೆನಪು ಹೊಳೆಯಿತು. ಆತನಿಗೂ ದುಃಖ ಒಡಮೂಡಿತು. "ಅಣ್ಣಾ, ಇಂದು ಯಾವ ದಿನಗೊತ್ತೇ ಇದು.? ಶಾಲೆ ನಿಲ್ಲಿಸಿ ಸಮನಾಗಿ ಮೂರು ವರ್ಷವಾಯಿತು. ಅಂದು ತ್ರೈವಾರ್ಷಿಕ ಉತ್ಸವ ಮಾಡಿ ಮೆರೆದುವು. ಇಂದು ತ್ರೈವಾರ್ಷಿಕ ಶ್ರಾದ್ಧದ ದಿನವಲ್ಲವೇ. ಶಾಲೆಯ ಪ್ರೇತ ತನ್ನ ಪಿಂಡಕ್ಕಾಗಿ ಬಂದು ತನ್ನ ನೆನಪನ್ನು ಹುಟ್ಟಿಸಿದಂತಿದೆಯಲ್ಲ?" ಎಂದನು. ರಾಧಾನ ಗಮನ ಆ ತಿಂಗಳು, ತಾರೀಕು ದಿನಗಳ ಕಡೆಗೆ ಸರಿಯಿತು. ಎದೆಯುಬ್ಬಿಸಿ, ನಿಟ್ಟು

ಸಿರು ಹೊರಡಿಸಿ "ನಿಜ ಶ್ಯಾಮ, ಇವತ್ತಿನ ನನ್ನ ವೇದನೆ ಹೇಳತೀರದು. ಯಾಕೆ ಈ ನೋವು ತೊಡಗಿತು ಎಂಬುದೇ ನನಗೆ ಆಶ್ಚರ್ಯ. ಬಹು ದಿನಗಳಿಂದ ಇದನ್ನೆಲ್ಲ ಮರೆಯಲು ಪ್ರಯತ್ನಿಸಿದ್ದೆ. ಮರೆತೂ ಇದ್ದೆ. ಯಾಕೆ ಒಮ್ಮಿಂದೊಮ್ಮೆಗೆ ಆ ನೆನಪು ಇಂದು ಉಕ್ಕಬೇಕು? ಸರಿ, ನೋಡು, ಆಗ ಹಿತ್ತಿಲಿಗೆ ಹೋಗಿದ್ದೆನಲ್ಲ. ಬಿಸಿಲಾಯಿತೆಂದು ಶಾಲೆಯ ಜಗುಲಿಯ ಮೇಲೆ ಹೋಗಿ ಕುಳಿತೆ. ಎಷ್ಟೋ ಸಮಯವಾಗಿತ್ತು ಅಲ್ಲಿ ಕಾಲಿರಿಸದೆ. ಥಟ್ಟನೆ ಹಿಂದಿನ ನೆನಪಾಯಿತು. ಅದಕ್ಕೆ ಹೀಗಾಯಿತು. ಆ ಕಟ್ಟಡಗಳನ್ನೇ ಅಳಿದು ಮಾರಾಟಮಾಡಿದರೆ ಆಗಬಹುದೋ ಏನೋ. ಈಗ ಉಳಿದಿರುವುದು ಅದೊಂದೇ ಅಲ್ಲವೇ! ಅದೂ ಹೋದರೆ ಎಲ್ಲಾ ನೆನಪು ಹೋದ ಹಾಗೆ."

ಗಂಡನ ಮನಃಸ್ಥಿತಿಯನ್ನು ಕಂಡು ಸತ್ಯ ನುಡಿದಳು: "ನನಗೆ ಕಾಣುತ್ತದೆ — ನೀವು ಸ್ವಲ್ಪ ಸಮಯ ಈ ಊರನ್ನು ಬಿಟ್ಟಿರಬೇಕೆಂದು. ಎಲ್ಲಾದರೂ ಹೋಗಿ ನಾಲ್ಕೂರು ಸುತ್ತಿ ಬನ್ನಿ. ಕೆಲವು ಸಮಯವಾದರೂ ಈ ಆವರಣವನ್ನು ಸಂಪೂರ್ಣವಾಗಿ ಮರೆಯಬೇಕು. ನಿಮಗೆ ಎಷ್ಟು ಸ್ನೇಹಿತರಿಲ್ಲ? ಈ ಹಿತ್ತಲು, ಗೋಶಾಲೆ ಇವುಗಳನ್ನೆಲ್ಲ ನಡೆಯಿಸುವುದಕ್ಕೆ ನಾವು ಸಾಲದೇ" ಎಂದಳು.

ಆದರೂ ಎಲ್ಲಿಗೂ ಹೊರಡುವ ಮನಸ್ಸಿಲ್ಲದೆ 'ನೋಡುವ, ನೋಡುವ' ಎಂದೇ ಆತ ದಿನ ಕಳೆದನು. ಒಂದು ದಿನ ಮುಂಬಯಿಯಲ್ಲಿರುವ ತನ್ನ ಮಿತ್ರನ ನೆನಪಾಯಿತು. ಮುಂಬಯಿಯ ಒಂದು ಪತ್ರಿಕೆಯನ್ನು ಓದುತ್ತಿರುವಾಗ ಒಬ್ಬ ಲೇಖಕನ ಹೆಸರು 'ಸಖಾರಾಮ್ ಕೆ.' ಎಂದು ಬರೆದಿತ್ತು. ಅದರಿಂದ ಅವನ ವಿಷಯವಾದ ಹಲವು ನೆನಪುಗಳು ಅವನಲ್ಲಿ ಹುಟ್ಟಿದವು. ಜತೆಗೆ ಇನ್ನೊಂದು ಕುತೂಹಲವಾಯಿತು. 'ಸುಮಾರು ಇಪ್ಪತ್ತು ವರ್ಷಗಳ ಹಿಂದೆ ದೇಶೋದ್ಧಾರಕ್ಕೆಂದು ಹೊರಟ ತ್ರಿಮೂರ್ತಿಗಳು ತಾವು. ಸದಾನಂದ, ಸಖಾರಾಮ ಮತ್ತು ತಾನು. ಮೂರು ತಿಂಗಳ ಕಾಲ ಬೆರೆತು ದುಡಿದಿದ್ದೆವು. ಅನಂತರ ಎಲ್ಲರೂ ಬೇರಾದೆವು. ಸದಾನಂದ ಡಾ। ನಂದನಾಗಿ ಕೊನೆಯ ತನಕ ತನ್ನ ಮನಸ್ಸಿನಿಂದ ಅಳಿಯದಂತಾದನು. ಸಖಾರಾಮ ಹೊರಟು ಹೋದವನು ಮುಂಬಯಿ ನಗರ ಸೇರಿದನು. ಅಲ್ಲಿ ಪತ್ರಿಕೋದ್ಯೋಗಿಯಾಗಿ ಸೇರಿದ

ನೆಂದು ಕೇಳಿದ್ದನಷ್ಟೆ. ಈ ದೀರ್ಘ ಅವಧಿಯಲ್ಲಿ ಅವನ ವಿಷಯವಾದ ಯಾವ ಸುದ್ದಿಯೂ ತಿಳಿದಿಲ್ಲ. ಒಮ್ಮೆಗೇ ಮೂರು ಮಂದಿ ದೇಶಸೇವೆಗೆ ಹೊರಟ ಪ್ರಭೃತಿಗಳು ತಾವು-ತನ್ನ ಪಾಡು ಗೊತ್ತೇ ಇದೆ. ನಂದನ ಪಾಡು ತಿಳಿದಾಯಿತು, ಇನ್ನು ಈತ ಏನು ಮಾಡುತ್ತಾನೆ, ಎಂಬ ಹಿರಿಯ ಕುತೂಹಲ ಉಂಟಾಗಿ, ಅವನಿಗೆ ಬಂದು ಪತ್ರವನ್ನು ಬರೆದು ಹಾಕಿದನು. ಉತ್ತರ ಬರುವುದೆಂಬ ಹೆಚ್ಚಿನ ನಿರೀಕ್ಷೆಯೇನೂ ಇದ್ದಿರಲಿಲ್ಲ. ಹಾಗೆ ಯಾರಿಂದಲೂ ಆತ ಏನನ್ನೂ ನಿರೀಕ್ಷಿಸುವಂತಿಲ್ಲ. ಆದರೂ ಸಕಾಲದಲ್ಲೇ ಪ್ರತ್ಯುತ್ತರ ಬಂದಿತು.

"ನನ್ನಂತಹ ಹಿಂಗಾಲು ವೀರನನ್ನು ನೆನೆದು ಬರೆಯುವ ಕೃಪೆ ಮಾಡಿದ್ದಕ್ಕೆ ವಂದನೆಗಳು..........ನಾನಂತೂ ಈ ಊರಿಗೆ ಕಟ್ಟುಬಿದ್ದಿದ್ದೇನೆ. ಬಿಡುವಿಲ್ಲದ ಉದ್ಯಮ ಇದು. ನನ್ನದು ಸುದ್ದಿಯ ಸಂಸಾರವಾದುದರಿಂದ ಮನಸ್ಸು ಸದಾ ತುದಿಗಾಲಿನ ಮೇಲೆ ನಿಂತಿರುತ್ತದೆ. ನೀವೊಮ್ಮೆ ಏತಕ್ಕೆ ಇತ್ತ ಬರಬಾರದು?" ಎಂದು ಸವಿಯಾದ ಆಮಂತ್ರಣವನ್ನು ಕೊಟ್ಟಿದ್ದ. ಅವನ್ನೋದಿ "ಮರೆಯಲಿಲ್ಲ ಸಖಾರಾಮ" ಎಂಬ ಸಂತೋಷವಾಯಿತು. ಗೆಳೆಯನ ದೀರ್ಘ ಪತ್ರದ ಒಂದೊಂದೇ ಹಾಳೆಯನ್ನು ಮಗುಚುತ್ತಾ ಕುಳಿತನು. "ಕೊನೆಗೆ ನನ್ನ ಕೆಲಸದ ಅವತಾರವೆಲ್ಲಾ ಮುಗಿದ ಹಾಗೆ. ಸತ್ಯ ಹೇಳಿದ ಹಾಗೆ ಯಾಕೆ ನಾನು ಒಂದು ಸಾರಿ ಸಂಚಾರ ಮಾಡಿಕೊಂಡು ಬರಬಾರದು? ಮುಂಬಯಿಗೆ ಹೋಗಿ ಬರುತ್ತೇನೆ. ಎಲ್ಲ ಚಿಂತೆಗಳನ್ನು ಬಿಟ್ಟು ಅಲ್ಲಿ ಸ್ವಲ್ಪ ಕಾಲ ಕುಳಿತಿರುತ್ತೇನೆ" ಎಂದು ನಿರ್ಧರಿಸಿದನು. ಹೆಂಡತಿಯ ಮುಂದೆ ಸಖಾರಾಮನ ವಿಚಾರವನ್ನು ಹೇಳಿ, ಅವನ ಆಮಂತ್ರಣವನ್ನು ಕುರಿತು ತಿಳಿಸಿದನು. ಸತ್ಯ "ನಿಜಕ್ಕೂ ನೀವು ಹೊರಡುವುದು ಒಳ್ಳೆಯದು. ಆದರೆ ಹಿಂದಕ್ಕೆ ಬಾರದೇ ಇರಬೇಡಿ. ಮೂರು ತಿಂಗಳಕಾಲ ಸುಖವಾಗಿ ಇದ್ದು ಬನ್ನಿ. ಆದರೆ ಮನೆಯಲ್ಲಿ ಹೆಂಡತಿ, ಮಕ್ಕಳು, ಶ್ಯಾಮು, ಅವನ ಸಂಸಾರ ಎಲ್ಲರೂ ಇದ್ದಾರೆ; ಹಿಂದಕ್ಕೆ ಬರುವುದು ಉಂಟು ಎಂಬ ನೆನಪು ಮಾತ್ರ ಇರಲಿ" ಎಂದು ಪರಿಹಾಸ್ಯವನ್ನು ಮಾಡಿ, ಬಲವಂತವನ್ನೂ ಮಾಡಿದಳು. ಈತ ಒಪ್ಪಿಕೊಂಡು ಮುಂಬಯಿಗೆ ಹೊರಡುವ ತಯಾರಿ ಮಾಡಿದನು.

ಮುಂದಣ ವಾರದ ಒಂದು ದಿನ ಬೆಳಿಗ್ಗೆ ಬಂದರನ್ನು ಸೇರಿಯಾಯಿತು. ಮೋಟರು ಲಾಂಚಿನಲ್ಲಿ ಕುಳಿತಾಯಿತು. ಅವನನ್ನು ಬೀಳ್ಕೊಡಲು ಚಂದ್ರ, ರಾಮಕೃಷ್ಣಯ್ಯ, ಶ್ಯಾಮ ಎಲ್ಲರೂ ಬಂದಿದ್ದರು. "ಹೋಗಿ ಬನ್ನಿ, ಪತ್ರ ಬರೆಯಿರಿ" ಎಂದು ಕೇಳಿಕೊಂಡರು. "ಆಗಲಿ" ಎಂದು ಈತ ಉತ್ತರ ಕೊಟ್ಟನು. ಬಳಿಕ ಲಾಂಚಿನ ಸಿಳ್ಳು ಕೂಗಿತು. ಅದು ಹೊರಟು ಕಡಲನ್ನು ಸೇರಿತು. ಈತ ಉಗಿಹಡಗನ್ನೇರಿ ಮುಂಬಯಿಯ ದಾರಿಯನ್ನು ಹಿಡಿದನು.

ಎರಡು ದಿನಗಳ ಬಳಿಕ ಶ್ಯಾಮ ತನ್ನ ಮನೆಯಲ್ಲಿ "ಅಮ್ಮಾ ಈಗ ಹತ್ತು ಗಂಟೆ ಆಯಿತಲ್ಲವೇ? ಇಷ್ಟು ಹೊತ್ತಿಗೆ ಅವರು ಮುಂಬಯಿಯಲ್ಲಿ ಕಾಲಿರಿಸಿರಬೇಕು. ಸಖಾರಾಮರಾಯರಿಗೆ ತಂತಿಕೊಟ್ಟು ಬಂದಿದ್ದೇನೆ. ಅವರು ಧಕ್ಕೆಗೆ ಬಂದು ಕಾದು ಕುಳಿತಿದ್ದಾರು" ಎಂದನು.

"ಎರಡು ದಿವಸದಲ್ಲಿ ಮುಟ್ಟುತ್ತದೆಯಲ್ಲವೇ? ಪಾಪ, ಇಷ್ಟು ವರ್ಷಗಳೂ ಅವರಿಗೆ ಚಿಂತೆ, ಯೋಚನೆ ತಪ್ಪಿರಲಿಲ್ಲ. ಅವರ ಆಯುಷ್ಯವೆಲ್ಲ ಹೀಗೆ ಕೊರಗಿ, ಕರಗುವುದಕ್ಕೇನೆ ಆಯಿತು. ಆ ಕಟ್ಟಡಗಳೆಲ್ಲ ಕಣ್ಣೆದುರು ನಿಂತರೆ ತನ್ನ ಬೆನ್ನಟ್ಟಿದ ರಸಿ ಒಂದು ನಿಂತಂತೆ ಕಾಣುತ್ತಿರಬೇಕು. ನಮಗೂ ಅದರ ಋಣವಿಲ್ಲವಾಯಿತು, ದಾಳಿಗೂ ನಮ್ಮ ಋಣವಿಲ್ಲ. ಅದೃಷ್ಟ ಇಲ್ಲದ ವಸ್ತುವಿಗಾಗಿ ಯಾಕೆ ಚಿಂತಿಸಿ ಕುಳಿತಿರಬೇಕು? ಈಗ ಇಷ್ಟೆಲ್ಲ ಆಯಿತಲ್ಲ—ಇನ್ನು ನಾಲ್ಕು ದಿವಸಗಳಲ್ಲಿ ಇನ್ನೊಂದು ಏನಾದರೂ ಮತ್ತು ಕನಸನ್ನು ಕಟ್ಟಿಕೊಂಡು ಕುಣಿಯುತ್ತಾರೆ. ಜನರಿಗೆ ಬೇಡದ ಯಾವ ಆಸೆಯನ್ನು ನಾವು ಕಟ್ಟಿಕೊಂಡರೂ ವ್ಯರ್ಥವೇ. ಇಂಥ ಕೆಲಸ-- ಹತ್ತು ಜನ ಇದು ತಮ್ಮ ಕೆಲಸ, — ಎಂದು ತಿಳಿದು ಸಹಾಯ ಮಾಡಿದರೇನೇ ಸಾಧ್ಯ. ಮೊದಲಿನ ಶಾಲೆ ಕೇಳುವವರಿಲ್ಲದೆ ಸತ್ತು ಹೋದರೆ, ಇದು ಕೇಳುವವರ ಬುದ್ಧಿಯ ವೈಪರೀತ್ಯದಿಂದ ಸತ್ತು ಹೋಯಿತು."

"ಸರಿ, ನೀವೂ ಅದರ ಚಿಂತೆಗೆ ತೊಡಗಿದಿರೇ? ನನ್ನ ಹತ್ತಿರ ಕೇಳಿದರೆ ನೀವು ಸಹ ಅವರ ಜತೆಗೆ ಮುಂಬಯಿಗೆ ಹೋಗಿ ಬರಬಹುದಿತ್ತು." ಎಂದನು ಶ್ಯಾಮ.

"ನಾನೇ? ಮುಂಬಯಿ ಊರನ್ನು ನೋಡುವುದಕ್ಕೆ ಹೋಗಬಹುದು.

ದಿತ್ತು. ದೊಡ್ಡ ಊರಂತೆ. ನೋಡಬೇಕೆಂಬ ಆಸೆ ಇನ್ನಾದರೂ ಇದೆ. ಆದರೆ ಅವರು 'ಬಾ' ಎಂದೆನ್ನಲಿಲ್ಲ, ನಾನು ಬರುತ್ತೇನೆಂದು ಅನ್ನ ಲಿಲ್ಲ. ಅವರು ಅಷ್ಟು ಉಲ್ಲಾಸವಾಗಿದ್ದರೆ ಕರೆದೇ ಕರೆಯುತ್ತಿದ್ದರು. ಏನಾಯಿತೀಗ? ಸಾಯುವುದರೊಳಗೆ ನಾನು, ನೀನು, ಕಲ್ಯಾಣಿ ಎಲ್ಲರೂ ಹೋಗಿ ಬರೋಣ ಒಂದು ಸಾರಿ. ದೇವರು ಆಯುಷ್ಯ ಕೊಟ್ಟು ಕೈ ಯಲ್ಲಿ ಎರಡು ಕಾಸು ಉಳಿಸಿದರೆ ಮುಂಬಯಿ ಏನು ಮಹಾ ಸಂಗತಿ?"

"ಹೌದಮ್ಮ, ಯಾವ ಕೆಲಸವನ್ನೂ ತಕ್ಷಣ ಮಾಡಿ ಮುಗಿಸಿದರೆ ಸ್ವಾರಸ್ಯವಿಲ್ಲ. ನಾಳೆಗೆಂದು ಇರಿಸಿದರೆ ಅದರಲ್ಲಿ ರುಚಿಯುಂಟು. ಗಾಜಿನ ಲ್ಲಿಟ್ಟ ಪೆಪ್ಪರಮೆಂಟಿನ ಹಾಗೆ ನೋಡಿ ನೋಡಿ ಬಾಯಿ ನೀರು ಬಿಡ ಬಹುದು. ತಿಂದರೆ ಮುಗಿದೇ ಹೋಯಿತಲ್ಲವೇ?" ಎಂದು ಶ್ಯಾಮ ನಕ್ಕು ಬಿಟ್ಟನು.

"ಹೋ, ಇವತ್ತು ಕುಂಬಳ ಬೀಳಿನ ಮೇಲೆ ಬೂದಿ ಚೆಲ್ಲಬೇಕಿತ್ತು. ಮರೆತೇ ಹೋಯಿತು. ಹೋಗಿ ಬಿಡುತ್ತೇನೆ" ಎಂದು ಸತ್ಯ ಕೆಲಸಕ್ಕೆ ಹೊರಟಳು. ಚಂದ್ರ ಶಾಲೆಯ ಉಡುಗೆ ತೊಟ್ಟು, ಪುಸ್ತಕ ಹಿಡಿದು ಕೊಂಡು "ಅಮ್ಮಾ ಹೊತ್ತಾಯಿತೋ ಏನೋ, ಡಬ್ಬಿಯಲ್ಲಿ ಅನ್ನ ತುಂಬಿಸಿಕೊಡು" ಎಂದ. ಕಲ್ಯಾಣಿ ಆ ತಯಾರಿಯಲ್ಲಿ ಇದ್ದಳು. ಚಂದ್ರ ಅದನ್ನು ತಗೆದುಕೊಂಡು ತಾಯಿಯೊಡನೆ "ಅಮ್ಮಾ, ಅಪ್ಪ ಹೋದವರು ಎಷ್ಟು ದಿನದಲ್ಲಿ ಹಿಂದಕ್ಕೆ ಬರುತ್ತಾರಂತೆ?" ಎಂದು ಕೇಳಿದ.

"ಛೀ ಮರುಳಾ, ಮೊನ್ನೆ ಹೋಗಿದ್ದಾರಷ್ಟೆ. ಇಂದೇ ಕೇಳಲಿಕ್ಕೆ ಸುರುಮಾಡಿದೆಯಾ? ಎರಡು ಮೂರು ತಿಂಗಳು ಅಲ್ಲಿದ್ದು ಬಂದಾರು. ಬೇಸರ ಕಳೆಯಲಿಕ್ಕೆ ಹೋದುದಲ್ಲವೇ?"

"ಏನು, ಎರಡು ಮೂರು ತಿಂಗಳು ಬೇಕೇ? ಅವರಿಲ್ಲದೆ ಹೋದರೆ ಮನೆಯಲ್ಲಿ ಏನೇನೂ ಗೆಲುವು ಕಾಣುವುದಿಲ್ಲ" ಹೀಗೆಂದು ಹೊರಟೇ ಹೋದನು. ಅವನ ಮುಖದೊಳಗಿನ ಉತ್ಸಾಹ ಕಂದಿತ್ತು.

ಉದ್ಯೋಗ ಮಂದಿರವು ಮುಚ್ಚಿದ ಮೇಲಂತೂ ರಾಧಾಕೃಷ್ಣ ಮಕ್ಕಳೊಡನೆ ತುಂಬ ಸಮಯವನ್ನು ಕಳೆಯುತ್ತಿದ್ದ. ಅವನ ಮಕ್ಕಳು, ಶ್ಯಾಮನ ಹುಡುಗ ಅವನ ಜತೆಯಲ್ಲಿಯೇ ಅಲೆದಾಡುತ್ತಿದ್ದರು. ಕೆಲ ಸಕ್ಕೆ ಹೋಗುವಾಗ ಜತೆಯಲ್ಲೇ ಇರುತ್ತಿದ್ದರು. ಪೇಟೆಗೆ ಹೋದಾಗಲೂ

ಬಂದೇ ಬರುತ್ತಿದ್ದರು. ಕಿರಿಯ ಸೂರ್ಯ, ತಾರೆಯರು ಕೆಲಸಕ್ಕೆ ಸಹಾಯಕರಾಗುವ ಬದಲು ತಂಟೆ ಮಾಡುತ್ತಿರುವುದೇ ಸ್ವಭಾವ. ಆದರೆ ಚಂದ್ರ ಬುದ್ಧಿಯುಳ್ಳ ಹುಡುಗ. ತಂದೆಗೆ ತುಂಬ ಸಹಾಯವಾಗುತ್ತಾನೆ. ಮಕ್ಕಳು ಸಹಾಯ ಮಾಡಲಿ, ಉಪದ್ರ ಕೊಡಲಿ, ಅವುಗಳ ಬಾಲಲೀಲೆಗಳಲ್ಲಿನ ಸೊಗಸು ಅವನ ಜೀವನಕ್ಕೆ ಎಷ್ಟೋ ಸಂತೋಷಕೊಡುತ್ತಿತ್ತು. ಚಂದ್ರ ತಂದೆಯ ಮನಸ್ಸನ್ನು ಬಲ್ಲವನಾದುದರಿಂದ ಎರಡು ದಿವಸಗಳಲ್ಲೇ ಆತನನ್ನು ಮೇಲಿಂದ ಮೇಲೆ ನೆನೆಯುವಂತಾಯಿತು.

*       *       *       *       *       *       *

ಇದೇ ವೇಳೆ ಮುಂಬಯಿಯಲ್ಲಿ ಹಡಗು ಪ್ರಿನ್ಸೆಸ್ ಧಕ್ಕೆಯ ಬಳಿ ಬಂದು ನಿಂತು ಜನರನ್ನು ಕೆಳಕ್ಕೆ ಇಳಿಸುವುದರಲ್ಲಿತ್ತು. ಹಡಗಿನಿಂದ ರಾಧಾಕೃಷ್ಣ,ಯಾರಾದರೂ ಕರೆಯುವುದಕ್ಕೆ ಬಂದಿದ್ದಾರೆಯೇ, ಎಂದು ಇಣಿಕಿ ನೋಡುತ್ತಿದ್ದ. ಇತ್ತ ದಂಡೆಯಲ್ಲಿ ಅಚ್ಚ ಬಿಳಿಯ ಶರಾಯಿ ಟೋಪಿ,ಪಂಚೆಗಳನ್ನುಧರಿಸಿದ್ದ,ನೀಳವಾದ ಕೃಶವ್ಯಕ್ತಿಯೊಬ್ಬ ಕತ್ತನ್ನು ಮತ್ತೂ ಉದ್ದಮಾಡಿ ರಾಧಾಕೃಷ್ಣನ ರೂಪವನ್ನು ಉಳಿದವರಿಂದ ಆಯಲು ಯತ್ನಿಸುತ್ತಿದ್ದ. ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಪರಿಚಯ. ಅಲ್ಲದೆ ಜನರ ದಟ್ಟಣೆಯು ಹಡಗಿನಲ್ಲಿಯೂ, ಧಕ್ಕೆಯಲ್ಲಿಯೂ ಬಹಳ ವಿಶೇಷವಾಗಿತ್ತು. ಹಡಗು ದಂಡೆಗೆ ತಾಗುವ ಮೊದಲೇನೇ ಸ್ವಾಗತ, ವಂದನೆಗಳ ವಾಗ್ಬಾಣಗಳು ಹಾರಾಡಿದುವು. ಹಡಗಿನ ತೊಳೆ ನೀರನ್ನು ಬಲವಾಗಿ ಮಥಿಸುತ್ತಿದ್ದುದರಿಂದ ಯಾರ ಮಾತು ಯಾರಿಗೂ ಕೇಳಿಸುವಂತಿರಲಿಲ್ಲ. ಆದರೆ ಸಂಭಾಷಣೆಗಳು ನಿರ್ವಿಘ್ನವಾಗಿ ಸಾಗುತ್ತಿದ್ದುವು. ಹಡಗು ದಂಡೆಗೆ ತಾಗಿತು. ಏಣಿ ಇಟ್ಟರು. ಜನರು ಸಾಲು ಸಾಲಾಗಿ ಹೊರಬಿದ್ದರು. ಸಖಾರಾಮ ಅಲ್ಲೇನೇ ಕಣ್ಣನ ಮೇಲೆ ಕಣ್ಣಿಟ್ಟು ಹುಡುಕುತ್ತಿದ್ದ. ಈ ದೀರ್ಘಕಾಲದಲ್ಲಿ ಅವರಿಬ್ಬರ ಆಯ ಬಳಕೆಗಳು ಹೆಚ್ಚುಕಡಿಮೆ ಯಾಗಿದ್ದಿರಬಹುದಾದರೂ, ಗುರುತಿಸದಷ್ಟು ಅಂಥ ಪರಿವರ್ತನೆ ಆಗಿರಲಿಲ್ಲ. ಆತ ರಾಧಾಕೃಷ್ಣನ ಎರಡೂ ಭುಜಗಳ ಮೇಲೆ ಕೈಯಿರಿಸಿ ನಗುತ್ತ ಸ್ವಾಗತಮಾಡಿದನು. ಅವನ ಸಾಮಾನುಗಳನ್ನು,ಒಂದು ವಿಕ್ಟೋರಿಯಕ್ಕೆ ಹಾಕಿಸಿ, ತಾವೂ ಕುಳಿತುಕೊಂಡು ಪಯಣ ಹೊರಟರು. ಬಂಡಿ ಜನನಿಬಿಡ ರಸ್ತೆಗಳನ್ನು ಹಾದು ದಾದರ

ವನ್ನು ಸೇರಿತು. ಉನ್ನತವಾದ ಕಟ್ಟಡವೊಂದನ್ನು ಏರಿ,ತುದಿಯ ಮಹಡಿಯನ್ನು ಸೇರಿದರು. ಮಹಡಿ ಬರಿಯ ಚಾಲಿನಂತಿರಲಿಲ್ಲ.ಮುಂಬಯಿಯವರ ಭಾಷೆಯಲ್ಲಿ ಅದೊಂದು flat ಆಗಿತ್ತು. ಎದುರುಗಡೆ ಬಾಗಿಲಿಗೆ 'ಸಖಾರಾಮ್ ಕೆ. ಜರ್ನಲಿಸ್ಟ್'ಎಂಬ ಬಿರುದಿನ ಬಿಲ್ಲೆಯು ಅಂಟಿತ್ತು. ಬಾಗಿಲನ್ನು ತೆರೆಯಿಸಿ ಒಳಕ್ಕೆ ಹೋದರು.

ರಾಧಾಕೃಷ್ಣ ಮೂರು ನಾಲ್ಕು ವರ್ಷಗಳ ಹಿಂದೆ ಮುಂಬಯಿಗೆ ಬಂದು ಹೋಗಿದ್ದನು. ಆಗ ಯಾವುದೋ ಹೋಟೆಲಿನಲ್ಲಿ ದಿನವನ್ನು ಕಳೆದಿದ್ದ. ಆದರಿಂದಾಗಿ ಮುಂಬಯಿ ಊರಿನ ವಿಷಯದಲ್ಲಿ ಅಭಿಮಾನ ಉಂಟಾಗಿರಲಿಲ್ಲ. ಜನ ಉದ್ದುದ್ದವಾದ, ಪಾರಿವಾಳದ ಗೂಡಿನಂತಿರುವ ಚಾಳುಗಳಲ್ಲಿ ವಾಸಮಾಡುತ್ತಿದ್ದರೆಂಬ ನೆನಪು. ಸಖಾರಾಮನ ಮನೆ ಅಂತಹದಾಗಿರಲಿಲ್ಲ. ಆ ಮಹಡಿಯಲ್ಲಿ ಆ ಕಡೆ, ಈ ಕಡೆ ಎರಡು ಬಿಡಾರಗಳು ಮಾತ್ರ ಇದ್ದುವು. ಒಂದೊಂದು ಭಾಗದಲ್ಲಿ ನಾಲ್ಕು ಕೋಣೆಗಳಿದ್ದುವು. ತೀರ ಮೇಲಿನ ಅಂತಸ್ತಿನಲ್ಲಿದ್ದುದರಿಂದ ಹವೆಯು ಚೆನ್ನಾಗಿತ್ತು. ಆ ಸ್ಥಳಕ್ಕೆ ತಿಂಗಳಿಗೆ ನಲ್ವತ್ತು ರೂಪಾಯಿಯಾದರೂ ಬಾಡಿಗೆ ಸಲ್ಲುತ್ತಿದ್ದಿರಬೇಕು. ಅಲ್ಲಿ ಆತ, ನಾಲ್ಕು ಮಂದಿ ಮಕ್ಕಳು, ಹೆಂಡತಿಯೊಡಗೂಡಿ ಸಂಸಾರಹೂಡಿ ಬಾಳ್ವೆ ಮಾಡುತ್ತಿದ್ದಾರೆ.ಮುಂಬಯಿಯೇ ತವರಾಗಿ ತಿಳಿದ್ದಾನೆ. ಅಂದು "ನಾವು ಬಂದುದು,ಯಾವಾಗ? ೩೦ರಲ್ಲಿ ಬಂದವರು ಇನ್ನೂ ಊರಿಗೆ ಹೋಗಿಯೇ ಇಲ್ಲ. ನಮ್ಮ ಇಬ್ಬರು ಮಕ್ಕಳು ಇಲ್ಲಿಯೇ ಹುಟ್ಟಿ ಬೆಳೆದುದು. ಮಂಗಳೂರಿನಲ್ಲಿ ಯಾರಿದ್ದಾರೆಂದು ಹೋಗುವುದು? ಕುಂದಾಪುರದ ಹಿರಿಯರ ಮನೆಯಲ್ಲಿಯೂ ಹಾಗೆ-"ಎಂದು ಸಖಾರಾಮ ಹೇಳಿದ. "ನೀವು ನಿಧಾನವಾಗಿ ಸ್ನಾನ ಮಾಡಿ, ಊಟಮಾಡಿ ಮಲಗಿಕೊಳ್ಳಿ. ನನಗೆ ಇವತ್ತು ದಿನದ ಕೆಲಸ. ಸಂಜೆ ಏಳೆಂಟು ಗಂಟೆಯೊಳಗಾಗಿ ಬರುತ್ತೇನೆ. ನಾಳೆಯಾದರೆ ಹಗಲು ರಜೆ ಇದೆ. ರಾತ್ರಿ ಕೆಲಸ" ಎಂದು ತಮ್ಮ ಆಫೀಸ್ ಕಾರ್ಯಕ್ರಮದ ವಿವರಗಳನ್ನುಹೇಳಿ ಹೊರಟು ಹೋದನು.

ರಾಧಾ ಮೊದಲು ಸ್ನಾನ ಮುಗಿಸಿ, ಊಟ ಮಾಡಿ ವಿರಮಿಸಿದನು. ವಿರಾಮವೇನು? ದೀರ್ಘವಾದ ನಿದ್ರೆಯೇ ಆಯಿತು. ಆತನಿಗೆ ಎಚ್ಚರವಾದುದು ಸಂಜೆ ನಾಲ್ಕು ಗಂಟೆಗೆ. ಸಖಾರಾಮನ ಮಗಳು ಕಿಶೋರಿ

ಆಗ ತಾನೇ ಶಾಲೆಯಿಂದ ಬಂದಿದ್ದಳು. ಆಕೆ ಕನ್ನಡವನ್ನು ಸಂಪೂರ್ಣವಾಗಿ ಮರೆತು, ಮರಾಠಿಯಲ್ಲೇ 'ಆಯಿ'ಯೊಡನೆ ಮಾತನಾಡಿದಳು. "ಹೇ ಮಾಮಾ ಕೋಣ್" ಎಂದು ಪ್ರಾರಂಭ ಮಾಡಿದಳು. ತಾಯಿ ಉತ್ತರವಿತ್ತಳು. ಆಕೆಗೂ ಮುಂಬಯಿಯ ಗಾಳಿ ಬೀಸಿ ಕನ್ನಡ ಮರೆತಂತಿತ್ತು. ಮನೆ ಮಾತಾದ ಕೊಂಕಣಿ, ಮರಾಠಿಯ ರೂಪಾಂತರಗೊಂಡಿತ್ತು. ರಾಧಾಕೃಷ್ಣನೊಡನೆ ಮಾತನಾಡುವಾಗಲೆಲ್ಲ ಮರಾಠಿ ಕೊಂಕಣಿಗಳ ಮಿಲಾವಣೆಯಾಗುತ್ತಿತ್ತು. ಸಖಾರಾಮ ಅಷ್ಟು ಕನ್ನಡವನ್ನು ಪೂರ್ಣವಾಗಿ ಮರೆತಿರಲಿಲ್ಲ. ಮನೆಯಲ್ಲಿನ ಭಾಷೆಗಳ ಗೊಂದಲನೋಡಿ ರಾಧಾಕೃಷ್ಣ ನಕ್ಕಾಗ "ಕನ್ನಡ ಹೊತ್ತುಕೊಂಡು ಏನು ಮಾಡುವುದಿದೆ? ಇನ್ನು ನಾವು ಸಾಯುವುದೂ ಇಲ್ಲಿಯೇ" ಎಂದು ಉತ್ತರವಿತ್ತಿದ್ದನು. ಮನೆಗೆ ಬಂದ ಕಿಶೋರಿಗೂ, ಅವನಿಗೂ ಉಪಹಾರವನ್ನು ಕೊಟ್ಟರು. ಕಿಶೋರಿ ಸುಮಾರು ಹದಿನಾಲು ವರ್ಷದ ಹುಡುಗಿ. ಚೆನ್ನಾಗಿ ಇಂಗ್ಲಿಷು ಮಾತು ಬಲ್ಲಳು. ಕ್ರಿಶ್ಚನ್ ಸ್ಕೂಲು ಒಂದರಲ್ಲಿ ವಾಠಮಾಡುತ್ತಿದ್ದುದರಿಂದ, ಮಾಲಿನೊಡನೆ ಇಂಗ್ಲಿಷು ಕೋಶದ ಶಬ್ದಗಳನ್ನು ಕುಡಿದವಳಂತೆ ಸಟಸಟನೆ ಮಾತನಾಡತೊಡಗಿದಳು. ರಾಧಾಕೃಷ್ಣನ ಸಂಭಾಷಣೆ ನಿರಾತಂಕವಾಗಿ ನಡೆಯಿತು.

'ಮಾಮ'ರನ್ನು ಮೊದಲದಿನ ಕಡಲ ವಿಹಾರಕ್ಕೆ ಕರೆದುಕೊಂಡು ಹೋದವಳೇ ಕಿಶೋರಿ. ಅಲ್ಲಿ, ಶಿವಾಜಿ ಪಾರ್ಕಿನ ಬದಿಯ ಕಡಲಿನ ದಂಡೆಯಲ್ಲಿ ಅವರನ್ನು ಕುಳ್ಳಿರಿಸಿ, ತಾನು ಮರಳಿನಲ್ಲಿ ಆಟವಾಡತೊಡಗಿದಳು. ಮರಳಲ್ಲಿ ಕುಣಿ ತೋಡುವಳು. ಹಸಿ ಮಣ್ಣನ್ನು ಕಾಲಿಗೆ ಒತ್ತಿ ಗವಿಯಂತೆ ಗೂಡು ಮಾಡುವಳು. ಒಮ್ಮೊಮ್ಮೆ ಕಡಲಿನ ಅಲೆಗಳನ್ನು ತುಳಿಯಲು ಆಚೀಚೆ ಓಡುವಳು. ತುಂಬ ದುರ್ಬಲವಾದ ಅಲೆಗಳು ಅಲ್ಲಿಯವು. ನೀರಿಗೂ ಕೊಳೆಯ ಬಣ್ಣ. ಆ ನೀರು ಮೆಲ್ಲಗೆ ಹರಿದು ಬಂದು ಕಿಶೋರಿ ಕಟ್ಟಿದ ಬಾವಿಯನ್ನು ತುಂಬುವುವು. ಮನೆಯನ್ನು ಅಳಿದು ಬಿಡುವುವು. "ನನ್ನ ಕನಸಿನ ಮನೆಗಳು ಇಂಥವೇ ಅಲ್ಲವೇ" ಎಂದು ರಾಧಾಕೃಷ್ಣ ನೋಡಿ, ನೆನೆದು, ನಕ್ಕನು. ಸುಮಾರು ಎಂಟು ಗಂಟೆಯ ತನಕ ಅಲ್ಲಿಯೇ ಹೊತ್ತು ಕಳೆದರು. ಹೊತ್ತು ಮುಳುಗಿದ ಮೇಲೆ ಕಿಶೋರಿ ಮಾಮನ ಬಳಿಯಲ್ಲಿ ಕುಳಿತು ಮುಂಬಯಿಯ ಕತೆ

ಹೇಳುತ್ತಿದ್ದಳು. ಜನ ಹೇಗೆ ಯುದ್ಧದ ಭೀತಿಯಿಂದ ಊರು ಬಿಡುತ್ತಿದ್ದಾರೆ; ತಮಗೆ ಅಷ್ಟು ಸುಲಭದಲ್ಲಿ ಅಂಥ ಚೆನ್ನಾದ ಮನೆ ಹೇಗೆ ಬಾಡಿಗೆಗೆ ದೊರೆಯಿತು ಎಂಬ ಕತೆಯನ್ನು ಹೇಳುತ್ತಿದ್ದಳು. ಈತ ಅವಳ ಅಣ್ಣ, ತಮ್ಮಂದಿರ ವಿಚಾರವಾಗಿ ಪ್ರಶ್ನೆಮಾಡುತ್ತಿದ್ದ. 'ಇನ್ನು ಹೊರಡುವಾ' ಎಂದು ಹೊರಟರು. ಬಹುದೂರ ಹೋಗಬೇಕಾಗಿರಲಿಲ್ಲ. ಅಲ್ಲದೆ ಕತ್ತಲೆ ಕವಿದ ದಾರಿ. ಆದರೆ ಎಲ್ಲ ಮನೆಗಳ ಕಿಟಕಿ, ಬಾಗಿಲುಗಳ ಕದವಿಕ್ಕಿದ್ದರು; ತೆರೆ ಹಾಕಿದ್ದರು. ಅಂತೂ ಬೆಳಕು ಕಾಣಿಸುತ್ತಿರಲಿಲ್ಲ. "ರಾತ್ರಿ ಹತ್ತು ಗಂಟೆಯ ಮೇಲೆ ದೀಪ ಉರಿಯುವುದಕ್ಕೇನೆ ಇಲ್ಲ" ಎಂದಳು ಆ ಹುಡುಗಿ. ಅಂತು ಅವರು ಮನೆಗೆ ಬಂದರು. ಹಿಂದೆ ತಾನು ಮುಂಬಯಿಗೆ ಬಂದಾಗ ರಾತ್ರಿ ವೇಳೆಯಲ್ಲಿ ಮುಂಬಯಿ ನಿತ್ಯ ದೀಪೋತ್ಸವ ಮಾಡುತ್ತಿದ್ದಂತೆ ಕಾಣುತ್ತಿತ್ತು. ಈಗ ಅಷ್ಟೊಂದು ಅಂಧಕಾರವು ತುಂಬಿದೆ. ಮುಂಬಯಿ ತನ್ನಂತೆಯೇ ಆಗಿದೆ ಎಂದು ಆತ ಮನೆಗೆ ಮರಳಿದನು.

* * * * * * *

ತನ್ನ ಮಿತ್ರನ ಮನೆಯಲ್ಲಿ ರಾಧಾಕೃಷ್ಣ ಬಹು ದಿನ ಸಂತೋಷವಾಗಿ ಕಳೆದನು. ಸಖಾರಾಮ ಅಂದಿನಿಂದ ಇಂದಿಗೂ ಒಂದೇ ಬಗೆಯ ಚಿತ್ತವೃತ್ತಿಯಿರಿಸಿಕೊಂಡವನಂತೆ ಕಂಡಿತು. ಶರೀರದ ಕಷ್ಟಗಳಿಗೇನೋ ಆತ ಆಳಾಗಿರಲಿಲ್ಲ. ಆದುದರಿಂದಲೇ ಮುಂದೊತ್ತಿ ಹೋದ ಮನಸ್ಸನ್ನು ತಡೆದು ಹಿಂದಿರುಗಿ ಬಿಟ್ಟ. ಕುಂದಾಪುರದಲ್ಲಿ ಕಳೆದ ಮೂರು ತಿಂಗಳೇ ಅದಕ್ಕೆ ಕೊನೆ. ಸಂಸಾರದ ನಿಜತ್ವ, ಹೆಂಡತಿ ಮಕ್ಕಳನ್ನು ಸಾಕುವ ಹೊಣೆಗಾರಿಕೆಗಳಿಂದಾಗಿ ಅವನು ಜೀವನದ ದಾರಿಯನ್ನು ಬದಲಿಸಿದನು. ಮುಂಬಯಿಗೆ ಬಂದು ಇದ್ದ ಮೊದಲಿನ ಎರಡು ಮೂರು ವರ್ಷಕಾಲ ಏನೇನೋ ನೌಕರಿಗಳನ್ನು ಮಾಡಿಕೊಂಡು ಸಮಯ ಕಳೆದನು. ದೊರೆತ ವೇತನ ತನ್ನ ಖರ್ಚು ವೆಚ್ಚಕ್ಕೆ ಸಾಕಾಯಿತಾದರೂ ಗುಮಾಸ್ತಿಕೆಯ ಉದ್ಯೋಗದಿಂದ ಮಾನಸ್ಸಿಗೆ ತೃಪ್ತಿ ಬರಲಿಲ್ಲ. ಸ್ವಂತ ಬಯಕೆಗಳುಳ್ಳ ಮನುಷ್ಯನಿಗೆ, ಗುಮಾಸ್ತಿಕೆಯ ರೂಪವೆಂಥದಾದರೂ, ಆ ಉದ್ಯೋಗವೇ ಉತ್ಸಾಹ ಕೊಡುವಂತಿಲ್ಲ. ಈತನಿಗೆ ರಾಜಕೀಯದಲ್ಲಿ ಅಭಿರುಚಿ ಹೆಚ್ಚು. ದೇಶದ ಮೇಲಿನ ಪ್ರೀತಿಯಿಂ

ಬಲವಾಗಿಯೇ ಇತ್ತು. ಅದರಿಂದಾಗಿ ಮುಂಬಯಿಯ ಅನೇಕ ಪುಸ್ತಕ ಭಂಡಾರಗಳ ಪರಿಚಯ ಮಾಡಿಕೊಂಡು ಚರಿತ್ರೆ, ರಾಜಕಾರಣದ ಗ್ರಂಥಗಳನ್ನು ಅಭ್ಯಾಸ ಮಾಡತೊಡಗಿದನು. ಮೊದಲು ಮನಸ್ಸಿನಲ್ಲಿ ಉಂಟಾದ ಆವೇಶಕ್ಕೆ, ಈಗ ವಿಚಾರಗಳ ಅಸ್ತಿವಾರ ದೊರೆಯಿತು. ಭಾವಾವೇಶಗಳಿಂದ ರಾಜಕೀಯ ತತ್ವಗಳನ್ನು ಒಪ್ಪಿ ಕೂಗಾಡುವ ಬದಲು, ತರ್ಕಾತರ್ಕಗಳಿಂದ ತನ್ನದೇ ಆದ ತೀರ್ಮಾನಗಳನ್ನು ಮಾಡುವುದಕ್ಕೆ ಸಹಾಯವಾಯಿತು. ಅದರ ಜತೆಗೆ, ತನ್ನ ವಿಚಾರಗಳನ್ನು ಜನರ ಮುಂದಿಡಬೇಕೆಂಬ ಹಂಬಲ ಮತ್ತೂ ಹೆಚ್ಚಿತು. ಪತ್ರಿಕೆಗಳಿಗೆ ರಾಜಕೀಯ ವಿಷಯಗಳ ಮೇಲೆ ಲೇಖ ಬರೆಯತೊಡಗಿದನು. ತನ್ನ ಆವೇಶವು, ಕಲಶಕ್ಕೆ ನೆರವಾಗಲಿಲ್ಲ ಎಂದು ಅರಿತವನು ಬರಹಗಳಲ್ಲಿ ಆವೇಶಕ್ಕೆ ಎಡೆಗೊಡದ ವಿಷಯ, ವಸ್ತು, ಅಂಕೆ, ಸಂಖ್ಯೆಗಳ ತುಲನೆಯಿಂದ ನಾಡಿನ ಬಹುಮುಖವಾದ ಪ್ರಶ್ನೆಗಳನ್ನು ಕುರಿತು ಬರೆಯತೊಡಗಿದನು. ನಿಧಾನವಾಗಿ ಮುಂಬಯಿಯ ಪತ್ರಿಕೆಗಳ ಜಗತ್ತಿನಲ್ಲಿ ಅವನ ಬರಹಕ್ಕೆ ಮನ್ನಣೆ ಬರತೊಡಗಿತು. ಕೆಲವು ಪತ್ರಿಕೆಗಳ ಸಂಪಾದಕ ಮಂಡಲದಿಂದಲೂ ಕರೆ ಬಂದಿತು. ಆದರೆ ಅಲ್ಲಿನ ಒಂದೇ ಒಂದು ತೊಡಕನ್ನು ಮನಗಾಣುವುದು ಕಷ್ಟವಾಗಲಿಲ್ಲ. ಉಪಸಂಪಾದಕನಾಗಿ ಕೆಲಸ ಮಾಡಿ, ಸುಖಜೀವನವನ್ನೇನೋ ಸಾಗಿಸಬಹುದು. ಆದರೆ ಒಂದೊಂದು ಪತ್ರಿಕೆ, ಒಂದೊಂದು ಪಂಗಡಕ್ಕೆ, ಒಂದೊಂದು ಪಂಥಕ್ಕೆ ಕಟ್ಟುಬಿದ್ದಿರುವಾಗ ನಿರ್ಭೀತಿಯಿಂದ ಬರೆಯಬಹುದೇ ಎಂಬ ಅನುಮಾನ ಅವನಿಗೆ ಇದ್ದೇ ಇತ್ತು. ಹಾಗೂ ಹೀಗೂ ಬರವಣಿಗೆಯಿಂದ ಮೆಲ್ಲಗೆ ಬಂದು ಸ್ಥಾನವನ್ನು ದೊರಕಿಸಿಕೊಂಡನು. ತನ್ನ ವಿಚಾರ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವ ಪತ್ರಿಕೋದ್ಯೋಗಿಯಾಗಿ ಬಾಳ್ವೆಯನ್ನು ಸಾಧ್ಯಮಾಡಿಕೊಂಡಿದ್ದಾನೆ.

ರಾಧಾಕೃಷ್ಣ ಸಖಾರಾಮನೊಡನೆ ಅನೇಕಬಾರಿ ಚರ್ಚೆ ನಡೆಯಿಸುತ್ತಾನೆ. ಪ್ರಪಂಚದ ಎಲ್ಲ ಪ್ರಶ್ನೆಗಳೂ ಮಾತಿನಲ್ಲಿ ಬರುತ್ತವೆ. ಆಗ ಸಖಾರಾಮನಲ್ಲಾದ ಮಾನಸಿಕ ಪರಿವರ್ತನೆಗಳನ್ನು ತಿಳಿಯುವುದು ರಾಧಾಕೃಷ್ಣನಿಗೆ ಸಾಧ್ಯವಾಗಿದೆ. ಹಿಂದೆ ಅವರು ಜತೆಯಲ್ಲಿದ್ದಾಗ ಉತ್ಕಟ ದೇಶಾಭಿಮಾನ, ಜತೆಗೆ ಗಾಂಧಿ ಅಭಿಮಾನ, ಗಾಂಧಿ ತತ್ವಾಭಿಮಾನ

ಮಾತ್ರ ಅವನಿಗೆ ಕಾಣಿಸುತ್ತಿತ್ತು. ಇಬ್ಬರ ವಿಚಾರ ಸರಣಿಗಳೂ ಒಂದೇ ತೆರನಾಗಿತ್ತು. ಈಗ ಹಾಗಲ್ಲ. ಅವರ ಚರ್ಚೆಗಳ ರೀತಿಯೂ ಭಿನ್ನ ವಾಗಿದೆ. ತೀರ್ಮಾನಗಳಲ್ಲಿಯೂ ಎಷ್ಟೋ ವ್ಯತ್ಯಾಸ. ತಾವು ಚರ್ಚಿ ಸುತ್ತಿರುವ ವಿಷಯಗಳಿಗೆ ಎಷ್ಟೆಲ್ಲ ಮುಖಗಳು ಸಾಧ್ಯ ಎಂದು ರಾಧಾ ಕೃಷ್ಣ ತಿಳಿಯತೊಡಗಿದ್ದಾನೆ. ಚರ್ಚೆಯು ಅನೇಕ ವಿಷಯಗಳು ವಿಸ್ತಾರ ಜಗತ್ತಿನವು. ಆ ಜಗತ್ತಿನ ಪ್ರಶ್ನೆ, ಸಮಸ್ಯೆಗಳನ್ನು ಕುರಿತು ತಿಳುವಳಿಕೆ ಅವನಿಗೆ ತೀರ ಕಡಿಮೆ. ಆದರೆ ಅನುಭವದ ರಾಜ್ಯದಲ್ಲಿ ಆತ ಪರಿಪುಷ್ಟ. ಎಷ್ಟೋ ಬಾರಿ ಆತ ಅನುಭವದಿಂದ ಕಲಿತುದನ್ನೆಲ್ಲಾ ಸಖಾರಾಮ ತನ್ನ ವಿಚಾರ, ಓದುಗಳಿಂದ ಕಲಿತಿದ್ದಾನೆ ಎಂದು ತೋರುವುದು.

ಪ್ರತಿ ದಿನವೂ ಸಖಾರಾಮ ಮನೆಗೆ ಬಂದನೆಂದರೆ ಚರ್ಚೆ ತೊಡ ಗುವುದು. ಅವನ ಜತೆಯಲ್ಲಿ ವಿಹಾರಕ್ಕೆ ಹೊರಟರೆ ಚರ್ಚೆಯೇ. ಸಿನೇ ಮಾಗೃಹದಲ್ಲಿ ಕುಳಿತು ಚಿತ್ರ ನೋಡುತ್ತಿರುವಾಗಲೂ ಎಡೆ ಎಡೆಯಲ್ಲಿ ಅನೇಕ ವಿಷಯಗಳ ಜಿಜ್ಞಾಸೆ ನಡೆಯುತ್ತಿತ್ತು. ರಾಧಾಕೃಷ್ಣನ ಯಾ ವತ್ತು ವೃತ್ತಾಂತವನ್ನು ಕೇಳಿ ತಿಳಿದ ಸಖಾರಾಮ, ಸ್ವಲ್ಪ ಕಾಲ ತನ್ನಲ್ಲೇ ಉಳಿದುಕೊಳ್ಳುವುದಕ್ಕೆ ಬಲವಂತ ಮಾಡಿದುದರಿಂದಲೂ, ಈತನ ಇಷ್ಟವೂ ಹಾಗಿದ್ದುದರಿಂದಲೂ ಆ ಗೆಳೆತನ ತುಂಬ ಹಿತವಾಯಿತು. ಎಲ್ಲ ಸಮಯವನ್ನು ಮಾತಿನಲ್ಲೇ ಕಳೆಯ ಬರುವುದಿಲ್ಲವಲ್ಲ? ಸಖಾರಾಮ ಆರಿಸಿ ತಂದುಕೊಡುತ್ತಿದ್ದ ಪುಸ್ತಕ, ಪತ್ರಿಕೆಗಳನ್ನು ಓದುವುದರಲ್ಲಿ ರಾಧಾಕೃಷ್ಣ ಸಮಯ ಕಳೆದನು. ಜಗತ್ತಿನ ಅತ್ಯಂತ ಅವಿಶ್ರಾಂತಿಯ ಸಮಯ, ಅವನಿಗೆ ವಿಶ್ರಾಂತಿಯ ಸಮಯವಾಗಿದೆ. ಹಾಗಿರುವ ವೇಳೆ ಯಲ್ಲಿಯೇ ಈತ ಹುಚ್ಚನಂತೆ ಮುಂಬಯಿಗೆ ಬಂದಿದ್ದರೂ, ಮುಂಬ ಯಿಯ ನಗರ ಬರಿದಾಗುತ್ತಲೇ ಇತ್ತು. ಮನೆಯಲ್ಲಿ ಹೆಚ್ಚು ಮಂದಿ ದುಡಿಯಲಿಲ್ಲದವರು, ತಮ್ಮ ಕುಟುಂಬಗಳನ್ನು ಹಳ್ಳಿಗಳಿಗೆ ಕಳುಹಿಸಿ ಕೊಟ್ಟು, ತಾವು ಒಂಟಿ ಜೀವನದಿಂದ ಕಾಲಯಾಪನೆ ಮಾಡುತ್ತಿದ್ದರು. ಸಖಾರಾಮನೊಡನೆ 'ನೀನೇಕೆ ಸಂಸಾರವನ್ನು ಊರಿಗೆ ಕಳುಹಿಸಿ ಕೊಟ್ಟಿಲ್ಲ' ಎಂದು ಕೇಳಿದರೆ "ಜರ್ಮನ್ ಇಲ್ಲವೆ ಇಟಲಿ ಸೇನೆ ಬರು ವಲ್ಲಿ ಮುಂಬಯಿ ನಗರಕ್ಕೆ ಮಾತ್ರ ಬರುತ್ತದೆಯೇ?" ಎಂದು ಹೇಳಿ ನಗುತ್ತಿದ್ದ. "ಒಮ್ಮೆ ಯುದ್ಧದ ಕೋಲಾಹಲ ಬಂತೆಂದರೆ-ಪೇಟೆ ಹಳ್ಳಿ

ಗಳೆಲ್ಲ ಒಂದೇ ಅವಸ್ಥೆಗೆ ಬರುತ್ತವೆ" ಎನ್ನುತ್ತಿದ್ದ. ಮುಂಬಯಿಗೆ ಹೋದುದರಿಂದ ರಾಧಾಕೃಷ್ಣನಿಗೆ ಇನ್ನೊಂದು ಲಾಭವೂ ಆಯಿತು. ಯುರೋಪಿನಿಂದ ನಿರಾಶ್ರಿತರಾಗಿ ಹಲವಾರು ಯಹೂದಿಕುಟುಂಬಗಳು ಮುಂಬಯಿಗೆ ಬಂದಿದ್ದುವು. ಸಖಾರಾಮನ ಗೆಳೆತನದಿಂದ ಅಂಥ ಕೆಲವರ ಪರಿಚಯವಾಯಿತು. ಕಂಗಾಲಾಗಿ ಬಂದ ಜನ, ತಮ್ಮ ಅನಿಶ್ಚಿತವಾದ ಬಾಳ್ವೆಯನ್ನು ನೆನೆದುಕೊಂಡು ಹೇಗೆ ಜೀವಿಸುತ್ತಿದ್ದಾರೆಂದು ಆತ ತಿಳಿಯಲು ಪ್ರಯತ್ನಿಸಿದನು. ಜರ್ಮನಿ, ಪೋಲೆಂಡುಗಳಿಂದ ಸರ್ವವನ್ನೂ ಕಳೆದುಕೊಂಡು ಬಂದ ಜನರ ದಾರುಣವಾದ ಕತೆಯನ್ನು ಕೇಳಿ ಈತನ ಎದೆ ಕರಗಿತು. ಅವರು ಪಟ್ಟ ಕಷ್ಟ, ನಿಷ್ಠುರ, ಕಾರ್ಯಗಳ ಮುಂದೆ ತನ್ನ ಉತ್ತರ ಕನ್ನಡದ ಅನುಭವವನ್ನೂ, ಸೋಲಿನ ಅನುಭವವನ್ನೂ, ದೇಶದ ಸ್ವಾತಂತ್ರ್ಯದ ಇತಿಹಾಸವನ್ನೂ ನೆನೆದುಕೊಂಡಾಗ, ಅವರು ಪಟ್ಟ ಪಾಡಿನ ಮುಂದೆ ತಮ್ಮ ಕಷ್ಟತೀರ ಅಲ್ಪ ಎನಿಸುತ್ತಿತ್ತು.

ಒಂದು ದಿನ ಅವರಿಬ್ಬರೂ ಮಲಬಾರು ಬೆಟ್ಟಕ್ಕೆ ವಿಹಾರಕ್ಕೆಂದು ಹೋಗಿದ್ದರು. ಅಲ್ಲಿ ಸಖಾರಾಮ ಪೋಲಿಷ್ ದಂಪತಿಗಳಿಬ್ಬರ ಪರಿಚಯವನ್ನು ಮಾಡಿಕೊಟ್ಟ. ಜತೆಗೆ ರಾಧಾಕೃಷ್ಣನ ವಿಷಯವಾದ ನಾಲ್ಕು ಹೊಗಳಿಕೆಯ ಮಾತುಗಳನ್ನೂ ಆಡಿದನು. ರಾಧಾಕೃಷ್ಣನ ಮುಖ ಸಣ್ಣದಾಯಿತು. "ನಾನೇನು ಮಾಡಿದ್ದೇನಂತೆ?" ಎಂದು ಆತ ಹೊಗಳಿಕೆಯನ್ನು ನಿರಾಕರಿಸಬೇಕಾಯಿತು. ಅನಂತರ ಎಲ್ಲರು ಕುಳಿತುಕೊಂಡು ಪರಸ್ಪರ ಮಾತುಗಳನ್ನು ಆಡತೊಡಗಿದರು. ಆ ಪೋಲಿಷ್ ಗೃಹಸ್ಥ ಮುಂಬಯಿಯನ್ನು ಸೇರಿ ಒಂದು ವರ್ಷವೂ ಆಗಿರಲಿಲ್ಲ. ಬಂದ ಮೇಲೆಯೇ, ಇಂಗ್ಲಿಷ್ ಮಾತನಾಡಲು ಅಭ್ಯಾಸ ಮಾಡಿದರು. ಸ್ವದೇಶದಲ್ಲಿ ಆತ ವಕೀಲಿ ಉದ್ಯೋಗದಲ್ಲಿದ್ದನು. ಆಕೆ ಅಲ್ಪ ಸ್ವಲ್ಪ ಚಿತ್ರ ಬರೆಯುತ್ತಾಳೆ. ಅದನ್ನು ಕೇಳಿ ರಾಧಾಕೃಷ್ಣ "ಈಗ ಅವರೇನು ಮಾಡುತ್ತಿದ್ದಾರೆ" ಎಂದು ತಿಳಿಯುವ ಆತುರವನ್ನು ತೋರಿಸಿದನು. ಅವರು ತೆರಳಿದ ಬಳಿಕ ಸಖಾರಾಮ ಎಲ್ಲವನ್ನೂ ವಿವರಿಸಿದನು. "ಸ್ಟೆನಿಸ್ಲೋವಿಸ್ಕಿ ಇಲ್ಲಿ ಉದ್ಯೋಗವಿಲ್ಲದೆಯೇ ಇದ್ದಾನೆ. ಅಂದರೆ ಸಂಪಾದನೆಯ ದಾರಿ ಇಲ್ಲದೇ ಇದ್ದಾನೆ. ಆಗಾಗ ಪೋಲೆಂಡನ್ನು ಕುರಿತು ಮುಂಬಯಿ

ಪತ್ರಗಳಿಗೆ ಏನಾದರೂ ಲೇಖನ ಬರೆಯುತ್ತಾನೆ. ಅವನ ಹೆಂಡತಿ ಕ್ರಿಸ್ಮಸ್ ಕಾರ್ಡ, ನ್ಯೂಯಿರ್ಸ್ಕ ಕಾರ್ಡು, ಇವುಗಳ Design ಚೆನ್ನಾಗಿ ಬರೆಯುತ್ತಾಳೆ. ಅಭಿರುಚಿ ಇಲ್ಲದ ಮುಂಬಯಿ ಪ್ರಕಾಶಕರಿಗೆ ಅವನ್ನು ಮಾರಿ ಏನೋ ಅಲ್ಪ ಸ್ವಲ್ಪ ದುಡ್ಡು ಬರುತ್ತದೆ. ಆತ ಮಾತ್ರ ತುಂಬ ಹಟಮಾರಿ. ಇಲ್ಲಿಗೆ ಬಂದವನೇ ನಮ್ಮಲ್ಲಿಯ ದೇಶಭಾಷೆಗಳ ಅಭ್ಯಾಸವನ್ನು ತೊಡಗಿದ್ದಾನೆ. ಅವನಿಗೆ ಭಾಷಾ ಶಾಸ್ತ್ರದ ಹುಚ್ಚು ಬಹಳ. ಹಿಂದಿ, ಸಂಸ್ಕೃತ ಎಂದರೆ ತುಂಬ ಪೂಜ್ಯ ಬುದ್ಧಿ. ಎಲ್ಲಿಯೇ ಆ ವಿಷಯವಾಗಿ ಉಪನ್ಯಾಸವಾಗಲಿ ಅವರಿಬ್ಬರೂ ತಪ್ಪದೇ ಹೋಗುತ್ತಾರೆ. ದಿನವೆಲ್ಲ ಮುಂಬಯಿಯ ಒಂದಲ್ಲ ಒಂದು ಪುಸ್ತಕಾಲಯದಲ್ಲಿ ಸಮಯ ಕಳೆಯುತ್ತಾರೆ" ಎಂದನು. ರಾಧಾಕೃಷ್ಣನೊಡನೆ ಮಾತನಾಡುತ್ತಿದ್ದಾಗ "ಮಂಗಳೂರು ಎಂದಿರಾ? ಅಲ್ಲಿನ ಮಾತು ತುಳು ಅಲ್ಲವೇ? ತುಳುವಿಗೂ, ತಮಿಳಿಗೂ ಸಬಂಧವಿದೆಯೇ"ಎಂದು ಕೇಳಿದ್ದ. ಈತ ಇರಬೇಕು ಎಂದಿಷ್ಟೇ ಹೇಳಿದ. ಮುಂದೆ ಆ ವಿಷಯದಲ್ಲಿ ಆತ ಹೇಳಿದ ಒಂದೆರಡು ಕತೆಗಳು ಇವನ ಕುತೂಹಲ ಹೆಚ್ಚಿಸಿದವು. "ಆದರೂ ಅವರ ಜೀವನ ತುಂಬ ಕಷ್ಟವಲ್ಲವೇ?" ಎಂದು ರಾಧಾ ಕೇಳಿದ. "ಕಷ್ಟವಲ್ಲದೆ ಇದ್ದೀತೆ? ಆದರೂ ಅವರ ಸ್ವಭಾವದಲ್ಲಿ ಒಂದು ವಿಚಿತ್ರಕಾಣುತ್ತದೆ. ಆ ಜನ ಸ್ವಂತಕ್ಕೇನಾದರೂ ಒಂದು ಅಭ್ಯಾಸವನ್ನೋ, ವಿರಾಮ ಉದ್ಯೋಗವನ್ನೋ (hobby) ಇಟ್ಟುಕೊಂಡಿರುತ್ತಾರೆ. ಈತನಿಗೆ ಭಾಷಾಶಾಸ್ತ್ರ ಅಂಥದ್ದಾಗಿದೆ. ಊಟ ಬಿಟ್ಟಾದರೂ ಅದರ ಅಭ್ಯಾಸ ಮಾಡುವವನೇ. ಪೋಲಿಷ್, ಹಿಂದೀ ಅರ್ಥಕೋಶ ಮಾಡಬೇಕೆಂದಿದ್ದಾನಂತೆ ಆತ." ಎಂದನು ಸಖಾರಾಮ.

ಇದಾದ ಎರಡು ಮೂರು ದಿವಸಗಳ ತನಕ ರಾಧಾಕೃಷ್ಣನ ಮನಸ್ಸಿನಿಂದ ಆ ದಂಪತಿಗಳ ಚಿತ್ರ ಮರೆಯಲಿಲ್ಲ. ಅವರದೇ ಚಿಂತನೆ ಮಾಡುತ್ತಾನೆ. ಯಾವುದೋ ದೇಶ, ಏನೋ ಭವಿತವ್ಯ, ಎಲ್ಲ ಅನಿಶ್ಚಿಯು, ನಿರಾಶೆಗಳಿಂದ ತುಂಬಿರುವಾಗ ಮನಸ್ಸಿಗೆ ಸಂತೋಷ, ಉತ್ಸಾಹಗಳನ್ನು ತಂದುಕೊಳ್ಳುವುದಕ್ಕೆ ಅವರು ಹೇಗೆ ಶ್ರಮಿಸುತ್ತಾರೆಂದು ತೋರಿತು. ತಾನು ಅವರಿಗಿಂತ ಏನಾದರೂ ಹೆಚ್ಚಿನ ಹಾನಿ ಹೊಂದಿದ್ದೇನೆಯೇ? ಊರು ಭದ್ರವಾಗಿದೆ. ದೇಶ ಭ್ರಷ್ಟನಾಗಿಲ್ಲ. ಹೊಟ್ಟೆಯ ಚಿಂತೆಯೂ

ಕಾಡುತ್ತಲಿಲ್ಲ. ಅದರಿಂದ ತನ್ನ ಆಸೆಗಳು ಬತ್ತಬೇಕೇಕೆ? ಎಷ್ಟೋ ಕೆಲಸಗಳು, ಅದರಲ್ಲಿಯೂ ಸಾಮಾಜಿಕವಾದುವುಗಳು ಹಲವರನ್ನುಬೆದರಿಸಿವೆ ನಿಜ. ಆ ಹಲವರು ಕೈ ಬಿಟ್ಟರೂ ತನ್ನ ಒಬ್ಬನಿಂದ ಆಗಬಹುದಾದ ಕೆಲಸಗಳೇ ಇಲ್ಲವೇನು-ಎಂದೆನಿಸಿತು. ಏನಿಲ್ಲ,ತಾನೊಬ್ಬ ವಿಚಾರಶಾಲಿಯಾಗಿ ಸುತ್ತಲಿನ ಪ್ರಪಂಚದ ಆಯತೂಕಗಳನ್ನರಿತು ಬದುಕಿದುದಾದರೆ ಅದೇನೇ ಸಮಾಜಕ್ಕೊಂದು ಕಾಣಿಕೆ—ಎಂದು ತೋರಿತು. ತಾನು ಮುಂಬಯಿಗೆ ಬಂದುದು ವ್ಯರ್ಥವಾಗಲಿಲ್ಲ ಎಂದೂ ತೋರಿತು. ಸ್ಟೈನಿಸ್ಲೋವಿಸ್ಕಿಯಂತೆಆತನಿಗೆ ಇನ್ನೂ ಹಲವರ ಸ್ನೇಹ ಪರಿಚಯಗಳಾದುವು. ಅವರೆಲ್ಲರ ಅನುಭವಗಳನ್ನು ಕೇಳಿ ಸೋಜಿಗವಾಯಿತು! ಆನಂದವಾಯಿತು. ಪ್ರಪಂಚದ ಅನುಭವವನ್ನು ಹೀರುವುದರಲ್ಲಿ ಮನುಷ್ಯನಿಗಿಂತ ದೊಡ್ಡ ಪ್ರಾಣಿ ಇನ್ನಾರೂ ಇಲ್ಲ. ಅಂಥ ಮಾನವ ಜೀವಿಯ ನಿಕಟವಾದ ಪರಿಚಯವೆಂಬುದು ವಿಸ್ತೃತವಾದ ಜ್ಞಾನ ಭಂಡಾರವೇ ಸರಿ ಎಂದೂ ತೋರಿತು. ಇಷ್ಟೆ ಸಾಕೇ ಬದುಕು ಬೆಳೆಯುವುದಕ್ಕೆ? ಈ ಎಲ್ಲ ಜ್ಞಾನವನ್ನು ತಿಳಿದರೆ ಸಾಲದು. ಕೇಳಿ ಅರಿತರೂ ಉಪಯೋಗವಿಲ್ಲ; ಬದಲು ತನ್ನ ದೃಷ್ಟಿ ಪಥಕ್ಕೂ, ಜೀವನಕ್ಕೂ ಅದನ್ನು ಅಳವಡಿಸಿಕೊಳ್ಳಬೇಕು.

* * * * *

ಪ್ರಸ್ತುತಕಾಧ್ಯಯನ ಪರಿಚಯಗಳಲ್ಲಿ ಅವನಿಗೆ ಸಮಯ ಸರಿಯುತ್ತಿದ್ದುದೇ ತಿಳಿಯಲಿಲ್ಲ. ಊರಲ್ಲಿ ಕುಳಿತು, ಕೂಪ ಮಂಡೂಕನಾಗಿದ್ದ ತಾನು ತನ್ನ ದೇಶದ ವಿಚಾರದಲ್ಲಿಯೂ, ವಿಶ್ವದ ವಿಚಾರದಲ್ಲಿಯೂ ಎಷ್ಟು ಸ್ವಲ್ಪ ತಿಳಿದವನಾಗಿದ್ದೇನೆ ಎಂದು ತೋರುತ್ತಲೇ ಇತ್ತು. ಇದೇ ವೇಳೆ ಅವನ ಮನಸ್ಸನ್ನು ಕವಿದ ಇನ್ನೊಂದು ಪ್ರಸಂಗ ಕಾಲಿರಿಸಿತು. ಜಪಾನಿಯರ ದಾಳಿಯಿಂದಾಗಿ ಬರ್ಮಾದಲ್ಲಿದ್ದ ಭಾರತೀಯರು ಕಂಗೆಟ್ಟು ಓಡತೊಡಗಿದ್ದರು. ಅದರ ಸ್ವಲ್ಪ ಸ್ವಲ್ಪವಾದ ವಾಸನೆಯು ಪತ್ರಿಕೆಗಳಲ್ಲಿ ಬರತೊಡಗಿತು. ಮುಂದೆ ನಿರಾಶ್ರಿತರಾಗಿ ಬಂದ ಭಾರತೀಯರು ದೇಶದ ಎಲ್ಲ ನಗರಗಳನ್ನೂ ಸೇರಿಕೊಂಡರು. ತಮ್ಮ ಬಂಧುಗಳನ್ನು ನೆನವರಿಕೆ ಮಾಡಿ ಮುಂಬಯಿಗೆ ಬಂದ ಎಷ್ಟೋ ಕುಟುಂಬಗಳಿದ್ದುವು. ಯುರೋಪಿನಲ್ಲಿ ಯಹೂದಿಯರು ಪಟ್ಟ ನೋವಿಗಿಂತ ಕಡಿ

ಮೆಯಲ್ಲದ ನೋವು ಇವರದೆಂದು ತಿಳಿಯಿತು. ಒಮ್ಮೆಗೇ ಬ್ರಿಟಿಷರ ಭೇದಬುದ್ಧಿ ವರ್ಣದ್ವೇಷ, ತಿರುಳಿಲ್ಲದ ಬಡಾಯಿಗಳು ಹೊಳೆದುವು. ಪತ್ರಿಕೆಗಳನ್ನೋದುತ್ತ, ಓಡಿಬಂದ ಜನರ ಅನುಭವಗಳನ್ನು ಕೇಳುತ್ತ ರಾಧಾಕೃಷ್ಣನ ಮನಸ್ಸು ಬ್ರಹ್ಮಾಂಡವಾಯಿತು. ನಾವು ಇಷ್ಟೊಂದು ಜನ ಇದ್ದೂ ಅವರ ಸಲುವಾಗಿ ಏನೂ ಮಾಡಲಾರೆವೇ ಎಂದು ತೋರ ತೊಡಗಿತು.

ಅದಕ್ಕೆ ಸಖಾರಾಮ "ನಾವೇ? ಮಾಡುವುದು ಅಷ್ಟರಲ್ಲಿಯೇ ಇದೆ. ಕಣ್ಣು ಕಣ್ಣು ಬಿಟ್ಟು ನೋಡಬಹುದು. ಜಪಾನಿಯರ ಧಾಳಿಯ ಮುಂದೆ ಬ್ರಿಟಿಷರೇ ದಿಕ್ಕುಗೆಟ್ಟರಂತೆ. ಅವರಿಂದ ತಡೆಯಲಾಗದ್ದನ್ನು ನಮ್ಮಿಂದ ತಡೆಯಲು ಬಂದೀತೇ?" ಎಂದನು.

ನಿರಾಶ್ರಿತರಾಗಿ ಐನೂರು, ಆರ್ನೂರು ಮೈಲು ದೂರ, ಕಾಡು ಬೆಟ್ಟ ಗಳಲ್ಲಿ ನಡೆದು ದಣಿದು ಕಲೆವಾ ಹಾದಿಯಾಗಿ ಮಣಿಪುರಕ್ಕೆ ಬರುವ ತನಕ ಜನ ಪಟ್ಟ ಪರಿತಾಪವನ್ನು ಕೇಳಿಯೇ ರಾಧಾಕೃಷ್ಣನ ಶಾಂತಿ ಕೆಟ್ಟಿತು. ಹಗಲು ರಾತ್ರಿಯೂ ಅವೇ ಚಿತ್ರವನ್ನು ಕನಸಿನಲ್ಲಿ ಕಟ್ಟಲು ಎಣಿಸುತ್ತಾನೆ. ತಮ್ಮವರನ್ನು ಅಲ್ಲಿಯೇ ಬಿಟ್ಟು ಬಂದವರೆಷ್ಟು ಮಂದಿ? ಸ್ವದೇಶಕ್ಕೆ ಓಟ ಹೂಡಿದವರೆಷ್ಟು ಮಂದಿ? ದಾರಿಯಲ್ಲಿ ನೀರಿಲ್ಲದೆ ಸತ್ತ ವರೆಷ್ಟು ಮಂದಿ? ಸಾಲದುದಕ್ಕೆ-ಬರ್ಮಿ ಡಕಾಯಿತರ ಕೈಗೆ ಸಿಕ್ಕಿ ಹತರಾದವರು ಎಷ್ಟು ಮಂದಿ? ಹಾಗೆ ತಪ್ಪಿಸಿಕೊಂಡು ಬಂದವರು ಪಾಂಡವ ಪಡೆಯ ನಾಯಿಯಷ್ಟೇ ವಿರಳ. ಪಾಂಡವ ನಿರ್ಯಾಣದ ದಾರುಣ ಚಿತ್ರ ಇಲ್ಲಿ ವಿಶಾಲ ಚಿತ್ರಪಟವಾಗಿ ಕಣ್ಮುಂದೆ ಕಟ್ಟುತ್ತದೆ. ಬಂಗಾಲಕ್ಕೆ ಬರುವ ಸುಲಭವಾದ ದಾರಿ ಇರಲು, ಈ ದೀರ್ಘ ಮಾರ್ಗ ವನ್ನು ಹಿಡಿದು ಜನಬಲಿಯಾದುದೇತಕ್ಕೆ? ವರ್ಣದ್ವೇಶದಿಂದಾಗಿ ನೀರಲ್ಲಿ ಮುಳುಗಿ ಸಾಯುವಾಗಲೂ ಕರಿದು, ಬಿಳಿದು ಎಂದು ವ್ಯತ್ಯಾಸ ಮಾಡಿ ದುದಕ್ಕಾಗಿ. ವರ್ಣದ್ವೇಶದ ಪರಮಾವಧಿ ಇದು. ಹಿಟ್ಲರನ ಯಹೂದಿ ದ್ವೇಷ ಬ್ರಿಟಿಷರ ಈ ಕರಿ, ಬಿಳಿಯ ಈ ದ್ವೇಷಕ್ಕಿಂತ ಏನು ಹೆಚ್ಚು— ಎಂದು ತೋರಿತು. ಹಿಟ್ಲರನ ಮೇಲಿನ ತಿರಸ್ಕಾರ ಬ್ರಿಟಿಷರ ಮೇಲೆಯೂ ಹಬ್ಬಿತು. ಆಧುನಿಕ ರಾಜಕೀಯದಲ್ಲಿ ದೇಶವು ಗಾಂಧೀಜಿ ಯವರ ಮೋರೆಯನ್ನು ನೋಡುತ್ತಲೇ ಇತ್ತು. ನಾಜಿ ಕ್ರೌರ್ಯಗಳನ್ನು

ಖಂಡಿಸಿದ ಕಾಂಗ್ರೆಸ್ಸ್ ಬ್ರಿಟಿಷರು ಕಂಗಾಲಾದ ಗಳಿಗೆಯಲ್ಲಿ ಕೈ ಮಾಡೆವು ಎಂದು ಸಾರಿತ್ತು. ಆದರೆ ಬರ್ಮಾದಲ್ಲಿ ಆದ ಅನ್ಯಾಯದಿಂದ ಬ್ರಿಟಿಷರ ರಕ್ಷಣಾ ಶಕ್ತಿಯ ಮೇಲಿದ್ದ ಗೌರವ ಎಲ್ಲವೂ ಹೋಯಿತು. ಅದು ರಾಧಾಕೃಷ್ಣನ ಒಬ್ಬನ ಪಾಲಿಗೇನೇ ಅಲ್ಲ. ಎಲ್ಲರ ಪಾಲಿಗೂ ಹಾಗೇನೇ ಆಯಿತು. ನಾಜೀ ಪಂಥದ ಮೇಲೆ ಯಾರಿಗೂ ಸಹಾನುಭೂತಿ ಇಲ್ಲದೆ ಹೋದರೂ, ಬ್ರಿಟಿಷರ ಮೇಲಿನ ಮಮತೆಯೂ ದೂರವಾಯಿತು. ಆ ದ್ವೇಷ ಇನ್ನೂ ಬಲವಾಗುವಂತೆ ಬರ್ಮಾದ ಪ್ರಕರಣ ಸಹಾಯ ಮಾಡಿತು. ರಾಧಾಕೃಷ್ಣ ತನ್ನಷ್ಟಕ್ಕೇ ಅಂದು ಕೊಳ್ಳುತ್ತಿದ್ದಾನೆ: "ಕಾಂಗ್ರೆಸ್ಸಿನ ಮೌನದ ನೀತಿ ಎಷ್ಟು ದಿನ ಕಾಲ ಸಾಧಿಸೀತು? ಈ ಸಮಯದಲ್ಲಿ ಚಳವಳಿ ಹೂಡದೆ ಹೋದರೆ ಯುದ್ಧದಲ್ಲಿ ಗೆಲವಾಗಿ ಅವರ ಸ್ಥಾನ ಭದ್ರವಾದ ಮೇಲೆ ಹೂಡುವುದೇನು? ಆಗ 1921, 1930—32ರ ಪಾಡೇ ಬರುತ್ತದೆ. ಲಾಠಿಯ ಬಲದಿಂದ ನಮ್ಮ ಚಳವಳಿಗಳನ್ನು ನಿಲ್ಲಿಸುತ್ತಾರೆ". ಏನೋ, ಇಂಥ ವೇಳೆಗೆ ನಮ್ಮ ದೇಶ ಒಂದಾಗಿ ದಂಗೆ ಏಳಬೇಕೆಂದೂ ತೋರಿತು. ಆದರೆ ಗಾಂಧೀಜಿಯವರ ಅಹಿಂಸಾ ಮಾರ್ಗ ಎಲ್ಲಿಯ ತನಕ ನಡೆದೀತು? ಏನು ಪ್ರಯೋಜನ? ವೈರಿಯನ್ನು ಕಾಣದೆನೇ ಗುಂಡು ಸುರಿಸುವ ವಿಮಾನ ಯುಗದಲ್ಲಿ, ಸಿಡಿಗುಂಡುಗಳ ಯುಗದಲ್ಲಿ, ಅಹಿಂಸೆಯಿಂದ ವೈರಿಯ ಹೃದಯ ಪರಿವರ್ತನೆಯಾಗುತ್ತದೆಯೆ? ಲಾಠಿಗೆ ತಲೆಯೊಡ್ಡಿದಾಗ ಕೇರಳ ಪೋಲೀಸರ ಹೃದಯ ಪರಿವರ್ತನೆಯಾಗಲಿಲ್ಲ. ಇನ್ನು ಲಂಡನಿನಲ್ಲಿ ಕುಳಿತಿರುವ ಚರ್ಚಿಲ್ಲನ ಹೃದಯ ಪರಿವರ್ತನೆಯಾಗುವುದುಂಟೇ ಎಂದು ತೋರತೊಡಗಿತು. ಪ್ರಯತ್ನಪೂರ್ವಕವಾಗಿ ಬೆಳೆಯಿಸಿಕೊಂಡು ಬಂದ ಅಹಿಂಸಾವೃಕ್ಷ ಸಂಪೂರ್ಣವಾಗಿ ಅವನ ಮನಸ್ಸಿನಿಂದ ಕಿತ್ತು ಉರುಳಿಹೋಯಿತು. ಆದರೆ ಪ್ರತಿಹಿಂಸಾ ಮಾರ್ಗ ಎಂಥದು, ಏನು ಎಂದು ಮಾತ್ರ ತೋರುವಂತಿರಲಿಲ್ಲ.

* * * * *

ರಾಧಾಕೃಷ್ಣನ ಮನಸ್ಸೊಂದರಲ್ಲಿಯೇ ಈ ವಿಪ್ಲವವಾದುದಲ್ಲ; ಭರತಖಂಡದಲ್ಲೆಲ್ಲ ಈ ಕೋಲಾಹಲ ಉಂಟಾಯಿತು. ಬರ್ಮಾ ದೇಶದಲ್ಲಿ ಉಂಟಾದ ನೋವು ಎಲ್ಲ ಮುಖಂಡರನ್ನೂ ನೋಯಿಸಿತು.

ದೇಶದಲ್ಲಿ ಸ್ವಾತಂತ್ರ್ಯ ಬಯಕೆಯ ಕಾವು ಇನ್ನೊಮ್ಮೆ ಮೈದೋರಿತು. ತಮ್ಮ ನಾಡನ್ನು ಸ್ವಾರ್ಥದ ರಣಕೋಲಾಹಲಕ್ಕೆ ಎಳೆದುದು ಬೇರೆ; ತಮ್ಮ ಜನರನ್ನು ಆಪತ್ತಿನಲ್ಲಿ ಮರೆತು ತುಚ್ಛೀಕರಿಸಿದುದು ಬೇರೆ; ವ್ಯಕ್ತಿ ಸ್ವಾತಂತ್ರ್ಯವನ್ನು ಸಂಪೂರ್ಣ ನಷ್ಟಗೊಳಿಸುವ ಆರ್ಡಿನೆನ್ಸ್‌ಗಳ ರಾಜ್ಯ ಭಾರ ಬೇರೆ. ಯಾವುದನ್ನೂ ಸಹಿಸಲು ಅಸಾಧ್ಯವಾಗಿತ್ತು. ದೇಶ ತಿರುಗಿ ಹತ್ತು ವರ್ಷಗಳ ಬಳಿಕ ಮಹಾತ್ಮಾಜೀಯವರ ಮುಖವನ್ನೇ ನೋಡುವಂತಾಯಿತು. ಇದ್ದ ಸ್ಥಿತಿಯಲ್ಲಾದರೂ ನಾಡು ಉಳಿದೀತೆಂಬ ಭರವಸೆ ಇರಲಿಲ್ಲ. ಒಂದು ಕಡೆಯಲ್ಲಿ ಜರ್ಮನ್ ಬಾಂಬುಗಳ ಭೀತಿ ಮುಂಬಯಿಯಲ್ಲಿ. ಜಪಾನಿಯರ ಧಾಳಿಯಾಗುವುದೆಂಬ ಭೀತಿ ಪೂರ್ವ ತೀರದಲ್ಲಿ. ಆಗ ಜನತೆಯ ಭವಿಷ್ಯವನ್ನು ತಮ್ಮ ಕೈಯಲ್ಲಿ ಹಿಡಿಯದೇ ಹೋದರೆ. ಇನ್ನಾರು ನಡೆಯಿಸುವರು ಎಂಬ ಯೋಚನೆ ಯಿಂದ ಮುಂಬಯಿ ನಗರದಲ್ಲಿಯೇ ಕಾಂಗ್ರೆಸ್ ಸಭೆ ಸೇರಿತು. ಹುಣ್ಣಿನ ಮೇಲೆ ಬರೆ ಇಟ್ಟಂತೆ ಕ್ರಿಪ್ಸ್ ಮಹಾಶಯನು ಬಂದು ತನ್ನ ಕೊಡುಗೆ ಯನ್ನು ಹೇಳಿ, ಕೈಹಿಂದೆ ಸೆಳೆದೂ ಹೋಗಿದ್ದ ಗಳಿಗೆ ಅದು. ದೇಶದ ಜನ ಗಳು A. I. C. C ಏನು ನಿರ್ಧಾರ ಮಾಡೀತು ಎಂಬ ನಿರೀಕ್ಷೆಯಲ್ಲಿ ದ್ದಾರೆ.

ಮೂರನೆಯ ಸ್ವಾತಂತ್ರ್ಯ ಯುದ್ಧವನ್ನು ರಾಧಾಕೃಷ್ಣ ಮನಸ್ಸಿನಲ್ಲಿ ಯೋಚಿಸಿಕೊಳ್ಳಲು ಯತ್ನಿಸುತ್ತಿದ್ದಾನೆ. ಸಖಾರಾಮನೊಡನೆ ತರ್ಕಿ ಸುತ್ತಾನೆ; ವಯ್ಯಕ್ತಿಕವಾಗಿ ಮಾಡಿದ ದುಡಿತದ ಫಲವನ್ನು ಆತ ಈಗಾ ಗಲೇ ಸಾಕಷ್ಟು ನೋಡಿದ್ದಾನೆ. ಇನ್ನೊಮ್ಮೆ ಜನತೆಯೊಂದಿಗೆ ಸೇರಿ, ತಾನು ಈ ಯುದ್ಧದಲ್ಲಿ ಧುಮುಕಬೇಕೆಂದು ಅವನಿಗೆ ಮನಸ್ಸಾಗುತ್ತದೆ. ಈ ಸ್ವಾತಂತ್ರ್ಯದ ಪ್ರಶ್ನೆಯೇ ದೊಡ್ಡದು, ಉಳಿದುವೆಲ್ಲ, ಸಣ್ಣವು-ಎಂಬ ವಿಚಾರಗಳು ಬಂದು ತುಂಬುತ್ತವೆ.

ಸಖಾರಾಮ ಪತ್ರಿಕೋದ್ಯೋಗಿಯಷ್ಟೆ. ಸಾಕಷ್ಟು ಹೆಸರನ್ನೂ ಗಳಿಸಿದ್ದಾನೆ. ಅದರಿಂದ ಅನೇಕ ಮುಖಂಡರ ಪರಿಚಯವಾಗಿದೆ. ರಾಜಕೀಯ ಸಭೆಗಳಿಗೆ ಸುಲಭ ಪ್ರವೇಶವಿದೆ. ರಾಜಕೀಯ ವಾತಾ ವರಣದ ದಿನದಿನದ ಬೆಳಣಿಗೆಯನ್ನು ಅವನಿಂದ ತಿಳಿದುಕೊಳ್ಳುವುದು ಸುಲಭವಾಗಿದೆ. ಎ. ಐ. ಸಿ. ಸಿ. ಸಭೆ ಸೇರುವ ಎರಡು ಮೂರು ದಿನಗ

ಳಿಂದ ಸಖಾರಾಮನಿಗೆ ಮನೆಗೆ ಬರುವ ಬಿಡುವಿರಲಿಲ್ಲ. ಸುದ್ದಿ, ವರದಿಗಳಿಗಾಗಿ ಅವಿಶ್ರಾಂತವಾಗಿ ಅಲೆದಾಡುತ್ತಿದ್ದ. ಒಂದು ದಿನ ಬೆಳಗು ಮುಂಜಾನೆ ಆತ ತನ್ನಮನೆಗೆ ಬಂದು ಕದವನ್ನುತಟ್ಟಿದ. ಮನೆಯೊಳಕ್ಕೆ ಬಂದವನೇ ಮಲಗಿದ ರಾಧಾಕೃಷ್ಣನನ್ನು ಎಚ್ಚರಿಸಿ ಮಾತನಾಡಿಸಿದ. 'ರಾಧಾಕೃಷ್ಣ, ನಾವು ಎಣಿಸಿದ್ದಕ್ಕಿಂತ ಮುತ್ಸದ್ದಿತನದಲ್ಲಿ ಸರಕಾರ ನಿಪುಣವಾದದ್ದೆಂದು ಕಾಣುತ್ತದೆ. ನಿನ್ನೆ ರಾತ್ರಿ ಎ. ಐ. ಸಿ. ಸಿ. ಸಭೆಯಾಗುವ ತೋಟದಲ್ಲೇ ಪತ್ರಿಕೋದ್ಯೋಗಿಗಳೆಲ್ಲ ಕಾದು ಕುಳಿತಿದ್ದರು. ಸಭೆ ನಡೆಯಿತೋ, ಇಲ್ಲವೋ! ಏನು ಚರ್ಚೆಗಳಾದುವೋ? ಒಂದನ್ನೂ ತಿಳಿಯುವುದಕ್ಕೆ ಅವಕಾಶವಾಗಲಿಲ್ಲ. ಜವಾಹಾರ್‌ಲಾಲ್, ಗಾಂಧೀಜಿ ಮೊದಲಾದವರನ್ನು ಅಷ್ಟರಲ್ಲಿ ಬಂಧಿಸಿ ದೂರ ಸಾಗಿಸಿಯೂ ಆಯಿತು." ಎಂಬ ವಾರ್ತೆಯನ್ನು ಕೊಟ್ಟನು.

"ನಿಜವೇ? ಹಾಗಿದ್ದರೆ ಮುಂದಿನ ದಾರಿ?"

"ನಡೆಯಿಸುವವರಿಲ್ಲದಾಗ ಮುಂದಿನ ದಾರಿ ಅಸ್ಪಷ್ಟ. ಮೊದಲೇ ರೋಷಗೊಂಡ ಜನತೆ — ಯಾವ ಹಾದಿ ತುಳಿಯುತ್ತಾರೆಂದು ಹೇಳಲಿ? ಅಹಿಂಸೆಯ ಮಾರ್ಗದಿಂದ ದೂರಾದಂತೆಯೇ. ನನ್ನ ಪರಿಚಿತ ಎ. ಐ. ಸಿ. ಸಿ. ಮೆಂಬರರಿಂದ ತುಟುಕು ವರ್ತಮಾನ ಮಾತ್ರ ಸಿಕ್ಕಿತು. ದೇಶದಲ್ಲೆಲ್ಲ ಕ್ರಾಂತಿಕಾರಕ ಚಳವಳ ಹೂಡುವಂತೆ ತೀರ್ಮಾನವಾಗಿದೆಯಂತೆ. ಇಂದು ನಾಳೆಯೊಳಗಾಗಿ ಕಾರ್ಯಕ್ರಮದ ವಿವರಗಳು ತಿಳಿದಾವು. ಗಾಂಧೀಜಿಯವರಾಗಲೀ ಉಳಿದ ಮುಖಂಡರಾಗಲೀ ಬಂಧನವನ್ನು ನಿರೀಕ್ಷಿಸಿಯೇ ಇದ್ದರು."

ಅಲ್ಲಿಂದ ಸಖಾರಾಮ ಚಹಾ ಮಾಡಿಸಿ ಕುಡಿದು ಹಾಸಿಗೆ ಬಿಡಿಸಿ ಮಲಗಿಕೊಂಡ. ರಾಧಾಕೃಷ್ಣ ಬೆಳಗಿನ ದಿನ ಪತ್ರಿಕೆಗಳಿಗಾಗಿ ಕಾದು ಕುಳಿತ. ಪತ್ರಿಕೆಗಳಲ್ಲಿ ಬಂಧನಕ್ಕಿಂತ ಹೆಚ್ಚಿನ ಸುದ್ದಿ ಬರುವುದು ಶಕ್ಯವಿರಲಿಲ್ಲ.

ಒಂದೆರಡು ದಿವಸಗಳ ಕಾಲ ಮುಂಬಯಿ ನಗರ ತೆರತೆರನ ಸುದ್ದಿಗಳಿಂದ ಕುದಿಯಿತು. ಮೂರನೆಯ ಸ್ವಾತಂತ್ರ್ಯ ಸಂಗ್ರಾಮ ತೊಡಗಿದೆಯಾದರೂ ಅದನ್ನು ಕುರಿತಾದ ಸುದ್ದಿಗಳಿಗೆ, ಪ್ರಕಟಣೆಗಳಿಗೆ ಪ್ರತಿಬಂಧಕ ಆಜ್ಞೆಗಳು ಹೊರಟವು. ಸಾರ್ವಜನಿಕ ಸಭೆ, ಮೆರವಣಿಗೆಗಳು

ನಿಷೇಧಿಸಲ್ಪಟ್ಟವು. ಸರಕಾರವು ತನ್ನ ಬಿಗಿಯನ್ನು ಬೆಳೆಯಿಸಿ, ಜನರೊಡನೆ ತಾನಾಗಿ ಜಗಳಕಾಯುತ್ತಿದ್ದಂತೆ ಕಾಣಿಸಿತು. ದೇಶದ ಎಲ್ಲ ಕಡೆಗಳಲ್ಲಿಯೂ ಧಿಕ್ಕಾರದ ಸಭೆ, ಮೆರವಣಿಗೆಗಳಾದುವು. ಲಾಠಿ, ಗುಂಡಿನೇಟುಗಳ ಪ್ರಕರಣಗಳು ನಡೆದುವು. ಸರಕಾರದ ಕ್ರೌರ್ಯಕ್ಕೆ ಸಮತೂಕದಲ್ಲಿ ಜನತೆ ಉದ್ವಿಗ್ನವಾಯಿತು. ಜನರು ಅಹಿಂಸೆಯನ್ನು ಈ ಬಾರಿ ಮರೆತಂತೆಯೇ ಕಂಡಿತು.

*　　*　　*　　*　　*

ಮೂರನೆಯ ಸಂಗ್ರಾಮ ವಿಸ್ತಾರವಾಗಿ ವ್ಯಾಪಿಸಿತು. ಈ ಬಾರಿ ಅಹಿಂಸೆಯ ಮಾತೇ ಉಳಿಯಲಿಲ್ಲ. ಹಿಂಸೆಯ ದಾರಿಯನ್ನುಗಾಂಧೀಜಿಯವರು ಖಂಡಿಸಿದ್ದರಾದರೂ, ಗಾಂಧಿಯವರನ್ನು ಬಂಧಿಸಿದ ರೋಷ ಅಹಿಂಸೆಯನ್ನು ಮುಳುಗಿಸಿ ಬಿಟ್ಟಿತು. 'ಮಾಡು ಇಲ್ಲವೆ ಮಡಿ' ಎಂಬ ಕರಪತ್ರಗಳು ಎಲ್ಲೆಲ್ಲಿಯೂ ಹಾರಾಡಿದುವು. ಮುಖಂಡರ ಹೆಸರಿನಲ್ಲಿ ವಿವಿಧ ರೀತಿಯ ಪ್ರತಿಬಂಧಕ ಚಳವಳಗಳ ರೂಪ,ಕಾರ್ಯಕ್ರಮಗಳನ್ನು ಸೂಚಿಸಿ ಬರಹ ಮೂಲಕವಾದ ಸೂಚನೆಗಳು ಎಲ್ಲೆಲ್ಲಿಯೂ ಹಂಚಲ್ಪಟ್ಟುವು. ಅದರ ಪರಿಣಾಮವೆಂದರೆ ಕೈ ಕೈ ಕಾಳಗ! ರೈಲುಗಳನ್ನು ಉರುಳಿಸುವುದಕ್ಕೆ ಆರಂಭವಾಯಿತು. ಸರಕಾರಿ ಕಚೇರಿಗಳನ್ನು ಸುಡತೊಡಗಿದರು. ಸೇತುವೆಗಳ ನಾಶ, ತಂತಿ ಟಪ್ಪಾಲುಗಳ ನಾಶ, ಸರಕಾರಿ ಹಣದ ಸುಲಿಗೆ—ಎಲ್ಲ ಬಗೆಯ ಉಗ್ರಕಾರ್ಯಕ್ರಮಗಳು ಪ್ರಾರಂಭಗೊಂಡುವು.

ಇಂಥ ಪರಿಸ್ಥಿತಿಯಲ್ಲಿ ಸುಖವಾಗಿ ತನ್ನ ಮಿತ್ರನ ಮನೆಯಲ್ಲಿ ಕುಳಿತು, ಉಂಡು ತಿನ್ನುವುದಕ್ಕೆ ರಾಧಾಕೃಷ್ಣನಿಂದ ಸಾಧ್ಯವೇ? ತನ್ನ ಗೆಳೆಯನೊಡನೆ ಚರ್ಚಿಸಿದರೆ ಆತ "ಹಿಂದು ಮುಂದು ನೋಡದೆ ಈ ಕದನದಲ್ಲಿ ಧುಮುಕಬೇಡ. ಈ ಬಾರಿ ಬ್ರಿಟಿಷರು ತಮ್ಮ ಹಿಡಿತ ಗಟ್ಟಿಯಾಗಲು ಅತ್ಯುಗ್ರವಾದ ಹಿಂಸೆಯನ್ನು ತೋರಿಸುವುದು ಖಂಡಿತ. ಈ ಸಮಯದಲ್ಲಿ ಸ್ವಾತಂತ್ರ್ಯ ಯುದ್ಧ ತೊಡಗಿದುದಕ್ಕಾಗಿ ಮಿಕ್ಕ ರಾಷ್ಟ್ರಗಳು, ಹಿಂದಿನಂತೆ ಬ್ರಿಟಿಷರ ನೀತಿಯನ್ನು ಖಂಡಿಸಲಾರವು" ಎನ್ನುದ್ದಾನೆ. ಅಂತಹ ವೇಳೆಯಲ್ಲಿ ಈತ ಕೈಕಟ್ಟಿ ಕುಳಿತಿರಲಾರ. ಸುದ್ದಿಯನ್ನು ತಿಳಿಸದೆ ಆತ ಮುಂಬಯಿಯನ್ನೇ ಬಿಟ್ಟ. ರೈಲಿನಲ್ಲಿ ಕುಳಿತಾಗ

ಅವನಂತೆ ಖಾದೀ ಉಡುಗೆಯನ್ನು ಉಟ್ಟ ಒಬ್ಬ ಮಿತ್ರರ ಪರಿಚಯು ವಾಯಿತು. ಕರ್ನಾಟಕದ ಧುರೀಣರಾದ ಬನ್ನಟ್ಟಿ ಎಂಬವರು ಅವರು. ಎ. ಐ. ಸಿ. ಸಿ. ಸಭೆಗೆ ಬಂದಿದ್ದರಂತೆ. ಈತನೊಡನೆ ಅವರು ಹಳೆಯ, ಹೊಸ ಸ್ವಾತಂತ್ರ್ಯ ಸಮರಗಳನ್ನು ಕುರಿತು ಚರ್ಚಿಸತೊಡಗಿದರು. "ಈ ಬಾರಿ ಕರ್ನಾಟಕವು ದೊಡ್ಡ ರಣಕ್ಷೇತ್ರವಾಗಬೇಕು, ಶಾಂತಿ ಮಾರ್ಗಕ್ಕೆ ಇದು ಕಟ್ಟಕಡೆಯ ತಿಲಾಂಜಲಿ" ಎಂದರು. ಇವನ ಕೈಗೆ 'ಮಾಡು ಇಲ್ಲವೆ ಮಡಿ' ಎಂಬ ಕರಪತ್ರವನ್ನು ತುರುಕಿದರು. ಬನ್ನಟ್ಟಿಯವರ ಹೆಸರನ್ನು ಆತ ಕೇಳಿ ಬಲ್ಲ. ಪ್ರತ್ಯಕ್ಷ ಪರಿಚಯವಾದುದು ಆಗಷ್ಟೇ. ಈತನ ಹೆಸರನ್ನು ಅವರೂ ಕೇಳಿ ಬಲ್ಲರು. ಹಿಂದೆ ಶಿರ್ಶಿ, ಸಿದ್ದಾಪುರಗಳಲ್ಲಿ ಈತ ಕೆಲಸ ಮಾಡಿದವನೆಂದು ಇಷ್ಟೇ ಗೊತ್ತು. ಅಷ್ಟೇ ಪರಿಚಯ ಸ್ನೇಹಗಳಿಂದ ಚರ್ಚೆ ಪ್ರಾರಂಭವಾಯಿತು. ಕರಪತ್ರದಲ್ಲಿ ಕಾಣಿಸಿದ ದಾರಿ ಹಿಂಸೆಯ ದಾರಿ. ಕೊನೆಗೆ ಗಾಂಧಿಯವರೂ ನಿರುಪಾಯರಾಗಿ ಈ ದಾರಿಯನ್ನು ಒಪ್ಪಿರಬೇಕೆಂದೂ ಆತನಿಗೆ ತೋರಿತು. ಮುಖ್ಯ ಅವನ ಮನಸ್ಸಿನ ಉದ್ವಿಗ್ನತೆ, ಗಾಂಧೀ ತತ್ವಗಳಿಗೆ ಹಿಂಸೆಯ ಹೊಸ ರೂಪ ಕೊಡುವುದಕ್ಕೆ ಒಪ್ಪಿದಂತಿತ್ತು. ಗಾಂಧಿಜಿಯವರೇ ಹಾಗೆಂದರೋ, ಅವರ ತತ್ವಗಳನ್ನು ಒಪ್ಪದ ಉಳಿದ ರಾಷ್ಟ್ರಭಕ್ತರು ಅಂಥ ಮಾರ್ಗದ ಸೂಚನೆ ಮಾಡಿದರೋ, ಅದನ್ನು ಅವರಿಬ್ಬರೂ ಯೋಚಿಸಲಿಲ್ಲ. "ಜನ ಎಷ್ಟು ದಿನ ಮೃತರಂತೆ ಪ್ರತಿಭಟಿಯಿಲ್ಲದೆ ಬಾಳ್ವೆ ಮಾಡಿಯಾರು? ಅಹಿಂಸೆ, ಕ್ಷಮಾ ಬುದ್ಧಿಗಳಿಗೆ ಒಂದು ಮಿತಿ ಇದೆ. ಆ ಮಿತಿ ಹಿಂದೆಯೇ ಮುರಿದಿತ್ತು. ಇನ್ನು ಅದರ ಛಾಯೆಯೇ ಉಳಿದಿಲ್ಲ" ಎಂದು ತೋರಿತು. 'ಮುಂದೊತ್ತಿ ಬರುವ ಲಾವಾ ಪ್ರವಾಹ, ಉಕ್ಕಿ ಬರುವ ನೆರೆ, ಹಾರಿಸಿ ಬಿಡುವ ಬಿರುಗಾಳಿ, ಒತ್ತಿ ಬರುವ ಪಿಡುಗು- ಅವೆಲ್ಲ ಕರುಣೆ ಇಲ್ಲದವು. ಬ್ರಿಟಿಷ್ ರಾಜ್ಯಭಾರ ಅವಕ್ಕೊಂದು ಕಡಿಮೆಯಾದುದಲ್ಲ. ಅಂಥ ವೈರಿಯ ಮುಂದೆ ಸತ್ಯಾಗ್ರಹಕ್ಕೆ ಬೆಲೆಯಿಲ್ಲ' ಎಂದು ಅವರಿಬ್ಬರು ಕೂಡಿಯೇ ಚರ್ಚಿಸಿದರು.

ಮಾತನಾಡುತ್ತ ಆಡುತ್ತ ಅವನ ಮನಸ್ಸು ಮುಂದಿನ ದಾರಿಯನ್ನು ಅರಸುತ್ತಲಿತ್ತು. 'ಮಾಡು ಇಲ್ಲವೆ ಮಡಿ' ಎಂಬ ಕರಪತ್ರ ತನ್ನದೇ ಆದ ಅರ್ಥವನ್ನು ಕೆತ್ತುತಿತ್ತು. 'ಹಿಂದಿನ ಬಾರಿ ತಾನು ಸತ್ಯಾಗ್ರಹಿ

ಗಳ ಹಿಂದೆ ನಿಂತಿದ್ದೆ. ಕೇವಲ ಅವರ ಶುಶ್ರೂಷೆಗಾಗಿ ಕೆಲಸ ಮಾಡಿದ್ದೆ. ಈ ಬಾರಿ ಹಾಗಲ್ಲ. ಇದು ಅಂತಿಮ ಹೋರಾಟ. ಯಾರು ಅಳಿಯು ತ್ತಾರೋ, ಯಾರು ಉಳಿಯುತ್ತಾರೋ ಹೇಳುವುದು ಕಷ್ಟ. ಈ ಬಾರಿ ಆಸ್ತಿ, ಮನೆ ಕಳೆದುಕೊಳ್ಳುವ ಪ್ರಶ್ನೆಯಿಲ್ಲ. ಹಾಗಿದ್ದರೂ ಅಲ್ಪ ಸಂಗತಿ. ಸೆರೆಮನೆಗೆ ಹೋಗುವುದಾದರೂ ಕ್ಷುಲ್ಲಕ ವಿಚಾರ. ಈ ಬಾರಿ ಜೀವ ವನ್ನೇ ಬಲಿಕೊಡಬೇಕಾಗುತ್ತದೆ. ಆಳರಸರ ಬೇಟೆಗೆ ಎದುರಾಗಿ ತಾವೂ ನರಬೇಟೆಯಾಡಬೇಕಾಗುತ್ತದೆ.' ಈ ವಿಷಯವಾಗಿ ಬಹಳ ಹೊತ್ತಿನ ತನಕ ಬನ್ನಟ್ಟಿಯವರೊಡನೆ ಆತ ಚರ್ಚೆ ನಡೆಯಿಸಿದನು. ಚರ್ಚೆಯ ಫಲವೆಂದರೆ ಮುಂದಿನ ದಾರಿಯ ವಿಚಾರ ಅವರಿಬ್ಬರಲ್ಲಿ ಒಂದೇ ಬಗೆಯ ಅಭಿಪ್ರಾಯ ಬಾರದೆ ಹೋದುದು. ಇಬ್ಬರೂ ಕನ್ನಡಿ ಗರೇ. ಇಬ್ಬರ ಕೆಲಸವೂ ಕರ್ನಾಟಕದಲ್ಲಿಯೇ. ಆದರೆ ಬನ್ನಟ್ಟಿಯ ವರ ಒಲವು ಈಗಾಗಲೇ ತೊಡಗಿದ ಬೆಂಕಿಯ ಪ್ರಕರಣಗಳನ್ನು, ಕನ್ನಡನಾಡಿನಲ್ಲೆಲ್ಲ ಮುಂದುವರಿಸಬೇಕೆಂದು. ಇಂಥ ಕಾರ್ಯಕ್ಕೆ ಬೇಕಾದ ಪೂರ್ವಯೋಜನೆಯನ್ನು ಅವರು ಮಾಡಿದಂತೆ ಕಾಣಿಸಲಿಲ್ಲ. ಜನಕ್ಕೆ ಸಾಕಷ್ಟು ಪ್ರೋತ್ಸಾಹಕೊಟ್ಟುದಾದರೆ ಅವರ ಆವೇಶ ಬೇಕಾ ದಂತೆ ರೂಪುಗೊಳ್ಳುತ್ತದೆ ಎಂದು ಅದರ ತೀರ್ಮಾನ. ತಮ್ಮ ಇದಿರಾ ಳಿಯ ಬಲವನ್ನಾಗಲೀ ಅವರು ವಹಿಸಬಹುದಾದ ಧೋರಣೆಯನ್ನಾ ಗಲೀ ಅವರು ಊಹಿಸಲು ಶಕ್ತರಾಗಲಿಲ್ಲ. ತ್ವರೆಯ ಜಯವೇ ಅವರ ಕಣ್ಣ ಮುಂದೆ ಕಾಣಿಸುತ್ತಿತ್ತು. ಈತ ಮುಂಬಯಿಯಲ್ಲಿ ದೊರಕಿದ ಯಹೂದಿ ಗೆಳೆಯರೊಡನೆ ಯುರೋಪಿನಲ್ಲಿ ಸಬೋಟೇಜ್ ಕೆಲಸ ಹೇಗೆ ತೊಡಗಿದರು ಎಂಬುದರ ವಿವರ ಕೇಳಿಬಲ್ಲ. ನಾಜಿಗಳನ್ನು ಎದುರಿಸಬೇಕಾದ ವೈರಿಗಳು ಎಂಥ ದಾರಿಹಿಡಿಯುತ್ತಿದ್ದಾರೆ, ಅವರ ಯುದ್ಧ ಪ್ರಯತ್ನಕ್ಕೆ ವಿಘ್ನ ತರಬೇಕಾದರೆ ಎಂಥ ಚಾತುರ್ಯ ಬೇಕು, ಎಂಥ ವ್ಯವಸ್ಥೆ ಬೇಕು, ಯಾವ ಬಗೆಯ ಗುಪ್ತಮಾರ್ಗ ಬೇಕು ಎಂಬು ದನ್ನು ಸ್ವಲ್ಪವಾದರೂ ಕೇಳಿತಿಳಿದಿದ್ದಾನೆ. ಬನ್ನಟ್ಟಿಯವರ ದಾರಿಯನ್ನು ಹಿಡಿಯುವುದಾದರೆ — ತಮ್ಮ ಚಳವಳ ಬಣಿವೆಗೆ ಹತ್ತಿದ ಬೆಂಕಿಯಂತೆ ದೊಡ್ಡ ಅಬ್ಬರದಿಂದ ತೊಡಗಿ, ಕೆಲವೊಂದು ನಿಮಿಷಗಳಲ್ಲಿ ಸ್ತಬ್ಧ ವಾ ಗುವುದು ಸಹಜ. ಆದರೂ ಇಂಥ ಕಾರ್ಯಕ್ರಮ ರೂಪಿಸಬೇಕಾದರೆ

ಅನೇಕ ಗೆಳೆಯರ ಪರಿಚಯ ಅವಶ್ಯ; ಪರಿಚಿತ ಆವರಣವೂ ಬೇಕು. ಇವನ್ನು ದೊರಕಿಸುವ ಮೊದಲೇ ತಮಗೆ ತೋರಿದಂತೆ ಮಾಡುವ ಪ್ರಯತ್ನಗಳಿಗೆ ಅರ್ಥವಿಲ್ಲ. ಹೀಗೆಂದು ಅವರೊಡನೆ ವಿಶೇಷ ಚರ್ಚೆಯನ್ನು ಬೆಳೆಯಿಸದೆ ಅವರೊಂದಿಗೆ ಬೆಳಗಾಂವಿಯ ತನಕ ಪ್ರಯಾಣ ಮಾಡಿದನು.

ಬೆಳಗಿನ ನಸುಕಿಗೆ ಮೈಲು ಗಾಡಿಯು ಬೆಳಗಾಂವನ್ನು ಸೇರಿತು. ಬಂಡಿಯಿಂದ ಇಳಿದವರು ಅವಸರ ಅವಸರವಾಗಿ ಸ್ಟೇಶನಿಂದ ಹೊರಬಿದ್ದು ತಮಗಾಗಿ ಕಾದಿದ್ದ ಒಂದು ಮೋಟರಿನಲ್ಲಿ ಕುಳಿತು ಆ ಊರನ್ನೇ ಬಿಟ್ಟು ಹೋದರು. ಆ ಆವರಣವೆಲ್ಲವು ಅವನಿಗೆ ನವೀನವೇ. ಅವನ ಮಿತ್ರರ ಪರಿಚಯವೂ ಹೊಸತೇ. ಹಾಗಾಗಿ ಪ್ರವಾಸ ಮುಗಿಯುವ ತನಕ ಮಾತಿನ ಅಂಶವನ್ನೆಲ್ಲ ಬನ್ನಟ್ಟಿಯವರಿಗೇನೆ ಬಿಟ್ಟು ತಾನು ಕೇಳುತ್ತ ಕುಳಿತನು.



# ಇಪ್ಪತ್ತೆರಡನೆಯ ಅಧ್ಯಾಯ.

ರಾಧಾಕೃಷ್ಣನ ಪತ್ರ ಊರಿಗೆ ಬಾರದೆಯೆ ಬಹಳ ದಿನಗಳಾದುವು. ಹೋದಾಗ ಒಂದೆರಡು ಪತ್ರಗಳನ್ನು ಬರೆದಿದ್ದ. ಆ ಪತ್ರಗಳು ದೀರ್ಘವಾಗಿಯೇ ಇದ್ದುವು. ಅವನ ಮುಂದಿನ ನಾಲ್ಕಾರು ಪತ್ರಗಳನ್ನು ನೋಡಿದರೆ ಮನಸ್ಸು ಅಶಾಂತಿಯಿಂದ ತುಂಬಿತ್ತೆಂದು ಕಾಣುತ್ತದೆ. ನಾಲ್ಕಾರು ಪಂಕ್ತಿಗಳಲ್ಲಿ ಒಂದೊಂದು ಪತ್ರ ಮುಗಿಯುತ್ತಿತ್ತು. ಕೊನೆಗೆ ಅದೂ ಇಲ್ಲದಾಯಿತು. ಆದರಿಂದ ಸತ್ಯ, ಶ್ಯಾಮ ಎಲ್ಲರಿಗೂ ಯೋಚನೆಯೆ. ಶ್ಯಾಮನೆನ್ನುತ್ತಾನೆ "ಅವರ ಕೊನೆ ಪತ್ರ ಮುಂಬಯಿಂದಲ್ಲವೇ? ಒಂದು ತಿಂಗಳಾಯಿತು. ಅನಂತರ ಸುದ್ದಿಯೇ ಇಲ್ಲ. ಅನಂತರವೇ ಕಾಂಗ್ರೆಸ್ ಸಭೆಯಾದುದು, ಮುಖಂಡರನ್ನು ಹಿಡಿದದ್ದು. ಅವರೂ ಖಂಡಿತವಾಗಿಯೂ ಚಳವಳಿಯಲ್ಲಿ ತಿರುಗಿ ಹಾರಿರಬೇಕು" ಎಂದು. ಅಂತೂ ದಿನೇ ದಿನೇ ಬೆಳೆಯುತ್ತಿರುವ ವಿಧ್ವಂಸಕ ಚಳವಳಿಯ ವಾರ್ತೆಗಳು ಎಲ್ಲೆಲ್ಲಿಯೂ ಹಬ್ಬಿವೆ. ಅಲ್ಲಿ ಸ್ಟೇಷನ್ ಸುಟ್ಟಿತು, ಇಲ್ಲಿ ಟಪ್ಪಾಲು ಚೀಲ ಸುಲಿಗೆಯಾಯಿತು, ಇನ್ನೊಂದು ಕಡೆ ರೈಲು ಬಂಡಿ ಉರುಳಿತು-ಎಂದು ದಿನ ದಿನವೂ ಸುದ್ದಿ ಬರುತ್ತಲೇ ಇದೆ. ಬ್ರಿಟಿಷರು ತೋರಿಪ ಅನ್ಯಾಯಕ್ಕಾಗಿ ಕೂನೆಗಾದರೂ ಪ್ರತೀಕಾರ ತೋರಿಸುವ ಸಮಯ ಬಂತಲ್ಲಾ ಎಂದು ಹಲವರ ಸಂತೋಷ. ಈ ವರ್ತಮಾನ ಓದುತ್ತ, ಅನೇಕರು ಕಾದಂಬರಿಯನ್ನು ಓದುವಾಗ ಕಥಾನಾಯಕನು ತಾನೇ ಎಂದು ತಿಳಿಯುವಂತೆ, ವಿಧ್ವಂಸನ ಕಾರ್ಯ ತಮ್ಮಿಂದಲೇ ಆಗುತ್ತಿದೆ ಎಂದು ಜನ ಊಹಿಸಿದ್ದರು. ಶ್ಯಾಮ, ಸತ್ಯ ಇವರೆಲ್ಲರೂ ಹಾಗೆಯೇ. ಇದಕ್ಕೆ ಇನ್ನೂ ಒಂದು ಮುಖ್ಯವಾದ ಕಾರಣವಿತ್ತು. ಈ ಎಲ್ಲ ವೇಳೆಯಲ್ಲಿ ದಕ್ಷಿಣ ಕನಡ ಸಾಕಷ್ಟು ಶಾಂತವಾಗಿಯೋ ಇತ್ತು. ಕೆಲವೊಂದು ಹರತಾಳಗಳು, ಅಲ್ಲಿ ಇಲ್ಲಿ ತಂತೀಕಂಬಗಳ ಮೇಲಿನ ಯುದ್ಧ, ಇಷ್ಟೊಂದನ್ನು ಬಿಟ್ಟರೆ ಹೆಚ್ಚಿನ ಯಾವ ಕೆಲಸವೂ ಅಲ್ಲಿ ಆಗಲಿಲ್ಲ. ಸರಕಾರವೇನೋ ಕೆಲವರನ್ನು ಡೆಟಿನ್ಯೂ ಆಗಿ ಸಾಗಿಸಿತು. ಇನ್ನು ಕೆಲವರು ತಮ್ಮನ್ನು ಸಾಗಿಸಲೂ ಬಹುದೆಂಬ ಯೋಚನೆಯಿಂದ ಊರು ಬಿಟ್ಟರು. ಇಂಥ ವಿಧ್ವಂಸಕ ಕಾರ್ಯಗಳಿಗೆ ಬೇಕಾದ ನಾಯಕತ್ವ,

ಹೊಣೆಗಳು ನಾಡಿನಲ್ಲಿ ವ್ಯಾಪಕವಾಯಿತು. ಆಗ ಜನರ ಪಾಲಿಗೆ ಉಳಿದುದೆಂದರೆ ಇತರ ಸಾಹಸಿಗಳ ಕಾರ್ಯವನ್ನು ನೋಡಿ ಚಪ್ಪಾಳೆ ತಟ್ಟುವುದು ಮಾತ್ರ.

ಕ್ರಾಂತಿ ತಾರೆಯ ಪ್ರಭುದೇವ ಈ ಬಾರಿ ಸೆರೆಮನೆಗೆ ಹೋಗುವ ಯೋಚನೆಯನ್ನೇ ಮಾಡಲಿಲ್ಲ. ಕೇಳಿದರೆ ಆತ ತನ್ನ 'ಐಡಿಯಾಲಜಿ' ಬದಲಾಗಿದೆ ಎನ್ನುತ್ತಾನೆ. ಆತನೀಗ ಸಾಕಷ್ಟು ಪ್ರಬಲನಾದ ಶ್ರಮಗಾರರ ಮುಂದಾಳು. ಅವನ ಪತ್ರಿಕೆ ಹೇಳುವಂತೆ—ಅವನ ರೋಷವೆಲ್ಲ ಹಿಟ್ಲರನ ಮೇಲೆ ಮಾತ್ರ. ಹಾಗಾಗಿ ಅವನ ಕ್ರಾಂತಿ ತಾರೆಯು ಪೂರ್ಣ ಯುದ್ಧ ಮುಖವಾಗಿದೆ. ವಿಧ್ವಂಸಕ ಚಳವಳಿಕ್ಕೆ ಆತ ಪ್ರೇರಣೆ ಕೊಡಲಾರ. ಇದರಿಂದ ಅವನಿಗೆ ಆರ್ಥಿಕ ಬೆಂಬಲವೂ ಅನುಕೂಲವಾಗಿ ಸಿಕ್ಕಿದೆ. ಬೇಕಷ್ಟು ಕಾಗದವು, ಕಾಗದದ ಅಭಾವದ ಕಾಲದಲ್ಲಿ ದೊರಕಿತು. ತನ್ನ ಪತ್ರಿಕೆಯ ಎಷ್ಟು ಪ್ರತಿಗಳನ್ನು ಅಚ್ಚು ಹಾಕಿದರೂ ಕೊಳ್ಳಲಿಕ್ಕೆ ಸರಕಾರ ಸಿದ್ಧವಿತ್ತು. ಇನ್ನೇನಾಗಬೇಕು?

ಗಲಾಟೆ ತೊಡಗಿದ ಕೆಲವು ದಿವಸಗಳಲ್ಲಿಯೇ ಮಂಗಳೂರಿಗೆ ಉಲುಬಿನರವರ ಆಗಮನವಾಯಿತು. ಅವರು ಈಗ ಕ್ರಾಂತಿಯಲ್ಲಿ ಪ್ರಮುಖ ಭಾಗ ವಹಿಸುವವರಿದ್ದರು. ಮಂಗಳೂರ ಮೇಲಿನ ಪ್ರೇಮದಿಂದಲೋ ಏನೋ, ಒಮ್ಮೆಂದೊಮ್ಮೆಗೇ ಅಲ್ಲಿ ಅವತರಿಸಿದರು. ಘೋಷಾ ಸ್ತ್ರೀಯಂತೆ ಉಡುಗೆಯುಟ್ಟು ಡಾ॥ ನಂದರವರ ಹೆರಿಗೆಯ ಆಸ್ಪತ್ರೆಯನ್ನು ಸೇರಿದರು. ಕೊನೆಗೆ ನಂದರ ಮನೆಯಲ್ಲಿಯೂ ನಾಲ್ಕಾರು ದಿನ ಕಳೆದರು. ಮಂಗಳೂರಿನ ಕಾರ್ಖಾನೆಗಳಲ್ಲಿ ಅನೇಕ ಯುದ್ಧ ಸಾಮಗ್ರಿಗಳ ತಯಾರಿ ನಡೆದಿದೆ ಎಂದು ಕೇಳಿ, ಇಲ್ಲಿ ವಿಧ್ವಂಸಕ ಸಂಘ ಹೂಡುವುದಕ್ಕೆ ಬಂದಿದ್ದರಂತೆ. ಆದರೆ ಅದಕ್ಕೆ ಡಾ॥ ನಂದರ ಬೆಂಬಲ ದೊರೆಯಲಿಲ್ಲ. ಅವರೇ ಮಂಗಳೂರಿನಲ್ಲಿ ಯುದ್ಧ ನಿಧಿ ಒಟ್ಟುಗೂಡಿಸುವ ಪ್ರಯತ್ನಕ್ಕೆ ಬೆಂಬಲ ಕೊಟ್ಟಿದ್ದಾರೆಂದು ತಿಳಿಯಿತು. ಹಾಗಾಗಿ ಆಕೆ ಪ್ರಭುದೇವನಲ್ಲಿಗೆ ಹೋಗಬೇಕಾಯಿತು. ನಂದರಿಗೆ ತಿಳಿಸದೇನೆ ಊರು ಬಿಟ್ಟಂತೆ ಚೀಟಿ ಬರೆದು ಇರಿಸಿ, ಪ್ರಭುದೇವನಲ್ಲಿಗೆ ಅಜ್ಞಾತವಾಗಿ ಹೋದಳು. "ಪ್ರಭುದೇವ್, ಡಾ॥ ನಂದ ಈ ವಿಷಯದಲ್ಲಿ ಉತ್ಸಾಹ ತೋರಿಸದಿದ್ದುದನ್ನು ಕಂಡು ನನಗೆ ಆಶ್ಚರ್ಯವಾಗುತ್ತಿದೆ.

ನಿಮ್ಮಂತಹ ತರುಣರು ಈ ಕೆಲಸವನ್ನು ಮಾಡಬೇಕು. ಹಣದ ಯೋಚನೆ ಬೇಕಾಗಿಲ್ಲ; ನಾವೀಗ ಗುಪ್ತವಾದ ಕ್ರಾಂತಿಕಾರಕ ಸಂಘ ಮಾಡಿದ್ದೇವೆ. ಅನೇಕ ಶ್ರೀಮಂತರು ಹಣ ಸುರಿಯಲು ಒಪ್ಪಿದ್ದಾರೆ. ನಿಮ್ಮೂರಿನ ಕೆಲಸ ನಿಮ್ಮ ಮೂಲಕ ಆಗಬೇಕು" ಎಂದಳು. ಅವುಗಳ ವೆಚ್ಚಕ್ಕಾಗಿ ಅವನ ಕೈಯಲ್ಲಿ ಹದಿನೈದು ಸಾವಿರ ರೂಪಾಯಿಗಳನ್ನು ನಗದಾಗಿ ಕೊಟ್ಟಳು. ಕಾರ್ಯದ ಬಗೆ ಇಂಥಿಂಥದೆಂದು ತಿಳಿಸಿಹೇಳಿದಳು. ತನ್ನ ಗುಪ್ತವಿಳಾಸವನ್ನೂ ತಿಳಿಸಿದಳು. ಅಲ್ಲಿಂದ ಆಕೆ ಒಂದು ದಿನ ಕಣ್ಮರೆಯಾದಳು.

ಪ್ರಭುದೇವನಿಗೆ ಕ್ರಾಂತಿಯ ಉತ್ಸಾಹ ಇದ್ದಿಲ್ಲವಾದರೂ ನಂದರ ಮೇಲಿನ ಸೇಡು ಸಾಕಷ್ಟು ಇತ್ತು. ಅವರನ್ನು ತೊಡಕಿನಲ್ಲಿ ಸಿಲುಕಿಸಬೇಕೆಂಬ ಹಟವೇನೊ ಬಲವಾಗಿತ್ತು. ಆ ಕೆಲಸ ಈಗ ಸುಲಭವಾಗಿ ಸಾಧಿಸಿತು. ಈ ಕಾಲದಲ್ಲಿ ಲಲುಬೆನ್‌ರವರು "ಪೋಲೀಸರ ಬೇಕಾದ ಅಸಾಮಿ"ಗಳ ಪಟ್ಟಿಯಲ್ಲಿ ಸೇರಿದ್ದರು. ಅವರನ್ನು ಹಿಡಿದು ಕೊಟ್ಟವರಿಗೆ ಐದುಸಾವಿರ ರೂಪಾಯಿಗಳ ಬಹುಮಾನ ಇದೆಯೆಂದು ಸೂಚಿಸಲಾಗಿತ್ತು. ಇದೇ ಸಂದರ್ಭ ಉಪಯೋಗಿಸುವೆನೆಂದು ಪ್ರಭುದೇವ, ನಂದರ ಮನೆಯಲ್ಲಿ ಲಲು ಬೆನ್‌ರವರು ಇದ್ದಾರೆಂಬ ವಾರ್ತೆ ಹರಡಿದ. "ಮಿತ್ರರೇ, ನೀವು ನಮ್ಮ ಗುಪ್ತಕಾರ್ಯಕ್ಕೆ ಕೊಟ್ಟ ಐನೂರು ರೂಪಾಯಿಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿದ್ದೇವೆ" ಎಂಬ ಒಂದು ಪತ್ರವನ್ನು ಅವರ ಹೆಸರಿಗೆ ಬರುವಂತೆ ಮಾಡಿದ. ಈ ಎಲ್ಲ ಸುದ್ದಿಗಳು ಪೋಲೀಸರಿಗೆ ದೊರೆಯುವಂತೆ ಮಾಡಿದನು. ಇವುಗಳ ಫಲವೆಂದರೆ-ಡಾ। ನಂದರ ಮನೆ, ಯಾವತ್ತು ಸಂಸ್ಥೆಗಳನ್ನು ಪೋಲೀಸರು ಬಂದು ಹುಡುಕಿ ಜಪ್ತಿಮಾಡಿಹೋದರು. ಹಿಂದೆ ಕಾಂಗ್ರೆಸ್ಸಿನಲ್ಲಿ ಇದ್ದವರಾದುದರಿಂದ ಡಾ। ನಂದರನ್ನು ಎಂದೂ ಸೆರೆಗೊಯ್ದಾರು ಎಂಬ ವಾರ್ತೆ ಹಬ್ಬಿತು. ಅದಕ್ಕೆ ಸಮನಾಗಿ ಅನೇಕ ಉತ್ಸಾಹಿ ತರುಣರು ಅವರಲ್ಲಿಗೆ ಹೋಗಿ ಉಪದೇಶ ಕೇಳತೊಡಗಿದರು. ನಂದರಿಗೆ ಒಳಗಿನ ಭೀತಿ ಸಾಕಷ್ಟು ಇತ್ತು. ಜೈಲನ್ನು ಮೆಚ್ಚುವ ಜೀವ ಅವರದು ಅಲ್ಲವೇ ಅಲ್ಲ. ವಿಧ್ವಂಸಕ ಚಳವಳದ ದಾರಿ ಅವರಿಗೆ ಸಾಧ್ಯವೂ ಇದ್ದಿಲ್ಲ. ಇತ್ತ ಕೀರ್ತಿಯ ಬಾಯಾರಿಕೆಯೂ ತೃಪ್ತಿಯಾಗಬೇಕು. ಆದುದರಿಂದ ಉಪಾಯ

ಹಾಗಿ ತಮ್ಮ ಸಂಸ್ಥೆಗಳ ಯಜಮಾನಿಕೆಯನ್ನು ತಮ್ಮ ಗೆಳೆಯರೊಬ್ಬರಿಗೆ ಒಪ್ಪಿಸಿ, ವಿಧ್ವಂಸಕ ಚಳವಳಿಯಲ್ಲಿ ಇಳಿದಿದ್ದೇನೆ ಎಂಬ ವಾರ್ತೆ ಹಬ್ಬಿಸಿ ಮಂಗಳೂರಿನಿಂದ ಅಂತರ್ಧಾನರಾದರು. ಅಲ್ಲಿಂದ ಅವರು ಮುಂಬಯಿ ನಗರಸೇರಿ ತಮ್ಮ ಅನೇಕ ಗೆಳೆಯರಲ್ಲಿ ಅಜ್ಞಾತವಾಸವಾಗಿದ್ದು ಅನ್ನಧ್ವಂಸಕ ಚಳವಳಿಯಲ್ಲಿ ಲೀನರಾದರು. ಮುಂಬಯಿಯ ಸಟ್ಟಾ ಬಜಾರು ಅವರನ್ನು ಆಕರ್ಷಿಸಿತು. ಇದರಿಂದ ತಮ್ಮ ಅಜ್ಞಾತದ ಕಾಲವನ್ನು ಲಾಭದಾಯಕವಾಗಿಯೇ ಕಳೆಯತೊಡಗಿದರು.

ಪ್ರಭುದೇವ, ಲಲುಬೆನ್‌ರವರು ಕೊಟ್ಟ ಹಣವನ್ನು ತನ್ನ ಬೇಂಕಿನಲ್ಲಿ ಭದ್ರವಾಗಿರಿಸಿಕೊಂಡ. ಅವನ ಕಳ್ಳ ಸೋದ್ರಿಯ ವರಮಾನ ಕಡಿಮೆಯಾಗಿತ್ತು. ಯಾವ ಅನುಮಾನಕ್ಕು ಎಡೆಕೊಡದೆ ಸಾಗಿಸಿಕೊಂಡು ಹೋಗುವ ಜೀವನ ಅವನದಿತ್ತು. ಹೀಗಾಗಿ ವರಮಾನ ಹೆಚ್ಚಿಸುವ ಯಾವುದಾದರೂ ದಾರಿ ಅವನಿಗೆ ಬೇಕೇ ಇತ್ತು. ಅದಕ್ಕಾಗಿ ಕಾಂಗ್ರೆಸನ್ನು ದೂರತೊಡಗಿ, ಕೇವಲ ಯುದ್ಧ ಮುಖಿಯಾದ. ಇತ್ತ ಲಲುಬೆನ್‌ರವರು ಹಣಕ್ಕಾಗಿಯಾಗಲೀ, ಕೆಲಸಕ್ಕಾಗಿಯಾಗಲೀ, ತನ್ನನ್ನು ಕಾಡಬಾರದೆಂಬುದಕ್ಕೆ ಅವರ ಗುಪ್ತ ವಿಳಾಸವನ್ನು ಪೋಲೀಸರಿಗೊಪ್ಪಿಸಿ ಅವರ ಬಂಧನಕ್ಕೂ ಸಹಾಯಕನಾದ. ಇತ್ತ ಆಕೆಯಾದರೂ ಕೆಲಸಗಾರ್ತಿಯಾಗಿರಲಿಲ್ಲ; ಮಾತುಗಾರ್ತಿ. ಸಿಕ್ಕಿದವರೊಡನೆ ಬಡಬಡಿಸುವ ಸ್ವಭಾವದವಳಾದುದರಿಂದ ನಾಲ್ಕು ದಿನ ಹಿಂದು ಮುಂದೆ ತುರಂಗಕ್ಕೆ ಹೋಗುವವಳೇ! ಪ್ರಭುವಿನಿಂದಾಗಿ ತುಸು ಬೇಗನೆ ಅವಳು ಹೋಗುವಂತಾಯಿತು-ಅಷ್ಟೇ.

ದಕ್ಷಿಣ ಕನ್ನಡದಲ್ಲಿ ತೊಡಗಿದ ಚಳವಳವೂ ಒಂದೆರಡು ತಿಂಗಳ ಕಾಲ ಉಸಿರು ಹಿಡಿದುಕೊಂಡಿತ್ತು. ಕೆಲವರು ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಕೂಗಿ, ಏಕೈಕವೀರರಾಗಿ ಉತ್ತರಕನ್ನಡ ಜಿಲ್ಲೆಯ ಗಡಿಯನ್ನು ದಾಟಿ ತುರಂಗಕ್ಕೆ ಹೋದರು. ಕೆಲವರು ಗಂಧದ ಗಿಡಗಳಮೇಲೆ ತಮ್ಮ ಸಿಟ್ಟನ್ನು ತೋರಿಸಿದರು. ಹಲವಾರು ಹಳ್ಳಿಗರು ತಂತಿಯ ಕಂಬಗಳನ್ನು ಉರುಳಿಸಿದರು. ಅಪರಾಧಿಗಳು, ನಿರಪರಾಧಿಗಳು—ಊರ ಪಟೇಲ ಶ್ಯಾನುಭಾಗರ ದ್ವೇಷಕ್ಕೆ ಗುರಿಯಾದವರು-ಕೂಡಿಯೇ ಸೆರೆಮನೆ ಸೇರಿದರು. ಈ ಬಾರಿಯೂ ಹಳೆಯ ಅನುಭವವೇ ತಲೆದೋರಿತು. ಹಿಂದೆರಡು

ಬಾರಿಯ ಚಳವಳಿಗಳಲ್ಲಿ ದುಡಿದವರು ಹಿಂದೆಯೇ ಉಳಿದರು. ಮೂರನೆಯ ತಲೆಮಾರಿನ ತರುಣರು ಉತ್ಸಾಹತೋರಿ ನಾಲ್ಕುದಿನ ಕಾಳಗ ಮಾಡಿ, ಐದನೆಯ ದಿನ ಶಾಂತರಾದರು. ದಕ್ಷಿಣಕನ್ನಡದ ಮಟ್ಟಿಗೆ ಬ್ರಿಟಿಷರ ಯುದ್ಧ ಮುಖಕ್ಕೆ ಯಾವ ತೊಡಕೂ ಉಂಟಾಗಲಿಲ್ಲ.

ಮನೆಯಲ್ಲಿ ಕುಳಿತು ಸತ್ಯಳು ಪತ್ರಿಕೆಯನ್ನು ಓದುತ್ತಿರುತ್ತಾಳೆ. ತಮ್ಮ ಊರಿನ ಜನ ಇಷ್ಟುಬೇಗ ಶಾಂತರಾದುದನ್ನು ಕಂಡು ನೋಯುತ್ತಾಳೆ. "ಶ್ಯಾಮಾ, ಹಿಂದಿನಸಾರಿ ಉತ್ತರಕನ್ನಡದಲ್ಲಿ ಹೆಂಗಸರು ಸಹ ಜೈಲಿಗೆ ಹೋದರಂತೆ. ನೀನು ಮನೆಮಾರು ನೋಡಿಕೊಂಡಿರುವಿಯಾದರೆ ನನಗೂ ಮುಂದೆ ಹೋಗಬೇಕೆಂಬ ಆಸೆಯಿದೆ" ಎನ್ನುತ್ತಾಳೆ. ತನ್ನ ಪತಿ 'ನೀನೂ ಬಾ' ಎಂದು ಕರೆಯಿಸಿಕೊಂಡಾನು ಎಂಬ ಆಸೆ. ಸ್ವತಃ ತಾನೇ ಎಂಥ ಕೆಲಸಮಾಡಬೇಕು ಎಂಬ ದಾರಿ ತೋರುತ್ತಲಿಲ್ಲ. ಪತಿಯನ್ನುಬಿಟ್ಟು ಮಾರ್ಗದರ್ಶಕರೂ ಇದ್ದಿಲ್ಲ. ಆದುದರಿಂದ ಅವಳ ಬಯಕೆ ರೂಪುಗೊಳ್ಳಲಿಲ್ಲ. ಒಂದು ದಿನ ರಾಧಾಕೃಷ್ಣನ ಪತ್ರ ಅವಳಿಗೆ ಬಂದಿತು. "ಸತ್ಯ, ನಾನು ಸದ್ಯ ಊರಿಗೆ ಬರುವುದಿಲ್ಲ. ನಾನೀಗ ಒಬ್ಬ ವಿಮಾ ಕಂಪನಿಯ ಏಜಂಟನಾಗಿ ತಿರುಗುತ್ತಿದ್ದೇನೆ. ಜತೆಗೆ ಕೆಲವು ದೇಶೀಯ ಮಾಲುಗಳು-ಬೀಗ,ಟ್ಯೊಲೆಟ್ ಮೊದಲಾದವುಗಳ ಏಜೆನ್ಸಿಗಳನ್ನು ಪಡೆದು ತಿರುಗಾಟ ಮಾಡುತ್ತಿದ್ದೇನೆ. ವ್ಯಾಪಾರಿ ಪ್ರಪಂಚದಲ್ಲಿ ಸ್ವಲ್ಪ ಅನುಭವವಾದರೆ ಮುಂದೆ ಏನಾದರೂ ಉದ್ಯೋಗ ನಡೆಯಿಸಬಹುದು. ಹಳೆಯ ಗುರುತಿನ ಊರುಗಳಲ್ಲೇ ತಿರುಗುತ್ತಿರುವೆನಾದುದರಿಂದ ನೀನು ಯೋಚನೆ ಮಾಡಬೇಕಾಗಿಲ್ಲ. ಆರೋಗ್ಯವೂ ಚೆನ್ನಾಗಿದೆ. ಮನಸ್ಸೂ ಸ್ವಸ್ಥವಾಗಿದೆ. ನೀನು ಯೋಚಿಸಬೇಕಾಗಿಲ್ಲ" ಎಂದು ಬರೆದಿದ್ದನು. ಅವಳಿಗೇಕೋ ತುಂಬ ನಿರಾಶೆಯಾಯಿತು. 'ಊಟಕ್ಕೆ ಮನೆಯಲ್ಲಿ ಇದ್ದೇ ಇದೆ. ವಿರಾಮಕ್ಕೆಂದು ಮುಂಬಯಿಗೆ ಹೋದವರು ಊರೂರು ಸುತ್ತುವ ಇಂಥ ಉದ್ಯೋಗ ಯಾಕೆ ಕೊಳ್ಳಬೇಕಿತ್ತು? ಎಲ್ಲವನ್ನು, ಬಿಟ್ಟು ವಿಮೆಯ ಉದ್ಯೋಗ ತೆಗೆದುಕೊಳ್ಳಬೇಕೇ? ಯಾವುದು ತಪ್ಪಿದರೂ ಹತ್ತು ಮಂದಿಯ ಮುಂದೆ ಭಿಕ್ಷೆ ಎತ್ತುವ ಯೋಗ ಇವರಿಗೆ ತಪ್ಪಿದ್ದಲ್ಲವೇ?' ಎಂದುಕೊಂಡಳು. ಆದರೂ ಒಂದು ಸಂಶಯ ಬರುತ್ತಿತ್ತು. ಮೊದಲು ಸಂಚರಿಸಿದ ಊರುಗಳೆಂದರೆ ಉತ್ತರ ಕನ್ನಡ

ಜಿಲ್ಲೆಯೇ ಆಯಿತು. ಅಂಥ ಸಣ್ಣ ಊರುಗಳಲ್ಲಿ ಸಂಚರಿಸಿ, ಅಲೆದಾಡಿ ಲಾಭವೇನೂ ಇಲ್ಲ. ಅವರ ಪತ್ರಕ್ಕೆ ಬೇರೆಯೇ ಅರ್ಥವಿರಬೇಕು. ಅವರು ಹಳೆಯ ಉದ್ಯೋಗದಲ್ಲಿಯೇ ಇದ್ದಾರೆ. ತನ್ನ ಆರೋಗ್ಯವನ್ನು ತಿಳಿಸುವುದಕ್ಕೆ ಮಾತ್ರ ಹೀಗೆ ಬರೆದಿದ್ದಾರೆ, ಎಂದುಕೊಂಡಳು.

ಆವರೆ ಕೆಲವೊಂದು ದಿವಸಗಳಲ್ಲಿ ಇನ್ನೊಂದುಬಗೆಯ ಸಮಾಧಾನವಾಯಿತು. ಜನರ ಅವ್ಯವಸ್ಥಿತ ದಂಗೆಯನ್ನು ನಿಲ್ಲಿಸಲು-ಬಿಹಾರ್, ಅಷ್ಟಿ, ಚಿಮೂರುಗಳಲ್ಲಿ ಸೈನಿಕರ ಮೂಲಕ ಜನರಮೇಲೆ ನಡೆಸಿದ ಹಾವಳಿಯ ವಾರ್ತೆಗಳು ಬಂದುವು. ವಿಮಾನಗಳಿಂದ ಹಳ್ಳಿಗಳಮೇಲೆ ಗುಂಡು ಹಾರಿಸಿದ ಕತೆಯೂ ತಿಳಿಯಿತು. ತನ್ನ ಗಂಡನು ಚಳವಳದಲ್ಲಿ ಭಾಗವಹಿಸದಿದ್ದುದೇ ಒಳ್ಳೆಯದಾಯಿತು. ವಹಿಸಿದ್ದರೆ ಎಂಥ ಹಿಂಸೆಗೆ ಒಳಗಾಗಬೇಕಿತ್ತೋ-ಎಂದು ತೋರಿತು. ಅಲ್ಲದೆ ರಾಧಾಕೃಷ್ಣ ಹಿಂಸೆಯ ಮನೋವೃತ್ತಿಯವನಲ್ಲ. ಹಿಂಸಾಕೃತಿಗಳ ದಾರಿಯು ಅವನಿಗೆ ಹಿಡಿಸದೆ ಹೋಗಿರಬೇಕು – ಎಂದುಕೊಂಡಳು.

*   *   *   *   *

ವಿಧ್ವಂಸಕ ಚಳವಳಿಯ ಬಿರುಗಾಳಿಯು,ಒಂದು ಊರಿನಲ್ಲಿ ಬಲವಾದರೆ ಇನ್ನೊಂದು ಊರಿನಲ್ಲಿ ಶಾಂತವಾಗುತ್ತಿತ್ತು. ಬೇರೊಂದು ಊರಿನಲ್ಲಿ ಎನ್ನಷ್ಟು ಉಲ್ಬಣದಿಂದ ಪ್ರಬಲವಾಗುತ್ತಿತ್ತು. ಪತ್ರಿಕೆಗಳು ಮೌನ ತಾಳಿದುದರಿಂದ ಬಹು ಮಟ್ಟಿನ ವಾರ್ತೆಗಳನ್ನು ಊಹಿಸಿಯೇ ತಿಳಿಯಬೇಕಾಗಿತ್ತು. ಸುದ್ದಿ ಯಾವಾಗಲೂ ವಿರಾಟರೂಪವನ್ನೇ ತಾಳುವುದು. ಅಂಥ ಸುದ್ದಿ ಕೇಳಿದರೆ ಸತ್ಯ, ಶ್ಯಾಮಣ್ಣರಿಗೆ ಸಂತೋಷವಾಗುತ್ತದೆ. ಸುದ್ದಿ ಕೇಳಿದ ದಿನ, ವೈರಿಯ ಸೋಲಿನ ವಾರ್ತೆ ದೊರಕಿದ ದಿನ, ಅವರಿಗೆ ತುಂಬ ಸಂತೋಷ. ಇಂಥ ಪರಿಸ್ಥಿತಿಯಲ್ಲಿ ಬರಿದೆ ಉಂಡು ತಿನ್ನುವ ಬಾಳ್ವೆ ಶ್ವಾನದ ಬಾಳ್ವೆ ಎಂದೆನಿಸುತ್ತದೆ. "ನಮ್ಮಿಂದ ನಮ್ಮ ದೇಶಕ್ಕೇನಾಯಿತು? ಜೀವಕ್ಕೆ ಅಂಜಿ ಕುಳಿತ ತಮಗೆ ಯಾವ ಮರ್ಯಾದೆಯಿದೆ" ಎಂದು ತೋರುತ್ತಿತ್ತು. ಸತ್ಯ ಹೇಳುತ್ತಾಳೆ: "ಬನಾರಸಿಯದು ಮದ್ರಾಸಿಗೆ ದಾಳಿಮಾಡುವರಂತಲ್ಲ? ಆಗ ಜನರೇನು ಮಾಡಬೇಕು? ಮನೆ, ಮಠ, ಜನ ಜಾನುವಾರಿಂದು ಯೋ

ಚನೆ ಮಾಡುತ್ತಾರೆಯೇ? ಒಂದೋ ಅವರು ಬೆದರಿ ಓಡುತ್ತಾರೆ, ಶಕ್ತಿ ಇದ್ದವರು ಕಲ್ಲಿಸೆದಾದಗೂ ತಮ್ಮ ಸಿಟ್ಟುತೀರಿಸಿಕೊಂಡು ಸಾಯುತ್ತಾರೆ........" ಎನ್ನುತ್ತಾಳೆ. ಬೇರೊಮ್ಮೆ ಇನ್ನೊಂದು ರೀತಿಯಲ್ಲಿಯೇ ಮನಸ್ಸು ಓಡುತ್ತದೆ--"ನಾವೇನಾದರೂ ಮಾಡಬೇಕು ನಿಜ. ಏನು ಮಾಡುವುದು? ತಂತಿ ಕಂಬ ಕೀಳುವುದೇ, ಟಪ್ಪಾಲಿಗೆ ಬೆಂಕಿ ಹಾಕುವುದೇ? ಇದರಿಂದ ಅವರ ಯುದ್ಧದ ಪ್ರಯತ್ನಕ್ಕೇನು ನಷ್ಟ? ಮಿಲಿಟರಿ ವಾರ್ತೆಗಳು ರೇಡಿಯೋ ಮೂಲಕ ಹೋಗುತ್ತವೆ. ಟಪ್ಪಾಲು ಸುಟ್ಟರೆ, ಕೋರ್ಟು ಕಚೇರಿಗಳನ್ನು ಸುಟ್ಟರೆ ನಮ್ಮವರಿಗೇನೇ ನಷ್ಟ" ಎನ್ನುತ್ತಾಳೆ. ಅದಕ್ಕೆ ಶ್ಯಾಮ "ಅದು ನಿಜ. ಏನು ಮಾಡುವುದಾದರೂ ಬ್ರಿಟಿಷರಿಗೆ ಪೆಟ್ಟು ಬೀಳುವ ಹಾಗೆ ಮಾಡಬೇಕು. ಇದೆಲ್ಲ ಬರಿದೆ ಪಟಾಸಿನ ಶಬ್ದ ಮಾಡಿದ ಹಾಗೆ. ಅದರಿಂದ ಒಂದು ನುಸಿಯೂ ಸಾಯುವುದಿಲ್ಲ. ಅವರ ಮದ್ದು ಗುಂಡುಗಳನ್ನೂ ಅವುಗಳ ಕಾರ್ಖಾನೆಗಳನ್ನೂ ಸುಟ್ಟು ಹಾಕಿದರೆ ಒಂದು ಲೆಕ್ಕ...........ಹೋಗಲಿ, ಏನಾದರೂ ಮಾಡುತ್ತಾರಲ್ಲ ಜನ. ಏನೂ ಇಲ್ಲದೆ ನಮ್ಮ ಹಾಗೆ ತಣ್ಣಗೆ ಉಂಡು ಕುಳಿತಿರುವುದಿಲ್ಲವಲ್ಲ" ಎನ್ನುತ್ತಾನೆ.

ಇಂಥ ಮನಸ್ಸಿನ ಜಂಜಾಟದಲ್ಲಿ ಶ್ಯಾಮ ಸತ್ಯರಿಬ್ಬರೂ ಸಿಲುಕಿ ಜೀವಿಸುತ್ತಿದ್ದಾಗ, ಒಂದು ದಿನ ಕತ್ತಲೆಯ ವೇಳೆಗೆ, ರಾಧಾಕೃಷ್ಣನ ಸವಾರಿ ಮನೆಯ ಜಗುಲಿಯನ್ನೇರಿತು. ಸತ್ಯ, ಶ್ಯಾಮ ಗೋಶಾಲೆಗೆ ಹೋಗಿದ್ದರು. ಈತ ಮನೆಗೆ ಟಿಪ್ ಟಾಪ್ ವಿದೇಶಿಯ ಉಡುಗೆಯಲ್ಲಿ ಬಂದಿದ್ದ. ಬಂದು 'ಸತ್ಯ' ಎಂದು ಕೂಗುತ್ತಲೇ, ಒಳಗಿನಿಂದ ಕಲ್ಯಾಣಿ ಬಂದಳು. 'ಯಾರು ನೀವು? ಏನು ಬೇಕು?' ಎಂದು ಕೇಳಿದಳು. ತಲೆಯ ಟೋಪಿಯನ್ನು ತೆಗೆಯುತ್ತಲೇ ಗುರುತು ಸಿಕ್ಕಿ, ನಾಚಿಕೆಯಾಗಿ ಅವರನ್ನು ಕರೆಯಲು ಓಡಿದಳು. ಅವರೆಲ್ಲ ಧಾವಿಸಿ ಬಂದರು. ಕಲ್ಯಾಣಿಯ ಹೇಳಿಕೆಯಿಂದ ಸತ್ಯ, ತನ್ನ ಪತಿಯ ಹೊಸ ವೇಷವನ್ನು ಕಲ್ಪಿಸಿ ಬರುತ್ತಿರುವಾಗಲೇ,ಚಂದ್ರ ಅಲ್ಲಿಗೆ ಬಂದಾಯಿತು. ತಂದೆಯ ಟೋಪಿಯನ್ನು ತನ್ನ ತಲೆಗೆ ಇರಿಸಿಕೊಂಡಾಯಿತು. ಸೂರ್ಯ, ತಾರೆಯರು ಅವನ ಕಿಸೆಯನ್ನು ಜಡತಿ ಮಾಡಲು ತೊಡಗಿಯಾಯಿತು. ಪತಿಯ ವೇಷವನ್ನು ಕಂಡು ಸತ್ಯಳಿಗೆ ಅಸಮಾಧಾನವಾಯಿತು. ಖಾದಿಯ

ಚೂರು ಮೈಮೇಲೆ ಇದ್ದಿರಲಿಲ್ಲ. "ಈ ವೇಷವೇನು!" ಎಂದು ಅಸಮಾಧಾನದಿಂದಲೇ ಕೇಳಿದಳು. ಆತ ನಗುತ್ತ "ಗಾಂಧಿಯ ಫಾರ್ಟಿಯನ್ನು ಬಿಟ್ಟು ಬಿಟ್ಟೆ. ಅದರಿಂದಾಗಿ ಖಾದಿಯನ್ನೂ ಬಿಟ್ಟೆ" ಎಂದನು. ಸತ್ಯೆ ಉದಾಸೀನಳಾಗಿ "ಹೂಂ, ಒಮ್ಮೆ ನಿಮ್ಮ ವೇಷ ಕಳಚಿ ಬಿಡಿ. ನನ್ನಿಂದ ಅದನ್ನು ನೋಡಲಿಕ್ಕಾಗದು" ಎಂದಳು. ಆತ ನಗುತ್ತ "ಯಾಕೆ ಆಗುವುದಿಲ್ಲ? ಹೀಗೆ ನೋಡುವುದಕ್ಕೆ ಆಗದೆ ಹೋದರೆ, ದೊರೆಸಾನಿಯ ಹಾಗೆ ಲಂಗ ತೊಟ್ಟುಕೊಂಡು ನೋಡು. ದೃಷ್ಟಿ ಕೋನ ಬದಲಾಯಿಸೀತು" ಎಂದನು.

ಮೊದಲು ಮನೆಗೆ ಬಂದವರ ಉಪಚಾರ ಮಾಡುವುದೆಂದು ಸತ್ಯ ವಿಷಯವನ್ನು ಬದಲಿಸಿದಳು. "ಸ್ನಾನ ಮಾಡಿ; ಅಡುಗೆ ಆಗಿರಬೇಕು. ಆ ಮೇಲೆ ಎಲ್ಲ ತಮಾಷೆ" ಎಂದಳು. ಮಕ್ಕಳಿಬ್ಬರೂ ತಂದೆಯ ಹಿಂದೆ ಹೋಗಿ 'ಏನು ತಂದಿದ್ದೀಯಾ' ಎಂದು ಕೇಳಿದರು. ಅವನು ತಂದ ಕೈಚೀಲದಲ್ಲೇನಿದೆ ಎಂದು ಹುಡುಕಿದರು. ಆತ ಚೀಲವನ್ನು ತೆರೆದು-ಅದರೊಳಗಿನ ಕೆಟಲಾಗು, ಸಾಬೂನು, ಪೌಡರು, ಮೊದಲಾದ ಮಾದರಿಯ ಸಾಮಾನುಗಳನ್ನು ಸುರಿದು—ಸ್ನಾನಕ್ಕೆ ನಡೆದನು.

ಸ್ನಾನವಾಯಿತು; ಊಟವೂ ಕಳೆಯಿತು, ಎಲ್ಲರೂ ಕುಳಿತು ಹರಟೆಯೂ ಪ್ರಾರಂಭವಾಯಿತು. ಸತ್ಯ "ನೀವು ಚಳವಳಕ್ಕೆ ಸೇರಿರಬಹುದೆಂದು ನಾನು ಎಣಿಸಿದ್ದೆ" ಎಂದಳು. ರಾಧಾಕೃಷ್ಣ "ಮತ್ತೇನು ಮಾಡುತ್ತಿದ್ದೆನೆಂದು ತಿಳಿದೆ? The Great Swarajya Insurance Company ನಡೆಯಿಸಿದ್ದೇನೆ. ಸ್ವರಾಜ್ಯ ಸಿಗಬೇಕೆನ್ನುವವರು ನಮ್ಮ ಕಂಪೆನಿಯಲ್ಲಿ ವಿಮೆ ಮಾಡಿದರಾಯಿತು" ಎಂದನು.

"ನಿಜವೇ? ಅಂಥ ಒಂದು ಕಂಪೆನಿಯೂ ಇದೆಯೆ?"

"ಇದ್ದೀತು--ನೆಹರು ಬೀಡಿ, ಗಾಂಧೀ ಸಿಗರೇಟು ಇರುವಹಾಗೆ-ಯಾಕಿರಬಾರದು? ದೊಡ್ಡ ದೊಡ್ಡ ವಿಷಯಗಳಲ್ಲಿ ನಮ್ಮ ಜನ ತೋರಿಸುವ ಅಭಿಮಾನವೇ ಹೀಗೆ" ಎಂದನು ಶ್ಯಾಮು.

ಮನೆಗೆ ಬಂದ ಪತಿಯ ಮಾತುಗಳು ಸತ್ಯಳ ಮನಸ್ಸನ್ನು ತೃಪ್ತಿಪಡಿಸಲಿಲ್ಲ. ಅವನ ಆಗಮನವನ್ನೇನೋ ಅವಳು ತುಂಬ ಬಯಸಿದ್ದಳು. ಆದರೆ ಪತಿ ಕೈಕೊಂಡ ಈ ವೃತ್ತಿಯನ್ನು ಮಾತ್ರ ಒಪ್ಪಲಿಲ್ಲ.

"ಸುಮ್ಮನೆ ಮನೆಯಲ್ಲೇ ಇರಬಾರದೇ? ಇಲ್ಲಿಯೇ ಜೀವನಕ್ಕೆ ಸಾಕಾಗುವುದಿಲ್ಲವೇ? ಗೋಶಾಲೆಯ ವೆಚ್ಚ ದಿನೇದಿನೇ ಹೆಚ್ಚುತ್ತಿದೆಯಾದರೂ ಹಾಲಿಗೆ ಹೆಚ್ಚಿಗೆ ಬೆಲೆ ಸಿಗುತ್ತಿರುವುದರಿಂದ ಏನೂ ಕಷ್ಟವಿಲ್ಲ. ಈ ವಿಮೆ, ಫೇಸ್ ಪೌಡರ್, ಹೇರ್ ಆಯಿಲೆಂದು ತಿರುಗಾಡುವುದು ಬೇಡ" ಎಂದು ಪತಿಯ ಮುಂದೆ ವಾದಹೂಡಿದಳು.

ಮಕ್ಕಳು ಮಲಗಿಕೊಂಡಮೇಲೆ ಶ್ಯಾಮು, ಸತ್ಯರನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ತನ್ನ ನಿಜವಾದ ಕತೆಯನ್ನು ಹೇಳತೊಡಗಿದನು. ಅವನ ಮುಂಬಯಿ ಪ್ರವಾಸದ ವರೆಗಿನ ಕತೆ ಪತ್ರ ಮೂಲಕ ಅವರಿಗೆ ತಿಳಿಸಿದ್ದ. ಅನಂತರದ ಕಾರುಭಾರಗಳನ್ನು ವಿವರಿಸತೊಡಗಿದನು—"ನಿಜಕ್ಕೂ ನಾನು ಇನ್ಶ್ಯೂರೆನ್ಸ್ ಏಜೆನ್ಸಿ ಹಿಡಿದಿದ್ದೇನೆಂದು ತಿಳಿದಿರಾ? ಇದು ಹೊರಗಿನ ಸೋಗು. ನನ್ನ ಉಡುಗೆಯಷ್ಟೇ ಠಕ್ಕಿನ ಸೋಗು. ಅದನ್ನು ಕೈಕೊಂಡುದರಿಂದ ಯಾರಿಗೂ ಅನುಮಾನ ಬಾರದಂತೆ ತಿರುಗಾಡುವುದು ಸಾಧ್ಯವಾಗಿದೆ. ದಾರಿಯಲ್ಲಿ ಬರುತ್ತ, ನಮ್ಮ ಊರಿನ ವರ್ತಮಾನವನ್ನೆಲ್ಲ ಕೇಳಿದೆ. ನನಗೇನೂ ಆಶ್ಚರ್ಯವಾಗಲಿಲ್ಲ. ಏನೋ ನಾಲ್ಕಾರು ಮುಖಂಡರನ್ನು ಸೆರೆ ಹಿಡಿದುಕೊಂಡು ಹೋದರಂತೆ. ಕೆಲವು ಬಡಪಾಯಿಗಳು ಸತ್ಯಾಗ್ರಹವನ್ನಾದರೂ ಮಾಡಿ ಮರ್ಯಾದೆ ಉಳಿಸಿದರು. ಉಳಿದವರೆಲ್ಲರೂ ಮೊದಲಿನಂತೆಯೇ. ಇಲ್ಲಿ ವಿಧ್ವಂಸಕ ಕಾರ್ಯಕ್ರಮ ಏನೇನೂ ನಡೆದಿಲ್ಲವೆಂದು ಕೇಳಿದೆ. ನಮ್ಮೂರಿಗೆ ಹಣಕಾಸೇ ಪರಮ ದೇವತೆ. ಉಳಿದ ಯಾವುದೂ ಜನಕ್ಕೆ ಹಿಡಿಯುವುದಿಲ್ಲ. ಅಧಿಕಾರ ದೊರೆಯುವುದಾದರೆ ಮಾತ್ರ ಕಾಂಗ್ರೆಸ್ಸು, ರಾಷ್ಟ್ರಭಕ್ತಿ ಎಲ್ಲ ಮೂಡಿಬಿಡುತ್ತವೆ. ಉತ್ತರ ಕರ್ನಾಟಕ ಇದಕ್ಕಿಂತ ಎಷ್ಟೋ ಮೇಲು!

"ಹರಿಹರದಿಂದ ಪೂನಾದ ತನಕ ಜನ ಬೇಕೆನ್ನುವಷ್ಟು ವಿಘಾತಕ ಕಾರ್ಯ ನಡೆಯಿಸಿದ್ದಾರೆ. ನೂರಾರು ಜನ ಕಾಡಿನಲ್ಲಿ ವಾಸಮಾಡಿ ಪೋಲೀಸರ ಮೇಲೆ, ಸೈನಿಕರ ಮೇಲೆ, ಕಾಳಗ ಹೂಡಿದ್ದಾರೆ. ಮಿಲಿಟರಿ ಶಿಬಿರಗಳನ್ನು ಹೊಗ್ಗಿ ಮದ್ದುಗುಂಡುಗಳನ್ನು ಸಂಪಾದಿಸಿದ್ದಾರೆ. ತೀರ ಹಳ್ಳಿಯ ಜನ, ಏನೂ ಓದು ಬರಹಬಾರದವರು. ಆದರೂ ರೈಲು ನಿಲ್ಲಿಸುವುದರಲ್ಲಿ, ಸ್ಟೇಷನ್ ಸುಡುವುದರಲ್ಲಿ, ಅಂಚೆ ಲೂಟಿ ಮಾಡುವ

ದರಲ್ಲಿ ತುಂಬ ಶೂರತನ ತೋರಿಸಿದ್ದಾರೆ" ಎಂದು ಹಲವಾರು ಉದಾಹರಣೆಗಳನ್ನು ಹೇಳಿದನು.

ಅದಕ್ಕೆ ಸತ್ಯ 'ಯಾರು ಅವರಿಗೆ ಅದನ್ನೆಲ್ಲ ಹೇಳಿಕೊಟ್ಟವರು? ಮಾರ್ಗದರ್ಶಕರು? ಒಂದೇ ಒಂದು ರೈಲು ಕಾಲಕ್ಕೆ ಸಮನಾಗಿ ಹೋಗುತ್ತಲಿಲ್ಲವಂತೆ. ಆಂಧ್ರದಲ್ಲಿ ಎಷ್ಟೋ ಪೆಸೆಂಜರ್ ಗಾಡಿ ಉರುಳಿಸಿದ್ದರಿಂದ ಎಷ್ಟೋ ಜನ ಸತ್ತರಂತೆ. ಅದರಿಂದ ಅವರ ಯುದ್ಧ ಪ್ರಯತ್ನಕ್ಕೇನು ತೊಂದರೆಯಾಯಿತು?" ಎಂದು ಕೇಳಿದಳು.

"ಯಾವುವೂ ಬುದ್ಧಿಯಿಲ್ಲದೆ ಮಾಡಿದರೆ ಹಾಗೇನೆ. ಇದರ ಉದ್ದೇಶ ಯುದ್ಧ ಪ್ರಯತ್ನಕ್ಕೆ ವಿರೋಧ ಮಾಡುವುದು. ಊರ ಜನರ ತಿರುಗಾಟಕ್ಕೆ ತೊಂದರೆಕೊಡುವುದಲ್ಲ, ಪ್ರಾಣಕ್ಕೆ ಅಪಾಯ ತರುವುದೂ ಅಲ್ಲ."

"ಆ ಕೆಲಸಕ್ಕೆ ಶಿಕ್ಷಣಬೇಕು. ಹೆಚ್ಚಿನ ಗುಪ್ತ ಚಟುವಟಿಕೆಬೇಕು ಮಿಲಿಟರಿ ಸಾಮಗ್ರಿ ತುಂಬಿಸಿದ ಗಾಡಿಗಳಾವುವು, ಅವು ಬರುವ ಕಾಲ ಯಾವುದು—ಎಂಬುದು ತಿಳಿದರೆ, ಆಗ ಆ ವೇಳೆಗೆ ರೈಲು ಕಂಬಿ ಕಿತ್ತು ಉರುಳಿಸಿದರೆ ಒಂದು ಲೆಕ್ಕ. ಅಂಥ ಮಾರ್ಗದರ್ಶನಕ್ಕೆ ಬಲ್ಲವರು ದೊರೆಯದೆ ಹೋದರೆ ತಿಳಿಯದವರೇನು ಮಾಡಬೇಕು? ಎಲ್ಲ ತೆರನ ವಾಹನಗಳಿಗೂ ತೊಂದರೆ, ಅದರಿಂದ ಜನಕ್ಕೂ ತೊಂದರೆ. ಅದರ ಬೆನ್ನಿಗೆ ಬೆಂಕಿ ಹಚ್ಚುವ ಕೆಲಸವನ್ನು ಕಲಿತರು. ಸ್ಟೇಷನು, ಶಾಲೆ, ಕಚೇರಿ ಎಲ್ಲವನ್ನೂ ಸುಡಲು ತೊಡಗಿದರು. ಇದು ನನ್ನ ಮನಸ್ಸಿಗೆ ಬರಲಿಲ್ಲ. ಚರ್ಚೆ ನಡೆಸಿ ನೋಡಿದೆವು. ಆದರೆ ಬನ್ನಟ್ಟಿಯವರಿಗೆ ಆ ವಿಚಾರ ತಲೆಗೆಹೋಗಲಿಲ್ಲ. 'ಇದರಿಂದ ನಮ್ಮ ಜನಕ್ಕೇನೇ ನಷ್ಟ' ಎಂದು ನಾನು ಹೇಳಿದೆ. ಆ ವಿಚಾರ ಅವರು ಒಪ್ಪುವುದಿಲ್ಲ. ಬ್ರಿಟಿಷ್ ಸರಕಾರಕ್ಕೆ ತೊಂದರೆಯಾದರೆ ಸರಿ; 'ನಮಗೆ ಹತ್ತು ಪಾಲು ನಷ್ಟವಾಗುವಾಗುವಾಗ ಅವರಿಗೆ ಒಂದು ಪಾಲು ನಷ್ಟವಾದರೂ ಸಾಕು' ಅನ್ನುತ್ತಾರೆ ಅವರು. ನನ್ನ ಮನಸ್ಸು ಬೇರೆಯೇ ತೆರನಾಗಿದೆ. ನಮಗೆ ಒಂದು ಪಾಲು ನಷ್ಟಮಾಡಿ ಕೊಂಡು ಅವರಿಗೆ ಹತ್ತು ಪಾಲು ನಷ್ಟಮಾಡಬೇಕೆಂಬುದು ನನ್ನ ಇಷ್ಟ."

"ಆದರೆ ಒಂದು ಮಾತು [illegible]ತ್ಯವಾಗಿ ಕಾಣುತ್ತದೆ. ಅಲ್ಲಿ ಇಲ್ಲಿ ನಮ್ಮ ಓದಿದ ತರುಣರು ಮಾಡಿದ ತ್ಯಾಗಕ್ಕಿಂತ, ಅಲ್ಲಿನ ಹಳ್ಳಿಯ ಜನರ ತ್ಯಾಗ ಹೆಚ್ಚು, ಅವರ ಧೈರ್ಯವೂ ಹೆಚ್ಚು. ಇವರಿಗೆ ಪೇಟೆಯಲ್ಲಿ

ಕೂತು ನಾಲ್ಕು ದಿನ ಗದ್ದಲ ಮಾಡುವುದರಲ್ಲಿಯೇ ತೃಪ್ತಿ. ಮೂರು ನಾಲ್ಕು ತಿಂಗಳೊಳಗಾಗಿ ಶಾಲೆ ಬಿಟ್ಟವರೆಲ್ಲ ತಿರುಗಿ ಶಾಲೆಗೆ ಸೇರಿಯಾಯಿತು. ಹಳ್ಳಿಯ ಜನರು ಮಾತ್ರ ಹಾಗೆ ಮಾಡಲಿಲ್ಲ. ತಮ್ಮ ಬೇಸಾಯ ಉದ್ಯೋಗಗಳನ್ನೆಲ್ಲ ಕೆಡಿಸಿಕೊಂಡು ಊರನ್ನು ಬಿಟ್ಟಿದ್ದಾರೆ. ಕಾಡಿನಲ್ಲಿಯೇ ವಾಸಮಾಡಿದ್ದಾರೆ. ಅವರು ಊರಲಿಲ್ಲದಾಗ ಪೋಲೀಸರು ಹಳ್ಳಿಗೆ ಬಂದು ಕೊಡುವ ಉಪದ್ರ ಹೇಳಿತೀರದು. ಎಷ್ಟೋ ಜನ ಹೆಂಗಸರಿಗೆ ಹಿಂಸೆ, ಅಪಮಾನ ಮಾಡಿದ್ದೂ ಉಂಟು. ಆದರೆ ಅವರು ತಮ್ಮ ಜನರ ಗುಟ್ಟನ್ನು ಬಿಡಲಿಲ್ಲ. ನೂರಾರು ಜನರನ್ನು ಹಿಡಿದರು, ಸೆರೆಗೊಯ್ದರು, ಹಿಂಸೆ ಮಾಡಿದರು—ಆದರೂ ಜನ ಜಗ್ಗಲಿಲ್ಲ. ಚಳವಳ ಇನ್ನೂ ಭರದಿಂದ ಸಾಗಿದೆ."

"ಇವರು ಇದಕ್ಕೆಲ್ಲ ಖರ್ಚಿಗೆ ಏನು ಮಾಡುತ್ತಾರೆ? ನೂರಾರು ಜನ ದುಡಿಯುತ್ತಿರಬೇಕಲ್ಲ?"

"ಇವೆಲ್ಲವುಗಳ ಖರ್ಚಿಗೆ, ಉದ್ಯೋಗವಿಲ್ಲದ ಸಂಸಾರಿಗಳನ್ನು ಸಾಕುವುದಕ್ಕೆ ಕೆಲವರು ಭಿಕ್ಷೆ ಎತ್ತಿ ಹಣ ಕೂಡಿಸುತ್ತಿದ್ದಾರೆ. ಎಷ್ಟೋ ಜನ ಸರಕಾರಿ ನೌಕರರೂ ಅದಕ್ಕೆ ಗುಪ್ತವಾಗಿ ಸಹಾಯಮಾಡಿದ್ದಾರೆ. ಈಗೀಗ ಅಂಚೆಯ ಸುಲಿಗೆ, ಖಜಾನೆ ಸುಲಿಗೆ, ಕೆಂದಾಯದ ಹಣದ ಸುಲಿಗೆ ಮಾಡುವುದೂ ನಡೆದಿದೆ. ಆ ವಿಷಯ ಮಾತ್ರ ನನಗೇನೂ ಸಮಾಧಾನವಾಗಿಲ್ಲ. ನಾನು ಬನ್ನಟ್ಟಿ ಎಂಬ ಸ್ನೇಹಿತರೊಡನೆ ಈ ವಿಷಯದಲ್ಲಿ ಜಗಳಮಾಡಬೇಕಾಯಿತು. ನಾವು ಸ್ವಭಾವ ಪರಿಚಯವಿಲ್ಲದ ಜನಗಳನ್ನುಕಟ್ಟಿಕೊಂಡು ಇಂಥ ಕೆಲಸ ಮಾಡಿದರೆ, ಸ್ವಾರ್ಥಕ್ಕಾಗಿಯೂ ಅವರು ಸುಲಿಗೆ ಮಾಡುವುದಿಲ್ಲವೆಂದು ಹೇಗೆ ಗೊತ್ತು? ಅದೇ ಅನುಮಾನವು ಬಂದಿದೆ ನನಗಂತು. ಕೆಲವು ಬಾರಿ ಬಸ್ಸು ಪ್ರಯಾಣಿಕರಿಂದಲೂ ಹಣವನ್ನುಸುಲಿದಿದ್ದಾರೆ. ಆ ಕಡೆ ತುಡುಗು ದರೋಡೆ ಮಾಡುವ ಜನಗಳ ಗುಂಪು ಮೊದಲಿನಿಂದಲೂ ಇದೆ. ಅವರಲ್ಲಿ ಕೆಲವರು ಈ ಚಳವಳಕ್ಕೆ ಸೇರಿಕೊಂಡಿದ್ದಾರೆಂದೂ ಅನುಮಾನ ಬಂದಿದೆ. ಆದರೆ ಬನ್ನಟ್ಟಿಯಂತಹ ಮನುಷ್ಯರೊಡನೆ ವಾದಮಾಡಿ ಪ್ರಯೋಜನವಿಲ್ಲ. ಹಾಗೆಂದು ನಾನೊಂದು ದಿನ ಅವರನ್ನು ಬಿಟ್ಟು, ನನ್ನ ಕಾಗದದಲ್ಲಿ ಬರೆದ ಹಾಗೆ, ಉತ್ತರ ಕನ್ನಡ ಜಿಲ್ಲೆಗೆ ಬಂದು ಬಿಟ್ಟೆ.

"ಆದರೂ ಜನಗಳ ಉತ್ಸಾಹ ಎಷ್ಟು ದಿನ ಸಾಗುತ್ತದೆಯೆಂಬ ಅನುಮಾನ. ಜನಕ್ಕೆ ಇಂಥ ತ್ಯಾಗ ಬುದ್ಧಿ ಬಂದದ್ದು, ಧೈರ್ಯ ಬಂದದ್ದು ಒಳ್ಳೆಯ ಲಕ್ಷಣ ಅನಿಸುತ್ತಿರುವಾಗಲೇ ಪೋಲೀಸರ ರೀತಿ, ನೀತಿಗಳನ್ನು ನೋಡಿದರೆ ಯಾವ ಕರುಣೆಯೂ ಕಾಣುವುದಿಲ್ಲ. ತಮಗೆ ದೊರಕುವ ಹದಿನೆಂಟು ಇಪ್ಪತ್ತು ರೂಪಾಯಿಗಳ ಸಂಬಳಕ್ಕಾಗಿ ತಮ್ಮ ಆತ್ಮವನ್ನೇ ಮಾರಿಕೊಂಡಿದ್ದಾರೆ ಆ ಜನ. ಕೆಲವು ಕಡೆ ಅವರು ಕೊಟ್ಟ ಹಿಂಸೆಗಳನ್ನು ಹೇಳಿತೀರದು. ತಮ್ಮ ಮನೆಯಲ್ಲಿ ಹೆಂಗಸರೇ ಇಲ್ಲ ಎಂಬ ಬಗೆಯಲ್ಲಿ ವರ್ತಿಸಿಬಿಟ್ಟಿದ್ದಾರೆ." ಹೀಗೆ ರಾಧಾಕೃಷ್ಣ ತನ್ನ ಹಲವು ಅನುಭವಗಳನ್ನು ವಿವರಿಸಿದನು. ಪೋಲೀಸರ ಹಿಂಸೆಗೆ ರೋಷಗೊಂಡು ಜನ ಅವರ ಮೇಲಕ್ಕೆ ಕೈಮಾಡಿದ ಪ್ರಸಂಗ, ಅವರಿವರ ಜಗಳದಲ್ಲಿ ನಿರಪರಾಧಿಗಳಾದ ಎಷ್ಟೋ ಜನ ಗುಂಡಿನ ಏಟಿಗೆ ಬಲಿಯಾದದ್ದು, ಸೆರೆಮನೆಗೆ ಹೋದದ್ದು, ಒಂದೊಂದಾಗಿ ಹೇಳುತ್ತ ಹೋದನು. ಪ್ರತಿಯೊಂದು ಕತೆಯನ್ನೂ ಕೇಳಿ ಆವೇಶ ಬರುವಂತಿತ್ತು.

"ಹಾಗಾದರೆ ಇದರ ಪರಿಣಾಮವೇನು? ನಮಗೇನೇ ಜಯವಾದೀತೇ? ಅಥವಾ ಸರಕಾರ ಗೆದ್ದೀತೇ?" ಎಂದಳು ಸತ್ಯ.

"ಹೇಗೆ ಹೇಳಲು ಬರುತ್ತದೆ? ಗಾಂಧಿಜಿಯ ಅಹಿಂಸೆಯ ದಾರಿಯಲ್ಲಿಯೂ ನಾವು ಗೆದ್ದೇವೆನ್ನುವ ಧೈರ್ಯ ನನಗಿಲ್ಲ. ಈ ಹಿಂಸೆಯ ಮಾರ್ಗದಲ್ಲೂ ಜಯ ದೊರಕತ್ತದೆಯೆಂಬ ವಿಶ್ವಾಸವಿಲ್ಲ. ಸ್ವತಃ ನಾನಂತು ರಕ್ತಸುರಿಸುವುದಕ್ಕೆ ಆಳೇ ಅಲ್ಲ. ಆದುದರಿಂದ ನನಗೆ ಹೀಗೆ ಕಾಣುತ್ತದೋ ಏನೋ. ನಮ್ಮ ಹಿಂಸಾ ಶಕ್ತಿಗಿಂತ ಸರಕಾರದ ಹಿಂಸಾ ಶಕ್ತಿ ನೂರು ಪಾಲು ಮಿಗಿಲಾದದ್ದು. ಎಷ್ಟೋ ಕಡೆಗಳಲ್ಲಿ ಚಳವಳ ನಾಲ್ಕು ತಿಂಗಳು, ಆರು ತಿಂಗಳಲ್ಲಿಯೇ ತೀರ ಸ್ತಬ್ಧವಾಗಿಬಿಟ್ಟಿದೆ. ನಮ್ಮ ಮುಂಗಳೂರಿನಲ್ಲಿಯಂತೂ ಅದು ಶವಪ್ರಸೂತವಾಯಿತು. ಉತ್ತರ ದೇಶದಲ್ಲಿಯೂ ಎಷ್ಟೋ ಜನ ಪೋಲೀಸು ಜುಲುಮೆಗೆ ಹೆದರಿ ತಮ್ಮವರನ್ನು ಸರಕಾರಕ್ಕೆ ಒಪ್ಪಿಸಿದ್ದಾರೆ. ಅಂತೂ ಸ್ವಾತಂತ್ರ್ಯ ಸಂಗ್ರಾಮ ಮುಖ್ಯವಾದದ್ದು. ಸ್ವಾತಂತ್ರ್ಯ ನಮ್ಮ ಮುಖ್ಯಧ್ಯೇಯ. ಅದಕ್ಕಾಗಿ ನಾವು ಕಾದಾಡಬೇಕು. ಹಿಂಸೆಯೇ ಇರಲಿ, ಅಹಿಂಸೆಯೇ ಇರಲಿ- ತಕ್ಕ ಶಿಕ್ಷಣ, ಶಿಸ್ತುಗಳಿಲ್ಲದೆ ಜಯ ಸಿಗುವುದು ಕಷ್ಟ. ವೈರಿಯ ಬಲವನ್ನು ಮೀರುವ ವ್ಯವಸ್ಥೆ ನಮ್ಮದಿದ್ದರೆ

ಮಾತ್ರ ನಮಗೆ ಜಯ ಬಂದೀತು."

"ಹೋಗಲಿ, ಉತ್ತರ-ಕನ್ನಡದಲ್ಲಿ ನೀವೇನು ಮಾಡಿತ್ತಿದ್ದಿರಿ."

"ಅಲ್ಲಿ ರೈಲು ಕಂಬಿಯೇ ಇಲ್ಲವಲ್ಲ—ಕಿತ್ತು ಉರುಳಿಸುವುದಕ್ಕೆ"?

"ಅಷ್ಟೇಯೋ?"

"ಅಲ್ಲಿಯೂ ಏನೇನೋ ಕೆಲಸವಾಯಿತು. ಹಳೆಯ ಸ್ನೇಹಿತರು ತುಂಬಾ ಇದ್ದಾರಲ್ಲ. ಅವರನ್ನು ಕಟ್ಟಿಕೊಂಡು ಒಂದು ಕೆಲಸವನ್ನೇನೋ ನಾವು ಚೆನ್ನಾಗಿ ಸಾಧಿಸಿದೆವು. ಅದೆಂಥ ದೊಡ್ಡ ಕೆಲಸವೇನೂ ಇಲ್ಲ. ಯುದ್ಧ ಪ್ರಯತ್ನಕ್ಕೆ ಅಡಚಣಿ ತರುವ ಕೆಲಸ ಮಾತ್ರ. ಮೊತ್ತ ಮೊದಲು ಆ ಕೆಲಸ ಸುಲಭವಾಗಿಯೇ ಆಯಿತು. ಉತ್ತರಕನ್ನಡದಿಂದ ಯುದ್ಧಕ್ಕೆ ತುಂಬಾ ಮರಮುಟ್ಟುಗಳು ಹೋಗುತ್ತಿದ್ದುವು. ಅಲ್ಲಿ ಎಲ್ಲಿ ನೋಡಿದರೂ ಮರಮುಟ್ಟುಗಳ ರಾಶಿಯೇ. ಹಲವು ಸಿಗಿದು ತಯಾರಾದುವು, ಸಿಗಿಯದೆ ಇದ್ದವು. ರಾತ್ರಿ ಸೈಕಲುಗಳಲ್ಲಿ ಸವಾರಿ ಮಾಡಿಕೊಂಡು ಹೋಗಿ, ಅವಕ್ಕೆ ಬೆಂಕಿ ಇಟ್ಟು ಬರುತ್ತಿದ್ದೆವು. ನಾವು ಹತ್ತೆಂಟು ಮಂದಿ ಇದ್ದೆವು, ಒಂದೇ ಒಂದು ಕಡೆ ಸಿಕ್ಕಿಬೀಳಲಿಲ್ಲ. ಸಾವಿರಾರು ಕೋಡಿ ಮರಗಳನ್ನು ಸಿಗಿದು ಲೋರಿ, ರೈಲುಗಳಿಗೆ ಹೋಗಲು ತಯಾರಿಸಿದುವುಗಳನ್ನು ಧ್ವಂಸ ಮಾಡಿದೆವು. ಅಲ್ಲಿ ಇತರ ಯುದ್ಧ ಪ್ರಯತ್ನಗಳಿಲ್ಲ. ಅದರಿಂದ ನಮ್ಮ ಚಟುವಟಿಕೆ ಅಷ್ಟಕ್ಕೇ ನಿಲ್ಲಬೇಕಾಯಿತು. ಕೊನೆ ಕೊನೆಗೆ ಅಲ್ಲಿಯೂ ಪೋಲೀಸರ ಕಾವಲು ಪ್ರಾರಂಭವಾಯಿತು. ಆಗ ಮರ ಸಿಗಿಯುವ ಆಳುಗಳನ್ನು ಸಂಚಿಗೆ ತೆಗೆದುಕೊಂಡು, ಅವರಿಂದ ಆಣೆಭಾಷೆ ಮಾಡಿಸಿ, ಸಂಜೆ ಅವರು ಮರದ ಡಿಪೋ ಬಿಟ್ಟು ಬರುವಾಗ, ಮರದ ರಾಶಿಗಳ ಒಳಗೆ ಬೆರಣಿ, ಕೆಂಡ ಇಟ್ಟು ಬರುವ ಹಾಗೆ ಮಾಡುತ್ತಿದ್ದೆವು. ಬೆಳಗಾಗುವಾಗ ಎಲ್ಲವೂ ಸುಟ್ಟು ಧ್ವಂಸವಾಗುತ್ತಿತ್ತು. ಇದರ ಮೇಲೆಯೂ ಮರ ಸಾಗಿಸುತ್ತಿದ್ದರೆ, ಚಪರೆ ಮರೆಯಿಸಿ ಲಾರಿಯವರನ್ನು ಬೆದರಿಸಿ, ನಿಲ್ಲಿಸಿ, ಮರಕ್ಕೆ ಬೆಂಕಿ ಕೊಟ್ಟು ಬಂದುದೂ ಉಂಟು. ಆದರೆ ಅಷ್ಟೊಂದು ವಿಶೇಷವಾಗಿ ಆ ಮೇಲೆ ಕೆಲಸ ನಡೆಯಲಿಲ್ಲ. ಅದರಿಂದ ಅಪಾಯ ಹೆಚ್ಚು; ನಾವೇ ಸಿಕ್ಕಿ ಬೀಳುತ್ತೇವೆ. ನಮ್ಮ ಕೆಲಸವೇ ನಿಂತು ಹೋಗುತ್ತದೆ. ಒಟ್ಟಾರೆ ಯುರೋಪಿನ ಯುದ್ಧದ ಪರಿಣಾಮ ಹೇಗೆ ಹೇಳುವುದು ಕಷ್ಟವೋ ಅಷ್ಟೇ ಕಷ್ಟ ನಮ್ಮೀ ಯುದ್ಧದ ಭವಿಷ್ಯವನ್ನು ಹೇಳು

ವುದು. ಭವಿಷ್ಯ ನಮ್ಮ ಕೈಯಲಿಲ್ಲ, ದೇವರಲ್ಲಿದೆ.

"ಇಂಥ ವೇಳೆ ಸುಮ್ಮನೆ ಕುಳಿತಿರಬಾರದು. ದೇಶದ ಬಿಡುಗಡೆಯಾಗುವುದಕ್ಕೆ ಇದು ಅತಿ ಉತ್ತಮ ಸಂದರ್ಭವೆಂದೇನೋ ಕಾಣಿಸುತ್ತದೆ. ಇಲ್ಲಿಯ ತನಕ ಹಿಟ್ಲರನ ವಿರೋಧಿ ನಾನಾಗಿದ್ದೆ. ಆದರೆ ಇಂಥ ಪ್ರಸಂಗದಲ್ಲೂ ನಮಗೆ ಸ್ವಾತಂತ್ರ್ಯ ಕೊಡದ್ದನ್ನು ಕಂಡರೆ, ಬ್ರಿಟನಿನ ಮೇಲೆ ಯಾವ ಗೌರವವೂ ನನಗೆ ಉಳಿಯಲಿಲ್ಲ. ನಮ್ಮ ಜನಗಳನ್ನು ಯುದ್ಧ ಭೂಮಿಗೆ ಕರೆದುಕೊಂಡು ಹೋಗಿ ಬಲಿ ಹಾಕುತ್ತಿದ್ದಾರಾದರೂ ನಮ್ಮ ಜನಕ್ಕೆ ಸ್ವಾತಂತ್ರ್ಯ ಕೊಡಬೇಕೆಂಬ ಬುದ್ಧಿ ಬರುವುದಿಲ್ಲ. ಬರ್ಮಾದಲ್ಲಿ ನಡೆಯಿಸಿದ ಅನ್ಯಾಯವೇ ಸಾಕು. ನಾಜಿಗಳೂ ಅಷ್ಟೇನೇ; ಬ್ರಿಟಿಷರೂ ಅಷ್ಟೇನೇ. ಒಂದೊಂದು ಬಗೆಯಲ್ಲಿ ಇಬ್ಬರೂ ಸ್ವಾರ್ಥಿಗಳೇ. ಇಬ್ಬರಲ್ಲಿ ಯಾರು ವಾಸಿಯೆಂದು ನೋಡಬೇಕಷ್ಟೆ ನಾವು."

ಆಗ ಶ್ಯಾಮು "ಇವರು ಪ್ರಜಾಪ್ರಭುತ್ವಕ್ಕಾಗಿ ಕಾದುತ್ತಿದ್ದೇವೆ ಎನ್ನುತ್ತಿದ್ದಾರಲ್ಲ?" ಎಂದನು.

"ಅದು ಬರಿಯ ಪೊಳ್ಳು ಮಾತು. ಹಿಟ್ಲರ್ ಯುದ್ಧ ಮಾಡುವಾಗಲೂ ದೊಡ್ಡ ಮಾತನ್ನೇ ಆಡಿದ. ಜಪಾನು ರಂಗೂನಿನ ಮೇಲೆ ಬೀಳುವಾಗಲೂ 'ಅನ್ಯದವರ ಸ್ವಾತಂತ್ರ್ಯ'ಕ್ಕೆಂದು ಸಾರಿತು. ಸಣ್ಣ ಮಾತನ್ನು ಯಾರೂ ಆಡುವುದಿಲ್ಲ. ಎಲ್ಲರೂ ಪ್ರಜೆಗಳ ಹೆಸರನ್ನು ಹೇಳುತ್ತಾರೆ. ಲೋಕಕಲ್ಯಾಣ ಸಾರುತ್ತಾರೆ. ಸತ್ಯಕ್ಕಾಗಿ ಕಾದಾಡುವುದು–ಅನ್ನುತ್ತಾರೆ. ಜಪಾನರ ಸತ್ಯ ಬೇರೆ; ಬ್ರಿಟಿಷರ ಸತ್ಯ ಬೇರೆ; ಜರ್ಮನಿಯವರ ಸತ್ಯ ಬೇರೆ. ಅದರಲ್ಲಿ ಯಾವುದು ಖಂಡಿತ ಸತ್ಯ, ಯಾವುದು ಅಲ್ಲ ಎನ್ನುವ ಹಾಗೆಯೇ ಇಲ್ಲ. ಎಲ್ಲರ ಸತ್ಯದಲ್ಲೂ ಸಾಕಷ್ಟು ಮಿಥ್ಯ ಸೇರಿಯೇ ಇದೆ. ಇನ್ನು ಹಾಗೆಯೇ—ಸತ್ಯದ ಪಂಗಡವೇ ಗೆಲ್ಲುತ್ತದೆ—ಎನ್ನುವ ಮಾತು ಅಷ್ಟರಲ್ಲಿಯೇ ಇದೆ. ನಮ್ಮ ಸ್ವಾತಂತ್ರ್ಯ ಸತ್ಯದ ದಾರಿಯದಿರಬಹುದು. ಹಾಗೆ ಸತ್ಯಕ್ಕಾಗಿ ಹೋರಾಡುವ ನಮ್ಮ ಜನರಲ್ಲಿ ಎಷ್ಟು ಸ್ವಾರ್ಥಿಗಳಿಲ್ಲ; ಠಕ್ಕರಿಲ್ಲ? ಶಕ್ತಿ, ಸತ್ಯ, ವ್ಯವಸ್ಥೆ, ಒಗ್ಗಟ್ಟು, ತಾಳ್ಮೆ ಇಂಥ ಹಲವಾರು ಗುಣಗಳು ಕೂಡಿದ ಮೇಲೆ ಗೆಲುವು ನಿರ್ಣಯವಾಗಬೇಕು. 'ಸತ್ಯ'ವೆಂಬುದು ಬರಿಯೊಂದು ಮಾತಾಗಿ ಉಳಿಯುತ್ತದೆ. ಮಾಡಬೇಕಾದ ಕರ್ತವ್ಯವಾದರೆ ಮಾಡಬೇಕು; ಅಷ್ಟೆ. ಅದರಿಂದ ಗೆಲವೋ, ಸೋಲೋ

ಯಾರು ಬಲ್ಲರು? ಗೆಲುವಿನ ವಿಶ್ವಾಸವಿಲ್ಲದೆ ಯಾರಾದರೂ ಕಾದುತ್ತಾರೆಯೇ? ಜಗಳ ಕಾಯ್ದವರೆಲ್ಲರಿಗೂ ಜಯ ಸಿಗುತ್ತದೆಯೇ? ಕೊನೆಗೆ ಗೆದ್ದವನೆಂದುಕೊಳ್ಳಬಹುದು: ತನ್ನ ಪಕ್ಷವು ಸತ್ಯದ್ದಾದುದರಿಂದ ಗೆದ್ದಿತೆಂದು. ಅವೆಲ್ಲ ಬರಿಯ ಚಮತ್ಕಾರಿಕ ಮಾತುಗಳು."

ಬಲು ಹೊತ್ತು ಮಾತನಾಡುತ್ತ ಕುಳಿತರು. ಗೆಳೆಯ ಗೆಳತಿಯರು ರಾಧಾಕೃಷ್ಣನನ್ನು ಆತುರದಿಂದ ಪ್ರಶ್ನೆ ಕೇಳುತ್ತಲೇ ಇದ್ದರು. ದಿನದ ಪ್ರವಾಸದಿಂದ ತುಂಬ ದಣಿದಿದ್ದ ಅವನು "ನನಗೆ ನಿದ್ರೆ ಬರುತ್ತದೆ ಮಲಗೋಣ" ಎಂದನು. ಎಲ್ಲರೂ ಮಲಗಿಕೊಂಡರು.

ಬೆಳಗಾದ ಮೇಲೆ 'ಸತ್ಯ' ಪ್ರಪಂಚದ ಮಾತುಗಳನ್ನು, ಮರೆತು ಸತ್ಯಳ ಪ್ರಪಂಚದ ವಿಚಾರವನ್ನು ಕೇಳಿದನು. ಮನೆ, ಮಕ್ಕಳ ವಿದ್ಯಾಭ್ಯಾಸ ಇವುಗಳನ್ನು ಕುರಿತು ಕೇಳಿದ್ದಾಯಿತು. ಹಿತ್ತಿಲು, ಗೋಶಾಲೆಗಳನ್ನೆಲ್ಲ ನೋಡಿ ಬಂದನು. ನಡುನಡುವೆ-ಅವರು ಹೇಗಿದ್ದಾರೆ,ಇವರು ಹೇಗಿದ್ದಾರೆ—ಎಂದು ತನ್ನ ಪರಿಚಿತರನ್ನು ಕುರಿತು ವಿಚಾರಿಸಿದನು. ರಾಮಕೃಷ್ಣಯ್ಯನವರನ್ನು ಕಾಣುವ ಹಂಬಲವಿತ್ತು. ಆದರೆ "ಸತ್ಯ. ನಾನು ಈ ರಾತ್ರಿಯೇ ಹೊರಡಬೇಕು. ರಾತ್ರಿಯೇ ಬಂಟ್ವಾಳಕ್ಕೆ ಹೋಗಿ ಅಲ್ಲಿಂದ ಧಾರವಾಡದ ಹಾದಿಯನ್ನು ಹಿಡಿಯುತ್ತೇನೆ. ಇನ್ನೊಮ್ಮೆ ನೋಡುವ ಎಲ್ಲರನ್ನು" ಎಂದನು. "ಅದೇನು ಅಷ್ಟು ಅವಸರ?" ಎಂದು ಕೇಳಿದಳು ಸತ್ಯ. 'ಬೆಳಿಗ್ಗೆ ಹೋದರೇನು?' ಎಂದೂ ಕೇಳಿದಳು.

"ನಾನೂ ಸರಕಾರಕ್ಕೆ ಬೇಕಾದವರಲ್ಲಿ ಒಬ್ಬ. ನನ್ನ ಹೆಸರನ್ನು ಅನಂತರಾಯನೆಂದು ಹಾಕಿಕೊಂಡಿದ್ದೇನೆ. ಅದಕ್ಕಾಗಿಯೇ ರಾತ್ರಿ ಹೊರಡಬೇಕು. ಅಲ್ಲದೆ ನೋಡು, ಈ ಚಳವಳದಿಂದಾಗಿ ಉತ್ತರ ಕರ್ನಾಟಕದಲ್ಲಿ ಹತ್ತಾರು ನಾಗೇನಹಳ್ಳಿಗಳಾಗಿವೆ. ಎಷ್ಟೋ ಜನ ಕಷ್ಟಕ್ಕೊಳಗಾಗಿದ್ದಾರೆ. ಅಲ್ಲಿಂದ, ಇಲ್ಲಿಂದ ಸಹಾಯವನ್ನು ಬೇಡಿತಂದು ಅವರಿಗೆ ಕೊಡಬೇಕು. ನಾನು ಯಾವ ರೈಲ್ವೆ ಸ್ಟೇಶನನ್ನು ಸುಡಲು ಹೋಗಿರದಿದ್ದರೂ,ಹೇಗೋ ನನ್ನ ಹೆಸರನ್ನು ತುರುಕಿಸಿಕೊಂಡು ಒಂದೆರಡು ಆರೋಪಗಳನ್ನು ಹೊರಿಸಿದ್ದಾರೆ. ನಾನು ಮಾಡದೆ ಇದ್ದ ಕೆಲಸಗಳಿಗಾಗಿ ನಾನು ಪೋಲೀಸರಿಗೆ ಬೇಕಾಗಿದ್ದೇನೆ. ನಾನು ಮಾಡಿದ ಕೆಲಸಗಳು ಒಂದೂ ಅವರಿಗೆ ತಿಳಿದಿಲ್ಲ. ಅಂತೂ ಈ ವಿಮಾ ಏಜಂಟನ ವೇಷದಿಂದ

ತಲೆ ಮರೆಯಿಸಿಕೊಂಡು ಸಂಚಾರ ಮಾಡುತ್ತಿದ್ದೇನೆ. ಈಗೀಗ ವಿಧ್ವಂಸಕ ಕೆಲಸ ಹೆಚ್ಚಿಗೆ ಆಗದೆ ಹೋದರೂ, ಅಂಥ ಕೆಲಸ ಮಾಡಿದವರನ್ನು ಮರೆಯಬಾರದಷ್ಟೆ? ಅವರ ಕೈಬಿಡಬಾರದಲ್ಲ?"

"ನೀವು ಒಬ್ಬರೇನು ಈ ಕೆಲಸಕ್ಕೆ?"

"ಒಬ್ಬನಲ್ಲ! ನೂರುಮಂದಿ ಇದ್ದಾರೆ. ಆದರೂ ನಾನು ಉಳಿದವರ ಗುಂಪಿನಲ್ಲಿ ಹೆಚ್ಚಾಗಿ ಸೇರುತ್ತಲಿಲ್ಲ. ನನಗೆ ತಿಳಿದಲ್ಲಿಗೆ ಹೋಗಿ ಬರುತ್ತಿದ್ದೇನೆ, ನನಗೆ ಯೋಗ್ಯ ಕಂಡವರಿಗೆ ಸಹಾಯವನ್ನು ಒದಗಿಸಲು ಪ್ರಯತ್ನಿಸುತ್ತೇನೆ. ಸುಮ್ಮನೆ ಕುಳಿತಿರುವುದಕ್ಕೆ ಬರುತ್ತದೆಯೇ?"

"ಅಷ್ಟರಲ್ಲೇ ನಿಮ್ಮನ್ನು ಹಿಡಿದರೆ?"

"ಹಿಡಿಯಿಸಿಕೊಳ್ಳಬಾರದೆಂದು ಉದ್ದೇಶ. ಆದರೂ ಅವರು ಮೂರ್ಖರಲ್ಲ. ಅವರಲ್ಲಿಯೂ ಹಲವರು C. I. D.ಗಳು ಇದ್ದಾರೆ. ನಮ್ಮ ಪಂಗಡದಿಂಲೂ ಆಚೆಗೆ ಸೇರಿಕೊಂಡವರುಂಟು. ಇಂಥ ಸಂದರ್ಭಗಳಲ್ಲಿ ಸ್ವಾರ್ಥಸಾಧನೆಗಾಗಿ ಹೆಣಗಾಡುವವರು ಇಲ್ಲದಿರುತ್ತಾರೆಯೇ? ಮೊನ್ನೆಯ ತನಕ ನಮ್ಮ ಸ್ನೇಹಿತನೆಂದು ನಟಿಸಿದ ಒಬ್ಬ ಮನುಷ್ಯ, ಸುಲಭವಾಗಿ ಬಂದು ಸರಕಾರೀ ನೌಕರಿ ದೊರಕಿಸಿಕೊಂಡ. ಒಬ್ಬೊಬ್ಬರ ವಿಷಯವಾದ ಚಾಡಿಯನ್ನು ಸರಕಾರಕ್ಕೆ ಹೇಳಿ, ತನ್ನ ಜೀವನಕ್ಕೊಂದು ದಾರಿಯನ್ನು ಮಾಡಿಕೊಂಡ. ಅಂಥವರಿಂದಾಗಿ ನನ್ನ ಮೇಲಿನ ವಾರಂಟು ಹೊರಟದ್ದು. ಇಂದಲ್ಲ ನಾಳೆಯಾದರೂ ನಾನು ಅವರ ಬಾಯಿಗೆ ಬೀಳುವವನೇ."

"ಹೌದಪ್ಪ, ಇಂಥ ಕೆಲಸ ನಡೆಯಿಸಿಕೊಂಡು ಹೋಗುವುದು ಕಷ್ಟ. ನೂರಾರು ತೆರನ ಜನರಿರುತ್ತಾರೆ. ಮೊದಲೇನೇ ಎಲ್ಲರನ್ನು ತಿಳಿಯುವುದಕ್ಕೆ ಆಗುತ್ತದೆಯೇ? ತಿಳಿದಮೇಲೆ ಕೆಲಸ ತೊಡಗುತ್ತೇವೆ—ಇವತ್ತಿನ ಕೆಲಸವನ್ನು ನಾಳೆಗೆ ತಳ್ಳಲಿಕ್ಕೆ ಬರುತ್ತದೆಯೇ? ನಮ್ಮ ಕೆಲಸಗಳೆಲ್ಲ ಮನೆಗೆ ಬೆಂಕಿ ಬಿದ್ದ ಬಳಿಕ ಬಾವಿಯನ್ನು ತೋಡಿದ ಹಾಗೆ. ಈ ಹತ್ತು ವರ್ಷ ಕಾಲ ನಾವೆಲ್ಲ ತಣ್ಣಗೆ ನಿದ್ದೆ ಮಾಡಿದೆವು. ಆಗ ಗುಪ್ತವಾಗಿ ಒಂದು ಗುಂಪನ್ನು ಏರ್ಪಡಿಸಿದ್ದರೆ, ಅವರಿಗೆ ಚೆನ್ನಾಗಿ ವಿಧ್ವಂಸಕ ಕಾರ್ಯದಲ್ಲಿ ಶಿಕ್ಷಣ ಕೊಟ್ಟಿದ್ದರೆ, ಈ ವೇಳೆಯಲ್ಲಿ ಬ್ರಿಟಿಷರು ತತ್ತರಿಸುವಂತೆ ಮಾಡಬಹುದಿತ್ತು. ಈಗ ಹೆಚ್ಚಿನ ಮುಚ್ಚುಮರೆಗೂ ಅವಕಾ

ಶವಿಲ್ಲ; ಶಿಕ್ಷಣಕ್ಕೂ ಅವಕಾಶವಿಲ್ಲ. ಅಪರವರಿಗೆ ತೋರಿದಂತೆ ಮಾಡು ತ್ತಾರೆ. ಪಾಶ್ಚಾತ್ಯದೇಶಗಳು, ರಾಜಕೀಯ ಬಲ್ಲವರು, ಶಾಂತಿನೆಲೆಸಿದ್ದ ಕಾಲದಲ್ಲಿಯೇ ತಮ್ಮ ಮಿತ್ರರಾಷ್ಟ್ರಗಳಲ್ಲಿ ಗೂಢಚಾರರನ್ನು ಇರಿಸಿ ಕೊಂಡು, ಒಳಗಿನ ಗುಟ್ಟೆಲ್ಲವನ್ನೂ ತಿಳಿದುಕೊಳ್ಳುತ್ತಾರೆ. ನಮಗೆ ಆ ದೂರದರ್ಶಿತ್ವವೇ ಇಲ್ಲ. ಪ್ರತಿ ಬಾರಿಯೂ ನಮ್ಮದು ಹೊಸ ಜನರು ಹೊಸ ಚಳವಳ; ಅದರ ಫಲವೆಂದರೆ ಹೊಸ ನಿರಾಶೆ!"

ಇಷ್ಟೆಲ್ಲ ಕೆಲಸ ಮಾಡಿದರೂ ರಾಧಾಕೃಷ್ಣನ ಮನಸ್ಸು ಅತೃಪ್ತ ವಾಗಿಯೇ ಇತ್ತು ಎಂಬುದನ್ನು ಸತ್ಯ ಸುಲಭದಲ್ಲಿಯೇ ತಿಳಿದುಕೊಂ ಡಳು. ತಿರುಗಿ ಅದನ್ನೇ ಕೆರಳಬಾರದೆಂದು, ಊರು ಮನೆ ವಿಚಾರಗ ಳನ್ನು ಮಾತನಾಡುತ್ತ ಹೊತ್ತು ಕಳೆದರು. ಅಂತು ಕತ್ತಲಾಯಿತು; ಊಟ ಮುಗಿಯಿತು. ಮಕ್ಕಳನ್ನೆಲ್ಲ ಮಲಗಿಸಿದರು. ಅವರಿಗೆ ನಿದ್ದೆ ಬಂದ ಮೇಲೆ ಅಣ್ಣನ ಜತೆಗೆ ಶ್ಯಾಮ ಬಂಟ್ವಾಳಕ್ಕೆ ಹೊರಟನು. ಹೊರಡುತ್ತ "ಸತ್ಯ, ಈ ಬಾರಿ ನಿಮ್ಮನ್ನೆಲ್ಲ ಕಂಡು ಹೋಗುವ ಆಸೆ ಅಷ್ಟೊಂದು ಹೆಚ್ಚಿಗೆ ಆಯಿತೆಂದು ಬಂದೆನಷ್ಟೆ; ಇಲ್ಲವಾದರೆ ಬರುತ್ತಿರಲಿಲ್ಲ. ಅವರ ಕೈಗೆ ಸಿಕ್ಕಿ ಬಿದ್ದರೆ ಇನ್ನು ಎಂದು ಬರುತ್ತೇನೋ! ಹಾಗೆಂದು ಯೋಚನೆ ಮಾಡುತ್ತ ಕುಳಿತಿರಬೇಡ. ಊರಿಗೆ ಆದಷ್ಟು ನಮಗೆ. ಸ್ವಲ್ಪವಾದರೂ ಪರಿಣಾಮ ಸರಕಾರದ ಮೇಲೆ ಇದರಿಂದ ಆಗದೆ ಹೋಗದು" ಎಂದು ಹೇಳಿ ಹೊರಟುಹೋದನು.

ಶ್ಯಾಮ ಬಂಟ್ವಾಳದ ತನಕವೂ ಬರುವೆನೆಂದು ಹೊರಟಿದ್ದ. ಆರೇಳು ಮೈಲು ಹೋಗುತ್ತಲೇ, ಚಿಕ್ಕಮಗಳೂರಿಗೆ ಹೋಗುವ ಒಂದು ಲಾರಿ ಸಿಕ್ಕಿತು. ಅದರಲ್ಲಿ ಹೋಗುವ ಅನುಕೂಲತೆ ದೊರಕಿದುದರಿಂದ ರಾಧಾಕೃಷ್ಣ ಪಯಣ ಮುಂದುವರಿಸಿದನು. ಶ್ಯಾಮ ಮನೆಗೆ ಮರಳಿ ದನು.

* * * * *

ರಾಧಾಕೃಷ್ಣ ಮೈಸೂರು ಪ್ರಾಂತವನ್ನು ದಾಟುವ ತನಕ ನಿರ್ಭೀ ತನಾಗಿಯೇ ಇದ್ದ. ಅವನೀಗ ಹೋಗುವೆನೆಂದುಕೊಂಡುದು ಬೆಳಗಾಂ ವಿಗೆ. ಅಲ್ಲಿಂದ ಮುಂದೆ ಆತ ಬನ್ನಟ್ಟಿಯವರನ್ನು ನೋಡಬೇಕಾದ ಅವಶ್ಯಕತೆಯಿತ್ತು. ಹರಿಹರ ದಾಟುತ್ತಲೇ, ಆ ಕೆಲವು ದಿನಗಳಲ್ಲಿಯೇ

ರಾಜಕೀಯ ಆವರಣ ಎಷ್ಟು ಬದಲಾಗಿತ್ತೆಂದು ನೋಡಿದೊಡನೆಯೇ ತಿಳಿಯುವಂತಿತ್ತು. ಅಲ್ಲಿನ ಎಲ್ಲಾ ರೈಲ್ವೆ ನಿಲ್ದಾಣಗಳಲ್ಲಿಯೂ ಪೋಲೀಸರ ಕಾವಲು; ಹಾಗೆ ರೈಲು ಬಂಡಿಗಳಿಗೂ ಕಾವಲು; ರೈಲು ಹಾದಿಗಳಿಗೂ ಕಾವಲೇ. ಅಲ್ಲಲ್ಲಿ ಸೆರೆಮನೆಗೋ, ಕಚೇರಿಗೋ ಬಂಧಿಸಿ ಒಯ್ಯಲ್ಪಡುತ್ತಿದ್ದವರ ತಂಡ. ಪೋಲೀಸರು ಜನರನ್ನು ಖಟ್ಲೆ ಹಾಕುವುದರ ಸಲುವಾಗಿ ಕೋರ್ಟುಗಳಿಗೆ ಹಿಂಡುಹಿಂಡಾಗಿ ಒಯ್ಯುತ್ತಿದ್ದರು. ರಾಧಾಕೃಷ್ಣ ಹುಬ್ಬಳ್ಳಿಯನ್ನು ಸೇರುತ್ತಲೇ, ಅವನಿಗಾಗಿ ಹುಡುಕಾಟ ನಡೆಯುತ್ತಿದೆಯೆಂಬ ಸುದ್ದಿ ದೊರಕಿತು. ಅಲ್ಲದೆ ತಮ್ಮ ಹಿಂದೆ ಕೆಲಸಮಾಡುತ್ತಿದ್ದ ಜನಗಳಲ್ಲಿ ಹಲವಾರು ಮಂದಿಯನ್ನು ಸೆರೆಹಿಡಿದುದರ ಫಲವಾಗಿ, ಅವರ ಕಾರ್ಯಕಲಾಪಗಳೂ ನಿಂತಿವೆ ಎಂಬ ಅನುಭವವಾಯಿತು. ಆತ ಧಾರವಾಡ ಪ್ರಾಂತಕ್ಕೆ ಹೋಗದೆ ಒಂದೆರಡು ತಿಂಗಳಾಗಿದ್ದುವು. ಉತ್ತರಕನ್ನಡ ಜಿಲ್ಲೆಯಲ್ಲಿಯೇ ಅಲೆದಾಡಿಕೊಂಡು ಊರಿಗೆ ಬಂದಿದ್ದ. ಅಲ್ಲಿಂದ ತಿರುಗಿ ಧಾರವಾಡ, ಹುಬ್ಬಳ್ಳಿ ಸೇರುವಾಗ ಇಷ್ಟೊಂದು ಬದಲಾವಣೆಯಾಗುವುದು ಸಾಧ್ಯವೇ — ಎಂಬ ಅನುಮಾನವಾಯಿತು.

ಚಳವಳದ ಸಲುವಾಗಿ ಸೆರೆಮನೆಗೆ ಹೋದವರ ಕುಟುಂಬ ಪೋಷಣೆಯ ಕೆಲಸವು ತೀರ ಉತ್ಕಟವಾಗಿ ಬಂದಿತ್ತು. ಅವರ ಸಲುವಾಗಿ ದುಡಿಯುವ ಹಲವರು ಬಂಧನಕ್ಕೊಳಗಾಗಿದ್ದರು. ಅದರಿಂದ ರಾಧಾಕೃಷ್ಣ—'ತನ್ನ ಮುಂದಿನ ಕೆಲಸ ಅನ್ನ ಪೂರೈಕೆಯದು. ತಾನು ಇನ್ನಷ್ಟು ಗುಪ್ತವಾಗಿ ಸಂಚಾರ ಮಾಡಿ ಆ ಕೆಲಸ ಸಾಧಿಸಬೇಕು' ಎಂಬುದನ್ನು ನಿರ್ಧರಿಸಿದನು. ಅವನ ವಿಮಾ ಏಜೆಂಟನ ವೇಷವು ಕೆಲಸಕ್ಕೆ ಬರುವಂತಿರಲಿಲ್ಲ. ಹಾಗಾಗಿ ಧಾರವಾಡದ ಒಬ್ಬ ಗೆಳೆಯರ ಮನೆಯಲ್ಲಿ ಎಂಟು ಹತ್ತು ದಿವಸಕಾಲ ಅಜ್ಞಾತವಾಸ ಮಾಡಿದನು. ಮುಖಕ್ಷೌರವಿಲ್ಲದೆ ಸಂದುದರಿಂದ ವೇಷಕ್ಕೆ ತಕ್ಕ ಮೋರೆಯಾಯಿತು. ಅದಕ್ಕೆ ಹೊಂದುವಂತೆ ಕಾವಿಯುಡುಗೆಯನ್ನು ತೊಟ್ಟು ಆತ ಸಾಮಾನ್ಯ ಭಿಕ್ಷುಕ ಸನ್ಯಾಸಿಯಾದನು. ಆ ಉಡುಗೆಯಲ್ಲೇ ಗ್ರಾಮ ಸಂಚಾರವನ್ನು ಮಾಡುತ್ತ ಹಳ್ಳಿಗಳ ಸ್ಥಿತಿಯನ್ನು ಕೇಳಿ ತಿಳಿಯತೊಡಗಿದನು. ಅವನು ಕಾಣಬೇಕೆಂದಿದ್ದ ಬನ್ನಟ್ಟಿಯವರು ಇನ್ನೂ ಬೆಳಗಾಂವಿಗೆ ಬಂದಿರಲಿಲ್ಲ. ಈಗೀಗ ಮುಂಬಯಿಯಲ್ಲಿಯೇ ಅವರ ವಾಸ ಹೆಚ್ಚಾಗಿತ್ತು. ಚಳವಳಕ್ಕೆ ಬೇಕಾದಷ್ಟು

ಹಣ ಒದಗಿಸುವುದಕ್ಕೆ ಮುಂಬಯಿ ಅನುಕೂಲವಾದ ಊರು. ಈತನಿಗೆ ಊರಲ್ಲಿ ಭಿಕ್ಷಾಟನೆ ಮಾಡಿ ಬೇಸರ ಬಂದಿತ್ತು. ಮೊದಲಿನಂತೆ ಜನರಿಂದ ಧಾರಾಳ ಸಹಾಯ ಬರುವುದೂ ಕಡಿಮೆಯಾಯಿತು. ಇತ್ತ ತನ್ನ ಹಳೆಯ ಗುಂಪಿನವರನ್ನು ಕಂಡು, ಅವರ ಸ್ಥಿತಿಗತಿಗಳನ್ನು ವಿಚಾರಿಸುವ ಮನಸ್ಸಾಯಿತು. ಅಲ್ಲಿ ಬೇಕೆನ್ನುವಷ್ಟು ಪರಿಚಿತರು ಇದ್ದರು. ಹುಕ್ಕೇರಿ, ಗೋಕಾಕ ಪ್ರಾಂತಗಳ ಕಾಡು ಗುಡ್ಡಗಳಲ್ಲಿ ತಮ್ಮ ಬೀಡು ಬಿಡಾರ ಹೂಡಿಕೊಂಡು ಹಲವರು ನಿಶಾಚರ ಬಾಳ್ವೆಯನ್ನು ಮಾಡುತ್ತಿದ್ದರು. ಅಲ್ಲಿಯೂ ನಿರಾಶೆಯ ವಿಚಾರವೊಂದು ಅವನ ಕಿವಿಗೆ ಬೀಳುವಂತಾಯಿತು. ಅವನ ಗೆಳೆಯರಲ್ಲಿ ಅನೇಕರು ಬಹು ಸುಲಭವಾಗಿ ಪೋಲೀಸರ ಕೈಗೆ ಸಿಕ್ಕಿಬಿದ್ದರು. ಅಷ್ಟೊಂದು ರಹಸ್ಯದಿಂದ ಹಿಂದುಳಿದು ನಿಂತು ಕೆಲಸಮಾಡಿದ್ದರೂ ಗುಟ್ಟು ರಟ್ಟಾಗುತ್ತಿತ್ತೆಂಬ ಸಂಗತಿ ಅವನ ಊಹೆಗೆ ಮೀರಿದ್ದಾಯಿತು.

ಇವರ ಕಾರ್ಯಕ್ರಮದ ಅವಸರದಲ್ಲಿ ಅಪರಿಚಿತರನ್ನು ತಮ್ಮ ಪಡೆಗೆ ಸೇರಿಸಿಕೊಂಡುದರ ಫಲ ಅದು. ಬನ್ನಟ್ಟಿಯವರ ತೀರ ಶಿಫಾರಸಿನ ಮಿತ್ರ ದುಂಡೂರ್ ಎಂಬ ವ್ಯಕ್ತಿಯು ಅವರೆಲ್ಲರ ಹೆಸರುಗಳನ್ನು ಪೋಲೀಸರಿಗೆ ಒಪ್ಪಿಸಿದ್ದನಂತೆ. ಬನ್ನಟ್ಟಿಯವರಿಗೆ ದುಂಡೂರನಲ್ಲಿ ತುಂಬ ಅಭಿಮಾನ. "ಮಿ। ಅನಂತರಾವ್, ನಮ್ಮ ದುಂಡೂರ ನಮಗೆ ಸಿಕ್ಕಿದ ಜನರಲ್ಲಿ ಅದ್ವಿತೀಯ. ಮೊನ್ನೆ ಆತನೊಬ್ಬನೇ ಒಬ್ಬ ಅಥಣಿಗೆ ಹೋಗುವ ಮೋಟರನ್ನು ತಡೆದು, ನಿಲ್ಲಿಸಿ, ಟಪ್ಪಾಲು ಚೀಲಗಳ ಸುಲಿಗೆ ಮಾಡಿದ................ಚಿಕ್ಕೋಡಿ ಮಾಮಲೆದಾರರನ್ನು ಕಂಬಕ್ಕೆ ಬಿಗಿದದ್ದು ಯಾರೆಂದು ತಿಳಿದಿರಿ?" ಹೀಗೆ ಅವನ ವಿಷಯವಾದ ನೂರಾರು ಹೆಗ್ಗಳಿಕೆಯ ಕತೆಗಳನ್ನು ಬನ್ನಟ್ಟಿಯವರೇ ಹೇಳಿದ್ದರು. ಅಂಥ ದುಂಡೂರನಿಂದಲೇ ತಮ್ಮೆಲ್ಲರ ಹೆಸರು ಬಯಲಾಯಿತೆಂದು ಕೇಳಿ ರಾಧಾಕೃಷ್ಣನಿಗೆ ಆಶ್ಚರ್ಯವಾಯಿತು. ಆದರೆ ಅಲ್ಲಿದ್ದ ಬ್ಯಾಳೀ ಶಾಂತವೀರಪ್ಪ ಹೇಳಿದ—"ರಾಯರೇ, ಇದು ಅವನ ತಪ್ಪಲ್ಲ. ತಪ್ಪು ನಮ್ಮದೇನೇ; ದುಂಡೂರನೇ ನಮ್ಮ ಹೆಸರನ್ನು ಪೋಲೀಸರಿಗೆ ಕೊಟ್ಟನೋ, ಅವನ ಗೆಳೆಯನಾದ ಲಿಂಗಪ್ಪ ಕೊಟ್ಟನೋ ಅದು ಇನ್ನೂ ಖಂಡಿತವಾಗಿಲ್ಲ. ಕೊಟ್ಟದ್ದು ಅವರಿಬ್ಬರ ಪೈಕಿ ಯಾರೋ ಒಬ್ಬರು ನಿಜ. ಆದರೆ ನೋಡಿ; ಆ

ಸಂಗತಿ ನಮಗೆ ಗೊತ್ತಾದುದು ಮಾತ್ರ ಈಗ. ರಾಯರಿಗೂ ಮೊದಲು ಗೊತ್ತಿರಲಿಲ್ಲ. ಈತ ಅಣ್ಣಿಗೇರಿ ಸೀಮೆಯವನು. ಬಿಜಾಪುರ, ಇಂಡೀ, ಜತ್ ಮೊದಲಾದ ಕಡೆಗಳಲ್ಲಿ ಮೊದಲಿನಿಂದಲೂ ಇದ್ದ. ಆಗಿನಿಂದಲೂ ತುಡುಗು,ದರೋಡೆ ಇದರಲ್ಲಿಯೇ ಇದ್ದನಂತೆ. ಅದು ಯಾರಿಗೆ ಗೊತ್ತಾಗಬೇಕು? ಹೀಗಾಗಿ ಪೋಲೀಸರು ಸುಲಭದಲ್ಲಿ ಗುರುತಿಸಿ ಹಿಡಿದರು. ಅವನಿಂದ ನಮ್ಮ ಗುಟ್ಟು ಹೊರಬೀಳುವುದು ಸಾಧ್ಯವಾಯಿತು. ನಿಜವಾಗಿ ನಮ್ಮದೇ ಜನವಾಗಿದ್ದರೆ ಉಳಿದವರ ಹೆಸರುಗಳನ್ನು ಸಾಲು ಸಾಲಾಗಿ ಹೇಳುತ್ತಿರಲಿಲ್ಲ.' ತನಗೆ ಆಗಬಹುದಾದ ಶಿಕ್ಷೆ ತಪ್ಪಿಸಿಕೊಳ್ಳಬೇಕೆಂದು ಹೀಗೆ ಹೇಳಿರಬೇಕು. ಆದರೂ ಇಂದಲ್ಲ, ನಾಳೆಯಾದರೂ ಅವನು ತುರಂಗಕ್ಕೆ ಹೋಗುವವನೇ. ತಮ್ಮ ಕೆಲಸವಾಗುವಷ್ಟು ದಿನ ಪೋಲೀಸರು ಅವನ ಬೆನ್ನನ್ನು ತಟ್ಟಿಯಾರು. ಆ ಮೇಲೆ ಗಳಿಗೆಯೂ ಬಿಡುವ ಮಕ್ಕಳಲ್ಲ" ಎಂದು ನಡೆದ ಪ್ರಮಾದ ವಿವರಿಸಿ ಹೇಳಿದನು. ರಾಧಾಕೃಷ್ಣನಿಗೆ ತಲೆ ತಗ್ಗಿಸುವಂತಾಯಿತು. ಅವನಿಗೆ ದುಂಡೂರನ ವಿಚಾರ ತಿಳಿದಿಲ್ಲವಾದರೂ, ಅಂಥ ಕೆಲವರ ವಿಷಯದಲ್ಲಿ ಅನುಮಾನ ಬಂದಿತ್ತು. ಬನ್ನಟ್ಟಿಯವರಿಗೆ ಅದನ್ನು ತಿಳಿಸಿದರೆ, ಅವರು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಈಗ ಅದರ ಫಲವನ್ನು ತಾವು ಅನುಭವಿಸಿದ್ದಾಯಿತು ಎಂದು ಕಂಡಿತು.

"ಅದು ಇರಲಿ, ಶಾಂತವೀರಪ್ಪಾ, ರಾಯರು ಮುಂಬಯಿಯಿಂದ ಯಾವಾಗ ಬರುತ್ತಾರೆ? ಬೇರೆ ಏನಾದರೂ ಸಂಗತಿ ಹೇಳಿದ್ದಾರೆಯೇ? ಹದಿನೈದು ದಿವಸಗಳ ಹಿಂದೆ ನಾನು ಕನ್ನಡಜಿಲ್ಲೆಯಲ್ಲಿದ್ದಾಗ ಒಂದು ಕಾಗದ ಬಂದಿತ್ತು. ಯಾರಿಗೋ ಸೌಖ್ಯವಿಲ್ಲ, ಅವರನ್ನು ನಾನು ಜರೂರಿನಿಂದ ಕಾಣಬೇಕೆಂದು" ಎಂದು ರಾಧಾಕೃಷ್ಣ ಹೇಳಿದ್ದಕ್ಕೆ ಆತ "ನಿಮಗೆ ಏನೋ ಟಪ್ಪಾಲು ಇರಬೇಕ್ರೀ" ಎಂದು ಒಳಕ್ಕೆ ಹೋಗಿ ಬಂದು ಪತ್ರವನ್ನು ತಂದುಕೊಟ್ಟ. ಅದರಲ್ಲಿ--ಮಿರ್ಜಿ ಈಶ್ವರಪ್ಪ ತುಂಬ ಕಾಯಿಲೆಯಲ್ಲಿದ್ದಾನೆಂದೂ, ಬೇನೆ ಪ್ರಾಯಶಃ ಕ್ಷಯ ಇರಬೇಕೆಂದೂ ಅವನನ್ನು ನೋಡಬೇಕೆಂದೂ ಬನ್ನಟ್ಟಿಯವರು ತಿಳಿಸಿದ್ದರು. ಈತನಿಗೆ ಈಶ್ವರಪ್ಪನ ಪರಿಚಯ ತುಂಬ. ಕಾದಾಟ ತೊಡಗಿದಾಗಲೇ ಆತ ಅದರಲ್ಲಿ ಧುಮುಕಿದ್ದನು. ಬಡಕಲು ಶರೀರವಾದರೂ ಇನ್ನಿಲ್ಲದಂಥ ಉತ್ಸಾಹ

ಅವಸ್ಥೆದು. ಆದರೆ ಆ ಬಗೆಯ ಜೀವನ ಒಗ್ಗದೆ ಹೋದುದರಿಂದಲೋ ಇಲ್ಲವೆ ಮೊದಲೇ ರೋಗಗ್ರಸ್ತನಾಗಿದ್ದುದರಿಂದಲೋ ಆತ ಕ್ಷಯದಿಂದ ಹಾಸಿಗೆ ಹಿಡಿಯುವಂತಾಯಿತು. ಹಿಂದೆ ಚಿಕ್ಕದೊಂದು ಅಂಗಡಿ ಮಾಡಿಕೊಂಡು ಜೀವನ ಮಾಡುತ್ತಿದ್ದ ಆ ವ್ಯಕ್ತಿ. ಈಗ ಆತ ಹಾಸಿಗೆ ಹಿಡಿದನೆಂದರೆ ಅವನ ಹೆಂಡತಿ, ಒಂದು ಚಿಕ್ಕ ಕೂಸು, ಇವರು ತೀರ ಅತಂತ್ರರಾದಂತೆಯೇ. ಬೇನೆ ಕ್ಷಯರೋಗವೆಂದು ತಿಳಿದುದರಿಂದ ಮತ್ತಷ್ಟು ಗಾಬರಿಯಾಯಿತು.

ಆದುದರಿಂದ ರಾಧಾಕೃಷ್ಣ ಆ ದಿನ ಸಂಜೆಗೇನೇ ಮಿರಜಿಗೆ ಹೋಗುವ ಗಾಡಿಯನ್ನು ಹತ್ತಿದನು. ಮಿರಜಿನ ರೈಲು ನಿಲ್ದಾಣದಿಂದ ಇಳಿದು, ಚಿಕ್ಕ ಒಂದು ಓಣಿಯ ಸಂದಿನ ಮುಂದೆ ನಿಂತು ಈಶ್ವರಪ್ಪನ ಮನೆಯ ಕದ ತಟ್ಟುವಾಗ ರಾತ್ರಿ ಹತ್ತೂವರೆ ತಾಸಿನ ಮೇಲಾಗಿತ್ತು. ಅವನ ಹೆಂಡತಿ ವೀರವ್ವ ಬಂದು ಅರ್ಧ ಕದತೆರೆದು 'ಯಾರು?' ಎಂದು ಕೇಳಿದಳು. 'ಅನಂತರಾವ್ ಎಂದು ತಿಳಿಸಿ' ಎಂದನು ಈತ. ಆಕೆ ಒಳಕ್ಕೆಹೋಗಿ, ಕೇಳಿಕೊಂಡು ಬಂದು, ಬಾಗಿಲನ್ನು ತೆರೆದು ಇವನಿಗೆ ಪ್ರವೇಶಕೊಟ್ಟಳು. ಒಳಗಡ ಒಂದು ಚಿಕ್ಕ ಕತ್ತಲೆಕೋಣೆಯಲ್ಲಿ ಹುರಿ ಬಿಗಿದ ಮಂಚದ ಮೇಲೆ, ಈಶ್ವರಪ್ಪ ಮಲಗಿದ್ದ. ಮೈಮೇಲೆ ಜ್ವರ ಮೆಲ್ಲಗೆ ಕುದಿಯುತಿತ್ತು. ಆಗಾಗ ಕೆಮ್ಮಿನ ಉಪದ್ರ. ಕಫವನ್ನು ಕಕ್ಕಿಕಕ್ಕಿ ದಣಿವು ಬರುತಿತ್ತು. ಆಕೆ ಅವನ ಬೇನೆಗಾಗಿ ಅಲ್ಲಿಯೇ ಗುಪ್ತವಾಗಿ ಚಿಕಿತ್ಸೆಮಾಡುತಿದ್ದಾಳೆ. ನೆರೆಯ ಬ್ರಿಟಿಷ್ ಪ್ರಾಂತದ ಪೋಲೀಸರು ತನ್ನ ಪತಿಯನ್ನು ಹುಡುಕುತ್ತಿದ್ದಾರೆಂಬುದು ಅವಳಿಗೆ ಗೊತ್ತು. ಗಂಡನನ್ನು ದೂರ ಎಲ್ಲಾದರೂ ಸಾಗಿಸಿ, ಬೇನೆಯೇನೆಂದು ತಿಳಿದು, ಚಿಕಿತ್ಸೆ ಮಾಡಿದರೆ ಆಗಬಹುದೆಂದು ಅವಳ ಮನಸ್ಸು. ರಾಧಾಕೃಷ್ಣ ಅವನ ಮುಖವನ್ನೇ ನೋಡಿದ: "ದಿನವೆಲ್ಲ ಮಲಗಿರುತ್ತಾರೆಯೇ? ಆಚೀಚೆ ನಡೆಯಲು ಬರುತ್ತದೆಯೇ" ಎಂದು ಕೇಳಿದ. ಆಕೆ ಅದಕ್ಕೆ "ನಡೆಯಲಾರರು. ಇಲ್ಲಿಗೆ ನಡೆದು ಬಂದುದೇ ದೊಡ್ಡದು. ದಿನ ನಿತ್ಯವೂ ಜ್ವರವೇ. ಕಫದಲ್ಲಿ ಒಮ್ಮೊಮ್ಮೆ ಕಪ್ಪು, ಕೆಂಪು ಬಣ್ಣ ಸೇರಿರುತ್ತದೆ" ಎಂದು ಹೇಳಿದಳು. ಈಶ್ವರಪ್ಪನ ಮನಸ್ಸಿಗೆ ತನಗೆ ಇಂಥದೇ ಬೇನೆಯೆಂದು ಗೊತ್ತಿತ್ತಾದರೂ ಹೆಂಡತಿಯ ಮುಂದೆ ಹೇಳಿ, ಗಾಬರಿಪಡಿಸಿರಲಿಲ್ಲ. ರಾಧಾ

ಕೃಷ್ಣ "ಈ ಸ್ಥಿತಿಯಲ್ಲಿ ಇಲ್ಲಿ ಇದ್ದೇನು ಮಾಡುತ್ತೀರಿ? ವಾನ್ ಲೆಸ್ ವಾಡಿ ಹತ್ತಿರವಿದೆ. ಹುಕ್ಕೇರಿ ಆಸ್ಪತ್ರೆಯೂ ದೂರವಲ್ಲ. ಅಲ್ಲಿ ಕುಳಿತು ಚಿಕಿತ್ಸೆ ಮಾಡಿಸಬೇಕೇ ಹೊರತು ಇದಕ್ಕೆ ಬೇರೆ ದಾರಿ ಇಲ್ಲ. ಯಾಕೆ ಹೋಗ ಬಾರದು? ಈ ಸ್ಥಿತಿಯಲ್ಲಿ ಪೋಲಿಸರು ನಿನ್ನನ್ನು ಹಿಡಿಯುತ್ತಾರಂತೇನು? ಹಿಡಿದರೂ ತಾಬೆಯೊಳಗೆ ಇಟ್ಟುಕೊಳ್ಳದೆ ಆಸ್ಪತ್ರೆಗೇನೇ ಕಳುಹಿಸಬೇ ಕಾದೀತು" ಎಂದು ಹೇಳಿದನು. ಅದಕ್ಕೆ ಈಶ್ವರಪ್ಪ "ಪೋಲೀಸರ ಕೈಗೆ ಬೀಳುವ ಬದಲು, ಮನೆಯಲ್ಲೇ ಸಾಯುವುದು ಲೇಸು. ನನ್ನನ್ನು ಹೇಗಾದರೂ ಮಾಡಿ ಬ್ರಿಟಿಷ್ ಗಡಿ ದಾಟಿಸಿ ಮೈಸೂರಿಗೆ ಮುಟ್ಟಿಸಿದರೆ ಬದುಕಿಕೊಳ್ಳುತ್ತಿದ್ದೆ" ಎಂದನು. ಅದಕ್ಕೆ ಇವನು "ಮೋಟರು ಮಾಡಿ ಕೊಂಡು ರಾತ್ರಿಯಲ್ಲಿ ಪ್ರಯಾಣಮಾಡಬೇಕಷ್ಟೆ. ಹಗಲು ಸಂಚರಿಸು ಹಾಗಿಲ್ಲ. ಆ ಪ್ರಯಾಣ ತಾಳುವ ಹಾಗಿದ್ದರೆ ಆಗಬಹುದು. ಖರ್ಚಿಗೆ ಮಾತ್ರ ತುಂಬಾ ಹಣಬೇಕಾಗಬಹುದು. ಹಣದ ವ್ಯವಸ್ಥೆಯನ್ನು ಮಾಡಿ ಕೊಂಡು ಬರುತ್ತೇನೆ" ಎಂದನು. "ಹಣಕ್ಕೇನೂ ಹೆದರಬೇಕಾಗಿಲ್ಲ. ನನ್ನ ಮೈಮೇಲಿನ ಭಂಗಾರ ಇದೆ. ಸ್ವಲ್ಪ ನಗದಿಯೂ ಇದೆ. ಅವರನ್ನು ಸಾಗಿಸಿ ಅವರ ಹತ್ತಿರವೇ ಇರುವವರು ಬೇಕು. ಅದಕ್ಕೆ ನಾನೇ ಹೋ ದೇನು." ಎಂದಳು. "ಹಾಗಿದ್ದರೆ ನಾನು ಗುರುತಿನ ಒಬ್ಬ ಡಾಕ್ಟರನ್ನು ಕರೆದು ತರುತ್ತೇನೆ. ಅವರು ಪ್ರಯಾಣ ಮಾಡುವ ಸ್ಥಿತಿಯಲ್ಲಿದ್ದರೆ ಮೋಟಾರ್ ಕಾರನ್ನೂ ಗೊತ್ತುಮಾಡುತ್ತೇನೆ." ಎಂದು ಅವನ ಒಪ್ಪಿಗೆ ಯನ್ನುಪಡೆದು,ಹೊರಬಿದ್ದನು. ಬಾಗಿಲಿಂದ ಹೊರಬಿದ್ದು ಆ ಓಣಿಯಲ್ಲಿ ನಾಲ್ಕು ಹೆಜ್ಜೆ ಕೂಡ ಹಾಕಿರಲಿಲ್ಲ.. ಹೊಂಚುಹಾಕಿದ್ದ ನಾಲ್ಕುಮಂದಿ ಪೋಲೀಸರು ಬಂದು, ಅವನನ್ನು ಹಿಡಿದೇ ಬಿಟ್ಟರು. ಹಿಡಿದು, ಬಂಧಿಸಿ ಮೋಟರು ಒಂದರಲ್ಲಿ ಕುಳ್ಳಿರಿಸಿಕೊಂಡು ಬೆಳಗಾಂವಿಗೆ ಸಾಗಿಸಿಯೂ ಆಯಿತು. ಹಿಡಿದ ಸ್ಥಳ ಸಂಸ್ಥಾನವಾದರೇನು? ಪೋಲೀಸರ ಜುಲುಮಿನ ಕಾಯಿದೆಗೆ ಅದು ಭಾಧಕವಾಗಲಿಲ್ಲ. ರಾಧಾಕೃಷ್ಣನ ಬೇಸರ, ನಿರಾಶೆ ಹೇಳಿ ತೀರದು. ಇಂದಲ್ಲ ನಾಳೆ ಅವರ ಕೈಗೆ ಬೀಳುತ್ತೇನೆಂದು ಅವನಿ ನಿಗೆ ಗೊತ್ತಿತ್ತು. ಆದರೆ ಗೆಳೆಯನಿಗೆ ತನ್ನ ಸಹಾಯ ಅತಿ ಅವಶ್ಯವಿದ್ದ ಕಾಲದಲ್ಲಿಯೇ ಹೀಗಾಯಿತಲ್ಲಾ ಎಂದು ವ್ಯಥೆಗೊಳ್ಳಬೇಕಾಯಿತು.

ಎಷ್ಟು ಯೋಚಿಸಿದರೂ ರಾಧಾಕೃಷ್ಣನಿಗೆ ಪಾರಾಗುವ ಬಗೆ ಕಾಣ

ಲಿಲ್ಲ. ಅವನನ್ನು ಬೆಳಗಾಂವಿಗೆ ಕರೆತಂದು ಸೆರೆಮನೆಯಿಂದ ಕೋರ್ಟು ಗಳಿಗೆ ಮೆರವಣಿಗೆ ಮಾಡಿಸತೊಡಗಿದರು. ಜತೆಗೆ ಇನ್ನೂ ಹತ್ತೆಂಟು ಮಂದಿ ಪರಿಚಿತರಿದ್ದರು. ತನ್ನ ಮೇಲೆ ಏನು ಆರೋಪ ಬರುತ್ತದೆ ಯೆಂದು ಅವನಿಗೆ ಗೊತ್ತಿರಲಿಲ್ಲ. ತಮ್ಮ ಕಾವಲಿನ ಪೋಲೀಸನೊಬ್ಬನ ಸ್ನೇಹ ಬೆಳೆಯಿಸಿ, ಅವನಿಗೆ ಚಹಾ ಕುಡಿಯಲು ಹಣಕೊಟ್ಟು, ಹಾದಿ ಯಲ್ಲಿದ್ದ ಒಬ್ಬ ವೈದ್ಯಮಿತ್ರರ ದವಾಖಾನೆಯನ್ನು ಒಂದು ದಿನ ಹೊಕ್ಕನು. ಅವರೊಡನೆ ಒಂದೆರಡು ಸಂಗತಿಗಳನ್ನು ತಿಳಿಸಿ ಹೇಳಿ, ತಾನೊಂದಿಷ್ಟು ಮದ್ದು ಕುಡಿದು, ಕಾಯಿಲೆ ನಟಿಸಿ,ಹೊರಕ್ಕೆ ಬಂದನು. ಮೂರು ತಿಂಗಳ ಕಾಲ ಯಾವುದೊಂದು ನಿಶ್ಚಿತ ಆರೋಪವಿಲ್ಲದೆ ಆಚೀಚೆ ಅಲೆದಾಡಿಸಿ ಅವನನ್ನು ಬಂಧನದಲ್ಲಿ ಇರಿಸಿದರು. ಪೋಲೀಸರಿಗೇನೇ ಅವನ ಮೇ ಲಿನ ಆರೋಪ ಇಂಥದೆಂದು ಸ್ಪಷ್ಟವಾಗಿ ತಿಳಿದಿರಲಿಲ್ಲ. ಅವನು ಬೆಂಗ ಡೆಯಲ್ಲಿಯೇ ನಿಂತು ಕೆಲಸಮಾಡಿದ್ದಾನೆಂಬುದು ಗೊತ್ತು. ಅದಕ್ಕಾಗಿ ಅವನನ್ನು ಹಿಡಿದಿದ್ದಾರೆ. ಇನ್ನು ಆರೋಪವನ್ನು ತಯಾರಿಸಿ ಕೋರ್ಟಿಗೆ ಹಾಜರು ಮಾಡಬೇಕು ಒಂದು ದಿನ; ಆ ಕೆಲಸವೂ ಆಯಿತು. ಯಾ ವದೋ ದಿವಸ ಒಂದು ಗ್ರಾಮಚಾಕಿಯನ್ನು ಸುಟ್ಟ ಆರೋಪದ ಮೇಲೆ ಅವನನ್ನು ಮೇಜಿಸ್ಟ್ರೇಟರ ಮುಂದೆ ಹಾಜರು ಮಾಡಿದರು. ಅದಕ್ಕೆ ಪೋಲೀಸರದ್ದೇನೆ ಸಾಕ್ಷಿ. ಬೆಂಬಲಕ್ಕೆ ಒಬ್ಬಿಬ್ಬರನ್ನು ಗುದ್ದಿ, ಸುಳ್ಳು ಸಾಕ್ಷಿಯೂ ತಯಾರಾಯಿತು. ಖಟ್ಲೆಯಲ್ಲಿ ಆದುದೇನಿಲ್ಲ. ರಾಧಾಕೃಷ್ಣನ ಕಡೆಯ ವಕೀಲರು, ಚಾಕಿ ಸುಟ್ಟ ದಿವಸ ಆತ ಶಿರ್ಶಿಯಲ್ಲಿದ್ದನೆಂದೂ ಡಾ॥ ನಾಡಕರ್ಣಿಯವರ ಮತ್ತು ಇನ್ನೂ ಒಬ್ಬಿಬ್ಬ ಮಿತ್ರರ ಪ್ರತಿಸಾಕ್ಷಿ ಗಳನ್ನು ಹೂಡಿದರು. ಆರೋಪ ಸಾಧಿಸದೆ ಅನಂತರ ರಾಯರ ಖುಲಾ ಸೆಯಾಯಿತು. ಇಷ್ಟಾಗುವುದರೊಳಗೆ ಐದು ತಿಂಗಳ ಕಾಲ ಮಾತ್ರ ಸರಿದುಹೋಗಿತ್ತು. ಇದ್ದ ಒಂದು ಆರೋಪವು ಕರಗಿ ಬಿಟ್ಟಮೇಲೆ, ಆತ ಬಹಿರಂಗಕ್ಕೆ ಬರಲು ಯಾವ ತೊಡಕೂ ಇರಲಿಲ್ಲ. ಆತ ನೇರಾಗಿ ಬೆಳಗಾವಿನ ವೈದ್ಯಮಿತ್ರರಲ್ಲಿಗೆ ಹೋಗಿ, 'ಈಶ್ವರಪ್ಪನನ್ನು ನೋಡಿದಿರಾ? ಏನಾಯಿತೆಂದು' ಕೇಳಿದನು. ಜೈಲಿನಲ್ಲಿರುವಾಗಲೂ ಆ ಗೆಳೆಯನದೇ ಚಿಂತೆ ಅವನಿಗೆ. ವೈದ್ಯರು ಅವನನ್ನು ಏನೂ ಮಾಡುವ ಹಾಗಿದ್ದಿರಲಿಲ್ಲ. ಅವರು ಹೋಗಿ ನೋಡಿದ್ದಾಗ ಈಶ್ವರಪ್ಪ ಪ್ರಯಾಣ ಮಾಡುವ ಸ್ಥಿತಿ

ಯಲ್ಲಿರಲಿಲ್ಲ. ಹೋಗಿದ್ದರೆ ಸಮೀಪದ ವಾನ್‌ಲೆಸ್‌ಪಾಡಿಗೆ ಹೋಗ ಬಹುದಿತ್ತು. ಆತ ಅಲ್ಲಿಂದೇಳುವುದಕ್ಕೇನೇ ಇಷ್ಟಪಡಲಿಲ್ಲ. ಬದಲು ತನ್ನ ಮಾವನ ಮನೆಗೆ ಹೋಗುತ್ತೇನೆಂದು ಹೋದನಂತೆ.

ಮುಂದಿನ ಸ್ಥಿತಿಯನ್ನು ತಿಳಿಯಲು ರಾಧಾಕೃಷ್ಣನು ಅಂದೇ ಮಿರ್ಜಿಗೆ ಓಡಬೇಕಾಯಿತು. ಆತ ಹೋದಾಗ ಈಶ್ವರಪ್ಪನ ಮನೆಗೆ ಕದ ವಿಕ್ಕಿತ್ತು. ನೆರೆಕೆರೆಯವರಿಂದ ವಿಚಾರಿಸಿಕೊಂಡು, ಆತ ಅವನ ಮಾವನ ಮನೆಗೆ ಹೋದ. ಹೋದುದಕ್ಕೆ ವೀರ್‍ವವನ ದರ್ಶನವಾಯಿತು-ಇಷ್ಟೇ-ಬೇನೆಯಿಂದ ಈಶ್ವರಪ್ಪ ತೀರಿಕೊಂಡು ಎರಡು ತಿಂಗಳಾಗಿತ್ತು ಎಂಬ ವಾರ್ತೆ ದೊರಕಿತು. ಹೋದುದಕ್ಕೆ, ಅವಳಿಗಿಷ್ಟು ಸಮಾಧಾನವನ್ನು ಹೇಳಿದ. ಬದಲು ತನ್ನ ಮನಸ್ಸಿನ ಸಮಾಧಾನವನ್ನು ಸಂಪೂರ್ಣವಾಗಿ ಕಳೆದುಕೊಂಡು ಅಲ್ಲಿಂದ ಹಿಂದಿರುಗಿದ



# ಇಪ್ಪತ್ತಮೂರನೆಯ ಅಧ್ಯಾಯ

ದೇಶದಲ್ಲೆಲ್ಲ ವಿಪರೀತವಾಗಿಹಬ್ಬಿ ಬ್ರಿಟಿಷರಿಗೆ ಭೀತಿಯನ್ನುಂಟು ಮಾಡಿದ ಸ್ವಾತಂತ್ರ್ಯ ಸಂಗ್ರಾಮದ ಮೂರನೆಯ ಪರ್ವಕಾಲವು ಈಗ ಕೊನೆಗೊಂಡಂತೆಯೇ ಸರಿ. ಅತೃಪ್ತಿ ತುಂಬಿಕೊಂಡಿದ್ದರೂ, ಜನರ ಮನಸ್ಸು ಸ್ವಾತಂತ್ರ್ಯವನ್ನಾಗಲೀ, ಸಂಗ್ರಾಮವನ್ನಾಗಲೀ ನೆನೆಯುವ ಸ್ಥಿತಿಯಲ್ಲಿರಲಿಲ್ಲ. ಎಲ್ಲ ಕಡೆಗಳಲ್ಲಿಯೂ ಆಹಾರದ ಪರಿಸ್ಥಿತಿಯು ದಿನೇ ದಿನೇ ಕಠಿಣವಾಗುತ್ತ ಬಂದಿತು. ಪ್ರತಿಯೊಂದು ವಸ್ತುವಿನ ಬೆಲೆಯೂ ಒಂದಕ್ಕೆ ನಾಲ್ಕೋ, ಹತ್ತೋ ಮಡಿ ಏರುತ್ತ ಬಂದಿತು. ಜನ ಹಸಿವೆಯನ್ನಿದಿರಿಸಬೇಕಾಗಿ ಬಂತು. ಅತಿ ಉಗ್ರವಾದ ಕ್ಷಾಮ ಬಂಗಾಳದಲ್ಲಿಯೂ ಒರಿಸ್ಸಾ, ಕೇರಳಗಳಲ್ಲಿಯೂ ತಲೆದೋರಿತು. ಜನ ಕಾಳುಗಳಿಗಾಗಿ ಬಾಯಿಬಿಡತೊಡಗಿದರು. ದಿನಂದಿನ ಕ್ಷಾಮ ಪೀಡಿತರ ಸಾವಿನ ಸುದ್ದಿಗಳು ಪತ್ರಿಕೆಗಳಲ್ಲಿ ಬರತೊಡಗಿದುವು. ಕರ್ನಾಟಕದಲ್ಲೂ ಬಿಜಾಪುರದಂತಹ ಭಾಗಗಳಲ್ಲಿ ಕಾಳಿಗೂ, ಜಾನುವಾರುಗಳ ಮೇವಿಗೂ ಕೊರತೆಯುಂಟಾಯಿತು. ದತ್ತಮಂಡಲ ಜಿಲ್ಲೆಗಳಲ್ಲಿಯೂ ಕ್ಷಾಮದೇವತೆ ಕಾಲಿರಿಸಿತು. ಇಂಥ ಸಮಯದಲ್ಲಿ ಸಂಗ್ರಾಮದಲ್ಲಿ ಕಂಗಾಲಾದವರ ಸಲುವಾಗಿ ರಾಧಾಕೃಷ್ಣನಾಗಲಿ, ಅವರ ಮಿತ್ರರಾಗಲಿ, ಎಷ್ಟು ಓಡಾಡಿದರೂ ಅಷ್ಟೇ ಕಷ್ಟವೆನಿಸಿತು. ವಸ್ತುಗಳ ಬೆಲೆ ಅಷ್ಟೊಂದು ಹೆಚ್ಚಾಗಿರುವಾಗ ಹಣ ಏನು ತಂದರೂ, ಇವರು ತಂದು ಕೊಟ್ಟ ನೆರವು ಬೆಂಕಿಯ ಮುಂದಿಟ್ಟ ಬೆಣ್ಣೆಯಂತೆ ಕರಗುತ್ತಿತ್ತು. ಇತ್ತ ಚಳವಳವೇ ಶಾಂತವಾದ ಮೇಲೆ, ನೋವುಗೊಂಡವರ ಯೋಚನೆ ಜನಕ್ಕೆ ಬರುತ್ತದೆಯೇ? ಇವನ್ನೆಲ್ಲ ಚಿಂತಿಸುತ್ತಿರುವಾಗಲೇ ರಾಧಾಕೃಷ್ಣನ ಮನಸ್ಸನ್ನು ತಲ್ಲಣಗೊಳಿಸಿದ ಇನ್ನೊಂದು ಸ್ಥಿತಿಯೆಂದರೆ—ಜನರ ಅವಿವೇಕ. ಯಾರು ಬ್ರಿಟಿಷರನ್ನು ಹಿಂದುಸ್ಥಾನದಿಂದ 'ಹೊರಡಿ' ಎಂದು ಕೂಗಿದರೋ, ಯಾರು ಶಾಲೆ, ಕಾಲೇಜುಗಳಿಗೆ ಬಹಿಷ್ಕಾರ ಹಾಕಿದರೋ ಅವರೆಲ್ಲರೂ ತಿರುಗಿ ಮೊದಲಿನ ಉದ್ಯೋಗಳಿಗೆ ಹೋಗತೊಡಗಿದರು. ಅಷ್ಟು ಅವಮಾನ ಸಾಲದುದಕ್ಕೋ ಎಂಬಂತೆ, ಅಲ್ಲಲ್ಲಿನ ಜನಗಳು ಬ್ರಿಟಿಷರ ಸೇನೆಗೆ ಸೇರುವುದಕ್ಕಾರಂಭವಾಯಿತು. ಪ್ರತಿಯೊಂದು ಊರುಗಳಲ್ಲಿಯೂ

ಸ್ವಾಮಿನಿಷ್ಠರಾದ ಸರಕಾರೀ ನೌಕರರು ಅಲ್ಲಲ್ಲಿ ರಿಕ್ರೂಟಿಂಗ್ ಕೇಂದ್ರ ಗಳನ್ನುತೆರೆದರು. "ಯಾರು ಈ ಸರಕಾರವನ್ನು ತುಳಿಯಲು ಹೋಗಿದ್ದು ಇಷ್ಟೆಲ್ಲ ಕಷ್ಟ ಸಹಿಸಿದರೋ, ಅವರೋ, ಅವರ ಬಂಧುಗಳೋ, ಮರು ದಿನವೇಎಲ್ಲ ಮರೆತವರಂತೆ ಸೇನೆಯಲ್ಲಿ ಚಾಕರಿಗಾಗಿ ಬಾಯಿ ಬಿಡುವು ದೆಂದರೆ ಎಷ್ಟು ಹೇಯ? ಜನಕ್ಕೆ ಅಭಿಮಾನವಾದರೂ ಬೇಡವೇ? ಮಾತಿನ ಮಲ್ಲರಾಗಿಯೇ ಕುಣಿದ ವಿದ್ಯಾರ್ಥಿಗಳು ದೇಶವನ್ನೇ ಮರೆತ ವರಂತೆ ವೈಸರಾಯ್ ಕಮಿಷನ್, ಕಿಂಗ್ಸ್ ಕಮಿಷನ್--ಎಂದು ವೈರಿ ಯಲ್ಲಿ ನೌಕರಿಯ ಭಿಕ್ಷೆಗೆ ಮುಂದಾಗಬೇಕೇ?" ಎಂದು ರಾಧಾಕೃಷ್ಣ ತುಂಬ ವ್ಯಸನಪಡುವಂತಾಯಿತು. ಅವನ ಪರಿಚಿತರಾದ ಗೆಳೆಯರ ಲ್ಲಿಯೂ ಇಂಥ ವ್ಯಕ್ತಿಗಳನ್ನು ಕಂಡ ಮೇಲಂತು ಮನುಷ್ಯ ಸ್ವಭಾವ ವನ್ನೇ ತಾನು ನಂಬುವುದು ಕಷ್ಟವೆಂದು ಕಂಡಿತು.

ಈ ಸಮಯದಲ್ಲಿ ಅವನಿಗೆ ಕಾಣಿಸಿದ ಆಶೆಯ ಕಿರಣವೆಂದರೆ ಗಾಂಧೀಜಿಯವರ ಬಿಡುಗಡೆ. ಅದೇನೇ ಅವನ ಪಾಲಿಗೆ ಮುಂದಿನ ಸುಭಿಕ್ಷೆಯ ಆಸೆ. ಅವರೇನೋ ಸೆರೆಯಿಂದ ಹೊರಗ ಬಂದರು. ಬಂದ ವರು "ಇನ್ನೂ ತಪ್ಪಿಸಿಕೊಂಡಿರುವ ಸ್ವಾತಂತ್ರ್ಯ ಕಾದಾಳಿಗಳು, ತಮ್ಮ ಮೇಲೆ ತಕ್ಕೀರುಗಳು ಇದ್ದಲ್ಲಿ, ಧೀರರಾಗಿ ಕೋರ್ಟಿನ ಮುಂದೆ ಹಾಜ ರಾಗಬೇಕು" ಎಂದೂ ಸಾರಿದರು. ತಲೆ ಮರೆಸಿಕೊಂಡಿದ್ದ ಅನೇಕ ವಿಧ್ವಂ ಸಕ ಮುಂದಾಳುಗಳು ಅವರ ಮಾತಿಗೆ ಮನ್ನಣೆಯನ್ನಿತ್ತು ಒಬ್ಬೊಬ್ಬ ರಾಗಿ ಪೋಲೀಸರ ಮುಂದೆಹೋಗಿ ನಿಂತರು. ಮೊದಲಿನಂತೆ ಕೋರ್ಟು ಗಳಲ್ಲಿ ಖಟ್ಲೆಗಳ ಪ್ರಾರಂಭವಾಯಿತು, ಕೋರ್ಟು ಕಚೇರಿಗಳಿಗೆ ತುಂಬ ಕೆಲಸ. ನೂರಾರು ಜನ ಆರೋಪಿಗಳನ್ನು ತಂದು, ತಂದು ತನಿಖಿ ಮಾಡುವುದೇ ಅವುಗಳ ಕೆಲಸವಾಯಿತು. ಆದರೆ ದೇಶದ ಎಷ್ಟೋ ನ್ಯಾಯಾಧೀಶರು ನಿಷ್ಪಕ್ಷಪಾತಮನೋವೃತ್ತಿಯುವರಾದುದರಿಂದ ಸಮ ನಾದ ಆಧಾರಗಳಿಲ್ಲದ, ಕಾಯಿದೆಯ ಅನ್ವಯ ಮಾಡದ, ಆರೋಪಗ ಳೆಲ್ಲ ಕಿತ್ತುಹಾಕಿದರು. ಇದರಿಂದ ಜೈಲುಗಳು ಸಾಕಷ್ಟು ಬರಿದಾ ದುವು. ಅಂಥ ಆರೋಪಿಗಳ ಸಂಸಾರ ಪೋಷಣೆಯ ಭಾರವು ತಿರುಗಿ ಅವರ ಮೇಲೆಯೇ ಬಿದ್ದಿತ್ತು. "ಇವರು ಹೊರಗೆ ಬಂದ ಮೇಲೆ ನೆಟ್ಟಗೆ ರಿಕ್ರೂಟಿಂಗ್ ಆಫೀಸಿಗೆ ಹೋಗಿ ಬೇಡದಿದ್ದರೆ ಅದೇ ಪುಣ್ಯ" ಎಂದು

ಕೊಂಡನು ರಾಧಾಕೃಷ್ಣ. ಅವನ ನಿರಾಶೆ ಹೇಳತೀರದು.

'ಇನ್ನು ತನ್ನ ಊರಿಗೆ ಹಿಂದಿರುಗುತ್ತೇನೆ' ಎಂಬ ಮನಸ್ಸಾಯಿತು ಆತನಿಗೆ. ಆದರೆ ಆತ ತನ್ನ ಕಾರ್ಯಕ್ರಮಗಳ ವರದಿಯನ್ನು, ತನ್ನ ಹೊಣೆಯನ್ನು ಮುಖಂಡರಿಗೆ ವಹಿಸಿಕೊಡದೆ ಹೋಗುವುದೆಲ್ಲಿಗೆ? ಪೂಜೆಯ ಅನಂತರದ ಅವಭೃತಸ್ನಾನಕ್ಕಾಗಿ ಕಾದು ಕುಳಿತಿರಬೇಕಾಯಿತು. ಬನ್ನಟ್ಟಿಯವರು ಎಂದು ಊರಿಗೆ ಬಂದಾರು—ಎಂದು ನಿತ್ಯವೂ ಅವರನ್ನು ನಿರೀಕ್ಷೆ ಮಾಡುತ್ತಿದ್ದ. ಅವರು ಮುಂಬಯಿಯಲ್ಲಿ ಇದ್ದಿರಬೇಕು ಗಾಂಧೀಜಿಯವರನ್ನು ಭೇಟಿಯಾಗಿರಬೇಕು. ಅಂತು, ಗಾಂಧಿಜಿಯವರು ಹೇಳಿದುದರಿಂದಲೋ ಏನೋ, ಅವರು ಒಮ್ಮೆಗೇ ಬೆಳಗಾಂವಿಗೆ ಬಂದು ಜಿಲ್ಲಾಮೇಜಿಸ್ಟ್ರೇಟರ ಮುಂದೆ ಒಂದು ದಿನ ಹಾಜರಾದರು. ಅಷ್ಟು ವರ್ತಮಾನವೇನೋ ಧಾರವಾಡದಲ್ಲಿದ್ದ ರಾಧಾಕೃಷ್ಣನಿಗೆ ತಿಳಿಯಿತು. ಪತ್ರಿಕೆಗಲ್ಲಿ ಅವರು ಹಾಗೆ ಹಾಜರಾಗುವರೆಂಬ ಸುದ್ದಿ ಬಂದುದರಿಂದ ಈತ ಅಲ್ಲಿಗೋಡಿದ. ಈತ ಹೋಗುವುದರೊಳಗಾಗಿ ಅವರನು ಬಂಧಿಸಿ ನಿರ್ಬಂಧದಲ್ಲಿ ಇರಿಸಿದ್ದರು. ಮನಸ್ಸಿನಲ್ಲಿ 'ಇನ್ನು ಅವರನ್ನು ಕಾದು ಪ್ರಯೋಜನವಿಲ್ಲ. ಅವರ ತನಿಖಿ ನಡೆದು, ಶಿಕ್ಷೆಯಾಗಿ ಹಿಂದುರುಗಿ ಬರುವಾಗ ಎಷ್ಟು ದಿನಗಳೋ ಏನೋ! ಅಲ್ಲಿಯ ತನಕ ಬರಿದೆ ಕಾಲಯಾಪನೆ ಮಾಡಲಾರೆ" ಎಂದುಕೊಂಡು ಆತ ಅದೇ ದಿನ ಸಂಜೆ ಮರಳಿದನು.

ಧಾರವಾಡದಲ್ಲಿ ಅವರ ಗೆಳೆಯರಾದ ಅನಂತಾಚಾರ್ಯರೆಂಬವರಿದ್ದರು. ಬಡತನದಲ್ಲಿಯೇ ಅವರ ಜೀವನ. ಆದರೂ ರಾಷ್ಟ್ರೀಯ ಕೆಲಸವೆಂದರೆ ಹುಂಬರಂತೆ ನಂಬಿ ಓಡುವ ಸ್ವಭಾವ. ಗಾಂಧೀಜಿಯವರೆಂದರೆ ಅವರಿಗೆ ದೇವರು. ಉಳಿದ ಮುಖಂಡರಲ್ಲಿಯೂ ಅಖಂಡ ವಿಶ್ವಾಸ. 1921 ರಲ್ಲಿ ಅಸಹಕಾರ ಚಳವಳ, ಹೂಡಿ ಶಾಲೆ ಬಿಟ್ಟವರು ಅವರು. ಅವರ ಮೆಟ್ರಿಕ್ ಅಪೂರ್ಣವಾಯಿತು. ಅಲ್ಲಿಂದ ರಾಷ್ಟ್ರಸೇವೆಯೇ ಅಖಂಡ ಗುರಿಯಾಯಿತು. ಅಲ್ಲಿಂದ ಇಲ್ಲಿಯ ತನಕ ಅವರಿಗೆ ಖಾದೀ, ಸತ್ಯ, ಅಹಿಂಸೆಗಳಲ್ಲಿ ಅಪಾರವಾದ ನಂಬಿಕೆ. ತಕಲಿಹಿಡಿದು ನೂಲುಮಾಡದ ದಿವಸವೇ ಇಲ್ಲ. ಅವರಂತೆ ಈ ಮೂರು ಸಂಗ್ರಾಮಗಳ ಕಾಲದಲ್ಲಿಯೂ, ಅದರ ನಡುನಡುವೆಯೂ ದೇಶಕ್ಕಾಗಿ ದುಡಿದ ವ್ಯಕ್ತಿಗಳು

ಅಪೂರ್ವ. ರಾಧಾಕೃಷ್ಣ ಅವರೊಡನೆ ಅಹಿಂಸೆ, ಹಿಂಸೆಗಳ ತರ್ಕವನ್ನು ಎಷ್ಟೋ ಬಾರಿ ನಡೆಯಿಸಿದ್ದಾನೆ. "ಆಚಾರ್ಯರೇ, ನೀವು ಎಷ್ಟೇ ಹೇಳಿ, ಹಿಂಸೆ ಇಲ್ಲದೇನೇ ನಾವು ಜಯಿಸುತ್ತೇವೆ ಎಂದರೆ ಅದು ಅಸಾಧ್ಯದ ಮಾತು. ಅದು ಗಾಂಧೀಜಿಯವರಿಗೇನೇ ಒಪ್ಪಿದ್ದು" ಎನ್ನುತ್ತಿದ್ದ.

ಬೆಳಗಾಂವಿನಿಂದ ಬಂದ ರಾತ್ರಿ ಅವರಲ್ಲಿ ಇನ್ನೊಮ್ಮೆ ಅಂಥ ತೀಕ್ಷ್ಣವಾದ ಚರ್ಚೆಯು ನಡೆದಿತ್ತು. ಆಚಾರ್ಯರು ಅದಕ್ಕೆ "ರಾಧಾಕೃಷ್ಣ, ನನಗೆ ಕಾಣುತ್ತದೆ—ಗಾಂಧಿಯವರು ಇನ್ನು ಸುಮ್ಮನೆಯೆ ಕುಳಿತಿರಲಾರರೆಂದು. ಎಲ್ಲಾ ಮುಖಂಡರನ್ನೂ ಸದ್ಯದಲ್ಲಿ ಬಿಡುತ್ತಾರೆ" ಎಂಬ ವಾರ್ತೆಯಿದೆ. ಬ್ರಿಟಿಷರಿಗೆ ಹಿಂದುಸ್ಥಾನದವರ ಕೈಯಲ್ಲಿ ಸಾಕಾಗಿ ಹೋಗಿದೆ. ನಾವು ಬೇಡವೆಂದರೂ ಅವರು 'ಕ್ವಿಟ್ ಇಂಡಿಯಾ' ಮಾಡುವವರೇ.

"ಸರಿಯೇ. ಅವರು ಮಾಡಿದರಾಯಿತು-ಮಾಡದೆ ಹೋದರೆ?"

"ಮಾಡದೇ ಹೋದರೆ ಇದಕ್ಕಿಂತ ಉಗ್ರವಾದ ಚಳವಳ ಆಗುತ್ತದೆ. ಏನೂ ಹೆದರಬೇಡಿ. ಬಹಳ ದಿವಸ ಹೋಗಲಾರದು. ಈಗ ಗಾಂಧಿಯವರು ಅಹಿಂಸೆಯೆಂದರೂ, ಇನ್ನೊಂದು ಬಾರಿ, ತಟಸ್ಥವಾಗಿ ಕುಳಿತಂತೆ ದೂರ ಉಳಿದುಬಿಡುತ್ತಾರೆ. ಆಗ ಜವಹಾರ್‌ಲಾಲ್ ಮುಂದೆ ಬರುತ್ತಾರೆ. ಆ ಕಡೆಯಿಂದ ಅವರೂ ಬರ್ಮಾದಿಂದ ಸುಭಾಸ್ ಬಾಬುವೂ ಬಂದರೆ, ಕೂಡಿಯೇ ದಂಗೆಯೇಳುತ್ತಾರೆ."

"ಹಾಗಿದ್ದರೆ ಅಹಿಂಸೆಯ ಗತಿ? ಕಳೆದ ಸಾರಿ ಗಾಂಧಿಯವರು 'ಮಾಡು ಇಲ್ಲವೆ ಮಡಿ' ಅಂದರಲ್ಲವೇ? ಅದರ ಅರ್ಥ ಅಹಿಂಸೆ ಎಂದೇ?"

"ಕರ್ತವ್ಯ ಮಾಡುತ್ತ ನಾವು ಸಾಯಬೇಕು ಎಂಬುದು ಅವರ ಉದ್ದೇಶ ಇರಬೇಕು. ಆದರೆ ಈ ಸಾರಿಯ ಚಳವಳದಲ್ಲಿ ಗಾಂಧಿಯವರು ಅಷ್ಟು ಅಪ್ಪಣೆಮಾಡಿದ್ದರೂ, ಕೊನೆಗೆ, 'ನಿಮಗೆ ತಿಳಿದಂತೆಮಾಡಿ' ಎಂದು ಹೇಳಿದ್ದಾರಂತೆ."

ಹೀಗೆ ತುದಿಕಾಣದ ವಾದವನ್ನು ತರ್ಕಿಸಿ, ಬೇಸರಬಂದು ಇಬ್ಬರೂ ಮಲಗಿ ನಿದ್ರೆಹೋದರು. ಬೆಳಗಾದ ಮೇಲೆ ರಾಧಾಕೃಷ್ಣ ಪೇಟೆಗೆ ಹೋದ. ಅಲ್ಲಿ ಇಂಗ್ಲಿಷ್ ದಿನ ಪತ್ರಿಕೆಯೊಂದು ಕೈಗೆ ಸಿಕ್ಕಿತು. ಗಾಂಧಿ

ಜಿಯವರ ದೀರ್ಘವಾದ ಹೇಳಿಕೆಯೊಂದು ಅದರಲ್ಲಿತ್ತು. ಅದನ್ನು ಓದುತ್ತಲೇ ಅವನ ಮುಖ ಕಂದಿತು. ಆ ಪತ್ರಿಕೆಯನ್ನು ಹಾಗೆಯೇ ಸುರುಳಿ ಮಾಡಿಕೊಂಡು ಅನಂತಾಚಾರ್ಯರ ಮನೆಗೆ ತಂದನು. ಆಚಾರ್ಯರು ನಿತ್ಯ ಪೂಜೆಯನ್ನು ಮುಗಿಸಿ, ನೂಲುತ್ತ ಕುಳಿತ್ತಿದ್ದರು. "ಏನ್ರೀ, ಬಹಳ ಬೇಸರದ ಮುಖಮಾಡಿಕೊಂಡು ಬಂದಿರಿ?" ಎಂದು ಕೇಳಿದರು. 'ಇದನ್ನೋದಿ' ಎಂದು ರಾಧಾಕೃಷ್ಣ ಪತ್ರಿಕೆಯನ್ನು ಅವರ ಮುಂದಕ್ಕೆ ಎಸೆದ. ಹೋಗಿ ದಿಂಬಿಗೆ ಒರಗಿಕೊಂಡು ಉಸ್ಸೆಂದು ಕುಳಿತ. ಆಚಾರ್ಯರು ಪತ್ರಿಕೆಯನ್ನು ಎರಡೆರಡು ಬಾರಿ, ಮೂರು ಮೂರು ಬಾರಿ, ಓದಿದರು. "ಹೀಗೆಂದರೆ ನಮ್ಮ ಅವಸ್ಥೆ ಏನ್ರೀ? ನಾವು ಏನುಮಾಡಿ ಏನಾದ ಹಾಗಾಯಿತು? ಕಾಂಗ್ರೆಸ್ಸಿನ ಹೇಳಿಕೆ ಇದು; ಮೇಲಿನ ಹೈಕಮಾಂಡಿನವರು ಹೀಗೆ ಚಳವಳ ನಡೆಯಿಸಲು ಸೂಚನೆ ಕೊಟ್ಟಿದ್ದಾರೆ– ಎಂದು ಇಷ್ಟೆಲ್ಲ ಒದ್ದಾಡಿದೆವು. ಮಹಾತ್ಮರು ತಣ್ಣಗೆ ಕುಳಿತುಕೊಂಡು ಇದೆಲ್ಲ ಬುದ್ಧಿಗೇಡಿತನದ ಕೆಲಸ, ಹಿಂಸೆಯ ದಾರಿಯನ್ನು ನಾನು ಹೇಳಿದವನೇ ಅಲ್ಲ; ಜನರು ಮುಖಂಡರನ್ನು ಹಿಡಿದ ಸಿಟ್ಟಿಗಾಗಿ ತಮ್ಮಷ್ಟಕ್ಕೇ ತಾವು ಸಿಟ್ಟುಗೊಂಡು ಆ ದಾರಿ ಹಿಡಿದಿರಬೇಕು. ಹಾಗೆಮಾಡಿದ್ದು ತುಂಬ ಶೋಚನೀಯ–ಎನ್ನುತ್ತಾರಲ್ಲಾ ಇದರ ಅರ್ಥವೇನು? ನಾವು ಯಾರನ್ನು ನಂಬಿ ಈ ಕೆಲಸಗಳನ್ನು ಮಾಡಿದ ಹಾಗಾಯಿತು?"

"ಗಾಂಧಿಯವರು ಈ ವಿಧ್ವಂಸಕ ಕಾರ್ಯವನ್ನು ತೊಡಗಿ ಎಂದು ನಿಮ್ಮಲ್ಲಿ ಯಾರಿಗಾದರೂ ಹೇಳಿದರೇ? ಸ್ವಲ್ಪ ಯೋಚನೆ ಮಾಡಿದ್ದರೆ ಗೊತ್ತಾಗುತ್ತಿರಲಿಲ್ಲವೇ? ಈ ಸುಲಿಗೆ, ದರೋಡೆ, ಬೆಂಕಿಯ ಪ್ರಕರಣಗಳೆಲ್ಲಾ ಗಾಂಧಿಯವರ ಮನಸ್ಸಿಗೆ ಎಂದೂ ಬರುವಂತಹವಲ್ಲ. ಕುರುಡ ನಂಬಿದ್ದು ಕೋಲನ್ನು ಎಂಬ ಹಾಗೆ ಅವರು ಅಹಿಂಸೆ ಬಿಟ್ಟು ಮಾತನಾಡುವವರೇ ಅಲ್ಲ. ಸತ್ಯ–ಅಹಿಂಸೆ, ಸತ್ಯ–ಅಹಿಂಸೆ–ಅದನ್ನೇ ಮೇಲಿಂದ ಮೇಲೆ ತಿರುಗಮುರುಗ ಹೇಳುವ ಮಹಾನುಭಾವರು ಅವರು. ನನ್ನ ಮಟ್ಟಿಗೆ ಅದರಲ್ಲಿ ಆಶ್ಚರ್ಯವೂ ಕಾಣುವುದಿಲ್ಲ. ನನ್ನಲ್ಲಿ ಹಿಂಸೆಯನ್ನು ಮಾಡುವ ಯೋಗ್ಯತೆ ಇಲ್ಲದೆ ಹೋದರೂ ಅಹಿಂಸೆಯ ಮೇಲೆ ನಂಬಿಕೆ ಉಳಿದಿಲ್ಲ. ಹಾಗಾಗಿ ಈ ಚಳವಳಕ್ಕೆ ಸೇರಿದುದರಿಂದ ನನಗಿಷ್ಟೂ ಬೇಸರವಾಗುವುದಿಲ್ಲ. ಆದರೆ ನಿಮ್ಮಂಥ ಆಚಾರ್ಯರ ಅವಸ್ಥೆ

ಏನು? ನೀವು ನಂಬಿದ ದೇವರೇ ಮೋಸಕೊಟ್ಟ ಹಾಗಾಯಿತಲ್ಲ?"

"ಅವರು ಇಂಥ ಹೇಳಿಕೆ ಕೊಡದೆ, ಸುಮ್ಮನೆ ಇದ್ದರೂ ಚಿಂತಿಲ್ಲ-ವಾಗಿತ್ತು. ತಾನು ಇದನ್ನೆಲ್ಲ ಹೇಳಲಿಲ್ಲ-ಎಂದರೆ ಸಾಲದಿತ್ತೇ? ಇಂಥ ಕೆಲಸ ತಪ್ಪು ಅನ್ನಬೇಕೇ?"

"ಹೋಗಲಿ, ಗಾಂಧಿಯವರು ಹೀಗೆ ಹೇಳಿದ್ದಾರೆ-ಎಂದು ನಿಮಗೆ ಯಾರು ಹೇಳಿದರು?"

"ನನಗೆ ಇನ್ನು ಯಾರು ಹೇಳಬೇಕು-ಬನ್ನಟ್ಟಿಯವರು. ಮುಂಬಯಿಗೆ ಹೋಗಿ ಬಂದವರೇ ನನ್ನನ್ನು ಕರೆಯಿಸಿ, ನಮ್ಮ ಕಾರ್ಯಕ್ರಮ ಹೀಗೀಗೆ ಎಂದು ವಿವರಿಸಿದರು. ಕಾಂಗ್ರೆಸ್ಸಿನ ಮುಖಂಡರ ಆಶೆಯೇ ಹಾಗೆ; ಅವರಿಗೆಲ್ಲ ಅವಸರದಲ್ಲಿ ಬಂಧನವಾದುದರಿಂದ ಇನ್ನೂ ಹೆಚ್ಚಿನ ವಿವರ ಕೂಡಲಿಕ್ಕೆ ಆಗಲಿಲ್ಲ. ನಮ್ಮ ಮೇಲೆ ಭಾರವನ್ನು ಹಾಕಿ ಹೋಗಿದ್ದಾರೆ--ಎಂದರು. ಮುಂದೆ ನಡೆದುದೆಲ್ಲಾ ನಿಮಗೆ ಗೊತ್ತಿದೆ. ನಾನಾಗ ತಿಳಿದೆ — ಕಾಂಗ್ರೆಸ್ಸು ಅಂದರೆ ಗಾಂಧಿಯವರು, ಗಾಂಧಿಯವರು ಅಂದರೆ ಕಾಂಗ್ರೆಸ್ಸು. ಕೊನೆಯ ಗಳಿಗೆಯಲ್ಲಿ ಗಾಂಧಿಯವರು ತಮ್ಮ ಮಾರ್ಗವನ್ನು ಬದಲಿಸಿದ್ದರೂ ಬದಲಿಸಿರಬಹುದು. ಸಂಧಿಕಾಲ ಇದು. ಅಥವಾ 'ನಿಮಗೆ ತಿಳಿದ ಹಾಗೆ ನೀವು ಮಾಡಿ, ನನಗೆ ಅದರ ಹೊಣೆ ಇಲ್ಲ' ಎಂದು ಪೇಳಿದ್ದರೂ ಹೇಳಿರಬಹುದು. ಪ್ರತ್ಯಕ್ಷ ಹಿಂಸೆ ಮಾಡಲಿಕ್ಕೆ ಹೇಳಲಿಲ್ಲವಷ್ಟೆ. ನಾವಾದರೂ ಆ ಉದ್ದೇಶವನ್ನು ಇಟ್ಟುಕೊಂಡಿಲ್ಲ."

"ಹಾಗಾದರೆ ಬನ್ನಟ್ಟಿಯವರೊಡನೆ ನಾನೂ ಆ ದಿನ ಮುಂಬಯಿಂದ ಬಂದವ. ಆಗ ಅವರ ಪರಿಚಯವಾಯಿತು; ಅವರು ಈ 'ಮಾಡು ಮಡಿ' ಕಾಗದವನ್ನೂ ನನ್ನ ಕೈಗೆ ಕೊಟ್ಟರು. ನಾನು 'ಗಾಂಧಿಜಿಯವರು ಇಂಥದನ್ನು ಹೇಳಲು ಸಾಧ್ಯವೇ?" ಎಂದು ಅವರಲ್ಲಿ ತರ್ಕವನ್ನೂ ಮಾಡಿದ್ದೆ. ಯಾರೆಂದು ಆಗ ಹೇಳದಿದ್ದರೂ, ಗಾಂಧಿಜಿಯವರ ತೀರ ನಮಿಾಪದವರು ಇದನ್ನು ತಿಳಿಸಿದ್ದಾರೆ-ಅಂದರು. ಅದನ್ನೇ ನಂಬಬೇಕಾಯಿತು.. ಅಂತೂ ನಮ್ಮಂತೆ ಸಾವಿರಾರು ಜನ ಇದು ಕಾಂಗ್ರೆಸಿನ ಹೇಳಿಕೆಯಂತೆ ನಡೆದಿದೆ ಎಂಬ ಪ್ರಮಾದಕ್ಕೆ ಒಳಗಾಗಿದ್ದರೆ, ನನಗೆ—ಕಾಂಗ್ರೆಸ್ ಈ ಮಾತನ್ನು ಹೇಳಿರಲೀ, ಇಲ್ಲವೇ ಹೇಳದೆ ಇರಲಿ—ಗುಲಾಮತನಕ್ಕಿಂತ

ಹೆಚ್ಚಿನ ಅಪರಾಧ, ಅಹಿಂಸೆಯಿಂದ ಸ್ವಾತಂತ್ರ್ಯ ಸಂಪಾದನೆ ಮಾಡು ವುದಲ್ಲ-ಎಂದು ಸದಾ ತೋರುತ್ತದೆ. ಆದರೆ ಯಾರು ತಮ್ಮ ಮುಖಂಡ ರನ್ನು ನಂಬಿ ಕೆಲಸಮಾಡಿದರೋ ಅಂಥವರು ಮಾತ್ರ, ಗಾಂಧಿಯವರ ಈ ನಿರಾಕರಣೆಯನ್ನು ಕಂಡು ಏನೆಂದುಕೊಳ್ಳಬೇಕು?"

"ಯಾರೂ ಗೀರೂ ಎಂದು ಬೇಡ. ಆ ಸಾಲಿನಲ್ಲಿ ನಾನೇ ಇದ್ದೇನೆ. ನನಗೀಗ ಇದನ್ನು ಓದಿದ ಮೇಲೆ ನಾನೆಂಥ ಕೆಲಸ ಮಾಡಿದೆ-ಎಂದು ತೋರುತ್ತಿದೆ."

ಇಬ್ಬರೂ ಬೇಸರದಿಂದಲೇ ಊಟಮಾಡಿದರು. ಊಟಮಾಡಿ ಅಡಿಕೆ ತಿನ್ನುತ್ತ ರಾಧಾಕೃಷ್ಣ ಕುಳಿತಿದ್ದ ಗಳಿಗೆಯಲ್ಲಿ, ಅಂಚೆಯವನು ಒಂದು ತಂತಿಯನ್ನು ತಂದುಕೊಟ್ಟನು. ಒಡೆದು ನೋಡಿ ಅವನ ಮುಖ ಇನ್ನಷ್ಟು ಸಪ್ಪಗಾಯಿತು. ಶ್ಯಾಮು, ರಾಧಾಕೃಷ್ಣಗೆ ಮನೆಗೆ ಬರಬೇಕೆಂದು ಒಂದು ತಂತಿಕೊಟ್ಟಿದ್ದನು. ಚಂದ್ರನಿಗೆ ವಿಷಮ ಜ್ವರವಂತೆ. ಆಗಲೇ ಹೊರಡೋಣವೆಂದರೆ ಮೈಲ್ ಬಂಡಿ ಹೊರಟುಹೋದ ವೇಳೆ. ಮನ ಸ್ಸು ತುಂಬ ತಳಮಳಕ್ಕೆ ಒಳಗಾಯಿತು. ಅಲ್ಲಿ ಕುಳಿತಿರುವುದು ಇನ್ನು ಸಾಧ್ಯವೇ ಇಲ್ಲ. ಮರುದಿನ ಮುಂಜಾನೆಯ ಎಕ್ಸ್‌ಪ್ರೆಸ್ ಬಂಡಿಯಲ್ಲಿ ಕುಳಿತು ತನ್ನ ಊರಿಗೆ ಹೊರಟನು. ಅಷ್ಟು ಗಟ್ಟಿಮುಟ್ಟಾಗಿದ್ದ ಚಂದ್ರ ವಿಷಮ ಜ್ವರಕ್ಕೆ ಗುರಿಯಾಗುವುದೆಂದರೆ ತಂದೆಯಾದವನಿಗೆ ವ್ಯಥೆಯಾ ಗದೆ ಇದ್ದೀತೆ? ದಾರಿಯುದ್ದಕ್ಕೂ ಮಗುವನ್ನು ನೆನೆಯುತ್ತಾ, ರೈಲು, ಮೋಟರುಗಳಲ್ಲಿ ಪ್ರಯಾಣ ಮುಗಿಸಿ, ಮಧ್ಯರಾತ್ರಿ ವೇಳೆಗೆ ಮನೆ ಯನ್ನು ಸೇರಿದನು. ತಂತಿ ಬಿಟ್ಟುದು ಎಂದು ಆತ ನೋಡಿರಲಿಲ್ಲ. ಅದು ಕಾಗದಕ್ಕಿಂತ ಮೆಲ್ಲಗಾಗಿ ಧಾರವಾಡವನ್ನು ಸೇರಿತ್ತು. ಎರಡು ದಿನವೆಲ್ಲ ರಾಧಾಕೃಷ್ಣನ ಬರವನ್ನು ಕಂಡು ಸತ್ಯ, ಶ್ಯಾಮರು ನಿರಾಶರಾಗಿದ್ದರು. ಇವನು ಹೋಗುವ ವೇಳೆ ಹೊರಜಗಲಿಯ ಮೇಲೆ ರಾಮಕೃಷ್ಣಯ್ಯ ಮಲಗಿಕೊಂಡಿದ್ದರು. ಅವರು ಎದ್ದರು. ಮನೆಯ ಕದ ತೆರೆಯಿತು. ಮಗುವಿನ ಬಳಿಗೆ ಹೋಗಿ ರಾಧಾಕೃಷ್ಣ ಕುಳಿತುಕೊಂಡ. ಪಾಪ— ಹೇಗಾಗಿದ್ದಾನೆ ಚಂದ್ರ! ಮೈ ಮುಟ್ಟಿದರೆ ಜ್ವರ ಕುದಿಯುತ್ತಿದೆ. ಬರಿಯ ಎಲುಬು ಮೂಳೆಯಾಗಿದ್ದ ಆ ಹುಡುಗ. ತಂದೆಯನ್ನು ನೋಡುತ್ತಲೇ ತುಟಿಯಲ್ಲಿ ದುರ್ಬಲವಾದ ಒಂದು ನಗು ಮೂಡಿತು. "ನಾನು ಬದು

ಕುತ್ತೀನಲ್ಲವೇ ಅಪ್ಪ?" ಎಂದು ಕೇಳಿದ. "ನಿನಗೇನೂ ಆಗುವುದಿಲ್ಲ. ಯೋಚನೆ ಮಾಡಬೇಡ" ಎಂದನು ರಾಧಾಕೃಷ್ಣ. ಸಾವಿನ ಭೀತಿಯನ್ನು ಈ ಗಳಿಗೆಯಲ್ಲಿ ಅವನ ತಲೆಯಲ್ಲಿ ತುರುಕಿಸಿದವರಾರೋ ಅವನಿಗೆ ತಿಳಿಯಲಿಲ್ಲ.

"ಎಷ್ಟು ದಿನವಾಯಿತು?" ಎಂದು ಕೇಳಿದ.

"ಈವತ್ತಿಗೆ ಹದಿನೆಂಟು."

"ಮೊದಲೇ ತಿಳಿಸಲಿಲ್ಲವೇಕೆ?"

"ಮೂರು ದಿನವಾಯಿತು ತಂತಿಕೊಟ್ಟು."

"ನನಗ ಸಿಕ್ಕಿದ್ದು ನಿನ್ನೆ. ಮೊದಲಿನ ಗಾಡಿಗೇನೇ ಬಂದೆ. ಯಾರು ಚಿಕಿತ್ಸೆ ಮಾಡುತ್ತಿದ್ದಾರ?"

"ರಾಮಕೃಷ್ಣಯ್ಯ ಯಾರನ್ನೋ ಕರೆದುಕೊಂಡು ಬಂದಿದ್ದಾರೆ. ನಿತ್ಯವೂ ಬರುತ್ತಿದ್ದಾರ ಡಾಕ್ಟರರು. ಮದ್ದು ಏನೇನೋ ಕೊಡುತ್ತಾ ಇದೆ. ಜ್ವರ ಬಿಡುವುದೇ ಕಾಣುವುದಿಲ್ಲ. ಆದರೆ ಈ ದರಿದ್ರ ಊರಿನಲ್ಲಿ ಒಂದಿಷ್ಟು ಗ್ಲುಕೋಸ್ ಬೇಕೆಂದರೂ ಸಿಕ್ಕದೆ ಹೋಯಿತು. ಕಿತ್ತಳೆ ಹಣ್ಣಿನ ರಸವನ್ನು ಕೊಡುತ್ತಿದ್ದೇವೆ. ಗ್ಲೂಕೋಸ್ ಸಿಕ್ಕಿದರೆ ಆಗುತ್ತಿತ್ತು ಎನ್ನುತ್ತಾರ ಡಾಕ್ಟರರು" ಎಂದಳು ಸತ್ಯ.

"ನಾಳೆ ನೋಡುವ. ನೀವೆಲ್ಲರೂ ಎಂಟಿಟೈಫಾಯ್ಡ ಇಂಜಕ್ಷನ್ ತೆಗೆದುಕೊಂಡಿದ್ದೀರಾ"

"ಇಲ್ಲ"

"ಅಷ್ಟು ಗೊತ್ತಾಗಬೇಡವೇ ಶ್ಯಾಮೂ? ಮನೆಯಲ್ಲಿ ಚಿಕ್ಕಮಕ್ಕಳಿದ್ದಾರೆ, ನೀವೂ ಇದ್ದೀರಿ. ನಾಳೆ ಒಬ್ಬರ ಹಿಂದೆ ಒಬ್ಬರು ಮಲಗಬಾರದಲ್ಲವ?"

ಆತ ಹೋಗಿ ಕಾಲು ತೊಳೆದುಕೊಂಡು ಬಂದ. "ಊಟವಾಗಿಲ್ಲವಲ್ಲಾ?" ಎಂದು ಕೇಳಿದಳು ಸತ್ಯ.

"ಇನ್ನೇನು ಊಟ? ನಾಳೆಗೆ ಎಲ್ಲ. ಸತ್ಯ, ನೀನೂ ನಿದ್ರೆ ಬಿಟ್ಟು ಕಂಗಾಲಾದ ಹಾಗೆ ಕಾಣುತ್ತದೆ. ನಾನು ಬಂದಿದ್ದೇನಲ್ಲ, ಇನ್ನೇನು ಯೋಚನೆ ಮಾಡಬೇಡ, ಹೋಗಿ ಮಲಗಿಕೋ." ಎಂದು ಉಳಿದವರನ್ನು ಕಳುಹಿಸಿದನು. ಮಗುವಿನ ಬಳಿಯಲ್ಲಿ ತಾನು ಕುಳಿತುಕೊಂಡು

ಅವನ ಮುಖವನ್ನೇ ನೋಡುತ್ತಿದ್ದನು. ಅವನಿಗೆ ನಿದ್ರೆ ಬರುವಂತಿರಲಿಲ್ಲ. ಆಯಾಸವಾಗಿದ್ದರೂ ಚಂದ್ರುನನ್ನು ಇಷ್ಟು ದಿನ ಬಿಟ್ಟು ಹೋಗಿದ್ದೆನಲ್ಲ—ಎಂಬ ನೋವು ಮನದಲ್ಲಿ ಕುದಿಯುತ್ತಿತ್ತು. ಅವನ ಬಳಿಯಲ್ಲಿಯೇ, ಬಿಟ್ಟು ಏಳಲಾರದುದಕ್ಕೆ ಸತ್ಯ ಕುಳಿತಿದ್ದಳು. ಆಕೆ ಅರ್ಧ ತೂಕಡಿಕೆಯಲ್ಲಿ ಆಯಾಸದ ಸೆಳೆತಕ್ಕೆ ಅಲ್ಲಿಯೇ ಮಲಗಿ ನಿದ್ದೆ ಹೋದಳು. ರಾಧಾಕೃಷ್ಣ ಇಲ್ಲದ ಚಿತ್ರಗಳನ್ನು ತನ್ನ ಮುಂದೆ ಬರೆಯುತ್ತೊಡಗಿದ್ದಾನೆ. ಬೇನೆ ಇದ್ದ ಮಗನು ಮುಂದೆ ಮಲಗಿರುವಾಗ ಹಿಂದಿನ ಸಾವು ನೋವುಗಳೆಲ್ಲ ಅವನ ಕಣ್ಣ ಮುಂದೆ ನಲಿದಾಡಿದವು. ಚಂದ್ರು ಹುಟ್ಟುವ ಮೊದಲು ತಮ್ಮ ಮನೆಯನ್ನು ಪ್ರವೇಶಿಸಿದ ಆ ಪಂಚಮ ಬಾಲಕನ ಮೃತ್ಯು ಕಣ್ಣ ಮುಂದೆ ಕುಣಿದಾಡಿತು. ಈಶ್ವರಯ್ಯನವರ ಹೆಂಡತಿ ಸುಬ್ಬಮ್ಮ ಡಾ॥ ಸಾಹುಕರ್ಣಿಯವರ ಆಶ್ರಯದಲ್ಲಿ ನರಳಿ ಚೇತನಗೊಂಡ ಚಿತ್ರ ಹೊಳೆಯಿತು. ಆ ಮೇಲೆ ತೋರಿದುದು ಮುರ್ಜಿ ಈಶ್ವರಪ್ಪನ ಕ್ಷಯ ಪೀಡಿತ ಶರೀರ. ಅದನ್ನು ನೆನೆಯುತ್ತಲೇ ಜೀವಿನ ರಸವನ್ನು ಕುಡಿದಂತಾಯಿತು. ಅಲ್ಲಿಂದ ಮುಂದೆ ಎಷ್ಟರವೋ, ನಿದ್ರೆಯೋ ತಿಳಿಯದು. ಸಾವಿನ ಒಂದು ನೆನವರಿಕೆಯಲ್ಲಿ ಏನೇನೂ ಅಲ್ಲಿ ಬರಲಿಲ್ಲ. ಮುದ್ದು ಮಗುವಿನ ಸಾವನ್ನು ಕಂಡು ತಾನು ಕಲ್ಲಾದಂತೆ ತೋರಿತು. ಬೆಳಗಾಗುವಾಗ ಅವನ ಕಪೋಲವನ್ನು ತೊಯ್ದ ಕಂಬನಿ ಇನ್ನೂ ಹಸಿಯಾಗಿಯೇ ಇತ್ತು.

“ಅಪ್ಪಾ” ಎಂದುಕ್ಕಿದ ಧ್ವನಿಯಿಂದ ಚಂದ್ರ, ಆತನನ್ನು ಮಾತನಾಡಿಸುತ್ತಿದ್ದ. ದೀಪದ ಬೆಳಕಿನಲ್ಲಿ ಹಸಿಯಾದ ಕಣ್ಣೀರಿನ ಧಾರೆ ಮಿಂಚುತ್ತಿದ್ದುದನ್ನು ಆತ ಕಂಡಿರಬೇಕು. “ಅಪ್ಪಾ ಏಕೆ ಅಳುತ್ತಿದ್ದೀಯಾ?” ಎಂದು ಬೇಸರದಿಂದ ಮಾತನಾಡಿಸಿದ. ಈತನಿಗೆ ಎಚ್ಚರವಾಯಿತು. ಮಾತು ಸ್ಪಷ್ಟವಾಗಿ ಕೇಳಿಸಿತು. ಒತ್ತಾಯದ ನಗುವನ್ನು ಮುಖದ ಮೇಲೆ ತಂದುಕೊಂಡು “ಏನು ಕೇಳಿದೆ ಮಗು?” ಎಂದ. ಬಾಲಕನ ಪ್ರಶ್ನೆಯನ್ನು ಇನ್ನೊಮ್ಮೆ ಕೇಳಿದ. ಆತನಿಗೆ ನಾಚಿಕೆಯಾಯಿತು. “ಏನಿಲ್ಲ ಮಗು, ಕನಸಿನಲ್ಲಿ ಏನೇನೋ ಯೋಚಿಸಿ ಕಣ್ಣೀರು ಬಂದಿರಬೇಕು. ನೀನು ಹೆಚ್ಚು ಮಾತನಾಡಬೇಡ. ಇನ್ನು ಮುಂದೆ ಮೂರೇ ಮೂರು ದಿನವ ಜ್ವರ ಸಹಿಸಿಕೊಂಡಿಯಾದರೆ ಸುಖವಾಗುತ್ತೀಯಾ. ಎಲ್ಲಿದ್ದರೂ ಹೋಗಿ

ಗ್ಲೂಕೋಸ್ ಹುಡುಕಿ ತರುತ್ತೇನೆ" ಎಂದು ಅವನ ದುಃಖವನ್ನು ಸವರಿ ಸಮಾಧಾನ ಹೇಳಿದನು; ಹೊರಕ್ಕೆ ಬಂದು ಮುಖ ತೊಳೆದು, ಉಪಾಹಾರ ಮುಗಿಸಿ, ರಾಮಕೃಷ್ಣಯ್ಯನವರ ಜತೆಗೆ ಗ್ಲೂಕೋಸ್ ಅನ್ವೇಷಣಕ್ಕಾಗಿ ಹೊರಟನು. ರಾಮಕೃಷ್ಣಯ್ಯ—ತಾವು ಅದಕ್ಕಾಗಿ ಪಟ್ಟ ಶ್ರಮವನ್ನೆಲ್ಲಾ ಬಣ್ಣಿಸಿ ಹೇಳಿದರು. ಪೇಟೆಗೆ ಹೋಗುವ ಮುನ್ನ, ಚಂದ್ರನಿಗೆ ಚಿಕಿತ್ಸೆ ನಡೆಯಿಸುತ್ತಿದ್ದ ವೈದ್ಯರನ್ನು ಕಂಡು ಮನೆಯವರಿಗೆಲ್ಲಾ ಎಂಟಿಟ್ಯೂಪ್ಯಾಯ್ಡ್ ಮದ್ದು ಕೊಡಿಸುವ ಏರ್ಪಾಡಿಗಾಗಿ ತೆರಳಿದರು.

ಡಾಕ್ಟರ್ ನಾರಾಯಣರಾಯರು ಚಂದ್ರನ ಚಿಕಿತ್ಸೆ ನಡೆಯಿಸುತ್ತಿದ್ದರು. ಅವರು ಕೆಲವು ವರ್ಷ ಡಾ॥ ನಂಪರವರ ಆಸ್ಪತ್ರೆಯಲ್ಲಿ ಕೆಲಸಮಾಡಿ, ಕೊನೆಗೆ ನಮಬೀಳದುದರಿಂದ ಬೇರೆ ಸ್ವತಂತ್ರವಾದ ಡಿಸ್‌ಪೆನ್ಸರಿಯನ್ನು ಕದ್ರಿಯಲ್ಲಿ ತೆರೆದಿದ್ದರು. ಪ್ರಾತಃಕಾಲವೇ ರಾಮಕೃಷ್ಣಯ್ಯನವರೂ, ರಾಧಾಕೃಷ್ಣನೂ ಬಂದುದನ್ನು ಕಂಡು ಅವರಿಗೂ ಗಾಬರಿಯಾಯಿತು. "ಏನು ಚಂದ್ರನಿಗೆ ಜಾಸ್ತಿಯಾಗಿದೆಯೋ? ಎಷ್ಟು ಡಿಗ್ರಿ ಜ್ವರ ಇತ್ತು ನಿನ್ನೆ ರಾತ್ರಿ? ಡಿಲೀರಿಯಮ್ ಇದ್ದಿಲ್ಲವಷ್ಟೆ" ಎಂದು ಕೇಳಿದರು.

"ಹಾಗೇನಿಲ್ಲ, ಇವರು ನಿನ್ನೆ ರಾತ್ರಿ ಬಂದರು. ನಮಗಿನ್ನು ಗಾಬರಿಯಿಲ್ಲ" ಎಂದರು ರಾಮಕೃಷ್ಣಯ್ಯ.

"ಇವರಾರು — ಹುಡುಗನ ತಂದೆಯೋ? ಬನ್ನಿ—ಕುಳಿತುಕೊಳ್ಳಿ" ಎಂದು ಅವರನ್ನು ಕುಳ್ಳಿರಿಸಿಕೊಂಡು, ಹುಡುಗನ ಕ್ಷೇಮ ಸಮಾಚಾರವನ್ನು ಮಾತನಾಡಿದರು. "ನೀವೇನೂ ಗಾಬರಿಯಾಗುವ ಕಾರಣವಿಲ್ಲ. ಅವನು ನಿತ್ರಾಣವಾಗಿ ಕಂಡರೂ ಬೇರೆ ಯಾವ ತೊಡಕೂ ಇಲ್ಲ. ಇನ್ನು ಮೂರು ದಿನಗಳಲ್ಲಿಯೇ ಜ್ವರ ಬಿಟ್ಟೀತು" ಎಂದುದರಿಂದ, ರಾಧಾಕೃಷ್ಣನಿಗೂ ತುಂಬ ಸಂತೋಷವಾಯಿತು. ಆತ "ಮನೆಯವರಿಗೆಲ್ಲಾ ಎಂಟಿಟ್ಯೂಪ್ಯಾಯ್ಡ್ ಇಂಜೆಕ್ಷನ್ ಕೊಡಬಹುದಿತ್ತಲ್ಲ" ಎಂದನು.

"ನನಗೂ ಕೊಡಬೇಕೆಂದೇ ಇತ್ತು. ನಿನ್ನೆ ಸಂಜೆಯಷ್ಟೆ ನಾಲ್ಕು ಟ್ಯೂಬು ಸಿಕ್ಕಿತು. ಈಗ ಯಾವ ಮದ್ದನ್ನು ಕೇಳಿದರೂ ಇಲ್ಲವೆನ್ನುವ ಕಾಲ ಬಂದುಬಿಟ್ಟಿದೆ. ಬಡ ರೋಗಿಗಳಿದ್ದರೆ ಯಮರಾಯನದೇ ಔಷಧ ಮಾಡಿಸಬೇಕಷ್ಟೆ. ಎಲ್ಲವೂ ಕಾಳಸಂತೆಯ ವ್ಯಾಪಾರವಾಗಿದೆ. ಒಂದಕ್ಕೆ

ಹತ್ತು ಪಾಲು ಬೆಲೆ ಕೊಡಬೇಕು. ತಕಾರಿ ಮಾಲುಗಳಿಗೆ ದಿಕ್ಕೇ ಇಲ್ಲ. ಮೊನ್ನೆ 300ರೂಪಾಯಿ ತೆತ್ತು ಒಂದು ರಾತ್ತಲ್ಲ ಕ್ವಿನೀನು ತರಿಸಿದೆ. ಆದರೆ ಅದು ತಾಜಾ ಮಾಲು ಎಂಬ ಧೈರ್ಯವಿಲ್ಲ. ಅದನ್ನು ಕೊಟ್ಟು, ನಾನು ಏನು ಚಾರ್ಜು ಮಾಡಬಹುದೆಂದು ನೀವೇ ಹೇಳಿ" ಎಂದು ತಮ್ಮ ವೈದ್ಯ ಕೀಯ ಗೋಳನ್ನು ತೋಡಿಕೊಂಡರು. ಅಲ್ಲಿಂದ ಅವರ ಮಾತು ಗ್ಲೂಕೋಸಿನ ವಿಚಾರಕ್ಕೆ ಹರಿಯಿತು. "ಎಲ್ಲಿಯಾದರೂ ಸಿಕ್ಕೀತೇ?" ಎಂದು ಅವರಾಗಿ ಕೇಳಿದರು."ಇಲ್ಲ; ಊರೆಲ್ಲ ಲಾಗಹಾಕಿ ನೋಡಿದೆ. ಗುರುತಿನವರು ಕೇಳಿದರೆ ಸ್ಟಾಕು ಮುಗಿಯಿತೆಂದೇ ಹೇಳುತ್ತಾರೆ. ನೀವೇ ಹೇಳಿದಂತೆ ನಾನು ನಂದರನ್ನೂ ಕಂಡೆ. ಅವರ ಡ್ರಗ್ ಸ್ಟೋರಿಗೂ ಹೋಗಿ ಬಂದೆ ಇಲ್ಲ ಎಂದರು. ಅವರಲ್ಲಿ ಇಲ್ಲದ ಮೇಲೆ ಇನ್ನೆಲ್ಲಿಯೂ ಇರಲಾರದು. ಪ್ರೀಮಿಯರ್ ಡ್ರಗ್ ಸ್ಟೋರ್ ಅಲ್ಲವೆ ಅದು" ಎಂದರು.

ರಾಧಾಕೃಷ್ಣ "ಏನು-ನಂದರು ಊರಲ್ಲಿದ್ದಾರೆಯೇ? ಅದೃಶ್ಯರಾಗಿದ್ದರಲ್ಲ. ಈಗ ಅವರದೊಂದು ಡ್ರಗ್ ಸ್ಟೋರ್ ಆಗಿದೆಯೆ?" ಎಂದು ಕೇಳಿದನು.

ನಾರಾಯಣರಾಯರು "ಅವರು ಅದೃಶ್ಯವಾದುದು ಕೆಲಸವಿಲ್ಲದೆ. ಅವರ ಮೇಲೆ ಏನಿತ್ತಂತೆ? ಗಾಂಧಿಜಿಯವರ ಬಿಡುಗಡೆಯಾದ ಮರುದಿನವೇನೆ ಅವರು ಮಂಗಳೂರಿಗೆ ಬಂದರು. ಏನು ಸ್ವಾಗತ ಅವರಿಗೆ ಬಲ್ಲಿರಾ? ಸೆರೆಮನೆಗೆ ಹೋಗಿ ಬಂದವರಿಗಿಂತ ಹೆಚ್ಚಿನ ಮನ್ನಣೆ. ಬರುವಾಗಲೇ ಮುಂಬಯಿ ಪ್ರಿನ್‌ಸೆಸ್ ಸ್ಟ್ರೀಟನ್ನು ಖರೀದಿ ಮಾಡಿ ತಂದರೋ ಏನೋ—ಭಾರಿಯ ಒಂದು ಡ್ರಗ್ ಶಾಪು ತೆರೆದಿದ್ದಾರೆ. ಚೆನ್ನಾದ ವ್ಯಾಪಾರಿಗಳೆಂದರೆ ಅವರು. ಹಣ-ಎಲ್ಲಿದೆಯೆಂದು ಬಲ್ಲರು! ಇತ್ತ ದೇಶಭಕ್ತಿಗೂ ತೊಂದರೆಯಿಲ್ಲ. ಅತ್ತ ಒಂದಕ್ಕೆ ಹತ್ತರ ಬೆಲೆಯಲ್ಲಿ ಮದ್ದು ವಿಕ್ರಯಿಸಿ ಹಣ ಮಾಡುವುದಕ್ಕೂ ಅಡ್ಡಿಯಿಲ್ಲ. ನನಗೂ ಅವರಿಗೂ ಸ್ನೇಹ ಸಮನಾಗಿದ್ದರೆ, ನಾನೇ ಹೋಗಿ ಕೊಂಡುಬರುತ್ತಿದ್ದೆ. ಈ ಎಂಟಿ ಟೈಪ್ಯಾಯ್ಡ್ ಮದ್ದೆಲ್ಲಿಂದ? ನಾಗರಕಟ್ಟೆ ಡಾಕ್ಟರರು ಅಲ್ಲಿಂದಲೇ ತರಿಸಿಕೊಟ್ಟರು"

ನಿಜವೇ—ಹಾಗಾದರೆ ಅವರನ್ನೇ ಹಿಡಿದು ಸ್ವಲ್ಪ ಗ್ಲೂಕೋಸ್ ತರಿಸಲು ಬಂದೀತೇ"

"ಹಾಗಲ್ಲ. ಮೊದಲು ಅವರು ತಮ್ಮ ತಮ್ಮ ಗಿರಾಕಿಗಳನ್ನು ನೋಡು ತ್ತಾರೆ. ಯಾರಾದರೂ ಪಳ್ಳಿಯವರನ್ನು ಹಿಡಿದು, ಹೇಳಿದಷ್ಟು ದುಡ್ಡು ಕೊಟ್ಟರೆ, ಆಗ ಗ್ಲೂಕೋಸ್ ಹೊರಗೆ ಬಂದೀತು. ಅವರು ಎಷ್ಟಿಲ್ಲವೆಂದರೂ ಅವರಲ್ಲಿ ಉಂಟೆಂದೇ ನನ್ನ ವಿಶ್ವಾಸ"

ರಾಧಾಕೃಷ್ಣ, ರಾಮಕೃಷ್ಣಯ್ಯನವರು ಆ ಪ್ರಯತ್ನ ಮುಖ್ಯವಾದುದರಿಂದ ಅಲ್ಲಿಂದಹೊರಟರು. ದಾರಿಯಲ್ಲಿ ನಂದರ ಡ್ರಗ್ ಸ್ಟೋರಿನ ವಿಚಾರ, ಊರಲ್ಲೆಲ್ಲ ತುಂಬಿದ ಕಾಳಸಂತೆಯ ವಿಚಾರ, ಯುದ್ಧದಿಂದ ಜನರ ಶೀಲ ಎಷ್ಟು ಮಲಿನವಾಗಿದೆಯೆಂಬ ವಿಚಾರ-ಅವರಲ್ಲಿ ತುಂಬ ತರ್ಕ ನಡೆದುವು. ಅವರು ಹಾಗೆಯೇ ಹಾದಿಯಲ್ಲಿ ಹೋಗುತ್ತಿರುವಾಗ "ಯಾರು ಮಾಸ್ತರರೇ, ನನ್ನದೇವರು ಎಷ್ಟು ಅಪೂರ್ವ!" ಎಂಬ ಧ್ವನಿ ಕೇಳಿಸಿತು. ರಾಧಾಕೃಷ್ಣ ಕತ್ತೆತ್ತಿ ನೋಡಿದರೆ—ಕೆಳಬೈಲಿನ ರಾಮಣ್ಣ ದೊಡ್ಡ ನಮಸ್ಕಾರ ಹಾಕಿ ನಿಂತಿದ್ದನು. ಅಲ್ಲಿ ರಾಮಣ್ಣನೊಡನೆ ತುಂಬ ಸುಖದುಃಖದ ಮಾತುಗಳಾದುವು. ಚಂದ್ರನ ಕಾಯಿಲೆಯ ವಿಚಾರ ಕೇಳುತ್ತಲೇ—"ನಿಜವೇ ನನ್ನೊಡೆಯ, ನೀವು ಈಗ ಎಲ್ಲಿಗೆ ಹೊರಟಿರಿ? ಅಮ್ಮನನ್ನು ಮಗುವನ್ನೂ ಕಾಣದೆ ಯುಗವಾಯಿತು; ನಾನು ಬರುತ್ತೇನೆ ಜತೆಗೆ" ಎಂದ ರಾಮಣ್ಣ.

"ನಮ್ಮ ರಾಮಣ್ಣ ಸಿಕ್ಕಿದ್ದಾನೆ. ಒಂದು ಉಪಕಾರ ಮಾಡಬೇಕು ರಾಮಣ್ಣ. ಒಂದು ಮದ್ದು ಬೇಕಾಗಿದೆ. ನಾವು ಹೋದರೆ ಸಿಗುವುದಿಲ್ಲ. ಕಂಡಾಪಟ್ಟೆ ದರ ಹೇಳಲು ನಾಚಿಕೆಯಾಗುತ್ತದೆ. ಅದಕ್ಕಾಗಿ ನಮಗೆ ಮದ್ದೇ ಇಲ್ಲವೆನ್ನುತ್ತಾರೆ. ಇಗೋ-ಹತ್ತು ರೂಪಾಯಿ; ನಾವು ಇಲ್ಲಿಯೇ ನಿಂತಿರುತ್ತೇವೆ. ನೀನು ಪಂಪನ ಕಟ್ಟೆಗೆ ಹೋಗಿ ಬಾ. ಅಲ್ಲಿ, ನಂದ ಡ್ರಗ್ ಸ್ಟೋರ್ ಎಂಬ ಮದ್ದಿನ ಅಂಗಡಿಯಿದೆ. ಈ ಒಂದು ಚೀಟಿಯಲ್ಲಿ ಬರೆದ ಮದ್ದು ಅಗತ್ಯಬೇಕೆನ್ನು. ಕೊಡದೆ ನಿರ್ವಾಹವಿಲ್ಲೆನ್ನು; ನಮಗೆನ್ನ ಬೇಡ. ಅದು ನಿನಗೇನೆ ಅನ್ನು. ಎಷ್ಟು ಬೆಲೆ ಹೇಳಿದರೂ ಕೊಟ್ಟು ತಾ... ದರ ಹೆಚ್ಚಲ್ಲ; ಮದ್ದು ಮುಖ್ಯ' ಎಂದು ರಾಧಾಕೃಷ್ಣ ನುಡಿದನು.

"ಮಗುವಿಗೇನು. .....ಅದಕ್ಕೇನು ಕಷ್ಟ" ಎಂದು ಆತ ಹೊರಟು ಬಿಟ್ಟನು. ಅಲ್ಲಿನ ಅಂಗಡಿಗೆ ಹೋದಮೇಲೆ ಅಂಗಡಿಯ ಒಬ್ಬ ಆಳು ಕೆಳಬೈಲಿನವನೆಂದು ಗೊತ್ತಾಯಿತು. ರಾಮಣ್ಣ ಅವನನ್ನು ಕರೆದು

ಕೇಳಿದನು. ಸರಿ-ಕಾಗದ ಸುತ್ತಿದ ಒಂದು ಪೊಟ್ಟಣವನ್ನು ಆತ, ಹೊರಕ್ಕೆ
ತಂದು ರಾಮಣ್ಣನ ಕೈಯಲ್ಲಿರಿಸಿ, ಎಂಟು ರೂಪಾಯಿಗಳನ್ನು ಇಸ
ಕೊಂಡು ಹೋದನು. ಹೋಗುವಾಗ "ರಾಮಣ್ಣ, ಇಲ್ಲಿ ಅದು ಸಿಕ್ಕಿತೆಂದು
ಯಾರಿಗೂ ಹೇಳಬೇಡ. ಊರಿಂದೂರೇ ಬಂದು ನಮ್ಮ ಜೀವ ತಿಂದೀತು.
ಅದು ಹಾಗೆಲ್ಲ ಸಿಗುವ ಮದ್ದಲ್ಲ. ಬರಿಯ ನನ್ನ ದಾಕ್ಷಿಣ್ಯಕ್ಕೆ ಸಿಕ್ಕಿತು
ಅಷ್ಟೆ"-ಎಂದನು.

"ಇನ್ನು ಬೇಕಾದರೆ?" ಎಂದನು ರಾಮಣ್ಣ.

"ನಿನ್ನೊಬ್ಬನಿಗಲ್ಲವೆ............ಯಾರಿಗೆ ನಿಮ್ಮಲ್ಲಿ ಟೈಫಾಯಿಡ್?

"ನನ್ನ ಅಳಿಯನಿಗೆ" ಎಂದು ರಾಮಣ್ಣ ಸುಳ್ಳು ಹೇಳಿ ಅಲ್ಲಿಂದ
ಪಾರಾದನು.

ಶೇಡಿಗುಡ್ಡೆಯ ಒಂದು ಉಪಾಹಾರ ಮಂದಿರದಲ್ಲಿ ರಾಮಕೃಷ್ಣ
ಯ್ಯನವರೂ ರಾಧಾಕೃಷ್ಣನೂ ಅವನಿಗಾಗಿ ಕಾದಿದ್ದರು. ಈತ ಬರು
ತ್ತಲೆ "ಕೆಲಸವಾಯಿತೇ" ಎಂದು ಕೇಳಿದ ರಾಧಾಕೃಷ್ಣ. "ಹೋದದ್ದು
ನಾನಲ್ಲವೇ" ಎಂದು ಉತ್ತರಿಸಿದನು ರಾಮಣ್ಣ. ಅವನಿಗಿಷ್ಟು ಉಪಾ
ಹಾರ ಮಾಡಿಸಿ, ಮೂವರೂ ಮನೆಯ ಕಡೆಗೆ ತೆರಳಿದರು.

ದಾರಿಯಲ್ಲಿ ರಾಧಾಕೃಷ್ಣನ ಮನಸ್ಸಿನ ನೋವನ್ನು ಹೇಳತೀರದು.
"ನಾನೇ ಕಾಯಿಲೆ ಬಿದ್ದಿದ್ದರೆ— ನಂದರಂಥವರಿಗೆ ಕಾಳಸಂತೆಯಲ್ಲಿ
ದುಡ್ಡು ತೆತ್ತು ಕೊಳ್ಳುವ ಬದಲು, ಪ್ರಾಣವನ್ನಾದರೂ ಬಿಡುತ್ತಿದ್ದೆ. ಆದರೆ ನನ್ನ
ತತ್ವದ ದೃಷ್ಟಿಯಿಂದ ಆ ಮಗುವಿನ ಪ್ರಾಣಕ್ಕೆ ಅಪಾಯ ಬರಬಾರದಲ್ಲ"
ಎಂದನು. ರಾಮಕೃಷ್ಣಯ್ಯನವರು "ಹೀಗೂ ಉಂಟೇ? ಅಂಥ ಜನರು
ಏನು ಪರೋಪಕಾರ ಮಾಡಿದರೇನು ಬಂತು? ಇಂಥ ವೇಳೆಯಲ್ಲಿ
ಮದ್ದು ಸಿಗದೆ ಪ್ರಾಣಬಿಡುವವರನ್ನು ಕಂಡೂ, ಹಣಮಾಡಲು ಕುಳಿ
ತರೆ ಅವರನ್ನು ಮನುಷ್ಯರೆಂದು ತಿಳಿಯಬೇಕೇ?" ಎಂದರು.

"ರಾಮಕೃಷ್ಣಯ್ಯ, ಎಷ್ಟು ಕಡಿಮೆ ಮನುಷ್ಯರಾಗುತ್ತೇವೆಯೋ
ಅಷ್ಟು ಹೆಚ್ಚು ಶ್ರೀಮಂತರಾಗಬಹುದು. ಮೂರು ಮಿಲಿಯದಷ್ಟು ಜನ
ಬಂಗಾಳದಲ್ಲಿ ಸತ್ತರು. ಇದ್ದ ಅಕ್ಕಿಯನ್ನು ಸಮನಾದ ಬೆಲೆಗೆ ಮಾ
ರಿದ್ದರೆ ಜೀವವನ್ನು ಹಿಡಿದಾದರೂ ಅವರು ಉಳಿಯುತ್ತಿರಲಿಲ್ಲವೇ. ಇರು
ವೆಯಂತೆ ಸಾಯುವ ಜನರನ್ನು ಕಂಡೂ, ಮಣಕ್ಕೆ ೫೦ ರೂಪಾಯಿ

ಗಳಂತೆ ಅಲ್ಲಿ ಅಕ್ಕಿ ಮಾರಿದರಲ್ಲವೆ!........ನನಗೆ ಅದನ್ನೆಲ್ಲ ಎಣಿಸಿದರೆ, ಈ ಯುದ್ಧವೆಂಬುದು ಬಂದುದರಿಂದ, ಮನುಷ್ಯನ ಶೀಲ ನೀಚತನಕ್ಕೆ ಇಳಿದರೆ ಎಷ್ಟರ ತನಕ ಇಳಿಯಬಹುದು—ಎಂದು ತೋರಿಸಿದ ಹಾಗಾಗಿದೆ" ಎಂದರು.

ಮನೆ ಬಂದಿತು. ಅವನು ರಾಮಣ್ಣನನ್ನು ಒಳಕ್ಕೆ ಕರೆದೊಯ್ದನು. ಚಂದ್ರನನ್ನು ಕಂಡು ಆತ ತೀರ ಬೆರಗಾದ, "ಅಮ್ಮಾ,ಹೇಗಿದ್ದ ಮಗು ಹೇಗಾಯಿತು, ದೇವರಿದ್ದಾನೆ. ನಿಮ್ಮಂತಹ ಪುಣ್ಯಾತ್ಮರಿಗೆ ಏನೂ ಕೆಡುಕಾಗಲಾರದು. ನೂರು ಜನರನ್ನು ನೀವು ಉಳಿಸಿದ್ದೀರಿ. ಆ ಪುಣ್ಯದಿಂದ ನಿಮ್ಮ ಮಗುವಿಗೆ ಏನೂ ಆಗಲಾರದು" ಎಂದನು.

ರಾಮಣ್ಣನನ್ನು ಕಂಡ ಸತ್ಯ "ಏನೋ ರಾಮಣ್ಣ,ದೇವರು ನಮಗೆ ಯಾವ ಹೊಸ ಸಂಪತ್ತು ಕೊಡದೆ ಹೋದರೂ ಇದ್ದ ಈ ಭಾಗ್ಯ ಹರಿಸದಿದ್ದರೆ ಆಗುತ್ತಿತ್ತು. ಇನ್ನು ಅವನ ಆಯುಷ್ಯ......ಏನಿಲ್ಲ—. . ಒಂದು ಗ್ಲೂಕೋಸ್ ಬೇಕೆಂದರೆ ಎಲ್ಲೂ ಸಿಗದೆ ಹೋಯಿತು....ಅಂಥ ವೇಳೆಯಲ್ಲಿ ದೇವರಲ್ಲದೆ ಕಾಪಾಡಬೇಕಾದವನು?" ಎಂದಳು. ಈ ತನಕ ಒತ್ತಿಟ್ಟ ಎಲ್ಲ ದುಃಖವೂ ಅವಳ ತುಟಿ,ಕಣ್ಣುಗಳಿಂದ ಮಿಡಿದು ಬಂದಿತು. ರಾಧಾಕೃಷ್ಣ "ಛೇ........ಇದೇನು ಸತ್ಯ. ನಿನ್ನ ಧೈರ್ಯ ಇಷ್ಟೇನ? ಅಬೆ ಹೋಗು......ನೋಡು, ರಾಮಣ್ಣನೇ ಹೋಗಿ ಗ್ಲೂಕೋಸನ್ನು ತಂದು ಕೊಟ್ಟಿದ್ದಾನ! ಎನ್ನುತ್ತಲೇ ಆಕೆಯು ಅಳುವಿನಲ್ಲೇ ಸಂತಸವನ್ನು ತಂದುಕೊಂಡು" ಆಚೆ ಸರಿದಳು. ರಾಮಣ್ಣ ಈಚೆಗೆ ಬಂದು ಸತ್ಯನ್ನು ನೊಡನೆ ಮಾತನಾಡತೊಡಗಿದನು. ಅಷ್ಟೊಂದು ದಿನ, ವರ್ಷಗಳ ಪುರಾಣಗಳನ್ನೆಲ್ಲ ಬಿಡಿಸಿದನು.

ಕೊನೆಗೆ ಆತನು "ಅಮ್ಮಾ-ಎಲ್ಲಿವೂ ಅದೃಷ್ಟದ ಮೇಲಿದೆ. ಈಗ ನಿಮ್ಮ ಯಜಮಾನರು ಮಾಡಿದ ಪ್ರಯತ್ನ ಸ್ವಲ್ಪವೇ! ಯಾರಿಗೋಸ್ಕರ ಇಷ್ಟೆಲ್ಲ ಮಾಡಿದರು? ಜನರ ಹಣೆಯಲ್ಲಿ ಆ ಒಳ್ಳೆಯದು ಬರೆದಿಲ್ಲ. ಮಾಡಿದ್ದೆಲ್ಲ ದಂಡಕ್ಕಾಯಿತು........ಅದಿರಲಿ...ಇನ್ನು ಅವರು ಊರು ಬಿಡುವುದಿಲ್ಲವಲ್ಲ. ಅವರು ಮೊನ್ನೆಯಷ್ಟೆ ಊರಿಗೆ ಹಿಂದಿರುಗಿ ಬಂದದ್ದಂತೆ!" ಎಂದನು.

"ಮೊನ್ನೆಯಲ್ಲ, ನಿನ್ನೆ..........." ಎನ್ನುವಾಗ, ರಾಧಾಕೃಷ್ಣನ ನಗೆ

ಕೇಳಿದನು. ಸರಿ-ಕಾಗದ ಸುತ್ತಿದ ಒಂದು ಪೊಟ್ಟಣವನ್ನು ಆತ, ಹೊರಕ್ಕೆ ತಂದು ರಾಮಣ್ಣನ ಕೈಯಲ್ಲಿರಿಸಿ, ಎಂಟು ರೂಪಾಯಿಗಳನ್ನು ಇಸ ಕೊಂಡು ಹೋದನು. ಹೋಗುವಾಗ "ರಾಮಣ್ಣ, ಇಲ್ಲಿ ಅದು ಸಿಕ್ಕಿತೆಂದು ಯಾರಿಗೂ ಹೇಳಬೇಡ. ಊರಿಂದೂರೇ ಬಂದು ನಮ್ಮ ಜೀವ ತಿಂದೀತು. ಅದು ಹಾಗೆಲ್ಲ ಸಿಗುವ ಮದ್ದಲ್ಲ. ಬರಿಯ ನನ್ನ ದಾಕ್ಷಿಣ್ಯಕ್ಕೆ ಸಿಕ್ಕಿತು ಅಷ್ಟೆ"-ಎಂದನು.

"ಇನ್ನು ಬೇಕಾದರೆ?" ಎಂದನು ರಾಮಣ್ಣ.

"ನಿನ್ನೊಬ್ಬನಿಗಲ್ಲವೆ............ಯಾರಿಗೆ ನಿಮ್ಮಲ್ಲಿ ಟೈಫಾಯಿಡ್ಡು?

"ನನ್ನ ಅಳಿಯನಿಗೆ" ಎಂದು ರಾಮಣ್ಣ ಸುಳ್ಳು ಹೇಳಿ ಅಲ್ಲಿಂದ ಪಾರಾದನು.

ಶೇಡಿಗುಡ್ಡೆಯ ಒಂದು ಉಪಾಹಾರ ಮಂದಿರದಲ್ಲಿ ರಾಮಕೃಷ್ಣ ಯ್ಯನವರೂ ರಾಧಾಕೃಷ್ಣನೂ ಅವನಿಗಾಗಿ ಕಾದಿದ್ದರು. ಈತ ಬರು ತ್ತಲೆ "ಕೆಲಸವಾಯಿತೇ" ಎಂದು ಕೇಳಿದ ರಾಧಾಕೃಷ್ಣ. "ಹೋದದ್ದು ನಾಸಲ್ಲವೇ" ಎಂದು ಉತ್ತರಿಸಿದನು ರಾಮಣ್ಣ. ಅವಸಿಗಿಷ್ಟು ಉಪಾ ಹಾರ ಮಾಡಿಸಿ, ಮೂವರೂ ಮನೆಯ ಕಡೆಗೆ ತೆರಳಿದರು.

ದಾರಿಯಲ್ಲಿ ರಾಧಾಕೃಷ್ಣನ ಮನಸ್ಸಿನ ನೋವನ್ನು ಹೇಳಿತೀರದು. ನಾನೇ ಕಾಯಿಲೆ ಬಿದ್ದಿದ್ದರೆ–ನಂದರಂಭವರಿಗೆ ಕಾಳಸಂತೆಯಲ್ಲಿ ದುಡ್ಡು ತೆತ್ತಿಸುವ ಬದಲು, ಪ್ರಾಣವನ್ನಾದರೂ ಬಿಡುತ್ತಿದ್ದೆ. ಆದರೆ ನನ್ನ ತತ್ವದ ದೃಷ್ಟಿಯಿಂದ ಆ ಮಗುವಿನ ಪ್ರಾಣಕ್ಕೆ ಅಪಾಯ ಬರಬಾರದಲ್ಲ" ಎಂದನು. ರಾಮಕೃಷ್ಣಯ್ಯನವರು "ಹೀಗೂ ಉಂಟೇ? ಅಂಥ ಜನರು ಏನು ಪರೋಪಕಾರ ಮಾಡಿದರೇನು ಬಂತು? ಇಂಥ ವೇಳೆಯಲ್ಲಿ ಮದ್ದು ಸಿಗದೆ ಪ್ರಾಣಬಿಡುವವರನ್ನು ಕಂಡೂ, ಹಣಮಾಡಲು ಕುಳಿ ತರೆ ಅವರನ್ನು ಮನುಷ್ಯರೆಂದು ತಿಳಿಯಬೇಕೇ?" ಎಂದರು.

"ರಾಮಕೃಷ್ಣಯ್ಯ, ಎಷ್ಟು ಕಡಿಮೆ ಮನುಷ್ಯರಾಗುತ್ತೇವೆಯೋ ಅಷ್ಟು ಹೆಚ್ಚು ಶ್ರೀಮಂತರಾಗಬಹುದು. ಮೂರು ಮಿಲಿಯದಷ್ಟು ಜನ ಬಂಗಾಳದಲ್ಲಿ ಸತ್ತರು. ಇದ್ದ ಅಕ್ಕಿಯನ್ನು ಸಮನಾದ ಬೆಲೆಗೆ ಮಾ ರಿದ್ದರೆ ಜೀವವನ್ನು ಹಿಡಿದಾದರೂ ಅವರು ಉಳಿಯುತ್ತಿರಲಿಲ್ಲವೇ. ಇದು ವೆಯಂತೆ ಸಾಯುವ ಜನರನ್ನು ಕಂಡೂ, ಮಣಕ್ಕೆ ೫೦ ರೂಪಾಯಿ

ಗಳಂತೆ ಅಲ್ಲಿ ಅಕ್ಕಿ ಮಾರಿದರಲ್ಲವೆ!........ನನಗೆ ಅದನ್ನೆಲ್ಲ ಎಣಿಸಿದರೆ, ಈ ಯುದ್ಧವೆಂಬುದು ಬಂದುದರಿಂದ, ಮನುಷ್ಯನ ಶೀಲ ನೀಚತನಕ್ಕೆ ಇಳಿದರೆ ಎಷ್ಟರ ತನಕ ಇಳಿಯಬಹುದು—ಎಂದು ತೋರಿಸಿದ ಹಾಗಾಗಿದೆ" ಎಂದರು.

ಮನೆ ಬಂದಿತು. ಅವನು ರಾಮಣ್ಣನನ್ನು ಒಳಕ್ಕೆ ಕರೆದೊಯ್ದನು. ಚಂದ್ರನನ್ನು ಕಂಡು ಆತ ತೀರ ಬೆರಗಾದ, "ಅಮ್ಮಾ, ಹೇಗಿದ್ದ ಮಗು ಹೇಗಾಯಿತು, ದೇವರಿದ್ದಾನೆ. ನಿಮ್ಮಂತಹ ಪುಣ್ಯಾತ್ಮರಿಗೆ ಏನೂ ಕೆಡುಕಾಗಲಾರದು. ನೂರು ಜನರನ್ನು ನೀವು ಉಳಿಸಿದ್ದೀರಿ. ಆ ಪುಣ್ಯದಿಂದ ನಿಮ್ಮ ಮಗುವಿಗೆ ಏನೂ ಆಗಲಾರದು" ಎಂದನು.

ರಾಮಣ್ಣನನ್ನು ಕಂಡ ಸತ್ಯ "ಏನೋ ರಾಮಣ್ಣ, ದೇವರು ನಮಗೆ ಯಾವ ಹೊಸ ಸಂಪತ್ತು ಕೊಡದೆ ಹೋದರೂ ಇದ್ದ ಈ ಭಾಗ್ಯ ಹರಿಸದಿದ್ದರೆ ಆಗುತ್ತಿತ್ತು. ಇನ್ನು ಅವನ ಇಷ್ಟ........ಏನಿಲ್ಲ— . . ಒಂದು ಗ್ಲೂಕೋಸ್ ಬೇಕೆಂದರೆ ಎಲ್ಲೂ ಸಿಗದೆ ಹೋಯಿತು....ಅಂಥ ವೇಳೆಯಲ್ಲಿ ದೇವರಲ್ಲದೆ ಕಾಪಾಡಬೇಕಾದವನು?" ಎಂದಳು. ಈ ತನಕ ಒತ್ತಿದ್ದ ಎಲ್ಲ ದುಃಖವೂ ಅವಳ ತುಟಿ, ಕಣ್ಣುಗಳಿಂದ ಮಿಡಿದು ಬಂದಿತು. ರಾಧಾಕೃಷ್ಣ "ಛೇ........ಇದೇನು ಸತ್ಯ. ನಿನ್ನ ಧೈರ್ಯ ಇಷ್ಟೇನೆ? ಅದೆ ಹೋಗು......ನೋಡು, ರಾಮಣ್ಣನೇ ಹೋಗಿ ಗ್ಲೂಕೋಸನ್ನು ತಂದು ಕೊಟ್ಟಿದ್ದಾನೆ! ಎನ್ನುತ್ತಲೇ ಆಕೆಯು ಅಳುವಿನಲ್ಲೇ ಸಂತಸವನ್ನು ತಂದುಕೊಂಡು" ಆಚೆ ನಡೆದಳು. ರಾಮಣ್ಣ ಈಚೆಗೆ ಬಂದು ಸತ್ಯನನ್ನೊಡನೆ ಮಾತನಾಡತೊಡಗಿದನು. ಅಷ್ಟೊಂದು ದಿನ, ವರ್ಷಗಳ ಪುರಾಣಗಳನ್ನೆಲ್ಲ ಬಿಡಿಸಿದನು.

ಕೊನೆಗೆ ಆತನು "ಅಮ್ಮಾ—ಎಲ್ಲವೂ ಅದೃಷ್ಟದ ಮೇಲಿದೆ. ಈಗ ನಿಮ್ಮ ಯಜಮಾನರು ಮಾಡಿದ ಪ್ರಯತ್ನ ಸ್ವಲ್ಪವೇ! ಯಾರಿಗೋಸ್ಕರ ಇಷ್ಟೆಲ್ಲ ಮಾಡಿದರು? ಜನರ ಹಣೆಯಲ್ಲಿ ಆ ಒಳ್ಳೆಯದು ಬರೆದಿರಲಿಲ್ಲ. ಮಾಡಿದ್ದೆಲ್ಲ ದಂಡಕ್ಕಾಯಿತು........ಅದಿರಲಿ...ಇನ್ನು ಅವರು ಊರು ಬಿಡುವುದಿಲ್ಲವಲ್ಲ. ಅವರು ಮೊನ್ನೆಯಷ್ಟೆ ಊರಿಗೆ ಹಿಂದಿರುಗಿ ಬಂದದ್ದಂತೆ!" ಎಂದನು.

"ಮೊನ್ನೆಯಲ್ಲ, ನಿನ್ನೆ..........." ಎನ್ನುವಾಗ, ರಾಧಾಕೃಷ್ಣ ನಸುನಗೆ

ಮನವಾಯಿತು. ಅವನನ್ನು ನೋಡಿ "ಅಯ್ಯಾ, ಇನ್ನು ಮಗು ಹುಶಾ-ರಾಗುವ ತನಕ ದೇಶಾಟನೆ ಬೇಡ. ನೀವಿಲ್ಲದಾಗ ಈ ಅಮ್ಮ ಎಣಿಸಿ ಎಣಿಸಿಯೇ ಕಂಗಾಲಾಗಿರಬೇಕು. ಪ್ರಕೃತಕ್ಕೆ ರಾಮನಬಂಟ ಹನುಮಂತನಿದ್ದಹಾಗೆ--ನಮ್ಮ ಶ್ಯಾಮಣ್ಣ, ಏನು ಋಣಾನುಬಂಧವೋ ನಿಮ್ಮೊಳಗೆ ಅಂಟಿಕೊಂಡದ್ದು, ಇದ್ದುದರಿಂದ, ಆಯಿತು. ಇಲ್ಲವಾದರೆ ಈ ಅಮ್ಮ ಒಬ್ಬರೇ ಕೈಕಾಲು ಬಿಡಬೇಕಿತ್ತು" ಎಂದನು.

"ಇನ್ನು ಎಲ್ಲ ಸರ್ಕೀಟು ಮುಗಿಯಿತು ರಾಮಣ್ಣ. ಇನ್ನು ಮಹಾಭಾರತದ ಭೀಷ್ಮಾಚಾರ್ಯರಹಾಗೆ ನಾನು; ಶರ ಇಳಿಸಿ ಕುಳಿತುಬಿಡುತ್ತೇನೆ. ಸಾಕು — ನಮ್ಮ ಪಾಡಿಗೆ ನಾವು ಸುಖವಾಗಿದ್ದರೆ ಸಾಕು.

"ಅದೇ ಒಳ್ಳೆಯದು ಒಡೆಯ. ಈ ಕಲಿಕಾಲದಲ್ಲಿ ಪರೋಪಕಾರ ಗಿರೋಪಕಾರ ನಮಗೆ ಹೇಳಿದ್ದಲ್ಲ" ಎಂದು ರಾಮಣ್ಣನ ತೀರ್ಮಾನವಾಯಿತು.

ರಾಮಣ್ಣ ಅಲ್ಲಿಯೇ ಊಟಮಾಡಿ ಮಧ್ಯಾಹ್ನ ಮನೆಗೆ ತೆರಳಿದನು. ರಾಮಕೃಷ್ಣಯ್ಯನವರು ತಾವು ಮನೆಗೆ ಮುಖವನ್ನು ಹಾಕಿ ಬರುವೆವೆಂದು ಸರಿದರು.

* * * * *

ಇದು ಚಂದ್ರನು ಹಾಸುಗೆ ಹಿಡಿದ ಇಪ್ಪತ್ತೆರಡನೆಯ ದಿನ; ಜ್ವರ ಬಿಟ್ಟಿದೆ. ಡಾಕ್ಟರರು ಬಂದು "ಏನೂ ಬೆದರಿಕೆ ಬೇಡ. ಪಥ್ಯ, ವಿಶ್ರಾಂತಿ ಎರಡೂ ಚೆನ್ನಾಗಿದ್ದರೆ ಮುಗಿಯಿತು. ಒಂದು ತಿಂಗಳ ತನಕ ತುಂಬಾ ಅನುಪಾನ ಜಾಗ್ರತೆಬೇಕು. ನೀವೇನು ಅದನ್ನು ತಿಳಿಯದವರೇ" ಎಂದು ಹೇಳಿ ಹೋದರು.

ಅವರ ಭರವಸೆಯೇ ಸಂತೋಷದ ಸತ್ಯವಾಯಿತು. ಆಗಾಗ ರಾಮಣ್ಣ ಬಂದು, ಡ್ರಗ್ ಸ್ಟೋರಿನಿಂದ ಗ್ಲೂಕೋಸು ತಂದು ಕೊಡುತ್ತಿದ್ದನು. ಹುಡುಗನ ಅಭಿವೃದ್ಧಿಯೇನೋ ಚೆನ್ನಾಗಿ ಸಾಗಿತು. ಮನೆಯಲ್ಲಿ ಇನ್ನಾರಿಗೂ ಬೇನೆಯು ತಲೆದೋರಲಿಲ್ಲ. ಅವರು ಅದಕ್ಕಾಗಿ ಇಂಜೆಕ್ಷನ್ ಕೊಂಡುದು ಸಾರ್ಥಕವಾಯಿತು.

ಈ ವೇಳೆ—ಶ್ಯಾಮಣ್ಣನ ಹೆಂಡತಿ ಕಲ್ಯಾಣಿಯು, ಎರಡನೆಯ ಬಾರಿಗೆ ತಾಯಿಯಾಗುವ ಸಲುವಾಗಿ ಸೂರ್ಯನನ್ನು ಕರೆದುಕೊಂಡು

ತವರಿಗೆ ಹೋದಳು. ಶ್ಯಾಮನಿಗೆ ಈ ವೇಳೆಯಲ್ಲಿ ಅವಳನ್ನು ಕಳುಹಿಸಲು ಇಷ್ಟವಿರಲಿಲ್ಲ. ಚಂದ್ರನ ಬೇನೆಯ ಸಮಯ, ಸತ್ಯಮ್ಮ ತುಂಬ ದುಡಿದುದರಿಂದ ಅವಳಿಗೆ ವಿಶ್ರಾಂತಿ ಬೇಕೆಂದು ಅವನಿಗೆ ತೋರಿತ್ತು. 'ಆಗದುಡಿತದಲ್ಲಿ ಯಾರೂ ಕಡಿಮೆ ಮಾಡಿರಲಿಲ್ಲ, ಎಂದು ರಾಧಾಕೃಷ್ಣ ಬಲವಂತ ಪಡಿಸಿ ಅವಳನ್ನು ಕಳುಹಿಸಿಕೊಟ್ಟನು. ಇನ್ನು ಚಂದ್ರ ಸಶಕ್ತನಾದರೆ, ತಾನು ಕುಟುಂಬ ಸಹಿತವಾಗಿ, ತಮ್ಮನ ಮನೆಗೂ, ಮಾವನ ಮನೆಗೂ ಹೋಗಿ ಬರುವುದಾಗಿ ನಿಶ್ಚಯಿಸಿದನು.

* * * * *

ಚಂದ್ರ ದಿನೇ ದಿನೇ ಪುಷ್ಟಿಗೊಳ್ಳುತ್ತಲಿದ್ದಾನೆ. ಅವನ ಬೇಸರ ಪರಿಹಾರಕ್ಕಾಗಿ ರಾಧಾಕೃಷ್ಣ ಏನಾದರೂ ಕತೆ, ವಾರ್ತೆಗಳನ್ನು ಹೇಳುತ್ತಿದ್ದ. ಬೆಳೆದ.ಹುಡುಗ ಚಂದ್ರ; ಕಾಲೇಜಿಗೆ ಈಗಷ್ಟೆ ಕಾಲಿರಿಸಿದ್ದಾನೆ. ಬೇನೆಯು ಮಾಯವಾಗುತ್ತಲೇ ರಾಜಕೀಯ ವಾತಾವರಣದ ಪ್ರಶ್ನೆಗಳನ್ನೂ ಯುದ್ಧ ವಿಚಾರವನ್ನೂ ಕೇಳುತ್ತಲೇ ಇರುತ್ತಾನೆ. ಈತ ತನಗೆ ತಿಳಿದುದನ್ನು ಹೇಳುತ್ತಾನೆ. ಆಗಾಗ ರಾಮಕೃಷ್ಣಯ್ಯನವರು ಮನೆಗೆ ಬಂದು ಹೋಗುತ್ತಿದ್ದಾರೆ. ಅವರೆಲ್ಲ ಮನೆಯ ಚಾವಡಿಯಲ್ಲಿ ಕುಳಿತು ಚರ್ಚಿಸುತ್ತಿರುತ್ತಾರೆ.

ಒಂದುದಿನ ಅವರು ಹೀಗೆಯೇ ಮಾತನಾಡುತ್ತಿರುವ ವೇಳೆಯಲ್ಲಿ ಕನ್ನಡ ಪತ್ರಿಕೆಯೊಂದರ ವಾರ್ತೆಯು ರಾಧಾಕೃಷ್ಣನ ಗಮನಕ್ಕೆ ಬಂದಿತು. ತೆರೆದು ನೋಡುತ್ತಾನೆ-ಅವನ ಪರಿಚಿತರಾದ ಶ್ರೀ ಬನ್ನಟ್ಟಿಯ ಬಿಡುಗಡೆಯ ವಿಚಾರ ಬರೆದಿತ್ತು. ಅವರನ್ನು ಕುರಿತು ರಾಮಕೃಷ್ಣಯ್ಯನವರೊಡನೆ ಹೇಳಿದ್ದಾಯಿತು. ಅಲ್ಲಿಂದ ಮುಂದೆ "**ಶ್ರೀ ಬನ್ನಟ್ಟಿಯವರ ಸಾರ್ವಜನಿಕ ಹೇಳಿಕೆ**"--ಎಂಬ ಮಾತನ್ನು ಓದುತ್ತಲೇ, ರಾಧಾಕೃಷ್ಣನ ರೋಷ ಹಿಡಿಸದಾಯಿತು.

"ರಾಮಕೃಷ್ಣಯ್ಯನವರೇ—ಇದನ್ನು ಓದಿ ನೋಡಿದಿರಾ" ಎಂದು ಅವರಿಗೆ ತೋರಿಸಿದನು. ಅವರೂ ಓದಿನೋಡಿದರು. 'ಏನು ವಿಶೇಷ? ಗಾಂಧಿಯವರು ಸಹ ಹಾಗೆಯೇ ಹೇಳಿಬಿಟ್ಟರಲ್ಲ. ಅಹಿಂಸೆಯ ದಾರಿ ಸಮನಲ್ಲವೆಂದು"

"ಗಾಂಧಿಯವರು ಹೇಳಿದರೆಂದೇ ಇವರೂ ಹೇಳಿದ್ದು. ಇವರೂ

ಮರಿಗಾಂಧಿಯೆನಿಸಬೇಕಲ್ಲ. ಗಾಂಧಿಯುಪರ ಮುಂದೆ ಸಂಭಾವಿತರಾಗಿ ಕಾಣಿಸಬೇಕಲ್ಲ...ಆದರೆ ನೋಡಿ, ಇದೇ ಮನುಷ್ಯನ ಜತೆಯಲ್ಲಿ ಕೆಲಸ ಮಾಡಿದವನು ನಾನು. ಕರ್ಣಾಟಕದಲ್ಲಿ ವಿಧ್ವಂಸಕ ಕಾರ್ಯಗಳನ್ನು ಮಾಡಿಸಿದ ಮುಖಂಡರಲ್ಲಿ ಈತನೂ ಒಬ್ಬ. ಇಂಥ ಮನುಷ್ಯ-ಜನರು ಹಾಗೆಮಾಡಿದುದು ತಪ್ಪು-ಎಂದು ಹೇಳಿಕೆ ಕೊಡುವುದೆಂದರೆ ಏನರ್ಥ? ಇವರಿಗೆ ಒಂದಿಷ್ಟಾದರೂ ಮರ್ಯಾದೆ ಇದೆಯೇ? ಆತ್ಮಸಾಕ್ಷಿಯೆಂಬು ದಿದೆಯೇ?" ಎಂದು ಉದ್ವಿಗ್ನನಾದ.

*     *     *     *     *

ರಾಧಾಕೃಷ್ಣನ ಮನಸ್ಸಿಗೆ ಈಗ ತುಂಬ ವಿಶ್ರಾಂತಿ ದೊರಕಿದೆ. ಹೊರಗೂ ಅವನಿಗೆ ಕೆಲಸವಿಲ್ಲ. ಮನೆಯಲ್ಲಿಯೂ ಕೆಲಸವಿಲ್ಲ. ಊರ ಸುತ್ತಮುತ್ತಲಿನ ಅಕ್ಕಿಯ ಅಭಾವ, ಮಾಲುಗಳ ತುಟ್ಟಿ, ಕಾಳಸಂತೆ, ಲಾಭಬಡಕತನ ಇಂಥವನ್ನೆಲ್ಲ ಕಂಡು ಉಸ್ಸೆಂದು ಕುಳಿತಿದ್ದರೂ, ಇತರ ವಿಧಗಳಿಂದ ಆತ ಶಾಂತನಾಗಿದ್ದಾನೆ. ಇನ್ನು ಹಾಗೊಂದುದಿನ ಮಂಜ ಯ್ಯನವರ ಮನೆಗೆ ಹೋಗಿಬರಬೇಕೆಂಬ ಹಂಬಲ ಅವನಲ್ಲಿಯೂ ಮೂಡಿತ್ತು. ಅವನ ಮಗಳು ಈಗ ಹದಿನೆರಡು ವರ್ಷದ ಹುಡುಗಿ— ಚಂದ್ರ ಉತ್ಸಾಹಿ ತರುಣ. ವಿಷಮ ಜ್ವರದಿಂದ ಚೇತರಿಸಿ, ಅಲೆದಾಡು ತ್ತಿದ್ದಾನೆ. ನಿತ್ಯವೂ ಪೇಟೆಗೆ ಹೋಗಿ ಕಾದುಕುಳಿತು—ಸಂಜೆ ರೈಲಿಗೆ ಬರುವ ಪತ್ರಿಕೆಗಳನ್ನು ಹಿಡಿದುಕೊಂಡೇನೆ ಮನೆಗೆ ಬರಬೇಕು. ಅನಂ ತರ ತಂದೆ ಮಕ್ಕಳಿಬ್ಬರು ಅದನ್ನು ಓದಿ ಚರ್ಚಿಸಬೇಕು.

ಒಂದು ದಿನ ಆತನಿಗೆ ತುಂಬ ಉಲ್ಲಾಸಕರವಾದ ವಾರ್ತೆ ಯೊಂದು ದೊರೆಯಿತು. ಅದನ್ನು ಮಗನಿಗೆ ತೋರಿಸುತ್ತ "ನೋಡಿದಿಯ ಚಂದ್ರ, ಇದು ಪೌರಷ,ದೊಡ್ಡತನ! ಜವಾಹಿರಲಾಲರೆಂದುದನ್ನು ಕೇಳಿ ದೆಯಾ? ಬನ್ನಟ್ಟಿಯವರಂತೆ, ಮುಖಕ್ಕೆ ತಕ್ಕ ಮಾತು ಆಡಲೇ ಇಲ್ಲ. ನೋಡು—ಏನೆಂದಿದ್ದಾರೆಂದು-'ಜನ ವಿಧ್ವಂಸಕ ಚಳವಳಿ ಹೂಡಿದ್ದರೆ, ತಮ್ಮ ಸಿಟ್ಟಿನಲ್ಲಿ ಅಂಥ ಉಗ್ರಮಾರ್ಗವನ್ನು ಕೈಕೊಂಡಿದ್ದರೆ, ಅವರ ಎಲ್ಲ ತಪ್ಪುಗಳ ಹೊಣೆಯೂ ನನ್ನದು. ನನ್ನ ಭುಜದ ಮೇಲೆ ಅಧಿರಲಿ- ಎಂದಿದ್ದಾರೆ. ಅಂಥವರು ಬೇಕು ದೇಶದಲ್ಲಿ. ಈಗ ನೋಡುವಲ್ಲಿ ಕಾಂಗ್ರೆ ಸ್ಸಿನ ಗಣ್ಯ ಮುಖಂಡರಾದವರು ಹಿಂಸೆಯ ದಾರಿಯನ್ನು ಹೇಳಿಲ್ಲ-

ಎಂಬುದೇ ನಿಜವಿರಬೇಕು. ಇವೆಲ್ಲ ಕೆಳಗಿನ ಕೆಲವು ಉತ್ಸಾಹಿಗಳಿಂದಾಗಿರಬೇಕು. ಜನರು ಉದ್ವಿಗ್ನರಾಗಿ ಹಾಗೆ ಮಾಡಿದುದೂ ಸಮಸೇ. ಆದರೆ ಅವರು ಅಷ್ಟೆಲ್ಲ ತ್ಯಾಗ ಧೈರ್ಯ ಶೌರ್ಯಗಳನ್ನು ತೋರಿಸಿರುವಾಗ- ಅವರನ್ನು ಕೆಳಗೆ ತಳ್ಳುವುದು ಸಮಸಾದ ಧೋರಣೆಯಲ್ಲ. ಅಂಥವರ ಪರವಾಗಿ ಧೈರ್ಯದಿಂದ ಆಡಿದ ಮೊದಲನೆಯ ಮಾತು ಜವಾಹಿರಲಾಲರದ್ದೇ!" ಎಂದನು.

"ನಿಜವೇ. ಹಾಗೆಂದರೇ! ಹಾಗಾದರೆ—ಅವರು ಯಾರದು— ಬನ್ನಟ್ಟಿಯವರಲ್ಲವೆ—ಇದನ್ನೋದಿ ಅವರು ಸಹ ಇನ್ನೊಂದು ಹೇಳಿಕೆ ಕೊಟ್ಟಾರು........ಅದಕ್ಕೆ ತಾನೂ ಹೊಣೆ" ಎಂದು.

"ಹೂಂ—ಹಾಗೆಯೇ ಮಾಡುವಂಥವರು ನಮ್ಮ ಜನ. ಹಾಗೆ ಮಾಡಿದರೊಂದು ಆಶ್ಚರ್ಯವಿಲ್ಲ. ಗಾದೆಯೇ ಇದೆಯಲ್ಲ- ಮರ್ಯಾದೆ ಬಿಟ್ಟವ ಊರಿಗೆ ದೊಡ್ಡವನೆಂದು" ಎಂದನು.

ಜವಾಹಿರರ ನುಡಿಗಳನ್ನು, ಹೆಮ್ಮೆಯಿಂದ ರಾಮಕೃಷ್ಣಯ್ಯನವರಿಗೆ ತಿಳಿಸುವ ತನಕ,ರಾಧಾಕೃಷ್ಣನಿಗೆ ಏನೇನೂ ಸಮಾಧಾನವಾಗಲಿಲ್ಲ. ಅವರು ಮನೆಗೆ ಬಾರದೆ ಎರಡು ದಿವಸಗಳಾದುವೆಂದು ತಾನೇ ಅವರಲ್ಲಿಗೆ ನಡೆದುಹೋದನು. ಆ ದಿನಪತ್ರಿಕೆಯಲ್ಲಿ ಬಂದ ಹೇಳಿಕೆಯನ್ನು ಅವರ ಮುಂದೆ ಓದಿಹೇಳಿದನು.ಆ ಒಂದೆರಡು ದಿನಗಳು ಅವನಪಾಲಿಗೆ ತುಂಬ ಸಂತೋಷದ ದಿನಗಳಾಗಿದ್ದುವು. ಅವನ ನೂರಾರು ಚಿಂತೆಗಳನ್ನು ಹೋಗಲಾಡಿಸುವ ಒಂದು ಸಂಜೀವನವಿದ್ದಂತೆ ಕಾಣಿಸಿತು- ಜವಾಹಿರಲಾಲರ ನಿಲುವು, ಹಿರಿಮೆ.

ಅವನ ಇದೇ ಸಂತೋಷಕ್ಕೆ ಪ್ರತಿಯಾದ ಅಪಹಾಸವೂ ಸಿದ್ಧವಾಯಿತು. ಇದು ನಡೆದ ಒಂದು ವಾರವೂ ಕೂಡ ಸರಿಯಲಿಲ್ಲ. ಒಂದುದಿನ ನಗುತ್ತ, ಚಂದ್ರ ಕನ್ನಡ ಪತ್ರಿಕೆಯೊಂದನ್ನು ತಂದು, "ಅಪ್ಪಾ, ಆ ದಿನ ಚೇಷ್ಟೆಗೆ ನಾವು ಅಂದಿರಲಿಲ್ಲವೇ.....ನೋಡು, ನಿಜವಾಯಿತು" ಎಂದು ಪತ್ರಿಕೆಯನ್ನು ತಂದೆಗೆ ಕೊಟ್ಟನು. ಪತ್ರಿಕೆಯನ್ನು ತೆರೆದು ನೋಡುವುದೇನು! ಬನ್ನಟ್ಟಿ ಪ್ರಭೃತಿಗಳ ಎರಡನೆಯ ಹೇಳಿಕೆಯಿತ್ತು-"ಕರ್ಣಾಟಕದಲ್ಲಿ ವಿಧ್ವಂಸಕ ಚಳವಳ ನಡೆಯಿಸಿದವರ ಲೋಪದೋಷಗಳ ಹೊಣೆ ನನ್ನ ಮೇಲಿರಲಿ! ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅವರ ಹೆಸರು ಚಿರ

ಸ್ಥಾಯಿಯಾಗಲಿ” ಎಂದು ಬೆನ್ನುಚಪ್ಪರಿಸಿಕೊಂಡಿದ್ದರು.

‘ಅಪ್ಪಾ, ನೀನು-ಅವರ ಕಾರುಭಾರಗಳನ್ನು ಕುರಿತು ಹೇಳಿದ್ದೆ. ಅತ್ತ ಗಾಂಧಿಯವರ ಮಾತನ್ನು ಕೇಳಿ ಹಾಗೆ ಆಡಿದರು. ಇತ್ತ ಜವಾಹರರ ಮಾತನ್ನು ಕೇಳಿ ಹೀಗೆ ಆಡಿದರು. ಮರ್ಯಾದೆಯೇ ಬೇಡವೇ ಈ ಜನರಿಗೆ.......ಇಂಥ ಜನರೂ ಇದ್ದಾರೆಯೇ?” ಎಂದನು.

ರಾಧಾಕೃಷ್ಣ ಒಂದು ಕ್ಷಣಕಾಲ ಮೌನತಾಳಿದನು. ಮುಖ ತಗ್ಗಿಸಿ, ನಸುನಕ್ಕು “ಇದ್ದಾರಲ್ಲ; ಇರುವುದನ್ನು ನೀನೇ ನೋಡಿದೆಯಲ್ಲ” ಎಂದನು. ಆತನಿಗೆ ಸಾರ್ವಜನಿಕ ಜೀವನದ ವಿಷಯದಲ್ಲಿಯೇ ತಿರಸ್ಕಾರ ಪ್ರಾಪ್ತಿಯಾಗುವಷ್ಟು ಕಟು ಅನುಭವವದು. “ಇಂಥ ಜನರು ತುಂಬಿರುವಲ್ಲಿ ಏನು ದೊಡ್ಡ ಕೆಲಸವಾದೀತು? ಏನು ಹಿರಿಯ ಆಸೆ ಕೈಗೂಡೀತು? ಇವರೆಲ್ಲ ನಾಳೆ ನಮ್ಮ ಸ್ವರಾಜ್ಯದ ಮಂತ್ರಿಗಳಾಗುವವರಲ್ಲವೇ!” ಎಂದುಕೊಂಡನು ತನ್ನ ಮನಸ್ಸಿನಲ್ಲಿಯೇ. ಬಹು ಹೊತ್ತಿನ ತನಕ ಮಾತನಾಡುವುದೇ ಅವನಿಂದಾಗಲಿಲ್ಲ. ತಂದೆಯು ವಿಚಾರಪರನಾದುದನ್ನು ಕಂಡು ಚಂದ್ರ “ಅಪ್ಪಾ ನೀನೇನು ಯೋಚಿಸುತ್ತಿದ್ದೀಯ? ಬನ್ನಟ್ಟಿಯವರ ಹೇಳಿಕೆಯನ್ನು ಓದಿಯೇ?” ಎಂದನು.

“ಹೂಂ.......ಬನ್ನಟ್ಟಿಯವರೂ ಸರಿಯೇ...........ಉಳಿದವರೂ ಸರಿಯೇ! ದೇಶ ದೊಡ್ಡದಾಗಬೇಕಾದರೆ, ಊರಿನ ಜನ ದೊಡ್ಡವರಾಗಬೇಕು. ನಮ್ಮಲ್ಲಿ ಅದೇ ಕಾಣಿಸದಾಗಿದೆ. ನಾವೆಷ್ಟು ಹೆಮ್ಮೆ ತಾಳಿದರೇನು-ನಮ್ಮ ಶೀಲವೇ ನಷ್ಟವಾಗಿರುವಲ್ಲಿ” ಎಂದನು.

ತಂದೆ ಮಕ್ಕಳಿಬ್ಬರೂ ಮುಖ ಮುಖ ನೋಡುತ್ತಿದ್ದರು. ರಾಧಾಕೃಷ್ಣ ಮೈಮರೆವಿನಿಂದಲೋ ಏನೋ—ಹಿಡಿದ ಪತ್ರಿಕೆಯನ್ನು ಅಲ್ಲಿಯೇ ಮುದ್ದೆಮಾಡಿ, ಹರಿದು, ಮೆಲ್ಲಗೆ ಚೂರು ಚೂರು ಮಾಡಿದನು. “ಮಗು ಒಂದು ಬೆಂಕಿಪೆಟ್ಟಿಗೆ ತರುತ್ತೀಯಾ” ಎಂದನು.

ಚಂದ್ರ ಹೋಗಿ ಬೆಂಕಿಪೆಟ್ಟಿಗೆ ತಂದನು. ಏತಕ್ಕೆಂದು ಅವನಿಗೂ ತಿಳಿಯಲಿಲ್ಲ. ಅಲ್ಲಿಂದ ರಾಧಾಕೃಷ್ಣ ಆ ಪತ್ರಿಕೆಯ ಚೂರುಗಳನ್ನು ರಾಶಿಮಾಡಿ ಕಡ್ಡಿ ಗೀರಿ, ಬೆಂಕಿಕೊಟ್ಟು-ನೋಡುತ್ತ ಕುಳಿತನು! ಬನ್ನಟ್ಟಿಯವರ ಶವಸಂಸ್ಕಾರ ಮಾಡುತ್ತಿರುವನೆಂಬ ಭ್ರಮೆ—ಆತಗೆ.